


ನೆಮ್ಮದಿಯ ನಾಳೆ ನಮ್ಮದು

# ಹೊಸತು

ವರಿ ೨೦೦೯
: ರೂ. ೩೦

ಹೊಸ ವರ್ಷದ ಶುಭಾಶಯಗಳು



ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ
राष्ट्रीय ग्रामीण स्वास्थ्य मिशन
(2005-2012)

# ಪ್ರಸೂತಿ ಆರೈಕೆ

ಕರ್ನಾಟಕ ಸರ್ಕಾರ



ಕರ್ನಾಟಕ ರಾಜ್ಯದಲ್ಲಿ ತಾಯಿ ಮಗುವಿನ ಆರೋಗ್ಯ ಸುಧಾರಿಸುವ ಮತ್ತು ತಾಯಿ ಮಕ್ಕಳ ಮರಣ ಪ್ರಮಾಣವನ್ನು ತಗ್ಗಿಸುವ ಉದ್ದೇಶದಿಂದ ಪ್ರಸೂತಿ ಯೋಜನೆಯನ್ನು ಜಾರಿಗೆ ತರಲಾಗಿದೆ.

- 2008-09ನೇ ಸಾಲಿನಿಂದ ಪ್ರಸೂತಿ ಆರೈಕೆ ಯೋಜನೆಯನ್ನು ರಾಜ್ಯದ ಎಲ್ಲಾ ಬಡತನ ರೇಖೆಗಿಂತ ಕೆಳಗಿರುವ ಗರ್ಭಿಣಿ ಮಹಿಳೆಯರಿಗೆ (ಪರಿಶಿಷ್ಟ ಜಾತಿ ಮತ್ತು ಪಂಗಡಗಳು ಸೇರಿದಂತೆ) ವಿಸ್ತರಿಸಲಾಗಿದೆ.
- ಈ ಯೋಜನೆಯಡಿ ಬಡ ಗರ್ಭಿಣಿ ಮಹಿಳೆಯರಿಗೆ ಹೆರಿಗೆಗೆ ಮೊದಲೇ ಒಟ್ಟು ಎರಡು ಸಾವಿರ ರೂಪಾಯಿಯ ಚೆಕ್ ನೀಡಲಾಗುತ್ತದೆ.
- ಮೊದಲನೆಯ ಒಂದು ಸಾವಿರ ರೂಪಾಯಿಯ ಚೆಕ್‌ಅನ್ನು ಎರಡನೇ ತ್ರೈಮಾಸಿಕ ಗರ್ಭಿಣಿ ಪರೀಕ್ಷೆ ಸಮಯದಲ್ಲಿ (ಅಂದರೆ 4ರಿಂದ 6ನೇ ತಿಂಗಳಲ್ಲಿ) ನೀಡಲಾಗುತ್ತದೆ ಹಾಗೂ ಉಳಿದ ಒಂದು ಸಾವಿರ ರೂಪಾಯಿಯ ಚೆಕ್‌ಅನ್ನು ಮೂರನೇ ತ್ರೈಮಾಸಿಕ ಗರ್ಭಿಣಿ ಪರೀಕ್ಷೆ ಸಮಯದಲ್ಲಿ (ಅಂದರೆ 7ರಿಂದ 9ನೇ ತಿಂಗಳಲ್ಲಿ) ನೀಡಲಾಗುತ್ತದೆ.

## ಷರತ್ತುಗಳು

✓ ಗರ್ಭಿಣಿಯು ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯಲ್ಲಿ ತಮ್ಮ ಹೆಸರನ್ನು ನೋಂದಾಯಿಸಿಕೊಂಡಿರಬೇಕು.

✓ ಮೊದಲನೇ ಎರಡು ಹೆರಿಗೆಗಳಿಗೆ ಮಾತ್ರ ಈ ಸೌಲಭ್ಯ.

✓ ಹೆರಿಗೆಯು ಮನೆ/ಉಪಕೇಂದ್ರ/ಸರ್ಕಾರಿ ಆಸ್ಪತ್ರೆ/ನೋಂದಾಯಿತ ಖಾಸಗಿ ಆಸ್ಪತ್ರೆಯಲ್ಲಿ ಸಾಮಾನ್ಯ ವಾರ್ಡಿಗೆ ದಾಖಲಾಗಿರುವ ಮಹಿಳೆಯು ಬಡತನ ರೇಖೆಗಿಂತ ಕೆಳಗಿರುವ ಮಹಿಳೆಯಾಗಿರಬೇಕು.

✓ ಬಡತನ ರೇಖೆಗಿಂತ ಕೆಳಗಿರುವ ಗರ್ಭಿಣಿ ಮಹಿಳೆಯರಿಗೆ ಹಾಗೂ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಮಹಿಳೆಯರಿಗೂ ಈ ಸೌಲಭ್ಯ ಲಭ್ಯವಿದೆ.

✓ ವೈದ್ಯಾಧಿಕಾರಿಗಳು/ಸಕ್ಷಮ ಅಧಿಕಾರಿಗಳು, ಫಲಾನುಭವಿಯು ಬಡತನರೇಖೆಗಿಂತ ಕಡಿಮೆ ಇರುವರೆಂದು ದೃಢೀಕರಿಸಿಕೊಳ್ಳಬೇಕು. (ಕಾಲಕಾಲಕ್ಕೆ ನೀಡುವ ಮಾರ್ಗಸೂಚಿಯಂತೆ)

(ಹೆಚ್ಚಿನ ವಿವರಗಳಿಗೆ ಹತ್ತಿರದ ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ)

**ತಾಯಿಯ ಹಾಲು ಮಗುವಿಗೆ ಶ್ರೇಷ್ಠ ಆಹಾರ**

ಪ್ರಕಟಣೆ : **ಯೋಜನಾ ನಿರ್ದೇಶಕರು (ಆರ್. ಸಿ. ಹೆಚ್.)**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು

ತಿಂಗಳ ಪತ್ರಿಕೆ
**ಹೊಸತು**
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧೦ ಸಂಚಿಕೆ-೬ ಜನವರಿ ೨೦೦೯

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೩೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@dataone.in**
**website : www.navakarnataka.com**
**http://navakarnataka.blogspot.com**

# ಸಂಪಾದಕೀಯ

## ಭಯೋತ್ಪಾದಕರ ಹಾವಳಿ

ನಮ್ಮ ದೇಶದ ಮೇಲೆ ಆಕ್ರಮಣದೋಪಾದಿಯಲ್ಲಿ ಭಯೋತ್ಪಾದಕರ ದಾಳಿಯನ್ನು ಸಜ್ಜುಗೊಳಿಸಿದ್ದು ನೆರೆರಾಷ್ಟ್ರ ಪಾಕಿಸ್ತಾನವೆಂಬುದು ಅನುಮಾನದ ವಿಷಯವಲ್ಲ. ಅದು ಈಗ ಗುಟ್ಟಾಗಿ ಉಳಿದಿಲ್ಲ. ಹಲವು ದಶಕಗಳ ಕಾಲ ಆ ದೇಶವನ್ನು ಪೋಷಿಸಿ ಬೆಳೆಸಿದ ಅಮೆರಿಕಾ ಈಗ ಆಘಾತವನ್ನನುಭವಿಸಿ, ಆಫ್ಘಾನಿಸ್ತಾನದಲ್ಲಿ ತಾನು ಮತ್ತು ತನ್ನ ಬೆಂಗಾವಲಿನಲ್ಲಿರುವ ಅಧ್ಯಕ್ಷ ಕರ್ಜೈ ಇನ್ನೇನು ಸಂಕಷ್ಟಗಳಿಗೆ ಗುರಿಯಾಗ ಬೇಕಾದೀತೋ ಎಂದು ತವಕಿಸುತ್ತಿದೆ. ಮುಂಬೈ ನಗರವನ್ನು ಸುಮಾರು ಅರವತ್ತು ಗಂಟೆಗಳ ಕಾಲ ತಲ್ಲಣಕ್ಕೆ ಗುರಿಮಾಡಿದ ಪಾತಕರು ಯಾವ ಅಂಜಿಕೆಯೂ ಇಲ್ಲದೆ ಹತ್ತಾರು ನಾಗರಿಕರನ್ನು ಹಾಗೂ ಅನೇಕ ಸೈನಿಕರು ಮತ್ತು ಪೊಲೀಸರನ್ನು ಹತ್ಯೆಗೆ ಗುರಿಮಾಡಿದರು. ಟಾಟಾರವರ ಹೋಟೇಲಿನಲ್ಲಿ ಮಡಿದವರ ಬಗ್ಗೆ ಹೆಚ್ಚು ಮಾಹಿತಿ ಬಿತ್ತರಿಸಲಾಯಿತಾದರೂ ಶಿವಾಜಿ ಹೆಸರಿನಲ್ಲಿರುವ ರೈಲ್ವೆ ನಿಲ್ದಾಣದಲ್ಲಿ ಹತರಾದವರು ಕಡಿಮೆ ಉತ್ಕೃಷ್ಟ ಪ್ರಜೆಗಳಲ್ಲ. ನಿಷ್ಠಾವಂತ ಪೊಲೀಸ್ ಅಧಿಕಾರಿಗಳು ಕೆಲವರು ಭಯೋತ್ಪಾದಕರನ್ನು ಹತ್ತಿಕ್ಕಲು ತೆರಳುತ್ತಿದ್ದಾಗಲೇ ಅಸುನೀಗಿದ್ದು ಅತ್ಯಂತ ಶೋಚನೀಯ ವಾರ್ತೆಯಾಯಿತು. ಜನರ ಮತ್ತು ದೇಶದ ರಕ್ಷಣೆಗಾಗಿ ಕಾದಾಡಿ ಹುತಾತ್ಮರಾದವರಿಗೆಲ್ಲಾ 'ಹೊಸತು' ತನ್ನ ಗೌರವಪೂರ್ವಕ ನಮನವನ್ನು ಸಲ್ಲಿಸುತ್ತದೆ ಮತ್ತು ಮಡಿದವರೆಲ್ಲರನ್ನು ನೆನೆಯುತ್ತಾ ಕಂಬನಿಗರೆಯುತ್ತದೆ.

ಸುಮಾರು ಹತ್ತು ಭಯೋತ್ಪಾದಕರು ಇಡೀ ನಗರವನ್ನು ಮತ್ತು ದೇಶವನ್ನು ತಲ್ಲಣಗೊಳಿಸಿದರೆಂದರೆ ಹಲವು ಅಂತರಂಗದ ಪ್ರಶ್ನೆಗಳನ್ನು ಹಾಕಿಕೊಳ್ಳಬೇಕಾದ ಜರೂರು ಇದೆಯೆಂದರ್ಥ. ಆ ದುರ್ಘಟನೆಯನ್ನು ಒಂದು 'ಯುದ್ಧ'ವೆಂದು ವ್ಯಾಖ್ಯಾನಿಸಿದ ಮಾಧ್ಯಮಗಳು ಭಯೋತ್ಪಾದಕರನ್ನು ಸದೆಬಡೆಯಲು ಪಾಕಿಸ್ತಾನದ ಮೇಲೆ ಯುದ್ಧವನ್ನು ಘೋಷಿಸಬೇಕೆಂಬ ರೀತಿಯಲ್ಲಿ ನಡೆದು ಕೊಂಡಿವೆ. ಒಮ್ಮೆ ಕಂಗಾಲಾದವರು ಸಿಟ್ಟಿನಿಂದ ಪ್ರತೀಕಾರಕ್ಕೆ ಹಾತೊರೆಯುವುದು ಅಸಹಜವಲ್ಲ. ನಮ್ಮ ರಕ್ಷಣಾ ವಿಧಾನಗಳು ಇನ್ನೂ ಕಟ್ಟುನಿಟ್ಟಿನವಾಗಿದ್ದರೆ ಮಾತ್ರ ಪಾತಕಗಳು ಮರುಕಳಿಸದಂತೆ ತಡೆಯಲು ಸಾಧ್ಯವಾಗುತ್ತದೆ. ಆ ದಿಕ್ಕಿನಲ್ಲಿ ಪ್ರಯತ್ನಗಳು ನಡೆಯುತ್ತಿವೆ. ಹತ್ತು ಭಯೋತ್ಪಾದಕರು ನಡೆಸಿದ ಹಾವಳಿಯನ್ನು ಯುದ್ಧವೆಂದು ಕರೆದದ್ದು ಅಷ್ಟೇನೂ ಸಮಂಜಸವಲ್ಲ. ಏಕೆಂದರೆ, ಯುದ್ಧದ ನಿರೀಕ್ಷೆ ಇರುವಾಗ ಪೂರ್ವತಯಾರಿ ಮಾಡಿ ಕೊಳ್ಳುತ್ತೇವೆ. ಭಯೋತ್ಪಾದಕರ ದಾಳಿಯನ್ನು ನಿಖರವಾಗಿ ತಿಳಿಯಲು ಸಾಧ್ಯವಾಗದ್ದರಿಂದ ಯಾವ ಪೂರ್ಣತಯಾರಿಯೂ ಇಲ್ಲದೆಯೇ ಅದನ್ನೆದುರಿಸಬೇಕಾಗುತ್ತದೆ. ಜೊತೆಗೆ ಭಯೋತ್ಪಾದಕರ ಒಂದು ತುಕಡಿಯ ನಿಗ್ರಹವು ಯುದ್ಧದ ವಿಜಯಕ್ಕೆ ಸಮಾನವಾದುದಲ್ಲ. ಭಯೋತ್ಪಾದಕರು ಯಾರಿಗೂ ಶೋಭೆ ತರುವುದಿಲ್ಲ, ಹೀರೋಗಳಾಗುವುದಿಲ್ಲ. ಅವರ ತರಬೇತಿ ತಾಣಗಳನ್ನು ಮುಚ್ಚುವುದಾಗಿ ಪದೇ ಪದೇ ಆಶ್ವಾಸನೆ ನೀಡುತ್ತಲೇ ಬಂದಿರುವ ಪಾಕಿಸ್ತಾನದ ಸರ್ಕಾರಕ್ಕೆ ಅದನ್ನು ಮಾಡಲು ಇಚ್ಛೆಯೂ ಇಲ್ಲ, ಸಾಮರ್ಥ್ಯವೂ ಇಲ್ಲ. ಆದ್ದರಿಂದ ಅದನ್ನು ಕಡೆಗೆ ಭಾರತವೇ ಮಾಡಬೇಕಾಗುತ್ತದೋ ಏನೋ. ಹೀಗಿರುವಾಗ ಕೆಲವು ಮಾಧ್ಯಮ ವೀರರು ಇಡೀ ಘಟನೆಯನ್ನು ಹಗುರವಾಗಿ ತೆಗೆದುಕೊಂಡಿದ್ದು, ಭಾವೋದ್ರೇಕದಿಂದ ಅರ್ಥ ರಹಿತ ವಿಶ್ಲೇಷಣೆಯಲ್ಲಿ ತೊಡಗಿದ್ದು, ರಾಜಕೀಯವನ್ನು

**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ತಿಂಗಳ ಪತ್ರಿಕೆ
**ಹೊಸತು**
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

# ಸಂಪಾದಕೀಯ

ಗಂಭೀರವಾಗಿ ಅರ್ಥೈಸದೆ ರಾಜಕಾರಣಿಗಳನ್ನು ಸಾರಾಸಗಟಾಗಿ ನಿರಾಕರಿಸಬೇಕೆಂಬ ಕರೆ ನೀಡಿದ್ದು, ಚುನಾವಣೆಯಲ್ಲಿ ಧೀಮಂತರನ್ನು ಆಯ್ಕೆ ಮಾಡಿದರೆ ಎಲ್ಲವೂ ಸುಗಮವಾಗುತ್ತದೆಂಬ ತೀರ್ಮಾನವನ್ನು ಪ್ರಕಟಿಸಿದ್ದು, ದೇಶದ ನಾಗರಿಕರಿಗೆ ರಕ್ಷಣೆ ನೀಡಲಾಗದ ಸರ್ಕಾರಕ್ಕೆ ತೆರಿಗೆ ಪಾವತಿಸಕೂಡದೆಂಬ ಘೋಷಣೆಯನ್ನು ಬೆಂಬಲಿಸಿದ್ದು, ಇವೆಲ್ಲಾ ಗಂಭೀರ ಚಿಂತನೆಯ ಅಭಾವವನ್ನು ತೋರಿಸುತ್ತದೆ. ಇಂದು ಹೀಗೆಲ್ಲಾ ಆರ್ಭಟಿಸಿ ನಾಳೆ ಮೌನಿಗಳಾಗುವವರ ಲಕ್ಷಣ ಇದು - ಇವರಿಂದ ಭಯೋತ್ಪಾದನೆಯನ್ನು ಕೊನೆಗಾಣಿಸಲು ಆಗುವುದಿಲ್ಲ. ವಿಶ್ವದ ನಾನಾ ಕಡೆಗಳಲ್ಲಿ ಭಯೋತ್ಪಾದನೆಗೆ ಮೂಲಕಾರಣವಾದ ಅಮೆರಿಕಾ ಜೊತೆ ಸಖ್ಯವನ್ನು ಸಾಂದ್ರಗೊಳಿಸುವುದರಿಂದಲೂ ಅದು ಸಿದ್ಧಿಸುವುದಿಲ್ಲ. ಒತ್ತಡ ಹೇರುವುದು ಮತ್ತು ಎಚ್ಚರಿಕೆ ನೀಡುವುದು ಪಾಕಿಸ್ತಾನದಲ್ಲಿರುವ ಭಯೋತ್ಪಾದಕರ ನೆಲೆಗಳನ್ನು ಮುಚ್ಚಿಸುವುದಕ್ಕೆ ಇರುವ ಮೊದಲ ಹೆಜ್ಜೆ. ಅದನ್ನು ನಮ್ಮ ಕೇಂದ್ರ ಸರ್ಕಾರವು ಗಣನೆಗೆ ತೆಗೆದುಕೊಂಡಿರುವುದು ಸ್ವಾಗತಾರ್ಹ.

ಇದರೊಟ್ಟಿಗೆ ನಮ್ಮ ಆಂತರಿಕ ರಾಜಕಾರಣದ ಸ್ವರೂಪವನ್ನು ಬದಲಾಯಿಸಿಕೊಳ್ಳಲು ಎಲ್ಲ ಪಕ್ಷಗಳೂ ಮನಸ್ಸು ಮಾಡಬೇಕು. ನೇರವಾಗಿಯೇ ಅಲ್ಲದಿದ್ದರೂ ರಾಜಕೀಯದಲ್ಲಿ ಸಹ ಕಾರ್ಯ-ಕಾರಣ ಸಂಬಂಧಗಳು ಅಗೋಚರವಾಗಿ ಕೆಲಸಮಾಡುತ್ತಿರುತ್ತವೆ. ದೇಶದ ಜನತೆಯ ಜೊತೆಗಿನ ವ್ಯವಹಾರವನ್ನು ಹಸನುಗೊಳಿಸಿಕೊಳ್ಳುವುದು ಇದರಿಂದಾಗಿ ಆದ್ಯತೆಯ ವಿಷಯವಾಗುತ್ತದೆ. ಮಂದಿರ-ಮಸೀದಿ ರಾಜಕೀಯವನ್ನು ದೂರಮಾಡಿ ರಾಷ್ಟ್ರೀಯ ಐಕ್ಯತೆಯತ್ತ ಮುಖಮಾಡುವುದು ಅದರ ಒಂದು ಭಾಗ; ಕಾಶ್ಮೀರದಲ್ಲಿ ಈಗಿನ ಚುನಾವಣೆಯ ಫಲಿತಾಂಶವು ಏನೇ ಇರಲಿ, ಅಲ್ಲಿಯ ಆಂತರಿಕ ಸಂಬಂಧಗಳನ್ನು ಸಂವಾದ ಮತ್ತು ಹೊಂದಾಣಿಕೆಯ ನೆಲೆಯಲ್ಲಿ ಸ್ಥಿರಗೊಳಿಸುವುದು ಇನ್ನೊಂದು ಭಾಗ; ತಾಲಿಬಾನರನ್ನು ಮಾರಕಾಯುಧಗಳ ಬಳಕೆಯತ್ತ ಕ್ರಮಿಸಲು ಅವಕಾಶ ಕಲ್ಪಿಸಿಕೊಟ್ಟ ಅಮೆರಿಕಾದ ಹುನ್ನಾರಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಮುನ್ನಡೆಯುವುದು ಮತ್ತೊಂದು ಭಾಗ. ಹಳೆಯ ಕಾಯಿದೆ 'ಪೋಟಾ'ದಿಂದ ಸ್ವಲ್ಪ ಭಿನ್ನವಾದ ಹೊಸ ಕಾಯಿದೆಯು ಸುಭದ್ರತೆಯನ್ನು ತಾನೇತಾನಾಗಿ ತಂದುಕೊಡುವುದಿಲ್ಲ. ವಿಚಕ್ಷಣೆಯಿಂದ ಅದನ್ನು ಪ್ರಯೋಗಿಸುವ ನೀತಿಯು ಅವಶ್ಯಕ. ಹಾಗೆ ಮಾಡದೆ ಅದನ್ನು ಪೀಡಕ ಕಾನೂನನ್ನಾಗಿ ಮಾರ್ಪಡಿಸಿಕೊಂಡರೆ ಪ್ರಭುತ್ವಕ್ಕೆ ಮತ್ತಷ್ಟು ಸಮಸ್ಯೆಗಳು ಎದುರಾಗುವುದು ಖಂಡಿತ. ಅಂತರರಾಷ್ಟ್ರೀಯವಾಗಿ ಭಯೋತ್ಪಾದನೆಯ ಮೂಲವನ್ನು ಸಂಪೂರ್ಣವಾಗಿ ಉತ್ಪಾಟಿಸಲು ಭಾರತವು ಸಮರ್ಥವಲ್ಲ ; ಅದಕ್ಕೆ ನಾವು ಮಾತ್ರವೇ ಬಾಧ್ಯರೂ ಅಲ್ಲ. ಏಕೆಂದರೆ ಅದು ಪಾಕಿಸ್ತಾನಕ್ಕೆ ಸೀಮಿತವಾದ ಸಂಗತಿಯಲ್ಲ - ಅದರ ಬೇರೆ ಆಯಾಮಗಳು ಹಲವಿವೆ. ಹಾಗಿದ್ದಾಗ್ಯೂ, ಪಾಕಿಸ್ತಾನದ ಹೊಸ ಚುನಾಯಿತ ಸರ್ಕಾರಕ್ಕೆ ಭಾರತದೊಡನೆ ನೇರಹಾದಿಯ ಮೈತ್ರಿ ಸಂಬಂಧವನ್ನು ಬೆಳೆಸಿಕೊಳ್ಳಲು ನಮ್ಮ ರಾಜತಾಂತ್ರಿಕ ಆಗ್ರಹವು ಸಾಲದಾದರೆ ಬೇರೆ ಪರ್ಯಾಯ ಮಾರ್ಗಗಳನ್ನು ಆತುಕೊಳ್ಳಬೇಕಾದೀತೆಂಬ ಸಂಭವವನ್ನು ತಳ್ಳಿಹಾಕಲಾಗುವುದಿಲ್ಲ. ಭಯೋತ್ಪಾದಕರನ್ನು ಬೆಂಬಲಿಸುವ ಸರ್ಕಾರಗಳು ಅಗ್ನಿಪರ್ವತದ ಮೇಲೆ ಕೂತಿರುತ್ತವೆ; ಭೀಕರ ಹಲ್ಲೆಗಳಿಂದ ಭಾರತವನ್ನೂ ಅಗ್ನಿಪರ್ವತದ ಸನಿಹಕ್ಕೆ ತಳ್ಳಿದ್ದಾರೆ. ಆಸ್ಫೋಟ ಹೇಗೆ ಮತ್ತು ಯಾವಾಗ ಸಂಭವಿಸುತ್ತದೆಂದು ಹೇಳಲಾಗದು. ಆ ತಿಳುವಳಿಕೆಯು ಪಾಕಿಸ್ತಾನದ ಅನನುಭವಸ್ಥ ರಾಜಕೀಯ ನಾಯಕರಿಗಿದ್ದರೆ ಒಳ್ಳೆಯದು. ನಮ್ಮ ದೇಶದ ಇನ್ನಾವುದಾದರೂ ನಗರದ ರೈಲು ನಿಲ್ದಾಣವೋ ವಿಮಾನ ನಿಲ್ದಾಣವೋ ಭಯೋತ್ಪಾದಕರ ಹಾವಳಿಗೆ ಗುರಿಯಾಗುವುದಕ್ಕೆ ಮೊದಲು ಭಯೋತ್ಪಾದನೆಯನ್ನು ಮೆಟ್ಟಿನಿಲ್ಲುವ ತಂತ್ರವನ್ನು ರೂಪಿಸಿಕೊಳ್ಳಲು ಸಜ್ಜಾಗುವುದು ಮುಂದೂಡಲಾಗದಂತಹ ಪ್ರಮುಖ ಕಾರ್ಯವಾಗಿದೆ.

## ಪ್ರಸ್ತುತ ಸಂಚಿಕೆ

**ತ**ನ್ನ ಹತ್ತನೆಯ ವರ್ಷದಲ್ಲಿ 'ಹೊಸತು' ಒಂಭತ್ತನೆಯ ವಿಶೇಷ ಸಂಚಿಕೆಯನ್ನು ಓದುಗರಿಗೆ ಉಣಬಡಿಸುತ್ತಿದೆ. ಅದನ್ನು ಸಾಧ್ಯವಾಗಿಸಿದ ನಮ್ಮೆಲ್ಲ ಓದುಗರಿಗೆ, ಲೇಖಕರಿಗೆ, ಜಾಹಿರಾತುದಾರರಿಗೆ, ಹಾಗೂ ನವಕರ್ನಾಟಕ ಪ್ರಕಾಶನದ ಸಿಬ್ಬಂದಿಯ ಬಂಧುಗಳಿಗೆ 'ಹೊಸತು' ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ನಮ್ಮ ಎಲ್ಲ ಸಂಚಿಕೆಗಳಿಗೂ ಓದುಗರು ಪುರಸ್ಕಾರ ನೀಡುತ್ತಾ ಬಂದಿದ್ದಾರೆ, ಅಂತೆಯೇ ವಿಶೇಷ ಸಂಚಿಕೆಗಳು ಬಹುವಾಗಿ ಮನ್ನಣೆ ಪಡೆದಿವೆ. ಅವು ಸಂಗ್ರಹ ಯೋಗ್ಯವೆಂಬ ಅಭಿಪ್ರಾಯವನ್ನು ಅನೇಕ ಓದುಗರು ವ್ಯಕ್ತಪಡಿಸಿ ನಮಗೆ ಹುರುಪು ತುಂಬಿದ್ದಾರೆ. ಈ ಬಾರಿಯ ವಿಶೇಷ ಸಂಚಿಕೆಗೆ ಅಂಥದೇ ಪ್ರತಿಕ್ರಿಯೆ ಬರುತ್ತದೆಂಬ ಆಶಯ ನಮ್ಮದು. ಸಾಧ್ಯವಾದಷ್ಟು ಮಟ್ಟಿಗೂ ವಿವಿಧ ಕ್ಷೇತ್ರಗಳಿಗೆ ಸೂಕ್ತ ಪ್ರಾತಿನಿಧ್ಯವಿರುವಂತೆ ಮಾಡಲು ಹಿಂದಿನಂತೆಯೇ ಈ ಬಾರಿಯೂ ಪ್ರಯತ್ನಿಸಲಾಗಿದೆ. ಭಾಭಾ ಪರಮಾಣು ಸಂಶೋಧನಾ ಕೇಂದ್ರದ ಮಾಜಿ ನಿರ್ದೇಶಕರಾದ ಡಾ॥ ಪ್ರಸಾದ್ ಅವರು ತಮ್ಮ ಮೌಲಿಕ ಸಂದರ್ಶನದಲ್ಲಿ ಭಾರತ-ಅಮೆರಿಕಾ ಪರಮಾಣು ಒಪ್ಪಂದದ ಬಗ್ಗೆ ಖಚಿತವಾದ ನಿಲುವನ್ನು ತಾಳಿ ಆ ಒಪ್ಪಂದದಿಂದ ಪ್ರತಿಕೂಲಗಳು ಬಹಳಷ್ಟಿವೆಯೆಂಬುದನ್ನು ಒತ್ತಿ ಹೇಳಿದ್ದಾರೆ. ಹಿಂದೆ ನಿರ್ಬಂಧಗಳಿಗೆ ಗುರಿಯಾಗಿದ್ದ ನಮ್ಮ ದೇಶವು ತನ್ನದೇ ಸ್ವತಂತ್ರ ಸಂಶೋಧನಾ ಬಲದಿಂದ ಸ್ವಾವಲಂಬನೆಯ ಹಾದಿಯಲ್ಲಿ ದಿಟ್ಟ ಹೆಜ್ಜೆಗಳನ್ನು ಇಡುವುದರಲ್ಲಿ ಯಶಸ್ಸು ಪಡೆದಿತ್ತೆಂದು ವಿವರಿಸಿ, ಪ್ರಸ್ತುತ ಒಪ್ಪಂದದಿಂದಾಗಿ ನಾವು ಹಿಮ್ಮುಖ ಚಲನೆಗೆ ದೂಡಲ್ಪಡುತ್ತಿದ್ದೇವೆಂದು ಅವರು ಆತಂಕ ವ್ಯಕ್ತಪಡಿಸಿದ್ದಾರೆ. ಒಪ್ಪಂದದ ಸಾಧಕ-ಬಾಧಕಗಳನ್ನು ಚರ್ಚಿಸುವಾಗ ಇದಕ್ಕೆ ಗಮನ ನೀಡಬೇಕಾದ್ದು ಅವಶ್ಯಕ. ಡಾ॥ ಪ್ರಸಾದ್ ಹೇಳುವಂತೆ ಇದರಲ್ಲಿ 'ಬಾಧಕ'ಗಳು ಹೇರಳವಾಗಿವೆ, 'ಸಾಧಕ'ಗಳನ್ನು ಹುಡುಕಿದರೂ ಗೋಚರಿಸುವಂತಿಲ್ಲ.



ಹಿಂದುಸ್ತಾನಿ ಸಂಗೀತದ ಮಹಾತಪಸ್ವಿ ಶ್ರೀಮತಿ ಗಂಗೂಬಾಯಿ ಹಾನಗಲ್ ಅವರ ಸಂದರ್ಶನ ಮಾಡಿರುವ

ಓದುಗರಿಗೆ, ಲೇಖಕರಿಗೆ,
ಜಾಹಿರಾತುದಾರರಿಗೆ, ಹಿತೈಷಿಗಳಿಗೆ
'ಹೊಸತು' ಬಳಗದ
ಹಾಗೂ
ನವಕರ್ನಾಟಕ ಪ್ರಕಾಶನದ
ಹೊಸವರ್ಷದ
ಶುಭಾಶಯಗಳು



# ಸಂಪಾದಕೀಯ

ಶ್ರೀ ವಿಜಯವಾಮನ ಅವರು ಸ್ವತಃ ಸಂಗೀತದಲ್ಲಿ ನಿಷ್ಣಾತರು. ಮೇರು ಕಲಾವಿದೆ ಗಂಗೂಬಾಯಿಯವರನ್ನು ಪರಿಚಯಿಸುವುದು ಅತ್ಯಂತ ಸಂತಸದ ಕ್ಷಣವೆಂದು 'ಹೊಸತು' ಭಾವಿಸುತ್ತದೆ. ಅಂತೆಯೇ, ತೆಲುಗು ಲೇಖಕಿ ರಂಗನಾಯಕಮ್ಮನವರ ಬಹುಮುಖ ವ್ಯಕ್ತಿತ್ವದ ಪರಿಚಯವನ್ನು ಡಾ॥ ಎನ್. ಗಾಯತ್ರಿಯವರು ಮಾಡಿಕೊಟ್ಟಿರುವುದು ನಮ್ಮ ಓದುಗರಿಗೆ ಉಪಯುಕ್ತವಾಗಿರುತ್ತದೆಯೆಂದು ಭಾವಿಸುತ್ತೇವೆ.

ಅಮೆರಿಕಾದಲ್ಲಿ ಆರ್ಥಿಕ ಬಿಕ್ಕಟ್ಟು ಹೇಗೆ ತೋರಿಬಂದಿತೆಂಬುದನ್ನು ಕಳೆದೆರಡು ಸಂಚಿಕೆಗಳಲ್ಲಿ ನಮ್ಮ ಲೇಖಕರು ವಿವರಿಸಿದ್ದಾರೆ. ಅದೊಂದು ಶ್ಲಾಘನೀಯ ವಿಷಯವೆಂದು ನಮ್ಮ ಓದುಗರು ಪ್ರತಿಕ್ರಿಯಿಸಿದ್ದಾರೆ. ಚರ್ಚೆಯನ್ನು ಇನ್ನೂ ಹಿಗ್ಗಿಸುತ್ತಾ ಈ ಬಾರಿ ಭಾರತೀಯ ರಿಸರ್ವ್ ಬ್ಯಾಂಕಿನ ಮಾಜಿ ಡೆಪ್ಯುಟಿ ಗವರ್ನರ್ ಡಾ॥ ಕೆ. ಎಸ್. ಕೃಷ್ಣಸ್ವಾಮಿಯವರ ವಿಶ್ಲೇಷಣೆಯನ್ನು ಓದುಗರ ಮುಂದಿರಿಸುತ್ತಿದ್ದೇವೆ. ಅಮೆರಿಕಾದ ಬಿಕ್ಕಟ್ಟು ಜಾಗತೀಕರಣದ ಹಿನ್ನೆಲೆಯಲ್ಲಿ ನಮ್ಮ ದೇಶವನ್ನೂ ತಟ್ಟುತ್ತದೆಂಬ ಎಚ್ಚರದ ಅಗತ್ಯವನ್ನವರು ಒತ್ತಿಹೇಳಿದ್ದಾರೆ. ಅದರ ಸೂಚನೆಗಳು ಈಗಾಗಲೇ ಅಗಾಧವಾಗಿ ಕಂಡುಬಂದಿದ್ದರೂ ಕೇಂದ್ರ ಸಚಿವರು ಅಂಥದೇನೂ ಘಟಿಸಿಲ್ಲವೆಂಬ ನಂಬಲನರ್ಹನಾದ ಮಾತುಗಳನ್ನಾಡುತ್ತಿರುವುದು ಶೋಚನೀಯ. ಇಂತಹ ಪ್ರಮುಖ ವಿಚಾರವನ್ನು ಸರ್ವಾಂಗೀಣವಾಗಿ ವಿಶ್ಲೇಷಿಸಿ ಹಾದಿ ತೋರುವ ಬದಲು ನಮ್ಮ ಕೆಲವು ಪತ್ರಿಕೆಗಳು ಆರ್ಥಿಕ ಸನ್ನಿವೇಶವನ್ನು ನಗಣ್ಯವೆಂದು ಭಾವಿಸಿ ಧಾರ್ಮಿಕ ಉಪದೇಶ ಸರಣಿಗಳನ್ನು ನೀಡಿ ಓದುಗರನ್ನು ತಣಿಸುವ ಭ್ರಾಂತಿಗೆ ಸಿಲುಕಿವೆ. ಉಪದೇಶಾಮೃತವಿಲ್ಲದಿದ್ದರೆ ಇತಿಹಾಸದ ವಿಷಪೂರಿತ ವಿಶ್ಲೇಷಣೆಗಳನ್ನು ಟನ್ನುಗಟ್ಟಲೆ ಪೇರಿಸುವ ಅಪಾಯಕಾರಿ ಹವ್ಯಾಸಕ್ಕೆ ಒಗ್ಗಿಕೊಂಡುಬಿಡುತ್ತಿವೆ. ಮತಾಂತರವನ್ನು ಕುರಿತಂತೆ ಈವರೆಗಿನ ಚರ್ಚೆಯಲ್ಲಿ ತರ್ಕಬದ್ಧವಾದ ಸಮಗ್ರ ವಿಶ್ಲೇಷಣೆ ಬಂದಿದ್ದು ವಿರಳ. ಆ ಕೊರತೆಯನ್ನು ತಮ್ಮ ಲೇಖನದಲ್ಲಿ ಶ್ರೀ ಜಿ. ರಾಜಶೇಖರ್ ವಿಪುಲವಾಗಿ ತುಂಬಿಕೊಟ್ಟಿದ್ದಾರೆ. ಇಂತಹ ಲೇಖನಗಳನ್ನು 'ಹೊಸತು' ಪ್ರಕಟಿಸುತ್ತಿದೆಯೆಂಬ ಹೆಮ್ಮೆಗಿಂತಲೂ ಹೆಚ್ಚಾಗಿ ಅಂಥವನ್ನು ನಮ್ಮ ದಿನಪತ್ರಿಕೆಗಳು ಪ್ರಕಟಿಸುತ್ತಿಲ್ಲವಲ್ಲಾ ಎಂಬ ವ್ಯಥೆ ಬಾಧಿಸುತ್ತದೆ. ಫ್ಯಾಸಿಸ್ಟ್ ಉಪಕ್ರಮಗಳು ಹೆಚ್ಚುತ್ತಿರುವ ನಮ್ಮ ಸಂದರ್ಭದಲ್ಲಿ ಅವನ್ನು ಉಪೇಕ್ಷಿಸುವುದು ಸರ್ವಥಾ ಯೋಗ್ಯವಲ್ಲ. ಮಾನ್ಯ ಪ್ರೊ॥ ಎಂ. ಆರ್. ಎನ್. ಮೂರ್ತಿಯವರು ಜನಪ್ರಿಯ ವಿಜ್ಞಾನದ ಪ್ರತಿಪಾದನೆಗೆ ಒಂದು ಮಾದರಿಯನ್ನೇ ತಯಾರಿಸಿಕೊಟ್ಟಿದ್ದಾರೆಂಬ ಮಾತು ಉತ್ಪ್ರೇಕ್ಷೆಯೆನಿಸುವುದಿಲ್ಲ. ಅಂತೆಯೇ ಡಾ॥ ಎಚ್. ಆರ್. ಕೃಷ್ಣಮೂರ್ತಿ ಮತ್ತು ಎಂ. ಬಿ. ಲಾಲ್ ಅವರು ಪರಿಸರದ ಬಗೆಗೆ ಇರಬೇಕಾದ ಕಾಳಜಿಯನ್ನು ಎತ್ತಿತೋರಿಸಿದ್ದಾರೆ. ಕಲಾ ವಿಮರ್ಶೆಯಲ್ಲಿ ನಿಷ್ಣಾತರೂ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರೂ ಆದ ಪ್ರೊ॥ ಎಂ. ಎಚ್. ಕೃಷ್ಣಯ್ಯ ಮತ್ತು ಶ್ರೀ ಕೆ. ಎಸ್. ಪಾರ್ಥಸಾರಥಿಯವರು ಖ್ಯಾತ ಕಲಾವಿದ ಶ್ರೀ ಎಸ್. ಜಿ. ವಾಸುದೇವ್ ಅವರನ್ನು ಸಂದರ್ಶಿಸಿರುವುದು ಈ ಸಂಚಿಕೆಯ ಇನ್ನೊಂದು ವಿಶೇಷ. ನ್ಯಾಯಾಲಯ ಮತ್ತು ಕಾನೂನನ್ನು ಕುರಿತಂತೆ ಪ್ರಸಿದ್ಧ ಸಾಹಿತಿಗಳಾದ ಶ್ರೀ ಕೋ. ಚೆನ್ನಬಸಪ್ಪ ಅವರಲ್ಲದೆ ಶ್ರೀಮತಿ ಹೇಮಲತಾ ಮಹಿಷಿ ಮತ್ತು ಗೀತಾ ಕೃಷ್ಣಮೂರ್ತಿ ಅವರು ಪ್ರಮುಖ ಪ್ರಶ್ನೆಗಳನ್ನೆತ್ತಿದ್ದಾರೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಗೆ ಈಗಾಗಲೇ ಭಾಜನರಾಗಿದ್ದ ಶ್ರೀ ಕುಂ. ವೀರಭದ್ರಪ್ಪನವರು ಕತೆಯೊಂದನ್ನು ನೀಡಿ ಉಪಕರಿಸಿದ್ದಾರೆ. ಈ ಬಾರಿ ಅದೇ ಪ್ರಶಸ್ತಿಯನ್ನು ಪಡೆದ ಶ್ರೀ ಶ್ರೀನಿವಾಸ ವೈದ್ಯ ಅವರು ಗಾಂಧೀಜಿಯವರನ್ನು ಕುರಿತ ಲೇಖನವೊಂದನ್ನು ನೀಡಿದ್ದಾರೆ. ಈ ಸಂದರ್ಭದಲ್ಲಿ ಶ್ರೀ ವೈದ್ಯ ಅವರಿಗೆ 'ಹೊಸತು' ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸಲು ಹರ್ಷಿಸುತ್ತದೆ. ಪ್ರಸ್ತುತ ಸಂಚಿಕೆಯಲ್ಲಿನ ಬೇರೆ ಲೇಖನಗಳು ಸಹ ಮಹತ್ವದ ವಿಷಯಗಳನ್ನು ಸಮರ್ಥವಾಗಿ ಪ್ರತಿಪಾದಿಸಿವೆಯೆಂಬುದನ್ನು ಓದುಗರು ಗಮನಿಸುತ್ತಾರೆಂಬ ಭರವಸೆ ನಮಗಿದೆ. ಒಟ್ಟಿನಲ್ಲಿ ಕಾನೂನು, ವಿಜ್ಞಾನ, ವಿಮರ್ಶೆ, ಕತೆ, ಕವನ, ನಾಟಕ, ಕಲೆ, ಹೀಗೆ ಸಾಧ್ಯವಾದಷ್ಟು ಕ್ಷೇತ್ರಗಳನ್ನು ತನ್ನಲ್ಲಿ ಮೈದುಂಬಿಸಿಕೊಂಡು ಬರುವಂತೆಯೂ ಈ ಸಂಚಿಕೆಯು ರೂಪುಗೊಂಡಿದೆ. ನಮ್ಮ ಓದುಗರು ಈ ಸಂಚಿಕೆಯನ್ನು ಸ್ವಾಗತಿಸುತ್ತಾರೆಂಬ ನಂಬಿಕೆ ನಮ್ಮದು. ಅವರಿಗೆ ಮತ್ತು ನಮ್ಮೆಲ್ಲ ಲೇಖಕರಿಗೆ ಮತ್ತೊಮ್ಮೆ ಆಭಾರ ಮನ್ನಿಸುತ್ತೇವೆ.

## ಈ ತಿಂಗಳು

**ಕೆ**ಲವು ದಿನಪತ್ರಿಕೆಗಳು ವಾರ್ತೆ, ಜಾಗತಿಕ ಸಂದರ್ಭ, ವೈಜ್ಞಾನಿಕ ವಿಶ್ಲೇಷಣೆ, ಮುಂತಾದುವನ್ನು ಪಕ್ಕಕ್ಕಿಟ್ಟು ನೈತಿಕ ಉಪದೇಶ ನೀಡುವುದರಲ್ಲಿ ಮೈಮರೆತಿರುವಾಗ ಶಿಕ್ಷಣದಲ್ಲಿ ನೈತಿಕ ಪ್ರಜ್ಞೆಯ ಮೂಲಪಾಠಗಳನ್ನು ಸೇರಿಸದಿದ್ದರೆ ಹೇಗಾದೀತು, ಎಂಬ ಪ್ರೇರಣೆಯಿಂದ ಶಾಲಾ ಮತ್ತು ಕಾಲೇಜು ವಿದ್ಯಾರ್ಥಿಗಳಿಗೆ ನೈತಿಕತೆಯ ಪಠ್ಯಕ್ರಮವೊಂದನ್ನು ತಯಾರಿಸಲು ಶಿಕ್ಷಣ ಸಚಿವರು ತೀರ್ಮಾನಿಸಿದ್ದಂತೆ ತೋರುತ್ತದೆ. ನೈತಿಕತೆಗೆ ಯಾರ ವಿರೋಧವೂ ಇರಕೂಡದು. ಆದರೆ ಪಠ್ಯದಲ್ಲಿ ಅದನ್ನು ಹೇಗೆ ಅಳವಡಿಸಬೇಕೆಂಬುದು ಸರಳವಾದ ಪ್ರಶ್ನೆಯಲ್ಲ. ಕರ್ನಾಟಕ ಸರ್ಕಾರವು ಈ ವಿಷಯವನ್ನು ವಿಮರ್ಶಿಸಲು ಕಲೆಹಾಕಿದ ಪರಿಣತರಲ್ಲಿ ಒಂದಷ್ಟು ಮಂದಿ ಸ್ವಾಮಿಗಳು ಮತ್ತು ಸ್ವಾಮಿಗಳಂತೆಯೇ ನಡೆದುಕೊಳ್ಳುವ ಕೆಲವು ಬೇರೆಯವರಿದ್ದರು. ಯಾವ ಅಧ್ಯಾಪಕರನ್ನೂ ಆಹ್ವಾನಿಸದೆ ನಡೆಸಲಾದ ''ತಜ್ಞರ'' ಒಂದು ಸಭೆಯ ತೀರ್ಮಾನಗಳು ಪಥ್ಯವಾಗದೆಯೂ ಹೋಗುವ ಸಾಧ್ಯತೆ ಇದೆ. ಮತಧರ್ಮಗಳ ಪ್ರಮೇಯಗಳೇ ನೈತಿಕತೆಯ ಅಡಿಪಾಯಗಳಲ್ಲ. ಸಾಮಾಜಿಕ ವ್ಯವಸ್ಥೆಯಲ್ಲಿನ ಕುಂದುಕೊರತೆಗಳನ್ನು ನಿವಾರಿಸಲು ಅಗತ್ಯವಾದ ಚಿಂತನೆಯು ಮೂಲಭೂತ ನೈತಿಕತೆಗೆ ತಳಹದಿಯಾಗಿರಬೇಕು. ಅದನ್ನು ನಮ್ಮ ''ಪರಿಣತರು'' ಸ್ಪಷ್ಟವಾಗಿ ಗುರುತಿಸಿಲ್ಲದಿರುವುದು ಅಕ್ಷಮ್ಯವಾದ ನ್ಯೂನತೆಯಾಗಿದೆ. ಸಾರ್ವಜನಿಕ ಚರ್ಚೆಯಿಲ್ಲದೆ ತಜ್ಞರೆನ್ನಲಾದವರು ಸೂಚಿಸುವ ಪಠ್ಯಕ್ರಮವನ್ನು ಅಳವಡಿಸುವುದು ಸರಿಯಾದ ವಿಧಾನವಲ್ಲ. ಶಿಕ್ಷಣ ಕ್ಷೇತ್ರದಲ್ಲಿ ಅಕ್ಷರಮಟ್ಟಿನ ಪ್ರಜಾಪ್ರಭುತ್ವವಾದಿ ಶಿಸ್ತನ್ನು ಅನುಸರಿಸದಿದ್ದರೆ ಅದು ಶಿಕ್ಷಣವೆನಿಸಿಕೊಳ್ಳುವುದಿಲ್ಲ, ನೈತಿಕತೆಯಂತೂ ಸಂಪೂರ್ಣವಾಗಿ ಲೋಪವಾಗಿಬಿಟ್ಟಿರುತ್ತದೆ.

* * *

ರಾಷ್ಟ್ರೀಯ ಜ್ಞಾನ ಆಯೋಗದ ಅಧ್ಯಕ್ಷ ಸ್ಯಾಮ್ ಪಿಟ್ರೋಡಾ ಬೆಂಗಳೂರಿಗೆ ದಯಮಾಡಿಸಿ ಅಖಿಲ ಭಾರತ ಮ್ಯಾನೇಜ್‌ಮೆಂಟ್ ಅಸೋಸಿಯೇಷನ್ನಿನ ಆಶ್ರಯದಲ್ಲಿ ಮ್ಯಾನೇಜ್‌ಮೆಂಟ್ ವಿದ್ಯಾರ್ಥಿಗಳ ಸಭೆಯನ್ನುದ್ದೇಶಿಸಿ ಮಾತನಾಡಿ ತಮ್ಮ ಆಯೋಗದ ದೃಷ್ಟಿಕೋಣ, ಆಶಯ ಮತ್ತು ಸಾಧ್ಯತೆಗಳನ್ನು ತೆರೆದಿಟ್ಟರು. ಅಲ್ಲಿಯೂ ಕಾಲೇಜು-ವಿಶ್ವವಿದ್ಯಾನಿಲಯಗಳ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಅತಿಕಡಿಮೆ ಸಂಖ್ಯೆಯಲ್ಲಿ ಆಹ್ವಾನಿತರಾಗಿದ್ದರು. ಎಲ್ಲಾ ''ಮ್ಯಾನೇಜ್‌ಮೆಂಟ್ ಗುರು''ಗಳದ್ದೇ ಪ್ರದರ್ಶನ ಮತ್ತು ಕಾರುಬಾರು! ನೂರಾರು ಶಿಫಾರಸ್ಸುಗಳನ್ನು ನೀಡಿರುವುದಾಗಿ ಅವರು ತಿಳಿಸಿದರು. ಕಳೆದ ಅರವತ್ತು ವರ್ಷಗಳಲ್ಲಿ ಅಭಿವೃದ್ಧಿಯ ಸಾಧನೆಯು ನಿರೀಕ್ಷಿತ ಮಟ್ಟದಲ್ಲಿ ಆಗಿಲ್ಲದಿರುವುದಕ್ಕೆ ಶಿಪಾರಸ್ಸುಗಳ ಅಭಾವವೇ ಕಾರಣವೆಂಬ ಅವರ ಮಿಥ್ಯಾ ಊಹೆಗೆ ಯಾವ ಆಧಾರವೂ ಇಲ್ಲ. ಶಿಕ್ಷಣ ಆಯೋಗಗಳ ಸಲಹೆಗಳ ಮಹಾಪೂರವೇ ಹರಿದಿದೆ. ಆ ಮಹಾಪೂರಕ್ಕೆ ಪಿಟ್ರೋಡಾ ಶಿಫಾರಸ್ಸುಗಳೂ ಹೇರಳವಾಗಿ ಬಂದುಹೋಗಿವೆ.

೧೨ನೇ ಪುಟಕ್ಕೆ...



# ಪರಿವಿಡಿ


ಹೊಸತು ಸಂದರ್ಶನಗಳು :

ಗಂಗವ್ವ... ಗಂಗಾಮಾಯಿ ... ಗಂಗೂಬಾಯಿ
- ಸಂದರ್ಶಕರು : ವಿಜಯ ವಾಮನ ... ೧೬

''ನಮ್ಮ ಜಿಡಿಪಿ ಹೆಚ್ಚಬಹುದು; ಆದರೆ ನಮ್ಮ ಅರ್ಥವ್ಯವಸ್ಥೆ ಪರಾವಲಂಬಿಯಾಗಬಹುದು'' – ಎ. ಎಸ್. ಪ್ರಸಾದ್
- ಸಂದರ್ಶಕರು : ಡಾ|| ಜಿ. ರಾಮಕೃಷ್ಣ
- ಕೆ. ಎಸ್. ಪಾರ್ಥಸಾರಥಿ ... ೩೯

ಮಾರ್ಕ್ಸ್‌ವಾದ ಇವರ ಉಸಿರು – ರಂಗನಾಯಕಮ್ಮ
- ಸಂದರ್ಶಕರು : ಡಾ|| ಎನ್. ಗಾಯತ್ರಿ
- ಡಾ|| ಜಿ. ಆರ್. ... ೫೬

ಅಭಿವ್ಯಕ್ತಿಯ ಅನನ್ಯತೆ : ಎಸ್. ಜಿ. ವಾಸುದೇವ್
- ಸಂದರ್ಶಕರು : ಪ್ರೊ|| ಎಂ. ಎಚ್. ಕೃಷ್ಣಯ್ಯ
- ಕೆ. ಎಸ್. ಪಾರ್ಥಸಾರಥಿ ... ೨೭೩

ರೊದ್ದಂ ನರಸಿಂಹ : ''ನಾನು ವಿಜ್ಞಾನಿಯಾಗಿದ್ದು ಹೇಗೆ ?''
- ಟಿ. ಆರ್. ಅನಂತರಾಮು ... ೨೬೧

ಉರುಳಿದ ೨೦೦೮ : ರಾಷ್ಟ್ರ ಮತ್ತು ರಾಜ್ಯದ ರಾಜಕೀಯ ಪರಿಸ್ಥಿತಿ : ಒಂದು ಅವಲೋಕನ
- ಮುರಳೀಧರ್ ... ೧೩

ಗತವರ್ಷ ೨೦೦೮ - ಒಂದು ಅವಲೋಕನ
- ಸೀಯಾರ್ಕೆ ... ೩೩

ನ್ಯಾಯಾಂಗದಲ್ಲಿ ಭ್ರಷ್ಟಾಚಾರ
- ಕೋ. ಚೆನ್ನಬಸಪ್ಪ ... ೧೧೯

ಶಿಕ್ಷಣವನ್ನು ಕುರಿತು ರವೀಂದ್ರರ ವಿಚಾರಗಳು
- ಚೆನ್ನವೀರ ಕಣವಿ ... ೨೫

ನೊಬೆಲ್ ಪುರಸ್ಕೃತ ಕಪ್ಪು ಜನಾಂಗದ ಪ್ರಥಮ ಸಾಹಿತಿ ಸೋಯಿಂಕಾ
- ಬಿ. ಎ. ಸನದಿ ... ೨೯

ಯೂಸುಫ್ ದಾದೂ
- ಎಂ. ಎಸ್. ಪ್ರಭಾಕರ ... ೧೬೫

ಜಾಗತಿಕ ಆರ್ಥಿಕ ಮುಗ್ಗಟ್ಟು
- ಕೆ. ಎಸ್. ಕೃಷ್ಣಸ್ವಾಮಿ ... ೮೫

ಗಾಂಧಿ ಎಂಬ ಗುಂಭ
- ಶ್ರೀನಿವಾಸ ವೈದ್ಯ ... ೮೯

ಮತ ಮತ್ತು ಮತಾಂತರ : ಯಜಮಾನಿಕೆಯ ನಿರೂಪಣೆಗಳು; ಪರ್ಯಾಯ ಕಥನಗಳು
- ಜಿ. ರಾಜಶೇಖರ ... ೭೩

ಮಾಹಿತಿ ಹಕ್ಕು : ಸಾಧಕ ಬಾಧಕಗಳು
- ವೈ. ಜಿ. ಮುರಳೀಧರ ... ೧೭೯

ಪರಿಹಾರಗಳೇ ಸಮಸ್ಯೆಗಳಾದರೆ ... ?
- ಡಾ|| ಎಚ್. ಆರ್. ಕೃಷ್ಣಮೂರ್ತಿ ... ೫೧

'ತಾಯಿ' ಮತ್ತು ಸಾಮ್ರಾಜ್ಯಶಾಹಿ ವಿರೋಧಿ ಹೋರಾಟ
- ಡಾ|| ಬಿ. ಎಂ. ಪುಟ್ಟಯ್ಯ ... ೬೧

'ಅಮೆರಿಕನ್ ಪ್ರಮಿಥ್ಯೂಸ್'
- ಎಚ್. ಕೆ. ರಾಮಚಂದ್ರಮೂರ್ತಿ ... ೯೧

ಜೀವನ ಕ್ರಮವಾಗಿ ನಡಿಗೆ - ಒಂದು ಪರ್ಯಾಯ
- ಎಂ. ಬಿ. ಲಾಲ್ ... ೯೯

ಮಾದರಿಯೊಂದರ ಹುಡುಕಾಟದಲಿ
- ಶೈಲಜಾ ... ೧೮೫

ಆಧುನಿಕ ಅಮೆರಿಕಾದಲ್ಲಿ ದಾಸ್ಯ ಪದ್ಧತಿ
- ಪ್ರೊ|| ಬಿ. ವಿ. ವೀರಭದ್ರಪ್ಪ ... ೧೧೩

ನನ್ನ ದುರ್ಗಿಗುಡಿ ದಿನಗಳು
- ಯು. ಎಸ್. ವೆಂಕಟರಾಮನ್ ... ೧೫೭

ಉದ್ಯೋಗ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ
- ಡಾ|| ಗೀತಾ ಕೃಷ್ಣಮೂರ್ತಿ ... ೧೨೫

ಬದಲಿ ತಾಯಿಯೋ, ಬಾಡಿಗೆ ತಾಯಿಯೋ... !
- ಹೇಮಲತಾ ಮಹಿಷಿ ... ೧೯೭

ತಲೆ ತುಂಡರಿಸಿದ ನಂತರವೂ ಪ್ರಾಣ ಉಳಿಯುವುದುಂಟೆ ?
- ಕೆ. ಎಲ್. ಗೋಪಾಲಕೃಷ್ಣ ರಾವ್ ... ೧೦೩

ಫಿನೋನ ಸಮಸ್ಯೆ, ಫಿಬೆನಾಕ್ಕಿ ಸಂಖ್ಯೆಗಳು, ಪ್ರಾಕೃತಿಕ ರಚನೆಗಳು
- ಪ್ರೊ|| ಎಂ. ಆರ್. ಎನ್. ಮೂರ್ತಿ ... ೧೧೯

ನ್ಯಾನೊ ತಂತ್ರಜ್ಞಾನ
- ಪ್ರೊ|| ಜೆ. ಆರ್. ಲಕ್ಷ್ಮಣರಾವ್ ... ೧೪೩

ಖಗೋಳ ವಿಜ್ಞಾನದ ಅಂತರರಾಷ್ಟ್ರೀಯ ವರ್ಷ (ಐವೈಎ ೨೦೦೯)
- ಡಾ|| ಎಸ್. ಚಟರ್ಜಿ ... ೧೭೧

ಈ ಜಗತ್ತೇ ಪ್ರಯೋಗಶಾಲೆ, ನಾವೆಲ್ಲ ವಿಜ್ಞಾನಿಗಳೆ !
- ಡಾ|| ಎಮ್. ಎನ್. ಕೇಶವ ರಾವ್ ... ೨೨೧

ಪ್ರಾಚೀನ ಗ್ರೀಕ್ ಪ್ರಾಜ್ಞರ ಜೊತೆ ಸ್ವಲ್ಪ ಹೊತ್ತು
- ಕೆ. ಎಸ್. ರವಿಕುಮಾರ್ ... ೨೪೭

ಸಂಶೋಧನೆಗೆ ಮತ್ತೆ ಮಹತ್ವ ಬಂದಿದೆ ಜೊತೆಗೆ ಸಂಶೋಧನೆ ಎಂದರೇನೆಂದು ಕೇಳಿಕೊಳ್ಳುವ ಕಾಲವೂ ಬಂದಿದೆ
- ಡಾ|| ತಾರಕೇಶ್ವರ್ ವಿ. ಬಿ. ... ೨೫೬

ತಮಿಳುನಾಡಿನ ತಮಿಳೀಕರಣ ಪ್ರಕ್ರಿಯೆಯಲ್ಲಿ ದ್ರಾವಿಡ ಚಳವಳಿ, ಏಕೀಕರಣ ಹಾಗೂ ಶಾಸ್ತ್ರೀಯತೆ
- ಡಾ|| ಕೆ. ಮೋಹನ್‌ಕೃಷ್ಣ ರೈ ... ೧೪೭

ರಾಜರತ್ನಂ ಪದಗಳು - ಒಂದು ಮರುಚಿಂತನೆ
- ವಿ. ಚಂದ್ರಶೇಖರ ನಂಗಲಿ ... ೧೩೫

ಹಿಂದಣ ಹೆಜ್ಜೆಯನರಿತಲ್ಲದೆ ನಿಂದನಿಲುವನರಿಯಲಾಗದು
- ಲಕ್ಷ್ಮೀಪತಿ ಕೋಲಾರ ... ೧೬೧

ನನ್ನ ತಂದೆಯ ಹೆಬ್ಬೆರಳಿನ ಉಗುರು
- ಸುಗತ ಶ್ರೀನಿವಾಸರಾಜು ... ೧೯೩

ಆದರ್ಶ ಬದುಕಿನ ಜನತಾ ಸಾಹಿತಿ - ದಿನಕರ ದೇಸಾಯಿ
- ಮ. ಶ್ರೀ. ಮುರಳಿಕೃಷ್ಣ ... ೨೦೫

ಸಾಹಿತ್ಯದ ಅನುಸಂಧಾನಗಳು ಸಂವಹನ
- ರಾಮಲಿಂಗಪ್ಪ ಟಿ. ಬೇಗೂರು ... ೨೩೯

# ಪರಿವಿಡಿ


**ಐಸ್‌ಕ್ರೀಂ ಇಟಲಿ**
- ತನು ಮೆಹ್ತಾ ತಿವಾರಿ ... ೨೬೪

**ಗ್ರಾಮೀಣ ಜನರ ಪಟ್ಟಣ ವಲಸೆ : ಒಂದು ಚಿಂತನೆ**
- ಡಾ|| ಮೂಡ್ನಾಕೂಡು ಚಿನ್ನಸ್ವಾಮಿ ... ೧೮೨

**ಪರಿಣಾಮ**
- ಕುಂ. ವೀರಭದ್ರಪ್ಪ ... ೪೫

**ಕಾಡುವ ಬಣ್ಣಗಳು**
- ಡಾ|| ಸಬಿಹಾ ಭೂಮೀಗೌಡ ... ೬೯

**ವಾಗಾ**
- ಎಂ. ಎಸ್. ವೇದಾ ... ೯೪

**ಗಫೂರನ ಎತ್ತು**
- ಲಕ್ಷ್ಮೀನಾರಾಯಣ ಎಚ್. ವಿ. ... ೧೫೩

**ದೇವರ ಬಸವ**
- ಪರಂಜ್ಯೋತಿ ... ೨೧೭

**"ಹಲೋ... ನಾನು..."**
- ಅಭಯ ಸಿಂಹ ... ೨೩೩

**ಮಜ್ಜಿಗೆಯೊಳಗಿನ ಬೆಣ್ಣೆಯಂತೆ**
- ವಿಜಯಾ ಶ್ರೀಧರ್ ... ೨೦೧

**ದೇವರ ಆತ್ಮಹತ್ಯೆ**
- ಎಚ್. ಎಲ್. ಕೇಶವಮೂರ್ತಿ ... ೧೦೭

**ಗ್ರಾಮೀಣ ಪ್ರದೇಶಗಳಲ್ಲಿ ರಂಗ ಚಳುವಳಿ – ಒಂದು ನೋಟ**
- ಪಾರ್ವತಿ ಜಿ. ಐತಾಳ್ ... ೨೦೯

**ತಾಳೆಗರಿ ಹಸ್ತಪ್ರತಿಗಳು – ಎಲ್ಲಿಂದೆಲ್ಲಿಗೆ ?**
- ಡಾ|| ಬಿ.ಎಸ್. ಶೈಲಜಾ ... ೨೧೫

**ಹೊಸ ವ್ಯಾಕರಣ ಪಾಠ**
- ಅ. ರಾ. ಮಿತ್ರ ... ೧೩೩

**ಬೆರಳಚ್ಚು ಗಾರುಡಿಗ – ಅನಂತಸುಬ್ಬರಾವ್**
- ಬಿ. ಜಿ. ಮಳಲಿಗೌಡ ... ೨೨೯

**ಕ್ರೀಡಾ ಜಗತ್ತಿನ ಮುಗ್ಗಟ್ಟು ಮತ್ತು ಅವ್ಯವಸ್ಥೆ**
- ದೇವ್ ಎಸ್. ಸುಕುಮಾರ್ ... ೨೫೨

**ಸಿನಿಮಾ – ಪ್ರಾದೇಶಿಕ, ಸಾಂಸ್ಕೃತಿಕ ಆಶಯಗಳಿಗೆ ನೈತಿಕವಾಗಿ ಸ್ಪಂದಿಸಬೇಕು**
- ಎನ್. ವಿದ್ಯಾಶಂಕರ್ ... ೨೬೯

**ಸಂಗೀತ ರಸಿಕನ ಡೈರಿ**
- ಶಾಂತಾ ನಾಗರಾಜ್ ... ೭೯

**ಪ್ರಜಾಪ್ರಭುತ್ವ : ಓದುಗರ ಪ್ರತಿಕ್ರಿಯೆ**
- ಸಾಕ್ಷಿ, ಸಂಪತ್‌ಕುಮಾರ್ ಎನ್., ವಾಮನರಾವ್, ಯು. ಎನ್. ಸಂಗನಾಳಮಠ, ಪ್ರೊ|| ಶ್ರೀನಿವಾಸ್ ವಿ. ಸುತ್ರಾವೆ, ಸ. ರಾ. ಸುಳಕೂಡೆ ... ೨೭೯

**ಕಾವ್ಯಧಾರೆ**

**ಮನೆ** - ಸುಬ್ರಾಯ ಚೊಕ್ಕಾಡಿ ... ೪೮

**ಅಲ್ಲಮ** - ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ ... ೭೫

**ವಿಕಾಸವೋ ? ವಿನಾಶವೋ ?**
- ಡಾ|| ಎನ್. ಎಸ್. ಲೀಲಾ ... ೯೫

**ಬಾಗಿಲು ತೆರೆಯುವುದೇ ಅಪರೂಪ**
- ಪ್ರೊ|| ಸಿ. ವಿ. ಪಾಟೀಲ್ ... ೧೦೪

**ಪೂರ್ಣ ?** - ಸಿ.ಪಿ.ಕೆ. ... ೧೩೬

**ಅಲ್ಲಿ ನನ್ನವರಿದ್ದಾರೆ** - ಬಿ. ಶ್ರೀನಿವಾಸ ಹಾವೇರಿ ... ೧೪೯

**ಮಾಡಿಕೋ ಆತ್ಮಾವಲೋಕನ**
- ಪ್ರೊ|| ಶ್ರೀನಿವಾಸ್ ವಿ. ಸುತ್ರಾವೆ ... ೧೫೧

**ರುಡಾಕಿ ಕವಿತೆಗಳು**
- ಅನು : ಡಾ|| ವಿಜಯಾ ಸುಬ್ಬರಾಜ್ ... ೧೬೩

**ಕರಿಹೈದ** - ನಾಗರಾಜ ರಾಯ್ಕರ್ ... ೧೬೮

**ಪ್ರೀತಿಯ ಹಾದಿ** - ಜ್ಯೋತಿ ಗುರುಪ್ರಸಾದ್ ... ೧೮೯

**ನನ್ನೂರ ತಲೆಯಲ್ಲಿರುವ ಕಾಡು**
- ಕುತ್ಯಾಳ ನಾಗಪ್ಪ ಗೌಡ 'ಕಿರಣ' ... ೧೯೪

**ಚೌಕಾಬಂದಿ** - ವಿನಯಾ ... ೨೩೭

**ಅವಳ ಆತ್ಮ** - ಹೇಮಾ ವೆಂಕಟ್ ... ೨೪೧

**ಅವಳು** - ಕಮಲಂ ಅರಸು ... ೨೪೩

**ಆನೆಕರೋಟಿಯ ಹುಡುಗಿ**
- ಜಿ. ಎಸ್. ಉಬರಡ್ಕ ... ೨೫೩

**ಈ ನಿನ್ನ ಮಕ್ಕಳನು ಕ್ಷಮಿಸು ತಂದೆ**
- ಎಂ. ಡಿ. ಒಕ್ಕುಂದ ... ೨೫೭

**ಬಾಂಬುಗಳು ಸಿಡಿಯಬೇಕು !**
- ವಿ. ಹರಿನಾಥ ಬಾಬು ... ೨೮೫

**ಈ ವರ್ಷದ ವಿಶೇಷಗಳು**
- ಡಾ|| ಬಿ. ಎಸ್. ಶೈಲಜಾ ... ೧೪೦

**ಹೊಸ ಓದು**
- ಡಾ|| ಸುಜಾತ ಲಕ್ಷ್ಮೀಪುರ ... ೧೧೮

**ಭಾವ ಬತ್ತದಿರಲಿ ...**
- ಬಿ. ಆರ್. ಪೋಲೀಸ್ ಪಾಟೀಲ ... ೨೬೭



ಮುಖಚಿತ್ರ : ಅಲ್ಲೇ ಕುಂತವರು

ಚಿತ್ರ : ರಾ. ಸೂರಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಈ ಸಂಚಿಕೆಯ ಚಿತ್ರಗಾರರು : ಸೃಜನ್, ಮೋನಪ್ಪ, ಶ್ರೀಹರಿ, ರಾಂಚಂದ್ರ ಕೊಪ್ಪಲು, ಬಿ. ವಿಲ್ಸನ್, ಜಿ. ಎಂ. ಬೊಮ್ನಳ್ಳಿ, ಕಮಲಂ ಅರಸು, ಆಚಾರ್ಯ, ವೆಂಕಟ್

ಕಚೇರಿ ಸಹಕಾರ : ಜಿ. ವಿ. ತೇಜೋವತಿ






















## ಡಿಸೆಂಬರ್ ಸಂಚಿಕೆ

ಡಿಸೆಂಬರ್ ಸಂಚಿಕೆಯಲ್ಲಿ ಅಮೆರಿಕಾದಲ್ಲೀಗ ಆರಂಭವಾಗಿರುವ, ಮತ್ತು ಜಗತ್ತಿನಾದ್ಯಂತ ವ್ಯಾಪಿಸ ತೊಡಗಿರುವ ಆರ್ಥಿಕ ಬಿಕ್ಕಟ್ಟಿನ ಮೂಲಕಾರಣಗಳನ್ನು ಕುರಿತು ಎರಡು ಉಪಯುಕ್ತ ಲೇಖನಗಳನ್ನು ಪ್ರಕಟಿಸಿದ್ದೀರಿ. ಕರ್ನಾಟಕದ ಹಳ್ಳಿಯೊಂದರಲ್ಲಿ ಬದುಕುತ್ತಿರುವ ನಾನು ಕಳೆದ ಕೆಲವು ತಿಂಗಳುಗಳಿಂದ ಈ ಬಿಕ್ಕಟ್ಟನ್ನು ಕುರಿತು ಇಂಗ್ಲಿಷ್ ಪತ್ರಿಕೆಗಳಿಂದ ಮತ್ತು ಅಂತರ್ಜಾಲದ ತಾಣಗಳಿಂದ ಸಾಧ್ಯವಾದಷ್ಟು ಮಾಹಿತಿ ಪಡೆದು ಈ ಸಮಸ್ಯೆಯ ಸ್ಥೂಲ ಪರಿಚಯವೊಂದನ್ನು ಮಾಡಿಕೊಂಡಿದ್ದೆ. ಆದರೆ, ಕನ್ನಡದ ಒಂದು ಪತ್ರಿಕೆಯೂ ಈವರೆಗೂ ಈ ಕುರಿತು ವಿಶ್ಲೇಷಣಾತ್ಮಕವಾದ ಮತ್ತು ಪರಿಚಯಾತ್ಮಕವೂ ಆದ ಒಂದೇ ಲೇಖನವನ್ನೂ ಪ್ರಕಟಿಸಿದ್ದು ನಾನು ಗಮನಿಸಿಲ್ಲ. ಹಾಗಾಗಿ, ಕನ್ನಡ ಭಾಷೆಯ ಮೂಲಕವೇ ಇಂಥ ವಿದ್ಯಮಾನಗಳನ್ನು ಅರಿಯಬೇಕಾಗಿರುವ ಬಹುಸಂಖ್ಯೆಯ ನಮ್ಮ ನಾಡಿಗರಿಗೆ ಈ ಮಾಹಿತಿಗಳು ಅಲಭ್ಯವಾಗಿದ್ದವು. ಅದನ್ನು ಪ್ರಾರಂಭಿಕವಾಗಿಯಾದರೂ ಪೂರೈಸಿರುವ ನಿಮ್ಮ ಪತ್ರಿಕೆ ಅಭಿನಂದನಾರ್ಹ. ಅಮೂರ್ತವಾಗಿ 'ಕನ್ನಡ ಭಾಷೆಯ ಅಭಿವೃದ್ಧಿ' ಎಂದೆಲ್ಲ ಆಡಲಾಗುವ ಮಾತುಗಳಿಗೆ ನಿಜವಾದ ಅರ್ಥ ಹುಟ್ಟುವುದು ಈ ಬಗೆಯ ಕೆಲಸಗಳಿಂದಲೇ ಎಂದು ನಾನು ಭಾವಿಸಿದ್ದೇನೆ.

ಸಾಗರ **ಅಕ್ಷರ ಕೆ. ವಿ.**

ನಿಮ್ಮ ಪತ್ರಿಕೆಗೆ ಹೊಸತು ಎಂಬ ಹೆಸರಿಗಿಂತ 'ಹಳತು' ಎಂಬ ಹೆಸರೇ ಸೂಕ್ತ. ಓ ಹೆನ್ರಿಯ ಪ್ರಸಿದ್ಧ ಕಥೆ ಈಗಾಗಲೇ ಅನೇಕ ಜನರು ಅನೇಕ ಕಡೆಗೆ ಪ್ರಕಟಿಸಿದ್ದಾರೆ. ಪ್ರಸ್ತುತದ ಲೇಖಕರು ವಿನಾಕಾರಣವಾಗಿ ನಾಯಕನನ್ನು ಮುಸ್ಲಿಂ ಎಂದು ಪರಿವರ್ತಿಸಿದ್ದು ಬಹುಶಃ ನಿಮ್ಮ ಮುಸ್ಲಿಂ ವೈಭವೀಕರಣದ ದೌರ್ಬಲ್ಯವನ್ನು ಸ್ವಂತ ಕಾರ್ಯಾನ್ವಯಕ್ಕೆ ಬಳಸಿಕೊಳ್ಳಲೆಂದೇ ಇರಬೇಕು.

ಕಥೆಯ ತಂತ್ರ, ಭಾಷೆ ಮೂಲದಲ್ಲಿ ಎಷ್ಟು ಚಂದವಿದೆಯೋ ಅವನ್ನು ಕನ್ನಡದಲ್ಲಿ ಮೂಡಿಸಿಲ್ಲ. ತಾಂಡಾ ಎಂದರೆ ಲಮಾಣಿಗಳ ವಸ್ತಿ ಎಂದು ಮಾತ್ರ ಅರ್ಥವಿದೆ. ಕನ್ನಡದಲ್ಲಿ ಚಿತ್ರಕಲಾವಿದರು ನಿರ್ಮಿಸಿ ಕೊಳ್ಳುವ ಪ್ರತ್ಯೇಕ ಬಿಡಾರಕ್ಕೆ ಕಲಾನಗರ, ಕಲಾಗ್ರಾಮ ಎಂದಿಟ್ಟುಕೊಳ್ಳುತ್ತಾರೆ.

ಎರಡನೇ ಕಥೆ ಆರೋಹಣದಲ್ಲಿಯೂ ಸಾಧ್ಯವಾದಷ್ಟು ಬ್ರಾಹ್ಮಣರನ್ನು ತೆಗಳುವ ತವಕವೇ ಎದ್ದು ಕಾಣುತ್ತದೆ. ನಿಮ್ಮ ಪತ್ರಿಕೆಗೆ ಅಂಥದ್ದೇ ಪಥ್ಯ ಎಂಬ ಮಾತು ಈ ಹೊಸ ಕತೆಗಾರರಿಗೆ ಗುಟ್ಟಾಗಿ ಉಳಿದಿಲ್ಲ ಬಿಡಿರಿ. ಈ ಹಳತು ವಿಧಾನಗಳನ್ನು ಅವಲಂಬಿಸುವವರು ಪತ್ರಿಕೆಗೆ ಹಳತು ಎಂಬ ಹೆಸರಿಡುವದೇ ಒಳಿತು.

ಬೆಳಗಾವಿ **ರಾ.ಕೃ ಹೊನ್ನಾಳಿ**

ಸಾಹಿತ್ಯದಲ್ಲಿ ಹಳೆಯದನ್ನೆಲ್ಲಾ ಬಿಸಾಡಿದರೆ ಸಾಂಸ್ಕೃತಿಕ ಬದುಕು ಬರಡಾಗುವುದಿಲ್ಲವೆ ಎಂಬುದನ್ನು ಮಾನ್ಯ ಓದುಗರು ಸ್ಪಷ್ಟಪಡಿಸಿಕೊಳ್ಳಬೇಕು. ಅಷ್ಟೊಂದು ಬಾರಿ ಅನುವಾದಕ್ಕೆ ಗುರಿಯಾಗಿರುವುದು ಆ ಕತೆಯ ಮಹತ್ವದ ಸೂಚನೆ ಇರಬೇಕು. ಕಲಾವಿದನು ಮುಸಲ್ಮಾನನಾಗಿದ್ದು ಓದುಗರಿಗೆ ಮುಜುಗರ ತರಬೇಕಾಗಿಲ್ಲ ಮತ್ತು ಅವನ ಮತಧರ್ಮವನ್ನು ಓದುಗರಾರೂ ಲೆಕ್ಕಿಸುವ ಅವಶ್ಯಕತೆ ಇಲ್ಲ. ಕತೆಯನ್ನು ಪ್ರಸ್ತುತಪಡಿಸಿರುವ ಶ್ರೀ ರಘುರಾಮ ಅವರು ಐವತ್ತು ವರ್ಷಗಳಿಂದಲೂ ಆರೆಸ್ಸೆಸ್ ಕಾರ್ಯಕರ್ತರಾಗಿದ್ದಾರೆಂದು ಶ್ರೀ ಹೊನ್ನಾಳಿಯವರಿಗೆ ತಿಳಿಯದು. ಆರೆಸ್ಸೆಸ್ ನಡೆಸುತ್ತಿರುವ ಒಂದು ವಸತಿ ಶಾಲೆಗೆ ಶ್ರೀ ರಘುರಾಮ ಅವರು ಅನೇಕ ವರ್ಷಗಳ ಕಾಲ ಪ್ರಾಚಾರ್ಯರಾಗಿದ್ದರು. ಮುಸಲ್ಮಾನನೊಬ್ಬನನ್ನು ಕಲಾವಿದನನ್ನಾಗಿಸಿದ್ದರಲ್ಲಿ ಅವರಿಗೆ ಪೂರ್ವಕಲ್ಪಿತ ಸಂಚು ಇದ್ದಿರಲಾರದಲ್ಲವೆ ? 'ಹೊಸತು' ಸಾಕಷ್ಟು ಹಳೆಯದಾಗುವಷ್ಟು ಕಾಲ ಅದನ್ನು ಓದುಗರು ಬೆಳೆಸಲೆಂದು ಆಶಿಸುತ್ತೇವೆ. ಅದಕ್ಕೆ ಶ್ರೀ ಹೊನ್ನಾಳಿಯವರ ಸಹಕಾರವನ್ನು ಸ್ವಾಗತಿಸುತ್ತೇವೆ.

— ಸಂ




ಪತ್ರಗಳು ವಿಭಾಗಕ್ಕೆ ಬರೆಯುವ ಓದುಗರು ತಾವು ಹೇಳಲಿರುವ ವಿಷಯವನ್ನು ನೂರು ಪದಗಳಿಗೆ ಮೀರದಂತೆ ಬರೆದು ಕಳಿಸಿದರೆ ಅನುಕೂಲ. ನಿಮ್ಮ ಪತ್ರಗಳು 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾಗಿರುವ ಲೇಖನಗಳಿಗೆ ಪ್ರತಿಕ್ರಿಯೆ ರೂಪದಲ್ಲಿರಬೇಕೆಂದೇನೂ ಇಲ್ಲ. ಪತ್ರಗಳನ್ನು ಈ-ಮೇಯಿಲ್ ಮೂಲಕ ಸಹ ಕಳುಹಿಸಬಹುದು.

— ಸಂಪಾದಕ

## 'ಶಾಸ್ತ್ರೀಯ ಭಾಷೆ' : ಮುಂದೇನು ?

ಇದೀಗ ಮತ್ತೊಂದು ಕನ್ನಡ ರಾಜ್ಯೋತ್ಸವದ ತಿಂಗಳು ಮುಗಿದಿದೆ. ಪ್ರತಿವರ್ಷ ನವೆಂಬರ್ ತಿಂಗಳಲ್ಲಿ ವೀರ ಕನ್ನಡಿಗ ಎಚ್ಚೆತ್ತು, ಸಭೆ ಸಮಾರಂಭಗಳನ್ನು ನಡೆಸಿ, ನಾಡು-ನುಡಿಯ ಅಭಿವೃದ್ಧಿಯ ಬಗ್ಗೆ ಪುಂಖಾನು ಪುಂಖವಾಗಿ ಭಾಷಣಗಳನ್ನು ಬಿಗಿದು ಮಲಗಿದನೆಂದರೆ, ಮತ್ತೆ ಕನ್ನಡದ ನೆನಪಾಗುವುದು ಮುಂದಿನ ನವೆಂಬರ್ ೧ರಂದೇ.

ಆದರೆ ಈ ಬಾರಿಯ ನವೆಂಬರ್ ತಿಂಗಳಿಗೆ ವಿಶೇಷ ಮಹತ್ವ: ಕಾರಣ, ಕೇಂದ್ರ ಸರ್ಕಾರ ಕನ್ನಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಘೋಷಣೆ ಮಾಡಿತು. ಇದು ಕನ್ನಡಿಗರ ಉತ್ಸಾಹ ಮತ್ತು ಸಂತೋಷವನ್ನು ಇಮ್ಮಡಿಸಿತು. ಹಾಗಾಗಿ ನಾಡಿನಾದ್ಯಂತ ಕನ್ನಡ ರಾಜ್ಯೋತ್ಸವ ನಿಜ ಅರ್ಥದಲ್ಲಿ 'ವಿಜಯೋತ್ಸವ' ಎಂಬಂತೆ ವಿಜೃಂಭಣೆಯಿಂದ ಆಚರಿಸಲ್ಪಟ್ಟಿತು. ಈ ವಿಜಯದ ಫಲಾನುಭವಿಗಳಾಗಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ ಶೀತಲ ಸಮರವೇ ನಡೆಯುತ್ತಿದೆ.

ಕನ್ನಡಕ್ಕೆ ಶಾಸ್ತ್ರೀಯ ಸ್ಥಾನ ದಕ್ಕಿರುವುದರಿಂದ ಒದಗಿಬರುವ ಸೌಲಭ್ಯಗಳು ಈ ರೀತಿಯಿವೆ:

* ಪ್ರಪಂಚದ ಪುರಾತನ ಭಾಷೆಗಳಾದ ಗ್ರೀಕ್, ಲ್ಯಾಟಿನ್, ಸಂಸ್ಕೃತ, ಹೀಬ್ರೂ ಮುಂತಾದ ಭಾಷೆಗಳ ಸಾಲಿಗೆ ತಮಿಳಿನ ಜೊತೆಗೆ ಕನ್ನಡವೂ ನಿಲ್ಲುವಂತಾಗಿದೆ.
* ಅಂತರರಾಷ್ಟ್ರೀಯ ಮಟ್ಟದಲ್ಲಿ ಕನ್ನಡ ಅಧ್ಯಯನ ಕೇಂದ್ರವೊಂದನ್ನು ಸ್ಥಾಪಿಸಲು ಅವಕಾಶವಾಗಿದೆ.
* ಕೇಂದ್ರ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ಭಾಷೆಗೆ ಮಾನ್ಯತೆ ನೀಡಿ, ಅದರ ಅಧ್ಯಯನಕ್ಕೆ ಪೀಠ ಸ್ಥಾಪಿಸಲು ವಿಶ್ವವಿದ್ಯಾಲಯಗಳ ಧನ ಆಯೋಗವು ನೆರವು ನೀಡುತ್ತದೆ.
* ಕನ್ನಡ ಭಾಷೆಯ ಪ್ರಾಚೀನ ಬರಹಗಳ ಅಧ್ಯಯನಕ್ಕಾಗಿ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಮುಂತಾದ ಕಾರ್ಯಗಳಿಗೆ ಅಪಾರ ಹಣ ಲಭ್ಯವಾಗುತ್ತದೆ.

ಇಷ್ಟೆಲ್ಲಾ ಸೌಲಭ್ಯಗಳ ನಡುವೆಯೂ, ಶಾಸ್ತ್ರೀಯ ಸ್ಥಾನದಿಂದ ಸಾಮಾನ್ಯ ಜನರಿಗಾರುವ ಪ್ರಯೋಜನ ವೇನು ? ಕನ್ನಡ ನಾಡು-ನುಡಿಯ ಬೆಳವಣಿಗೆಗೆ ಇದು ಹೇಗೆ ಸಹಾಯಕವಾಗಿದೆ ? ಇವು ಶ್ರೀಸಾಮಾನ್ಯನಲ್ಲಿ ಯಕ್ಷಪ್ರಶ್ನೆಗಳಾಗಿಯೇ ಉಳಿದಿವೆ.

ಉನ್ನತ ಶಿಕ್ಷಣದ ಎಲ್ಲ ಶಾಖೆಗಳ ಜ್ಞಾನವನ್ನು, ಅದರಲ್ಲೂ ವಿಜ್ಞಾನ, ತಂತ್ರಜ್ಞಾನ ಮತ್ತು ವೈದ್ಯಕೀಯ ವಿಜ್ಞಾನವನ್ನು ಕನ್ನಡದಲ್ಲಿ ಸರಳವಾಗಿ ಬೋಧನೆ ಮಾಡಲು, ಆ ಬಗ್ಗೆ ಸುಲಲಿತವಾಗಿ ಗ್ರಂಥಗಳನ್ನು ರಚನೆ ಮಾಡಲು ಸಾಧ್ಯವಾಗಿಲ್ಲವೇಕೆ ? ಇಂತಹ ಪ್ರಯತ್ನಗಳಾಗದೆ ಭಾಷೆ ಬೆಳೆಯುವುದಾದರೂ ಹೇಗೆ ? ಅದು ಶ್ರೀಸಾಮಾನ್ಯನಿಗೆ ಉಪಯೋಗವಾಗುವುದಾದರೂ ಹೇಗೆ ? ಈ ಬಗ್ಗೆ ಚಿಂತನ-ಮಂಥನ ಮಾಡಬೇಕಾದ ಕಾಲ ಈಗ ಒದಗಿಬಂದಿದೆ.

ಇಲ್ಲೊಂದು ಉದಾಹರಣೆಯನ್ನು ಪ್ರಸ್ತಾಪಿಸಿದರೆ

ಅಪ್ರಸ್ತುತವಾಗಲಾರದು. ಸರ್ಕಾರಿ ವೈದ್ಯರಾಗಿ ದುಡಿಯುತ್ತಿರುವ ನನ್ನ ಮಿತ್ರರೊಬ್ಬರು ಬಲ್ಗೇರಿಯಾ ದೇಶದಲ್ಲಿ ಆ ದೇಶದ ಭಾಷೆಯಲ್ಲಿ ತಮ್ಮ ವೈದ್ಯಕೀಯ ಶಿಕ್ಷಣವನ್ನು ಪಡೆದರು. ಅವರು ಬಲ್ಗೇರಿಯನ್ ಭಾಷೆಯಲ್ಲಿಯೇ ವೈದ್ಯಕೀಯ ಶಿಕ್ಷಣ ಮುಗಿಸಿರುವುದನ್ನು ಕೇಳಿ ಆಶ್ಚರ್ಯವಾಯಿತು. ಸಾಂಸ್ಕೃತಿಕ ವಿನಿಮಯ ಯೋಜನೆ ಅಡಿಯಲ್ಲಿ ಭಾರತದ ಪ್ರತಿ ರಾಜ್ಯದಿಂದ ಪಿ.ಯು.ಸಿ. ಮುಗಿಸಿರುವ ಇಬ್ಬರು ವಿದ್ಯಾರ್ಥಿಗಳನ್ನು ಆ ದೇಶ ತನ್ನಲ್ಲಿಗೆ ಕರೆಸಿಕೊಂಡು, ಅವರಿಗೆ ಒಂದು ವರ್ಷದವರೆಗೆ ಬಲ್ಗೇರಿಯನ್ ಭಾಷೆಯನ್ನು ಕಲಿಸಿ, ನಂತರ ಅದೇ ಭಾಷೆಯಲ್ಲಿ ವೈದ್ಯಕೀಯ ಶಿಕ್ಷಣವನ್ನು ನೀಡುತ್ತದೆ. ಕರ್ನಾಟಕದಷ್ಟೇ ಪ್ರಾದೇಶಿಕ ವೈಶಾಲ್ಯ ಹೊಂದಿರುವ, ಕರ್ನಾಟಕಕ್ಕಿಂತ ಅತ್ಯಂತ ಕಡಿಮೆ ಜನಸಂಖ್ಯೆ ಹೊಂದಿರುವ ಯೂರೋಪಿನ ಈ ದೇಶ, ಕೇವಲ ಒಂದು ವರ್ಷದಲ್ಲಿ ತನ್ನ ಭಾಷೆಯನ್ನು ಕಲಿಸಿ, ವೈದ್ಯಕೀಯ ಶಿಕ್ಷಣವನ್ನು ನೀಡಲು ಸಾಧ್ಯವಾಗಿದೆಯೆಂದರೆ, ತನ್ನಲ್ಲಿರುವ ಎಲ್ಲ ವಿಶ್ವವಿದ್ಯಾಲಯಗಳಲ್ಲಿ ಉನ್ನತಶಿಕ್ಷಣವನ್ನು ತನ್ನ ಭಾಷೆಯಲ್ಲಿಯೇ ನೀಡುತ್ತಿದೆ ಎನ್ನುವುದಾದರೆ, ನಮಗೇಕೆ ಅದು ಸಾಧ್ಯವಾಗಿಲ್ಲ?

ಜಪಾನ್‌ನಂತಹ ಶ್ರೀಮಂತ ಪುಟ್ಟದೇಶ ತನ್ನ ಮಾತೃಭಾಷೆಯಲ್ಲಿಯೇ ಉನ್ನತ ಶಿಕ್ಷಣ ನೀಡುತ್ತಿರುವಾಗ, ವಿಶ್ವದ ಬಹುತೇಕ ರಾಷ್ಟ್ರಗಳು ತಮ್ಮ ಮಾತೃಭಾಷೆಗಳಲ್ಲಿಯೆ ತಮ್ಮ ಮಕ್ಕಳಿಗೆ ಶಿಕ್ಷಣ ನೀಡುತ್ತಿರುವಾಗ, ಅಷ್ಟೇ ಏಕೆ ನಮ್ಮ ನೆರೆಯ ರಾಜ್ಯ ತಮಿಳುನಾಡಿನ ವಿಶ್ವವಿದ್ಯಾಲಯಗಳು ತಮ್ಮ ತಮಿಳು ಮಾಧ್ಯಮದಲ್ಲಿ ಉನ್ನತ ಶಿಕ್ಷಣ ನೀಡುತ್ತಿರುವಾಗ ನಮಗೇಕೆ ಸಾಧ್ಯವಾಗಿಲ್ಲ? ಉತ್ತರ ಭಾರತದ ರಾಜ್ಯಗಳು ತಮ್ಮ ಮಾತೃಭಾಷೆ ಹಿಂದಿಯಲ್ಲಿಯೇ ಉನ್ನತ ಶಿಕ್ಷಣ ನೀಡುತ್ತಿವೆ. ಅಲ್ಲಿನ ವಿದ್ಯಾರ್ಥಿಗಳು ಭಾರತ ಆಡಳಿತ ಸೇವೆಯಂತಹ ಅಖಿಲ ಭಾರತ ಪರೀಕ್ಷೆಗಳನ್ನು ಹಿಂದಿಯಲ್ಲಿಯೇ ಬರೆದು ಹೆಚ್ಚಿನ ಸಂಖ್ಯೆಯಲ್ಲಿ ಆಯ್ಕೆಯಾಗುತ್ತಿದ್ದಾರೆ. ಇಂತಹ ಅವಕಾಶಗಳು ಕನ್ನಡದ ಮಕ್ಕಳಿಗೇಕಿಲ್ಲ?

ಕನ್ನಡ ಭಾಷೆಯ ಬೆಳವಣಿಗೆಗೆ ಹಾಗೂ ಅದು ಸಾಮಾನ್ಯ ಜನರಿಗೆ ಉಪಯೋಗವಾಗುವ ನಿಟ್ಟಿನಲ್ಲಿ ತಕ್ಷಣದಲ್ಲಿ ಗಮನಹರಿಸಬಹುದಾದ ಕ್ರಮಗಳೆಂದರೆ,

* ರಾಜ್ಯದಲ್ಲಿರುವ ಎಲ್ಲ ವಿಶ್ವವಿದ್ಯಾಲಯಗಳು ತಮ್ಮ ಎಲ್ಲ ಜ್ಞಾನದ ಶಾಖೆಗಳಲ್ಲಿ ಕನ್ನಡ ಮಾಧ್ಯಮದಲ್ಲಿಯೂ ಬೋಧಿಸುವ ಪ್ರಾಮಾಣಿಕ ಪ್ರಯತ್ನ ಮಾಡಬೇಕು.
* ಪಿ.ಯು.ಸಿ. ಹಂತದಿಂದಲೇ ಹಂತ ಹಂತವಾಗಿ ವಿಜ್ಞಾನ ವಿಷಯವನ್ನು ನಂತರ ವೈದ್ಯಕೀಯ ಹಾಗೂ ತಾಂತ್ರಿಕ ವಿಷಯಗಳನ್ನು ಕನ್ನಡ ಮಾಧ್ಯಮದಲ್ಲಿಯೂ ಬೋಧಿಸಲು ಪ್ರಯತ್ನಿಸಬೇಕು.
* ವಿಜ್ಞಾನ, ತಂತ್ರಜ್ಞಾನ, ವೈದ್ಯಕೀಯ ಹಾಗೂ ಇನ್ನಿತರ ಉನ್ನತ ಜ್ಞಾನಗಳಿಗೆ ಸಂಬಂಧಿಸಿದಂತಹ ಆಕರ ಗ್ರಂಥಗಳನ್ನು ಕನ್ನಡದಲ್ಲಿ ಸುಲಲಿತವಾಗಿ ಬರೆಯುವ ಪ್ರಯತ್ನಗಳಾಗಬೇಕು.
* ಬೋಧನಾ ಕ್ಷೇತ್ರದಲ್ಲಿರುವ ಎಲ್ಲಾ ಬೋಧಕರು ಕನ್ನಡದಲ್ಲಿ ಬೋಧಿಸುವುದು ಒಂದು ಗೌರವದ ಕೆಲಸ ಎಂಬ ಸ್ವಾಭಿಮಾನ ಪ್ರಕಟಿಸಬೇಕಾಗಿದೆ.
* ಶಾಲಾ ಕಾಲೇಜುಗಳಲ್ಲಿ ಕನ್ನಡ ಮಾಧ್ಯಮದಲ್ಲಿ ಕಲಿಯುತ್ತಿರುವ ಮಕ್ಕಳಲ್ಲಿನ ಕೀಳರಿಮೆ ದೂರ ಮಾಡಿ, ಸ್ವಾಭಿಮಾನ ತುಂಬಬೇಕಾಗಿದೆ.
* ರಾಜ್ಯ ಸರ್ಕಾರದ ಎಲ್ಲ ಉದ್ಯೋಗಗಳಲ್ಲಿ ಹಾಗೂ ಖಾಸಗೀ ಉದ್ಯಮ ಸಂಸ್ಥೆಗಳಲ್ಲಿ ಕನ್ನಡ ಬಲ್ಲವರಿಗೆ ಮಾತ್ರ ಉದ್ಯೋಗಾವಕಾಶಗಳು ದೊರೆಯುವಂತೆ ನೋಡಿಕೊಳ್ಳಬೇಕಾಗಿದೆ.
* ಕೇಂದ್ರ ಸರ್ಕಾರದ ಉದ್ಯೋಗಗಳಲ್ಲಿ ಜನಸಂಖ್ಯೆಯ ಆಧಾರದ ಮೇಲೆ ನಮ್ಮ ಪಾಲನ್ನು ನಾವು ಪಡೆಯಲು ಕ್ರಮ ಕೈಗೊಳ್ಳಬೇಕು.
* ಕಾನ್ವೆಂಟುಗಳನ್ನು ನಿಯಂತ್ರಿಸಿ, ರಾಜ್ಯಾದ್ಯಂತ ಏಕರೂಪದ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೊಳಿಸಬೇಕಾಗಿದೆ. ತಾರತಮ್ಯ ನಿವಾರಣೆಯಲ್ಲಿ ಇದು ಜರೂರು ಆಗಬೇಕಾದ ಕೆಲಸವಾಗಿದೆ.

ತುಮಕೂರು **ಜಿ. ಎಸ್. ಕೆಂಪಯ್ಯ**

## ಪುಸ್ತಕಗಳಿಗೆ ಹೊಸ ಆಯಾಮ

### ಬಹುಮಾಧ್ಯಮ ಪೂರಕ ಮಾಹಿತಿಯ ಸೇರ್ಪಡೆ!

### http://navakarnataka.blogspot.com

ಪುಸ್ತಕಲೋಕದಲ್ಲೊಂದು ಕ್ರಾಂತಿ ಸನ್ನಿಹಿತವಾಗಿದೆ. **ಮಾತಾಡುವ ಪುಸ್ತಕಗಳು, ಆಲಿಸುವ ಪುಸ್ತಕಗಳು (ಆಡಿಯೋ ಬುಕ್ಸ್), ಇ-ಬುಕ್** ಎಂಬ ವಿದ್ಯುನ್ಮಾನ ಪುಸ್ತಕಗಳು ಮಾರುಕಟ್ಟೆ ಪ್ರವೇಶಿಸಿ ಹೊಸಬಗೆಯ ಓದಿನ ರುಚಿ ಹತ್ತಿಸುತ್ತಿವೆ. ಇದೀಗ ಮುದ್ರಿತ ಪುಸ್ತಕಗಳಿಗೆ **ಬಹು ಮಾಧ್ಯಮ ದೃಕ್-ಶ್ರವಣ ಪೂರಕ ಮಾಹಿತಿ** ಸೇರಿಸುವ ಕಾರ್ಯ ಆರಂಭವಾಗಿದೆ. ಕನ್ನಡದ ಹೆಮ್ಮೆಯ ನವಕರ್ನಾಟಕ ಪ್ರಕಾಶನ ಸಂಸ್ಥೆ ಪ್ರಾಯೋಗಿಕವಾಗಿ ಈ ಕೆಲಸ ಆರಂಭಿಸಿ ಜಾಗತಿಕ ಮಟ್ಟದಲ್ಲಿ ಹೆಸರು ಮಾಡಿರುವ ಬೃಹತ್ ಪ್ರಕಾಶನ ಸಂಸ್ಥೆಗಳಿಗೆ ಸರಿಸಮಾನ ಪೈಪೋಟಿ ನೀಡಲು ಸಜ್ಜಾಗಿದೆ!

ಒಂದು ಪುಟ್ಟ ಪುಸ್ತಕ, ಸುಮಾರು 32ರಿಂದ 48 ಪುಟಗಳದ್ದು, ಅಂತಿಟ್ಟುಕೊಳ್ಳಿ. ಅದಕ್ಕೆ ಪೂರಕ ಮಾಹಿತಿಯ ಜಾಲತಾಣ ಕೊಂಡಿಗಳನ್ನು ಜೋಡಿಸಿ ಜಾಲಾಡುವಂತೆ ಮಾಡಿದಾಗ 32ರಿಂದ 48 ಸಾವಿರ ಪುಟಕ್ಕೂ ಹೆಚ್ಚು ಬಹುಮಾಧ್ಯಮ ಮಾಹಿತಿ ದೊರೆಯುತ್ತದೆ!

ಉದಾಹರಣೆಗೆ http://navakarnataka.blogspot.comನಲ್ಲಿ ನವಕರ್ನಾಟಕ ಪ್ರಕಾಶನದ ಕೃತಿಗಳ ಹೆಸರು, ವಿವರ, ಟಿಪ್ಪಣಿ, ವಿಮರ್ಶೆ, ಪತ್ರಿಕೆಗಳಲ್ಲಿ ಬಂದ ವಿಮರ್ಶೆಯ ಪ್ರತಿ, ಪುಸ್ತಕಕ್ಕೆ ಪೂರಕವಾದ ಆಡಿಯೊ-ವೀಡಿಯೊ ಕ್ಲಿಪ್, ಫೋಟೋಗ್ಯಾಲರಿ ಇತ್ಯಾದಿ ಅಳವಡಿಸಲಾಗಿದೆ. ಶ್ರೀಮತಿ ನೇಮಿಚಂದ್ರ ಅವರು ಬರೆದ **ಯಾದ್ ವಶೇಮ್ - ನೂರು ಸಾವಿರ ಸಾವಿನ ನೆನಪು** ಕೃತಿಯಲ್ಲಿ ಚಿತ್ರಿತವಾದ ಎರಡನೇ ವಿಶ್ವಯುದ್ಧದ ಸಂದರ್ಭದಲ್ಲಿ ಜರ್ಮನಿಯಲ್ಲಿ ನಡೆದ ಯಹೂದಿಗಳ ಮಾರಣ ಹೋಮ, ಜೀವನ ಚಿತ್ರ ಇತ್ಯಾದಿಗಳನ್ನು ಫೋಟೋ ಸಹಿತ ವಿವರಿಸಲಾಗಿದೆ. ಹಾಗೆಯೇ ಲಾರ್ಡ್ ಬೇಡನ್ ಪೊವೆಲ್ ಅವರ **ಬಾಲಕರಿಗಾಗಿ ಸ್ಕೌಟಿಂಗ್**, ಬೇದ್ರೆ ಮಂಜುನಾಥ ಅವರ **Rhymes Rhymes Here Again!** ಕೃತಿಗಳಿಗೆ ಪೂರಕವಾದ ವೀಡಿಯೊ ಕ್ಲಿಪಿಂಗ್‌ಗಳನ್ನು ಅಳವಡಿಸಲಾಗಿದೆ. **ಹೊಸತು** ಪತ್ರಿಕೆಯಲ್ಲಿ ಪ್ರಕಟವಾದ "ಪವಾಡ ಗುಟ್ಟು ಬಯಲು" ಲೇಖನಕ್ಕೆ ಸಂಬಂಧಿಸಿದ ವೀಡಿಯೋ ಕ್ಲಿಪ್ ಇದೆ. ಹೀಗೆ ಮಾಡುವುದರಿಂದ ಕೃತಿಯ ಮೌಲ್ಯ ಹೆಚ್ಚುವುದೇ ಅಲ್ಲದೆ ಅದಕ್ಕೊಂದು ಮೆರುಗು ಒದಗಿಸಿದಂತಾಗಿದೆ.




ನವಕರ್ನಾಟಕ ಲೇಖಕರ ಬಳಗದಲ್ಲಿಯೂ ಸಾಕಷ್ಟು ಜನ ಬ್ಲಾಗ್‌ಗಳನ್ನು ಹೊಂದಿದ್ದು ಅವರೂ ಕೂಡ ತಮ್ಮ ಕೃತಿಗಳಿಗೆ ಪೂರಕ ಮಾಹಿತಿಯನ್ನು ಜೋಡಿಸುತ್ತಿದ್ದಾರೆ. ಪುಸ್ತಕ ಮಾರುಕಟ್ಟೆಗೆ ಬರುವಷ್ಟರಲ್ಲಿ ಎಷ್ಟೋ ಬಾರಿ ಅಲ್ಲಿನ ವಿಷಯ ಹಳತಾಗಿಸಿಬಿಡುತ್ತದೆ. ಆದರೆ ಪುಸ್ತಕಕ್ಕೆ ಪೂರಕ ಬಹುಮಾಧ್ಯಮ ಮಾಹಿತಿ ಒದಗಿಸುವ ಕೊಂಡಿಗಳನ್ನು, ಬ್ಲಾಗ್ ಅಥವಾ ಜಾಲತಾಣಗಳಲ್ಲಿ ಅಳವಡಿಸಿ, ಕೃತಿಯಲ್ಲಿ ಸೂಚಿಸಿದಲ್ಲಿ ಅದು ಸದಾ ಹೊಸತಾಗಿಯೇ ಇರುತ್ತದೆ. ಇಂತಹ **ಓದುಗಸ್ನೇಹಿ** ಪುಸ್ತಕಗಳನ್ನು ಪ್ರಕಟಿಸುವುದು ಅಪೇಕ್ಷಣೀಯ ಮತ್ತು ಅನಿವಾರ್ಯ.

– ಬೇದ್ರೆ ಮಂಜುನಾಥ

ಸೇರ್ಪಡೆಗೊಳ್ಳುತ್ತವೆ. ಸರ್ಕಾರವು ಸಮರ್ಪಕವಾಗಿ ಕಾರ್ಯ ನಿರ್ವಹಿಸದಿದ್ದಾಗ ಸಾಮೂಹಿಕ ಮಧ್ಯಪ್ರವೇಶವು ಅನಿವಾರ್ಯವೆಂಬ ಅವರ ಸೂಚನೆಯೊಂದನ್ನು ಬಿಟ್ಟರೆ ಪಿಟ್ರೋಡಾ ಅವರಂತಹ ಮಹಾತಜ್ಞರು ಯಾವ ಅಮೂಲ್ಯವಾದ ಸರಕನ್ನು ತೆಗೆದಿಡುತ್ತಾರೋ ಎಂಬ ಕುತೂಹಲವಿದ್ದವರಿಗೆ ನಿರಾಶೆಯನ್ನು ಮೂಡಿಸಿ 'ಮ್ಯಾನೇಜ್‌ಮೆಂಟ್ ಗುರು'ಗಳ ಮಹಾಸನ್ನಿಧಿಗೆ ಮತ್ತೆ ತೆರಳಿಬಿಟ್ಟಿದ್ದು ಅಚ್ಚರಿಯನ್ನೇನೂ ಮೂಡಿಸಲಿಲ್ಲ. ಶಿಫಾರಸು ಗಳಿಂದಲೇ ಸಾಧನೆಗಳು ಆಗುವಂತಿದ್ದಿದ್ದರೆ ಈ ವೇಳೆಗೆ ನಮ್ಮ ದೇಶವು ಎವರೆಸ್ಟ್ ಎತ್ತರಕ್ಕೆ ಏರಿಬಿಟ್ಟಿರುತ್ತಿತ್ತು!

* * *

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ''ಕರಾವಳಿ ಅಲೆ'' ಎಂಬ ಪತ್ರಿಕೆಯನ್ನು ವಿತರಣೆ ಮಾಡಲಾಗದಂತೆ ಕೆಲವು ಸಮಾಜವಿರೋಧಿ ಗುಂಪುಗಳು ತಡೆಯನ್ನೊಡ್ಡುತ್ತಿರುವುದು ವರದಿಯಾಗಿತ್ತು. ಪತ್ರಿಕಾ ಸ್ವಾತಂತ್ರ್ಯದ ಮಾತನ್ನಾಡುವ ಇತರ ಪತ್ರಿಕೆಗಳಿಗೆ ಇದು ಮುಖ್ಯವಾದ ವಿಷಯವಾಗದಿದ್ದುದು ವಿಷಾದನೀಯ. ಅಖಿಲ ಭಾರತ ಸಂಪಾದಕರ ಕೂಟವು ಈ ಬಗ್ಗೆ ಕಾರ್ಯಪ್ರವೃತ್ತವಾಗಿದ್ದು ಸ್ವಾಗತಾರ್ಹ. ''ಕರಾವಳಿ ಅಲೆ''ಯ ಮೇಲೆ ಅಲೆಅಲೆಯಾಗಿ ಪ್ರತಿರೋಧವನ್ನು ಒಡ್ಡುವುದು ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಮತಾಂಧರಿಗೆ ಹವ್ಯಾಸವಾಗಿಹೋಗಿದೆ. ಪೊಲೀಸರು ಮತ್ತು ಸರ್ಕಾರದ ಸಚಿವರು ಇದನ್ನು ನೋಡುತ್ತಾ ಕುಳಿತಿದ್ದಾರೆಯೇ ವಿನಾ ಸಮಾಜ ವಿರೋಧಿ ಶಕ್ತಿಗಳನ್ನು ಪ್ರತಿಬಂಧಿಸುತ್ತಿಲ್ಲ. ಅವರ ಪರೋಕ್ಷ ಬೆಂಬಲವು ಯಾರ ಪರವಾಗಿದೆಯೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇದು ಅನಾರೋಗ್ಯಕರವಾದ ಬೆಳವಣಿಗೆ. ಆಘಾತವಾಗಿರುವುದು ಆ ಪತ್ರಿಕೆಗೆ ತಾನೆ, ನಮಗಲ್ಲವಲ್ಲ, ಎಂಬ ಭಾವನೆಯು ದುಷ್ಟವಾದುದು. ಪ್ರಜಾಪ್ರಭುತ್ವದ ಅತಿಸಾಮಾನ್ಯ ನಿಯಮಗಳನ್ನು ಹೀಗೆ ಗಾಳಿಗೆ ತೂರುತ್ತಾ ಹೋದರೆ ಮತ್ತು ಅದನ್ನು ತಡೆಗಟ್ಟದಿದ್ದರೆ ನಾಳೆ ನಮ್ಮನ್ನು ನಾವು ಹಳಿದುಕೊಳ್ಳಬೇಕಾಗುವ ಪ್ರಸಂಗ ಬಂದೀತು. ನಾಗರಿಕರ ಸಕ್ರಿಯ ಮಧ್ಯಪ್ರವೇಶವು ಇದಕ್ಕೆ ಮದ್ದಾಗಬೇಕು.

* * *

ಮುಖ್ಯಮಂತ್ರಿ ಶ್ರೀ ಯಡಿಯೂರಪ್ಪನವರು ಈಗ ''ಡಾಕ್ಟರ್'' ಆಗಿದ್ದಾರೆ. ರೋಗಿಗಳ ಭವಿಷ್ಯ ಹೇಗಿರುತ್ತದೋ ಕಾದು ನೋಡಬೇಕು. ಅವರಿಗೆ ಡಾಕ್ಟರ್ ಪದವಿ ದೊರಕಿದ್ದು ಪೇಜಾವರ ಮಹಾಸ್ವಾಮಿಗಳಿಗೆ ಎರಡು ಕೋಟಿ ರೂಪಾಯಿಗಳ ದಾನವನ್ನು ಸರ್ಕಾರದ ಖಜಾನೆಯಿಂದ ಘೋಷಿಸಿದ ನಂತರ ಎಂಬುದು ಕೇವಲ ಕಾಕತಾಳೀಯ ಇರಬಹುದು. ಕೋಟಿಗಟ್ಟಲೆ ಸಂಪತ್ತನ್ನು ಶೇಖರಿಸಿಕೊಂಡಿರುವ ವಿಶ್ವೇಶ್ವರ ತೀರ್ಥರಿಗೆ ಸಾರ್ವಜನಿಕ ಖಜಾನೆಯಿಂದ ಎರಡು ಕೋಟಿಯನ್ನು ಪಡೆಯಲು ಮುಜುಗರವಾಗದಿರುವುದು ಶ್ರೀಕೃಷ್ಣ ಪರಮಾತ್ಮನ ಪ್ರೇರಣೆಯಿಂದಲೇ ಇರಬೇಕು. ಅಷ್ಟು ಸಂಪತ್ತಿರುವವರಿಗೆ ಒಂದೆರಡು ಶಾಲೆಗಳನ್ನು ತೆರೆಯಲು ಮುಖ್ಯಮಂತ್ರಿಯವರು ದಾನ ನೀಡಬೇಕಾಗಿ ಬಂದಿರುವುದು ನಮ್ಮ ಮಠಗಳ ಅಂತಿಮ ಕಾರ್ಯಸೂಚಿಯ ಕುರುಹುಗಳೆಂದು ತೋರುತ್ತದೆ. ಮಾನ್ಯ ಡಾ|| ಬಿ. ಎಸ್. ಯಡಿಯೂರಪ್ಪನವರಿಗೆ ಅಮೆರಿಕಾದ ಮಿಷಿಗನ್ ರಾಜ್ಯದ ಬೊಕ್ಕಸದಿಂದ ನಡೆಯುವ ಚಿಕ್ಕ ವಿಶ್ವವಿದ್ಯಾಲಯವೊಂದು ''ಬಿಟ್ಟಿ'' ಪದವಿಯನ್ನು ನೀಡಲು ಮುಂದಾದದ್ದು ಹೇಗೆಂಬುದು ಒಂದು ವಿಸ್ಮಯವಾದರೆ, ಪದವಿಯನ್ನು ಪಡೆಯಲು ಇನ್ನೊಬ್ಬ ಸಚಿವರು ಹಾಗೂ ರಾಜ್ಯದ ಮುಖ್ಯ ಕಾರ್ಯದರ್ಶಿಯವರನ್ನು ಜೊತೆಗೆ ಕರೆದುಕೊಂಡುಹೋದ ಮುಖ್ಯಮಂತ್ರಿಯವರ ಕ್ರಮವು ಇನ್ನೊಂದು ವಿಸ್ಮಯವಾಗಿದೆ. ಈ ಹಿಂದೆ ಸದರಿ ವಿಶ್ವವಿದ್ಯಾನಿಲಯದ ಅಧ್ಯಕ್ಷರಿಗೆ ನಮ್ಮ ರಾಜ್ಯದ ಒಂದು ವಿಶ್ವವಿದ್ಯಾನಿಲಯವು ''ಬಿಟ್ಟಿ'' ಡಾಕ್ಟೊರೇಟ್ ಕೊಟ್ಟಿದ್ದಿತೆಂದು ತಿಳಿಯಬರುತ್ತದೆ. ಬೆಳಗಾವಿಯಲ್ಲಿ ಪ್ರತಿಷ್ಠಿತರಿಗಾಗಿ ಶಾಲೆಯೊಂದನ್ನು ನಡೆಸುತ್ತಿರುವ ಅಮೆರಿಕಾ ನಿವಾಸಿ ಶ್ರೀ ಕಂಠಿಯವರು ಕೆಲಸ ಮಾಡುವ ಮಿಷಿಗನ್ನಿನ ವಿಶ್ವವಿದ್ಯಾನಿಲಯವು ಡಾಕ್ಟೊರೇಟ್ ಕೊಟ್ಟಿರುವುದು ಸ್ವಾರಸ್ಯಕರವಾದ ಅಂಶ. ಅವರಿಗೆ ಯಾವ ಪ್ರತಿಫಲ ಕಾದಿದೆಯೋ ಯಾರಿಗೆ ಗೊತ್ತು! ನಮ್ಮ ದೇಶದ ಮುಖ್ಯಮಂತ್ರಿಗಳ ಪೈಕಿ ಶ್ರೀ ಯಡಿಯೂರಪ್ಪನವರು ಎಷ್ಟನೆಯ ''ಡಾಕ್ಟರ್'' ಎಂಬುದನ್ನು ತಿಳಿಯುವುದು ಕಷ್ಟ. ಏಕೆಂದರೆ ಯಾರ್‍ಯಾರಿಗೆ ಯಾವ ಯಾವ ವಿಶ್ವವಿದ್ಯಾನಿಲಯಗಳು ಡಾಕ್ಟೊರೇಟ್ ಪದವಿ ನೀಡಿವೆಯೆಂಬ ಮಾಹಿತಿ ಸುಲಭವಾಗಿ ಸಿಕ್ಕುವುದಿಲ್ಲ. ಅಂತೂ ಕರುಣಾನಿಧಿಯವರು ತಾವೊಬ್ಬರೇ ಡಾಕ್ಟರ್ ಎಂಬ ಹಮ್ಮನ್ನು ಇನ್ನು ಮುಂದೆ ಕೈಬಿಡಬೇಕಾಗಿ ಬಂದಿರುವುದು ಅಭಿನಂದನಾರ್ಹವಾಗಿದೆ.

* * *

ನಮ್ಮ ರಾಜ್ಯದಲ್ಲಿ ಪ್ರಜಾಪ್ರಭುತ್ವದ ಕಾರ್ಯಾಚರಣೆಗೆ ನ್ಯಾಯಾಲಯವು ಒಂದು ಹೊಸ ತಿರುವನ್ನು ನೀಡಿದೆ. ಹದಿನೈದು ಸಾವಿರ ಜನರಿಗಿಂತಲೂ ಹೆಚ್ಚು ಮಂದಿಯನ್ನು ಸೇರಿಸಿ ಬೆಂಗಳೂರಿನಲ್ಲಿ ಪ್ರದರ್ಶನ ನಡೆಸಕೂಡದೆಂಬ ಆಜ್ಞೆಯು ಮುಂದೆ ಒಂದು ಮಾದರಿ ಕಾನೂನು ಎನಿಸಿಕೊಂಡರೆ ನಾವು ಹಿಗ್ಗಬೇಕೋ ಇಲ್ಲವೋ ತಿಳಿಯದು. ಮದುವೆಯಂತಹ ಸಮಾರಂಭಗಳಿಗೆ ಇಪ್ಪತ್ತು ಸಾವಿರ ಜನರನ್ನು ತುಂಬಿಕೊಳ್ಳುವುದಕ್ಕೆ ಈ ಕಾನೂನಿನಡಿ ನಿಷೇಧವಿಲ್ಲವಾದ್ದರಿಂದ ಇನ್ನು ಮುಂದೆ ಪ್ರತಿಭಟನೆಗಳೊಟ್ಟಿಗೆ ಒಂದು ಮದುವೆಯನ್ನೂ ಏರ್ಪಡಿಸಿಕೊಳ್ಳುವುದು ಸೂಕ್ತವಾಗಿರುತ್ತದೆ. ಕಬ್ಬಿಣದ ಅದುರಿನ ಕಳ್ಳಸಾಗಣೆದಾರರು, ಧಾನ್ಯವನ್ನು ಅಕ್ರಮವಾಗಿ ದಾಸ್ತಾನು ಮಾಡಿಕೊಂಡು ಮಾರುಕಟ್ಟೆಯಲ್ಲಿ ಹಾಹಾಕಾರ ಉಂಟುಮಾಡುವವರು, ಒಂದೇ ಲೈಸೆನ್ಸಿನಿಂದ ಹತ್ತು ಬಸ್ಸುಗಳನ್ನು ನಡೆಸುವ ಖಾಸಗಿ ಮಾಲಿಕರು, ವಿದ್ಯಾದಾನ ಮಾಡುವ ಅಮೋಘ ಸಮಾಜ ಸೇವಕರು ಕದ್ದುಮುಚ್ಚಿ ಕಿತ್ತುಕೊಳ್ಳುವ ''ಸ್ವಯಂ ಪ್ರೇರಿತ ಹಣ'', ಇವಕ್ಕೆಲ್ಲಾ ಗರಿಷ್ಠ ಮಿತಿಯನ್ನು ವಿಧಿಸುವುದು ಅನವಶ್ಯಕವೆಂಬ ತೀರ್ಮಾನಕ್ಕೆ ನಾವೆಲ್ಲಾ ಬದ್ಧರಾಗಿದ್ದೇವೆ! ಒಂದು ದಿನ ನಗರದಲ್ಲಿ ಸಂಚಾರ ನಿಯಂತ್ರಣ ಮಾಡಲಾಗದಿದ್ದರೆ ಸರ್ಕಾರಿ ಯಂತ್ರ ಹದಗೆಟ್ಟಿದೆಯೆಂದು ಹೇಳುವ ಬದಲು, ಈ ಹಾಳು ಜನ ಇಲ್ಲೇಕೆ ಬರುತ್ತಾರೆಂದು ಕೋಪಿಸಿಕೊಳ್ಳುವುದು ನಮ್ಮ ನವನಾಗರಿಕತೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಜನರನ್ನು ಮೆರವಣಿಗೆಗಳಲ್ಲಿ ಸಂಘಟಿಸುವುದು ಒಂದು ಅಂಗೀಕೃತ ಸೂತ್ರವಾಗಿತ್ತು. ಸ್ವಾತಂತ್ರ್ಯ ಹೋರಾಟದ ಕಾಲದ ಬೇರೆಷ್ಟೋ ಮೌಲ್ಯಗಳನ್ನು ತುಳಿದು ಹಾಕಿರುವಾಗ ಜನರನ್ನು ಸಂಘಟಿಸುವ 'ಕೆಟ್ಟ ಪ್ರವೃತ್ತಿ' ಏಕೆ ಬೇಕೆಂದು ಕೆಲವರಿಗೆ ಅನ್ನಿಸಿರಬೇಕು. ಅಧಿಕಾರ ಸ್ಥಾನಗಳನ್ನು ರಕ್ಷಿಸಿಕೊಳ್ಳಲು ಇದೂ ಒಂದು ಹೊಸ ವಿಧಾನ. ಲಾರಿಗಳಲ್ಲಿ ಜನರನ್ನು ಕರೆತರಕೂಡದೆಂದಷ್ಟೇ ಹೇಳಿದ್ದರೂ ಸಾಕಾಗಿರುತ್ತಿತ್ತಲ್ಲವೇ? ೧೫,೦೦೦ ಎಂಬುದು ೧೫,೦೧೦ ಆಗದಿರುವಂತೆ ನೋಡಿಕೊಳ್ಳಲು ರಾಜಕೀಯ ಪುಢಾರಿಗಳು ಎಣಿಕೆಯನ್ನು ಸರಿಯಾಗಿ ಅಭ್ಯಾಸ ಮಾಡಿಕೊಳ್ಳಲು ಸುಸಮಯ!

* * *

'ನೈಸ್ ಮ್ಯಾನ್' ಅಲ್ಲದ ನೈಸ್‌ನ ಖೇಣಿ ಮತ್ತು ಸಚಿವ ಶ್ರೀ ಉದಾಸಿ ಇಬ್ಬರೂ ರಸ್ತೆಗಳ ವ್ಯವಹಾರದಲ್ಲಿ ಚಾತುರ್ಯ ಪ್ರದರ್ಶಿಸುತ್ತಿದ್ದಾರೆ. ಎಲ್ಲ ರಸ್ತೆಗಳನ್ನೂ ಖಾಸಗಿಯವರಿಗೆ ಹಸ್ತಾಂತರಿಸುವ ಅಧಿಕಾರ ತಮಗಿದೆಯೆಂದು ಭಾವಿಸಿರುವ ಉದಾಸಿಯವರು ಜನರ ಬಗೆಗೆ ತೀವ್ರ ಉದಾಸೀನ ಭಾವ ತಳೆದಿದ್ದಾರೆ. ಅದು ಖಂಡನೀಯ. ಅವರ ತೀರ್ಮಾನವನ್ನು ಕಾರ್ಯಗತವಾಗಲು ಬಿಡದಿರುವುದು ಸಾರ್ವಜನಿಕರ ಹೊಣೆ. ಖೇಣಿ ಮಹಾಶಯರು ತಾವು ಮಾಡಿಕೊಂಡಿರುವ ಒಪ್ಪಂದದ ಸೂತ್ರಗಳನ್ನು ಕಾಲಕಸದಂತೆ ಕಂಡಿದ್ದಾರೆಂಬುದು ಡಾ|| ಯಡಿಯೂರಪ್ಪನವರಿಗೆ ಅಸಮಾಧಾನ ತಂದಿಲ್ಲದಿರುವುದರ ಮರ್ಮದ ಕುರಿತು ಯಾರಾದರೂ ಸಂಶೋಧನಾ ಪಟುಗಳು ಬೆಳಕು ಚೆಲ್ಲಬೇಕಾಗಿದೆ. ರಾಜ್ಯ ರಸ್ತೆಗಳನ್ನೆಲ್ಲಾ ಪರಭಾರೆ ಮಾಡಲು ಅವು ಉದಾಸಿಯವರ ಸ್ವಂತದ ಸ್ವತ್ತಲ್ಲವೆಂಬುದನ್ನೂ ಮಾನ್ಯ ಉದಾಸಿಯವರಿಗೆ ತಿಳಿಯಹೇಳಬೇಕಾಗಿದೆ.

* * *

೨೦೦೮ ಕೊನೆಗೆ ಬರುತ್ತಿದೆ. ಪೂರ್ತಿ ಕೊನೆಯಾಗುವ ಮುಂಚೆ ಇರಾಕಿನ ಪತ್ರಕರ್ತನೊಬ್ಬ ಸರಿಯಾಗಿ ಗುರಿಯಿಡಲು ಸೋತನೆಂಬುದು ಜಗಜ್ಜಾಹೀರಾಗಿದೆ. ಇರಾಕಿನ ಪ್ರತಿನಿಧಿಯಾಗಿ ಆತನು ಯಾವ ಗುರಿಯಿಟ್ಟು ಹೊಡೆಯುವ ಅಂತರರಾಷ್ಟ್ರೀಯ ಸ್ಪರ್ಧೆಗೂ ಅನರ್ಹನೆನಿಸಿಕೊಂಡಿದ್ದಾನೆ. ಆದರೆ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಹೊಡೆತ ತಪ್ಪಿಸಿಕೊಳ್ಳಲು ಎಷ್ಟು ಒಳ್ಳೆಯ ತಂತ್ರಗಾರನೆಂಬುದು ಸತತವಾಗಿ ಎರಡು ಬಾರಿ ಸಾಬೀತಾಗಿದೆ. ಕಲ್ಲು - ಗುಂಡುಗಳನ್ನು ಬುಷ್ ಅವರು ನೀಡುವ ಪತ್ರಿಕಾ ಸಂದರ್ಶನಗಳಿಗೆ ತೆಗೆದುಕೊಂಡುಹೋಗಲು ಪತ್ರಕರ್ತರಿಗೆ ಇರಾಕಿನಲ್ಲಿ ಅವಕಾಶವಿಲ್ಲದಿರುವುದು ಅಮೆರಿಕಾ ಅಧ್ಯಕ್ಷರ ಅದೃಷ್ಟ. ಲಕ್ಷಗಟ್ಟಲೆ ಇರಾಕಿ ಜನರನ್ನು ಕೊಂದಿರುವ ಬುಷ್‌ಗೆ ಪತ್ರಕರ್ತನೊಬ್ಬ ಬೂಟಿನಲ್ಲಿ ಹೊಡೆಯಲು ಯತ್ನಿಸುವುದು ಪತ್ರಿಕಾ ಧರ್ಮಕ್ಕೆ ಹೊಂದುತ್ತದೆಯೇ ಎಂಬುದನ್ನು ನಿರಂತರವಾಗಿ ಚರ್ಚಿಸುತ್ತಿರಲು ಹೊಸ ವರ್ಷದಲ್ಲಿ ಇಪ್ಪತ್ತು ದಿನಗಳ ಕಾಲಾವಕಾಶವಿದೆ. ಆಮೇಲೆ ಬುಷ್ ನಿರಾತಂಕವಾಗಿ ಅಡ್ಡಾಡಿಕೊಂಡಿರಬಹುದು, ಇರಾಕಿನ ಪತ್ರಕರ್ತರು ಅವರನ್ನು ಹಿಂಬಾಲಿಸುವ ಸಂದರ್ಭ ಬರುವುದಿಲ್ಲ. ಆದರೆ ಇರಾಕ್ ಜನತೆಯ ಅದುಮಿಟ್ಟ ಕೋಪವು ಎಂದು ಮತ್ತು ಹೇಗೆ ಭುಗಿಲೇಳುತ್ತದೋ ಯಾರು ಬಲ್ಲರು!

## ಮುರಳೀಧರ್

**ಜಾಗತೀಕರಣದ ಜಾಲದಲ್ಲಿ ಸಿಲುಕಿದ ಭಾರತ ವಿಶ್ವದ ಆರ್ಥಿಕ ಏರಿಳಿತಗಳ ಪರಿಣಾಮಗಳನ್ನು ಅನುಭವಿಸುತ್ತಲೇ ಬಂದಿದೆ. ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ಉದ್ದಿಮೆಗಳು ಕಳೆದ ಹದಿನೈದು ವರ್ಷಗಳಲ್ಲಿ ಯಥೇಚ್ಛ ಲಾಭ ಗಳಿಸಿವೆ.**

ಜಾಗತೀಕರಣದ ಒಂದು ಪ್ರಮುಖ ಅಂಶವೆಂದರೆ ಯಾವುದೇ ರಾಷ್ಟ್ರದಲ್ಲಿ ಸಂಭವಿಸುವ ಘಟನೆ ವಿಶ್ವವ್ಯಾಪಿಯಾಗುವುದು. ೧೯೨೯-೩೩ರಲ್ಲಿ ಯೂರೋಪ್ ಮತ್ತು ಪಶ್ಚಿಮ ರಾಷ್ಟ್ರಗಳು ಅನುಭವಿಸಿದ ಭೀಕರ ಆರ್ಥಿಕ ಮುಗ್ಗಟ್ಟು ಅಂದಿನ ಕಾಲದಲ್ಲಿ ವಿಶ್ವದ ಮಾರುಕಟ್ಟೆಯ ಜೊತೆ ಸಂಬಂಧ ಹೊಂದಿಲ್ಲದ ಭಾರತದ ಕೃಷಿಯ ಮೇಲೂ ಪರಿಣಾಮ ಬೀರಿತ್ತು. ಈಗ ನಮ್ಮ ಆರ್ಥಿಕತೆ ಸಂಪೂರ್ಣವಾಗಿ ವಿಶ್ವದ ಮಾರುಕಟ್ಟೆಯೊಡನೆ ಮಿಲನಗೊಂಡಿರುವ ಹಿನ್ನೆಲೆಯಲ್ಲಿ ಅಂತಹ ಆರ್ಥಿಕ ಬಿಕ್ಕಟ್ಟಿನ ಪರಿಣಾಮ ನೇರ ಹಾಗೂ ಅಗಾಧ ಪ್ರಮಾಣದ್ದಾಗಿರುತ್ತದೆಂದು ತಿಳಿಯುವುದಕ್ಕೆ ಹೆಚ್ಚಿನ ಪಾಂಡಿತ್ಯವೇನೂ ಬೇಕಿಲ್ಲ. ೨೦೦೮ ಭಾರತಕ್ಕೆ ಅನೇಕ ಆಘಾತಗಳನ್ನು ಉಂಟು ಮಾಡಿ ಇತಿಹಾಸ ಸೇರಿದ ವರ್ಷ. ತೀವ್ರ ರಾಜಕೀಯ ಬೆಳವಣಿಗೆಗಳನ್ನು ತಂದಂತಹ ವರ್ಷ. ಸಿಹಿಗಿಂತ ಹೆಚ್ಚಾಗಿ ಕಹಿಗಳನ್ನು ಉಣಿಸಿದ ವರ್ಷ.

ಸಾಮಾನ್ಯ ಕನಿಷ್ಠ ಕಾರ್ಯಕ್ರಮದ ಕೆಲವು ಅಂಶಗಳನ್ನು ಜಾರಿಗೊಳಿಸಿತಾದರೂ ವಿದೇಶಾಂಗ ನೀತಿಯ ಪ್ರಶ್ನೆ ಬಂದಾಗ ಅದು ಸಾಮಾನ್ಯ ಕನಿಷ್ಠ ಕಾರ್ಯಕ್ರಮದ ಒಡಂಬಡಿಕೆಯಿಂದ ದೂರ ಸರಿದಿದ್ದು ೨೦೦೭ರ ಕೊನೆಯ ಹೊತ್ತಿಗೆ ಸ್ಪಷ್ಟವಾಗಿ ಗೋಚರಿಸಿತು. ಈ ಸಮಯದಲ್ಲಿ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಮತ್ತು ಭಾರತದ ಪ್ರಧಾನಮಂತ್ರಿ ಮನ್‌ಮೋಹನ್ ಸಿಂಗ್ ಅವರ ನಡುವೆ ಬೆಳೆದ ಹೊಸ ಪ್ರೇಮದ ಫಲವಾಗಿ ರೂಪುಗೊಂಡ ೧೨೩-ಅಣು ಬಾಂಧವ್ಯದ ಮತ್ತು ಅದರ ಹಿನ್ನೆಲೆಯಲ್ಲೇ ಬಂದ ಅಮೆರಿಕಾದ ಹೈಡ್ ಕಾಯ್ದೆ ಎರಡೂ ಹೊಸ ಸಂಘರ್ಷಕ್ಕೆ ದಾರಿ ಮಾಡಿಕೊಟ್ಟವು. ಎಡಪಕ್ಷಗಳು ೧೨೩-ಅಣು ಒಪ್ಪಂದವನ್ನು ವಿರೋಧಿಸಿದ ಹಿನ್ನೆಲೆಯಲ್ಲೇ ಪ್ರಖ್ಯಾತ ವಿಜ್ಞಾನಿಗಳು ಮತ್ತು ಬುದ್ಧಿಜೀವಿಗಳು ೧೨೩-ಒಪ್ಪಂದ ಭಾರತದ ಸ್ವತಂತ್ರ ಅಣು ವಿಜ್ಞಾನದ ಬೆಳವಣಿಗೆಗೆ ಮಾರಕವಾಗಿದೆ ಎಂದು ಖಂಡಿಸಿದರು. ಮಾಜಿ

# ಉರುಳಿದ ೨೦೦೮ ರಾಷ್ಟ್ರ ಮತ್ತು ರಾಜ್ಯದ ರಾಜಕೀಯ ಪರಿಸ್ಥಿತಿ : ಒಂದು ಅವಲೋಕನ

**ಈ ಉದ್ದಿಮೆಯ ಕೆಲವು ಪ್ರಮುಖರು ಈಗ ದೇಶದ ಆಧುನಿಕ ಮಹಾರಾಜರುಗಳಾಗಿ ಮೆರೆಯುತ್ತಿದ್ದಾರೆ. ಸರ್ಕಾರಗಳು ಇವರಿಗೆ ಎಲ್ಲ ರಿಯಾಯಿತಿಗಳನ್ನು ಕೊಡುತ್ತಾ ಬಂದಿವೆ. ತಮ್ಮ ಲಾಭವನ್ನು ಹೆಚ್ಚಿಸಿಕೊಳ್ಳಲು ಈ ಹೊಸ ಮಹಾರಾಜರು ಸರ್ಕಾರಗಳ ಮೇಲೆ ಒತ್ತಡ ಹೇರುತ್ತಾರೆ. ಕೆಲವೊಮ್ಮೆ ಸಿಟ್ಟುಮಾಡಿಕೊಳ್ಳುತ್ತಾರೆ. ನಂತರ ಅವರಿಗೆ ಬೇಕಾದ ಭೂಮಿ ಮತ್ತು ರಿಯಾಯಿತಿಗಳನ್ನು ಪಡೆಯುತ್ತಾರೆ.**

ಮೇ ೨೦೦೪ರ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ನೇತೃತ್ವದ ಯು.ಪಿ.ಎ. ಹೆಚ್ಚು ಸ್ಥಾನ ಗಳಿಸಿದರೂ ಅಧಿಕಾರ ನಡೆಸಲಾಗದ ಅತಂತ್ರ ಸ್ಥಿತಿಯಲ್ಲಿದ್ದಾಗ ಅರವತ್ತು ಸ್ಥಾನಗಳನ್ನು ಗೆದ್ದಿದ್ದ ಎಡಪಕ್ಷಗಳು ಕೆಲವು ಷರತ್ತುಗಳ ಆಧಾರದ ಮೇಲೆ ಹೊರಗಿನಿಂದ ತಮ್ಮ ಬೆಂಬಲವನ್ನು ಕೊಟ್ಟ ನಂತರವೇ ಯು.ಪಿ.ಎ. ಸರ್ಕಾರ ರಚಿಸಲು ಸಾಧ್ಯವಾದದ್ದು. ಯು.ಪಿ.ಎ. ಮತ್ತು ಎಡಪಕ್ಷಗಳ ನಡುವಿನ ಕೊಂಡಿಯೆಂದರೆ ಸಾಮಾನ್ಯ ಕನಿಷ್ಠ ಕಾರ್ಯಕ್ರಮ. ಹೀಗಾಗಿ ಎಡಪಕ್ಷಗಳ ಬೆಂಬಲ ಕಾರ್ಯಕ್ರಮ ಆಧಾರಿತವಾಗಿತ್ತು. ಎಡಪಕ್ಷಗಳು ಯು.ಪಿ.ಎ. ಸರ್ಕಾರಕ್ಕೆ ಬಾಹ್ಯ ಬೆಂಬಲ ನೀಡಿದ್ದಕ್ಕೆ ಕೊಟ್ಟಂತಹ ರಾಜಕೀಯ ಕಾರಣಗಳೆಂದರೆ, ಕೋಮುವಾದಿ ಶಕ್ತಿಗಳನ್ನು ಅಧಿಕಾರದಿಂದ ದೂರ ವಿಡುವುದು ಮತ್ತು ಸಾಮಾನ್ಯ ಕನಿಷ್ಠ ಕಾರ್ಯಕ್ರಮದ ಅಡಿಯಲ್ಲಿ ಕೆಲವು ಜನಪರ ಕಾರ್ಯಗಳನ್ನು ಜಾರಿಗೊಳಿಸುವುದು. ಈ ಸ್ಪಷ್ಟ ನಿಲುವು ಭಾರತದ ರಾಜಕೀಯದಲ್ಲಿ ಎಡ ಪಕ್ಷಗಳ ವರ್ಚಸ್ಸನ್ನು ಹೆಚ್ಚಿಸಿ ಅವುಗಳಿಗೆ ಹೊಸ ಆಯಾಮವನ್ನು ತಂದುಕೊಟ್ಟಿತು ಎಂದರೆ ತಪ್ಪಾಗಲಾರದು. ಯು.ಪಿ.ಎ. – ಎಡ ಪಕ್ಷಗಳ ಸಂಬಂಧವು ಸಡಿಲಗೊಂಡಿದ್ದು ೨೦೦೭ರಲ್ಲಿ, ಕಳಚಿ ಕೊಂಡಿದ್ದು ೨೦೦೮ರಲ್ಲಿ.

ಕಾಂಗ್ರೆಸ್ ನೇತೃತ್ವದ ಯು.ಪಿ.ಎ. ಸರ್ಕಾರವು

ಪ್ರಧಾನಿ ವಿ. ಪಿ. ಸಿಂಗ್ ಅವರು ಅಣುಶಕ್ತಿಯಿಂದ ತಯಾರಿಸುವ ವಿದ್ಯುಚ್ಛಕ್ತಿಗಿಂತ ಕಲ್ಲಿದ್ದಲಿನಿಂದ ಉತ್ಪಾದಿಸುವ ವಿದ್ಯುಚ್ಛಕ್ತಿ ಹೆಚ್ಚು ಸುರಕ್ಷಿತ ಮತ್ತು ಅಗ್ಗ ಎಂದು ವಾದಿಸಿದರು. ೧೨೩-ಅಣು ಒಪ್ಪಂದ ಮತ್ತು ಹೈಡ್ ಕಾಯ್ದೆಯನ್ನು ಸಮಗ್ರವಾಗಿ ಅರ್ಥಮಾಡಿಕೊಂಡರೆ ಈ ಒಪ್ಪಂದ ಭಾರತದ ಸ್ವತಂತ್ರ ವಿದೇಶಾಂಗ ನೀತಿಗೆ ಮಾರಕವಾಗಿದೆ ಮತ್ತು ಸುಮಾರು ಐದು ದಶಕಗಳಿಂದ ಪಾಲಿಸಿಕೊಂಡು ಬರುತ್ತಿರುವ ಅಲಿಪ್ತ ನೀತಿಗೆ ನೀಡಿದ ತಿಲಾಂಜಲಿ ಎಂಬುದು ಸ್ಪಷ್ಟವಾಯಿತು. ಅಣು ಒಪ್ಪಂದದ ಪರಿಣಾಮವಾಗಿ ಭಾರತ ಈಗ ಇಸ್ರೇಲ್‌ನಂತೆ ಅಮೆರಿಕಾದ ಕೈಗೊಂಬೆಯಾಗಿದೆ; ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್‌ರಿಗೆ ತಾನು ಕೊಟ್ಟ ಮಾತನ್ನು ಉಳಿಸಿಕೊಳ್ಳಬೇಕೆಂದೂ, ಅಣು ಒಪ್ಪಂದದಿಂದ ಹಿಂದೆ ಸರಿಯುವುದಿಲ್ಲವೆಂದೂ ಹೇಳಿ ಮನ್‌ಮೋಹನ್ ಸಿಂಗ್ ಭಾರತದ ಭವಿಷ್ಯವನ್ನೇ ಅಮೆರಿಕಾಕ್ಕೆ ಒತ್ತೆಯಿಟ್ಟರು. ಅಂದರೆ ಕಾಂಗ್ರೆಸ್ ಪಕ್ಷ ಸಾಮ್ರಾಜ್ಯಶಾಹಿಯ ಏಜೆಂಟ್ ಪದವಿಯಿಂದ ಅದರ ಪಾಲುದಾರನಾಗಿ ಬಡ್ತಿ ಹೊಂದಿದ್ದು ೨೦೦೮ರ ಪ್ರಮುಖ ಬೆಳವಣಿಗೆ ಹಾಗೂ ಒಂದು ದುರಂತ.

ಈ ಬೆಳವಣಿಗೆಯಿಂದಾಗಿ ಯು.ಪಿ.ಎ. ಸರ್ಕಾರಕ್ಕೆ ಕೊಟ್ಟಿದ್ದ ಬಾಹ್ಯ ಬೆಂಬಲವನ್ನು ಎಡ ಪಕ್ಷಗಳು ಅನಿವಾರ್ಯವಾಗಿ ಹಿಂದೆಗೆದುಕೊಳ್ಳಬೇಕಾಯಿತು.

ನಂತರದ ರಾಜಕೀಯ ಬೆಳವಣಿಗೆಗಳು ನಮ್ಮದೊಂದು ಪ್ರಜಾಪ್ರಭುತ್ವವೆಂದು ಹೇಳಿಕೊಳ್ಳಲೂ ನಾಚಿಸುವಷ್ಟು ಹೇಸಿಗೆಯ ಸ್ವರೂಪ ಪಡೆದವು. ಅಲ್ಲಿಯವರೆಗೆ ಕಾಂಗ್ರೆಸ್‌ನ ಪ್ರಬಲ ವಿರೋಧಿಗಳಾಗಿದ್ದ ಸಮಾಜವಾದಿ ಪಕ್ಷ ಮತ್ತು ಶಿಬು ಸೋರೇನ್ ಯು.ಪಿ.ಎ. ಜೊತೆಗೆ ಕೈಜೋಡಿಸಿ ಹಣ ಮತ್ತು ಅಧಿಕಾರಗಳ ದುರುಪಯೋಗದ ಮೂಲಕ ಮನ್‌ಮೋಹನ್ ಸಿಂಗ್‌ರ ಸರ್ಕಾರವನ್ನುಳಿಸಿದ್ದು, ಪಾರ್ಲಿಮೆಂಟ್‌ನಲ್ಲಿ ಕೆಲವು ಲೋಕಸಭಾ ಸದಸ್ಯರನ್ನು ಸರ್ಕಾರದ ಪರ ಒಟ್ಟುಹಾಕುವ ಸಲುವಾಗಿ ಕೊಟ್ಟ ಹಣದ ಕಂತೆಗಳ ಪ್ರದರ್ಶನದಿಂದಾಗಿ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯು ಅಪಹಾಸ್ಯಕ್ಕೀಡಾಯಿತು. ಇಷ್ಟೆಲ್ಲ ಮಸಿ ಬಳಿಸಿಕೊಂಡ ಮೇಲೆ ಮನ್‌ಮೋಹನ್ ಸಿಂಗ್‌ರು ಸಂಭಾವಿತ ರಾಜಕಾರಣಿಯಾಗಿ ಉಳಿಯಲಿಲ್ಲ. ನಂತರ ಈ ವಿಜಯೋತ್ಸಾಹದೊಂದಿಗೆ ಅಮೆರಿಕಾಕ್ಕೆ ಪ್ರಯಾಣಿಸಿ ಭಾರತದ ಪ್ರತಿಯೊಬ್ಬ ಪ್ರಜೆಯೂ ಆತನನ್ನು ಪ್ರೀತಿಸುತ್ತಾನೆಂದು ಜಾರ್ಜ್ ಬುಷ್‌ಗೆ ಹೇಳಿ ತಾವು ಸುಳ್ಳು ಹೇಳುವುದರಲ್ಲೂ ನಿಸ್ಸೀಮರು ಎಂಬುದನ್ನು ಸಾರಿದರು. ಮನಮೋಹನ್ ಸಿಂಗ್‌ರ ಮುಖವಾಡ ಕಳಚಿ ಅವರ ನಿಜರೂಪವನ್ನು ತೋರಿಸಿದ ವರ್ಷ – ೨೦೦೮.

ಈ ಮೇಲ್ಕಾಣಿಸಿದ ಬೆಳವಣಿಗೆಗಳು ಭಾರತೀಯ ಜನತಾ ಪಕ್ಷಕ್ಕೇನೂ ಅನುಕೂಲವಾದಂತೆ ಕಾಣಲಿಲ್ಲ. ೧೨೩-ಅಣು ಒಪ್ಪಂದಕ್ಕೆ ಭಾರತೀಯ ಜನತಾ ಪಕ್ಷದ ತಾತ್ವಿಕ ವಿರೋಧವೇನೂ ಇರಲಿಲ್ಲ. ಅಣು-ಸ್ಫೋಟನೆಯ ಹಕ್ಕನ್ನು ಕಾದಿರಿಸಿದ್ದರೆ, ಬಿ.ಜೆ.ಪಿ. ಕೂಡ ಅಣು ಒಪ್ಪಂದವನ್ನು ಅನುಮೋದಿಸುತ್ತಿತ್ತು. ಬಹುಶಃ ಎಡಪಕ್ಷಗಳ ಬೆಂಬಲ ಹಿಂದೆಗೆದುಕೊಳ್ಳುವ ಮಾತುಗಳು ಕೇವಲ ಪೊಳ್ಳು ಬೆದರಿಕೆಯೆಂದೇ ಭಾರತೀಯ ಜನತಾ ಪಕ್ಷ ಅಭಿಪ್ರಾಯಪಟ್ಟಿತ್ತು. ಎಡಪಕ್ಷಗಳು ಬೆಂಬಲ ಹಿಂತೆಗೆದುಕೊಂಡಾಗ ನಿಜಕ್ಕೂ ಕಕ್ಕಾಬಿಕ್ಕಿಯಾದದ್ದು ಭಾರತೀಯ ಜನತಾ ಪಕ್ಷ. ಎಡಪಕ್ಷಗಳು ಈ ಸಂದರ್ಭದಲ್ಲಿ ತೆಗೆದುಕೊಂಡ ನೀತಿ-ನಿಲುವುಗಳನ್ನು ಅನೇಕರು ಪ್ರಶ್ನಿಸಿದರು ಮತ್ತು ಅವು ಸಾಂದರ್ಭಿಕವಾಗಿರಲಿಲ್ಲವೆಂದು ವಾದಿಸಿದರು. ನೊಬೆಲ್ ಪಾರಿತೋಷಕ ವಿಜೇತ ಅಮರ್ತ್ಯ ಸೇನ್ ಅವರಲ್ಲಿ ಪ್ರಮುಖರು. ಸೈದ್ಧಾಂತಿಕ ದೃಷ್ಟಿಯಿಂದ ನೋಡಿದಲ್ಲಿ ೧೨೩-ಅಣು ಒಪ್ಪಂದ ಮತ್ತು ಸಾಮ್ರಾಜ್ಯಶಾಹಿ ಮತ್ತು ಯುದ್ಧಕೋರ ಅಮೆರಿಕಾದ ಒಡನಾಟದ ಹಿನ್ನೆಲೆಯಲ್ಲಿ ಎಡಪಕ್ಷಗಳು ವಿಭಿನ್ನ ನಿಲುವು ತಾಳುವುದು ಅಸಾಧ್ಯವಾಗಿತ್ತು. ಮತ್ತು ಅದು ಹೆಚ್ಚು ಅಪಾಯಕಾರಿಯಾಗುತ್ತಿತ್ತು. ಇತಿಹಾಸ ಇಂತಹ ಕ್ಲಿಷ್ಟ ಸಂದರ್ಭಗಳನ್ನು ಆಗಾಗ್ಗೆ ಒಡ್ಡುತ್ತಿರುತ್ತದೆ. ಇದೇ ಸಂದರ್ಭದಲ್ಲಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ ತನ್ನ ಸದಸ್ಯ ಹಾಗೂ ಲೋಕಸಭೆಯ ಸಭಾಪತಿಗಳಾದ ಸೋಮನಾಥ್ ಚಟರ್ಜಿಯವರನ್ನು ಪಕ್ಷದಿಂದ ಉಚ್ಚಾಟಿಸಿದ್ದು ಅನೇಕರಿಗೆ ಕ್ರೂರ ಎಂದೆನಿಸಿತು. ಸುಮಾರು ನಾಲ್ಕು ದಶಕಗಳಿಗೂ ಹೆಚ್ಚುಕಾಲ ಲೋಕಸಭೆಯಲ್ಲಿ ಪಕ್ಷವನ್ನು ಪ್ರತಿನಿಧಿಸಿದ್ದ ಅವರನ್ನು ಹೆಚ್ಚು ಸೌಜನ್ಯದಿಂದ ಕಾಣಬಹುದಿತ್ತು ಎಂದು ಅನೇಕರು ಅಭಿಪ್ರಾಯಪಡುತ್ತಾರೆ.


'ಹೊಸತು' ವಾಚಕ ವೃಂದಕ್ಕೆ
ಹೊಸ ವರುಷದ ಶುಭಾಶಯಗಳು



ತಾ. ನಂ. ಕುಮಾರಸ್ವಾಮಿ
ಸಂಸ್ಥಾಪಕ ಕಾರ್ಯದರ್ಶಿ

ವಿಧಾತ
ಎಜ್ಯುಕೇಷನ್ ಸೊಸೈಟಿ
ಆನೇಕಲ್ಲು, ಬೆಂಗಳೂರು ಜಿಲ್ಲೆ


೨೦೦೮ರಲ್ಲಿ ಜನತೆಯನ್ನು ಅತಿ ಹೆಚ್ಚಾಗಿ ಕಾಡಿದ ಸಮಸ್ಯೆ ತೀವ್ರ ಬೆಲೆ ಏರಿಕೆ. ಹಣದುಬ್ಬರ ಶೇಕಡ ೧೨.೫ಕ್ಕೂ ಹೆಚ್ಚಿದ್ದು, ಜನಸಾಮಾನ್ಯರ ಜೀವನ ಅಲ್ಲೋಲ ಕಲ್ಲೋಲವಾಯಿತು. ಅರ್ಜುನ್ ಸೇನ್‌ಗುಪ್ತರ ವರದಿಯ ಪ್ರಕಾರ ಭಾರತದ ಅಸಂಘಟಿತ ದುಡಿಮೆಗಾರರ ಶೇಕಡ ೭೭ ಜನ, ಅಂದರೆ ಸುಮಾರು ೮೦ ಕೋಟಿ ಜನ, ದಿನಂಪ್ರತಿ ಕೇವಲ ಇಪ್ಪತ್ತು ರೂಪಾಯಿಗಿಂತ ಕಡಿಮೆ ಆದಾಯದಲ್ಲಿ ಬದುಕುತ್ತಿರುವವರೆಂದು ತಿಳಿಸಿದೆ. ಅಂದರೆ ದೇಶದ ಕೈಗಾರಿಕಾ ಬೆಳವಣಿಗೆ, ರಾಷ್ಟ್ರೀಯ ಉತ್ಪನ್ನಗಳ ಬೆಳವಣಿಗೆ ಇತ್ಯಾದಿಗಳು ಈ ೮೦ ಕೋಟಿ ಜನಸಮುದಾಯವನ್ನು ಮುಟ್ಟದೇ ಹೋಗಿದೆ. ಜಾಗತೀಕರಣ ಶ್ರೀಮಂತರ, ಶ್ರೀಮಂತರಿಂದ ಮತ್ತು ಶ್ರೀಮಂತರಿಗೋಸ್ಕರವೆಂದು ಸಾಬೀತಾಗಿದೆ. ಪೆಟ್ರೋಲಿಯಂ ಪದಾರ್ಥಗಳ ಬೆಲೆ ಅಸಾಧಾರಣವಾಗಿ ಏರಿದುದರ ಪರಿಣಾಮವಾಗಿ ಸಂಕಷ್ಟಗಳಿಗೀಡಾದವರು ಈ ವರ್ಗದ ಜನತೆ. ಇದೊಂದು ಅಂತರರಾಷ್ಟ್ರೀಯ ಬೆಳವಣಿಗೆಯಷ್ಟೆ ಎಂಬ ಕೇಂದ್ರ ಸರ್ಕಾರದ ಧೋರಣೆ ಖಂಡನೀಯ. ಹಾಗಾದರೆ ಸರ್ಕಾರವೇಕಿರಬೇಕೆಂಬ ಪ್ರಶ್ನೆ ಏಳುತ್ತದೆ. ಬೆಲೆ ಏರಿಕೆಯನ್ನು ಹತೋಟಿಯಲ್ಲಿಡಲು ಸಾಧ್ಯವಾಗದಿದ್ದುದು ಮನ್‌ಮೋಹನ್ ಸಿಂಗ್ ಸರ್ಕಾರದ ವೈಫಲ್ಯಗಳಲ್ಲೊಂದು.

ಜಾಗತೀಕರಣದ ಜಾಲದಲ್ಲಿ ಸಿಲುಕಿದ ಭಾರತ ವಿಶ್ವದ ಆರ್ಥಿಕ ಏರಿಳಿತಗಳ ಪರಿಣಾಮಗಳನ್ನು ಅನುಭವಿಸುತ್ತಲೇ ಬಂದಿದೆ. ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ಉದ್ದಿಮೆಗಳು ಕಳೆದ ಹದಿನೈದು ವರ್ಷಗಳಲ್ಲಿ ಯಥೇಚ್ಛ ಲಾಭಗಳಿಸಿವೆ. ಈ ಉದ್ದಿಮೆಯ ಕೆಲವು ಪ್ರಮುಖರು ಈಗ ದೇಶದ ಆಧುನಿಕ ಮಹಾರಾಜರುಗಳಾಗಿ ಮೆರೆಯುತ್ತಿದ್ದಾರೆ. ಸರ್ಕಾರಗಳು ಇವರಿಗೆ ಎಲ್ಲ ರಿಯಾಯಿತಿಗಳನ್ನು ಕೊಡುತ್ತಾ ಬಂದಿವೆ. ತಮ್ಮ ಲಾಭವನ್ನು ಹೆಚ್ಚಿಸಿಕೊಳ್ಳಲು ಈ ಹೊಸ ಮಹಾರಾಜರು ಸರ್ಕಾರಗಳ ಮೇಲೆ ಒತ್ತಡ ಹೇರುತ್ತಾರೆ. ಕೆಲವೊಮ್ಮೆ ಸಿಟ್ಟುಮಾಡಿಕೊಳ್ಳುತ್ತಾರೆ. ನಂತರ ಅವರಿಗೆ ಬೇಕಾದ ಭೂಮಿ ಮತ್ತು ರಿಯಾಯಿತಿಗಳನ್ನು ಪಡೆಯುತ್ತಾರೆ. ಪಶ್ಚಿಮ ಬಂಗಾಳದ ಸಿಂಗೂರಿನಿಂದ ಗುಜರಾತ್‌ಗೆ ಬಂದ ಟಾಟಾ ಸಣ್ಣ ಕಾರಿನ ಉದ್ದಿಮೆಗೆ ನರೇಂದ್ರ ಮೋದಿ ಸರ್ಕಾರ ಹತ್ತುಸಾವಿರ ಕೋಟಿ ರೂಪಾಯಿಗಳ ನೇರ ಮತ್ತು ಪರೋಕ್ಷ ನೆರವು ನೀಡಿದೆ. ಪಶ್ಚಿಮ ಬಂಗಾಳದ ಎಡಪಕ್ಷಗಳ ಸರ್ಕಾರ ಸುಮಾರು ಒಂದು ಸಾವಿರ ಎಕರೆ ಭೂಮಿಯನ್ನು ಟಾಟಾ ಕಂಪನಿಗೆ ಕೊಟ್ಟದ್ದಕ್ಕೆ ಮಮತಾ ಬ್ಯಾನರ್ಜಿ ದೊಡ್ಡ ರಾದ್ಧಾಂತ ಮಾಡಿ ಕಂಪನಿಯನ್ನು ಅಲ್ಲಿಂದ ಓಡಿಸಿ ಈಗ ರಾಜಕೀಯ ನಿರುದ್ಯೋಗಿಯಾಗಿದ್ದಾರೆ. ಈಕೆಯ ಜೊತೆ ಕಾಂಗ್ರೆಸ್ ಮತ್ತು ಸಮಾಜವಾದಿ ಪಕ್ಷಗಳು ಕೈಜೋಡಿಸಿದ್ದವು. ಹಾಗಾಗಿ ರತನ್ ಟಾಟಾ ನರೇಂದ್ರ ಮೋದಿಯ ಗುಜರಾತ್‌ಗೆ ವಲಸೆಬಂದದ್ದು ಈ ಪಕ್ಷಗಳಿಗೆ ಬಲವಾದ ತಿರುಗೇಟು ನೀಡಿದಂತಾಗಿದೆ. ಸಿಂಗೂರಿನ ಬೆಳವಣಿಗೆ ಎಡಪಕ್ಷಗಳಿಗೂ ಹೊಸ ಪಾಠ ಕಲಿಸಿದೆ. ಭೂ ಹೋರಾಟಗಳು ದೇಶದ ಹಲವಾರು ಭಾಗಗಳಲ್ಲಿ ವ್ಯಾಪಕವಾಗಿ ಜರುಗುತ್ತಿರುವುದು ೨೦೦೮ರ ಸ್ವಾಗತಾರ್ಹ ಬೆಳವಣಿಗೆ.

ಕರ್ನಾಟಕ, ಗುಜರಾತ್, ರಾಜಸ್ಥಾನ್, ಮಧ್ಯಪ್ರದೇಶ್, ಛತ್ತೀಸ್‌ಘಢ್, ದೆಹಲಿ, ಮಿಜೋರಾಂ ರಾಜ್ಯಗಳಿಗೆ ನಡೆದ ಚುನಾವಣಾ ಫಲಿತಾಂಶಗಳು ಕಾಂಗ್ರೆಸ್ ಪಕ್ಷಕ್ಕಾಗಲಿ, ಭಾರತೀಯ ಜನತಾ ಪಕ್ಷಕ್ಕಾಗಲಿ ಸಂಪೂರ್ಣ ಭರವಸೆ ಮೂಡಿಸುವಂತಿಲ್ಲ. ಕಾಂಗ್ರೆಸ್ ಪಕ್ಷವು ಸ್ವಲ್ಪಮಟ್ಟಿಗೆ ಹೆಚ್ಚು ಹುರುಪಿನಿಂದ ಬೀಗುತ್ತಿದೆ ಎನ್ನುವ ಭಾವನೆ ಮೂಡಿದರೂ ಪಕ್ಷ ಮುಂಬರುವ ಲೋಕಸಭಾ ಚುನಾವಣೆಯಲ್ಲಿ ಕರಗಿಹೋಗುವ ಸಾಧ್ಯತೆಯೇ ಜಾಸ್ತಿ. ಈಗಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ೨೦೦೯ರ ಲೋಕಸಭಾ ಚುನಾವಣೆಯಲ್ಲಿ ಯಾವ ಪಕ್ಷಕ್ಕೂ ಸ್ಪಷ್ಟ ಬಹುಮತ ದೊರೆಯುವ ಸೂಚನೆಗಳಿಲ್ಲ. ಉತ್ತರ ಪ್ರದೇಶದ ಮುಖ್ಯಮಂತ್ರಿ ಮಾಯಾವತಿ ಇತ್ತೀಚೆಗೆ ನಡೆದ ಚುನಾವಣೆಗಳಲ್ಲಿ ಹೆಚ್ಚಿಗೆ ಮತ ಪಡೆದು ಎಲ್ಲರ ಗಮನ ಸೆಳೆದಿದ್ದಾರೆ. ಈಕೆ ರಾಷ್ಟ್ರೀಯ ರಾಜಕಾರಣದಲ್ಲಿ

ಬಹುದೊಡ್ಡ ಪಾತ್ರ ವಹಿಸುವ ಸಾಧ್ಯತೆಗಳು ದಟ್ಟವಾಗುತ್ತಿವೆ.

ಮುಂಬರುವ ಲೋಕಸಭಾ ಚುನಾವಣೆಗೆ ತಯಾರಿ ನಡೆಯುತ್ತಿದೆ. ಸುಮಾರು ನಾಲ್ಕು ವರ್ಷ ಕಾಂಗ್ರೆಸ್ ನೇತೃತ್ವದ ಯು.ಪಿ.ಎ. ಸರ್ಕಾರಕ್ಕೆ ಬೆಂಬಲ ನೀಡಿದ ಎಡಪಕ್ಷಗಳು ಈಗ ಹೊಸ ಚುನಾವಣಾ ಸಂಬಂಧಗಳನ್ನು ರೂಪಿಸಹೊರಟಿದೆ. ಆಂಧ್ರಪ್ರದೇಶದಲ್ಲಿ ತೆಲುಗುದೇಶಂ ಪಕ್ಷ, ಸಿ.ಪಿ.ಐ. ಮತ್ತು ಸಿ.ಪಿ.ಎಂ. ಚುನಾವಣಾ ಮೈತ್ರಿ ಮಾಡಿಕೊಂಡಿವೆ. ತಮಿಳುನಾಡಿನಲ್ಲಿ ಎ.ಐ.ಡಿ.ಎಂ.ಕೆ., ಸಿ.ಪಿ.ಐ. ಮತ್ತು ಸಿ.ಪಿ.ಎಂ. ಪಕ್ಷಗಳು ಚುನಾವಣಾ ಮೈತ್ರಿ ಮಾಡಿಕೊಳ್ಳುವಲ್ಲಿ ಮುಂದುವರಿದಿವೆ. ಕಾಂಗ್ರೆಸ್ ಮತ್ತು ಬಿ.ಜೆ.ಪಿ.ಗೆ ಪರ್ಯಾಯವಾದ ತೃತೀಯರಂಗದ ಸೃಷ್ಟಿಯೆಡೆಗೆ ಪ್ರಯತ್ನ ನಡೆಯುತ್ತಿವೆ. ಈ ತೃತೀಯ ರಂಗಕ್ಕೆ ಮಾಯಾವತಿಯವರ ಬಿ.ಎಸ್.ಪಿ.ಯೂ ಸೇರಿದಲ್ಲಿ ಇದು ನಿರ್ಣಾಯಕ ಶಕ್ತಿಯಾಗಬಹುದು.

ಕರ್ನಾಟಕದಲ್ಲಿನ ರಾಜಕೀಯವಂತೂ ಅತಿ ಕೀಳುಮಟ್ಟಕ್ಕಿಳಿದಿದೆ. ಜನತಾದಳ (ಎಸ್) ಮತ್ತು ಭಾರತೀಯ ಜನತಾಪಕ್ಷಗಳ ಮೈತ್ರಿ ಸರ್ಕಾರ ಮುರಿದುಬಿದ್ದ ನಂತರ ನಡೆದ ಚುನಾವಣೆಯಲ್ಲಿ ಭಾರತೀಯ ಜನತಾ ಪಕ್ಷ ಸಾಮಾನ್ಯ ಬಹುಮತವನ್ನೂ ಗಳಿಸದಿದ್ದಾಗ ಬೇರೆ ಪಕ್ಷಗಳ ಮತ್ತು ಸ್ವತಂತ್ರ ವಿಧಾನಸಭಾ ಸದಸ್ಯರುಗಳನ್ನು ಅಧಿಕಾರ ಮತ್ತು ಹಣದ ಆಮಿಷ ತೋರಿಸಿ ಸರ್ಕಾರ ರಚಿಸಿತು. ಜನತಾದಳ (ಜಾತ್ಯತೀತ) ವಚನಭ್ರಷ್ಟ ಪಕ್ಷವೆಂದು ಪ್ರಚಾರ ಮಾಡಿತು. ಹಾಗೆ ನೋಡಿದರೆ ಕಾಂಗ್ರೆಸ್, ಭಾರತೀಯ ಜನತಾ ಪಕ್ಷ, ಜನತಾದಳ (ಎಸ್) ಎಲ್ಲವೂ ವಚನಭ್ರಷ್ಟ ಪಕ್ಷಗಳೇ. ಜನತೆಗೆ ಕೊಟ್ಟ ಆಶ್ವಾಸನೆಗಳನ್ನು ಪಾಲಿಸದ ಮತ್ತು ಸಂವಿಧಾನಕ್ಕೆ ಅಪಚಾರ ಎಸಗುವ ಇವರೆಲ್ಲರೂ ವಚನಭ್ರಷ್ಟರೇ. ನಿವೃತ್ತ ನ್ಯಾಯಾಧೀಶ ಶ್ರೀ ಕೋ. ಚೆನ್ನಬಸಪ್ಪನವರು ಹೇಳುವಂತೆ ಭಾರತೀಯ ಜನತಾ ಪಕ್ಷ ಅಧಿಕಾರಕ್ಕೇರಿದ್ದು ಜನಾದೇಶದಿಂದಲ್ಲ, ಧನಾದೇಶದಿಂದ ಮಾತ್ರ. ಗಣಿ ಹಣದ ಹೊಳೆ ಹರಿಸಿ ಭಾರತೀಯ ಜನತಾ ಪಕ್ಷವು ಕರ್ನಾಟಕ ರಾಜಕೀಯವನ್ನು ಪ್ರಜಾಪ್ರಭುತ್ವದ ಮೌಲ್ಯಗಳನ್ನು ಕಲುಷಿತಗೊಳಿಸಿದೆ. ಕರ್ನಾಟಕದಲ್ಲಿ ನಡೆದದ್ದು ಪ್ರಜಾಪ್ರಭುತ್ವ ರೀತಿಯ ಚುನಾವಣೆಯಲ್ಲ, ಅದು ಗಣಿಹಣದ ಚಲಾವಣೆ.

ಕರ್ನಾಟಕದಲ್ಲಿ ಭಾರತೀಯ ಜನತಾ ಪಕ್ಷಕ್ಕೆ ಅಧಿಕಾರ ಸಿಗುವಂತೆ ಮಾಡಿದ್ದು ದೇವೇಗೌಡರು. ತಮ್ಮ ಮಗ ಮುಖ್ಯಮಂತ್ರಿಯಾಗಿ ಅಧಿಕಾರ ನಡೆಸುತ್ತಿದ್ದಾಗ ಭಾರತೀಯ ಜನತಾ ಪಕ್ಷ ಕೋಮುವಾದಿ ಪಕ್ಷವಾಗಿ ಇವರಿಗೆ ಕಾಣಲಿಲ್ಲ. ಅವರ ಮಗ ಕುಮಾರಸ್ವಾಮಿಯವರಿಗೆ ಧರ್ಮ ನಿರಪೇಕ್ಷತೆ ಎಂದರೇನು ಎಂಬುದೇ ಗೊತ್ತಿರಲಿಲ್ಲ. ಈಗ ಸಂಘಪರಿವಾರದವರು ಚರ್ಚುಗಳ ಮೇಲೆ ನಡೆಸುತ್ತಿರುವ ದಾಳಿ ದೇವೇಗೌಡರ ನೆಮ್ಮದಿಯನ್ನೇಕೆ ಕೆಡಿಸಬೇಕು ?

ಮುಖ್ಯಮಂತ್ರಿ ಸ್ಥಾನವನ್ನು ಅಲಂಕರಿಸಲು ಸಿದ್ಧರಿರುವ ಮತ್ತು ಅದಕ್ಕಾಗಿ ಗುಂಪುಗಾರಿಕೆ ಮಾಡುತ್ತಿರುವ ಹಲವಾರು ನಾಯಕರೇ ಕಾಂಗ್ರೆಸ್‌ನ ಸೋಲಿಗೆ ಕಾರಣ. ಕಾಂಗ್ರೆಸ್ ಈಗ ಬಡವರ ಪಕ್ಷದಂತೆ ಕಾಣುತ್ತಿಲ್ಲ. ಅದರ ಬಗ್ಗೆ ಯಾವ ಕಾಂಗ್ರೆಸ್ ನಾಯಕರೂ ಚಿಂತಿಸುತ್ತಿಲ್ಲ. ಒಳಜಗಳದಿಂದಾಗಿ ಈ ಪಕ್ಷ ಕಂಗಾಲಾಗಿ ಹೋಗಿದೆ. ತಮ್ಮ ಪಕ್ಷ ಕರ್ನಾಟಕದಲ್ಲಿ ಮೂಲೆಗುಂಪಾದರೂ ದೂರದ ದೆಹಲಿ ಮತ್ತು ರಾಜಸ್ಥಾನಗಳಲ್ಲಿ ತಮ್ಮ ಪಕ್ಷ ಗೆದ್ದರೆ ಅದರಿಂದ ಇಲ್ಲಿಯ ಕಾಂಗ್ರೆಸ್ ನಾಯಕರು ಸಂಭ್ರಮಿಸುತ್ತಿದ್ದಾರೆ.

ಎಡ ಪಕ್ಷಗಳು ಕರ್ನಾಟಕದಲ್ಲಿ ದೊಡ್ಡ ಶಕ್ತಿಯಾಗಿ ಬೆಳೆದಿಲ್ಲ. ಆದರೆ ಹೋರಾಟದ ಚರಿತ್ರೆಯಲ್ಲಿ ಇವರಿಗೆ ಅಗ್ರಸ್ಥಾನ ಸಲ್ಲುತ್ತದೆ. ರೈತ-ಕಾರ್ಮಿಕರ ಹಕ್ಕುಗಳಿಗಾಗಿ ಹೋರಾಟ ಮಾಡಿದ್ದಾರೆ. ಆದರೆ ರಾಜಕೀಯದ ದೃಷ್ಟಿಯಲ್ಲಿ ಎಡಪಕ್ಷಗಳು ಜನತೆಗೆ ಪರ್ಯಾಯವಾಗಿ ಕಾಣುತ್ತಿಲ್ಲ. ರಾಷ್ಟ್ರೀಯ ಮಟ್ಟದಲ್ಲಿ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷವನ್ನು ಮುಂಬರುವ ಲೋಕಸಭಾ ಚುನಾವಣೆಯಲ್ಲಿ ಸೋಲಿಸಲು ತೃತೀಯ ಪರ್ಯಾಯದ ಬಗ್ಗೆ ಹೆಜ್ಜೆಯಿಟ್ಟಿರುವ ಎಡ ಪಕ್ಷಗಳು ಕರ್ನಾಟಕದಲ್ಲಿ ಅನಿವಾರ್ಯವಾಗಿ ಜನತಾದಳದ ಜೊತೆ ಚುನಾವಣಾ ಮೈತ್ರಿ ಮಾಡಿಕೊಳ್ಳಬೇಕಾಗಬಹುದು.

ಮುಂಬೈ ನಗರದ ತಾಜ್ ಹೋಟೆಲ್‌ನಲ್ಲಿ ನಡೆದ ಭಯೋತ್ಪಾದಕತೆ ಮತ್ತು ಒರಿಸ್ಸಾ ರಾಜ್ಯದ ಕಂದಮಾಲ್‌ನಲ್ಲಿ ನಡೆಯುತ್ತಿರುವ ಚರ್ಚ್‌ಗಳ ಮೇಲಿನ ದಾಳಿ, ಅಲ್ಪ ಸಂಖ್ಯಾತ ಕ್ರಿಶ್ಚಿಯನ್ ಜನರ ಮೇಲಿನ ದೌರ್ಜನ್ಯ ಎರಡೂ ಒಂದೇ ನಾಣ್ಯದ ಎರಡು ಮುಖಗಳು. ಭಯೋತ್ಪಾದಕತೆಯ ನಿಗ್ರಹಕ್ಕೆ ಕಠಿಣ ಕಾನೂನುಗಳು ಬೇಕೆನ್ನುವ ಭಾರತೀಯ ಜನತಾ ಪಕ್ಷ ಮತ್ತು ಸಂಘಪರಿವಾರದವರು ಕೋಮುವಾದದ ನಿಗ್ರಹದ ಬಗ್ಗೆ ಚಕಾರವೆತ್ತುವುದಿಲ್ಲ. ೨೦೦೨ರಲ್ಲಿ ಗುಜರಾತ್ ರಾಜ್ಯದಲ್ಲಿ ನಡೆದ ಹತ್ಯಾಕಾಂಡದಷ್ಟೇ ಭೀಕರವಾದುದೆಂದರೆ ಒರಿಸ್ಸಾದ ಕಂದಮಾಲ್ ಮತ್ತಿತರೆಡೆ ಜರುಗಿದ ಹತ್ಯಾಕಾಂಡಗಳು. ಅದೇ ರೀತಿಯ ಬೆಳವಣಿಗೆಯ ಸೂಚನೆಗಳು ಕರ್ನಾಟಕದಲ್ಲೂ ಕಂಡುಬಂದಿವೆ. ಎಲ್ಲೆಲ್ಲಿ ಭಾರತೀಯ ಜನತಾ ಪಕ್ಷ ಅಧಿಕಾರದಲ್ಲಿದೆಯೋ ಅಲ್ಲಿ ಹಿಂದೂ ಉಗ್ರಗಾಮಿಗಳಿಗೆ ಪ್ರಚೋದನೆ ಮತ್ತು ರಕ್ಷಣೆ ನೀಡಲಾಗುತ್ತಿರುವುದು ಸ್ಪಷ್ಟ. ಬಹುಸಂಖ್ಯಾತರ ಕೋಮುವಾದ ಹೆಚ್ಚು ಬರ್ಬರವಾಗಿ ಇರುತ್ತದೆಂಬುದಕ್ಕೆ ಒರಿಸ್ಸಾ, ಗುಜರಾತ್ ಮತ್ತು ಕರ್ನಾಟಕದ ಘಟನೆಗಳೇ ನಿದರ್ಶನಗಳು. ಶಿವಸೇನೆ, ಮಹಾರಾಷ್ಟ್ರ ನವನಿರ್ಮಾಣ ಪಕ್ಷಗಳು ಹುಟ್ಟು ಹಾಕಿರುವುದು ಭಯೋತ್ಪಾದನೆಯ ಇನ್ನೊಂದು ರೂಪವಷ್ಟೆ. ಈಗ ಸಾಧ್ವಿ ಪ್ರಜ್ಞಾ ಎಂಬಾಕೆ ಭಯೋತ್ಪಾದಕರ ಪಟ್ಟಿಗೆ ಸೇರಿದ್ದಾಳೆ. ಕೇಂದ್ರದ ಮಂತ್ರಿ ಅಂತುಳೆಯವರ ಇತ್ತೀಚಿನ ಹೇಳಿಕೆ ವಿವಾದಗ್ರಸ್ತವೆನಿಸಿದರೂ ವಿಶಾಲ ತನಿಖೆಗೆ ಯೋಗ್ಯವಾದುದು. ಭಾರತ ಮತ್ತು ಅಮೆರಿಕಾ ನಡುವೆ ರಾಜಕೀಯ ಮತ್ತು ಮಿಲಿಟರಿ ಸಂಬಂಧಗಳು ಹೆಚ್ಚು ಹೆಚ್ಚು ನಿಕಟವಾಗುತ್ತಿರುವಂತೆಯೇ ಭಯೋತ್ಪಾದಕ ಕೃತ್ಯಗಳು ಈ ದೇಶದಲ್ಲಿ ಹೆಚ್ಚುತ್ತಿರುವುದು ಕಾಳಜಿ ಮತ್ತು ಕುತೂಹಲಗಳನ್ನುಂಟುಮಾಡುವ ಬೆಳವಣಿಗೆಯಾಗಿದೆ. ಈ ದಿಶೆಯಲ್ಲಿ ಮುಂದಿನ ದಿನಗಳಲ್ಲಿ ಹೆಚ್ಚು ವಿವರಗಳು ಹೊರಬೀಳಲಿವೆ.

ಅಮೆರಿಕಾದ ಆರ್ಥಿಕ ಪರಿಸ್ಥಿತಿ ಅತೀವ ಸಂಕಷ್ಟದಲ್ಲಿದೆ. ಜಾಗತಿಕ ಮಾರುಕಟ್ಟೆ ಕುಸಿಯುತ್ತಿದೆ. ಅಮೆರಿಕಾ ಮತ್ತು ಯೂರೋಪಿನ ಹಲವಾರು ರಾಷ್ಟ್ರಗಳು ತಾವು ಆರ್ಥಿಕ ಹಿಂಜರಿತವನ್ನು ಅನುಭವಿಸುತ್ತಿದ್ದೇವೆಂದು ಅಧಿಕೃತವಾಗಿ ಘೋಷಿಸಿಕೊಂಡಿವೆ. ಅಮೆರಿಕಾದ ಅನೇಕ ಬೃಹತ್ ಬ್ಯಾಂಕ್‌ಗಳು ದಿವಾಳಿಯಾಗಿವೆ. ಸರ್ಕಾರದ ಹತೋಟಿಗೆ ಒಳಪಡದ ಮುಕ್ತ ಮಾರುಕಟ್ಟೆಯ ವಕ್ತಾರರು ಈಗ ಅಮೆರಿಕಾ ಸರ್ಕಾರದ ಮುಂದೆ ಆರ್ಥಿಕ ನೆರವಿಗಾಗಿ ಭಿಕ್ಷಾಪಾತ್ರೆ ಹಿಡಿದು ನಿಂತಿದ್ದಾರೆ. ಪ್ರಪಂಚದ ಶ್ರೀಮಂತ ಆಟೋ ಮಾಲಿಕರಾದ ಫೋರ್ಡ್, ಕ್ರೈಸ್ಲರ್ ಇತ್ಯಾದಿ ಕಂಪನಿಗಳು ಈಗ ದಿವಾಳಿಯ ಅಂಚಿನಲ್ಲಿವೆ. ಈ ಸಂಕಷ್ಟ ಈಗ ಜಾಗತೀಕರಣಗೊಂಡು, ಇದೀಗ ಭಾರತವನ್ನು ಆವರಿಸಿದೆ. ಮನಮೋಹನ್ ಸಿಂಗ್, ಚಿದಂಬರಂ ಮತ್ತು ಮಾಂಟೆಕ್ ಸಿಂಗ್ ಅಹ್ಲುವಾಲಿಯ ತ್ರಿಮೂರ್ತಿಗಳು ಭಾರತದ ಶ್ರೀಮಂತರ ನೆರವಿಗೆ ಧಾವಿಸಿದ್ದಾರೆ. ನಮ್ಮ ದೇಶದ ಸಾರ್ವಜನಿಕ ಕ್ಷೇತ್ರದ ವಿಮಾ ನಿಗಮಗಳನ್ನು ಮತ್ತು ಬ್ಯಾಂಕ್‌ಗಳನ್ನು ಹಂತಹಂತವಾಗಿ ಖಾಸಗೀಕರಿಸುವ ಇವರ ಪ್ರಯತ್ನಗಳನ್ನು ವಿಫಲಗೊಳಿಸಿದ ಕೀರ್ತಿ ಎಡ ಪಕ್ಷಗಳಿಗೆ ಮತ್ತು ಈ ಪಕ್ಷಗಳ ಪರ ಇರುವ ಬ್ಯಾಂಕ್ ಮತ್ತು ವಿಮಾ ಕ್ಷೇತ್ರದ ಕಾರ್ಮಿಕ ಸಂಘಟನೆಗಳಿಗೆ ಸಲ್ಲಬೇಕು. ಬ್ಯಾಂಕ್‌ಗಳು ಮತ್ತು ವಿಮಾ ಸಂಸ್ಥೆಗಳು ಖಾಸಗೀಕರಣಗೊಂಡಿದ್ದಲ್ಲಿ ಭಾರತ ಅತೀವ ಆರ್ಥಿಕ ಬಿಕ್ಕಟ್ಟನ್ನು ಎದುರಿಸಬೇಕಾಗುತ್ತಿತ್ತು ಎಂದು ಅನೇಕ ಆರ್ಥಿಕ ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಇಷ್ಟಾದರೂ ಈಗಿನ ಆರ್ಥಿಕ ಬಿಕ್ಕಟ್ಟು ತನ್ನ ಕರಾಳ ಪರಿಣಾಮಗಳನ್ನು ತೋರಿಸಲಾರಂಭಿಸಿದೆ. ಅಮೆರಿಕಾದ ಮೇಲೆ ಹೆಚ್ಚು ಅವಲಂಬಿತವಾಗಿರುವ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ಉದ್ದಿಮೆಗಳು ನೇರ ಬಿಕ್ಕಟ್ಟಿಗೊಳಗಾಗಿವೆ. ಮೋಟಾರ್ ವಾಹನ ಉದ್ದಿಮೆ ಮತ್ತು ಅದಕ್ಕೆ ಪೂರಕ ಬಿಡಿಭಾಗಗಳ ತಯಾರಿಕೆ ಉದ್ದಿಮೆಗಳು ತೀವ್ರ ಸಂಕಷ್ಟದಲ್ಲಿವೆ. ಸಿದ್ಧ ಉಡುಪುಗಳ ತಯಾರಿಕಾ ಸಂಸ್ಥೆಗಳು ವಿನಾಶದ ಅಂಚಿನಲ್ಲಿವೆ. ರಫ್ತು ಆಧಾರಿತ ಉದ್ದಿಮೆಗಳು ಕಂಗಾಲಾಗಿವೆ. ಲಕ್ಷಾಂತರ ಕಾರ್ಮಿಕರು ಕೆಲಸ ಕಳೆದುಕೊಂಡಿದ್ದಾರೆ. ಈ ಕ್ಲಿಷ್ಟ ಪರಿಸ್ಥಿತಿ ಇನ್ನೂ ಉಲ್ಬಣವಾಗುವುದೆಂದು ಆರ್ಥಿಕ ತಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಕ್ಯೂಬಾದ ಕಮ್ಯುನಿಸ್ಟ್ ಪಕ್ಷದ ನಾಯಕ ಫಿಡೆಲ್ ಕ್ಯಾಸ್ಟ್ರೊ ಹೇಳುವಂತೆ ಬಂಡವಾಳಶಾಹೀ ರಾಷ್ಟ್ರಗಳು ಈಗಿರುವ ಆರ್ಥಿಕ ಬಿಕ್ಕಟ್ಟನ್ನು ನಿವಾರಿಸಲು ತೆಗೆದುಕೊಳ್ಳುವ ಕ್ರಮಗಳು ಇನ್ನೂ ಹೆಚ್ಚು ಬಿಕ್ಕಟ್ಟನ್ನು ಸೃಷ್ಟಿಸುತ್ತವೆ. ದೇಶದ ಕರೆನ್ಸಿ ಅಪಮೌಲ್ಯ ಹೊಂದುತ್ತದೆ. ಮಾರುಕಟ್ಟೆ ಕುಸಿಯುತ್ತದೆ. ರಫ್ತಾಗುವ ಸರಕಿಗೆ ಬೆಲೆ ಕಡಿಮೆಯಾಗುತ್ತದೆ. ಇಂತಹ ಎಲ್ಲ ಭೀಕರ ಪರಿಣಾಮಗಳಿಂದ ಹೊಸ ಸತ್ಯಗಳು ಹೊರಬರುತ್ತವೆ. ಈ ಸತ್ಯಗಳು ಪ್ರಜ್ಞೆಯನ್ನು ಹೆಚ್ಚಿಸುತ್ತವೆ. ಬಂಡಾಯಗಳು ಹೆಚ್ಚುತ್ತವೆ ಮತ್ತು ಕ್ರಾಂತಿಕಾರಿ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಈಗಾಗಲೇ ಹೆಚ್ಚುತ್ತಿರುವ ಬಿಕ್ಕಟ್ಟು ಹೊಸ ಹೋರಾಟಗಳನ್ನು ರೂಪಿಸುತ್ತಿದೆ. ೨೦ನೇ ಆಗಸ್ಟ್ ೨೦೦೮ರಲ್ಲಿ ನಡೆದ ರಾಷ್ಟ್ರವ್ಯಾಪಿ ಕಾರ್ಮಿಕ ಮುಷ್ಕರ ಈ ದಿಕ್ಕಿನಲ್ಲಿ ಪ್ರಥಮ ಹೆಜ್ಜೆಯೆನ್ನಬಹುದು. ೨೦೦೯ ಜಗತ್ತಿನ ಮತ್ತು ಭಾರತಕ್ಕೆ ನಿರ್ಣಾಯಕ ವರ್ಷವಾಗಬಹುದಾದ ಎಲ್ಲ ಸೂಚನೆಗಳೂ ಇವೆ.

ಮುರಳೀಧರ್
ವಕೀಲರು, ನಂ. ೮೩, ೫ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

# ಗಂಗವ್ವ... ಗಂಗಾಮಾಯಿ... ಗಂಗೂಬಾಯಿ

ನೀವದನ್ನು ಕೇಳಬೇಕು. ಕೇಳಿಲ್ಲದೇ ಹೋದರೆ ಹೇಗಾದರೂ ಅದನ್ನು ಸಂಪಾದಿಸಿ... ಹಾಗೇ ಸುಮ್ಮನೆ ಕಣ್ಮುಚ್ಚಿ ಕೇಳುತ್ತಾ ಹೋಗಿ. ಗಂಗೂಬಾಯಿ ಹಾನಗಲ್ ಹಾಗೂ ಕೃಷ್ಣಾ ಹಾನಗಲ್ ಹಾಡುವ ರಾಗ – ಕೇದಾರ್. ಏಕಕಾಲಕ್ಕೆ ಅದು ಶ್ರವ್ಯವೂ ಹೌದು, ದೃಶ್ಯವೂ ಹೌದು! ನಾದ ತನ್ನ ಅಮೂರ್ತತೆಯಿಂದ ಕಳಚಿಕೊಂಡು ''ಘನ''ತೆಯನ್ನು ಪಡೆದುಕೊಳ್ಳುತ್ತಾ ಒಂದು ರೂಪಕವಾಗಿ ಕೇಳುಗರನ್ನು ಹಿಡಿದಿಟ್ಟುಕೊಳ್ಳುತ್ತದೆ. ಅದೊಂದು ಅಯಸ್ಕಾಂತ ಸ್ವರೂಪೀ ಅನುಭವ.

ತಾಯಿ ಹುಲಿ ತನ್ನ ಮರಿಗೆ ಬದುಕಿನ ಅನೇಕ ಗುಟ್ಟುಗಳನ್ನು ಕಲಿಸುತ್ತಾ, ಸಿದ್ಧಗೊಳಿಸುತ್ತಾ, ಚಿನ್ನಾಟವಾಡುತ್ತಾ ಅದೇ ಕ್ರಿಯೆಯಲ್ಲಿ ತನ್ನ ಸಾರ್ಥಕ್ಯವನ್ನೂ ಪಡೆದುಕೊಳ್ಳುತ್ತಾ ಆನಂದದ ತುರ್ಯಾವಸ್ಥೆಗೆ ತಲುಪುವ ಒಂದು ಅದ್ಭುತ ''ಚಿತ್ರಕ''ವನ್ನು ರಾಗ ಕೇದಾರದಲ್ಲಿ ಗಂಗೂಬಾಯಿ ಹಾಗೂ ಕೃಷ್ಣಾ ಪ್ರಸ್ತುತಪಡಿಸಿದ್ದಾರೆ. ಈ ಸುಂದರ 'ಸ್ವರಕೇಳಿ'ಯಲ್ಲಿ ಒಂದೆಡೆ ತಾಯಿ ಹಲವು ಹತ್ತು ಪಟ್ಟುಗಳನ್ನು ಪಕ್ಕಡ್‌ಗಳನ್ನು ಎಚ್ಚರಿಕೆಯಿಂದ, ಪ್ರೀತಿಯಿಂದ, ಖುಷಿಯಿಂದ, ಸಾವಧಾನದಿಂದ ತನ್ನ ಮರಿಗೆ ದಾಟಿಸಿದರೆ ಇನ್ನೊಂದೆಡೆ ಮರಿ ಅಷ್ಟೇ ಸಹಜವಾಗಿ ತಾನೂ ನೆಗೆದಾಡುತ್ತಾ ಅವುಗಳನ್ನು ಕರಗತಗೊಳಿಸಿಕೊಳ್ಳುತ್ತದೆ. ನೀವದನ್ನು ಕೇಳಬೇಕು!

ಕೇದಾರದ ದ್ರುತ್ ರಚನೆಯಲ್ಲಿ ''ಅಬ್ ಕೈಸಿ ಧೂಮ್ ಮಚೀ ಹೈ'' ಸಾಹಿತ್ಯದ ಭಾವ, ಭಾವಾರ್ಥಗಳನ್ನು ಬಿಡಿಸಿಡುತ್ತಾ ಕೇಳುಗರನ್ನು ಪರಾಕಾಷ್ಠೆಗೆ ತಲುಪಿಸುತ್ತಾರೆ. ಗಂಗೂಬಾಯಿಯವರ ಪ್ರತ್ಯಕ್ಷ ಗಾಯನವನ್ನು ಕೇಳಿದವರಿಗೆ ಶರೀರ-ಶಾರೀರಗಳ ಖಚಿತಾರ್ಥ ಹೊಳೆದುಬಿಡುತ್ತದೆ! ದೇವರೆ... ನೀವದನ್ನು ಕೇಳಬೇಕು!

ಆಲೂರು ವೆಂಕಟರಾಯರು, ಬೇಂದ್ರೆ, ಮಧುರಚೆನ್ನ, ಶ್ರೀರಂಗ ಹಾಗೂ ಗೋಕಾಕರು ಉತ್ತರ ಕರ್ನಾಟಕದ ಪಂಚ ಮಹಾಶಿಖರಗಳಾದರೆ, ಗಂಗೂಬಾಯಿ, ಭೀಮಸೇನ ಜೋಷಿ, ಮಲ್ಲಿಕಾರ್ಜುನ ಮನಸೂರ್, ಕುಮಾರ ಗಂಧರ್ವ ಹಾಗೂ ಬಸವರಾಜ ರಾಜಗುರು ಇವರು ಅಲ್ಲಿಯ ಪಂಚಮಹಾನದಿಗಳು.

## ಸಂದರ್ಶಕ : ವಿಜಯ ವಾಮನ

ಗಂಗೂಬಾಯಿಯವರ ಗುರುಬಂಧು ಭೀಮಸೇನ ಜೋಷಿಯವರಿಗೆ ದೇಶದ ಸರ್ವೋಚ್ಚ ಸನ್ಮಾನ 'ಭಾರತರತ್ನ' ಸಂದಾಯವಾದ ಘಳಿಗೆಯಲ್ಲೇ ನಾನು ಗಂಗವ್ವನ ಜೊತೆ ಈ ಮಾತುಕತೆಗೆ ತೊಡಗಿಕೊಂಡಿದ್ದೆ. 'ಭಾರತರತ್ನ' ಪ್ರಶಸ್ತಿಯನ್ನು ಎಲ್ಲ ಹಿಂದೂಸ್ಥಾನಿ ಕಲಾವಿದರ ಪರವಾಗಿ ಸ್ವೀಕರಿಸುತ್ತೇನೆ ಎಂದ ಜೋಷಿಯವರ ನಮ್ರತೆ ಸಂಗೀತದ ಒಳಗುಣ. ಅಹಂಕಾರ ಪೀಡಿತರಾದಾಗ ಸಂಗೀತವೇ ಕಲಾವಿದರನ್ನು ಕಾಪಾಡುತ್ತದೆ. 'ಹಂಸಗೀತೆ'ಯ ಕಥಾನಾಯಕನನ್ನು ನೆನಪಿಸಿಕೊಳ್ಳಿ. ದರ್ಪ, ಅಹಂಕಾರ, ಪ್ರತಿಷ್ಠೆ, ಜಾತಿ, ಭಾಷೆ ಗಡಿಗಳ ಬಂಧನದಿಂದ ಮುಕ್ತಗೊಳಿಸುವ ಸಿದ್ಧೌಷಧ ಸಂಗೀತ. ಇಂಥಾ ಸಂಗೀತವನ್ನೇ ಉಸಿರಾಗಿಸಿಕೊಂಡು ೯೫ ವರ್ಷಗಳ ಸಾರ್ಥಕ ಜೀವನ ನಡೆಸಿಕೊಂಡು ಬಂದಿರುವ ಮಹಾತಾಯಿ ಗಂಗಜ್ಜಿಯನ್ನು ಮಾತನಾಡಿಸುವ ಸೌಭಾಗ್ಯ ದೊರಕಿದ್ದು ನನ್ನ ಅದೃಷ್ಟ. ನನ್ನ ಪುಣ್ಯ.

ಆ ಮನೆಯಲ್ಲೊಂದು ಪುಟ್ಟ ಕೋಣೆ. ಗೋಡೆ ಬದಿಯಲ್ಲೊಂದು ಮಂಚ. ಮಂಚದ ಮೇಲೆ ಮುದುರಿ ಬಿದ್ದ ಶಾಲು-ಹೊದಿಕೆ ಹಾಗೂ ತಾಯಿ ಅಂಬಾಬಾಯಿಯವರ ಫೋಟೊ! ದಿಂಬಿನಡಿ ತಾಯಿಯ ಹಸ್ತಾಕ್ಷರದಲ್ಲೇ ಇರುವ – ಜೀರ್ಣಾವಸ್ಥೆ ತಲುಪಿರುವ – ಸ್ವರ ಪ್ರಸ್ತಾರ ಹಾಕಿರುವ ನೋಟ್ ಬುಕ್ಕು! 'ನಾದ ವಿನೋದ ಭೂಮಿಕಾ' ಎನ್ನುವ ಅಪರೂಪದ ಅಪ್ರಕಟಿತ ಗ್ರಂಥ. ಇನ್ನೊಂದೆರಡು ಫ್ರೇಮು ಕಟ್ಟಿದ ಭಾವಚಿತ್ರಗಳು. ಪಕ್ಕದ ನಡುಮನೆಯೊಳಗಿಂದ ಜಿನುಗುತ್ತಿದ್ದ ಶಿಷ್ಯ ಅಶೋಕ ನಾಡಿಗೇರನ ತೋಡಿ ಆಲಾಪ. ತಂಬೂರಿಯ ಝೇಂಕಾರ. ಇವುಗಳ ಮಧ್ಯೆ ಮುದುಡಿ ಕುಳಿತಿದ್ದ ಗುಬ್ಬಿ-ಜೀವದ ಗಂಗವ್ವ... ಗಂಗಾಮಾಯಿ... ಗಂಗೂಬಾಯಿ! ನಂಬಲಸದಳವಾದಂತಹ ನಾಜೂಕಾದ ಶರೀರ, ಅಷ್ಟೊಂದು ಕೃಶ, ಆದರೆ ಎಂತಹ ಅದ್ಭುತ ದನಿ! ಶರೀರಕ್ಕೂ ಶಾರೀರಕ್ಕೂ ಎತ್ತಣಿಂದೆತ್ತ ಸಂಬಂಧವಯ್ಯ?!

ಬಲ್ಲವರು ಹೇಳುವಂತೆ -''ಗಂಗೂಬಾಯಿ ಹಾಡಿದರ ಆಕಾಶಕ್ಕ ಮುಟ್ಟತದ, ಕೃಷ್ಣಾ ಹಾಡಿದರ ಹೃದಯಕ್ಕ ಮುಟ್ಟತದ!'' ಜಲಂಧರ್ ಆಕಾಶವಾಣಿ ಕಾರ್ಯಕ್ರಮದ ತಮಾಷೆ ಪ್ರಸಂಗವನ್ನು ಅಜ್ಜಿ ಹೀಗೆ ನೆನಪಿಸಿಕೊಳ್ಳುತ್ತಾರೆ. ಅಲ್ಲಿ ತಮ್ಮ ಪರಿಚಯದವರೊಬ್ಬರ ಮಗಳಿಗೆ ರೇಡಿಯೋದಲ್ಲಿ ತನ್ನ ಗಾಯನವನ್ನು ಕೇಳಲು ಹೇಳಿಹೋಗಿರುತ್ತಾರೆ. ನಂತರ ಆ ಬಗ್ಗೆ ಅವಳಲ್ಲಿ ವಿಚಾರಿಸಿದಾಗ ಆ ಹುಡುಗಿ ಮುಗ್ಧವಾಗಿ ಹೇಳುತ್ತಾಳೆ – ''ನಹೀ ನಹೀ ಉಸ್‌ಪರ್ ತೋ ಕೋಯಿ ಆದ್ಮಿ ಗಾ ರಹಾ ಥಾ.'' ಇದು ಆಗಿನ ಕತೆ!



ಈಗ – ನಮ್ಮ ಬೆಂಗಳೂರಿನಲ್ಲಿ ಹಿಂದೂಸ್ತಾನಿ ಸಂಗೀತದ್ದು – ಕರ್ಮಕತೆ! ಈಗ ಹಿಂದೂಸ್ತಾನಿ ಸಂಗೀತ ಎಂದರೆ ನಮ್ಮ ಕನ್ನಡ ಟಿ.ವಿ. ಸೀರಿಯಲ್‌ಗಳ ''ಹಿಂದಿನ'' ಹಿಂದುಗಡೆಯ ಹಿಂದೂಸ್ತಾನಿ! ಗೆದ್ದರೆ-ಬಿದ್ದರೆ, ಅತ್ತರೆ-ಸತ್ತರೆ, ತಳ್ಳಿದರೆ-ತಬ್ಬಿದರೆ, ಪುರೋಹಿತರಿಗೆ, ಪೊಲೀಸರಿಗೆ, ಲಾಯರುಗಳಿಗೆ, ಖದೀಮರಿಗೆ,ಕೋರ್ಟಿನಲ್ಲಿ, ಪೊಲೀಸು ಠಾಣೆಯಲ್ಲಿ ಬಸ್ ನಿಲ್ದಾಣದಲ್ಲಿ... ಹೀಗೆ ಎಲ್ಲಂದರಲ್ಲಿ - ಹೇಗೆಂದರೆ ಹಾಗೆ ಗರಿಗರಿ ಸಗರಿಗ ಗರಗಸ ಗರಗಸ ಧಿರೆನಾ ಧಿರೆನಾ ಎಂದು ಆಕ್ರಂದಿಸುವುದು, ಅಬ್ಬರಿಸುವುದು ಮಾತ್ರ. ಒಗ್ಗರಣೆಗೆ – ಪಿಟೀಲಿನ ಕುಯ್ತ, ಚಂಡೆಯ ಬಡಿತ, ಬಾನ್ಸುರಿಯ ಮುಲುಕು ಹಾಗೂ ಸಿತಾರದ ತಿಣುಕು! ಇಂಥಾ ದೊಂಬರಾಟಗಳಿಂದ ಹಿಂದೂಸ್ತಾನಿ ಸಂಗೀತ ''ಮುಕ್ತ''ವಾಗಲಯ್ಯ ಪತಿತ ಪಾವನ ಸೀತಾರಾಮ!

ಗಂಗವ್ವನ ಮನೆಯೇ ಒಂದು ದೊಡ್ಡ ಸಂಗೀತದ ಭಂಡಾರ. ಓಂಕಾರನಾಥ, ಕರೀಮ್ ಖಾನ್, ಸವಾಯ್ ಗಂಧರ್ವ, ಭೀಮಸೇನ್ ಜೋಷಿ, ಕುಮಾರ ಗಂಧರ್ವ, ಮನಸೂರ, ಕಿಶೋರಿ ಬಾಯಿ, ಕೇಸರ ಬಾಯಿ, ಬಿಸ್ಮಿಲ್ಲಾ ಖಾನ್, ಲತಾ ಮಂಗೇಶ್ಕರ್ ಮುಂತಾದ ದಿಗ್ಗಜರ ಅಪರೂಪದ ತಸವೀರುಗಳು. ಪನ್ನಾಲಾಲ್ ಘೋಷ್‌ರ ಮನಸೆಳೆಯುವ ಸೆಪಿಯ ಫೋಟೋ. ನೂರಾರು ಚಿತ್ರ-ವಿಚಿತ್ರ ವಾದ್ಯಗಳು, ಪ್ರಶಸ್ತಿ ಫಲಕಗಳು. ಇತ್ತೀಚಿನ ಸವಾಯ್ ಗಂಧರ್ವ ಪ್ರಶಸ್ತಿ, ಪದ್ಮವಿಭೂಷಣ, ಪದ್ಮಭೂಷಣ ಇತ್ಯಾದಿಗಳ ನಡುವಿನಿಂದ ಜೀವಂತ ಎದ್ದುಬಂದಂತಿರುವ ಕೃಷ್ಣಾ ಹಾನಗಲ್ಲರ ಭಾವಚಿತ್ರ. ಗಂಗಜ್ಜಿಯ ಜೊತೆ ಮಾತು ಕತೆಗೆ ಇಂಥಾ ಪರಿಸರ, ಪರಿಕರ ಹಾಗೂ ಹಿನ್ನೆಲೆ ಬೇಕು.

ತಾಳ ಬೇಕು ತಕ್ಕ ಮೇಳ ಬೇಕು
ಶಾಂತ ವೇಳೆ ಬೇಕು ಗಾನ ಕೇಳಬಯಸುವಗೆ
ಕಳವಳಾ ಬಿಡಬೇಕು
ಕಳೆಮೊಗವಿರಬೇಕು
ಅರಿತವರಿರಬೇಕು, ಹರುಷ ಹೆಚ್ಚಲು ಬೇಕು
ಪುರಂದರ ವಿಠಲನೇ ಪರದೈವ ಎನಬೇಕು

**ವಿ.ವಾ:** ನೀವು ನಾಡಿನ ಅತ್ಯಂತ ಹಿರೇ ಕಲಾವಿದರು, ಶ್ರೇಷ್ಠ ಕಲಾವಿದರು. ನಾ ಅಗದೀ ಸಾಮಾನ್ಯ. ಮಾತಾಡುವಾಗ ನಡವೀ ತಪ್ಪಾದು ಅಂತದರ ಕ್ಷಮಾ ಮಾಡಬೇಕು.

**ಗಂ.ಹಾ:** ಹಂಗೇನಿಲ್ರಿ. ನನಗ ಮಾತಾಡೋರು ಬೇಕು. ಮಂದೀ ಬೇಕು. ಇಲ್ಲದಿದ್ದರ ಬೇಸರ ಬರತದರಿ. ಈ ಸಣ್ಣ ಖೋಲಿ, ಯಾವಾಗ್ಲೂ ಹೀಂಗs ಕುಂದರಬೇಕಂದ್ರ ನಮ್ಮ ಮೊಮ್ಮಗನಿಗೆ ಹೇಳೀನಿ. ಈ ಕಡೀಗ ಒಂದು ಕಿಟಕಿ ಮಾಡಿಸ್ಕೊಡಪ್ಪ ಅಂತ. ಹೊರಗ ಓಡಾಡೂ ಮಂದೀನ್ನ ನೋಡಬಕೂಂತನ್ನಿಸತದೆ, ಮಾತಾಡಬೇಕೂಂತನ್ನಿಸತದ, ಇದೊಂದು ಜೈಲುವಾಸಾ ಆದ್ಹಂಗಾಗೇದ. ಏನ ಮಾಡೋದ್ರೀ.

**ವಿ.ವಾ:** ನಿಮ್ಮ ಗುರುಗಳ ಎದುರು ಮೊಟ್ಟ ಮೊದಲ ಬಾರಿಗೆ ಏನ್ ನಡೀತು?

**ಗಂ.ಹಾ:** ಧಾರವಾಡದಾಗ ಶೆಟ್ರ ಓಣೀವಳಗಿದ್ವಿ

*ಸಂಗೀತ ಉಪಕರಣಗಳ ಭಂಡಾರ*

ಆಗ. ನಮ್ಮ ತಾಯಿ ಒಂದೆರಡು ಕೀರ್ತನೆ ಕಲಿಸಿಕೊಟ್ಟಿದ್ದಳು ನನಗ. ಕರ್ನಾಟಕೀ. ಹನ್ನೆರಡು ವರ್ಷಾದಾಕೀ ಇದ್ದೆರೀ. ತಾಳಾ ಭಾಳಾ ತಪ್ಪಿತ್ತು. ಹುಬ್ಬಳೀಲಿ ಹುಲಗೂರು ಕೃಷ್ಣಮೂರ್ತ್ಯಾಚಾರ್ ಅಂತಿದ್ರು. ನಮ್ಮ ತಾಯಿ ನನ್ನ ಅವರ ಹತ್ತೆ ಕರ್ಕೊಂಡ್ ಬಂದಳು. ಹಿಂದೂಸ್ತಾನಿ ಮೊದಲು ಕಲಿತದ್ದು ಇಲ್ಲಿ. ಹುಬ್ಬಳ್ಳೀಲಿ. ಆಗ ಬಂದವಳು ಈವರೆಗೂ ಇಲ್ಲೇ ಉಳಿದುಬಿಟ್ಟೇನಿ.

**ವಿ.ವಾ:** ನಿಮ್ಮ ಗುರುಗಳು... ಅಂದ್ರ... ಸವಾಯಿ ಗಂಧರ್ವ.

**ಗಂ.ಹಾ:** ಅವರು ನಾಟಕ್ ಕಂಪ್ನೀವಳಗಿರ್ತಿದ್ರಲ್ಲ... ಆವಾಗಾವಾಗ ನಂ ಮನೀಗ್ ಬಂದ ಬಿಡತಿದ್ರು. ನಂ ಮನ್ಯಾಗ ಸಂಗೀತ ನಡೀತಿತ್ತು ಅವರದು. ಪ್ರಾಕ್ಟೀಸ್ ಮಾಡ್‌ತಿದ್ರು. ಅವರು ಪ್ರಾಕ್ಟೀಸ್ ಮಾಡೋದನ್ನ ಕೇಳಿಕೋತ ಕೂತಗೊಂಡ್ ಬಿಡತ್ತಿದ್ದೆ. ನಮ್ಮ ತಾಯಿ-ಕರ್ನಾಟಕೀ ಅಲ್ಲ? ಆಕೀ ಪಟಪಟ ಅದರ ಸರಗಮ್ ಬರಕೊಂಡ್ ಬಿಡತ್ತಿದ್ದಳು. ಹೀಂಗs... ಕಲ್ತು ನಮ್ಮವ್ವನ ಮುಂದ ಹಾಡತ್ತಿದ್ದೆ. ನಿನಗ ಕರ್ನಾಟಕಿ ಬರೋದಿಲ್ಲ ನೀ ಹಿಂದೂಸ್ತಾನಿ ಕಲೀಬೇಕು ಅಂದಳು ನಮ್ಮವ್ವ. 'ರಾಧೇಕೃಷ್ಣ ಬೋಲೋ ಮುಖ್‌ಸೆ' ಥರದವು. ಶಾಲೀ ಇಂದ ಬಂದವಳೆ ನಮ್ಮವ್ವಗ ಹಾಡಿ ತೋರಿಸ್ತಿದ್ದೆ. ಇದೇ ಮನೀವಳಗ ಗಂಧರ್ವರು ಮೂರು ವರ್ಷ ಸಂಗೀತ ಕಲಿಸಿಕೊಟ್ಟಾರ ನನಗ. ಇಲ್ಲೇ ಇನ್ನೊಂದು ಮನೀ ಮಾಡಿಕೊಟ್ಟಿದ್ವಿ ಅವರ್‍ಗೆ.

ಅವರು ಒಮ್ಮೊಮ್ಮೆ ಹೊರಗೆ ಹೋಗೂವಾಗ ನಾನಿಲ್ಲೇ ಹಾಡ್ತಾ ಕೂತಿರುತ್ತಿದ್ದೆ. ನನ್ನ ಪ್ರಾಕ್ಟೀಸು ಅವರ ಮನಸ್ಸಿಗೆ ಬರದಿದ್ದಾಗ... ಕೈಯ್ಯಾಗಿನ ತಂಬಿಗಿ ತೆಗೆದು ಥಟ್ಟಯಾಗಿ ಕುಕ್ಕಿ ''ಯೇನ್ ಹಾಡತ್ತಿದ್ದಿ'' ಅಂತ ರೇಗ್ತಾ ಇದ್ದರು. ಬೇರೇದ್ದು ಏನಾರ ಹಾಡಿಕೋತಿದ್ದರ ಬಂದು ಕಲಿಸತಿದ್ದರು.

**ವಿ.ವಾ:** ನೀವು ಬಿಭಾಸ್‌ರಾಗಕ್ಕ ಕೋಮಲ ಧೈವತ ಹಚ್ಚಿ ಅವರ ಕೈಲಿ ಬೈಸಿಕೊಂಡಿದ್ದು ನೆನಪಿದೇನು?

**ಗಂ.ಹಾ:** ಬೈದಿದ್ರು. ನಂ ಘರಾಣಾದೊಳಗಿಲ್ಲಪಾ ಅದು. ನಾವು ತೀವ್ರ ಧೈವತ್ ಹಚ್ಚೀವಲ್ಲ? ನಾ ಎಲ್ಲಾದ್ರೂ ಕೇಳಿಕೊಂಡಿದನ್ನ ಹಾಡಿಬಿಡತ್ತಿದ್ದೆ. ಯಾರಾದ್ರೂ ಬಂದು ಗುರುಗಳಿಗೆ ಹೇಳತಿದ್ರು. ಹಂಗ ಹಾಡಿದಳು... ಹೀಂಗ ಹಾಡಿದಳು ಅಂತ. ಮುಂಚೆ ರೇಡಿಯೊದೊಳಗ ಹಾಡಿದ್ದಕ್ಕೂ ಎರಡು-ಮೂರು ಸರ್ತಿ ಬೈಸಿಕೊಂಡೀನಿ. ಏನಾದ್ರೂ ಹಾಡೋ ಮುನ್ನ ಒಮ್ಮಿ ನನಕಡೀಂದ ಸರಿಯಾಗಿ ಕಲ್ತುಕೊಂಡ ಹೋಗು ಅಂತ ಹೇಳತಿದ್ದರು. ಕಲಿಸಿಕೊಡ್ರಿ ಅಂತಂಬೋ ಧೈರ್ಯನೇ ಇರ್‍ಲಿಲ್ಲರೀ. ಈಗಿನವರಾದರ ನಂಗ ಅದನ್ನ ಕಲ್ಸು ಇದನ್ನ ಕಲ್ಸು ಅಂತ ಕೇಳ್ತಾರ. ಆವಾಗ ಅವರಾಗs... ಏನ್ ಕಲಿಸ್ತಾರೋ ಅದನ್ನ ಕಲೀಬೇಕಾಗಿತ್ತು.

**ವಿ.ವಾ :** ನೀವು ಪೂರಿಯಾಧನಾಶ್ರೀ ಕಲೀತಿರಬೇಕಾದ್ರ ನಿಮ್ಮ ಗುರುಗಳು ಹೇಳಿದ್ದು ಒಂದ್ಮಾತು ನೆನಪಾಗತದ. ''ಎಲ್ಲ ಸ್ವರಗಳನ್ನೂ ಒಮ್ಮೆಲೆ ಖರ್ಚು ಮಾಡೂದಲ್ಲ. ಸ್ವರ ಹಚ್ಚಬೇಕಾದ್ರ ಜಿಪುಣತನ ಇರಬೇಕು.''

**ಗಂ.ಹಾ:** ಹೌದಪ, ಹೌದು. ಅಂದರ ಪರಂಪರೆಯಿಂದ ಬಂದದ್ದು ಅದನ್ನೇ ಅನಬಾರದು. ಅದರಾಗೇ ಬೇರೆ ಬೇರೆ ಹಾಡಬೇಕು. ನಾಕು ಸ್ವರ ಅವೆ ಅಂದ್ರ ಅವನ್ನ ತೆಗ್ದು ಹಿಂದ-ಮುಂದ ಹಾಡ್ತಿರಬೇಕು. ನಂ ತಲೀ ಓಡಬೇಕು. ಮಂದೀಗೆ ಈಗ ಏನ್ ಹಾಡ್ತಾರೆ ಅಂಬೋದು ತಿಳೀಬಾರದು. ಹಿಂಗs... ಸರಗಮ್ ಬೆಳಸೀ ಕೊನೀಗೊಮ್ಮಿ ಪಂಚಮ್ ಹಚ್ಚಬೇಕು. ಅದು ನಂ ಘರಾಣಾ ಯಾವಾಗ ಪಂಚಮ್ ಹಚ್ಚತಾರಿವರು ಅಂತ ಕಾಯ್ತಿರಬೇಕ್ರಿ ಮಂದಿ. ಷಡ್ಜತನಕಾ ಭಾಳಾ ಕಾಯ್ತಾ ಇರಬೇಕು.

ವಿ.ವಾ : ನೀವು ೫ ಮಾರ್ಚ್ ೧೯೧೩ ಹುಟ್ಟಿದಿರಿ. ಅದೇ ವರ್ಷ ನಿಮ್ಮ ಫೇವರಿಟ್ ಗಾಯಕಿ ಝೋರಾ ಬಾಯಿ ಆಗ್ರೇವಾಲಿ ತೀರಿಕೊಂಡರು. ಅವರ ರಿಕಾರ್ಡುಗಳನ್ನ ಕೇಳಿ ತುಂಬ ಮೆಚ್ಚಿಕೋತಿದ್ದಿರಿ.

**ಗಂ.ಹಾ:** ಹೌದೌದು. ಭಾಳಾ ಹಿಡಸ್ತಿದಳು ಆಕೀ ನನಗೆ. ಭಾಳ ಕೇಳುತ್ತಿದ್ದೆ.

ವಿ.ವಾ: ಇತ್ತೀಚಿನ ದಿನಗಳಲ್ಲಿ ಆ ಹಾಡುಗಳನ್ನ ಕೇಳೀರೇನು ?

**ಗಂ.ಹಾ:** ಇಲ್ರಪ್ಪ, ಈಗೆಲ್ಲಿ ?

ವಿ.ವಾ: ಈಗ ಕೇಳತೀರೇನು ? ಕೇಳ್ರಿ.

**ಗಂ.ಹಾ:** (೩-೪ ನಿಮಿಷ ಕೇಳಿ) ಯಾವ ರಾಗ ಅಂಬೋದು ತಿಳೀವಲ್ದು(!)

ವಿ.ವಾ: ರೋಷನಾರಾ ಬೇಗಮ್...

**ಗಂ.ಹಾ** : ಆಕೀನ್ನೂ ಕೇಳೀನಿ. ಆಗ ಜಲಸಾ ಅಂತ ಮಾಡತ್ತಿದ್ದರ್ರೀ. ಇಲ್ಲೇ ಥೇಟರ್‌ವಳಾಗಾಗತ್ತಿದ್ದವು ಜಲ್ಸಾ. ಮತ್ತೆ ಮೀರಜ್‌ನಲ್ಲೊಮ್ಮೆ ಆಕೀ ಸಂಗೀತ ಕೇಳೀನಿ. ಒಮ್ಮೆ ಏನಾತು ಗೊತ್ತೇನ್ರಿ. ನಾವೆಲ್ಲ ಸಣ್ಣೋರು. ಆಕೀ ಪ್ರೋಗ್ರಾಂ ಮಧ್ಯರಾತ್ರಿಗಿತ್ತು. ಆಕೀಗ ಅರ್ಜೆಂಟ್ ರೈಲು ಹಿಡೀಬೇಕಿತ್ತಂತ. ಆಕೀ ಜಗಾಕ್ಕ ನನ್ನ ಹಾಡು ಅಂದರು. ನೀವು ಹಿಂದಾಗಡೆ ಹಾಡ್ರಿ ಆಕೀ ಈಗ ಹಾಡಲಿ. ಭಾಳಾ ಜರೂರ್ ಅದ ಅಂದರು. ನಾವಲ್ಲೆ, ದೊಡ್ಡೋರು ಹಾಡಿದ ಮ್ಯಾಲ ನಾವು ಹಾಡಬಾರದು. ಅಪಮಾನ ಮಾಡಿದಂಗ ಆಗ್ತದೆ ಅಂದೆ. ಇಲ್ಲಿ ಸೇವಾ ಅಂತ ನಡೀತsದ. ಹಂಗೇನೂ ಅನ್ನಕೋಬ್ಯಾಡ್ರಿ ಅಂದ್ರು. ಆಕೀ ಏನ್ಮಾಡದಳು ಗೊತ್ತೇನ್ರಿ ? ಎರಡು ಗಂಟೆ ಹಾಡಬೇಕಾದಾಕೀ ನಾಕು ಗಂಟೆ ಹಾಡಿದಳು. ಮುಂಬೈ ರೈಲು ತಪ್ಪಿಹೋಯ್ತು. ನಾವೆಲ್ಲ ಸಣ್ಣೋರು ಹಂಗs ಉಳದ್ವಿ. ರಹಮತ್ ಖಾನ್ ಅಂತ ಇದ್ರು. ಭಾಲೇಖಾನ್ ಅವರಜ್ಜ. ನಮ್ಮ ಗುರುಗಳಿಗೆ ಹೇಳದ್ರು "ರಾಮ್‌ಭಾವು ಅತ್ತಾ ತೂಹೀ ಬಸಾ" ಎಂಥಾ ದೊಡ್ಡ ಮನಷಾ ರೀ. ಭಾಳಾ ಭಲೋ ಹೇಳದರ್ರೀ ಗಮಕ್ ಅಂತ ಏನ್ ಹೇಳ್ತೀವಿ ಅದಕ್ಕ ನೆಲ ನಡಗ್ತಿತ್ತು ಅಂತ ಅನ್ನಿಸ್ತು. ರಹಮತ್ ಖಾನ್ ಹೇಳದ್ರು "ಅಲ್ನೋಡು. ಸಮಾಧಿ ಗೋಣು ಹಾಕಲಿಕ್ಕ ಹತ್ಯದ ಅವರ ಸಂಗೀತಕ್ಕ".

ವಿ.ವಾ : ಆಕಾಶವಾಣಿ ಕಾರ್ಯಕ್ರಮಗಳು ಹೇಗಾಗ್ತಾ ಇದ್ವು ?

**ಗಂ.ಹಾ** : ನನಗ ಬಾಂಬೇದಾಗ ಮುಂಚಿನ ಕಾರ್ಯಕ್ರಮ. ಗ್ರಾಮಾಫೋನ್ ಕಂಪ್ನಿ ರಿಕಾರ್ಡಿಂಗ್‌ಗೆ ಹೋಗಿದ್ವಿ. ಅವಾಗಾ ತಿಂಗಳಾನುಗಟ್ಲೆ ರಿಕಾರ್ಡಿಂಗ್ ನಡೀತಿತ್ತು. ನಮ್ಮನ್ನೆಲ್ಲಾ ಗೋರೇಗಾಂವಕ್ಕ ಗ್ಯಾದರಿಂಗ್ ಮಾಡಿದ್ರು. ಅಲ್ಲಿ ಮೇನಕಾ ಶಿರೋಡ್ಕರ್ ಅಂತ ಒಬ್ಬಾಕೀ ಹಾಡ್ತಿದ್ದಳು. ಎರಡು ಗಂಟೆ ಕಾರ್ಯಕ್ರಮ. ಆದಾಗ್ತಾ ಇದ್ದಂಗs ಆಕೀಗ ಗಾಡೀ ತರಿಸಿಕೊಡ್ತಿದ್ರು ! ನಮಗ್ಯಾರು ಕೊಡೋರು ? ಹಾಡೋರು, ಕೇಳಲಿಕ್ಕ ಬಂದೋರು ಎಲ್ಲ ಕೂಡಿ ಒಂದು ನೂರು ಮಂದಿ ಇದ್ವಿ. ಸಂಜೀ ಐದೂವರೀವರಗೂ ಕೂಡಬೇಕು ಅಂದ್ರು. 'ಎಲ್ಲಾರು ಒಂದೊಂದು ಹಾಡಿ ಬಿಡ್ರಿ' ಅಂದರು. 'ಅಲ್ರೀ ಆಕೀ ದೊಡ್ಡಾಕೀ ಹಾಡಿಬಿಟ್ಟಾಳಲ್ಲ ?' ಅಂದರ "ಆಕೀ ರೊಕ್ಕಕ ಹಾಡ್ಯಾಳ" ಅಂತಾರ. ನಾವೆಲ್ಲಾರು ಹತ್ತತ್ ಮಿನಿಟು ಹಾಡಿದ್ವಿ. ಅದಾದ ಮ್ಯಾಲ ಬಾಂಬೆಕ್ಕ ಒಂದನೇ ಪ್ರೋಗ್ರಾಮ್ ಬಂತು. ಸವಾ ೬ ರೂಪಾಯಿ ಕೊಡ್ತೇವಂದ್ರು ! ಭಯಂಕರ ಆನಂದಾಯ್ತು. ಇಲ್ಲಿ ಬರೀ ಇಪ್ಪತ್ತೈದು ಕೊಡತ್ತಿದ್ದರಲ್ಲರೀ. ನೂರು ಹೆಚ್ಚಾಯ್ತಲ್ಲ! (ಬಹುಶಃ ಅದು ಸವಾ ಸೌ ಇರಬೇಕು. ಗೊತ್ತಿಲ್ಲ). ಒಮ್ಗಿಲೆ ಹೂಂ ಅಂದ್‌ಬಿಟ್ಟೆ. ನಮ್ಮ ಮಾಮಾ ಬರ್ತಿದ್ದ ನನ್ ಸಂಗ್ತಿ. ಆವಾಗ ಯಾರ್ದೋ ಮನೀಗ್ ಊಟಕ್ಕ ಕರದಿದ್ರು ಮರುದಿವಸಾ. ಹಾಡೋರ ಮನೀಗೆ. "ನಿಮಗೆಷ್ಟು ರೊಕ್ಕ ಕೊಟ್ರು" ಅಂತ ಕೇಳಿದ್ರು ಯಾರೋ. ಕೇಳಿದ ಕೂಡ್ಲೆ ಅಗ್ದಿ... ಅಗದೀ ಆನಂದದಿಂದ್ಲೆ "ಒಂದು ನೂರಾ ಇಪ್ಪತ್ತೈದು" ಅಂತಂದೆ (ನಗು). "ನನ್ ಮಗಳು ಇನ್ನೂರರ ಮ್ಯಾಲ ತೊಗೋತಾಳ. ಆಕೀಗೆ ಕಡಿಮಿದ್ದು ಪ್ರೋಗ್ರಾಂ ಬಂದಿರ್ತಾವ. ಅಂಥವನ್ನ ನಿಮಗ ಕೊಡಿಸ್ತೀವಿ. ಇಲ್ಲೊಂದು ಖೋಲಿ ಹಿಡೀರಿ."

ವಿ.ವಾ: 'ಚಕಾಕೇ ಕೋರ ಚಂದ್ರಾ ಚೀ.' ನೆನಪದೇನು ?

**ಗಂ.ಹಾ:** ಚಕಾಕೇ... ಹೂಂ... ಮಾಮ ವರೇರಕರ್‌ದು ಇರಬೇಕು. ನೆನಪಿಲ್ಲ.

ವಿ.ವಾ: ಗುರುಗಳಿಗೆ ತುಂಬ ಖುಷಿ ಆದಾಗ ನೀವು ಹಾಡಿದ್ದು ಹಿಡಿಸಿದಾಗ "ಮಸಾಲ ಹಾಲು ಕುಡಿಯೋಣ ನಡೀ" ಅಂತಿದ್ರು.


Academic's

**21ST CENTURY CHILDREN ENCYCLOPEDIA**

**—— Set of 4 books ——**

Best Sellers

These special books are a treasure chest of knowledge. A dream come true for every child, helping him/her navigate through a world of strange phenomena. Science, geography, history, literature, great personalities & much more.




*To the kind attention of AUTHORS on various subjects* - **Academic (India) Publishers** invite manuscripts on general topics from young and upcoming authors. Please contact –



**ACADEMIC (INDIA) PUBLISHERS**

508, Rattan Jyoti Building, 18 Rajendra Place, New Delhi-110008. Ph. : 25742171, 25812181

Fax : 91-11-25722671. E-mail : angelaip@del3.vsnl.net.in

**ಗಂ.ಹಾ:** (ನಗು) ಹೌದು. ರಾತ್ರಿ ನಾವು ಊಟನೇ ಮಾಡ್ತಿರ್ಲಿಲ್ಲ ರೀ, ಬಾಂಬೇದೊಳಗೆಲ್ಲೊ... ಕಾಲಬಾದೇವಿ ಇರಬೇಕು, ಅಲ್ಲೀಗ್ ಹೋಗ್‌ತಿದ್ವಿ. ಮಸಾಲಹಾಲು ಅಲ್ಲಿ ಕುಡೀತಿದ್ವಿ. ಎಲ್ಲ ಮರ್ತು ಹೋಗ್ಯದ.

**ವಿ.ವಾ :** ನೀವು, ಜೋಷಿಯವರು ಮತ್ತ ದಸ್ತೂರ್ ಅವರು ಮೂವರು ಗುರುಗಳ ಬಳಿ ಒಟ್ಟಿಗೆ ಕಲಿತ್ತಿದ್ದು ನೆನಪಿದೆಯಾ ?

**ಗಂ.ಹಾ:** ದಸ್ತೂರ ಬಾಂಬೇಕ್ಕ ಇರತಿದ್ದ. ಮುಂಚೆ ಅಲ್ಲೇ ಮನೀ ಮಾಡಿದ್ದನಂತ. ಗುರುಗಳು ಅವನ ಮನೀಗ ಹೋಗೇ ಕಲಿಸ್ತಿದ್ರಂತ. ನಾ ಹೋಗೇನಿ ಎಷ್ಟೋ ಸರ್ತಿ ಅವನ ಮನೀಗೆ. ಭೀಮಸೇನ್ ಮನ್ಯಾಗಿದ್ದ.

**ವಿ.ವಾ :** ನೀವೂ ಅವರು (ಜೋಷಿ) ಒಟ್ಟಿಗೆ ಕಲಿತದ್ದು

**ಗಂ.ಹಾ :** ಇಲ್ಲಿಲ್ಲ, ಒಟ್ಟಿಗೆ ಇಲ್ಲ ಇಬ್ಬರನ್ನೂ ಒಟ್ಟಿಗೆ ಸೇರಿಸ್ತಿರ್ಲಿಲ್ಲ. ಇಲ್ಲೇ ಮನ್ಯಾಗೇ ಇರ್‍ತಿದ್ದನಲ್ಲ ಭೀಮಸೇನ ? ನನಗ ಬೇರೇನ. ಅವಗ ಬೇರೇನ. ಸ್ವರ ಬೇರೇ ಇರಿತಿದ್ವಲ್ರೀ. ಅವನು-ನಾನು ಒಂದೊಂದ್ಸಲ ಏನ್ಮಾಡ್ತಿದ್ವಿ ಅಂದ್ರ. ಭೀಮಸೇನ ಇರ್‍ತಿರ್ಲಿಲ್ಲ, ಎಲ್ಲಾದ್ರೂ ಬ್ಯಾರೇ ಕಡೀಗ್ ಕಳಿಸಿರ್‍ತಿದ್ರು. ಬ್ಯಾಟ್ರಿ ತೊಗೊಂಡು ನನ್ನನ್ನ ಕಳಿಸಲಿಕ್ಕ ಬರ್‍ತಿದ್ದ. "ಗಂಗೂಬಾಯಾರ್‍ನ ಸ್ಟೇಷನ್ ತನ್ಕಾ ಕಳಿಸಲೇನರಿ ?" ಅಂತ ಗುರುಗಳಿಗೆ ಕೇಳುತ್ತಿದ್ದ. ದಾರ್‍ಯಾಗ ನಾವು ಅವರ ಹಾಡಿನ ಬಗ್ಗೆ ಮಾತಾಡಿಕೋತ ಹೋಗತಿದ್ವಿ. ಒಬ್ಬಾಕೀ ಎಂದೂ ಅಡ್ಯಾಡಿಲ್ಲ. ಇಲ್ಲ ಅವನಾರ ಬರಬೇಕು ಇಲ್ಲಾ ನಂ ಸೋದರಮಾವ ಬರಬೇಕು.

**ವಿ.ವಾ:** ರಾಮಣ್ಣ ಮತ್ತ ದತ್ತೋಪಂತ್ ಬಗ್ಗೆ ಸ್ವಲ್ಪ ಹೇಳರಿ.

**ಗಂ.ಹಾ:** ರಾಮಣ್ಣ ನನ್ನ ಸೋದರಮಾವ. ತಾಯಿ-ತಮ್ಮ, ಹೌದು ಕಾಣಸ್ತದ. (ಸ್ವಲ್ಪ ಮರೆವು) ತಾಯಿ ತಮ್ಮನೇ ಇರಬೇಕು. ಅವಾಂ... ಹಾಡಿಂದು ಭಾಳಾ, ತಬಲ ಬಾರಿಸ್ತಿದ್ದ. ದತ್ತೋಪಂತ ದೇಸಾಯರು ನಂ ಗುರುಗಳ ಸ್ನೇಹಿತರು. ಇಲ್ಲಿ ಬಂದು ಕೂಡತ್ತಿದ್ದರು, ಹುಬ್ಬಳ್ಳೀಲಿ. ಕುಂದಗೋಳಕ್ಕೂ ಬರತಿದ್ರು. ಅವರಿಗೆ ಹಾಡೂ ತಿಳೀತಿತ್ತು. ಏನಾದರೂ ತಪ್ಪಿದರ ಅದನ್ನ ಅಂದು ತೋರಿಸ್ತಿದ್ರು. ಇಲ್ಲೇ ಅದ ಅವರ ಫೋಟೋ ನೋಡೀರೇನು ?... ನಾ ಸಣ್ಣಾಕಿ. ಒಮ್ಮೊಮ್ಮಿ ಬ್ಯಾಸರ ಬರತಿತ್ತು. ಆವಾಗ ನಮ್ಮವ್ವ ಹೇಳತ್ತಿದ್ದಳು. "ನೋಡು ತಂ ಮನೀ ಬಿಟ್ಟು ನಂ ಮನೀಗ ಬಂದು ಕೂಡರತಾರ ತಾಸುಗಟ್ಲೆ. ನೀ ಅವರ ದೆಸಿಯಂದಾರ ಹಾಡೇ. ಪಾಪ ಅವರಿಗೆ ಕೆಟ್ಟ ಅನ್ನಿಸೋದಿಲ್ಲೇನು ?" ಆದರ ನಂಗ ಬ್ಯಾಸರ ಅಲ್ರೀ (ನಗು) ಕರ್ನಾಟಕೀ ಹಾಡೋದು ಬಿಟ್ಟ ಬಿಟ್ಟಳಾಕೀ, ನಿನ್ನ ಮೇಲೆ ಪರಿಣಾಮ ಆಗಿ ನಿನ್ನ ಹಾಡು ಕೆಡೋದ್ ಬ್ಯಾಡಾಂತ. ನಾ ಡ್ಯಾನ್ಸೂ ಕಲಿತೀನಿ. ಕಥಕ್ ಕಲಸೋರು ಬಂದಿದ್ರು ಇಲ್ಲಿ ಪ್ರತಾಪಲಾಲ್ ಮತ್ತು ಶ್ಯಾಮಲಾಲ್ ಅಂತ. ಒಂದು ಒಂದೂವರೀ ವರ್ಷ ಡ್ಯಾನ್ಸು ಮತ್ತ ಽ... ಝುಮ್ರಿ-ಗಿಮ್ರಿ ಕಲಿತಿದ್ದೆ ಡ್ಯಾನ್ಸ್ ಚಲೋ ಮಾಡತಿದ್ದೆ. ಯಾರೋ ಹೇಳದ್ರು ಡ್ಯಾನ್ಸ್‌ನಿಂದ ಆವಾಜಿನ ಮ್ಯಾಲ ಪರಿಣಾಮ ಆಗತದ ಅಂತ. ಅದಕ್ಕಽ ಬಿಟ್‌ಬಿಟ್ಟೇ. ಈಗ ಭಾಳಾ ಕೆಟ್ಟನಿಸ್ತದ. ಆವಾಗ ಕಲಿತಿದ್ದ ಬೋಲ್‌ಗಳನ್ನ ಬರದಿಡಬೇಕಾಗಿತ್ತು. ಆವಾಗ ಅಷ್ಟು ತಿಳಿವಳಿಕೀ ಇಲ್ಲ. ಕಥಕ್ ಡ್ಯಾನ್ಸೂ ಜೈಪುರದ ಕಡೀದು. ಲಖನೋದ್ದು ಬ್ಯಾರೆನೆ ಥರಾನಾ ಅದೆ. ಅದಕ್ಕೆ ಆ ಡ್ಯಾನ್ಸು ನೋಡಲಿಕ್ಕ ಭಾಳಾ ಇಷ್ಟ ಪಡ್ತೀನಿ. ಕಲತಿದ್ದು ನೋಡರಿ.

**ವಿ.ವಾ :** ನಿಮಗ ಧಾರವಾಡ ನೆನಪಾಗೋದು ಯಾವಾಗ ?

**ಗಂ.ಹಾ :** ಯಾವಾಗಲೂ ಆಗತದ. ಹನ್ನೆರಡು ವರ್ಷ ಕಾಯಂ ಹುಟ್ಟಿ ಬೆಳದೀನಿ ಅಲ್ಲಿ. ನಮ್ಮಜ್ಜ-ಅಜ್ಜಿ ಅಲ್ಲೇ ಇದ್ರು. ನಮ್ಮ ಶೇಷ ಇನ್ನೂ ಸಣ್ಣವ. (ಶೇಷಗಿರಿ ಹಾನಗಲ್)

**ವಿ.ವಾ :** ಧಾರವಾಡ ಅಂದ ಕೂಡಲೇ ಸಾಹಿತ್ಯ-ಸಂಗೀತ ಎರಡೂ...

**ಗಂ.ಹಾ :** ಹೌದರಿ. ಬೇಂದ್ರೆ ಮತ್ತ ಬೆಟಗೇರಿ ಕೃಷ್ಣಶರ್ಮ. ನಾ ಹಾಡೇನಿ, ಅವರ ಪದ್ಯಗಳನ್ನ. ಬೇಂದ್ರೇ ಅವರದಂತೂ ಭಾಳಾ ನಮ್ಮನ್ಯಾಗೆ.

ಈದ್ಗಾ ಮೈದಾನದಲ್ಲಿ ನಡೆದಿದ್ದರ ಬಗ್ಗೆ ಏನನಿಸ್ತದ ?

**ಗಂ.ಹಾ:** ಆವಾಗ ನಾ ಏನೋ ಹೇಳಿದನಲ್ರೀ. ನಂ ದೇಶ. ಬಾವುಟಾ ಹಾರಿಸಲಿಕ್ಕ ಜಾತಿ ಯಾಕ ಬೇಕು ? ಧರ್ಮ ಯಾಕ ಬೇಕೂಂತ ಏನೋ ಹೇಳಿದೆ ಕಾಣತ್ತಽದ. ಸರಿಯಾಗಿ ನೆನಪಾಗವಲ್ಲದು. ನಂ ಝಂಡಾಕ್ಕ ವಂದನ ಮಾಡಬೇಕು. ನಾ ಕಲಿತದ್ದು ರಾಷ್ಟ್ರೀಯ ಶಾಲೀ ಅಲ್ಲರಿ ? (ನಗು)

**ವಿ.ವಾ :** ಈ ವಿಚಾರಗಳು ಬಂದಾಗ ಗಾಂಧೀಜಿ ನೆನಪಾಗ್ತಾರ...

**ಗಂ.ಹಾ :** ನೆನಪಾಗ್ತಾರ. ನೆನಪಾಗ್ತಾರ, ೧೯೨೪ ಕಾಣ್ತದ ಬೆಳಗಾವ್ ಕಾಂಗ್ರೇಸ್ ಅಧಿವೇಶನದೊಳಗ ಹಾಡು ಹೇಳಿದ್ದೆ. "ಸ್ವಾಗತವು ಸ್ವಾಗತವು ಸಕಲ ಜನ ಸಂಕುಲಕೆ" ಅದನ್ನ ಒಬ್ಬರು ಕಲಸವ್ರು ಬಂದ್ರು. (ಅಣಕಿಸುತ್ತಾ) ಸಕಲ ಜನ ಸಮ್... ಕುಲಕೆ ಅಂತ ಹಾಡಿಸತಿದ್ರು. ನಾವೆಲ್ಲ ನಗತಿದ್ವಿ ಸಣ್ಣವರಲ್ಲ? ಐದು



ಶಿಷ್ಯ ಅಶೋಕ ನಾಡಿಗೇರ

**ವಿ.ವಾ :** "ನಾವು ಬ್ರಾಹ್ಮಣರಲ್ಲ ನಿಮ್ಮಂಥಾ ಬ್ರಾಹ್ಮಣರಿಗೆ ನೀರು ಹ್ಯಾಗೆ ಕೊಡೋದು ?" ಅಂತ ಕೇಳತಿದ್ರಂತೆ ನಿಮ್ಮವ್ವ. ಈಗೇನಾದ್ರೂ ಪರಿಸ್ಥಿತಿವಳಗ ಬದಲಾವಣೆ ಆಗೇದಂತಿರೇನು ?

**ಗಂ.ಹಾ :** ಅದೂ... ನಮ್ಮನೀ ವೆಂಕಟೇಶ್ವರ ಗುಡಿ... ಸ್ವಾಮಿಗಳು ಉಳೀತಿದ್ರು ನೋಡ್ರಿ ? ಅಲ್ಲಿತ್ತು. ಅಲ್ಲಿ ಊಟಕ್ಕೆ ಹೋಗತಿದ್ದವರೆಲ್ಲ ನಮ್ಮನೀಗೆ ನೀರು ಬೇಡಲಿಕ್ಕ ಬರಬೇಕು. ಎಲೀ ಹಚ್ಚಿ ಒಣಗಲಿಕ್ಕ ಇಟ್ಟಿರ್‍ತಿದ್ದಳು ನಮ್ಮವ್ವ. "ಎಲೀ ಹಚ್ತೀರಿ ಒಲೀ ಹಚ್ತೀರಿ. ಬ್ರಾಹ್ಮಣರಂಗೆ. ಬ್ರಾಹ್ಮಣರಲ್ಲಾಂತ ಸುಳ್ಳು ಯಾಕ ಹೇಳತೀರಿ" ಅಂತನ್ನತ್ತಿದ್ದರು ಮಂದಿ.

**ವಿ.ವಾ :** ಮೂವತ್ತಾಕು ವರ್ಷ (ಅಂದರೆ, ಸ್ವಾತಂತ್ರ್ಯ ಮತ್ತು ದೇಶ ವಿಭಜನೆಗೆ ಮುಂಚೆ) ಅಖಂಡ ಭಾರತದೊಳಗೆ ಬದುಕಿ ಬಾಳಿದವರು ನೀವು ಅನೇಕ ಮಂದಿ ಮುಸ್ಲಿಮ್ ಸಂಗೀತಗಾರರು, ಸಹ ಕಲಾವಿದರು ನಿಮಗ ಗೊತ್ತದ. ಕೆಲವು ವರ್ಷಗಳ ಹಿಂದೆ ಹುಬ್ಬಳ್ಳಿ ಮಂದಿ ಇದ್ದಿವಿ ನಾವು. ಒಂದು ಹುಡಿಗಿ ಕೇಳೇ ಬಿಟ್ಟಳು. "ಅಲ್ರೀ... ಹಂಗ್ಯಾಕೆ 'ಸೂಮ್‌ಽಽ...' ಅಂತೀರಿ ಅಂತ. ಮಹಾತ್ಮಾ ಗಾಂಧೀನ್ನ ಕಡೆಕಡೀಕ್ಕ ಭಾಳಾ ನೋಡೀನ್ರಿ. ಅಲ್ಲೇ ಮಟ್ಟಂಗೀ ಅಂತ ಒಬ್ರು ಇಂಜನೀರು ಇದ್ರು. ಅವರ ಮನೀವಳಗ ಉಳಿಸಿ ಕೊಂಡಿದ್ರು ನಮ್ಮನ್ನ. ದಿನಾ ಐದು ಗಂಟೇಕ್ಕ ಹೋಗಿ ಅಲ್ಲಿ ಕೂಡಬೇಕು, ಅವರ ಭಾಷಣಾ ಕೇಳಬೇಕು.

**ವಿ.ವಾ :** ನಿಮ್ಮದು 'ಗಡಸು'ದನಿ. ಕೆಲವು ಸರ್ತಿ ನೀವಽ... ತಮಾಷಿ ಮಾಡಿಕೋತೀರಿ. 'ಗಂಗೂಬುವಾ' ಅಂತ ವಿಜಯಾ ಮುಳೇವರು ತಮಾಷೀ ಮಾಡ್ತಾರ. ಕಿರಾಣಾ ಘರಾಣೇಕ್ಕ ನಿಂ ದನಿ ಹ್ಯಾಂಗ್ ಕೂಡ್ತು ?

**ಗಂ.ಹಾ:** ನೋಡ್ರಿ... ನನಗ ಟಾನ್‌ಸೆಲ್ಸ್‌ದು ಭಾಳಾ ತ್ರಾಸಿತ್ತು. ಇಪ್ಪತ್ತು ಮಿನಿಟು ಹಾಡಿದರ ಸಾಕು... ಇಲ್ಲಿಲ್ಲ ನೋಯಲಿಕ್ಕ ಹತ್‌ಬಿಡತಿತ್ತು... ನರ ಎಳ್ದ ಹಿಂಗ್ ಎದ್ದು ಬಿಡಬೇಕು. ಹಂಗಾಗತಿತ್ತು, ಕೇಳೋರು ಸುದ್ದಾ ಅನಬಕು "ಬಾಯೀ ಉದೋ ಗಾ" ಅಂತ. ಎದ್ದು

ಬಿಡರಿ ಹಾಕಿನ್ನು ಅಂತ. ಹಿಂದಾಗಡೀಗೆ ತೋರಿಸಿದ ಕೂಡಲೆ ಡಾಕ್ಟರ್ ಹೇಳಿದ್ರು, ಟಾನ್‌ಸೆಲ್ಸ್ ತೆಗೆಸಿಬಿಡಬೇಕು ಅಂತ. ಕೆಲವು ಮಂದೀ ಹೇಳಿದರು ಈ ದನೀ ಉಳೀತದೋ ಇಲ್ಲೋ ಹೇಳಲಿಕ್ಕ ಬರೊದಿಲ್ಲ. ಚೇಂಜ್ ಆಗಭೋದು ದನಿ. ಚೇಂಜ್ ಆಗತಿದ್ದ ನಾವಲ್ಲೇ...ವಲ್ಲೇ. ದಿನಾ ಇಪ್ಪತ್ತೇ ಮಿನಿಟ್ ಹಾಡತೀನಿ ಅನಬೇಕು ನಾನು. ಇಲ್ಲೇ ಒಬ್ರು ದೊಡ್ಡ ಡಾಕ್ಟರ್ ಇದ್ರು. ತ್ರಾಸಾದಾಗ ಗುಳಗೀ ಕೊಡತಿದ್ರು. ಏನಾರ ಹಚ್ತಿದ್ರು... ಆರಾಮ ಅನಸತಿತ್ತು. ಹೋಗಬರತ್ತಿದ್ದೆ. ಒಮ್ಮೆ ಅವರಾಗೇ ಏನಂದ್ರು... ನೋಡ್ರೀ ಒಂದ್ ಮೂರ್‍ನಾಕು ದಿವಸಾ ಸವಡಿದ್ದಾಗ ಬರ್ರೀ (ಬಿಡುವು) ನೋಡ್ರೋಣು. ಥಾಬ್ರೀ ಆದೆ. ನಾಕು ದಿವಸಾ ಅಂದರ... ಅಡ್ಮಿಟ್ ಮಾಡಕೋತಾರೇನೋ ಅಂತ. ನಮಗ ಗೊತ್ತಿಲ್ಲಲ್ಲರೀ... ದವಾಖಾನೇದ್ದು. ಗಣಪತಿ ಹಬ್ಬಕ್ಕ... ಅನಂತ ಚತುರ್ದಶಿ ಇನ್ನೂ ಗಣಪತಿ ಇತ್ತು... ಅವಾಗ ಹಾಡಲಿಕ್ಕ ಕೂಡರತಿದ್ದೆ. ಆ ಡಾಕ್ಟರೂ ಅವತ್ತ ಬಂದಿದ್ರು. ಸವಡಿದ್ದಾಗ ಬನ್ರಿ ಅಂದ್ರು. ಮನೀಯವರೆಲ್ಲ ಅಂದ್ರು ನಿನಗಿಷ್ಟು ತ್ರಾಸಾಗತದೇ ಅಂತಿ. ಯಾಕ ಹೋಗಬಾರದು ಡಾಕ್ಟರ್ ಕಡೀಕ. ಆಪರೇಷನ್ ಮಾಡ್ತಾರ ಅಂಬೋದು ಗೊತ್ತಿರಲಿಲ್ಲ. ಅವರು ಒಳಗ ಕರಕೊಂಡು ಹೋಗಿ... ಸುಟ್ರು ಕಾಣಿಸತದರೀ. ಇಷ್ಟು ಉರಿ ಉರಿ ಆತು. ಮಾತಾಡಿಲಿಕ್ಕಽ... ಬರವಲ್ದು. ಆಮೇಲೆ ಆವಾಜ್ ದೊಡ್ಡದಾತು. ನೋವು ಹೋಗಽ ಬಿಡ್ತು... ಇವತ್ತಿನ ತನಕಾ ಇಲ್ಲ. ನನ್ ದನೀ ಹಿಂಗಿದ್ರೂ ನಂ ಮಂದಿ ನನಗ ಭಲೋ ಗೌರವ ಕೊಟ್ಟಾರ ರೀ.

**ವಿ.ವಾ :** ಸಂಗೀತಕ್ಕ ಸಂಬಂಧಪಟ್ಟಂಗೆ... ನಿಮ್ಮ ಸ್ವಾಭಿಮಾನಕ್ಕ ಪೆಟ್ಟಾಗಿ... ನೀವು ಸಿಟ್ಟಾಗಿದ್ದು... ಏನಾರ...

**ಗಂ.ಹಾ :** ಪ್ರೋಗ್ರಾಂ ಕ್ಯಾನ್ಸಲ್ ಆದಾಗ ಬೇಸರ ಆಗತ್ತಿತ್ತು. ಗಂಗೂಬಾಯಿ ಹಾಡಿದ ಮೇಲೆ ನಾವು ಹಾಡಂಗಿಲ್ಲಂತ ಕೆಲವರು ಹೇಳತ್ತಿದ್ರಂತೆ. ಏನೋಪ್ಪ ನಂಗೊತ್ತಿಲ್ಲ. ನಂಗಂತೂ ಸಿಟ್ಟು ಬರತಿರಲಿಲ್ಲ. ಯಾರ ಮ್ಯಾಲು ಸಿಟ್ ಮಾಡಿದಾಕೀ ಅಲ್ಲ ನಾ.

**ವಿ.ವಾ :** ೧೯೩೭. ನಿಮ್ಮ ಪಾಲಿಗೆ ಭಾಳಾ ಇಂಪಾರ್‌ಟೆಂಟು. ನಾಡಿನ ಉದ್ದಗಲಕ್ಕ ನಿಮ್ಮ ಕೀರ್ತಿ ಬೇಳೀತು. ಗಂಗೂಬಾಯಿ ಹುಬಳೀಕರ್ ಇಂದ ಗಾಂಧಾರೀ ಹಾನಗಲ್ಲಾಗಿ... ನಂತರ... ಗಂಗೂಬಾಯಿ ಹಾನಗಲ್ ಆದ್ರಿ. ನಾನೀಗ ನಿಮಗ ಗಂಗೂಬಾಯಿ ಭಾರತೀಕರ್ ಅಂತ ಕರಿಬಹುದಾ ?

**ಗಂ.ಹಾ:** (ನಗು) ಏನ್ ಕರದರೂ ಅಷ್ಟೆ. ಇನ್ನೇನು ಉಳದಽ...ದ (ನಗು)

**ವಿ.ವಾ:** ''ನಿಮ್ದು ಕಿರಣಾ ಘರಾಣಾ; ನಮ್ದು ಕಿರಾಣಿ ಅಂಗ್ಡಿ.''

**ಗಂ.ಹಾ:** ಭೀಮಸೇನ್ ಅಂದಾನ, ಅವಾ ಹಂಗನ್ನತ್ತಿದ್ದ. ಅವ ಏನ್ ಬೇಕಾದ್ರೂ ಹಾಡತ್ತಿದ್ದ. ನಾನು ಝುಮ್ರಿ ಗಿಮ್ರಿ ಹಾಡೋದು ಬಿಟ್ಟಽ... ಬಿಟ್ಟೆ. ರೆಕಾರ್ಡ್ ಸಲುವಾಗಿ ಮರಾಠಿ ಪದ ಹಾಡತ್ತಿದ್ದೆ. ಅದರ ಮೇಲೆ ದ್ವೇಷ ಅಲ್ಲ. ನಮಗ ಸ್ವತಾಕ್ಕೆ ಏನ್ ಸೇರತಽದ ಅದನ್ನ ಹಾಡೋದು. ಒಮ್ಮೆ ಉಡುಪಿವಳಗಾ ಪ್ರೋಗ್ರಾಂ ಇತ್ತು. ಆ ಸ್ವಾಮಿಗಳು... ಇಲ್ಲಿ ಬರ್‍ತಾರಲ್ಲರೀ ಹಗಲೆಲ್ಲ (ಸ್ವಲ್ಪ ನೆನಪಿಸಿಕೊಂಡು) ಪೇಜಾವರ ಸ್ವಾಮಿಗಳು... ಅಲ್ಲಿ ಕಾರ್ಯಕ್ರಮ ಇತ್ತು. ನೀವು ಪ್ರಸಾದ ತೊಗೊಳ್ರಿ ಹಿಂದಾಗಡೀಯಿಂದ ಸೇವಾಮಾಡ್ರಿ ಅಂದ್ರು. ನಾನು ಮೊದಲು ಸೇವಾ ಮಾಡ್ತೀನಿ, ಪ್ರಸಾದ ಹಿಂದಾಗಡೀಕ್ಕ ಕೊಡ್ರಿ ಅಂದೆನಾ, ಕೃಷ್ಣಾ ನನ್ನ ಸಂಗ್ತಿ ಇದ್ದಳು. ಪೇಜಾವರ ಸ್ವಾಮಿಗಳು ಇದ್ರು. ಇನ್ನೂ ಯಾರೋ ಒಬ್ರು ಇದ್ರು. ನೆನಪಾಗವಲ್ದು. ದೀಡ್‌ತಾಸು ಹಾಡಿದೇರಿ. ಸುಮ್ಮನಾಗಿ ಬಿಟ್ಟೆ. ''ಯಾಕ ?'' ಅಂದ್ರು. ನಂಗ ದೇವರ ಹಾಡು ಬರೋದಿಲ್ಲರೀ ಅಂದೆ. ನನ್ನ ಹಾಡು ಹಾಡುವಾಕೀ ಅಂದೆ. 'ನೀವು ಯಾವಾದಾದ್ರೂ ಹಾಡ್ರೀ... ಎಲ್ಲ ಅವಂಗೇ ಮುಟ್ಟತಽದ' ಅಂದ್ರು. ನನಗ ಭಾಳಾ ಸಮಾಧಾನ ಆತು. ಕೂತೋರೆಲ್ಲ ಅನಬಾರದು ನೋಡ್ರಿ... ಈಕೀ ಏನ್ ಸೈಯ್ಯಾ... ಪಿಯ್ಯಾ ಅಂತೆಲ್ಲಿ ಹಾಡತಾಳ ಅಂತ ? ಕೊನೀಗೆ ನನ್ ಮಗಳು ಹಾಡಿದಳು. ಅದಕ್ಕ ಅಂದಿದ್ದಾನು ಅವಾ 'ನಮ್ದು ಕಿರಾಣೀ ಅಂಗ್ಡಿ' ಅಂತ.

**ವಿ.ವಾ:** ನೀವು ಹತ್ ಹತ್ತರ ಒಂದು ನೂರು ವರ್ಷಗಳ ಕಾಲ ಈ ದೇಶದ ಜನಗಳನ್ನ ನೋಡಿಕೋತ ಬಂದವರು. ದೇಶ ವಿದೇಶಗಳನ್ನೆಲ್ಲ ಸುತ್ತಿ ಬಂದೀರಿ. ನಾನಾ ಜನಗಳು ನಿಮಗೆ ಭೆಟ್ಟಿ ಆಗಿದ್ದಾರ. ಕೆಲವು ವಿಶೇಷ ವ್ಯಕ್ತಿಗಳು ನೆನಪಾಗತಾರ. ಜೋಷಿಯವರು, ದಸ್ತೂರ್ ಅವರು... ಅಲ್ಲದೇ ಅಮರಗಾಯಕ ಸೈಗಾಲ ಕೂಡ ನಿಮ್ಮನ್ನ ಭೆಟ್ಟಿಯಾಗಿದ್ದ...


'ಫೆರಾರಿ ಮಾರಿದ ಫಕೀರ' ಎಂಬ ನಂಬರ್ ವನ್
ಅಂತಾರಾಷ್ಟ್ರೀಯ ದಾಖಲೆ ಮಾರಾಟವಾದ ಪುಸ್ತಕದ
ಲೇಖಕರಾದ **ರಾಬಿನ್ ಶರ್ಮಾ** ಅವರ ಕೃತಿ

# ಮಹಾನ್ ಮಾರ್ಗದರ್ಶಿ

'ಮಹಾನ್ ಮಾರ್ಗದರ್ಶಿ'ಯ ಪುಟಗಳಲ್ಲಿರುವ 'ಗಾಂಧಿಯೊಡನೆ ಕಾಫಿ ಕುಡಿಯಿರಿ', 'ಸೂಪರ್ ಸ್ಟಾರ್‌ನಂತೆ ಮಾತಾಡಿ', 'ಪ್ರಥಮದರ್ಜೆಗೇ ಬದ್ಧರಾಗಿ', 'ಸಮಸ್ಯೆಗಳು ಪ್ರತಿಭೆಯನ್ನು ತೋರಿಸುತ್ತವೆ', 'ಹುದ್ದೆಯಿಲ್ಲದ ನಾಯಕತ್ವ', 'ಹೆಚ್ಚು ಅನುಭವವುಳ್ಳವರು ಹೆಚ್ಚು ಗೆಲ್ಲುತ್ತಾರೆ' ಮುಂತಾದ ಅಸಾಧಾರಣ ಸಲಹೆಗಳು ನಿಮ್ಮಲ್ಲಿ ಶಕ್ತಿ ಸಂಚಾರ ಮಾಡಿಸಿ ಕ್ರಿಯಾಶೀಲತೆಗೆ ನೂಕುತ್ತವೆ. ಈ ಪುಸ್ತಕವು ನಿಮ್ಮ ದಿನಗಳಿಗೆ ಹೊಸ ಉಸಿರನ್ನು ನೀಡಿ, ನೀವು ಓರ್ವ ಮನುಷ್ಯರಾಗಿ ಭರ್ಜರಿ ಆಟವಾಡುವಂತೆ ಪ್ರೇರಿಸುತ್ತದೆ.

JAICO PUBLISHING HOUSE
127, M.G. Road, Mumbai - 400 023 Tel : 022-22676702, 22676802, 226745501, Fax : 22656412

BANGALORE BRANCH
14/1, 1st Main Road, 6th Cross, Gandhinagar, Bangalore - 560 009
© 22267016, 22257083




**ಗಂ.ಹಾ:** ಕಲ್ಕತ್ತಾಕ್ಕ ಮುಂಚಿನ ಸರತಿ ಹೋದ್ನೆಲ್ಲ... ಅಂಜಿಕೋತ ಹಾಡ್ದೆ. ಅಯ್ಯೋ ಕಲ್ಕತ್ತಾಕ್ಕ ಎಷ್ಟು ದೊಡ್ಡ ದೊಡ್ಡೋರು ಬರ್ತಾರ... ನನ್ನ ಹಾಡು ಹೆಂಗಪ್ಪಾಂತ. ಆದರೆ ನಾಲ್ಕು ಮೆಡಲ್ ಅನೌನ್ಸ್ ಆದವು. ಆವಾಗ ನನಗ ಇದನ್ನ ನನ್ನ ತಾಯಿ ನೋಡಲಿಲ್ಲ ಅಂತ.... ಮತ್ತಾಕೀ ನಾ ಸಣ್ಣಾಕೀ ಇದ್ದಾಗ ಕರ್ನಾಟಕೀ ಹೇಳತಿದ್ದಳಲ್ಲ? ನಾ ತಾಳಾ ತಪ್‌ತಿದ್ದೆ. ಆಕೀ ನನ್ನ ಹಿಡಕೊಂಡೇ ಕೂಡರತಿದ್ದಳು. ನನ್ ಬೆನ್ ಮ್ಯಾಲೆನೇ ತಾಳ ಹಾಕತಿದ್ದಳ್ರೀ. ಇದೆಲ್ಲ ನೆನಪಾತು. ಪರದೇದ ಹಿಂದೆ ಬಂದು ಅಳಕೋತ ಕೂತಿದ್ದೆ. ಆಕೀ ಆಪರೇಷನ್‌ದಾಗ ಹೊಲಿಗಿ ಬಿಚ್ಚಿ ಸತ್ತೋದಳು. ನಂ ತಾಯಿ ನೋಡಲಿಲ್ಲ ಅಂತ ಕೂತಿದ್ದೆ. ಆವಾಗ ಸೈಗಾಲ ಬಂದು ''ವಾಹ್...ಬಾಯಿ'' ಅಂತ ಬೆನ್ನ ಮೇಲೆ ಕೈ ಇಟ್ಟ. ನನಗ ನನ್ನ ತಾಯಿ ಕೈ ಇಟ್ಟು ತಾಳಾ ಹಾಕತಿದ್ದಳಲ್ಲ? ನೆನಪಾತು. ಭಾಳಾ ಆನಂದಾತು. ಹಿಂತಿರುಗಿ ನೋಡ್ತೀನಿ ಸೈಗಾಲ! ಅಂಜಿಕಿ ಆಯ್ತು. ರಾಮು ರಾಮು ಅಂತ ಒದರಲಿಕ್ಕ ಹತ್ತಿದೆ. ನಂ ಸೋದರಮಾವ. ಏನಾತು? ಯಾಕ ಹೀಂಗ ವದರಲಕ್ಕ ಹತ್ತಿದಿ ಅಂತ ಓಡಿಬಂದಾ. ಯಾರೋ ಗಂಡಸರು ಕೈ ಹಿಡೀಲಕ್ಕ ಬಂದಾರ. ಬಾರೋ. (ನಗು) ಗೊತ್ತಿಲ್ಲರೀ ನಮಗ.

**ವಿ.ವಾ:** ನೀಲಕಂಠ ಬುವಾ... ಕಾಗಲಕರ್ ಬುವಾ... ?

**ಗಂ.ಹಾ:** ನೀಲಕಂಠ... ನಂ ಗುರುಗಳ ಶಿಷ್ಯಾ ಅವಾ. ಕಾಗಲಕರ್ ಬುವಾ... ಹೌದು...ನೋಡೀನಿ.

**ವಿ. ವಾ. :** ಕರೀಮ್‌ಖಾನ್ ಸಾಹೇಬರನ್ನ ನೋಡಿರೇನು ?

**ಗಂ.ಹಾ:** ನೋಡೇನಿ... ನೋಡೇನಿ. ನಂ ತಾಯಿ ಹಾಡು ಕೇಳಲಿಕ್ಕ ಬಂದಿದ್ರು ಅವರು. ಕರ್ನಾಟಕೀ ಹಾಡತ್ತಿದ್ದಳಲ್ಲ? ಭಲೋ ಅನ್ನಿಸತ್ತಿತ್ತು ಅವರಿಗೆ. ಹಾಡಿರಿ ಅಂತಿದ್ರು. ಹಾಡಿದಳಾಕೀ. ಭಾಳ ಆನಂದಾತು ಅವರಿಗೆ. ''ನನಗ ಇವತ್ತು ತಂಜಾವೂರನಾಗ ಕೂತಹಂಗನ್ನಿಸ್ತದ'' ಅಂದ್ರು. ತಂಜಾವೂರದು ಹಾಡು ಪ್ಯೂರ್ ಅಂತ. ಕರ್ನಾಟಕೀ.



ಜೋರಾಬಾಯಿ ಆಗ್ರೇವಾಲೀನ.... ಕೇಳುತ್ತಾ

**ವಿ.ವಾ:** ಅವರು ಕನ್ನಡ ಮಾತಾಡ್ತಾ ಇದ್ದರೇನು ?

**ಗಂ.ಹಾ:** ಇಲ್ಲ ಇಲ್ಲ... ಏನೋ ಬಂದಷ್ಟು ಏನಾರೂ ಮಾತಾಡ್ತಾ ಇದ್ರು. ನಾನೂ ಬಾಜೂಕ್ಕ ಕೂತಿರುತಿದ್ದೆ. ನೀ ಹಾಡತ್ಯೇನು ? ಅಂತ ಕೇಳಿದ್ರು ''ಹೂ'' ಅಂದಬಿಟ್ಟೆ.

ಹೆದರಿಕೆ ಪದರಿಕೆ ಗೊತ್ತಿಲ್ಲ. ''ರಾಧೇ ಕೃಷ್ಣ ಬೋಲೊ'' ಹೇಳ್ದೆ ಕಾಣತದೆ. ಆವಾಗೇ ಹೇಳಿದ್ದು ''ಖೂಬ್ ಖಾನಾ, ಖೂಬ್ ಗಾನಾ'' ಅಂತ (ನಗು).

**ವಿ.ವಾ:** ಖಾನ್ ಸಾಹೇಬ್ರು ಅಮೀರ್ ಖಾನ್ ಅವರ ಮೇಲೂ ಪರಿಣಾಮ ಬೀರಿದ್ರು ಅಂತಾರ.

**ಗಂ.ಹಾ:** ಏನೋಪ್ಪಾ... ನಂಗೊತ್ತಿಲ್ಲ. ಅವರನ್ನೂ ಕೇಳೀನಿ. ಬಡೇ ಗುಲಾಮ ಅವರದೂ ಕೇಳೀನಿ. ಆವಾಗ ಬಾಂಬೇಕ್ಕ ಕಾನ್‌ಫರೆನ್ಸ್ ಆಗ್ತಿದ್ದಿಲ್ಲ. ಬನಾರಸ್, ಕಲ್ಕತ್ತಾಕ್ಕ ಹೋಗತಿದ್ವಿ. ಒಮ್ಮೆ ಕಲ್ಕತ್ತಾಲೀ ಅರವತ್ತು ಮಂದಿ ಸಂಗೀತಗಾರರನ್ನು ಕರಸಿದ್ರು. ನಾನೂ ಹೋಗಿದ್ದೆ. ಭಾಳಾ ಸಣ್ಣಾಕಿ. ಕೇಸರ ಬಾಯಿ ಕೂಡ ಬಂದಿದ್ರು. ಅವರ ಗುರು ಅಲ್ಲಾ ಉದ್ದೀನ್ ಸಾಹೇಬ್ರು ಬಂದಿದ್ರು. ರವಿಶಂಕರನ ಮಾವ. ಅವರು ಬಾರಸ್ತಾರ ಅಂದ ಮ್ಯಾಲ ಎಲ್ಲ ಸುಮ್ಮನಾದ್ರು. ಇಲ್ಲದಿದ್ರೆ ಜಗಳಾಗ್ತಾ ಇತ್ತು. ನಾಮುಂದ ನಾಮುಂದ ಅಂತ. ತಿರಖ್ವಾ ಸಾಹೇಬ್ರು ಬಂದಿದ್ರು. ತಬಲಕ್ಕ. ನನ್ನ ಸಂಗ್ತಿ ಅವರು ತಬಲಕ್ಕ ಹೆಂಗ್ ಕುಂಡರತಿದ್ದರಂತೀ? ಹೀಂಗ... ಏಲೋ ಪೋಸ್‌ನಲ್ಲಿ ಕೂಡತಿದ್ದರು. ಭಾಳಾ ಮಜಾ ಅಂತ ಅನ್ನಿಸತಿತ್ತು, ನಾನೂ ಸಹSS...ಜ ಕೇಳೇಬಿಟ್ಟೆ ''ಕ್ಯೊಂ ಖಾನ್ ಸಾಬ್... ಆಪ್ ಐಸೇ ಕ್ಯೊಂ ಬೈಠತೇ ಹೈ ?'' ಅವರು ಏನನಬೇಕು ? ''ಅಲ್ರಿ... ಇಲ್ಲಿ ಭಾಳಾ ಮಂದಿ ಗಾಯಕರಿಗೆ ಉಠಾವ್ ಬೇಕಲ್ಲ? ಅದಕ್ಕನಾ ಹಂಗ ಕೂತಕೊಂಬೋದು!'' (ನಗು)

**ವಿ.ವಾ:** ಕುಮಾರ ಗಂಧರ್ವ...

**ಗಂ.ಹಾ:** ಮೊದಲಿಂದಲೂ ಗೊತ್ತರೀ ಅವಾ. ಬಾಂಬೇದೊಳಗ ನಾವು ಒಟ್ಟಿಗೇ ಇರತಿದ್ವಿ. ಒಂದನೇ ಮಜಲಿನಾಗ ನಾನು ಇದ್ದೆ ಅವಾ ಮೂರನೇ ಮಜಲಿನಾಗಿದ್ದ ದೇವಧರ ಸಂಗ್ತಿ. ನಾವು ಒಂದು ಖೋಲಿ ಹಿಡಿದಿದ್ವಿ. ಇಷ್ಟು ಖೋಲಿಗೆ ಐನೂರು ರೂಪಾಯಿರೀ ರೇಡಿಯೊಕ್ಕ ಎರಡು ಸರಿ ಹೋಗಬೇಕಾಗತ್ತಿತ್ತು. ಅವನವು ಎರಡು ತಂಬೂರಿ. ನನ್ನವು ಎರಡು ತಂಬೂರಿ. ಅವಂದು ಒಂದು ಕಾಟು (ಮಂಚ) ಯಾರಾದ್ರೂ ಹೆಚ್ಚಿಗೆ ಬಂದರ ಹೊರಗ... ಜಾಲರ‍್ಯಾಗ ಮಲಗಬೇಕು (ನಗು)

**ವಿ.ವಾ:** ಅಮೃತಸರ ಪ್ರೋಗ್ರಾಂ ನೆನಪದೇನು ?

**ಗಂ.ಹಾ:** ಅಮೃತಸರದೊಳಗ... ದೇವರಿಗೆ ಒಕಳಿ ಆಡತ್ತಿದ್ದರ್ರೀ. ಅವರವರS... ಹಾಕ್ಕೋತಿದ್ರು. ನಮಗ ಹಾಕತ್ತಿದ್ದಿಲ್ಲ ಒಕಳೀ ಆದ ಮ್ಯಾಲ ಹಾಡು. ನಾ ಹಾಡಕ್ಕ ಕೂತಾಕೀ ನೋಡ್ತೀನಿ... ಎಲ್ಲರ ತಲೀನೂ ಬಣ್ಣ-ಬಣ್ಣ! ಬಣ್ಣ ಬಣ್ಣದ ಹೂವಿನ ತೋಟ ದೊಳಗಿದ್ದ ಹಂಗನ್ನಿಸೋದು. ಹೂಗಳು ಗಾಯನಕ್ಕ ಗೋಣು ಹಾಕತ್ವೇನೋ ಅನಬೇಕು. ಹಂಗ. ಅಮೃತಸರದಾಗ ಸಂಗೀತ ಭಾಳಾ ಬಿಡರಿ. ಐದಾರು ವರ್ಷ ಹೋಗೇನಿ ಅಲ್ಲಿ. ಪೇಶಾವರ್ ತನಕಾ ಹೋಗೇನಿ.

**ವಿ.ವಾ:** ೧೯೪೩ರ ಗಯಾ ಸಮ್ಮೇಳನ. ಕುಮಾರ ಗಂಧರ್ವ ಮಿಮಿಕ್ರಿ ಮಾಡತ್ತಿದ್ರು. ಓಂಕಾರನಾಥರ ಥರಾನೇ ಹಾಡ...

**ಗಂ.ಹಾ:** ಮಾಡತ್ತಿದ್ದ... ಮಾಡ್ತಿದ್ದ... ಎಲ್ಲರದ್ದೂ ಮಾಡ್‌ತಿದ್ದ. ಭಾಳ ಶಾಣ್ಯಾ ಇದ್ದರೀ. ಭಾಳಾ ಶಾಣ್ಯಾ ಇದ್ದ. ನಾನು ನಂ ಸೋದರಮಾವ ಮತ್ತ ಅವನು ಖೋಲ್ಯಾಗ ಕುಂತು ಕತೀ ಹೇಳೋದು... ಆಡಿಕೋತ ಕೂಡೋದು. ಆಟದಾಗ ಗೆದ್ದ ಅಂತ ಕೂಡಲೇ ಒದರುತ್ತಿದ್ದ. ಬಾಜೂದವರು ಬಂದು ಯಾಕ ಹಿಂಗ ವದರ‍್ತೀರಿ ಅಂತ ಬೈತಿದ್ರು. ಭಾಳಾ ಮಜಾ ಇತ್ತು. ಬಿಡರೀ. ಭಾಳಾ ಮಜಾ ಇತ್ತು! ಈಗ ಬಾಂಬೇ ಅಂದರ ನಮಗ ಪರದೇಶ ಆದ್ಹಾಂಗ ಆಗೇದ. ಮುಂಚೆ ಮನೀ ಗಣಪತಿ ನೋಡಕ್ಕ ಸಿಗತಿರಲಿಲ್ಲರೀ ನನಗ. ಅಷ್ಟು ಪ್ರೋಗ್ರಾಂ ಆಗ್‌ತಿದ್ದವು ಬಾಂಬೇಲಿ. ಲೇಮಿಂಗ್‌ಟನ್ ರೋಡ್‌ನಾಗೆ ನನ್ನ ಪ್ರೋಗ್ರಾಂ ಇದ್ದರ, ಇನ್ನೊಂದ್ ಕಡೀಕ ಹೀರಾಬಾಯ್ದು ಇರ‍್ತಿತ್ತು! ಎರಡು-ಮೂರು ಲೌಡ್ ಸ್ಪೀಕರ್ ಕೂಡತ್ತಿದ್ವಂತೆ ರೋಡಿನಾಗ. ಪಿ. ಎಲ್. ದೇಶಪಾಂಡೇ ಬರದಾರ ನೋಡರಿ.

**ವಿ.ವಾ :** ಆತ್ಮ ಮಧ್ಯಗತಃ ಪ್ರಾಣಃ, ಪ್ರಾಣ ಮಧ್ಯಗತೋ ಧ್ವನಿಃ।
ಧ್ವನಿ ಮಧ್ಯಗತೋ ನಾದಃ, ನಾದ ಮಧ್ಯೇ ಸದಾಶಿವಃ॥

ಇದು ನಾರದ ಋಷಿಗಳು ತ್ಯಾಗರಾಜರಿಗೆ ಕೊಟ್ಟ ಸ್ವರಾರ್ಣವ ಅಂಬೋ ಗ್ರಂಥದ್ದು. ಸ್ವರ ಸಾಕ್ಷಾತ್ಕಾರ. ರಸಾನಂದ, ಅನಾಹತ ಅಂತೆಲ್ಲ ಹೇಳ್ತಾರಲ್ಲ, ಅದು ಹೇಗಿರತದೆ ? ನಿಮ್ಮ ಅನುಭವಾ ಹೆಂಗ ?

**ಗಂ. ಹಾ :** ಹೇಳ್ತೀನಿ. ನನಗ ಷಡ್ಜ ಹಚ್ಚತ್ತಿದ್ದನಲ್ಲ? ಮ್ಯಾಲಿನ ಷಡ್ಜ ಹಚ್ಚೋ ಮುಂದ... ಎಷ್ಟು ಉಸುಲದೋ ಅಲ್ಲಿ ತನಕಾ (ಉಸಿರು) ಉಸಲು ಮುಗದ್ರ ಕೆಟ್ಟ ಅನಸತಿತ್ತು, ಅಯ್ಯಯ್ಯೋ ಇನ್ ಸ್ವಲ್ಪು... ಮತ್ತೊಮ್ಮೆ ಹಚ್ಚತ್ತಿದ್ದೆ... ಅದನ್ನS... ಒಮ್ಮೊಮ್ಮೆ ಆನಂದ ಆಗಬಿಡಬೇಕು. ಕಣ್ಣSS... ತೆಗೀಬೇಕು ಅಂತ ಅನಿಸ್ತಿರಲಿಲ್ಲ! ಅದS... ಖರೇ ಆನಂದಾ! ಕೆಲವರು ಹೇಳ್ತಿದ್ರು... ಎಲ್ಲಾರ್ಗೂ ಆಗೋದಿಲ್ಲ ಅದು... ನೀ ಪುಣ್ಯವಾನ ಇದ್ದಿ... ದೈವಾನ ಇದ್ದೀದಿ. ನಂ ಘರಾನದೊಳಗ ಸ್ವರಕ್ಕ ಮಹತ್ವ ಅದ ನೋಡರಿ!

**ವಿ.ವಾ:** ನೀವು ಅಮೆರಿಕಾಕ್ಕ ಹೊರಡೋ ಮುಂದ ಬೇಂದ್ರೆ ಮಾಸ್ತರ ರೇಲ್ವೆ ಸ್ಟೇಷನಕ್ಕ ಬರ್ತಾರ...

**ಗಂ.ಹಾ:** ಹೌದೌದು. ಧಾರ್ವಾಡದ ಸ್ಟೇಷನ್‌ಕ ಬಂದ್ರು... ಈ ಧ್ವನಿ ಅಲ್ಲೀಗ್ ಮುಟ್ಟಬೇಕೂಂತ ಹೇಳಿದ್ರು. ಭಾಳಾ... ಆನಂದಾತಪಾ... ಅವರವೆಲ್ಲ ಹಾಡು ನನ್ನ ಮಗಳು ಹಾಡತಿದ್ಲು. ಭಾಳ ಆಕೀಗ. ಯಾವಾಗಾರS... ಅವರ ಮಗ ಭೆಟ್ಟ್ಯಾಗತ್ತಿದ್ದರು. ಈಗ ಅದೂ ಇಲ್ಲ.

**ವಿ.ವಾ:** ನೀವು ಬುದ್ಧಿಪೂರ್ವಕವಾಗಿ ಹಾಡ್ತಾ ಇದ್ರೊ... ಭಾವಪೂರ್ವಕವಾಗಿ ಹಾಡ್ತಿದ್ದರೋ... ಅಂದರ...

**ಗಂ.ಹಾ:** ಅದೇನೂ ನನಗ ತಿಳೀತಿರಲಿಲ್ಲರೀ. ನಾ ಹಾಡ್ತಿದ್ದೆ. ಕೆಲವು ಸರ್ತಿ ನನಗs... ಆನಂದ ಆಗಬಿಡತಿತ್ತು... ಒಮ್ಮೊಮ್ಮಿ ಪ್ರಯತ್ನ ಮಾಡಬೇಕಾಗಿತ್ತು. ಒಮ್ಮೊಮ್ಮಿ ತಾನೇ ತಾನಾಗಿ ಆಗ್ತಿತ್ತರೀ... ನನಗ ಹೀಂಗ... ಆನಂದ ಆಗ್ತದರೀ ಅಂದಾಗ ಪುಣಾಲೀ ಒಬ್ರು ಹೇಳಿದ್ರು. ಎಲ್ಲರಿಗೂ ಆಗೋದಿಲ್ಲರೀ ಅದು ಅಂತ.

**ವಿ.ವಾ:** ಕಿರಾನಾ ಘರಾಣೇದ ಠುಮ್ರಿ ಭಾಳ ಛಂದ ಇರ್ತವ ಅಂತಾರ. ಕರೀಮ್ ಖಾನ್ ಸಾಹೇಬ್ರು ತುಂಬ ವಿಶಿಷ್ಟವಾಗಿ ಹಾಡತ್ತಿದ್ದರಂತ...

**ಗಂ.ಹಾ:** ಹೌದರಿ. ಅವರು ಛಂದ ಹಾಡ್ತಿದ್ರು. ನಂ ಗುರುಗಳು ಬರೇ ಮರಾಠಿ ಪದಗಳನ್ನ ಹೇಳತ್ತಿದ್ರು. ಈಗ ನೆನಪಾತು. ದ್ರೌಪತೀ ವಸ್ತ್ರಾಪಹರಣ ನಾಟಕ. ಅದರೊಳಗ ನಂ ಗುರುಗಳs... ದ್ರೌಪತಿ ದುಶ್ಶಾಸನ ಬರ್ತಾನಲ ? ಆ ಸೀನ್‌ದೊಳಗ ಒಂದು ಹಾಡು ಬರುತ್ತಿತ್ತು. ನಾವೆಲ್ಲ ನಾಟಕ ನೋಡಲಿಕ್ಕ ಹೋಗಿದ್ವಿ. ಹೆಣ್ ಮಕ್ಕಳ ಕುಂದರಾಕ್ಕ ಜಾಲರಿ ಇರತಿತ್ತು ನೋಡರಿ. ಅಲ್ಲಿ ಕುತಗೊಂಡು ನಾಟಕ್ ನೋಡೂದು. ಹಾಡು ತಿಳೀತಿರಲಿಲ್ಲ. ಜನ ಚಪ್ಪಾಳೆ ತಟ್‌ತಿದ್ದಂಗೂ ಇವರು ಮತ ಮತ್ತ ಹಾಡೂದು ನಿಂತು ಸಾಕಾತು ಅಂದಾಗ ಕೂತಗೊಂಡು ಹಾಡತ್ತಿದ್ದರ್ರೀ ! ನಾವು ಅಲ್ಲಿ ಕಿಂಡ್ಯಾಗಿಂದ ನೋಡಕೋತ ಕುಂಡರಬೇಕು.

**ವಿ.ವಾ:** ನಿಮಗ... ನಿಂ ಗುರುಗಳಿಗೆ – ಮತ್ತ ಕುಮಾರ ಗಂಧರ್ವರಿಗೆ ಮೂವರಿಗೂ ಆವಾಜ್ ಮ್ಯಾಲೆ ಪೆಟ್ಟಾಗಿ ಪರಿಣಾಮಾತು. ನೀವು ಇಂಥಾ ತೊಂದರೆಗಳನ್ನ ನಿಭಾಯಿಸಿದ್ದು ಹೆಂಗೇಂತ ?

**ಗಂ.ಹಾ:** ಏನ ಮಾಡೂದರಿ ? ಮತ್ತ ಮತ್ತ ಹಾಡ್ತಾನೇ ಇರಬೇಕು. ಪ್ರಾಕ್ಟೀಸ್ ಮಾಡಬೇಕು. ಇನ್ನೇನದ ? ಬಿಡೂಹಂಗಿಲ್ಲ.

**ವಿ.ವಾ:** ಮಂದ್ರ ಸಾಧನೆ ಅಂತಾರಲ್ಲ. ಹಂಗಂದ್ರೇನು ?

**ಗಂ.ಹಾ:** ಮಂದ್ರ ಸಾಧನೆ ಅಂದ್ರೆ ಕೆಳಗೆ ಎಷ್ಟು ವರೆಗೆ ಹೋಗಲಿಕ್ಕ ಆಗತದೋ ಅದು. ಅಲ್ಲೇ ನಿಂದರಬೇಕು. ಉಸುಲು ಇರೋವಗ್ಗೂ. ಸಂಗೀತಕ್ಕ ಅದೇ ಮುಖ್ಯ. ಅದನ್ನ s... ಸಾಧಿಸಬೇಕು. ಅದಕ್ಕ ನಾವು ಖರಜ್ ಅಂತೀವಿ. ನಂ ಗುರುಗಳು ಹೇಳತಿದ್ರು. ಎಲ್ಲರೂ ಅದನ್ನ ಮಾಡಬ್ಯಾಡ್ರಿ. ಯಾರ ದನೀಗೆ ಅದು ಸಾಧ್ಯ ಆಗತದ ಅವರು ಮಾತ್ರ ಮಾಡಬೇಕಂತ. ಕೆಲವರ ದನೀಗ ಜರೂರು ಇರೋದಿಲ್ಲದರದು. ಅಂಥವರು ಮಾಡಿದರ ದನೀ ಕೆಡತದಂತ.

**ವಿ.ವಾ:** ಆಲಾಪೀ ಸಂಗೀತ ಅಮಿರ್‌ಖಾನ್ ಸಾಹೇಬರ ಸೊತ್ತು ಅಂತಾರಲ್ಲ ?

**ಗಂ.ಹಾ:** ಇಲ್ರೆಪ್ಪಾ ಇಲ್ಲ. ನಾವು ಹಾಡಬೇಕಾದರ ಅಮಿರ್ ಖಾನರನ್ನ ಕೇಳೇ ಇರಲಿಲ್ಲ. ಗೊತ್ತೇ ಇರಲಿಲ್ಲ. ಆಲಾಪ ಇಲ್ದೇ ಸಂಗೀತನೇ ಇಲ್ಲರೀ. ನಾಕು ಸ್ವರ ಅವೆ. ಮ... ಸಾ... ರಿ... ಗ... ಸಾ. ಅಂತ ಅವನ್ನೇ ವೆರೈಟಿದೊಳಗನ್ನಬೇಕು. (ಗಂಗಜ್ಜಿ... ೯೫ನೇ ವಯಸ್ಸಿನಲ್ಲಿ ಇದನ್ನ ನನಗಾಗಿ ಹಾಡಿದರು. ನಂಬಕ್ಕೆ ಸಾಧ್ಯವಾ ?) ಮೀಂಡಲೇ ಅಂದು ಅದನ್ನ ಆಲಾಪ ಮಾಡಬೇಕು. ನಂ ತಲೀ ಹೆಂಗ ಓಡತದೋ ಹಂಗ... ಆಮ್ಯಾಲ ಮಧ್ಯಮ್ ಹಚ್‌ಬೇಕು.

**ವಿ.ವಾ:** ನಿಂ ಕಾಲದ ಸಂಗೀತಗಾರರ ಇತ್ಯಾತ್ಮಕ ಅಂಶಗಳು ಏನು ? ಅವರ ಸಾಮರ್ಥ್ಯ ಏನು ?

**ಗಂ.ಹಾ:** ಅವರವರ ಘರಾಣೆಗೆ ಅನುಗುಣವಾಗಿ ಹಾಡಿಕೋತ ವಾ... ವಾಹ್... ಅನ್ನಿಸಕೋತಿದ್ದರು. ಕಲ್ಕತ್ತಾಕ್ಕೆ ಹೋದಾಗ ನನ್ನದು, ಕೇಸರ ಬಾಯ್‌ದು ಇರತಿತ್ತು. ಬಡೇ ಗುಲಾಮರು ಹಿಂದಾಗಡಿಯಿಂದ ಬಂದರು. ಅವರ ಹೆಸರು ಆಚೀ ಕಡೀ ಇದ್ದರೂ ಕಲ್ಕತ್ತಾಕ್ಕ ನಾ ಹೋದಮ್ಯಾಲ ಬಂದಿದ್ದು ಅವರು. ಓಂಕಾರನಾಥ, ಪಟವರ್ಧನ್ ಎಲ್ಲಾರನ್ನೂ ನೋಡೀನಿ. ಲಾಲ ಬಾಬು ಖನ್ನಾ ಅಂತಿದ್ರು. ಕಲ್ಕತ್ತಾ ಪ್ರೋಗ್ರಾಂ ಅವರೇ ನಡಸತಿದ್ರು.

**ವಿ.ವಾ:** ಈಗಿನವರ ಬಗ್ಗೆ ಏನನಿಸತದ ?

**ಗಂ.ಹಾ:** ಈಗ ಪ್ರೋಗ್ರಾಂ ಎಲ್ಲಿ ಆಗ್ತವರೀ ? ನಂ ಕಾಲದಾಗ ಮನೀ ಗಣಪತೀನ್ನೇ ನೋಡಕ್ಕೆ ಸಿಗತಿದ್ದಿಲ್ಲ. ಅಷ್ಟು ಕಾರ್ಯಕ್ರಮ ಆಗತಿದ್ದವು. ಈಗ ಪ್ರೋಗ್ರಾಂ ಇಲ್ಲ. ಅವಕಾಶನೂ ಕಡಿಮಿ.

**ವಿ.ವಾ:** ಈಗಿನವರ ಹಾಡು ಮೆಚ್ಚಿಕೊಳ್ತೀರಾ ?

**ಗಂ.ಹಾ :** (ತಲೆ ಅಲ್ಲಾಡಿಸುತ್ತಾ)... ಇಲ್ಲ...

**ವಿ.ವಾ :** ಯಾಕ ?




# ASIAN EDUCATIONAL SERVICES



Comprehensive & Authoritative Dictionaries & Grammars in all South Indian Languages: Kannada, Malayalam, Telugu, Tamil, Oriya, and in most of the other Indian Languages.

Dictionaries by: Kittle • Bucher • Ziegler • Gundert • Zacharias • Fronhmeyer • Winslow • Fabricius • Visvanatha Pillai • Pope • Percival • Brown • Sankaranarayana • etc.

**Other Subjects :**

Travel • History • Anthropology • Social Science • Customs • Folk lore • Caste & Tribes • Numismatic • Gazetteers • 1857 • Proverbs • Biographies • etc.

All areas of the Indian subcontinent are dealt with in detail; along with comprehensive research material about the rest of the regions of Asia.

Antiquarian Reprints of books first published between the 17th and early 20th century

**Head Office**
6A Shahpur Jat, New Delhi - 110 049
Tel. : +91-11- 26491586, 26494059
Fax : 011-26494946
e-mail : aes@aes.ind.in

www.aes.ind.in

**Chennai Branch**
No.19 (New No.40), Balaji Nagar First Street,
Royapettah, Chennai - 600 014.
Tel. : +91-44-28133040, 28131391,
Mobile : +91-9382293487, Fax : +91-44-28131391,
e-mail : asianeds@md3.vsnl.net.in



ಒಂದು ಪ್ರೊಫೈಲ್

**ಗಂ.ಹಾ :** ಕೇಳೋರೇ ಇಲ್ಲ! ಮತ್ತ ಅವರಿಗೆ ಪ್ರಾಕ್ಟೀಸು ಹೆಂಗ ಆಗಬೇಕು? ನಮ್ಮಜ್ಜೀಗ ಹೇಳುತ್ತಿದ್ದೆ... ಮರಾಠಿ ಪದ ಬಂದರ ಪ್ರೋಗ್ರಾಂ ಸಿಗ್ತಾವಂತ. ನನಗ ಪದ ಬರಂಗಿಲ್ಲ. ನಾ ಹಾಡೂವಾಕೀ ಅಲ್ಲ ಅಂತಿದ್ದೆ. ನಂ ಹಾಡು ಹೋಗತದ ಅನಸತದೆ ಅಂದೆ. ''ಹೋಗೂದಿಲ್ಲ'' ಅಂದಳಾಕೀ ನಮ್ಮಜ್ಜಿ. ಇದೊಂದು ಹವಾ ಬಂದದ ಅಷ್ಟೇ. ಮಂದಿ ಕೇಳಿದ್ರೇ ಎಷ್ಟು ಕೇಳ್ತಾರ? ಬ್ಯಾಸರ ಬಂದಽ... ಬರತದ. ಹಿಂದಾಗಡಿ ಆಕೀ ಅಂದಳು. ಕೂಸಿನ್ನ ಮಲಗಿಸಿ ತೊಟ್ಲ ತೂಗತಿರತಾರ. ನಡುವಿ ಆ ತೊಟ್ಲ ನಿಂದರತದಲ್ಲ? ಆಗ ಅಲ್ಲಿ ತೂಗೋರು ಯಾರೂ ಇರೋದಿಲ್ಲ. ಆದರೆ ಮತ್ತೊಬ್ಬರು ಯಾರಾದ್ರೂ ಬಂದು ಕೈ ಹಚ್ಚೇ ಹಚ್ಚತಾರ! ತೂಗೋ ತೊಟ್ಲ ನಿಂತಿತು ಅಂದ್ರ? ಕೂಸು ಅಳತದ. ಯಾರಾದ್ರೂ ಬಂದು ತೂಗೇ ತೂಗ್ತಾರ. ಸಂಗೀತ ನಿಲ್ಲೋದಿಲ್ಲರೀ. ಯಾರಾದ್ರೂ ಒಬ್ರು ಹುಟ್ಟೇ ಹುಟ್ತಾರ. ನೀವೊಂದ ಸಾರಿ ಕುಂದಗೋಳಕ್ಕ ಬರ್ರಿ... ಬಂದೀರಾ?

**ವಿ.ವಾ:** ಓಹೋ... ಬಂದೀನಿ. ಏಳೆಂಟು ಸರತಿ ಬಂದೀನಿ.

**ಗಂ.ಹಾ:** ಈಗ ಹೊರಗಡೀ ಮಾಡತೀವಿ. ವಾಡೆ ಬಿಟ್ಟಮೇಲೆ ಬಂದೀರೇನು?

**ವಿ.ವಾ:** ಎರಡೂ ಕಡೀ ಬಂದೀನ್ರಿ ಅಜ್ಜೀ.

(ತಂಬೂರಿಯ ಝೇಂಕಾರದೊಂದಿಗೆ ಕುಂದಗೋಳದ ವಾಡೆಯ ಒಂದು ಚಿಗುರು. ಅಶೋಕ ನಾಡಿಗೇರ ಸ್ವರ ಹಚ್ಚತ್ತಿದ್ದರು. ಈ ಯುವಕ ಗಂಗವ್ವನ ಈಗಿನ ಶಿಷ್ಯ!)

**ವಿ.ವಾ:** ಜೋಷಿಯವರ ಗಾಯನಕ್ಕೆ ಕೇಸರಬಾಯಿ ಥರದ ಹಿರೇ ಕಲಾವಿದರು ಬರತ್ತಿದ್ದರು, ಅರಿಯಕುಡಿಯವರ ಕಚೇರಿಗೆ ಜಿ.ಎನ್.ಬಿ. ಥರದೋರು ಬರತ್ತಿದ್ರು. ನಿಮ್ಮ ಗಾಯನಕ್ಕ ಸೈಗಾಲ ಥರದವರೆಲ್ಲ ಬರಿತ್ತಿದ್ರು. ಈಗ ಏನಾಗೇದ? ಯಾಕ ಹಿಂಗ?

**ಗಂ.ಹಾ:** ನಂಗೂ ತಿಳಿಯೋದಿಲ್ಲ. ಆವಾಗ ದೊಡ್ಡ ದೊಡ್ಡೋರೆಲ್ಲ ಬಂದು ನಮ್ಮೆದುರಿಗೆ ಕುಂದರತಿದ್ದರು. ಅವರ ಹೆಸರು ಕೇಳಿ ಸುದ್ದಾ ಅಂಜತ್ತಿದ್ವಿ ನಾವು. ಅಂಥಾವರು ಬರತ್ತಿದ್ರು.

**ವಿ.ವಾ :** ನಿಂ ಗಾಯನಕ್ಕ ಹಿಂಗ ಯಾರ್‍ಯಾರು ಬರ್‍ತಿದ್ರು.

**ಗಂ.ಹಾ :** ಬರತಿದ್ದರು. ಮಂಜೀಖಾನ್, ಬುರ್ಜಿಖಾನ್ ಮತ್ತ ದೊಡ್ಡವರು ಫೈಯಾಜ್‌ಖಾನ್ ಕೇಸರ್ ಬಾಯಿ ಮೋಗೂಬಾಯಿ ಕುರುಡೀಕರ್, ಅಷ್ಟು ದೂಡ್ಡಾ ಕೀ. ಸ್ನೇಹಿತರಂಗ ಕೂತಗೋತಿದ್ವಿ. ಏನೇನೋ ಮಾತಾಡ್‌ತಿದ್ದಳು. ಇಲ್ಲಿ ಒಮ್ಮೆ ಕಿಶೋರಿ ಬಂದಿದ್ದಳು. ಅವಳಿಗೆ ಗೊತ್ತಿತ್ತು. ಇದೆಲ್ಲ ನನ್ನ ಹಿಡಕೊಂಡು ಅಳಲಿಕ್ಕೇ ಹತ್ತಿತ್ತು! ಪಾಪ. ತಾಯಿ ನೆನಪಾಗಿ. ಮತ್ತ ಸಿದ್ದೇಶ್ವರಿದೇವಿ.

**ವಿ. ವಾ :** ನಿಮಗ... ನಾ ಹಾಡಿದ್ರೆ ಈ ನಮೂನೀ ಹಾಡಬೇಕೂಂತ ಅನ್ನಿಸಿದ್ದು ಯಾರನ್ನ ನೋಡಿ?

**ಗಂ.ಹಾ:** (ಇದ್ಯಾವ ಪ್ರಶ್ನೆ ಎಂಬಂತೆ. ಥಟ್ ಅಂತ) ನಂ ಗುರುಗಳನ್ನ ನೋಡಿ. ಆದರೆ ನಾ ಕೇಳತಿದ್ದೆ. ಬ್ಯಾರೇ ಅವರ ಸಂಗೀತನೂ ಕೇಳತಿದ್ದೆ. ಆದ್ರೆ ನಮ್ಮದೇ ನಾವು ಸುಧಾರಿಸಕೋ ಬೇಕೂಂತ ಅನ್ನಿಸತಿತ್ತು.

**ವಿ.ವಾ :** ಪಲುಸ್ಕರ್ ಅವರು ತಾನ್‌ಸೇನ್‌ಗಳಿಗಿಂತ ಕಾನ್‌ಸೇನ್‌ಗಳು ತಯಾರಾಗಬೇಕೂಂತ...

**ಗಂ.ಹಾ:** ಅದು ಖರೇನ. ಕೇಳೋರೇ ಇಲ್ಲದ ಮೇಲೆ ನಾವ್ಯಾರಿಗ ಹಾಡಬೇಕರಿ? ಕಾನ್ ಸೇನಗಳು ಬೇಕೇ ಬೇಕು.

**ವಿ.ವಾ:** ಈಗ ಕಾನ್‌ಸೇನ್‌ಗಳ ಸಂಖ್ಯೆ ಕಡಿಮಿ ಆಗ್ಯದಲ್ಲ?

**ಗಂ.ಹಾ:** ಈಗ ಹೌದು. ಮುಂದ ಸರಿಹೋಗಬಹುದು. ಇದು ಹಿಂಗಽ... ನಿಲ್ಲೋದಿಲ್ಲ ಲೈಟ್ ಹಾಡುಗಳ ಕಾಲ ಮುಗದು ಮತ್ತ ಶಾಸ್ತ್ರೀಯ ಬಂದಽ... ಬರತದ.

**ವಿ.ವಾ:** ಬೇಂದ್ರೇ ಅವರ ಪದ್ಯ ಓದಬೇಕಾದ್ರ ಕನಿಷ್ಠ ಓದಲಿಕ್ಕಾದರೂ ಬರಬೇಕು; ಪೇಂಟಿಂಗ್ ಸವೀಬೇಕಾದ್ರ ಅದರ ಬಗ್ಗೆ ತಿಳವಳಿಕೆ ಸ್ವಲ್ಪಾನಾದ್ರೂ ಇರಬೇಕು, ಸಂಗೀತ ಕೇಳಕ್ಕೆ ಬರೇ ಎರಡು ಕಿವಿ ಇದ್ರೆ ಸಾಕಾ?

**ಗಂ.ಹಾ:** ಕಿವೀಗೆ ಆನಂದಾ ಆತು ಅಂದರ ಮುಗೀತಲ್ಲರೀ? ಇನ್ನೇನದ? ರಾಗಾ-ಪಾಗಾ ತಿಳದು ಕೇಳೋ ಮಂದಿ ಬ್ಯಾರೆನೆ. ಧಾರ್‍ವಾಡದಾಗ ರೇಡಿಯೊ ಷುರು ಆದಾಗ ಆಡಿಷನ್ ಟೆಸ್ಟ್ ಮಾಡತೀವಿ ಅಂದರು. ಮಂದಿ ಹೆದರಲಿಕ್ಕ ಹತ್ತಿದ್ರು. ಬಾಂಬೇಲಿ ಹೇಳಿ ಬಂದವರಿಗೂ ಧಾರ್‍ವಾಡದಾಗ ತೊಗೋತಿರಲಿಲ್ಲ. ತಿಳವಳಿಕೀ ನಿಧಾನ ಬರತದ.

**ವಿ.ವಾ:** ಮೈಕ್ ಬರೋದಕ್ಕ ಮುಂಚೆ ಜೋರ ದನೀಲೇ, ಏರು ದನೀಲೆ ಹಾಡತ್ತಿದ್ದರು. ಮೈಕ್ ಬಂದ್ಮೇಲೆ ಏನಾಯ್ತು? ಹೊಂದಾಣಿಕೀ ಹೆಂಗಾತು?

**ಗಂ.ಹಾ:** ನಾನೇನೂ ಅದರ ದೆಸೀಲಂತೂ ಹಾಡಿಲ್ಲ. (ನಗು) ಮೈಕ್ ಬಂದಾಗ ಕೆಲವು ಮಂದಿ ಹೆದರಲಿಕ್ಕ ಹತ್ತಿದರು. ಯಾಕ? ಅದು ಉಸಿರನ್ನ ಎಳಕೋತದ, ಗಂಟಲು ಒಣಗತದ ಅಂತ. ಯಾರಿಗಾದ್ರೂ ಅನಸಿದ್ದೀತು ನೀರು ಕುಡೀಬೇಕೂಂತ. ನಾನಂತೂ ನೀರು ಇಟಗೊಂಡೇ ಬಿಡ್ತೀನಿ. ಈಗಂತೂ ಹಾಡೊದೇ ಇಲ್ಲ. ನನ್ನ ಮಗಳು ಹಾಡತಿದ್ದಳು. ಭಾಳಾ ಛಲೋ ಹಾಡತ್ತಿದ್ದಳಾಕೀ.

**ವಿ.ವಾ:** ಲಕ್ಷ್ಯ-ಲಕ್ಷಣ ಅಂತ. ಸಂಗೀತ ಮತ್ತೆ ಅದರ ಗುರಿ. ರಸಿಕ. ಯಾವುದು ಮುಖ್ಯ?

**ಗಂ.ಹಾ:** ಎರಡೂ ಇದ್ರ ಛಲೋ. ಕೇಳೋರೆ ಇಲ್ಲದಿದ್ರೆ ಯಾರಿಗೆ ಹಾಡ್ತೀರಿ (ನಗು).

**ವಿ.ವಾ:** ನಿಮಗ ನೀವೇ ಹಾಡಿಕೊಂಬೋದು?

**ಗಂ.ಹಾ:** ನಮಗ ನಾವೇ ಹಾಡಿಕೊಂಬೋದು! ಅದು ಯಾವಾಗಲೂ ಹಾಗೇ. ಆದರೆ ಅದನ್ನೇ ಅವರು ಕೇಳಬೇಕಲ್ಲ?

**ವಿ.ವಾ:** ಕಿರಾನಾ ಪರಂಪರೆಯ ಶುದ್ಧತೆಯನ್ನ ಭಾಳ ನಿಷ್ಠೆಯಿಂದ ಕಾಪಾಡಿಕೊಂಡು ಬಂದವರು ನೀವು? ಆದರೆ ಜೋಷಿಯವರ ರೀತಿ; ಕುಮಾರಗಂಧರ್ವರ ರೀತಿ ಹೊಸದೇನೂ ಮಾಡಕ್ಕೆ ಹೋಗಲಿಲ್ಲ ನೀವು.

**ಗಂ.ಹಾ:** ನಮಗ ಬೇಕು ಅನಸಬೇಕಲ್ಲರೀ? ಅವರಿಗೆ ಬೇಕು. ಅವರು ಮಾಡ್ತಾರ. ನನಗ ಇದೇ ಬಂದಿಲ್ಲ ಅಂದ್ರ ನಾ... ಇನ್ನೇನು ಮಾಡಬೇಕು?

**ವಿ.ವಾ:** ಇದೇ ಬಂದಿಲ್ಲ ಅಂತ ಅನಸತದಾ ನಿಮಗ?

**ಗಂ.ಹಾ:** ಅನಸತದ.

**ವಿ.ವಾ:** ಘರಾನಾಗಳನ್ನ, ರಾಗಗಳನ್ನ ಮಿಶ್ರ ಮಾಡೋದಕ್ಕ ನಿಮ್ಮ ವಿರೋಧ ಅದೆ.

**ಗಂ.ಹಾ:** ವಿರೋಧ ಇಲ್ಲ. ಆದರ ನಾ ಮಾಡೂದಿಲ್ಲ. ಈಗ ಕಲಾವತಿ. ನಾವು ಹಾಡತಿದ್ದಿಲ್ಲ. ಚಂದ್ರಕೌಂಸ. ನನ್ ಹತ್ರ ಒಂದು ಪುಸ್ತಕ್ ಅದರಿ. ವಿಕ್ಟೋರಿಯಾ ರಾಣಿ ಕಾಲದ್ದು. ಬಾಂಬೇಲಿ ನಂ ಪರಿಚಯದವರ ಮನ್ಯಾಗಿತ್ತು. ನಾದ ವಿನೋದ ಭೂಮಿಕಾ ಅಂತ. ಕೇಳಿದೆ ಅವರನ್ನ.

ತೊಗೊಂಡು ಹೋಗು ಅಂದ್ರು. ಆದರೆ ಬಾಂಬೇಲಿ... ಅಪಾ... ಯಾರು ಅಶೋಕ ರಾನಡೆ ಅಂತ ಇದ್ರು. ಅಪಾ ಇಟಗೊಂಡ ಬಿಟ್ಟ. ಕೊಡSS...ವಲ್ಲ! ಅದರ ಪ್ರತಿ ತರಿಸಿ ಕೊಂಡೆ. ಆಮ್ಯಾಲದನ್ನ ಜಿ.ವಿ.ಕೆ. ಶಾಸ್ತ್ರೀ ಒಯ್ದು ಬಿಟ್ರು ! ಮತ್ತ ತರಸಿಕೊಂಡೀನಿ.

ವಿ.ವಾ: ಹಾಗಾದ್ರೆ ರಾಗಗಳನ್ನ ಯಾಕ ಮಿಶ್ರ ಮಾಡ್ಬೇಕು ?

ಗಂ.ಹಾ: ಅವು ಬರತಿರತವSS... (ನಗು ಅಸಹಾಯಕತೆ)

ವಿ.ವಾ: ನಿಮ್ಮ ಕೇದಾರ ರಾಗ... ನಿಮ್ಮ ಮಗಳೂ-ನೀವು ಹಾಡತ್ತಿದ್ರಲ್ಲ. ಆವಾಗ ನಿಂ ಮನಸ್ಸಿನೊಳಗ ಏನು ಅನಸತಿತ್ತು.

ಗಂ.ಹಾ: ಭಾಳಾ ಸವೀ ರೀ ಆಕೀ ದನಿ. ಆಕೀ ಪ್ರಾಕ್ಟೀಸ್ ಮಾಡತ್ತಿದ್ದಿಲ್ಲ, ನಾ ಯಾಕ ಪ್ರಾಕ್ಟೀಸ್ ಮಾಡಬೇಕSS... ? ನಿನ್ ಜೋಡಿ ಹಾಡಿದ್ರ ಸಾಲದೇನು ಅನಬೇಕು. ನೀ ಹಾಡಿದಂಗ ಹಾಡತೀನಿ ಮುಗೀತು ಅನತಿದ್ದಳು. ಭಾಳ ಭಲೋ ಇತ್ತಪ್ಪ ದನಿ ಆಕೀದು ಭಾಳಾ ಶಾಣ್ಯಾಕೀ

ವಿ.ವಾ: ನಿಮಗ ಮರಿಯಕ್ಕೆ ಆಗಂಗಿಲ್ಲ... ಅಂಥಾದ್ದು ಏನು ?

ಗಂ.ಹಾ: ಈ ಮನಿ. ಎಲ್ಲೇ ಹೋಗ್ಲಿನಾ ಮನೀಗ್ ಬಂದಬಿಡಬೇಕು. ಬ್ಯಾರೆ ಊರಿಗೆ ಹೋದ್ರೂ ಹೊಟೇಲ್ ವಲ್ಲೆ, ಯಾರಾದಾದ್ರೂ ಮನೀನೇ ಆಗಬೇಕು, ನಿಮಗೇನು ಮಾಡಬೇಕ್ರಿ ಸ್ಪೆಷಲ್ಲು ಅಂತಿದ್ರು. ಬಿಸಿ ಅನ್ನ. ತುಪ್ಪ, ಚಟ್ನೀ ಪುಡಿ. ಇಲ್ಲ ಮೆಂತಹಿಟ್ಟು! ಇಷ್ಟು ಇದ್ರ ನಡೀತಿತ್ತು. ತುಪ್ಪ ಭಾಳಾ ಬೇಕು ನನಗ. ಅಡಿಗಿ ಚೆನ್ನಾಗಿ ಮಾಡತಿದ್ದೆ. ರವಿಶಂಕರ್ ಬರದಾನ. ಗಂಗೂಬಾಯಿ ಅಡಿಗಿ ಚೆನ್ನಾಗಿ ಮಾಡ್ತಾರ ಅಂತ.

ವಿ.ವಾ: ಜೈಪುರದ್ದು ಕಾನ್‌ಫರೆನ್ಸ್ ಬಗ್ಗೇನೂ ಓದೀನಿ.

ಗಂ.ಹಾ: ಜೈಪುರದಾಗ... ಆಕೀ ರಾಣೀ ಇದ್ಲು. ಅಲ್ಲಿ ನೆಹರೂ ಬರೋನಿದ್ದ ಆಕೀ ಮನೀಗೆ. ಆಕೀ ಹೇಳಿ ಕಳಿಸಿದ್ದಳು ನನಗ. ಒಂದು ಅರ್ಧ ತಾಸು ಸಂಗೀತ ಹೇಳಬೇಕಂತ. ನಮ್ಮ ಮಾಮ ಬರತ್ತಿದ್ದನಲ್ಲ ಸಂಗ್ತಿ? ರೊಕ್ಕ ಎಷ್ಟು ಕೊಡ್ತಾರ ಕೇಳೋ ಅಂದೆ. (ನಗು) ಅಲ್ಲೇ... ನೆಹ್ರೂನ್ನಾದ್ರೂ ನೋಡಲಿಕ್ಕ ಆಗತSದ... ಹೂ... ಅನ್ನೇ ಅಂದ. ಅಲ್ಲಿ ಗಾರ್ಡನ್‌ದಾಗ ಹಾಡು. ಒಂದು ಹತ್ತು-ಹದಿನೈದು ಮಂದಿ ಕೂತಿದ್ರು. ಸುಮ್ನೆ ಗೊಂಬಿ ಕೂತ್ಹಾಂಗೆ ಕೂತುಬಿಟ್ಟಾರ ! ಅರ್ಧ ತಾಸು ಹಾಡಿ ಎದ್ದುಬಿಟ್ಟೆ. ನೆಹರೂ ಎದ್ದು ಬಂದು ತಲೀ ಮ್ಯಾಲ ಕೈ ಇಟ್ಟು "ಬಹುತ್ ಅಚ್ಛಾSಹುವಾ" ಅಂದರು.

ವಿ.ವಾ: ಈಗ ನಿಮ್ಮ ಧಾರವಾಡದ ಮನೀನ ಮ್ಯೂಸಿಯಂ ಮಾಡ್ಯಾರ ಕಾಣ್ತದ.

ಗಂ.ಹಾ: ಹೌದ್ರಿ. ನಾನೂ ಎರಡು ತಂಬೂರಿ ಕೊಟ್ಟೇನಿ. ಇಲ್ಲೀವೆಲ್ಲ ಫೋಟೋಕಾಪಿ ಒಯ್ದಾರ.

ವಿ.ವಾ: ನಿಮದೆಲ್ಲ ಸಂಗೀತ ಬಾಂಬೇ ಕಡೀಕ್ಕ...

ಗಂ.ಹಾ: ಇಲ್ಲರೀ. ಮದ್ರಾಸಿಗೂ ಹೋಗೇನಿ. ತ್ಯಾಗರಾಜ ಆರಾಧನೇಗೆ ಕರಸಿದ್ರು. ಅಲ್ಲಿ ಭಾಳಾ ಮಜಾ ಆಯ್ತುರೀ. ಟ್ರೇನ್‌ದೊಳಗ ಒಂದ್ ಕಡೀ ಮುದುರಿಕೊಂಡ್ ಕೂತೀನಿ. ಆಚೀ ಕಡೀ ಒಬ್ಬ ದಪ್ಪನಾಕೀ... ಠಣ್ ಅಂತ ಕೂತಿದ್ದಳು. ಸ್ಟೇಷನ್ ಬಂತು. ಮಂದಿ ಎಲ್ಲ ಬಂದು ಮಾಲೀ (ಹಾರ) ತೆಗ್ದು ಆ ದಪ್ಪನಾಕೀ ಕೊರಳಿಗೆ ಹಾಕಿಬಿಟ್ರು ! ಇನ್ನೊಬ್ಬಾತ ಕೂಗಿಕೊಂಡ ಏಯ್ ಇಲ್ಲಿದ್ದಾರ ಗಂಗೂಬಾಯಿ ! ನನ್ ಆವಾಜ್ ಕೇಳಿದ್ರಲ್ಲ? ಶಾರೀರ ನಂದು; ಶರೀರ ಆಕೀದ್ದು. ಮಾಲೀ ಆಕೀಗೆ ಒಯ್ದು ಹಾಕಿದ್ರು (ನಗು).

ಆ ಕೋಣೆಯ ತುಂಬ ನಗೆಯ ಅಲೆಗಳು ಎದ್ದವು. ಆ ಪುಟ್ಟ ದೇಹವೂ ನಗೆಯಿಂದಾಗಿ ಕುಲುಕಾಡುತಿತ್ತು. ಇದು ಹೀಗೇ ಇರಬೇಕು. ಚಿರಂತನ. ನಿರಂತರ... ಗಂಗೆಯ ಹಾಗೆ... ಪುಣ್ಯ ಪ್ರವಾಹ... ಗಂಗವ್ವ... ಗಂಗಾಮಾಯಿ... ಗಂಗೂಬಾಯಿ !

*ಪಶ್ಯೇಮ ಶರದಃ ಶತಮ್ । ಜೀವೇಮ ಶರದಃ ಶತಮ್ ।*
*ನಂದಾಮ ಶರದಃ ಶತಮ್ । ಮೋದಾಮ ಶರದಃ ಶತಮ್ ।*
*ಶ್ರುಣುವಾಮ ಶರದಃ ಶತಮ್ । ಪ್ರಬ್ರುವಾಮ ಶರದಃ ಶತಮ್ ।*
*ಅಜಿತಾಃ ಸ್ಯಾಮ ಶರದಃ ಶತಮ್ ॥*

*(ಶ್ರೀದಂತಿ, ರವೀಂದ್ರ ಪ್ರಕಾಶನ, ಸಾಗರ, ಇವರಿಗೆ ನನ್ನ ಕೃತಜ್ಞತೆ ಸಲ್ಲಬೇಕು)*

---

ವಿಜಯ ವಾಮನ.
ಪ್ರಾಚಾರ್ಯರು, ಶ್ರೀ ಆದಿಚುಂಚನರಿಗಿರಿ ಪದವಿ ಪೂರ್ವ ಕಾಲೇಜು, ಶಿವಮೊಗ್ಗ

*With Best Compliments From*



**TELECOM EMPLOYEES CO-OP.**
**HOUSING SOCIETY LIMITED**
**No. 6/7, Rajbhavan Road, Bangalore - 560 001**

# ಶಿಕ್ಷಣವನ್ನು ಕುರಿತು ರವೀಂದ್ರರ ವಿಚಾರಗಳು

ಚೆನ್ನವೀರ ಕಣವಿ

ವಿದ್ಯಾರ್ಥಿಗಳಿಗೆ ಶಿಕ್ಷೆ ವಿಧಿಸುವುದು ತಪ್ಪು ಎಂಬುದು ರವೀಂದ್ರರ ಅಭಿಪ್ರಾಯ. ತಪ್ಪು ಮಾಡಿದ ವಿದ್ಯಾರ್ಥಿ ಹಿಂದೆ ನಮ್ಮ ದೇಶದಲ್ಲಿ ರೂಢಿಯಾಗಿದ್ದಂತೆ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಶಿಕ್ಷೆ ವಿಧಿಸುವುದು ಅವರ ದೃಷ್ಟಿಯಲ್ಲಿ ತಪ್ಪು ಮಾಡಿದವನ ಮೇಲೆ ಸೇಡು ತೀರಿಸಿಕೊಂಡಂತೆ. ಆದರೆ ಪ್ರಾಯಶ್ಚಿತ್ತ ಮಾಡಿಕೊಳ್ಳುವುದಾಗಲಿ, ಪರಿಹಾರ ಕೊಡುವುದಾಗಲಿ ತಪ್ಪಿತಸ್ಥನೇ ಸ್ವಯಂಪ್ರೇರಣೆಯಿಂದ ಕೈಗೊಳ್ಳುವುದಾಗಿದೆ. ಒಬ್ಬ ಮನುಷ್ಯನು ಇನ್ನೊಬ್ಬ ಮನುಷ್ಯನನ್ನು ಶಿಕ್ಷಿಸುವುದೆಂದರೆ ಅವನ ತೇಜೋಭಂಗ ಮಾಡಿದಂತೆ. ಈ ಸಂದರ್ಭದಲ್ಲಿ ಇನ್ನೂ ಒಂದು ಮಾತನ್ನು ಅವರು ಹೇಳುತ್ತಾರೆ. ನಮ್ಮ ಮಾದರಿಯ ಶಾಲೆಗಳಲ್ಲಿ ಮೇಜು ಕುರ್ಚಿ ಬೆಂಚುಗಳು ಇರುವ ಆವಶ್ಯಕತೆಯಿಲ್ಲ. ಯೂರೋಪಿನ ಪದ್ಧತಿಯ ಬಗ್ಗೆ ಪೂರ್ವಗ್ರಹದಿಂದ ಅವರು ಈ ಮಾತು ಹೇಳುತ್ತಿಲ್ಲ. ಅನಾವಶ್ಯಕವಾದುದೆಲ್ಲವನ್ನೂ ವರ್ಜಿಸಿಬಿಡಬೇಕೆಂಬ ತತ್ವ ಅವರ ಮನಸ್ಸಿನಲ್ಲಿದೆ.

ರವೀಂದ್ರನಾಥ ಠಾಕೂರರು ಶ್ರೇಷ್ಠ ಕವಿಗಳೆಂಬುದು ಪ್ರಪಂಚಕ್ಕೆಲ್ಲ ಗೊತ್ತು. ಶಿಕ್ಷಣ, ಅರ್ಥಶಾಸ್ತ್ರ, ರಾಜಕಾರಣ, ಸಾಮಾಜಿಕ ವ್ಯವಹಾರಗಳ ಕ್ಷೇತ್ರಗಳಲ್ಲಿಯೂ ಠಾಕೂರರು ಮಹತ್ವದ ಸಾಹಿತ್ಯವನ್ನು ನಿರ್ಮಾಣ ಮಾಡಿದ್ದರೂ ಅದು ಭಾರತಕ್ಕಷ್ಟೇ ಅಲ್ಲದೆ ಪ್ರಪಂಚಕ್ಕೆ ನೀಡಿದ ಮಹತ್ವದ ಕಾಣಿಕೆಯೆನ್ನುವದನ್ನು ಬಹಳ ಜನ ಅರಿತಿರಲಿಲ್ಲ. ೧೯೬೧ರಲ್ಲಿ ಅವರ ಜನ್ಮ ಶತಮಾನೋತ್ಸವದ ಸಂದರ್ಭದಲ್ಲಿ ವಿವಿಧ ವಿಷಯಗಳ ಬಗೆಗಿನ ಅವರ ಮಹತ್ವದ ಪ್ರಬಂಧಗಳನ್ನು ಇಂಗ್ಲಿಷಿಗೆ ಅನುವಾದಿಸಿ ಪ್ರಕಟಿಸಿ ಆ ಕೊರತೆಯನ್ನು ಕೆಲಮಟ್ಟಿಗೆ ತುಂಬಿ ಕೊಡಲಾಯಿತು. ಬಂಗಾಳದ ಪ್ರಸಿದ್ಧ ವಿದ್ವಾಂಸರು ಹಾಗೂ ಅಂದಿನ ಭಾರತ ಸರ್ಕಾರದ ಸಂಸ್ಕೃತಿ ಮತ್ತು ವಿಜ್ಞಾನ ಸಂಶೋಧನಾ ಶಾಖೆಯ ಮಂತ್ರಿಗಳೂ ಆಗಿದ್ದ ಪ್ರೊ|| ಹುಮಾಯೂನ್ ಕಬೀರ್ ಈ ಗ್ರಂಥಕ್ಕೆ ದೀರ್ಘವಾದ ಪೀಠಿಕೆಯೊಂದನ್ನು ಬರೆದು ಠಾಕೂರರ ಜೀವನ ಮತ್ತು ಕೃತಿಗಳನ್ನು ಕುರಿತಲ್ಲದೆ ಅವರ ಆರ್ಥಿಕ, ಶೈಕ್ಷಣಿಕ, ಸಾಮಾಜಿಕ ಮತ್ತು ರಾಜಕೀಯ ನಂಬುಗೆಗಳನ್ನು ವಿವರವಾಗಿ ವಿವೇಚಿಸಿ, ಜೀವನದಲ್ಲಿ ಅವರಿಗಿದ್ದ ಸಮನ್ವಯ ದೃಷ್ಟಿಯೇ ಅವರ ಹಿರಿದಾದ ಶಕ್ತಿಯಾಗಿತ್ತು ಎಂಬುದನ್ನು ಎತ್ತಿ ತೋರಿಸಿದರು. ರವೀಂದ್ರರ ಸಾಧನೆಗಳು ಎಷ್ಟರಮಟ್ಟಿಗೆ ವಿಶಿಷ್ಟವಾಗಿದ್ದುವೆಂದರೆ ಅವು ಅವರನ್ನು ಹಿರಿಯ ವ್ಯಕ್ತಿಗಳಲ್ಲೊಬ್ಬರನ್ನಾಗಿ ಮಾಡಿದ್ದಲ್ಲದೆ ಇಡೀ ಮಾನವಕುಲಕ್ಕೇ ಸಂದೇಶ ಕೊಡುವಂತಹ ವ್ಯಕ್ತಿಗಳಲ್ಲಿ ಒಬ್ಬರನ್ನಾಗಿಸಿದ್ದವೆಂಬುದನ್ನೂ ಪ್ರಸ್ತುತಪಡಿಸಿದರು.



ಶಿಕ್ಷಣ ವಿಷಯದಲ್ಲಿ ರವೀಂದ್ರರ ವಿಚಾರಗಳು ಅನುಭವದಿಂದಲೇ ಬಂದಿರುವಂಥವು. ಪಟ್ಟಣಗಳಲ್ಲಿ ಮಕ್ಕಳನ್ನು ನೋಡಿಕೊಳ್ಳಲು ಸೇವಕರಿರುತ್ತಾರೆ. ಅವರ ಮೇಲ್ವಿಚಾರಣೆ ಒಂದು ರೀತಿ ಬಂಧನವಿದ್ದಂತೆಯೆ. ಚಿಕ್ಕಮಕ್ಕಳ ಮನಸ್ಸು ಯಾವಾಗಲೂ ಸ್ವಾತಂತ್ರ್ಯ ಬಯಸುತ್ತದೆಂಬುದನ್ನು ರವೀಂದ್ರರು ಕಂಡುಕೊಂಡಿದ್ದರು. ಬಯಲಿನಲ್ಲಿ ಓಡಾಡುವದು ಮಕ್ಕಳಿಗೆ ಇಷ್ಟ. ಅವರು ಓದುತ್ತಿದ್ದ ಶಾಲೆಗಳಲ್ಲಿ ಬೇಡವಾದ ವಿಷಯಗಳನ್ನು ಕಡ್ಡಾಯವಾಗಿ ಕಲಿಸುವದೂ ಯಾಂತ್ರಿಕವಾಗಿ ಶಿಕ್ಷಣವೀಯುವದೂ ಆ ಶಿಕ್ಷಣ ಪದ್ಧತಿಯನ್ನೆ ಪ್ರತಿಭಟಿಸುವಂತೆ ಮಾಡಿತು. ಅಂದಿನ ಶಿಕ್ಷಣ ಪದ್ಧತಿಯಂತೂ ಭಾರತೀಯರ ಸಂಪ್ರದಾಯ ಸಂಸ್ಕೃತಿಗಳಿಗೆ ಸಂಬಂಧವಿಲ್ಲದಂತೆ ಇದ್ದುದರ ಅನುಭವ ಅವರಿಗಾಯಿತು. ತಂದೆಯೊಡನೆ ಹಿಮಾಲಯವನ್ನು ನೋಡಿಬಂದ ಮೇಲಂತೂ ನಿಸರ್ಗದೊಡನೆ ನಿತ್ಯ ಸಂಬಂಧ-ಸಂಪರ್ಕವನ್ನಿಟ್ಟುಕೊಳ್ಳುವದು ಬಾಲಕರ ವಿಕಾಸಕ್ಕೆ ಉತ್ತಮ ಸಾಧನವೆಂಬುದು ಹೆಚ್ಚು ಮನದಟ್ಟಾಯಿತು. ಅವರ ಅಭಿರುಚಿ, ಮನೋವಿಕಾಸ ಮತ್ತು ದೈಹಿಕ ವಿಕಾಸಗಳ ಕಡೆಗೆ ಗಮನ ಕೊಟ್ಟು ಸಂಪ್ರದಾಯಗಳನ್ನು ದೂರಪರಿಸಿ, ನಿಸರ್ಗದ ಸಂಪರ್ಕವನ್ನಿರಿಸಿಕೊಂಡು ಬಾಲಕರಿಗೆ ಕೊಡುವ ಶಿಕ್ಷಣಪದ್ಧತಿಯ ಕಾರ್ಯದ ಆಚರಣೆಯನ್ನು ಅವರು ಆರಂಭಿಸಿದರು. "ಮಕ್ಕಳ ಶಿಕ್ಷಣದ ಬಗ್ಗೆ ನನ್ನದು ಒಂದು ಹೊಸ ತತ್ವವೇನೂ ಇಲ್ಲ; ಅದು ನನ್ನ ಬಾಲ್ಯದ ಶಿಕ್ಷಣದ ಅನುಭವಸಾರ" ಎಂದು ಅವರು ತಮ್ಮ ಭಾಷಣವೊಂದರಲ್ಲಿ ಹೇಳಿದ್ದಾರೆ.

ಪ್ರಾಚೀನ ಭಾರತದ ಶಿಕ್ಷಣದ ತತ್ವಗಳನ್ನು ನಾವು ಅನುಸರಿಸಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ವಿದ್ಯಾರ್ಥಿಗಳು ಮತ್ತು ಶಿಕ್ಷಕರು ನೈಸರ್ಗಿಕ ಆವರಣದಲ್ಲಿ ಕೂಡಿ ವಾಸಿಸಬೇಕು. ಬ್ರಹ್ಮಚರ್ಯವನ್ನಾಚರಿಸುತ್ತ ವಿದ್ಯಾರ್ಥಿಗಳು ತಮ್ಮ ವಿದ್ಯಾರ್ಜನೆಯನ್ನು ಮುಗಿಸಬೇಕು. ಕಾಲಕಾಲಕ್ಕೆ ನಮ್ಮ ಸುತ್ತಮುತ್ತಿನ ಪರಿಸ್ಥಿತಿ ಎಷ್ಟೇ ಬದಲಾವಣೆಗೊಂಡಿದ್ದರೂ ಮಾನವ ಸ್ವಭಾವದ ನಿತ್ಯ ಸತ್ಯಗಳ ಮೇಲೆ ನಿಂತ ಈ ತತ್ವಗಳು ತಮ್ಮ ವೈಶಿಷ್ಟ್ಯವನ್ನೇನೂ ಕಳೆದುಕೊಂಡಿಲ್ಲ. ಅವರ ದೃಷ್ಟಿಯಲ್ಲಿ ಮಾದರಿಯಾಗಿ ನಿಲ್ಲಬಲ್ಲ ಶಾಲೆ ನಗರದ ಗಡಿಬಿಡಿ ಗದ್ದಲಗಳಿಂದ ದೂರವಿರುವ ಶಾಂತ ಸ್ಥಳದಲ್ಲಿ ಸ್ಥಾಪಿತವಾಗಿರಬೇಕು. ತೆರೆದ ಆಕಾಶ, ಹೊಲ-ಗದ್ದೆಗಳು, ಗಿಡಮರಗಳು, ಇಂಥ ನೈಸರ್ಗಿಕ ಅನುಕೂಲತೆಗಳನ್ನು ಪಡೆದಿರಬೇಕು. ಶಿಕ್ಷಕರೂ ವಿದ್ಯಾರ್ಥಿಗಳೂ ವಿದ್ಯಾವ್ಯಾಸಂಗದಲ್ಲಿ ತನ್ಮಯರಾಗಿರಬೇಕಾದರೆ ಏಕಾಂತ ಸ್ಥಾನವೇಬೇಕು. ಸುತ್ತಲೂ ಒಂದಿಷ್ಟು ಭೂಮಿಯಿದ್ದರೆ ವಿದ್ಯಾರ್ಥಿಗಳು ಅದನ್ನು ಕೃಷಿಗೊಳಿಸಲು ಸಹಾಯ ನೀಡಬಹುದು. ಆದರಿಂದ ಶಾಲೆಗೆ ಆಹಾರಧಾನ್ಯವೂ ಒದಗಬಹುದು. ಹಾಲು ಪೂರೈಸಲು ಅಲ್ಲಿ ಆಕಳುಗಳಿರಬೇಕು. ಅವುಗಳ ಜೋಪಾನದಲ್ಲಿ ವಿದ್ಯಾರ್ಥಿಗಳೂ

ಪಾಲ್ಗೊಳ್ಳಬೇಕು. ಅಭ್ಯಾಸವಿಲ್ಲದಿರುವಾಗ ವಿದ್ಯಾರ್ಥಿಗಳು ತೋಟದಲ್ಲಿ ಮಡಿ ಮಾಡುತ್ತ ಸಸಿಗಳಿಗೆ ನೀರುಣಿಸುತ್ತ, ಬೇಲಿಯನ್ನು ಸರಿಪಡಿಸುತ್ತ, ಕೆಲಸ ಮಾಡುತ್ತಿರಬೇಕು. ಹೀಗಿರುವಾಗ ಮಾನಸಿಕವಾಗಿಯೂ ಶಾರೀರಿಕವಾಗಿಯೂ ನಿಸರ್ಗದೊಡನೆ ಅವರ ಸಂಬಂಧ ಏರ್ಪಡುತ್ತದೆ. ಹವಾಮಾನ ಅನುಕೂಲವಿದ್ದಾಗ ಮರಗಳ ನೆರಳಿನಲ್ಲಿಯೇ ವರ್ಗಗಳನ್ನು ತೆರೆಯಬೇಕು. ಸಂಜೆಯ ಬಿಡುವಿನಲ್ಲಿ ವಿದ್ಯಾರ್ಥಿಗಳು ನಕ್ಷತ್ರಗಳನ್ನು ನಿರೀಕ್ಷಿಸಬೇಕು. ಸಂಗೀತ ಸಾಧನೆ ಮಾಡಬೇಕು ಮತ್ತು ಪೌರಾಣಿಕ ಐತಿಹಾಸಿಕ ಕಥೆಗಳನ್ನು ಕೇಳಬೇಕು.

ವಿದ್ಯಾರ್ಥಿಗಳಿಗೆ ಶಿಕ್ಷೆ ವಿಧಿಸುವದು ತಪ್ಪು ಎಂಬುದು ರವೀಂದ್ರರ ಅಭಿಪ್ರಾಯ. ತಪ್ಪು ಮಾಡಿದ ವಿದ್ಯಾರ್ಥಿ ಹಿಂದೆ ನಮ್ಮ ದೇಶದಲ್ಲಿ ರೂಢಿಯಾಗಿದ್ದಂತೆ ತಪ್ಪಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಶಿಕ್ಷೆ ವಿಧಿಸುವದು ಅವರ ದೃಷ್ಟಿಯಲ್ಲಿ ತಪ್ಪು ಮಾಡಿದವನ ಮೇಲೆ ಸೇಡು ತೀರಿಸಿಕೊಂಡಂತೆ. ಆದರೆ ಪ್ರಾಯಶ್ಚಿತ್ತ ಮಾಡಿಕೊಳ್ಳುವದಾಗಲಿ, ಪರಿಹಾರ ಕೊಡುವದಾಗಲಿ ತಪ್ಪಿತಸ್ಥನೇ ಸ್ವಯಂಪ್ರೇರಣೆಯಿಂದ ಕೈಗೊಳ್ಳುವದಾಗಿದೆ. ಒಬ್ಬ ಮನುಷ್ಯನು ಇನ್ನೊಬ್ಬ ಮನುಷ್ಯನನ್ನು ಶಿಕ್ಷಿಸುವದೆಂದರೆ ಅವನ ತೇಜೋಭಂಗ ಮಾಡಿದಂತೆ. ಈ ಸಂದರ್ಭದಲ್ಲಿ ಇನ್ನು ಒಂದು ಮಾತನ್ನು ಅವರು ಹೇಳುತ್ತಾರೆ. ನಮ್ಮ ಮಾದರಿಯ ಶಾಲೆಗಳಲ್ಲಿ ಮೇಜು ಕುರ್ಚಿ ಬೆಂಚುಗಳು ಇರುವ ಅವಶ್ಯಕತೆಯಿಲ್ಲ. ಯೂರೋಪಿನ ಪದ್ಧತಿಯ ಬಗ್ಗೆ ಪೂರ್ವಗ್ರಹದಿಂದ ಅವರು ಈ ಮಾತು ಹೇಳುತ್ತಿಲ್ಲ. ಅಮುಖ್ಯವಾದುದೆಲ್ಲವನ್ನೂ ವರ್ಜಿಸಿಬಿಡಬೇಕೆಂಬ ತತ್ವ ಅವರ ಮನಸ್ಸಿನಲ್ಲಿದೆ. ಸರಳತೆ, ಸಹಜತೆ ಹಾಗೂ ನೆಮ್ಮದಿ ಇವು ನಾಗರಿಕರ ಲಕ್ಷಣಗಳಾಗಿದ್ದರೆ ಅತಿರೇಕ, ಡಾಂಭಿಕತೆ ಇವು ಅನಾಗರಿಕರ ಲಕ್ಷಣಗಳಾಗಿವೆ. ಇದನ್ನವರು ತಮ್ಮ ಶಾಲೆಯಲ್ಲಿ ಎಲ್ಲಿ ನೋಡಿದರಲಿ ಕಂಡುಬರುವ ಸರಳ ಜೀವನದ ಪ್ರತ್ಯಕ್ಷ ಉದಾಹರಣೆಯಿಂದ ವಿದ್ಯಾರ್ಥಿಗಳು ಕಲಿಯಬೇಕು. ಒಂದು ವೇಳೆ ಅವರಿದನ್ನು ಕಲಿಯದಿದ್ದರೆ ಕೈಮುಟ್ಟಿ ಕೆಲಸಮಾಡುವ ಬಗ್ಗೆ ಅವರು ಬೇಸರಿಸುತ್ತಾರೆ ಮತ್ತು ನೆಲದ ಮೇಲೆ ಕೂಡುವದು ಕಡಿಮೆ ಮಟ್ಟದ ಶಿಕ್ಷಣ ಎಂದು ಭಾವಿಸುತ್ತಾರೆ.

ಶಿಕ್ಷಣ ಕ್ರಮದ ಅವಸ್ಥಾಂತರಗಳು (The Vicissitudes of Education - ೧೮೯೨) ಎಂಬ ಅವರ ಮೊಟ್ಟ ಮೊದಲ ಪ್ರಬಂಧ ಮಾತೃಭಾಷೆಯೇ ಬಾಲಕರ ಶಿಕ್ಷಣಕ್ಕೆ, ಎಲ್ಲದರ ವಿಕಾಸಕ್ಕೆ, ಮುಖ್ಯ ಸಾಧನೆ ಎಂಬ ವಿಷಯವನ್ನು ತಿಳಿಸುವದರಿಂದ ಮಹತ್ವದ್ದಾಗಿದೆ. ಈ ದೇಶದಲ್ಲಿ ಹುಡುಗರಿಗೆ ಇರುವ ಅವಕಾಶವೇ ಬಹಳ ಕಡಿಮೆ. ಅವನು ಪರಭಾಷೆಯನ್ನು ಕಲಿಯಲೇಬೇಕು; ಹಲವು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಬೇಕು; ಆದಷ್ಟು ಕಡಿಮೆ ಅವಧಿಯಲ್ಲಿ ಆತ ಯಾವದೊ ನೌಕರಿಯೊಂದಕ್ಕೆ ಅರ್ಹತೆಯನ್ನು ಗಳಿಸಿಕೊಳ್ಳಬೇಕು. ಆದಕಾರಣ ಉಸಿರುಕಟ್ಟಿಸುವ ವೇಗದಲ್ಲಿ ಹಲವಾರು ಪಠ್ಯ ಪುಸ್ತಕಗಳನ್ನು ಉರು ಹೊಡೆಯುವದಲ್ಲದೆ ಅವನಿಗೆ ಬೇರೆ ದಾರಿ ಏನಿದೆ? ಆತನ ತಂದೆ ತಾಯಿಗಳಾಗಲಿ, ಉಪಾಧ್ಯಾಯರಾಗಲಿ, ಈತ ತನ್ನ ಮನೋಲ್ಲಾಸಕ್ಕಾಗಿ ಬೇರೆ ಏನನ್ನಾದರೂ ಓದುವುದನ್ನು ಕಂಡರೆ ಈ ಹುಡುಗ ತನ್ನ ವೇಳೆ ಹಾಳುಮಾಡುತ್ತಿದ್ದಾನೆಂದು ತಕ್ಷಣವೇ ಅದನ್ನು ಕಿತ್ತು ಕೊಂಡುಬಿಡುತ್ತಾರೆ. ಯಾವಾಗ ವಿದ್ಯಾರ್ಥಿಯೊಬ್ಬ ತನಗೆ ಪ್ರಿಯವಾದುದನ್ನು ಓದುತ್ತಾನೋ ಆಗ ಆತನಲ್ಲಿ ಓದುವ ಅಭಿರುಚಿಯೂ ಅವನಿಗರಿವಿಲ್ಲದೆಯೇ ಹೆಚ್ಚುತ್ತದೆ. ಅಂತೆಯೆ ಓದಿದ್ದನ್ನು ಗ್ರಹಿಸುವ, ಗ್ರಹಿಸಿದ್ದನ್ನು ಅರಗಿಸಿಕೊಳ್ಳುವ ಅರಗಿಸಿಕೊಂಡದ್ದನ್ನು ತನ್ನದನ್ನಾಗಿ ಮಾಡಿಕೊಳ್ಳುವ ಶಕ್ತಿ ಸಹಜವಾಗಿ ಸರಳವಾಗಿ ಬಲಗೊಳ್ಳುತ್ತದೆ.

ಬದುಕಿನ ಕರ್ತವ್ಯ ನಿರ್ವಹಣೆಗೆ ಆಲೋಚನಾಶಕ್ತಿ ಹಾಗೂ ಕಲ್ಪನಾ ಶಕ್ತಿಗಳು ಅತ್ಯಂತ ಅನಿವಾರ್ಯವೆಂಬುದನ್ನು ರವೀಂದ್ರರು ಒತ್ತಿ ಹೇಳುತ್ತಾರೆ. ಇವಿಲ್ಲದಿದ್ದರೆ ನಾವು ನಿಜವಾದ ವ್ಯಕ್ತಿಗಳಾಗಲಾರೆವು. ಎಳೆಮಕ್ಕಳಲ್ಲಿಯೇ ಅವನ್ನು ಬೆಳೆಯಿಸಿಕೊಳ್ಳದಿದ್ದಲ್ಲಿ ಬೆಳೆದು ದೊಡ್ಡವರಾದ ಮೇಲೆ ಅವು ಬಾರವು. ಇಂಥ




ಕೆ.ವಿ. ಸುಬ್ಬಣ್ಣ ನೆನಪಿನ 'ಮೊದಲ ಓದು' ಪುಸ್ತಕ ಮಾಲೆ

ಕನ್ನಡ ಸಾಹಿತ್ಯವನ್ನು ಪ್ರವೇಶಿಸಬಯಸುವ ಹೊಸ ಓದುಗರಿಗೆ ಕನ್ನಡದ ಪ್ರಮುಖ ಲೇಖಕರ ಹಾಗೂ ಕನ್ನಡದ ಹೊರಗಿನ ಮುಖ್ಯ ಚಿಂತಕರ ಆಯ್ದ ಬರಹಗಳ ಕಿರು ವಾಚಿಕೆಗಳು ಲಭ್ಯವಾಗಬೇಕು – ಎಂಬ ಉದ್ದೇಶವಿಟ್ಟುಕೊಂಡು ಅಕ್ಷರ ಪ್ರಕಾಶನವು ಈ ಪುಸ್ತಕ ಮಾಲಿಕೆಯನ್ನು ಆರಂಭಿಸಿದೆ. ಆಯಾ ಲೇಖಕರನ್ನು ಮೊದಲ ಬಾರಿಗೆ ಪರಿಚಯಿಸಿಕೊಳ್ಳುವವರಿಗೆ ಉಪಯುಕ್ತವಾಗುವಂತೆ ಈ ಪುಸ್ತಕಗಳ ವಸ್ತು-ವಿನ್ಯಾಸಗಳನ್ನು ರೂಪಿಸಲಾಗಿದೆ. ಮಾರುಕಟ್ಟೆಗೆ ಬಿಡುಗಡೆಯಾಗುವ ಜತೆಗೆ, ಈ ಮಾಲಿಕೆಯ ಪುಸ್ತಕಗಳನ್ನು ನೀನಾಸಂ ಪ್ರತಿಷ್ಠಾನವು ನಡೆಸುತ್ತಿರುವ ಸಾಹಿತ್ಯ ಅಧ್ಯಯನ ಶಿಬಿರಗಳಲ್ಲಿ ಪಠ್ಯಗಳಾಗಿಯೂ ಬಳಸಲಾಗುತ್ತದೆ.

ಅಕ್ಷರ ಪ್ರಕಾಶನಕ್ಕೆ ೫೦ ತುಂಬಿರುವ ಸಂದರ್ಭದಲ್ಲಿ ಅಕ್ಷರ ಪ್ರಕಾಶನ ಮತ್ತು ನೀನಾಸಂ ಸಂಸ್ಥೆಗಳ ಪ್ರೇರಕ ಶಕ್ತಿಯಾಗಿದ್ದ ದಿವಂಗತ ಕೆ. ವಿ. ಸುಬ್ಬಣ್ಣನವರ ನೆನಪಿಗೆ ಈ ಹೊಸ ಪುಸ್ತಕ ಮಾಲೆಯ ಮೊದಲ ಕಂತಿನ ೨೫ ಪುಸ್ತಕಗಳನ್ನು ೨೦೦೬ನೆಯ ಅಕ್ಟೋಬರ್‌ನಲ್ಲಿ ಹೊರತರಲಾಗಿದೆ. ಎರಡನೆಯ ಕಂತಿನ ೧೦ ಪುಸ್ತಕಗಳನ್ನು ೨೦೦೭ನೆಯ ಅಕ್ಟೋಬರ್‌ನಲ್ಲಿ ಹೊರತರಲಾಗಿದೆ. ಪ್ರಕಟಣೆಯ ಹಕ್ಕುಗಳ ಲಭ್ಯತೆಯನ್ನಾಧರಿಸಿ, ಮುಂದಿನ ವರ್ಷಗಳಲ್ಲಿ ಈ ಮಾಲೆಯನ್ನು ಇನ್ನೂ ಹಲವು ಲೇಖಕ-ಕೃತಿ-ಪ್ರಕಾರಗಳಿಗೆ ವಿಸ್ತರಿಸಬೇಕೆಂಬುದು ಪ್ರಕಾಶನದ ಆಶಯ.

**ಮೊದಲ ಕಂತಿನ ಪುಸ್ತಕಗಳು :** ಪಂಪನ ಆದಿಪುರಾಣ ಪ್ರವೇಶ ❑ ಜನ್ನನ ಯಶೋಧರ ಚರಿತೆ ಪ್ರವೇಶ ❑ ವಚನ ಪ್ರವೇಶ ❑ ರಾಘವಾಂಕನ ಹರಿಶ್ಚಂದ್ರ ಕಾವ್ಯ ಪ್ರವೇಶ ❑ ಕುಮಾರವ್ಯಾಸನ ಕರ್ಣಾಟಕ ಭಾರತ ಕಥಾಮಂಜರಿ ಪ್ರವೇಶ ❑ ಕುವೆಂಪು ಅವರ ಆಯ್ದ ಕವಿತೆಗಳು ❑ ಪು.ತಿ.ನ. ಅವರ ಆಯ್ದ ಕವಿತೆಗಳು ❑ ಕೆ. ಎಸ್. ನರಸಿಂಹ ಸ್ವಾಮಿ ಅವರ ಆಯ್ದ ಕವಿತೆಗಳು ❑ ಗೋಪಾಲಕೃಷ್ಣ ಅಡಿಗ ಅವರ ಆಯ್ದ ಕವಿತೆಗಳು ❑ ಚಂದ್ರಶೇಖರ ಕಂಬಾರ ಅವರ ಆಯ್ದ ಕವಿತೆಗಳು ❑ ಎ. ಕೆ. ರಾಮಾನುಜನ್ ಅವರ ಆಯ್ದ ಕವಿತೆಗಳು ❑ ಸು.ರಂ. ಎಕ್ಕುಂಡಿ ಅವರ ಆಯ್ದ ಕವಿತೆಗಳು ❑ ಯು. ಆರ್. ಅನಂತಮೂರ್ತಿ ಅವರ ಆಯ್ದ ಕಥೆಗಳು ❑ ಪಿ. ಲಂಕೇಶ್ ಅವರ ಆಯ್ದ ಕಥೆಗಳು ❑ ಯಶವಂತ ಚಿತ್ತಾಲ ಅವರ ಆಯ್ದ ಕಥೆಗಳು ❑ ಶಾಂತಿನಾಥ ದೇಸಾಯಿ ಅವರ ಆಯ್ದ ಕಥೆಗಳು ❑ ಪೂರ್ಣಚಂದ್ರ ತೇಜಸ್ವಿ ಅವರ ಆಯ್ದ ಕಥೆಗಳು ❑ ದೇವನೂರ ಮಹಾದೇವ ಅವರ ಆಯ್ದ ಕಥೆಗಳು ❑ ವೈದೇಹಿ ಅವರ ಆಯ್ದ ಕಥೆಗಳು ❑ ಶಿವರಾಮ ಕಾರಂತ ಅವರ ಆಯ್ದ ಬರಹಗಳು ❑ ಡಿ.ವಿ.ಜಿ. ಅವರ ಆಯ್ದ ಬರಹಗಳು ❑ ಗೌರೀಶ ಕಾಯ್ಕಿಣಿ ಅವರ ಆಯ್ದ ಬರಹಗಳು ❑ ಕೀರ್ತಿನಾಥ ಕುರ್ತಕೋಟಿ ಅವರ ಆಯ್ದ ಬರಹಗಳು ❑ ಬಿ.ಜಿ.ಎಲ್. ಸ್ವಾಮಿ ಅವರ ಆಯ್ದ ಬರಹಗಳು ❑ ಡಿ. ಆರ್. ನಾಗರಾಜ್ ಅವರ ಆಯ್ದ ಬರಹಗಳು.

**ಎರಡನೆಯ ಕಂತಿನ ಪುಸ್ತಕಗಳು :** ಶಿವಕೋಟ್ಯಾಚಾರ್ಯನ ವಡ್ಡಾರಾಧನೆ ಪ್ರವೇಶ ❑ ರನ್ನನ ಗದಾಯುದ್ಧ ಪ್ರವೇಶ ❑ ಲಕ್ಷ್ಮೀಶನ ಜೈಮಿನಿ ಭಾರತ ಪ್ರವೇಶ ❑ ಮಹಾತ್ಮಗಾಂಧಿ ಅವರ ಆಯ್ದ ಬರಹಗಳು ❑ ರಾಮಮನೋಹರ ಲೋಹಿಯಾ ಅವರ ಆಯ್ದ ಬರಹಗಳು ❑ ಪು.ತಿ.ನ. ಅವರ ಆಯ್ದ ಬರಹಗಳು ❑ ರಾಘವೇಂದ್ರ ಖಾಸನೀಸ ಅವರ ಆಯ್ದ ಕಥೆಗಳು ❑ ಎಚ್. ಎಸ್. ಶಿವಪ್ರಕಾಶ್ ಅವರ ಆಯ್ದ ಕವಿತೆಗಳು ❑ ವೈದೇಹಿ ಅವರ ಆಯ್ದ ಕವಿತೆಗಳು ❑ ಪ್ರತಿಭಾ ನಂದಕುಮಾರ್ ಅವರ ಆಯ್ದ ಕವಿತೆಗಳು.

ಪ್ರತಿಯೊಂದರ ಬೆಲೆ : ರೂ. ೭೫
ಒಟ್ಟು ೩೫ ಶೀರ್ಷಿಕೆಗಳ
ಒಂದು ಸೆಟ್‌ನ ಬೆಲೆ : ರೂ. ೨೬೨೫



ವಿವರಗಳಿಗೆ
**ಅಕ್ಷರ ಪ್ರಕಾಶನ**
ಹೆಗ್ಗೋಡು – ೫೭೭ ೪೧೭, ಸಾಗರ
ಶಿವಮೊಗ್ಗ ಜಿಲ್ಲೆ, ದೂರವಾಣಿ : ೦೮೧೮೩ – ೨೬೫೪೭೬

ಶಕ್ತಿಗಳ ಬೆಳವಣಿಗೆಗೆ ನಮ್ಮ ಇಂದಿನ ಶಿಕ್ಷಣಕ್ರಮ ಅವಕಾಶವನ್ನೇ ನೀಡುವುದಿಲ್ಲ. ನಮ್ಮ ಬಾಲ್ಯದ ಬಹು ಕಾಲವೆಲ್ಲಾ ಅಸಮರ್ಥರಾದ ಉಪಾಧ್ಯಾಯರಿಂದ ಪರಭಾಷೆಯನ್ನು ಕಲಿಯುವದರಲ್ಲಿಯೆ ಕಳೆದು ಹೋಗುತ್ತದೆ. ಇಂಗ್ಲಿಷ್ ಭಾಷೆಯನ್ನು ಕಲಿಯುವದೆ ಮೊದಲ ಕಷ್ಟ, ಇನ್ನು ಆಂಗ್ಲ ಚಿಂತನೆ ಹಾಗೂ ಭಾವನೆಗಳನ್ನು ನಮ್ಮದನ್ನಾಗಿ ಮಾಡಿಕೊಳ್ಳುವದು ಇನ್ನೂ ಕಷ್ಟ. ಈ ಪ್ರಯತ್ನದಲ್ಲಿ ನಮ್ಮ ಆಲೋಚನಾ ಶಕ್ತಿ ಪ್ರಕಾಶನಕ್ಕೆ ಅವಕಾಶವನ್ನು ಪಡೆಯದೆ ಜಡವಾಗಿಬಿಡುತ್ತದೆ.

ನಾವು ಪಡೆಯುತ್ತಿರುವ ಶಿಕ್ಷಣಕ್ಕೂ ನಮ್ಮ ಬದುಕಿಗೂ ಯಾವ ಸಂಬಂಧವೂ ಇಲ್ಲದ ಕಾರಣ, ನಾವು ಓದುವ ಪಠ್ಯಪುಸ್ತಕಗಳು ನಮ್ಮ ಬದುಕಿನ ಯಾವ ಚಿತ್ರವನ್ನೂ ಸ್ಪಷ್ಟವಾಗಿ ಮೂಡಿಸುವದಿಲ್ಲ, ನಮ್ಮ ಸಮಾಜದ ಯಾವ ಆದರ್ಶಗಳನ್ನೂ ಎತ್ತಿ ತೋರುವದಿಲ್ಲ. ಅವುಗಳ ಪುಟ ಪುಟಗಳಲ್ಲಿ ನಮ್ಮ ದೈನಂದಿನ ಜೀವನದ ಹೋರಾಟಕ್ಕೆ ಪ್ರವೇಶವಿಲ್ಲ; ಅಲ್ಲಿನ ಪಾತ್ರಗಳಲ್ಲಿ ನಮಗೆ ಪ್ರಿಯ ಪರಿಚಿತವಾದ ವ್ಯಕ್ತಿಗಳನ್ನು ಕಂಡು ಸುಖಿಸಲು ಅವಕಾಶವಿಲ್ಲ; ನಮ್ಮ ನೆಲ, ನಮ್ಮ ಮುಗಿಲು, ನಮ್ಮ ಸಂಜೆಯ ಮುಂಜಾವುಗಳ ಸೊಗಸು, ನಮ್ಮ ಹೊಲ ಗದ್ದೆ ಬಯಲುಗಳ ನೋಟ ಯಾವದೂ ಅಲ್ಲಿ ಕಾಣದು. ಈ ಪರಿಸ್ಥಿಯಲ್ಲಿ ಶಿಕ್ಷಣ ಜೀವನ ಇವೆರಡೂ ಎಂದೆಂದಿಗೂ ಒಂದಾಗದೆ ವಿಶೇಷ ಅಂತರದಲ್ಲಿಯೆ ದೂರ ನಿಲ್ಲುವಂತಾದರೆ ಇನ್ನೇನಾದೀತು ? ನಮ್ಮ ವಿದ್ಯಾಭ್ಯಾಸ, ರವೀಂದ್ರ ರೆಂದಂತೆ ನಮ್ಮ ಬೇರುಗಳಿಗೆ ದೂರವಾದ ಯಾವುದೋ ನೆಲದಲ್ಲಿ ಬಿದ್ದ ಮಳೆಯಂತಾಗಿದೆ.

ಮಾತೃಭಾಷೆಯಲ್ಲಿ ಶಿಕ್ಷಣ ಕೊಡುವುದರಿಂದಲೇ ವಿದ್ಯಾರ್ಥಿಗಳು ಸಹಜವಾಗಿ ವಿಷಯವನ್ನು ಗ್ರಹಿಸ ಬಲ್ಲರು ಎಂಬ ಮಾತು ಈ ಮೊದಲೇ ಬಂದಿದೆ. ವಿದ್ಯಾರ್ಥಿ ತಿಳಿದುಕೊಳ್ಳಬೇಕಾದ ವಿಷಯವನ್ನು ಪರಭಾಷೆಯಲ್ಲಿ ಕೇಳುವಾಗ ಅವನ ಮನಸ್ಸು ವಿಷಯ ಗ್ರಹಣ ಮತ್ತು ಭಾಷಾಗ್ರಹಣಗಳ ಗೊಂದಲದಲ್ಲಿ ಸಿಲುಕಿ ತಿಳಿಯದಂತಾಗುತ್ತದೆ. ಮಾತೃಭಾಷೆಯಲ್ಲಿ ಈ ರೀತಿಯ ತೊಳಲಾಟವು ಬಾರದು. ತಮ್ಮ ಭಾಷೆ ಸಂಸ್ಕೃತಿ ಮತ್ತು ಪರಂಪರೆಗಳ ಆಧಾರದ ಮೇಲೆ ಹೊರ ಜಗತ್ತಿನ ಬೌದ್ಧಿಕ, ನೈತಿಕ, ಸಾಂಸ್ಕೃತಿಕ ವಿಚಾರಗಳನ್ನು ಧಾರಾಳವಾಗಿ ಸ್ವೀಕರಿಸಬಹುದೆಂದು ಠಾಕೂರರು ಸಾರಿ ಹೇಳಿದರು. ನಿಜವಾದ ಶಿಕ್ಷಕನನ್ನು ದೊರಕಿಸುವುದೇ ಕಠಿಣ ಕೆಲಸವೆಂಬುದನ್ನು 'ಶಿಕ್ಷಣ ಸಮಸ್ಯೆ' (Problem of Education : 1906) ಎಂಬ ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ. ಅಂಥವನನ್ನು ಹುಡುಕಿದನಂತರ ಪಾಠಕ್ರಮ, ಶಿಸ್ತು, ಮೊದಲಾದ ವಿಷಯಗಳನ್ನು ನಿರ್ಣಯಿಸುವದು ಸುಲಭವೆಂದು ಅವರು ಹೇಳುತ್ತಾರೆ. ಶಿಕ್ಷಕನ ಉದ್ಯೋಗ ಮತ್ತು ಜ್ಞಾನಕ್ಕಿಂತ ಅವನ ಇರುವಿಕೆಯೆ ಬಹಳ ಮಹತ್ವದ್ದು. ಕೇವಲ ಭಾರವಾದ ಪಾಂಡಿತ್ಯಕ್ಕಿಂತ ಅದು ಪ್ರಕಾಶಮಾನವಾಗಿರುವುದು ಮುಖ್ಯ. ಅಂತಹ ಬೆಳಕನ್ನೀಯುವ ಮನೋಭಾವನೆ ಶಿಕ್ಷಕರಲ್ಲಿಬೇಕಾದ ದ್ದು. ಶಿಕ್ಷಕ ಮತ್ತು ವಿದ್ಯಾರ್ಥಿಗಳ ಮಾನಸಿಕ ಮಿಲನ

## ೧. ಲೇಖಕ

ಸೋಂಕಿಲ್ಲದ
ಚಲನಶೀಲ
ಬಾಳೆಂಬ ಬಂಡಿಗೆ
ಅಳಿವಿಲ್ಲದ ಕಡಾಣಿ !

## ೨. ಪುಸ್ತಕ

ಅಂಗರಂಗದ
ಒನಪು ವೈಯ್ಯಾರವ
ತಿದ್ದಿತೀಡಿ
ಒಳಗಣ್ಣ ತೆರೆಸುವ ದೀಪಧಾರಿ !

ಎಸ್. ಕುಮಾರಸ್ವಾಮಿ
ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು
ಮೇಗರವಳ್ಳಿ (ಅಂಚೆ) ೫೭೭ ೪೨೪
ಆಗುಂಬೆ ಹೋಬಳಿ, ತೀರ್ಥಹಳ್ಳಿ ತಾಲ್ಲೂಕು
ಶಿವಮೊಗ್ಗ ಜಿಲ್ಲೆ

ಮತ್ತು ಹೊಂದಾಣಿಕೆಗಳೇ ನಿಜವಾದ ಶಿಕ್ಷಣದ ಗುರಿ. ಶಿಕ್ಷಣವೆಂದರೆ ಒಂದು ದೀಪದಿಂದ ಇನ್ನೊಂದು ದೀಪವನ್ನು ಹೊತ್ತಿಸಿ ಬೆಳಕನ್ನುಂಟುಮಾಡಿದಂತೆ. ಶಿಕ್ಷಕನು ಹೆಚ್ಚಿನದನ್ನು ಕಲಿಯುವುದನ್ನು ಮರೆತರೆ ದೀಪವು ನಂದಿದಂತೆಯೇ ಎಂಬ ಭಾವನೆಯನ್ನು ರವೀಂದ್ರರು ವ್ಯಕ್ತಪಡಿಸಿದ್ದಾರೆ.

ಆರ್ಥಿಕ ಅಡಚಣೆಗಳು ಇಂದಿನ ಶಿಕ್ಷಕನು ವಿದ್ಯಾರ್ಥಿಗಳನ್ನು ಹುಡುಕಲು ಒತ್ತಾಯಿಸುತ್ತವೆ. ಆದರೆ ಸ್ವಾಭಾವಿಕವಾದ ರೀತಿಯಲ್ಲಿ ನೋಡಿದರೆ, ವಿದ್ಯಾರ್ಥಿಗಳೇ ಶಿಕ್ಷಕರನ್ನು ಹುಡುಕಿಕೊಂಡು ಹೋಗಬೇಕು. ಶಿಕ್ಷಕನು ಈಗ ವ್ಯಾಪಾರಿಯಾಗಿದ್ದು , ಗಿರಾಕಿಗಳಿಗಾಗಿ ಅಡ್ಡಾಡುತ್ತ, ಶಿಕ್ಷಣದ ಮಾರಾಟದಲ್ಲಿ ತೊಡಗಿದ್ದಾನೆ. ಅವನಲ್ಲಿ ಮಾರಾಟಕ್ಕಿರುವ ಸಾಮಾನುಗಳ ಪಟ್ಟಿಯಲ್ಲಿ [illegible] ಆದರ, ಶ್ರದ್ಧೆ ಅಥವಾ ಯಾವುದೇ [illegible] ತನ ಸಾಮಾನು ಭಾವನೆಯನ್ನು ಕಾಣುವಂತಿಲ್ಲ. ಅ[illegible] ಗಳನ್ನು ಮಾರಿದ ಮೇಲೆ ಪಗಾರದ ರೂಪದಲ್ಲಿ ಅದಕ್ಕೆ ಹಣ ಸಂದಾಯವಾಗಿರುತ್ತದೆ. ಅನಂತರ ವಿದ್ಯಾರ್ಥಿಗಳ ಜೊತೆಗೆ ಅವನ ಕೆಲಸವೇನೂ ಇಲ್ಲ. ಆದರೆ ಇಂದಿನ ಪ್ರತಿಕೂಲ ಪರಿಸ್ಥಿತಿಯಲ್ಲೂ ತಮ್ಮ ಅಂತಶ್ಶಕ್ತಿಯಿಂದ ಹಣಕಾಸಿನ ವಿಚಾರವನ್ನು ಅಷ್ಟೊಂದು ಮಹತ್ವದ್ದೆಂದು ಗಣಿಸದೆ ಕಾರ್ಯಪ್ರವೃತ್ತರಾದ ಶಿಕ್ಷಕರು ಕೆಲವರಾದರೂ ನಮ್ಮ ದೇಶದಲ್ಲಿ ಇನ್ನೂ ಇದ್ದಾರೆ. ಇವರಲ್ಲಿಯೇ ಒಬ್ಬನನ್ನು ಗುರುವಿನ ಸ್ಥಾನದಲ್ಲಿ ಎತ್ತಿ ಹಿಡಿಯಬೇಕು. ಅವನು ಗುರುವಾದಾಗ ತನ್ನ ಜೀವನದಿಂದ ಶಿಷ್ಯರಲ್ಲಿ ಜೀವ ತುಂಬುವುದರಿಂದ, ತನ್ನ ವಿದ್ಯೆಯಿಂದ ಅವರ ಹಣತೆಯನ್ನು ಹೊತ್ತಿಸುವು ದರಿಂದ ಮತ್ತು ತನ್ನ ಪ್ರೀತಿಯಿಂದ ಅವರನ್ನು ಸಂತೋಷಗೊಳಿಸುವದರಿಂದ ಒಳ್ಳೆಯ ಹೆಸರು ಬರುತ್ತದೆಂಬುದನ್ನು ಆತ ಮರೆಯಲಾರ.

ಠಾಕೂರರು ವ್ಯಕ್ತಿಯ ಪ್ರಯತ್ನ ಮತ್ತು ಸ್ವಾತಂತ್ರ್ಯ ಗಳಲ್ಲಿ ಶ್ರದ್ಧೆಯನ್ನಿರಿಸಿಕೊಂಡುದರಿಂದ ಕಡ್ಡಾಯದ ನಿಯಮಗಳನ್ನು ಅಷ್ಟೊಂದು ನಂಬಲಿಲ್ಲ. ಭಾರತೀಯ ಸಂಸ್ಕೃತಿ, ಧ್ಯೇಯ ಮತ್ತು ಪರಂಪರೆಗಳನ್ನು ಆದರದಿಂದ ಕಂಡರೂ ಪಾಶ್ಚ್ಯಾತ್ಯರ ಪ್ರಭಾವದಿಂದ ಅವು ಗಳಲ್ಲಿ ಬದಲಾವಣೆ ಮಾಡಿಕೊಳ್ಳಬೇಕಾಗಿದೆಯೆಂಬ ಅಂಶವನ್ನು ಗುರುತಿಸಿದ್ದರು. ಹೊಸತನವನ್ನು, ಹೊಸ ಹೊಸ ಸಂಶೋಧನೆಗಳನ್ನು, ಸ್ವೀಕರಿಸಲು ರವೀಂದ್ರರ ಮನಸ್ಸು ಯಾವಾಗಲೂ ಇಷ್ಟಪಡುತ್ತಿತ್ತು. ಆದ್ದರಿಂದಲೇ ಅವರು ಬದಲಾವಣೆಯೇ ಜೀವನದ ತತ್ವವೆಂಬ ಮಾತನ್ನೂ ಸಾರಿ ಹೇಳಿದರು. ಹಲವಾರು ಭಾಷೆ ಮತ್ತು ಜನಾಂಗಗಳಿದ್ದಾಗ್ಯೂ ಭಾರತವು ಅಂತರರಾಷ್ಟ್ರೀಯ ರಂಗದಲ್ಲಿ ವಿಶಿಷ್ಟವಾದ ಪಾತ್ರವನ್ನು ವಹಿಸ ಬೇಕಾಗುತ್ತದೆಂಬ ಮಾತನ್ನು ಠಾಕೂರರು ತಮ್ಮ 'ಶಿಕ್ಷಣ ಸಮನ್ವಯ' (Unity of Education) ಎಂಬ ನಿಬಂಧದಲ್ಲಿ ಎತ್ತಿ ತೋರಿಸಿದ್ದಾರೆ. ಪ್ರೊ॥ ಹುಮಾಯೂನ್ ಕಬೀರ್ ಅವರು ಹೇಳುವಂತೆ ಶಾಂತಿನಿಕೇತನದ ಸ್ಥಾಪನೆಗಿಂತ ಪೂರ್ವದ ಅವರ ಬರಹಗಳ ಉದ್ದೇಶವೆಲ್ಲ ಮಾತೃಭಾಷೆಯಲ್ಲಿಯೇ ಶಿಕ್ಷಣವನ್ನು ಕೊಡಲೇಬೇಕೆಂಬುದನ್ನು ತಿಳಿಸುವದೇ ಆಗಿತ್ತು. ಶಾಂತಿನಿಕೇತನವನ್ನು ಸ್ಥಾಪಿಸಿದ ನಂತರ ಅವರ ದೃಷ್ಟಿಯೆಲ್ಲವೂ ನಿಸರ್ಗದ ಸನ್ನಿಧಿಯಲ್ಲಿ ವಿದ್ಯಾರ್ಥಿಗಳಿಗೆ ರಾಷ್ಟ್ರೀಯ ಗುಣಗಳನ್ನು ಕಲಿಸಲು ಶಾಲೆಯನ್ನು ಕಟ್ಟುವದರಲ್ಲಿಯೇ ಮಗ್ನವಾಗಿತ್ತು. ಅನುಭವ ಮತ್ತು ಸಹಾನುಭೂತಿಯಿಂದ ರವೀಂದ್ರರು ಪಕ್ವವಾದಂತೆಲ್ಲ ಮಾನವನಲ್ಲಿ ನಂಬುಗೆಯನ್ನೇ ಆಧಾರವಾಗಿರಿಸಿಕೊಂಡು ಬೆಳೆಯಿಸಿಕೊಂಡ ವಿಶ್ವ ಮಾನವ ದೃಷ್ಟಿ ಮತ್ತು ಮಾನವೀಯತೆಯನ್ನು ರೂಪಿಸುವಂತೆ ಪೌರಸ್ತ್ಯ ಪಾಶ್ಚಾತ್ಯ ಮೌಲ್ಯಗಳನ್ನು ಸಮನ್ವಯಗೊಳಿಸುವ ಉದ್ದೇಶದಿಂದ 'ವಿಶ್ವಭಾರತಿ' ಎಂಬ ವಿಶ್ವವಿದ್ಯಾಲಯವನ್ನು ಸಂಸ್ಥಾಪಿಸಲು ತೊಡಗಿತು.

ಶ್ರೀ ವಿ. ಸೀತಾರಾಮಯ್ಯನವರ ಮಾತಿನಲ್ಲಿ ಹೇಳ ಬಹುದಾದರೆ, ''ಸದ್ಯ ನಮಗೆ ಸಂಪತ್ತಿಲ್ಲ, ಐಶ್ವರ್ಯ ವಿಲ್ಲ, ಶಕ್ತಿ ದರ್ಪಗಳಿಲ್ಲ ನಿಜ. ಆದರೆ ಸಿದ್ಧಿಗೆ ಬೇಕಾದ ಇತರ ಸಾರಾಂಶಗಳು ಇವೆ. ಅರಸಿದರೆ ಸಿಕ್ಕುವವು. ಅಂಥ ದಾನಕ್ಕೆ ನಮ್ಮನ್ನು ಸಿದ್ಧಗೊಳಿಸುವದೇ (ಠಾಕೂರರಿಗೆ) ಶಿಕ್ಷಣದ ಗುರಿ; ಆ ಪ್ರಯತ್ನವೇ ''ಶಿಕ್ಷಣದ ವಿಧಾನ'' ('ರವೀಂದ್ರ ಪ್ರಶಸ್ತಿ' - ೧೯೬೨).

ಶಿಕ್ಷಣ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊಸ ಪ್ರಯೋಗಗಳು ನಡೆದಿದ್ದು ಪರಿಸ್ಥಿತಿಯಲ್ಲಿ ಸಾಕಷ್ಟು ಸುಧಾರಣೆಗಳು ಕಂಡುಬಂದಿವೆಯಾದರೂ ಸುಮಾರು ನೂರು ವರ್ಷಗಳ ಹಿಂದೆಯೇ ರವೀಂದ್ರನಾಥ ಠಾಕೂರರು ವ್ಯಕ್ತಪಡಿಸಿದ ಎಷ್ಟೋ ವಿಚಾರಗಳು ಹಾಗೂ ಚಿಂತನೆಗಳು ಇಂದಿಗೂ ಪ್ರಸ್ತುತವಾಗಿವೆ ಯೆಂಬುದನ್ನು ಮರೆಯುವಂತಿಲ್ಲ.

ಚೆನ್ನವೀರ ಕಣವಿ
'ಚೆಂಬೆಳಕು', ಕಲ್ಯಾಣನಗರ
ಧಾರವಾಡ -೫೮೦ ೦೦೭

# ನೊಬೆಲ್ ಪುರಸ್ಕೃತ ಕಪ್ಪು ಜನಾಂಗದ ಪ್ರಥಮ ಸಾಹಿತಿ ಸೋಯಿಂಕಾ

ಬಿ. ಎ. ಸನದಿ

ನೈಜೀರಿಯಾದ ಶ್ರೇಷ್ಠ ನಾಟಕಕಾರ-ಲೇಖಕರೆಂದು ಹೆಸರಾದ ಸೋಯಿಂಕಾ ಅವರಿಗೆ ನೊಬೆಲ್ ಪಾರಿತೋಷಕ ದೊರೆತಾಗ ಅವರಿಗೆ ಕೇವಲ ೫೨ ವರ್ಷಗಳ ವಯಸ್ಸು. ಆಗಲೇ ಅವರು ಆಫ್ರಿಕನ್ ದೇಶಗಳ ಜನಮಾನಸದ ಮೇಲೆ ಗಾಢವಾದ ಪ್ರಭಾವ ಬೀರಿದ ಲೇಖಕರೆಂಬ ಖ್ಯಾತಿಗೆ ಪಾತ್ರರಾಗಿದ್ದರು. ಅವರ 'ಮಿಥ್', 'ಲಿಟೆರೇಚರ್ ಎಂಡ್ ದಿ ಆಫ್ರಿಕನ್ ವರ್ಲ್ಡ್' ಎಂಬ ಸಾಹಿತ್ಯವಿಮರ್ಶೆಯ ಕೃತಿಗಳು, 'ಎ ಡಾನ್ಸ್ ಆಫ್ ದಿ ಫಾರೆಸ್ಟ್ಸ್', 'ಡೆಥ್ ಎಂಡ್ ದಿ ಕಿಂಗ್ಸ್ ಹಾರ್ಸ್‌ಮನ್', 'ಎ ಪ್ಲೇ ಆಫ್ ಜಾಯಿಂಟ್ಸ್', ಎಂಬಂಥ ನಾಟಕಗಳೂ, ಎರಡು ಕವಿತಾಸಂಗ್ರಹಗಳೂ, ಎರಡು ಕಾದಂಬರಿಗಳೂ ಪ್ರಕಟವಾಗಿದ್ದವು. ಅವರ 'ಅಕೆ' ಮತ್ತು 'ದಿ ಇಯರ್ಸ್ ಆಫ್ ಚೈಲ್ಡ್‌ಹುಡ್' ಎಂಬ ಹೆಸರಿನಲ್ಲಿ ಜೀವನಸ್ಮರಣೆಗಳ ಎರಡು ಭಾಗಗಳು ಬೆಳಕಿಗೆ ಬಂದು ಬಹಳೇ ಜನಪ್ರಿಯವಾಗಿದ್ದವು. ಒಬ್ಬ ಕ್ರಾಂತಿಕಾರೀ ಲೇಖಕರೆಂದು ಮಾತ್ರವಲ್ಲದೆ, ಸೋಯಿಂಕಾ ತಮ್ಮ ದೇಶದ ರಾಜಕೀಯ ರಂಗದಲ್ಲಿ ಮಾಡಿದ ಕೆಲಸಕ್ಕಾಗಿಯೂ ಹೆಸರುವಾಸಿಯಾಗಿದ್ದಾರೆ. ಬ್ರಿಟಿಷ್ ಆಡಳಿತದಿಂದ ತಮ್ಮ ದೇಶವನ್ನು ಮುಕ್ತಗೊಳಿಸಲು ನಡೆದ ಹೋರಾಟದಲ್ಲಿ ಸೋಯಿಂಕಾ ಸಕ್ರಿಯ ಪಾತ್ರ ವಹಿಸಿದವರು. ಅವರು ಇತ್ತೀಚೆಗೆ ಪ್ರಕಟಿಸಿದ ತಮ್ಮ ಜೀವನಸ್ಮರಣೆಯ ನಾಲ್ಕನೆಯ ಭಾಗ 'ಯು ಮಸ್ಟ್ ಸೆಟ್ ಫೋರ್ಥ್ ಎಟ್ ಡಾನ್ ' ದಲ್ಲಿ ಮುಖ್ಯವಾಗಿ ಅವರ ರಾಜಕೀಯ ಸಂಗ್ರಾಮದ ವಿವರಗಳೇ ದಾಖಲಾಗಿವೆ. ತಮ್ಮ ಬದುಕಿನ ಕೆಲಸ-ಕಾರ್ಯಗಳ ನೆನಪುಗಳ ಎಳೆಗಳನ್ನು ಒಂದೊಂದಾಗಿ ಬಿಡಿಬಿಡಿಸಿ ತೋರಿಸುತ್ತ ಹೋಗುವುದು ಅವರಿಗೆ ಪ್ರೀತಿಯ ಕೆಲಸ. ಆತ್ಮ ಚರಿತ್ರೆಯನ್ನು ಯಾರೇ ಬರೆಯಲಿ, ಅವರ ಬಾಲ್ಯದ ಕಾಲಾವಧಿಯ ಹೊರತಾಗಿ ಮುಂದಿನ ವರ್ಷಗಳ ಕುರಿತಾದ ಆತ್ಮಚರಿತ್ರೆ ಎಂದರೆ ಸುಳ್ಳಿನ ಕಂತೆಯೇ ಆಗಿರಬಹುದೆಂದು ಅವರ ಅಭಿಪ್ರಾಯ! 'ಆತ್ಮಚರಿತ್ರೆ'ಯ ಹೆಸರಿನಲ್ಲಿ ಕೆಲವು ಅಮೆರಿಕನ್ ಹಾಗೂ ಯೂರೋಪಿಯನ್ ಲೇಖಕರು ತಮ್ಮೊಡನೆ ಸಂಪರ್ಕದಲ್ಲಿ ಬಂದ ಯಾರುಯಾರಿಗೋ ಸಂಬಂಧಿಸಿದ ಹೇಳಲಾಗದ ಅಥವಾ ಹೇಳಬಾರದ ರಹಸ್ಯಗಳನ್ನೆಲ್ಲ ಅವರ ಅನುಮತಿಯನ್ನೂ ಪಡೆಯದೆ ಬರೆದುಬಿಡುವುದು ಇವರಿಗೆ ಒಗ್ಗದ ವಿಚಾರವೆಂದು ಅವರು ೧೯೯೭ರಲ್ಲಿ 'ಬ್ಲಾಕ್ ಅಮೆರಿಕನ್ ಲಿಟರೇಚರ್ ಫೋರಮ್' ಪತ್ರಿಕೆಗೆ ನೀಡಿದ ಸಂದರ್ಶನದಲ್ಲಿ ಹೇಳಿದ್ದರಂತೆ. ಅವರ ಇತ್ತೀಚಿನ ನೆನಪುಗಳ ಕೃತಿ 'ಯು ಮಸ್ಟ್ ಸೆಟ್ ಫೋರ್ಥ್ ಎಟ್ ಡಾನ್'ದಲ್ಲಿ ತಮ್ಮ ಸೈದ್ಧಾಂತಿಕ ನಿಲುಮೆಗೆ ಬದ್ಧರಾಗಿ ತಮ್ಮ ರಾಜಕೀಯ ಚಟುವಟಿಕೆಗಳ ಬಗ್ಗೆ ಪ್ರಾಮಾಣಿಕ ನಿವೇದನೆ ಮಾಡಿಕೊಂಡಿರುವುದನ್ನು ಯಾರಾದರೂ ಗುರುತಿಸಬಹುದು. ಅದೇ ಅವರ ಆತ್ಮಚರಿತ್ರೆಯ ಹೆಗ್ಗಳಿಕೆ.



ಇತ್ತೀಚೆಗೆ ಯುನೆಸ್ಕೋದವರಿಂದ ಆಯ್ಕೆಗೊಂಡ ವಿಶ್ವರಂಗಭೂಮಿಯ ರಾಯಭಾರಿಗಳ ಪಟ್ಟಿಯಲ್ಲಿ ನಮ್ಮ ಖ್ಯಾತ ನಾಟಕಕಾರ ಶ್ರೀ ಗಿರೀಶ ಕಾರ್ನಾಡರಂತೆ ನೈಜೀರಿಯಾ ದೇಶದ ಕ್ರಾಂತಿಕಾರಿ ಸಾಹಿತಿ ಶ್ರೀ ಓಲೆ ಸೋಯಿಂಕಾ ಅವರ ಹೆಸರೂ ಇತ್ತು. ಕಪ್ಪು ಜನಾಂಗದ ಸಾಹಿತಿಗಳಲ್ಲಿ ನೊಬೆಲ್ ಪುರಸ್ಕಾರ ಪಡೆದವರಲ್ಲಿ ಸೋಯಿಂಕಾ ಅವರೇ ಮೊದಲಿಗರು. ತಮ್ಮ ನಾಟಕ ರಚನೆ ಮತ್ತು ಪ್ರಯೋಗಗಳಿಂದ ಜನಜಾಗೃತಿ ಮಾಡುವುದು ಮಾತ್ರವಲ್ಲದೆ ವ್ಯವಸ್ಥೆಯು ಬೇರುಗಳನ್ನೇ ಅಲ್ಲಾಡಿಸಬಹುದೆಂದು ತೋರಿಸಿಕೊಟ್ಟ ಧೀಮಂತರು.

ಸೋಯಿಂಕಾ ನೈಜೀರಿಯಾದ ಅಬೆಓಕುಟಾ ಎಂಬ ಪಟ್ಟಣದಲ್ಲಿ ೧೯೩೪ರ ಜುಲೈ ೧೩ರಂದು ಹುಟ್ಟಿದರು. ಅವರ ತಂದೆ ಸಾಮುವೆಲ್ ಅಯೋಡೆಲ್ ಸೋಯಿಂಕಾ ಅಲ್ಲಿಯ ಸೇಂಟ್ ಪೀಟರ್ಸ್ ಪ್ರಾಥಮಿಕ ಶಾಲೆಯ ಮುಖ್ಯಾಧ್ಯಾಪಕರಾಗಿದ್ದರು. ಅವರ ತಾಯಿ ಗ್ರೇಸ್ ಎನಿಯೋಲಾ ಸೋಯಿಂಕಾ ತಮ್ಮೂರಿನ ಮಾರುಕಟ್ಟೆಯಲ್ಲಿ ಅಂಗಡಿ ಇಟ್ಟಿದ್ದರಲ್ಲದೆ 'ಎಗ್ಬಾ ವುಮೆನ್ಸ್ ವಾರ್' ಎಂಬ ಕರವಿರೋಧಿ ಸಂಘಟನೆಯ ಕಾರ್ಯಕರ್ತರೂ ಆಗಿದ್ದರು. ಈ ಕರವಿರೋಧಿ ಸಂಘಟನೆ ಆರಂಭಗೊಂಡ ೧೯೪೦ರ ಅವಧಿಯಿಂದಲೂ ಸೋಯಿಂಕಾ ಮನೆತನದ ಸದಸ್ಯರು ಅದರಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಲೇ ಬಂದಿದ್ದರು. ಹೀಗಾಗಿ ಅನ್ಯಾಯದ ವಿರುದ್ಧ ಹೋರಾಡುವುದು ಓಲೆ ಸೋಯಿಂಕಾ ಅವರ ರಕ್ತಗತವಾಗಿ ಬೆಳೆದು ಬಂದ ಗುಣವೇ. ಅಂತೆಯೇ ಸೋಯಿಂಕಾ ಅವರು ತಮ್ಮ ಎಳೆತನದಿಂದಲೇ ಈ ಸಂಘಟನೆಯ ಪ್ರತಿಭಟನಾತ್ಮಕ ಚಟುವಟಿಕೆಗಳಿಂದ ಪ್ರಭಾವಿತರಾಗಿದ್ದರು.

ಓಲೆ ಸೋಯಿಂಕಾ ಯೂನಿವರ್ಸಿಟಿ ಕಾಲೇಜ್ ಆಫ್ ಇಬಾದನ್‌ನಲ್ಲಿ ವಿದ್ಯಾರ್ಥಿಯಾಗಿದ್ದಾಗಿನಿಂದಲೇ ಕಾವ್ಯರಚನೆಯಲ್ಲಿ ತೊಡಗಿದ್ದರು. ನೈಜೀರಿಯಾದ ಮತ್ತೊಬ್ಬ ಪ್ರಖ್ಯಾತ ಲೇಖಕರಾದ ಚಿನುವಾ ಆಚೆಬೆ ಅವರೂ

ಸೋಯಿಂಕಾ ಅವರ ಸಹಪಾಠಿಯಾಗಿದ್ದರು. ಅವರ ಸ್ನೇಹ-ಸಹವಾಸಗಳು ಸೋಯಿಂಕಾ ಅವರ ಕಾವ್ಯ ಸಾಧನೆಯ ಆರಂಭಿಕ ಹಂತದಲ್ಲಿ ಬಹಳೇ ಸಹಾಯಕಾರಿಯಾಗಿದ್ದವು. 'ಬ್ಲ್ಯಾಕ್ ಒರ್ಫಿಯಸ್' ಎಂಬ ಸಾಹಿತ್ಯದ ಪತ್ರಿಕೆ ಅವರ ಕಾವ್ಯ ಹಾಗೂ ಗದ್ಯ ಲೇಖನಗಳನ್ನು ಪ್ರಕಟಿಸಿ ಅವರ ಸಾಹಿತ್ಯಕ ವ್ಯಕ್ತಿತ್ವ ರೂಪಗೊಳ್ಳಲು ನೆರವಾದ ಮೊದಲ ಪತ್ರಿಕೆ. ವಿಶ್ವವಿದ್ಯಾಲಯದ ಅಧ್ಯಯನ ಮುಗಿಸಿ ಸೋಯಿಂಕಾ ಇಂಗ್ಲೆಂಡ್‌ಗೆ ಹೋಗಿ ಯೂನಿವರ್ಸಿಟಿ ಆಫ್ ಲೀಡ್ಸನಲ್ಲಿ ಅಧ್ಯಯನ ಮುಂದುವರಿಸಿ ಇಂಗ್ಲಿಷ್ ಭಾಷೆಯಲ್ಲಿ ಬಿ.ಎ. ಪದವಿ ಸಂಪಾದಿಸಿದರು. ಅದೇ ಪ್ರಸಿದ್ಧ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿಯನ್ನೂ ಪಡೆಯಬೇಕೆಂದು ಅವರು ಹಂಬಲಿಸಿದ್ದರು. ಆದರೆ ಅಲ್ಲಿಯ ರಾಯಲ್ ಕೋರ್ಟ್ ಥೇಟರಿನಲ್ಲಿ ಅವರು ನಾಟಕವಾಚನ ಮಾಡುವ ಕೆಲಸದಲ್ಲಿ ತೊಡಗಿದ ಕಾರಣ ಅವರ ಸ್ನಾತಕೋತ್ತರ ಪದವಿಯ ಹಂಬಲ ಈಡೇರಲಿಲ್ಲ. ಆದರೂ ಆಶ್ಚರ್ಯದ ಸಂಗತಿಯೆಂದರೆ: ಮುಂದೆ ಅದೇ ವಿಶ್ವವಿದ್ಯಾಲಯದವರು ಅವರಿಗೆ ೧೯೭೩ರಲ್ಲಿ ಗೌರವ ಡಾಕ್ಟರೇಟ್ ನೀಡಿ ಸನ್ಮಾನಿಸಿದರು! ಸೋಯಿಂಕಾ ಅವರ ಸಾಹಿತ್ಯ ಸಾಧನೆಯಲ್ಲಿ ಅವರೇರಿದ ಎತ್ತರ ಹಾಗೂ ಅದರಿಂದ ಕಪ್ಪು ಜನಾಂಗದ ಮೇಲಾದ ಪರಿಣಾಮಗಳನ್ನು ಗಮನಿಸಿ ಲೀಡ್ಸ್ ವಿಶ್ವವಿದ್ಯಾಲಯದವರು ಈ ಮಹಾಗೌರವವನ್ನು ಅವರಿಗೆ ನೀಡಿ ತನ್ನ ಹಿರಿಮೆ ಮೆರೆಯಿತು.

ಈ ಮಧ್ಯೆ ೧೯೬೦ರಲ್ಲಿ ರಾಕ್‌ಫೆಲರ್ ಫೌಂಡೇಶನ್‌ದವರು ಸೋಯಿಂಕಾ ಅವರಿಗೆ ಹೆಚ್ಚಿನ ಅಧ್ಯಯನಕ್ಕಾಗಿ ಅನುದಾನ ನೀಡಿದರು. ಆ ಅನುದಾನದ ಆಶ್ರಯದಲ್ಲಿ ಸೋಯಿಂಕಾ ನೈಜೀರಿಯಾಕ್ಕೆ ಹಿಂದಿರುಗಿ, ತಮ್ಮ ಮುಂಚಿನ ಇಬಾದನ್ ವಿಶ್ವವಿದ್ಯಾಲಯದ ಆಶ್ರಯದಲ್ಲಿಯೇ ನೈಜೀರಿಯಾದ ನಾಟಕ ಹಾಗೂ ಸಂಸ್ಕೃತಿಯ ವಿಷಯದಲ್ಲಿ ಆಳವಾದ ಅಧ್ಯಯನ ನಡೆಸಿದರು. ಆ ೬೦-೭೦ರ ದಶಕ ಅವರ ಪಾಲಿಗೆ ಹುಲುಸಾದ ಬೆಳೆ ಬಂದ ಕಾಲ. ಈ ಅವಧಿಯಲ್ಲೇ ಅವರು, ದಿ ಸ್ವಾಂಪ್ ಡ್ವೆಲ್ಲರ್ಸ್, ಲಾಯಿನ್ ಎಂಡ್ ದಿ ಜುವೆಲ್, ಟ್ರಾಯಲ್ಸ್ ಆಫ್ ಬ್ರದರ್ ಜೀರೊ, ಬಿಫೋರ್ ದಿ ಬ್ಲ್ಯಾಕೌಟ್, ಕೊಂಗಿಜ್ ಹಾರ್ವೆಸ್ಟ್, ದಿ ರೋಡ್ – ಇತ್ಯಾದಿ ಹತ್ತು ನಾಟಕಗಳನ್ನು ಬರೆದು ರಂಗಭೂಮಿಯ ಮೇಲೆ ಯಶಸ್ವಿಯಾಗಿ ಸಾದರ ಪಡಿಸಿದರು. ರೇಡಿಯೋ ಹಾಗೂ ಟೆಲಿವಿಜನ್ ಮಾಧ್ಯಮಗಳಲ್ಲೂ ತಮ್ಮ ನಾಟಕ - ರೂಪಕಗಳನ್ನು ಪ್ರಸ್ತುತಗೊಳಿಸಿದರು. ಅವರ ಅನೇಕ ನಾಟಕಗಳಲ್ಲಿ ನೈಜೀರಿಯನ್ ಸರಕಾರವನ್ನು ಕುರಿತಾದ ತೀಕ್ಷ್ಣ ವಿಡಂಬನೆ ಕಾಣಿಸಿಕೊಂಡಿದ್ದು, ಅದೇ ಕಾರಣಕ್ಕಾಗಿ ಅವು ತುಂಬ ಜನಪ್ರಿಯವೂ ಆದವು. ಇದೇ ಅವಧಿಯಲ್ಲಿ ಅವರ ಇಂದಾನ್ರೆ ಎಂಡ್ ಅದರ್ ಪೊಯೆಮ್ಸ್, ಪೊಯೆಮ್ಸ್ ಫ್ರಮ್ ಪ್ರಿಜನ್ ಇತ್ಯಾದಿ ಕಾವ್ಯ ಸಂಕಲನಗಳೂ, ಇಂಟರ್ಪ್ರಿಟರ್ಸ್ - ಫಿಕ್ಶನ್, ದಿ ರಾಯ್ಟರ್ ಇನ್ ಮಾಡರ್ನ್ ಆಫ್ರಿಕನ್ ಸ್ಟೇಟ್ ಮತ್ತು ಮ್ಯಾಡ್ ಮೆನ್ ಎಂಡ್ ಪೆಸ್ಯಾಲಿಸ್ಟ್ಸ್ ಎಂಬ ವಿಮರ್ಶಾ ಕೃತಿಗಳೂ ಬೆಳಕಿಗೆ ಬಂದವು. ಈ ದಶಕದಲ್ಲೇ ಅವರಿಗೆ ಜಾನ್ ವ್ಹಾಯ್ಟಿಂಗ್ ಅವಾರ್ಡ್, ಡಾಕರ್ ನಿಗ್ರೋ ಆರ್ಟ್ಸ್ ಫೆಸ್ಟಿವಲ್ ಅವಾರ್ಡ್ ಹಾಗೂ ಕಾಮನ್‌ವೆಲ್ತ್ ಲೇಖಕರಿಗೆ ಮೀಸಲಾದ ನ್ಯೂ ಸ್ಟೇಟ್ಸಮನ್ ಜಾಕ್ ಕ್ಯಾಂಪಬೆಲ್ ಅವಾರ್ಡ್ – ಹೀಗೆ ಮೂರು ಮಹತ್ವದ ಸಾಹಿತ್ಯ ಪ್ರಶಸ್ತಿಗಳೂ ಪ್ರಾಪ್ತವಾದವು. ಅವರೊಬ್ಬ ಪ್ರಭಾವೀ ಪ್ರಗತಿಶೀಲ ಲೇಖಕರೆಂದು ಲೋಕದ ಕಣ್ಸೆಳೆದದ್ದು ಈ ದಶಕದಲ್ಲೇ. ೧೯೫೫ರಿಂದ ಇಲ್ಲಿಯವರೆಗೆ ಅವರ ಒಟ್ಟು ೧೬ ನಾಟಕಗಳೂ. ೧೫ ಗದ್ಯಕೃತಿಗಳೂ, ೬ ಕವಿತಾ ಸಂಕಲನಗಳೂ, ಜೀವನ ಚರಿತ್ರೆಯ ನಾಲ್ಕು ಭಾಗಗಳೂ ಪ್ರಕಟವಾಗಿವೆ. ನಾಟಕಗಳನ್ನು ಬರೆಯುವುದು ಮಾತ್ರವಲ್ಲದೆ, ೧೯೬೪ ರಲ್ಲಿ ಅವರು ನೈಜೀರಿಯಾ ನಾಟಕ ಸಂಸ್ಥೆಯನ್ನು ಸ್ಥಾಪಿಸಿ ಪ್ರಗತಿಪರ ರಂಗಭೂಮಿಯ ಚಟುವಟಿಕೆಗಳು ನಿರಂತರವಾಗಿ ನಡೆಯುವಂತೆ ಮಾಡಿದ್ದೂ ಒಂದು ವಿಶೇಷವೇ.


THE MESSAGE FROM SEVEN HILLS

THE MESSAGE From Seven Hills EPIC-STORY OF LORD VENKATESWARA

Everlasting Life Vision Evaluation for all Times

H.ShivaRam

ವಿನ್ ಯುವರ್ PC 2 Hardware Made Easy ಎಚ್.ಶಿವರಾಂ

ರೂ. 110/-

ಎಚ್.ಶಿವರಾಂ ವಿನ್ ಕಂಪ್ಯೂಟರ್ಸ್ Software Made Simple

ರೂ. 100/-

ಮೇಜಿನ ಮೇಲಿನ ಪ್ರಕಾಶನ D.T.P Made Easy

ರೂ. 140/-



ಶ್ರೀ ಶೇಷಶೈಲ ಪ್ರಕಾಶನ

ನಂ. 897. 2ನೇ ಮಹಡಿ. 2ನೇ ಮುಖ್ಯರಸ್ತೆ, 4ನೇ ಬ್ಲಾಕ್. ರಾಜಾಜಿನಗರ
ಬೆಂಗಳೂರು – 560 010. ಮೊಬೈಲ್ : 94486 28526

೧೯೬೦ರಲ್ಲಿ ಸೋಯಿಂಕಾ ಕೈಗೊಂಡ ಸಂಶೋಧನೆಯ ಕೆಲಸ ಮುಗಿದೊಡನೆ ಅವರು ಅಧ್ಯಾಪನದ ಕೆಲಸಕ್ಕೆ ಸೇರಿಕೊಂಡರು. ನೈಜೀರಿಯದಲ್ಲಿ ಇರುವ ಐಫ್, ಲ್ಯಾಗೊಸ್, ಇಬಾದನ್ ವಿಶ್ವವಿದ್ಯಾಲಯಗಳಲ್ಲೂ, ಘಾನಾ, ಶೆಫೀಲ್ಡ್, ಕೇಂಬ್ರಿಜ್ ವಿಶ್ವವಿದ್ಯಾಲಯ, ಚರ್ಚಿಲ್ ಕಾಲೇಜಿನಲ್ಲೂ ಪ್ರೊಫೆಸರರಾಗಿ ದುಡಿದರು. ೧೯೮೦ರ ನಂತರ ಅವರು ಅಮೆರಿಕಾಕ್ಕೆ ಸ್ಥಳಾಂತರಗೊಂಡು ಅಲ್ಲಿಯೂ ಹಾರ್ವರ್ಡ್, ಯೇಲ್, ಕಾರ್ನೆಲ್ ಮತ್ತು ಎಮರಿ ವಿದ್ಯಾಲಯಗಳಲ್ಲಿ ಅಧ್ಯಾಪನ ವೃತ್ತಿಯನ್ನೇ ಮುಂದುವರಿಸಿದರು. ಆದರೆ, ತಮ್ಮ ದೇಶದ ರಾಜಕೀಯ ಸ್ಥಿತಿ ಬಿಗಡಾಯಿಸಿದ ಸಂದರ್ಭಗಳಲ್ಲಿ ಮತ್ತೆ ಮತ್ತೆ ತಮ್ಮ ದೇಶಕ್ಕೆ ಮರಳಿ ಹೋಗಿ ಸಕ್ರಿಯ ಹೋರಾಟ ನಡೆಸಿ ಮತ್ತೆ ಅಧ್ಯಾಪನವೃತ್ತಿಗೆ ಮರಳಿ ಬರುತ್ತಾರೆ. ಸದ್ಯಕ್ಕೆ ಅವರು ಲಾಸ್ ವೇಗಾಸ್‌ದಲ್ಲಿರುವ ನೆವಾಡಾ ವಿಶ್ವವಿದ್ಯಾಲಯದಲ್ಲಿ ಸೃಜನಶೀಲ ಬರವಣಿಗೆಯ ಪ್ರಾಧ್ಯಾಪಕರೆಂದೂ, ಇಂಟರ್ ನ್ಯಾಷನಲ್ ಇನ್ಸ್ಟಿಟ್ಯೂಟ್ ಆಫ್ ಮಾಡರ್ನ್ ಲೆಟರ್ಸ್ ಸಂಸ್ಥೆಯ ನಿರ್ದೇಶಕರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಕ್ಯಾಲಿಫೋರ್ನಿಯ ವಿಶ್ವವಿದ್ಯಾಲಯದ ಅಂತರ್ ರಾಷ್ಟ್ರೀಯ ಲೇಖನ ಹಾಗೂ ಅನುವಾದ ಕೇಂದ್ರದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿಯೂ ಕಾರ್ಯನಿರತರಾಗಿದ್ದಾರೆ.

**ಮತ್ತೊಂದು ಮಗ್ಗಲು**

ಈವರೆಗೆ ನಾವು ಕಂಡದ್ದು ಒಲೆ ಸೋಯಿಂಕಾ ಅವರ ವ್ಯಕ್ತಿತ್ವದ ಒಂದು ಮಗ್ಗಲು, ಅದರ ಮತ್ತೊಂದು ಮಗ್ಗಲು ತುಂಬ ಅದ್ಭುತವಾಗಿದೆ. ಅದು ಅವರ ಕ್ರಾಂತಿಕಾರೀ ವಿಚಾರ ಹಾಗೂ ರಾಜಕೀಯ ಧೋರಣೆಗೆ ಸಂಬಂಧಿಸಿದ್ದು. ತಮ್ಮ ದೇಶದಲ್ಲಿ ಮಾನವ ಹಕ್ಕು ಹಾಗೂ ಸಾಮಾಜಿಕ ನ್ಯಾಯಕ್ಕಾಗಿ ಅವರು ತಮ್ಮ ಬದುಕಿನುದ್ದಕ್ಕೂ ಹೋರಾಡುತ್ತ ಬಂದವರು. ದಕ್ಷಿಣ ಆಫ್ರಿಕಾದ ವರ್ಣವಿರೋಧಿ ಆಡಳಿತವನ್ನೂ ಉಗಾಂಡಾದ ಈದೀ ಅಮೀನರ ಸರ್ವಸತ್ತಾಧಿಕಾರವನ್ನೂ ಅವರು ಸಖತ್ತಾಗಿ ಪ್ರತಿಭಟಿಸಿದವರು. ಎಲ್ಲಕ್ಕೂ ಹೆಚ್ಚಾಗಿ, ನೈಜೀರಿಯಾ ಸರಕಾರದ 'ರೋಗ ಚಿಕಿತ್ಸಾವಿಧಾನ'ಗಳೇ ಅವರ ಆಚಾರ-ವಿಚಾರಗಳ ಬಹಳಷ್ಟು ಸಮಯವನ್ನು ಆವರಿಸಿಕೊಂಡು ಬಿಟ್ಟಿವೆಯೆಂದು ತಮ್ಮ ನೆನಪುಗಳಲ್ಲಿ ಬರೆದುಕೊಂಡದ್ದುಂಟು. ಅವರು ಅನೇಕ ಬಾರಿ ತಮ್ಮ ಭಾಷಣ-ಲೇಖನಗಳಲ್ಲಿ ನೈಜೀರಿಯಾ ಸರಕಾರದ ಜನವಿರೋಧಿ ನೀತಿಗಳ ಕುರಿತು ಬಲು ಖಾರವಾಗಿ ಮಾತಾಡಿ ಜನತೆಯನ್ನು ಎಚ್ಚರಿಸುವ ಕೆಲಸ ಮಾಡಿದ್ದಾರೆ. ಒಮ್ಮೆ ಸರಕಾರದವರು ನಡೆಸಿದ ದೋಷಯುಕ್ತ ಸಾರ್ವಜನಿಕ ಚುನಾವಣೆಗಳ ಪರಿಣಾಮಗಳನ್ನು ಸಾರದಂತೆ ತಡೆಹಿಡಿಯಲು ಅವರು ರೇಡಿಯೊ ಕೇಂದ್ರವೊಂದಕ್ಕೆ ಮುತ್ತಿಗೆ ಹಾಕಿ ಬಂಧಿತರಾಗಿ ಮೂರು ತಿಂಗಳು ಸೆರೆಮನೆವಾಸ ಅನುಭೋಗಿಸಿದರು. ಆದರೆ, ಕೋರ್ಟಿನಲ್ಲಿ ವಿಚಾರಣೆಯಾಗಿ ಅವರು ನಿರ್ದೋಷಿಗಳೆಂದು ಸಾಬೀತಾಯಿತು. ಅವರು ಬಿಡುಗಡೆ ಪಡೆದರು. ಮುಂದೆ ನೈಜೀರಿಯಾದಲ್ಲಿ ನಾಗರಿಕ ಯುದ್ಧ ನಡೆದ ಸಂದರ್ಭದಲ್ಲಿ ಮತ್ತೆ ಅವರನ್ನು ಬಂಧಿಸಲಾಯಿತು. ಆಗ ಸರಕಾರವನ್ನು ಉರುಳಿಸಲು ಹೊಂಚು ಹಾಕಿದ್ದರೆನ್ನಲಾದ ಬಿಯಾಫ್ರ ಪ್ರತಿಭಟನಾಕಾರರೊಡನೆ ಕೈಜೋಡಿಸಿದ ಆರೋಪ ಅವರ ಮೇಲೆ ಹೊರಿಸಲಾಗಿತ್ತು. ಆದರೆ ಅವರು ಮಾತ್ರ ಎರಡೂ ಗುಂಪುಗಳ ನಡುವೆ ಶಾಂತಿಸಂಧಾನ ನಡೆಸಲು ಪ್ರಯತ್ನಿಸುತ್ತಿದ್ದರೆಂಬುದು ಸರಕಾರದ ಗಮನಕ್ಕೆ ಬಾರದೇ ಹೋದದ್ದು ದುರ್ದೈವದ ಸಂಗತಿ. ಅವರು ೨೮ ತಿಂಗಳು ಸೆರೆಮನೆಯಲ್ಲಿಯೇ ಕೊಳೆಯಬೇಕಾಯಿತು. ೧೯೬೯ರಲ್ಲಿ ಅವರು ಬಿಡುಗಡೆ ಪಡೆದು, ಮರುವರ್ಷ ನೈಜೀರಿಯಾದಿಂದ ಹೊರಬಿದ್ದವರು ೧೯೭೫ರಲ್ಲಿ ಜನರಲ್ ಯಾಕುಬು ಗೋವನ್ ಮಹಾಶಯನ ಸೈನಿಕ ದುರಾಡಳಿತ ಕೊನೆಗೊಳ್ಳುವವರೆಗೆ ಅವರು ನೈಜೀರಿಯಾಕ್ಕೆ ಮರಳಲೇ ಇಲ್ಲ.

೧೯೯೪ರಲ್ಲಿ ಅವರು ನಡೆಸಿದ ಹೋರಾಟ ಅವರ ಜೀವಕ್ಕೆ ಮುಳುವಾಗಿ ಪರಿಣಮಿಸಿತು. ಆಗ ನೈಜೀರಿಯಾವನ್ನು ಆಳುತ್ತಿದ್ದ ಜನರಲ್ ಸಾನಿ ಅಬಚಾನ ದುರಾಡಳಿತವನ್ನು ವಿರೋಧಿಸುವ ಮಹಾ ಜನಾಂದೋಲನವನ್ನು ನೈಜೀರಿಯಾದ ರಾಜಧಾನಿ ಅಬುಜಾದಲ್ಲಿ ಸಂಘಟಿಸಿದರು. ಆ ಆಂದೋಲನವನ್ನು ಹಿಂದೆಗೆದುಕೊಳ್ಳದಿದ್ದರೆ ಅವರ ಹಾಗೂ ಅವರ ಅನುಯಾಯಿಗಳೆಲ್ಲರ ತಲೆ ಹಾರಿಸುವುದಾಗಿ ಬೆದರಿಕೆ ಹಾಕಲಾಯಿತು. ರಾಜಕೀಯ ವಾತಾವರಣದಲ್ಲಿ ಬಹಳೇ ಬಿಸಿಯೇರಿತ್ತು. ತನ್ನೊಡನೆ ಸಾವಿರಾರು ಜನರು ಜೀವ ಕಳೆದುಕೊಂಡರೆ ಏನು ಸಾಧಿಸಿದಂತಾಯಿತು? – ಎಂಬ ಪ್ರಶ್ನೆಯೊಡನೆ, ಮನಸ್ಸಿಲ್ಲದ ಮನಸ್ಸಿನಿಂದ ಸೋಯಿಂಕಾ ದೇಶದಿಂದಲೇ ಮತ್ತೆ ಹೊರಬಿದ್ದರು. ಅವರ ಅಜ್ಞಾತವಾಸದ ಕಾಲದಲ್ಲಿ, ಅವರ ಮೇಲೆ ದೇಶದ್ರೋಹ ಹಾಗೂ ನೈಜೀರಿಯಾ ಫೆಡರಲ್ ವ್ಯವಸ್ಥೆಯನ್ನು ಹಾಳ್ಗೆಡಿಸುವ ಉದ್ದೇಶದಿಂದ ಬಾಂಬುಗಳನ್ನು ಸ್ಫೋಟಿಸುವ ಹೊಂಚು ಹಾಕಿದ್ದರೆಂದೂ ಆರೋಪ ಹೊರಿಸಲಾಯಿತು. ಆ ಆರೋಪಗಳಲ್ಲಿ ಅಷ್ಟು ಹುರುಳಿರಲಿಲ್ಲವಾದರೂ ಅಂದಿನ ಸರಕಾರ ಸೋಯಿಂಕಾ ಅವರ ಮೇಲೆ ಹಲ್ಲು ಮಸೆಯುತ್ತಲೇ ಇತ್ತು. ಆದರೆ, ೧೯೯೮ರಲ್ಲಿ ಅಬಚಾ ಮಹಾಶಯನೇ ತೀರಿಹೋದ ಕಾರಣ, ಸೋಯಿಂಕಾ ಮತ್ತೆ ಸ್ವದೇಶಕ್ಕೆ ಮರಳಲು ದಾರಿ ತೆರೆದಂತಾಯಿತು. ಈಗ ಅವರು ಅಮೆರಿಕಾವಾಸಿಯಾಗಿದ್ದರೂ, ತಮ್ಮ ದೇಶದ ರಾಜಕೀಯ ಆಗು-ಹೋಗುಗಳಲ್ಲಿ ತಮ್ಮ ಪ್ರಭಾವವನ್ನು ಉಳಿಸಿಕೊಂಡಿದ್ದಾರೆ. ಸದ್ಯದ ನೈಜೀರಿಯಾ ಅಧ್ಯಕ್ಷ ಒಲುಸೆಗನ್ ಓಬಾಸಂಜೊ ಅವರ ಆಡಳಿತದ ಭ್ರಷ್ಟಾಚಾರದ ವಿರುದ್ಧ ೨೦೦೪ರಲ್ಲಿ ಸಂಘಟಿತ ಚಳುವಳಿ ನಡೆಸಿ ಮತ್ತೆ ಅಮೆರಿಕಾಕ್ಕೆ ಮರಳಿದ್ದಾರೆ. ಇಂಥ ಕ್ರಿಯಾಶೀಲ ಹೋರಾಟಗಾರ, ಕ್ರಾಂತಿಕಾರಿ ಲೇಖಕ ಹಾಗೂ ವಿಚಾರವಾದಿ 'ಕಲೆಗಾಗಿ ಕಲೆ' ಎಂಬ ತತ್ವಪ್ರಣಾಲಿಯಲ್ಲಿ ನಂಬಿಕೆ ಇಡಬಹುದೇ? ಅವರು ಈವರೆಗೆ ಬರೆದದ್ದೆಲ್ಲ ಸಮಾಜಸ್ವಾಸ್ಥ್ಯದ ಗುರಿಯನ್ನು ಮನಸ್ಸಿನಲ್ಲಿಟ್ಟುಕೊಂಡೇ; ಸಮಾಜ ಪರಿವರ್ತನೆಯ ಆದರ್ಶವನ್ನು ನೆನಪಿನಲ್ಲಿಟ್ಟುಕೊಂಡೇ. ಅವರೊಬ್ಬ ಲೇಖಕರಾಗಿ ಸಮಾಜಕ್ಕೆ ನೀಡಿದ್ದು ಹೆಚ್ಚೋ, ಒಬ್ಬ ರಾಜಕೀಯ ಹೋರಾಟಗಾರರಾಗಿ ಸಮಾಜಕ್ಕಾಗಿ ಮಾಡಿದ್ದು ಹೆಚ್ಚೋ, ಎಂದು ಯಾರಾದರೂ ಕೇಳಿದರೆ, ಅವೆರಡೂ ಹೆಚ್ಚೇ ಎಂದು ಉತ್ತರ ಬರಬಹುದು. ಅವರು ಲೇಖಕರಾದಾಗ ಹೋರಾಟಗಾರನ ಪಾತ್ರವನ್ನು ಬದಿಗಿರಿಸಿ, ಹೋರಾಟಗಾರರಾದಾಗ ಲೇಖಕನ ಪಾತ್ರವನ್ನು ಬದಿಗಿರಿಸಿ ಎರಡನ್ನೂ ಸಮರ್ಥವಾಗಿ ಸಂಭಾಳಿಸಿ ತೋರಿಸಿದವರು. ಅವೆರಡೂ ಒಂದರ ಮೇಲೊಂದು ಸವಾರಿ ಮಾಡಿದರೆ, ಅಥವಾ ಮಾಡಗೊಟ್ಟರೆ ಯಾವೊಂದು ಕೆಲಸವೂ ಸುಗಮವಾಗಲಾರದೆಂದು ಅವರ ಅಭಿಪ್ರಾಯ. ೧೯೬೫ರಿಂದ ೧೯೯೯ರವರೆಗಿನ ಅವರ ಬದುಕಿನ ಹೋರಾಟಗಳನ್ನು ಸವಿವರವಾಗಿ ಚಿತ್ರಿಸಿದ ಅವರ ನೆನಪುಗಳ ನಾಲ್ಕನೆಯ ಭಾಗದಲ್ಲಿ ಅವರ ಪರಿಪಕ್ವ ವ್ಯಕ್ತಿತ್ವದ ಸುಳುಹು ದೊರೆಯುತ್ತದೆ. ೧೯೯೯ರ ನಂತರವೂ ಅವರ ರಾಜಕೀಯ ಹೋರಾಟ ನಡೆದೇ ಇದೆ. ಅವರ ಬದುಕೇ ಒಂದು ಹೋರಾಟವಾಗಿ, ಹೋರಾಟವೇ ಒಂದು ಬದುಕಾಗಿ, ಅವರ ಸಾಹಿತ್ಯ ಇವೆರಡರ ನಡುವಿನ ಸೇತುವೆಯಾಗಿ ಗಟ್ಟಿಗೊಂಡ ಕಥೆ ಒಲೆ ಸೋಯಿಂಕಾ ಅವರಿಗೇ ಮೀಸಲಾದ ಸಾಹಸ ಗಾಥೆಯಾಗಿದೆ.

(ಸಾಧಾರ)

ಡಾ|| ಬಿ. ಎ. ಸನದಿ
'ಮಿಲನ್', ವಿನಾಯಕ ಸಾಮಿಲ್ ಎದುರು
ಹೆರವಟ್ಟ, ಕುಮಟಾ.

## ಪಕ್ಷಾಂತರ

ಸಹಜವಿಹುದು ಪಕ್ಷದಿಂದ ಪಕ್ಷಕ್ಕೆ ಅಂತರ
ಕಪ್ಪೆಯಿಂದ ಕಪ್ಪೆಗೆ ಇರುವಂಥ ದೂರ
ಸರಿದೂಗಬೇಕಲ್ಲವೆ ತಕ್ಕಡಿಯ ಭಾರ
ಸಮಾನತೆಯ ಸಾಧಿಸುವ ಹೆಜ್ಜೆಯೇ ಪಕ್ಷಾಂತರ

* * *

ಶುಕ್ಲಪಕ್ಷ, ಕೃಷ್ಣಪಕ್ಷಗಳೆಂದು
ಚಂದಿರನಿಗೂ ಉಂಟಲ್ಲ ಎರಡೆರಡು ಪಕ್ಷ
ಭೂಲೋಕದವರು ನಾವೆಂದುಕೊಂಡು
ಮಾಡಿಕೊಂಡಿಹೆವು ಒಂದಷ್ಟು ಪಕ್ಷ!

ಚನ್ನಬಸವ ಪುತ್ತೂರ್ಕರ
ದ್ವಿತೀಯ ದರ್ಜೆ ಸಹಾಯಕರು
ವಾಣಿಜ್ಯ ತೆರಿಗೆ ಅಧಿಕಾರಿಗಳ ಕಛೇರಿ (ವಸೂಲಿ)
ಕೆಳಗೋಟೆ, ಸರಸ್ವತಿ ಲಾ ಕಾಲೇಜ್ ಹಿಂಭಾಗ
ಚಿತ್ರದುರ್ಗ - ೫೭೭ ೫೦೧

# ಗತವರ್ಷ ೨೦೦೮ – ಒಂದು ಅವಲೋಕನ




ಮುಗಿದ ಒಂದು ವರ್ಷದ ಅವಧಿಯಲ್ಲಿ ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ಸಂಭವಿಸಿದ ಘಟನೆಗಳನ್ನು ಸಮೀಕ್ಷೆ ಮಾಡುವಾಗ ಸಾಮಾನ್ಯವಾಗಿ ಮಹತ್ವಪೂರ್ಣವಾದ ಘಟನೆಗಳಿಂದ ಕೂಡಿದ ವರ್ಷ ಎಂದು ಪ್ರಾರಂಭಿಸುವುದು ರೂಢಿ. ವರ್ಷ ವರ್ಷವೂ ಪ್ರಪಂಚದಲ್ಲಿ ಹಲವಾರು ಘಟನೆಗಳು ಸಂಭವಿಸುತ್ತಿರುತ್ತವೆ. ಅದು ಪ್ರಕೃತಿ ನಿಯಮ, ಸಹಜ. ಏಕೆಂದರೆ ಮನುಷ್ಯ ಜೀವನ ನಿಂತ ನೀರಲ್ಲ, ನಿರಂತರವಾಗಿ ಚಲನಶೀಲ. ಬದಲಾವಣೆಗಳು ಸಂಭವಿಸುತ್ತಲೇ ಇರುತ್ತವೆ. ಈ ಬದಲಾವಣೆಗಳು ಯಾವ ದಿಶೆಯಲ್ಲಿವೆ ಎಂಬುದು ಮುಖ್ಯವಾಗುತ್ತದೆ. ಈ ದೃಷ್ಟಿಯಿಂದ ಎರಡುಸಾವಿರದ ಎಂಟನೆ ವರ್ಷದ ವಿದ್ಯಮಾನಗಳು ಎಲ್ಲ ರೀತಿಯಲ್ಲಿಯೂ ನಿಜಕ್ಕೂ ಮಹತ್ವಪೂರ್ಣವಾದ ಘಟನೆಗಳಿಂದ ಕೂಡಿದ್ದಾಗಿದೆ ಎಂದು ಧಾರಾಳವಾಗಿ ಹೇಳಬಹುದು. ಅದು ಬಂಡವಾಳಶಾಹಿ ವ್ಯವಸ್ಥೆಗೆ ಪರ್ಯಾಯಕ್ಕಾಗಿ ಹುಡುಕಾಟದ ವರ್ಷ ಎಂದೂ ಹೇಳಬಹುದು. ವರ್ಷದ ಕೊನೆಯ ಭಾಗದಲ್ಲಿ ಬಂಡವಾಳವಾಹಿ ಜಗತ್ತಿನ ಆರ್ಥಿಕ ಕ್ಷೇತ್ರದಲ್ಲಿ ಪ್ರಾರಂಭವಾಗಿರುವ ಅಲ್ಲೋಲಕಲ್ಲೋಲ ಅದನ್ನು ಪುಷ್ಟೀಕರಿಸುತ್ತದೆ. ಈ ಆರ್ಥಿಕ ಮುಗ್ಗಟ್ಟು ಒಂದು ಶತಮಾನದ ಹಿಂದೆ, ಅಂದರೆ ಇಪ್ಪತ್ತನೇ ಶತಮಾನದ ಪ್ರಾರಂಭದ ದಶಕಗಳಲ್ಲಿ ಕಂಡಂಥ ಮಹಾ ಆರ್ಥಿಕ ಕುಸಿತವನ್ನು ನೆನಪಿಗೆ ತರುತ್ತಿದೆ. ಅಭಿವೃದ್ಧಿ ಹೊಂದಿರುವ, ಹೊಂದಿರದ ಎಲ್ಲ ದೇಶಗಳನ್ನು ಆರ್ಥಿಕ ಹಿಂಜರಿತ ಆವರಿಸಿದ್ದು, ಬೆಳವಣಿಗೆ ಕುಂಠಿತವಾಗಿದೆ. ಇದರ ಪರಿಣಾಮ ದೀರ್ಘಾವಧಿಯದಾಗಿರುತ್ತದೆ.

■ ಸೀಯಾರ್ಕೆ

## ಜಾಗತಿಕ ಆರ್ಥಿಕ ಕುಸಿತ

ಕಳೆದ ಶತಮಾನದಲ್ಲಿ ಸಂಭವಿಸಿಧ ಮಹಾ ಆರ್ಥಿಕ ಕುಸಿತ ಪ್ರಾರಂಭವಾದ್ದೂ ಅಮೆರಿಕಾದಲ್ಲೇ. ಅಮೆರಿಕಾ ಹಾಗೂ ಇತರ ಬಂಡವಾಳಶಾಹಿ ದೇಶಗಳು ಈಗ ಮರುಕಳಿಸಿರುವ ಆರ್ಥಿಕ ಮುಗ್ಗಟ್ಟನ್ನು, ಆರ್ಥಿಕ ಕುಸಿತ ಎಂದು ಕರೆಯಲು ಸಿದ್ಧವಿಲ್ಲದಿದ್ದರೂ ಅಂಥ ಎಲ್ಲ ಲಕ್ಷಣಗಳೂ ಸ್ಪಷ್ಟವಾಗಿ ಕಾಣುತ್ತಿವೆ; ಅಷ್ಟೇ ತೀವ್ರ ಸ್ವರೂಪದ್ದೂ ಆಗಿದೆ. ಅಂದಿನಂತೆಯೇ ಅದು ಪ್ರಾರಂಭವಾದ್ದೂ ಅಮೆರಿಕಾದಿಂದಲೇ. ಬಂಡವಾಳಶಾಹಿ ಜಗತ್ತಿನಲ್ಲಿ ಆಗಾಗ್ಗೆ ಆರ್ಥಿಕ ಮುಗ್ಗಟ್ಟು ತಲೆದೋರುತ್ತಿರುವುದನ್ನು ನಾವು ಕಂಡಿದ್ದೇವೆ. ೨೦೦೨ರಲ್ಲೂ ಅಮೆರಿಕಾದಲ್ಲಿ ಆರ್ಥಿಕ ಹಿಂಜರಿತ ಸಂಭವಿಸಿತ್ತು. ಅದು ಪ್ರಧಾನವಾಗಿ ಮಾಹಿತಿ ತಂತ್ರಜ್ಞಾನ ಮತ್ತು ಆಟೋಮೊಬೈಲ್ ಕ್ಷೇತ್ರಗಳಿಗೆ ಸೀಮಿತವಾಗಿತ್ತು. ಅದರ ತೀವ್ರತೆ ಅಷ್ಟಾಗಿರಲಿಲ್ಲ. ಆದರೆ ಈಗ ಆರ್ಥಿಕ ಕುಸಿತದ ತೀವ್ರತೆ ಹೆಚ್ಚಾಗಿದ್ದು ಪ್ರಪಂಚದ ಎಲ್ಲ ದೇಶಗಳಿಗೂ ಅದರ ಬಿಸಿ ತಟ್ಟಿದೆ. ಈ ಘಟನೆಗಳು ಬಂಡವಾಳಶಾಹಿ ಜಗತ್ತಿನಲ್ಲಿ ಆಗಾಗ್ಗೆ ತಲೆದೋರುವ ಆರ್ಥಿಕ ಬಿಕ್ಕಟ್ಟನ್ನು ಕುರಿತು ಕಾರ್ಲ್ ಮಾರ್ಕ್ಸ್ ಸಿದ್ಧಾಂತ ಎಷ್ಟು ಸತ್ಯ ಎನ್ನುವುದು ರುಜುವಾತಾಗಿದೆ. ಪರಿಹಾರಕ್ಕಾಗಿ ಮಾರ್ಕ್ಸ್‌ರ ಸಿದ್ಧಾಂತಗಳತ್ತ ಮುಖಮಾಡುವುದು ಅವಶ್ಯವೆನಿಸಿದೆ. ಮುಕ್ತ ಮಾರುಕಟ್ಟೆ ಆರ್ಥಿಕ ವ್ಯವಸ್ಥೆಯಲ್ಲಿ ಎಗ್ಗಿಲ್ಲದ ಅನಿಯಂತ್ರಿತ ಹಣಕಾಸಿನ ವಹಿವಾಟಿನ ದುಷ್ಪರಿಣಾಮಗಳು ಸ್ಪಷ್ಟವಾಗಿ ಗೋಚರಿಸಿವೆ. ಲಾಭದ ದುರಾಸೆಯಿಂದ ಹಣಕಾಸಿನ ಸಂಸ್ಥೆಗಳು ನಡೆಸಿದ ಅವ್ಯವಹಾರಗಳು ಬಂಡವಾಳಶಾಹಿ ಅರ್ಥ ವ್ಯವಸ್ಥೆಯ ದಿವಾಳಿಖೋರತನವನ್ನು ಇಂದು ಬಹಿರಂಗಗೊಳಿಸಿದೆ. ಈಗಾಗಲೇ ಲಕ್ಷಾಂತರಮಂದಿ ನಿರುದ್ಯೋಗಿಗಳಾಗಿದ್ದಾರೆ, ಬೆಳವಣಿಗೆಯ ಗತಿ ಕುಸಿದಿದೆ. ಬ್ಯಾಂಕುಗಳು ಮುಳುಗಿ, ಠೇವಣಿದಾರರು ನಿರ್ಗತಿಕರಾಗಿದ್ದಾರೆ. ಇದರಿಂದ ಪಾರಾಗಲು ಅಮೆರಿಕಾ ಸರಕಾರ ಸಾವಿರಾರು ಬಿಲಿಯ ಡಾಲರುಗಳು ತೆರಿಗೆದಾರರ ಹಣವನ್ನು ಹರಿಸಿದ್ದಾಗ್ಯೂ ಪರಿಸ್ಥಿತಿ ನಿಯಂತ್ರಣಕ್ಕೆ ಬಂದಿಲ್ಲ. ಶ್ರೀಮಂತ ರಾಷ್ಟ್ರಗಳ ಜಿ. ೮ ಗುಂಪು, ಮತ್ತೆ ಅಭಿವೃದ್ಧಿಶೀಲ ದೇಶಗಳನ್ನು ಒಳಗೊಂಡ ಜಿ. ೨೦ ಗುಂಪು ರಾಷ್ಟ್ರಗಳ ಶೃಂಗಸಭೆಗಳು ನಿರೀಕ್ಷಿತ ಫಲಿತಾಂಶಗಳನ್ನೇನೂ ತಂದಿಲ್ಲ. ಇಂಥ ಸನ್ನಿವೇಶದಲ್ಲಿ ಬದಲಾವಣೆಗಾಗಿ ಹುಡುಕಾಟ ಅನಿವಾರ್ಯವಾಗುತ್ತಿದೆ. ಏಕಶಕ್ತಿ ಕೇಂದ್ರಿತ, ಬಲಿಷ್ಠ ರಾಷ್ಟ್ರಾವಲಂಬಿತ ಅರ್ಥವ್ಯವಸ್ಥೆಯ ಉದಾರೀಕರಣ, ಜಾಗತೀಕರಣ, ಮುಕ್ತ ಮಾರುಕಟ್ಟೆ ವ್ಯವಸ್ಥೆಗೆ ಬದಲಾಗಿ ಪರಸ್ಪರ ಸಹಕಾರ ಮತ್ತು ಸಮಾನತೆಯ ಆರ್ಥಿಕ ಸಂಬಂಧಗಳ ಸ್ಥಾಪನೆಯ ಚಿಂತನೆಗೆ ಕಾಲ ಸನ್ನಿಹಿತವಾಗಿದೆ. ಈ ವಿಚಾರದಲ್ಲಿ ಲ್ಯಾಟಿನ್ ಅಮೆರಿಕಾದ ಕೆಲವು ದೇಶಗಳು ಈಗಾಗಲೇ ಮಾರ್ಗ ಸೂಚಿಸಿವೆ. ರಷ್ಯಾ, ಚೀನಾ, ಭಾರತದಂಥ ದೇಶಗಳು ಪರ್ಯಾಯ ವ್ಯವಸ್ಥೆಯ ಸ್ಥಾಪನೆಯ ವಿಚಾರದಲ್ಲಿ ಚಿಂತನೆ ನಡೆಸಿ, ಉಪಕ್ರಮ ಕೈಗೊಂಡರೆ ಅದು ಫಲಕಾರಿಯಾದೀತು. ಪ್ರಾದೇಶಿಕವಾಗಿ ಈಗಾಗಲೇ ಪ್ರಪಂಚದ ವಿವಿಧ ಕಡೆಗಳಲ್ಲಿ ಪರಸ್ಪರ ಸಹಕಾರದಿಂದ ವ್ಯವಹರಿಸಲು ವೇದಿಕೆ ಸಿದ್ಧವಾಗಿದೆ. ಉದಾಹರಣೆಗೆ, ಶಾಂಘಾಯಿ ತಂಡ, ದಕ್ಷಿಣ ಏಷಿಯ ರಾಷ್ಟ್ರಗಳ ಕೂಟ, ರಷ್ಯಾದ ನೇತೃತ್ವದಲ್ಲಿರುವ ಕಾಮನ್‌ವೆಲ್ತ್ ಕೂಟ, ಲ್ಯಾಟಿನ್ ಅಮೆರಿಕಾದ ದೇಶಗಳ ಪರಸ್ಪರ ಸಹಕಾರ ವ್ಯವಸ್ಥೆ, ಇತ್ಯಾದಿ.

## ಅಮೆರಿಕಾ ಚುನಾವಣೆ

ಅಮೆರಿಕಾದಲ್ಲಿ ಜಾರ್ಜ್ ಡಬ್ಲ್ಯು. ಬುಷ್ ಎಂಟು ವರ್ಷಗಳ ದುರಹಂಕಾರದ ಆಡಳಿತ ಅಂತ್ಯಗೊಂಡಿದೆ. ಭಯೋತ್ಪಾದನೆಯ ವಿರುದ್ಧ ಸಮರ ಸಾರಿದ ಈತ ಎರಡು ಆಕ್ರಮಣಕಾರಿ ಯುದ್ಧಗಳನ್ನು (ಆಫ್ಘಾನಿಸ್ತಾನ, ಇರಾಕ್) ನಡೆಸಿದ, ಇರಾನಿನ ಮೇಲೆ ದಾಳಿ ನಡೆಸಲು ಪ್ರಯತ್ನಿಸಿದ ಕುಖ್ಯಾತಿ ಪಡೆದಿದ್ದಾನೆ. ಈತನನ್ನು ಅಮೆರಿಕಾದ ಅಧ್ಯಕ್ಷರುಗಳ ಪೈಕಿ ಅತ್ಯಂತ ದುಷ್ಟನೆಂದು ಹೆಸರಿಸಬಹುದು. ಚುನಾವಣೆಗಳು ಮುಗಿದು ಡೆಮಾಕ್ರಟಿಕ್ ಪಕ್ಷದ ಅಭ್ಯರ್ಥಿಯಾಗಿದ್ದ ಬರಾಕ್ ಒಬಾಮಾ ಅಮೆರಿಕಾದ ನೂತನ ಅಧ್ಯಕ್ಷರಾಗಿ ಆಯ್ಕೆಗೊಂಡಿದ್ದಾನೆ. ಈತ ಅಮೆರಿಕಾದ 'ಆಫ್ರಿಕನ್ ಅಮೆರಿಕನ್' ಎಂದು ಕರೆಯುವ ಕಪ್ಪು ಜನಾಂಗದ ಪ್ರತಿನಿಧಿ. ಅಮೆರಿಕಾದ ಇತಿಹಾಸದಲ್ಲಿ ಪ್ರಥಮಬಾರಿಗೆ ಕರಿಯನೊಬ್ಬ ಅಧ್ಯಕ್ಷ ಸ್ಥಾನಕ್ಕೇರುತ್ತಿರುವುದು ದಾಖಲೆಯ ಸಂಗತಿ ಹಾಗೂ ಸ್ವಾಗತಾರ್ಹ ಬೆಳವಣಿಗೆ. ಹೊಸ ವರ್ಷದಲ್ಲಿ ಅಧಿಕಾರ ವಹಿಸಿಕೊಳ್ಳುವ ಈತನಿಂದ ಮಹತ್ವಪೂರ್ಣ ಬದಲಾವಣೆಗಳನ್ನು ನಿರೀಕ್ಷಿಸುತ್ತ ಜಗತ್ತಿನ ಮಾಧ್ಯಮಗಳು ಅಬ್ಬರದ ಪ್ರಚಾರ ನಡೆಸಿವೆ. ಎರಡನೇ



ಬರಾಕ್ ಒಬಾಮಾ

ರೂಸ್‌ವೆಲ್ಟ್ ಎಂದೂ, ಹೊಸಹಾದಿಯ ಹರಿಕಾರನೆಂದೂ ಬಣ್ಣಿಸಲಾಗಿದೆ. ಇದು ಎಷ್ಟು ಸಮರ್ಥನೀಯ ಎಂಬುದನ್ನು ಮುಂದಿನ ದಿನಗಳು ನಿರ್ಧರಿಸುತ್ತವೆ. ಒಬಾಮಾ ಆಡಳಿತದಲ್ಲಿ ಆಂತರಿಕವಾಗಿ ಕೆಲವು ಬದಲಾವಣೆಗಳನ್ನು ತರಬಹುದು. ಆರ್ಥಿಕ ಕುಸಿತದ ಹಿನ್ನೆಲೆಯಲ್ಲಿ ಕೆಲ ಸುಧಾರಣೆಗಳನ್ನು ಜಾರಿಗೊಳಿಸಬಹುದು. ಆದರೆ ವಿದೇಶೀ ನೀತಿಯಲ್ಲಿ ಮಾರ್ಪಾಟುಗಳೇನೂ ಸಂಭವಿಸುವಂತೆ ತೋರುವುದಿಲ್ಲ. ಅಮೆರಿಕಾದ 'ಹಿತಾಸಕ್ತಿ'ಗಳನ್ನು ಮೀರುವ ಬದಲಾವಣೆಗಳನ್ನು ತರುವ ಸಾಧ್ಯತೆ ಕಮ್ಮಿ. ಚುನಾವಣಾ ಪ್ರಚಾರ ಕಾಲದಲ್ಲಿ ಆತನ ಭಾಷಣಗಳನ್ನು ಅವಲೋಕಿಸಿದರೆ ಅದು ವೇದ್ಯವಾಗುತ್ತದೆ. ಪ್ರಾಯಶಃ ಬುಷ್‌ನಷ್ಟು ನೀಚತನವನ್ನಾಗಲಿ, ದುಸ್ಸಾಹಸಗಳನ್ನಾಗಲಿ ಈತ ಮಾಡಲಾರ ಎಂದು ನಿರೀಕ್ಷಿಸಬಹುದು.

ಇರಾಕಿನಲ್ಲಿ ಯಥಾಸ್ಥಿತಿ ಮುಂದುವರಿಯುತ್ತಿದೆ. ೨೦೧೧ರ ವೇಳೆಗೆ ಅಮೆರಿಕಾದ ಸೇನೆಗಳನ್ನು ಪೂರ್ಣವಾಗಿ ವಾಪಸ್ಸು ಕರೆಸಿಕೊಳ್ಳುವ ಯೋಜನೆಯೊಂದು ಅಂಗೀಕಾರವಾಗಿದೆ. ಇರಾಕಿನ ಕೈಗೊಂಬೆ ಸರಕಾರ ಅಮೆರಿಕಾಗಳ ನಡುವಣ ಈ ಒಪ್ಪಂದಕ್ಕೆ ಇರಾಕಿನಲ್ಲಿ ವ್ಯಾಪಕವಾದ ವಿರೋಧವಿದೆ. ಹಾಗಾಗಿ ಯಾರೇ ಅಧಿಕಾರಕ್ಕೆ ಬಂದರೂ ಇನ್ನು ಮೂರುವರ್ಷಗಳು ಇರಾಕಿನ ಆಕ್ರಮಣಕ್ಕೆ ಅಂತ್ಯ ಇಲ್ಲ. ಆಫ್ಘಾನಿಸ್ತಾನ ಅಮೆರಿಕಾಗೆ ಕಂಟಕವಾಗಿ ಪರಿಣಮಿಸಿದೆ. ಹಿಂದೆ ಸೋವಿಯತ್ ಒಕ್ಕೂಟ ಸಿಕ್ಕಿಬಿದ್ದ ಸ್ಥಿತಿಯನ್ನೇ ಅಮೆರಿಕಾ ಎದುರಿಸುತ್ತಿದೆ. ನ್ಯಾಟೋ ಪಡೆಗಳ ಸಹಾಯವಿದ್ದರೂ ಅಮೆರಿಕಾಗೆ ಆಫ್ಘಾನಿಸ್ತಾನದ ಮೇಲೆ ಹಿಡಿತ ಸಾಧಿಸಲಾಗಿಲ್ಲ. ಅಲ್‌ಖೈದಾ ಮತ್ತು ತಾಲಿಬಾನ್‌ಗಳು ದಿನೇ ದಿನೇ ಪ್ರಬಲಗೊಳ್ಳುತ್ತಿವೆ. ಅನಧಿಕೃತ ವರದಿಗಳ ಪ್ರಕಾರ ದೇಶದ ಮುಕ್ಕಾಲು ಭಾಗ ತಾಲಿಬಾನ್ ಹಿಡಿತದಲ್ಲಿದೆ. ಭಯೋತ್ಪಾದಕರ ಬೆನ್ನಟ್ಟಿ ಅಮೆರಿಕಾದ ವಿಮಾನಗಳು ಪಾಕಿಸ್ತಾನದ ಗಡಿಯಲ್ಲೂ ಬಾಂಬುಗಳನ್ನು ಸುರಿಯುತ್ತಿವೆ. ಇದರಿಂದ ಅಮಾಯಕ ನಾಗರಿಕರ ಸಾವುನೋವುಗಳು ಸಂಭವಿಸುತ್ತಿದ್ದು ಪಾಕಿಸ್ತಾನಿ ನಾಗರಿಕರು ಆಕ್ರೋಶಗೊಂಡಿದ್ದಾರೆ. ಇರಾನಿನ ನ್ಯೂಕ್ಲಿಯರ್ ಯೋಜನೆಯ ಕುರಿತು ಅಮೆರಿಕಾದ ವಿವಾದ ಮುಂದುವರಿಯುತ್ತಿದೆ. ಉಳಿದಂತೆ ಪಶ್ಚಿಮ ಏಶಿಯಾದಲ್ಲಿ ಇಸ್ರೇಲಿನ ದುರಾಕ್ರಮಣ ಹಾಗೂ ಮೊಂಡುತನದ ಧೋರಣೆಯಿಂದಾಗಿ ಪ್ಯಾಲಸ್ತೈನ್ ಸಮಸ್ಯೆ ಕಗ್ಗಂಟಾಗೇ ಇದೆ. ಒಬಾಮಾ ಆಡಳಿತದಲ್ಲಿ ಈ ಕ್ಷೇತ್ರಗಳಲ್ಲಿ ಹೆಚ್ಚಿನ ಬದಲಾವಣೆಗಳನ್ನು ನಿರೀಕ್ಷಿಸಲಾಗದು.

## ಕ್ಯೂಬಾ : ಕ್ಯಾಸ್ಟ್ರೊ ನಿವೃತ್ತಿ

ಹದಿನಾಲ್ಕು ವರ್ಷಗಳಿಂದ ಅಮೆರಿಕಾ ವಿಧಿಸಿರುವ ಆರ್ಥಿಕ ದಿಗ್ಬಂಧನವನ್ನು ಅನುಭವಿಸುತ್ತಿರುವ ಕ್ಯೂಬಾ ನೆರೆಯ ಮಹಾಶಕ್ತ ರಾಷ್ಟ್ರದ ಬೆದರಿಕೆಗಳಿಗೆ ಮಣಿಯದೆ ದೃಢವಾಗಿ ತಲೆಎತ್ತಿ ನಿಂತಿದೆ. ವಿಶೇಷವೆಂದರೆ, ಹಿರಿಯ ಕ್ರಾಂತಿಕಾರಿ ಮಹಾನ್ ನಾಯಕ ಫೀಡೆಲ್ ಕ್ಯಾಸ್ಟ್ರೊ ಅನಾರೋಗ್ಯದ ಕಾರಣದಿಂದ ಅಧ್ಯಕ್ಷಸ್ಥಾನವನ್ನು ತ್ಯಜಿಸಿ ವಿಶ್ರಾಂತರಾಗಿರುವುದು. ಅತ್ಯಂತ ಸುಗಮವಾಗಿ ನಡೆದ ಅಧಿಕಾರದ ಹಸ್ತಾಂತರ ಎಲ್ಲರನ್ನೂ ಬೆರಗುಗೊಳಿಸಿದೆ. ಫೀಡೆಲ್ ಕ್ಯಾಸ್ಟ್ರೊ ನಂತರ ಯಾರು? ಏನು? ಎನ್ನುವುದಕ್ಕೆ ಉತ್ತರ ದೊರೆತಿದೆ. ಪಶ್ಚಿಮ ರಾಷ್ಟ್ರಗಳ ನಿರೀಕ್ಷೆಗಳನ್ನು ಹುಸಿಯಾಗಿಸಿದೆ. ಅಮೆರಿಕಾದ ನೂತನ ಅಧ್ಯಕ್ಷ ಬರಾಕ್ ಒಬಾಮಾ ಕ್ಯೂಬಾದ ಬಗ್ಗೆ ಧೋರಣೆಯನ್ನು ಸಡಿಲಿಸುವ ಸೂಚನೆ ಕಮ್ಮಿ. ಕನಿಷ್ಠ ಆರ್ಥಿಕ ದಿಗ್ಬಂಧನ ಮುಕ್ತಗೊಳಿಸುವ ಸೂಚನೆಯೂ ಇಲ್ಲ. ಆತ ಚುನಾವಣೆಯ ಭಾಷಣಗಳಲ್ಲಿ ಕ್ಯೂಬಾದ ವಿರುದ್ಧ ಕಿಡಿಕಾರಿದ್ದಾನೆ. ಫೀಡೆಲ್ ಕ್ಯಾಸ್ಟ್ರೊ ಅಮೆರಿಕಾದ ನೀತಿಗಳಲ್ಲಿ ಮೂಲ ಬದಲಾವಣೆಗಳನ್ನೇನೂ ನಿರೀಕ್ಷಿಸದಿದ್ದರೂ ಒಬಾಮಾ ಆಯ್ಕೆಯನ್ನು ಸ್ವಾಗತಿಸಿದ್ದಾರೆ. ಲ್ಯಾಟಿನ್ ಅಮೆರಿಕಾದ ದೇಶಗಳೊಂದಿಗೆ, ಮುಖ್ಯವಾಗಿ ವೆನೆಜುವೇಲ, ಬೊಲಿವಿಯ, ಬ್ರೆಜಿಲ್‌ಗಳೊಂದಿಗೆ ಕ್ಯೂಬಾದ ಬಾಂಧವ್ಯ ವರ್ಧಿಸಿದೆ. ಲ್ಯಾಟಿನ್ ಅಮೆರಿಕಾದ ದೇಶಗಳಲ್ಲಿ ಬದಲಾವಣೆಯತ್ತ ಬೀಸುತ್ತಿರುವ ಗಾಳಿ ಅಮೆರಿಕಾದ ಆಡಳಿತಗಾರರ ನಿದ್ರೆಗೆಡಿಸಿದೆ.



ಫೀಡೆಲ್ ಕ್ಯಾಸ್ಟ್ರೊ

## ಬೀಜಿಂಗ್ ಒಲಿಂಪಿಕ್ಸ್

ಚೀನಾದ ರಾಜಧಾನಿ ಬೀಜಿಂಗ್‌ನಲ್ಲಿ ೨೦೦೮ರ ಒಲಿಂಪಿಕ್ ಪಂದ್ಯಗಳು ನಿರೀಕ್ಷಿಸಿದ್ದುದಕ್ಕಿಂತ ಹೆಚ್ಚು ವಿಜೃಂಭಣೆಯಿಂದ ನಡೆಯಿತು. ಅಚ್ಚುಕಟ್ಟಾಗಿ, ವ್ಯವಸ್ಥಿತವಾಗಿ ಎರಡು ವಾರಗಳ ಕಾಲ ಜರುಗಿದ ಈ ಜಾಗತಿಕ ಕ್ರೀಡಾ ಮೇಳವನ್ನು ಯಶಸ್ವಿಯಾಗಿ ನಿರ್ವಹಿಸಿದ ಕೀರ್ತಿ ಚೀನಾಗೆ ಸಲ್ಲುತ್ತದೆ. ಪ್ರಪಂಚದಾದ್ಯಂತ ಅತಿಹೆಚ್ಚು ಮಂದಿ ಕ್ರೀಡಾಪಟುಗಳನ್ನೂ, ಅಭಿಮಾನಿಗಳನ್ನೂ, ಪ್ರವಾಸಿಗಳನ್ನೂ ಆಕರ್ಷಿಸಿದ ಹಿರಿಮೆ ಬೀಜಿಂಗ್‌ಗೆ. ಉದ್ಘಾಟನೆ ಹಾಗೂ ಸಮಾರೋಪದ ಸಂದರ್ಭದಲ್ಲಿ ಪ್ರದರ್ಶನಗೊಂಡ ಅದ್ದೂರಿಯ ಸಾಮೂಹಿಕ ಸಾಂಸ್ಕೃತಿಕ ಪ್ರದರ್ಶನ ಕ್ರೀಡಾಮೇಳಕ್ಕೆ ಕಿರೀಟಪ್ರಾಯವಾಗಿತ್ತು. ಚೀನಾ ಕ್ರೀಡಾ ಪಂದ್ಯಗಳಲ್ಲೂ ಅಧಿಕ ಚಿನ್ನದ ಪದಕಗಳನ್ನು, ಇತರ ಪದಕಗಳನ್ನು ಗಳಿಸಿ ಮೇಲ್ದರ್ಜೆಯ ಪ್ರದರ್ಶನ ನೀಡಿದ್ದು, ಕ್ರೀಡೆಗಳಿಗೆ ದೇಶ ನೀಡುತ್ತಿರುವ ಪ್ರಾಧಾನ್ಯತೆಗೆ ದ್ಯೋತಕವಾಗಿತ್ತು. ಬೀಜಿಂಗ್ ಒಲಿಂಪಿಕ್ಸ್‌ನಲ್ಲಿ ಭಾರತ ಮೊದಲ ಬಾರಿಗೆ ಷೂಟಿಂಗ್‌ನಲ್ಲಿ ಸ್ವರ್ಣ ಪದಕ ಗಳಿಸಿದ್ದು ಭಾರತೀಯರಿಗೆ ಹೆಮ್ಮೆಯ ಸಂಗತಿ. ಕಳೆದ ಬಾರಿ ಭಾರತ ಸ್ವರ್ಣಪದಕ ಪಡೆದದ್ದು ಮಾಸ್ಕೋ ಒಲಿಂಪಿಕ್ಸ್‌ನಲ್ಲಿ (೧೯೮೦) ಹಾಕಿ ಪಂದ್ಯದಲ್ಲಿ. ಹಾಗಾಗಿ ಎರಡೂವರೆ ದಶಕಗಳಾದ ಮೇಲೆ ಈ ಗೌರವ ಲಭಿಸಿರುವುದು ಸಂತಸದ ಸಂಗತಿ. ಹಾಗೆಯೇ ಮೊದಲಬಾರಿಗೆ ಕುಸ್ತಿ ಮತ್ತು ಬಾಕ್ಸಿಂಗ್‌ನಲ್ಲಿ ಭಾರತದ ಕ್ರೀಡಾಪಟುಗಳು ಪದಕಗಳನ್ನು ಪಡೆದುಕೊಂಡದ್ದು ಹೆಮ್ಮೆ. ಒಟ್ಟನಲ್ಲಿ ಬೀಜಿಂಗ್ ಒಲಿಂಪಿಕ್ಸ್ ಭಾರತದ ಕ್ರೀಡಾಭಿಮಾನಿಗಳಿಗೆ ತಕ್ಕಮಟ್ಟಿಗೆ ತೃಪ್ತಿ ತಂದ ಪಂದ್ಯ.




ಒಲಿಂಪಿಕ್ಸ್ ಪಂದ್ಯಗಳೇನೋ ಬೀಜಿಂಗ್‌ನಲ್ಲಿ ಯಶಸ್ವಿಯಾಗಿ ನಡೆಯಿತು. ಆದರೆ ಅದಕ್ಕೆ ಮೊದಲು ಪಂದ್ಯಗಳನ್ನು ಅಡ್ಡಿಪಡಿಸಲು ಪ್ರಯತ್ನಗಳೇನೂ ಕಮ್ಮಿ ಇರಲಿಲ್ಲ. ಬೀಜಿಂಗ್‌ನ ಪರಿಸರ ಮಾಲಿನ್ಯದ ಬಗ್ಗೆ ಪಾಶ್ಚಾತ್ಯ ರಾಷ್ಟ್ರಗಳು ತೀವ್ರವಾದ ಆತಂಕ ವ್ಯಕ್ತಪಡಿಸತೊಡಗಿದವು. ಇದರ ಬೆನ್ನಲ್ಲೇ ಟಿಬೇಟಿನಲ್ಲಿ ಧರ್ಮಗುರು ದಲಾಯಿಲಾಮಾನ ಅನುಯಾಯಿಗಳನ್ನು ಎತ್ತಿಕಟ್ಟಿ ಗಲಭೆಗಳನ್ನು ನಡೆಸಲಾಯಿತು, ಅಮೆರಿಕಾ ಹಾಗೂ ಕೆಲ ಪಾಶ್ಚಾತ್ಯ ದೇಶಗಳ ಕುಮ್ಮಕ್ಕಿನಿಂದ. ಅಮೆರಿಕಾದ ಸೆನೆಟರು ಒಬ್ಬರು ಭಾರತದಲ್ಲಿರುವ ದಲಾಯಿಲಾಮನ ಆಶ್ರಮದಲ್ಲೇ ಮುಕ್ಕಾಂ ಹೂಡಿ ಪ್ರಚೋದನಕಾರಿ ಹೇಳಿಕೆಗಳನ್ನು ನೀಡಿದರು. ಟಿಬೇಟಿನ ಸ್ವಾತಂತ್ರ್ಯ 'ಹೋರಾಟಗಾರರ' ಮೇಲೆ ಚೀನಾ ಸರಕಾರ ದಬ್ಬಾಳಿಕೆ ನಡೆಸುತ್ತಿದ್ದು ಮಾನವ ಹಕ್ಕುಗಳನ್ನು ಉಲ್ಲಂಘಿಸಿದೆ ಎಂದು ಈ ದೇಶಗಳು ಬೊಬ್ಬೆ ಹಾಕಿದುವು. ಕೆಲ ದೇಶಗಳು ಚೀನೀ ಒಲಿಂಪಿಕ್ಸ್‌ಅನ್ನು ಬಾಯ್‌ಕಾಟ್ ಮಾಡುವ ಬೆದರಿಕೆಯನ್ನು ಹಾಕಿದುವು, ಇನ್ನು ಕೆಲವು ದೇಶಗಳ ನಾಯಕರು ಉದ್ಘಾಟನಾ ಸಮಾರಂಭದಲ್ಲಿ ಭಾಗವಹಿಸುವುದಿಲ್ಲವೆಂದು ಹೇಳಿದರು. ಚೀನೀ ಸರಕಾರ ಈ ಆರ್ಭಟಗಳಿಗೆ ಸೊಪ್ಪುಹಾಕದೆ ದಿಟ್ಟತನದಿಂದ ಎದುರಿಸಿ ಪಂದ್ಯಗಳನ್ನು ಯಶಸ್ವಿಯಾಗಿಸುವುದರ ಕಡೆಗೆ ಗಮನ ನೀಡಿತು. ಟಿಬೇಟಿನ ಪ್ರಶ್ನೆ ಚೀನಾದ ಆಂತರಿಕ ಸಮಸ್ಯೆಯೆಂದೂ, ಅದರಲ್ಲಿ ಅನ್ಯರಿಗೆ ಪ್ರವೇಶವಿಲ್ಲವೆಂದೂ ಸ್ಪಷ್ಟಗೊಳಿಸಿತು. ಮಾಸ್ಕೋ ಒಲಿಂಪಿಕ್ಸ್ ನಂತೆಯೇ ಬೀಜಿಂಗ್ ಒಲಿಂಪಿಕ್ಸ್‌ಗೂ ಕಳಂಕ ಉಂಟುಮಾಡಲು ನಡೆಸಿದ ಪ್ರಯತ್ನ ಫಲಕಾರಿಯಾಗಲಿಲ್ಲ.

## ಬದಲಾಗುತ್ತಿರುವ ರಷ್ಯಾ

ಹತ್ತು ವರ್ಷಗಳು ಅಧಿಕಾರದ ಚುಕ್ಕಾಣಿ ಹಿಡಿದು, ಸೋವಿಯತ್ ಒಕ್ಕೂಟದ ವಿಘಟನೆಯ ನಂತರ ಅಧ್ಯಕ್ಷ ಬೋರಿಸ್ ಎಲ್ಸಿನ್‌ನ ಆಳ್ವಿಕೆಯ ಅರಾಜಕತೆಯನ್ನು ಸರಿಪಡಿಸಿ, ರಷ್ಯಾದಲ್ಲಿ ವ್ಯವಸ್ಥೆಯನ್ನು ಸುಭದ್ರಗೊಳಿಸಿದ ಅಧ್ಯಕ್ಷ ಪುಟಿನ್ ೨೦೦೮ರಲ್ಲಿ ಪದತ್ಯಾಗ ಮಾಡಿದರು. ತೆರವಾದ ಅವರ ಸ್ಥಾನಕ್ಕೆ ಮೆದ್ವೆದೇವ್ ಆಯ್ಕೆಗೊಂಡು ಅಧಿಕಾರ ನಿರ್ವಹಿಸುತ್ತಿದ್ದಾರೆ. ಭಾರತಕ್ಕೂ ಭೇಟಿ ನೀಡಿ ಮಹತ್ವಪೂರ್ಣವಾದ



ಮೆದ್ವೆದೆವ್ ಮತ್ತು ಪುಟಿನ್

ಒಪ್ಪಂದಗಳಿಗೆ ಸಹಿ ಹಾಕಿದ್ದಾರೆ. ಚುನಾವಣೆಗಳಲ್ಲಿ ತಮ್ಮ ಪಕ್ಷಕ್ಕೆ ಅಧಿಕ ಬಲ ಗಳಿಸಿ ಕೊಟ್ಟ ಮಾಜಿ ಅಧ್ಯಕ್ಷ ಪುಟಿನ್ ರಷ್ಯಾದ ಪ್ರಧಾನಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ; ತಕ್ಕಮಟ್ಟಿಗೆ ರಾಜಕೀಯ ಹಾಗೂ ಆರ್ಥಿಕ ಸ್ವಾತಂತ್ರ್ಯ ಸ್ಥಾಪಿಸಿಕೊಂಡಿರುವ ರಷ್ಯಾ, ಮಾಜಿ ಸೋವಿಯತ್ ಪ್ರಾಂತಗಳಿಂದ ಕೂಡಿರುವ ಸ್ವತಂತ್ರ ರಾಷ್ಟ್ರಗಳ ಕಾಮನ್‌ವೆಲ್ತ್‌ನ್ನು ದೃಢಗೊಳಿಸುತ್ತಿದೆ. ಅಂತಾರಾಷ್ಟ್ರೀಯ ಕ್ಷೇತ್ರದಲ್ಲಿ ಸಂಭವಿಸುತ್ತಿರುವ ವಿದ್ಯಮಾನಗಳ ವಿಚಾರದಲ್ಲಿ ಸ್ವತಂತ್ರವಾದ ನಿಲುವನ್ನು ತಳೆದು ಅಮೆರಿಕಾ ಹಾಗೂ ನ್ಯಾಟೋ ಕೂಟಕ್ಕೆ ಸವಾಲು ಒಡ್ಡಿದೆ. ಜಾರ್ಜಿಯಾದ ಆತಿಕ್ರಮಣವನ್ನು ತಡೆಯಲು ರಷ್ಯಾ ಕೈಗೊಂಡ ದಿಟ್ಟತನದ ಸೈನಿಕ ಕಾರ್ಯಾಚರಣೆ ಅದಕ್ಕೊಂದು ಉದಾಹರಣೆ. ಹಾಗೆಯೇ ಪೂರ್ವ ಯೂರೋಪಿನ ರಾಷ್ಟ್ರಗಳಲ್ಲಿ ರಷ್ಯಾದ ಗಡಿಗಳಲ್ಲಿ ಕ್ಷಿಪಣಿಗಳನ್ನು ನೆಲೆಗೊಳಿಸುವ ಪ್ರಯತ್ನವನ್ನು ರಷ್ಯಾ ಹಿಮ್ಮೆಟ್ಟಿಸಿದೆ. ಪ್ರಚಲಿತ ಅಂತರರಾಷ್ಟ್ರೀಯ ಪರಿಸ್ಥಿತಿಯಲ್ಲಿ ಏಕಶಕ್ತಿಕೇಂದ್ರಿತ ವ್ಯವಸ್ಥೆಗೆ ಪ್ರತಿಯಾಗಿ ಬಹುರಾಷ್ಟ್ರೀಯ ಸಮಾನವ್ಯವಸ್ಥೆಯನ್ನು ರೂಪಿಸಲು ಪ್ರಯತ್ನಿಸುತ್ತಿದೆ. ಭಾರತ, ಚೀಣ, ರಷ್ಯಾಗಳನ್ನೊಳಗೊಂಡಿರುವ ಪರಸ್ಪರ ಸಹಕಾರ ಆಧಾರಿತ ಷಾಂಘಾಯ್ ತಂಡ ಆ ದಿಶೆಯಲ್ಲಿನ ಉಪಕ್ರಮ. ಇದು ಇನ್ನೂ ದೃಢವಾದ ನೆಲೆ ಕಂಡುಕೊಳ್ಳಬೇಕಷ್ಟೆ.

## ಪಾಕಿಸ್ತಾನ : ಸರ್ವಾಧಿಕಾರಿ ಪದಚ್ಯುತಿ

**ಪಾ**ಕಿಸ್ತಾನದಲ್ಲಿ ವರ್ಷ ಪ್ರಾರಂಭವಾದದ್ದೇ ಪಾಕಿಸ್ತಾನ್ ಪೀಪಲ್ಸ್ ಪಾರ್ಟಿಯ ನಾಯಕಿ ಮಾಜಿ ಪ್ರಧಾನಿ ಬೇನಜೀರ್ ಭುಟ್ಟೋ ಭೀಕರ ಹತ್ಯೆಯ ಹಿನ್ನೆಲೆಯಲ್ಲಿ. ಅಮೆರಿಕಾದ ಮಧ್ಯಸ್ತಿಕೆಯಿಂದ ತಾಯ್ನಾಡಿಗೆ ಹಿಂದಿರುಗಿದ ಆಕೆ ದುರಂತಕ್ಕೀಡಾದ್ದು ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವ ಚಳವಳಿಗೆ ಹಿನ್ನಡೆಯಾಯಿತು. ಹಾಗಿದ್ದರೂ ಜನಪ್ರಿಯತೆಯನ್ನು ಕಳೆದುಕೊಂಡು, ನ್ಯಾಯಾಂಗವನ್ನು ಎದುರುಹಾಕಿಕೊಂಡಿದ್ದ ಅಧ್ಯಕ್ಷ ಜನರಲ್ ಮುಷರಫ್ ಕಡೆಗೂ ಒತ್ತಡಕ್ಕೆ ಮಣಿದು ಚುನಾವಣೆಗಳನ್ನು ನಡೆಸ ಬೇಕಾಯಿತು. ಚುನಾವಣೆಗಳಲ್ಲಿ ಸೋಲನ್ನುಂಡ ಮುಷರಫ್ ಅಧಿಕಾರಕ್ಕೆ ಅಂಟಿಕೊಂಡಿರಲು ನಡೆಸಿದ ಪ್ರಯತ್ನ ವಿಫಲಗೊಂಡು, ಎಂಟು ವರ್ಷಗಳ ಸರ್ವಾಧಿಕಾರದ ಆಡಳಿತ ಅಂತ್ಯಗೊಂಡಿತು. ಪಾಕಿಸ್ತಾನ್ ಪೀಪಲ್ಸ್ ಪಾರ್ಟಿಯ ನೇತೃತ್ವದಲ್ಲಿ ಪಾಕಿಸ್ತಾನದಲ್ಲಿ ಪ್ರಜಾ ಪ್ರಭುತ್ವ ಸರಕಾರ ಈಗ ಅಸ್ತಿತ್ವ ದಲ್ಲಿದೆ. ನವಾಜ್ ಷರೀಫ್ ನಾಯಕತ್ವದಲ್ಲಿರುವ ಪಾಕಿಸ್ತಾನ್ ಮುಸ್ಲಿಂ ಲೀಗ್ ಸರಕಾರದಲ್ಲಿ ಭಾಗಿ ಆಗಿದ್ದು ಕೆಲದಿನಗಳ ನಂತರ



ಬೇನಜೀರ್ ಭುಟ್ಟೋ

ಹೊರಗೆ ಬಂದಿದೆ. ಇದು ಸರಕಾರದ ಭದ್ರತೆಗೆ ಆತಂಕವಾಗಿದ್ದರೂ, ಪಿಪಿಪಿಗೆ ಬಹುಮತವಿದೆ. ಇದರ ಜೊತೆಗೆ ಪಾಕಿಸ್ತಾನದಲ್ಲಿ ಹೆಚ್ಚಿರುವ ಮೂಲಭೂತ ವಾದಿಗಳ ಭಯೋತ್ಪಾದನಾ ಕೃತ್ಯಗಳು, ಅಫ್ಘಾನಿಸ್ತಾನದ ಗಡಿಯಲ್ಲಿ ವಾಯುವ್ಯ ಪ್ರಾಂತದಲ್ಲಿ ತಾಲಿಬಾನ್‌ಗಳು ಮತ್ತು ಅಲ್‌ಖೈದಾ ಉಗ್ರರ ದಾಳಿ ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವದ ಸ್ಥಿರತೆಗೆ ಮಾರಕವಾಗಿದೆ. ಇದಲ್ಲದೆ ಪಿಪಿಪಿಯ ಕಾರ್ಯಾಧ್ಯಕ್ಷ ಆಸಿಫ್ ಅಲಿ ಜರ್ದಾರಿ ಸರಕಾರಕ್ಕೆ ಇನ್ನೂ ಆಡಳಿತದ ಮೇಲೆ ಹಿಡಿತ ಸಾಧಿಸಲಾಗಿಲ್ಲ. ಸುದೀರ್ಘಕಾಲ ಆಡಳಿತ ರುಚಿ ಕಂಡಿರುವ ಪಾಕಿಸ್ತಾನದ ಸೇನೆ ಹಾಗೂ ಗುಪ್ತಚರ ಪಡೆ ಐಎಸ್ಐ ಮೇಲೆ ನಿಯಂತ್ರಣ ಇರಿಸಿಕೊಳ್ಳಲಾಗಿಲ್ಲ. ಭಾರತದ ವಾಣಿಜ್ಯ ನಗರ ಮುಂಬೈನಲ್ಲಿ ಉಗ್ರರು ನವೆಂಬರ್ ಕೊನೆಯಲ್ಲಿ ನಡೆಸಿದ ದಾಳಿಯ ನಂತರದ ಬೆಳವಣಿಗೆ ಗಳು ಅದನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಆರ್ಥಿಕ ಪರಿಸ್ಥಿತಿಯೂ ಕಳವಳಕಾರಿ ಯಾಗಿದೆ. ಒಟ್ಟಿನಲ್ಲಿ ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವವ್ಯವಸ್ಥೆ ನೆಲೆಗೊಳ್ಳಲು ಇನ್ನೂ ಹೆಚ್ಚು ಕಾಲ ಬೇಕು.



ಮುಷರಫ್

## ನೇಪಾಳ : ಅರಸೊತ್ತಿಗೆ ಅಂತ್ಯ

**ಭಾ**ರತದ ಉತ್ತರದ ತುದಿಯಲ್ಲಿರುವ ನೇಪಾಳ, ಭೂತಾನ ರಾಜ್ಯಗಳಲ್ಲಿ ಪ್ರಜಾತಂತ್ರವ್ಯವಸ್ಥೆ ಅಸ್ತಿತ್ವಕ್ಕೆ ಬಂದಿರುವುದು ಸ್ವಾಗತಾರ್ಹ. ನೇಪಾಳದಲ್ಲಿ ಅರಸೊತ್ತಿಗೆ ಅಂತ್ಯಗೊಂಡು ಮಾವೋವಾದಿ ಕಮ್ಯುನಿಸ್ಟ್ ಪಕ್ಷದ ನೇತೃತ್ವದಲ್ಲಿ ಸರಕಾರ ಸ್ಥಾಪನೆಗೊಂಡಿದ್ದರೆ, ಭೂತಾನದಲ್ಲಿ ರಾಜಾಶ್ರಯದಲ್ಲಿ ಮೊದಲಬಾರಿಗೆ ಚುನಾವಣೆಗಳು ಜರುಗಿ ಪ್ರಜಾಪ್ರಭುತ್ವ ಸರಕಾರ ಸ್ಥಾಪನೆಗೊಂಡಿದೆ. ಎರಡೂ ದೇಶ ಗಳಲ್ಲಿ ಹೊಸ ಸಂವಿಧಾನ ರೂಪಿಸುವ ಕಾರ್ಯ ಸಾಗಿದೆ. ನೇಪಾಳದಲ್ಲಿ ಸುದೀರ್ಘ ಕಾಲ ಸರಕಾರದ ವಿರುದ್ಧವಾಗಿ ಸಶಸ್ತ್ರ ಹೋರಾಟ ನಡೆಸಿದ ಮಾವೋವಾದಿ ಕಮ್ಯುನಿಸ್ಟ್ ಪಕ್ಷ ಸಂಧಾನಗಳ ಮೂಲಕ ರಾಜಕೀಯದ ಮುಖ್ಯ ವಾಹಿನಿಗೆ ಪ್ರವೇಶಿಸಿತು. ವಿವಿಧ ರಾಜಕೀಯ ಪಕ್ಷಗಳ ಮಧ್ಯೆ ಷರತ್ತುಗಳ ಮೇಲೆ ಚುನಾವಣೆಯಲ್ಲಿ ಭಾಗವಹಿಸಿದ್ದ ಮಾವೋವಾದಿ ಪಕ್ಷ ಪ್ರಚಂಡ ನೇತೃತ್ವದಲ್ಲಿ ಬಹುಮತ ಗಳಿಸಿತು. ಈ ಬೆಳವಣಿಗೆಯಿಂದ ಗಾಬರಿಗೊಂಡ ಅಮೆರಿಕಾ ಬಹುಕಾಲ ನೇಪಾಳದಲ್ಲಿ ಆಡಳಿತ ನಡೆಸಿದ್ದ ನೇಪಾಳಿ ಕಾಂಗ್ರೆಸ್ ನಾಯಕರನ್ನು ಬಳಸಿಕೊಂಡು ಮಾವೋವಾದಿಗಳು ಅಧಿಕಾರಕ್ಕೆ ಬರುವುದನ್ನು ತಡೆಯಲು ಪ್ರಯತ್ನ ನಡೆಸಿತಾದರೂ, ಅದು ಸಫಲ ಗೊಳ್ಳಲಿಲ್ಲ. ಭಾರತವೂ ಕಾದು ನೋಡುವ ನೀತಿ ಅನುಸರಿಸಿ ಕೊನೆಗೆ ಪ್ರಚಂಡ ಸರಕಾರದೊಂದಿಗೆ ವ್ಯವಹರಿಸತೊಡಗಿದೆ.



ಪ್ರಚಂಡ

## ಶ್ರೀಲಂಕಾ : ಬಲಕುಂದಿದ ಎಲ್‌ಟಿಟಿಇ

**ಶ್ರೀ**ಲಂಕಾದ ತಮಿಳರ ಪ್ರಶ್ನೆ ಮತ್ತೊಮ್ಮೆ ಭುಗಿಲೆದ್ದಿದೆ. ಕೆಲವು ಐರೋಪ್ಯ ದೇಶಗಳ ಸಹಾನುಭೂತಿ ಹೊಂದಿದ್ದ ಎಲ್‌ಟಿಟಿಇ ಯುದ್ಧಸ್ತಂಭನ ಒಪ್ಪಂದವನ್ನು ಮುರಿದು ದಾಳಿಯಲ್ಲಿ ತೊಡಗಿ, ಭಯೋತ್ಪಾದನಾ ಕೃತ್ಯಗಳನ್ನು ನಡೆಸಿ, ಆ ದೇಶಗಳ



ಶ್ರೀಲಂಕಾ ನಿರಾಶ್ರಿತರು

ಸಹಾನುಭೂತಿಯನ್ನೂ ಕಳೆದುಕೊಂಡಿದೆ. ಶ್ರೀಲಂಕಾದ ಸರಕಾರಿ ಸೇನೆಗಳ ಕಾರ್ಯಾಚರಣೆಯಲ್ಲಿ ತನ್ನ ವಶದಲ್ಲಿದ್ದ ಬಹುಭಾಗ ಪ್ರದೇಶವನ್ನು ಕಳೆದುಕೊಂಡಿರುವ ತಮಿಳು ಉಗ್ರರ ಸಂಘಟನೆ ಎಲ್‌ಟಿಟಿಇ ಇಂದು ಇಕ್ಕಟ್ಟಿಗೆ ಸಿಲುಕಿದೆ. ತೀವ್ರಗೊಂಡ ಮಿಲಿಟರಿ ಕಾರ್ಯಾಚರಣೆಗಳಲ್ಲಿ ನಾಗರಿಕರ ಸಾವುನೋವುಗಳು ಸಂಭವಿಸಿರುವುದು ಕಳವಳ ಉಂಟುಮಾಡಿದೆ. ತಮಿಳುನಾಡಿನ ಜನತೆ, ರಾಜಕೀಯ ಪಕ್ಷಗಳು ಈ ಬೆಳವಣಿಗೆ ಬಗ್ಗೆ ಆತಂಕ ವ್ಯಕ್ತಪಡಿಸಿವೆ. ಭಾರತ ಸರಕಾರ ತಮಿಳು ನಾಗರಿಕರ ರಕ್ಷಣೆಗೆ ಕ್ರಮ ತೆಗೆದುಕೊಳ್ಳಬೇಕೆಂದು ಶ್ರೀಲಂಕಾ ಆಡಳಿತದ ಮೇಲೆ ಒತ್ತಡ ತಂದಿದೆ. ಶ್ರೀಲಂಕಾ ಸರಕಾರ ಎಲ್‌ಟಿಟಿಇ ಮೇಲೆ ಸೈನಿಕ ಕಾರ್ಯಾಚರಣೆಯಲ್ಲಿ ಮೇಲುಗೈ ಸಾಧಿಸಿದೆ. ಎಲ್‌ಟಿಟಿಇ ಹತೋಟಿಯಲ್ಲಿರುವ ಎಲ್ಲ ಪ್ರದೇಶಗಳನ್ನು ವಶಪಡಿಸಿಕೊಂಡು ವಿಜಯ ಸಾಧಿಸಿದರೂ ತಮಿಳರ ಪ್ರಶ್ನೆ ಮಾತ್ರ ಜೀವಂತವಾಗಿರುತ್ತದೆ. ಈ ಸಮಸ್ಯೆಯನ್ನು ಮಿಲಿಟರಿ ಕಾರ್ಯಾಚರಣೆಯಿಂದ ಬಗೆಹರಿಸಲಾಗದು. ಅದನ್ನು ಸಂಧಾನದ ಮೂಲಕ ಬಗೆಹರಿಸಬೇಕಾಗಿದೆ.

## ಭಾರತ : ಕಪ್ಪು ಚುಕ್ಕೆಯ ವರ್ಷ

**ಭಾ**ರತದ ಮಟ್ಟಿಗೆ ಹೇಳುವುದಾದರೆ ೨೦೦೮ ಕಪ್ಪುಕಲೆಯ ವರ್ಷವೆಂದೇ ಹೇಳಬೇಕು. ಹಣದುಬ್ಬರದ ಏರಿಕೆ, ಅಗತ್ಯ ವಸ್ತುಗಳ ಬೆಲೆ ಹೆಚ್ಚಳ, ಅಮೆರಿಕಾದೊಂದಿಗೆ ಪರಮಾಣು ಸಹಕಾರ ಒಪ್ಪಂದಕ್ಕೆ ಸಹಿಹಾಕುವುದರ ಮೂಲಕ ದೇಶದ ಸ್ವಾತಂತ್ರ್ಯ ಸಾರ್ವಭೌಮತ್ವಗಳ ಪರಭಾರೆ, ಆರ್ಥಿಕ ಹಿಂಜರಿತ, ವ್ಯಾಪಕವಾಗಿ ಸಂಭವಿಸಿರುವ ಭಯೋತ್ಪಾದನಾ ಕೃತ್ಯಗಳು ಈ ವರ್ಷದ ಪ್ರಮುಖ ಘಟನೆಗಳು. ಹೆಚ್ಚು ಕಡಿಮೆ ಎರಡು ವರ್ಷಗಳು ಜನತೆ ನಡೆಸಿದ ಪ್ರತಿರೋಧದ ನಡುವೆಯೂ ಕಾಂಗ್ರೆಸ್ ನೇತೃತ್ವದಲ್ಲಿರುವ ಯುಪಿಎ ಸರಕಾರ ಅಮೆರಿಕಾದೊಂದಿಗೆ ಪರಮಾಣು ಸಹಕಾರಕ್ಕೆ ಸಹಿ ಹಾಕಿದ್ದು ನಾಚಿಕೆಗೇಡಿನ ಸಂಗತಿ. ಸರಕಾರಕ್ಕೆ ಹೊರಗಿನಿಂದ ಬೆಂಬಲ ನೀಡುತ್ತಿದ್ದ ಎಡ ಪಕ್ಷಗಳು ಕೊನೆಯವರೆಗೂ ಮನಮೋಹನ ಸಿಂಗ್ ಸರಕಾರ ಪರಮಾಣು ಒಪ್ಪಂದಕ್ಕೆ ಸಹಿ ಹಾಕುವುದನ್ನು ತಡೆಯಲು ಪ್ರಯತ್ನಿಸಿದವು. ಅದು ಫಲಿಸದೇ ಹೋದಾಗ ಸರಕಾರಕ್ಕೆ ನೀಡಿದ್ದ ಬೆಂಬಲವನ್ನು ಅವು ಹಿಂದಕ್ಕೆ ತೆಗೆದುಕೊಂಡವು. ಆದರೆ ಮನಮೋಹನ್ ಸಿಂಗ್ ನೇತೃತ್ವದಲ್ಲಿರುವ ಸರಕಾರ ಅಕ್ರಮದಿಂದ ಅನ್ಯ ಪಕ್ಷಗಳ ಬೆಂಬಲ ಪಡೆದುಕೊಂಡು ನಂಬಿಕೆದ್ರೋಹದ ಕೆಲಸ ಮಾಡಿತು. ಅಮೆರಿಕಾದೊಂದಿಗೆ ನ್ಯೂಕ್ಲಿಯರ್ ಸಹಕಾರ ಒಪ್ಪಂದಕ್ಕೆ ಸಹಿ ಹಾಕಿ ದೇಶದ ಸ್ವತಂತ್ರ ವಿದೇಶಾಂಗ ನೀತಿಗೆ ತಿಲಾಂಜಲಿ ನೀಡಿತು. ಸ್ವತಂತ್ರ ಭಾರತದ ಇತಿಹಾಸದಲ್ಲಿ ಹಿಂದೆಂದೂ ಸಂಭವಿಸದಿದ್ದ ಘಟನೆ ನಡೆದುಹೋಯಿತು. ದೇಶದಲ್ಲಿ ಈವರೆಗೆ ವಿದೇಶಾಂಗ ವ್ಯವಹಾರಗಳ ಕ್ಷೇತ್ರದಲ್ಲಿ ಮಾಡಿದ್ದ ಒಂದುಬಗೆಯ ಒಮ್ಮತದ ಸಮ್ಮತಿ ಇದರಿಂದ ಅಂತ್ಯಗೊಂಡಿತು. ಬಹುತೇಕ ಜನವಿಭಾಗದ ವಿರೋಧದ ನಡುವೆಯೇ ಅಕ್ರಮ ರೀತಿಯಲ್ಲಿ ಸರಕಾರ ಒಪ್ಪಂದಕ್ಕೆ ಸಹಿ ಹಾಕಿ ವಿಶ್ವಾಸ ದ್ರೋಹ ಮಾಡಿದೆ. ಅಮೆರಿಕಾದ ಆರ್ಥಿಕ ಕುಸಿತದ ಬಿಸಿ ಭಾರತಕ್ಕೂ ತಟ್ಟಿದೆ. ಆರ್ಥಿಕ ಬೆಳವಣಿಗೆಯ ದರ ನಿರೀಕ್ಷಿಸಿದ್ದ ಮಟ್ಟಕ್ಕಿಂತ ಕೆಳಗಿಳಿದಿದೆ. ಲಕ್ಷಾಂತರ ಮಂದಿ ನಿರುದ್ಯೋಗಿಗಳ ಸಮೂಹ ಸೇರಿದ್ದಾರೆ. ಭಾರೀ ಆಘಾತವನ್ನು ಅನುಭವಿಸಿರುವ ಸಹಸ್ರಾರು ಸಣ್ಣ ಉದ್ಯಮಗಳು ಮುಚ್ಚಿವೆ. ವಿದೇಶೀ ಬಂಡವಾಳ ಹೂಡಿಕೆದಾರರು ನಡೆಸಿದ ಚೆಲ್ಲಾಟದಿಂದ ಷೇರುಮಾರುಕಟ್ಟೆ ತತ್ತರಿಸಿ ಸಣ್ಣ ಹೂಡಿಕೆದಾರರನ್ನು ದಿವಾಳಿಯಾಗಿಸಿದರು. ಇಷ್ಟಾದರೂ ಮನಮೋಹನ್ ಸಿಂಗ್- ಅಹ್ಲುವಾಲಿಯ-ಚಿದಂಬರಂ ಕೂಟಕ್ಕೆ ವಿದೇಶೀ ಹೂಡಿಕೆದಾರ ವ್ಯಾಮೋಹ ಹೋಗಿಲ್ಲ. ವಿಮಾಕ್ಷೇತ್ರದಲ್ಲಿ ವಿದೇಶೀ ಬಂಡವಾಳ ಹೂಡಿಕೆಯನ್ನು ಶೇ. ೨೬ರಿಂದ ೪೯ಕ್ಕೆ ಹೆಚ್ಚಿಸಿರುವುದು ಅದಕ್ಕೆ ಉದಾಹರಣೆ.

ದೇಶದಲ್ಲಿ ಭಯೋತ್ಪಾದಕರ ಅಟ್ಟಹಾಸ ವ್ಯಾಪಕವಾಗಿ ಹರಡಿರುವುದು ನಾಗರಿಕರಲ್ಲಿ ಆತಂಕ ಮೂಡಿಸಿದೆ. ಜಯಪುರ, ಬೆಂಗಳೂರು, ಅಸ್ಸಾಮ್, ಅಹ್ಮದಾಬಾದ್, ದೆಹಲಿ, ಮುಂಬಯಿ ಮೊದಲಾದ ಕಡೆ ನಡೆದಿರುವ ಸರಣಿಬಾಂಬು ಸ್ಫೋಟ, ಸಂಭವಿಸಿದ ಸಾವುನೋವುಗಳು ಭದ್ರತೆಯ ಬಗ್ಗೆ ಜನತೆಯಲ್ಲಿ ಕಳವಳ ಉಂಟುಮಾಡಿದೆ. ಮುಂಬೈನಲ್ಲಿ ನವೆಂಬರ್ ತಿಂಗಳ ೨೬ರಂದು ಏಕಕಾಲದಲ್ಲಿ ಪಂಚತಾರಾ ಹೋಟಲುಗಳ ಮೇಲೆ ಹಾಗೂ ರೈಲ್ವೆ ನಿಲ್ದಾಣದ ಮೇಲೆ ನಡೆಸಿದ ದಾಳಿ ಸಮರೋಪಾದಿಯಲ್ಲೇ ಇದ್ದುದು ಜನರನ್ನು ಅಧೀರರನ್ನಾಗಿಸಿದೆ. ಭದ್ರತಾಪಡೆಗಳು ದೃಢವಾದ ಕಾರ್ಯಾಚರಣೆ ನಡೆಸಿ ವಿಜಯ ಸಾಧಿಸಿ ಭಯೋತ್ಪಾದಕರನ್ನು ನಿರ್ಮೂಲಗೊಳಿಸಿದ್ದರೂ, ಮುಂದೆ ಸಂಭವಿಸಬಹುದಾದ ದಾಳಿಯ ಬಗ್ಗೆ ಆತಂಕ ಇದ್ದೇ ಇದೆ. ಭದ್ರತಾ ವ್ಯವಸ್ಥೆಯ ಗುಪ್ತಚರ ವ್ಯವಸ್ಥೆಯ ವಿಫಲತೆಯನ್ನು ಸರಕಾರ ಒಪ್ಪಿಕೊಂಡಿದೆ. ದೇಶದ ಗೃಹಸಚಿವರು, ಮಹಾರಾಷ್ಟ್ರದ ಮುಖ್ಯಮಂತ್ರಿಗಳು ಅಧಿಕಾರ ತ್ಯಜಿಸಿದ್ದಾರೆ. ಮನಮೋಹನ ಸಿಂಗ್ ಸರಕಾರ ಭಯೋತ್ಪಾದಕತೆಯ ವಿರುದ್ಧ ಸೂಕ್ತ ಕ್ರಮ ಕೈಗೊಂಡು – ಭದ್ರತಾ ವ್ಯವಸ್ಥೆಯನ್ನು, ಗೂಢಚರ್ಯೆ ಜಾಲವನ್ನು ಚುರುಕುಗೊಳಿಸಲು ಕ್ರಮ ಕೈಗೊಳ್ಳುವುದಾಗಿ ಆಶ್ವಾಸನೆ ನೀಡಿದೆ. ಸಂಭವಿಸಿದ ಘಟನೆಗಳಲ್ಲಿ ಪಾಕಿಸ್ತಾನದ ಐಎಸ್‌ಐ ಕೈವಾಡ ಇರುವುದು ಸ್ಪಷ್ಟವಾಗುತ್ತಿದೆ. ಭಾರತ-ಪಾಕಿಸ್ತಾನಗಳ ನಡುವಣ ಸಂಬಂಧಗಳು ಬಿಗಡಾಯಿಸಿದೆ. ಒತ್ತಡಕ್ಕೆ ಸಿಲುಕಿರುವ ಪಾಕಿಸ್ತಾನ ಸರಕಾರ ಪಾಕಿಸ್ತಾನದಲ್ಲಿ ನೆಲೆಗೊಂಡಿರುವ ಭಯೋತ್ಪಾದನಾ ಸಂಸ್ಥೆಗಳ ವಿರುದ್ಧ ಕ್ರಮ ಕೈಗೊಳ್ಳುವುದಾಗಿ ಪ್ರಕಟಿಸಿದೆ. ಭಾರತ-ಪಾಕಿಸ್ತಾನಗಳ ಸಂಬಂಧ ಸ್ಥಗಿತಗೊಂಡಿದೆ. ತೀರಾ ಕನಿಷ್ಠ ಮಟ್ಟಕ್ಕಿಳಿದಿದೆ. ಅದನ್ನು ಮತ್ತೆ ಸುಧಾರಿಸುವುದು ಪಾಕಿಸ್ತಾನಿ ಆಡಳಿತದ ಕ್ರಮಗಳ ಮೇಲೆ ಅವಲಂಬಿತವಾಗಿದೆ.



ಉಗ್ರರ ದಾಳಿಗೊಳಗಾದ ತಾಜ್‌ಮಹಲ್ ಹೋಟೆಲ್

ವರ್ಷದ ಘಟನೆಗಳನ್ನು ಅವಲೋಕಿಸಿದಾಗ ಸ್ವಾಗತಾರ್ಹವಾದ ಬೆಳವಣಿಗೆಗಳ ಜೊತೆಯಲ್ಲೇ ಕಹಿಯಾದ, ಭಯಂಕರವಾದ ಘಟನೆಗಳೂ ಸಂಭವಿಸಿರುವುದನ್ನು ಗಮನಿಸಬಹುದು. ೨೦೦೯ರಲ್ಲಿ ಗುಣಾತ್ಮಕವಾದ ಬದಲಾವಣೆಗಳನ್ನು ನಿರೀಕ್ಷಿಸಬಹುದಾದ ಸಾಧ್ಯತೆಗಳಿವೆ. ಭಾರತಕ್ಕೆ ಅದು ಚುನಾವಣೆಯ ವರ್ಷವೂ ಆಗಿದೆ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# “ನಮ್ಮ ಜಿಡಿಪಿ ಹೆಚ್ಚಬಹುದು; ಆದರೆ ನಮ್ಮ ಅರ್ಥವ್ಯವಸ್ಥೆ ಪರಾವಲಂಬಿಯಾಗಬಹುದು”



– ಎ. ಎನ್. ಪ್ರಸಾದ್

ಶ್ರೀ ಎ. ಎನ್. ಪ್ರಸಾದ್‌ರವರು ಮೊದಲ ಪೀಳಿಗೆಯ ಭಾರತ ಮೆಚ್ಚಿದ, ಹಿರಿಯ ಅಣುವಿಜ್ಞಾನಿಗಳಲ್ಲಿ ಪ್ರಮುಖರಾದ ಹೆಮ್ಮೆಯ ಕನ್ನಡಿಗ. ತಿಪಟೂರು, ಶಿವಮೊಗ್ಗ ಪಟ್ಟಣಗಳಲ್ಲಿ ಪ್ರಾರಂಭಿಕ ಶಿಕ್ಷಣ. ಬೆಂಗಳೂರಿನ ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಕಾಲೇಜಿನಲ್ಲಿ ಪದವೀಧರರು. ಹಲವಾರು ದಶಕಗಳು ಈ ಕಾಲೇಜಿನಲ್ಲಿ ದುಡಿದು ಕೀರ್ತಿಶೇಷರಾದ ಅಂದಿನ ಪ್ರಾಚಾರ್ಯರಾಗಿದ್ದ ಬಿ. ಆರ್. ನಾರಾಯಣ ಐಯ್ಯಂಗಾರ್‌ರವರು ಇವರನ್ನು ಅಣು ಕ್ಷೇತ್ರಕ್ಕೆ ಸೇರಿಕೊಳ್ಳಲು ಪ್ರೇರೇಪಿಸಿದರು. ಮುಂದೆ ಭಾಭಾರವರ ಚುಂಬಕ ಶಕ್ತಿಗೆ ಆಕರ್ಷಿತರಾದರು, ಸ್ಫೂರ್ತಿಪಡೆದರು. ಅವರ ಪರಮಾಪ್ತರಲ್ಲಿ ಒಬ್ಬರಾಗಿ, ಅವರ ಕನಸುಗಳನ್ನು ತಮ್ಮದಾಗಿಸಿಕೊಂಡು, ಅಪಾರ ಮೆಚ್ಚುಗೆ ಪಡೆದ ಸಾಧನಶೀಲ ವಿಜ್ಞಾನಿ. ಈಗ ಭಾರತ-ಅಮೆರಿಕಾ ನಡುವಣ ಅಣು ಒಪ್ಪಂದವನ್ನು ಸ್ಪಷ್ಟವಾಗಿ ವಿರೋಧಿಸುತ್ತಾ ಬಂದಿದ್ದಾರೆ. ಈ ನಿಲುವು ಅವರ ವೈಯಕ್ತಿಕ ಹಿತಕ್ಕೆ ಬಾಧಕವಿರಬಹುದು. ಆದರೆ ಇವರ ಪ್ರಾಮಾಣಿಕತೆ, ಅಪಾರ ದೇಶಪ್ರೇಮ, ನಾವು ಈ ಕ್ಷೇತ್ರದಲ್ಲಿ ಸಂಪೂರ್ಣ ಸ್ವಾಯತ್ತತೆಯನ್ನು ಸಾಧಿಸಬಲ್ಲೆವು ಎಂಬ ಆತ್ಮವಿಶ್ವಾಸ ವ್ಯವಸ್ಥೆಯ ಅಧಿಕೃತ ನಿಲುವಿಗೆ ವಿರೋಧ ಸೂಚಿಸುವ ಧೈರ್ಯತುಂಬಿದೆ. ಅವರನ್ನು ಈ ದಿಟ್ಟ ನಿಲುವಿಗೆ ಅಭಿನಂದಿಸಿ, ‘ಹೊಸತು’ ಓದುಗರಿಗೆ ಅವರ ಅಭಿಪ್ರಾಯಗಳನ್ನು ತಿಳಿಸುವುದು ಈ ಸಂದರ್ಶನದ ಉದ್ದೇಶ. ನಿರ್ಭಿಡೆಯಿಂದ, ಸೌಮ್ಯವಾಗಿ, ಆದರೂ ಸ್ಪಷ್ಟವಾಗಿ ಮೆಲುದನಿಯಲ್ಲಿ ಪ್ರತಿಕ್ರಿಯಿಸುವ ಇವರ ಸತ್ಯನಿಷ್ಠೆ ಸ್ಪಷ್ಟ. ಇವರಿಗೆ ಹಲವಾರು ರಾಷ್ಟ್ರೀಯ, ಅಂತರರಾಷ್ಟ್ರೀಯ ಪುರಸ್ಕಾರಗಳು ದೊರೆತಿವೆ. ಇರಾಕ್‌ನಲ್ಲಿ ಸಾಮೂಹಿಕ ಮಾರಕಾಸ್ತ್ರ ತನಿಖೆ ನಡೆಸಿದ ವಿಶ್ವಸಂಸ್ಥೆಯ ಕಮಿಷನ್ನಿನ ಮುಖ್ಯಸ್ಥರಾಗಿದ್ದ ಪ್ರಸಾದರಿಗೆ ಬಾಗಲಕೋಟೆಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿಸಲಾಯ್ತು. ವ್ಯವಸ್ಥೆಯೊಡನೆ ರಾಜಿಮಾಡಿಕೊಳ್ಳದ ಇವರು ತನ್ನ ಅಭಿಪ್ರಾಯಗಳನ್ನು ಜನತೆಗೆ ತಲಪಿಸುವುದೂ ನಿರಂತರ ಕರ್ತವ್ಯವೆಂದು ಭಾವಿಸಿದಂತಿದೆ. ಪರಾಕಾಷ್ಠೆಯನ್ನು ತಲಪಿದ ವಿಜ್ಞಾನಿಗಳೂ, ತಂತ್ರಜ್ಞಾನಿಗಳೂ ನಿವೃತ್ತರಾಗುವುದಿಲ್ಲ, ಅವರು ಸಮಾಜದ ಒಳಗಣ್ಣಾಗಿ ತಮ್ಮ ಸೇವೆಯನ್ನು ಮುಂದುರೆಸುತ್ತಲೇ ಹೋಗುತ್ತಾರೆ. ಶ್ರೀ ಎ. ಎನ್. ಪ್ರಸಾದ್ ಅಂಥ ಒಬ್ಬ ಅಪರೂಪದ ವ್ಯಕ್ತಿ.

ಸಂದರ್ಶನದಲ್ಲಿ ಭಾಗವಹಿಸಿದವರು : ಡಾ|| ಜಿ. ರಾಮಕೃಷ್ಣ ಮತ್ತು ಕೆ. ಎಸ್. ಪಾರ್ಥಸಾರಥಿ. ಚಿತ್ರಗಳು : ಕೆ. ಪಿ. ಸ್ವಾಮಿ



**ಹೊಸತು :** ಭಾರತದ ಅಣುಶಕ್ತಿಯ ವಿಕಾಸಕ್ಕೆ ಸಂಬಂಧಪಟ್ಟಂತೆ ಪ್ರಾರಂಭಕಾಲದ ಉದ್ದೇಶಗಳು ಏನೇನು ಎಂಬ ಬಗ್ಗೆ ಸ್ವಲ್ಪ ವಿವರಿಸಬಹುದೆ ?

**ಎ. ಎಸ್. ಪ್ರಸಾದ್ :** ಭಾರತದ ಅಣುಶಕ್ತಿ ಯೋಜನೆಯ ಮೂಲ ನಿರ್ಮಾತೃ ಹೋಮಿ ಜೆ. ಭಾಭಾ ಅವರು. ಈ ಹೊಸ ಶಕ್ತಿಮೂಲದ ದೈತ್ಯ ಶಕ್ತಿಯ ಅನಾವರಣ ಹಿರೋಷಿಮಾದ ಮೇಲೆ ಹಾಕಿದ ಬಾಂಬಿನಿಂದ ನಡೆಯಿತಾದರೂ, ಶಕ್ತಿಯ ನಿರಂತರ ಅಗಾಧ ಅಗತ್ಯವನ್ನು ಪೂರೈಸುವ ಸಂಶೋಧನೆಯಲ್ಲಿ ತೊಡಗಿದ್ದ ವಿಜ್ಞಾನಿಗಳಿಗೆ ಅಣುಶಕ್ತಿಯು ಈ ಅಗತ್ಯವನ್ನು ಪೂರೈಸಬಲ್ಲ ಭವಿಷ್ಯದ ಪ್ರಮುಖ ಮೂಲವಾಗಿ ಗೋಚರಿಸಿತ್ತು. ಕೇವಲ ಶಕ್ತಿಯ ಕ್ಷೇತ್ರವಲ್ಲದೆ ಈ ಮೂಲದ ವಿಜ್ಞಾನ ಕೈಗಾರಿಕೆಯ ರಂಗದಲ್ಲಿ, ಕೃಷಿ ಕ್ಷೇತ್ರದಲ್ಲಿ, ಹಾಗೂ ವೈದ್ಯಕೀಯ ಕ್ಷೇತ್ರದಲ್ಲಿ ಅಪಾರ ಪರಿಣಾಮ ಬೀರಬಲ್ಲುದು ಎಂದು ಮುಂದಾಲೋಚನೆಯಲ್ಲಿ ತೊಡಗಿದರು. ಅಂದರೆ ಅದು 'ದೈತ್ಯ' ಆಗಬೇಕಾಗಿಲ್ಲ, ಮಾನವ ಸ್ನೇಹಿ ತಂತ್ರಜ್ಞಾನ ನೀಡಬಲ್ಲುದು ಎಂದು ನಂಬಿದ್ದ ಆ ಕಾಲದ ಕೆಲವೇ ವಿಜ್ಞಾನಿಗಳಲ್ಲಿ ಭಾಭಾ ಅವರು ನಮಗೆ ಬಹು ಮುಖ್ಯ. ಸ್ವತಂತ್ರ ಭಾರತ ಉದಯಿಸಿದ ತತ್‌ಕ್ಷಣದಲ್ಲೇ ಭಾಭಾ ಅವರು ಈ ನಿಟ್ಟಿನಲ್ಲಿ ಕಾರ್ಯೋನ್ಮುಖರಾದರು. ಅವರ ಗುರಿ ಶಕ್ತಿಯ ಅಗತ್ಯದಲ್ಲಿ ಸಂಪೂರ್ಣ ರಾಷ್ಟ್ರೀಯ ಸ್ವಾವಲಂಬನೆಯನ್ನು ಸಾಧಿಸುವುದು. ಅದಕ್ಕಾಗಿ ಈ ಶಕ್ತಿಮೂಲದ ಸಂಶೋಧನೆಯ ಮೂರೂ ಹಂತಗಳನ್ನು ಗುರುತಿಸಿ,



ಹೋಮಿ ಭಾಭಾ

ದೇಶೀಯ ಮೂಲವಸ್ತುಗಳನ್ನು ತಂತ್ರಜ್ಞಾನವನ್ನು ಬಳಸಿ ಅವುಗಳನ್ನು ನಿರ್ಣಾಯಕವಾಗಿ ಪಳಗಿಸಿ, ಅಭಿವೃದ್ಧಿಪಡಿಸಿಕೊಳ್ಳುವುದೇ ನಮ್ಮ ಆದ್ಯತೆಯಾಯ್ತು. ಇದಕ್ಕೆ ಸಂಪೂರ್ಣ ಸರ್ಕಾರೀ ಬೆಂಬಲವನ್ನು ನೀಡಿದ್ದು ಅಂದಿನ ದ್ರಷ್ಟಾರ ಪ್ರಧಾನಿ ಜವಹರಲಾಲ್ ನೆಹರು ಅವರು.

**ಹೊಸತು :** ಮೂರು ಹಂತವೆಂದರೇನು ? ಇದೇನು ಭಾರತದ ದಾರಿಯ ವೈಶಿಷ್ಟ್ಯವೆ ?

**ಎ. ಎಸ್. ಪ್ರಸಾದ್ :** ಯುರೇನಿಯಂ ಅದಿರನ್ನು ಗಣಿಯಿಂದ ಹೊರತೆಗೆಯುವುದು, ಅದನ್ನು ಯಂತ್ರಗಳ ಮೂಲಕ ಹಾಯಿಸಿ, ಪುಡಿಪುಡಿಯಾಗಿಸಿ, ಪರಿಶುದ್ಧಗೊಳಿಸಿ, ಈ ಹಂತದ ಸಂರಚನಾತ್ಮಕ ಹಲವು ಹಂತಗಳನ್ನು ಹಾಯ್ದು, ರಿಯಾಕ್ಟರುಗಳಲ್ಲಿ ಬಳಸುವ ಇಂಧನದ ಕಟ್ಟಿಗೆಯ ಒಟ್ಟಿಲುಗಳಾಗಿಸುವುದು ಒಂದು ಮುಖ. ಅದೇ ಸಮಯದಲ್ಲಿ ಈ ಒಟ್ಟಿಲುಗಳನ್ನು ಇಂಧನವಾಗಿ ಬಳಸುವ ರಿಯಾಕ್ಟರುಗಳನ್ನು ನಿರ್ಮಿಸಿ, ತನ್ಮೂಲಕ ವಿದ್ಯುಚ್ಛಕ್ತಿಯನ್ನು ಉತ್ಪಾದಿಸುವುದು ಮತ್ತೊಂದು ಮುಖ. ವಿದ್ಯುಚ್ಛಕ್ತಿಯನ್ನು ನೀಡಿದ ಮೇಲೆ ರಿಯಾಕ್ಟರುಗಳಲ್ಲಿ ಶೇಷವಾಗಿ ಅಣುವಿನ ಕಸವೆಂದು ಉಳಿಯುವ (ನ್ಯೂಕ್ಲಿಯರ್ ವೇಸ್ಟ್) ಅದೇ ಇಂಧನದಲ್ಲಿ ಇನ್ನೂ ಉಳಿದಿರುವ ಉಪಯುಕ್ತಾಂಶವನ್ನು ಬಿಡಿಸಿ, ಅದರಲ್ಲಿ ಉತ್ಪತ್ತಿಯಾಗಿರುವ ಪ್ಲುಟೋನಿಯಂ ಅನ್ನು ಬೇರ್ಪಡಿಸುವುದು ಮತ್ತೊಂದು ಹಂತ. ಇಷ್ಟಾದ ಮೇಲೂ ಇನ್ನೂ ಸಾವಿರಾರು ವರ್ಷ ವಿಕಿರಣ ಸೂಸುವ ಕಸವನ್ನು ಜವಾಬ್ದಾರಿಯಿಂದ ಪರಿಸರಕ್ಕೂ ಮಾನವ ಸಮಾಜಕ್ಕೂ ಆಪತ್ತು ಉಂಟು ಮಾಡದಂತೆ ಜತನವಾಗಿ ನಿರ್ವಹಿಸುವುದು, ಭಾರಜಲವೇ ಮುಂತಾದುವುಗಳನ್ನು ತಯಾರಿಸುವ ಮತ್ತು ಅವಕ್ಕೆ ಸಂಬಂಧಪಟ್ಟ ತಂತ್ರಜ್ಞಾನವನ್ನು ದೇಶೀಯವಾಗಿ ಬೆಳೆಸಿ ಕರಗತವಾಗಿಸಿಕೊಳ್ಳುವುದು, ಯುರೇನಿಯಂನ ಗುಣವರ್ಧನ ತಂತ್ರಜ್ಞಾನವನ್ನೂ ಸಾಧಿಸಿಕೊಳ್ಳುವುದು, ಒಟ್ಟಿಗೆ ಯುರೇನಿಯಂ ಅದಿರಿಗೆ ಸಂಬಂಧಪಟ್ಟಂತೆ ''ತೊಟ್ಟಿಲಿಂದ ಚಟ್ಟದವರೆಗೆ'' ಎಂಬಂತೆ ಅದರ


With Best Compliments From

**Mahesh V**

*Priyadarshini Prakashana*

No. 138, 7th 'C' Main, R.P.C. Layout (Hampi Nagar), Vijayanagar II Stage
Bangalore - 560 040, Ph. (Res.) : 080-23302417, Mobile : 9845062549



**SNEHA PRINTERS**

D.T.P., OFFSET, SCREEN PRINTING & LAMINATION

# 114, 4th Cross, B.C.C.Layout, Attiguppe, Vijayanagara II Stage, Bangalore - 560 040
Ph. : 080-3392814, 3302417 (R), Mobile : 9845062549 E-Mail : snehaprints@usa.net

ಜೀವಾವಧಿಯ ಎಲ್ಲಾ ಹಂತಕ್ಕೂ ಅನ್ವಯಿಸುವ ತಂತ್ರಜ್ಞಾನವನ್ನು ದೇಶೀಯವಾಗಿ ಹೊಸದಾಗಿ ನಾವೇ ಕಂಡುಹಿಡಿದು, ಅಭಿವೃದ್ಧಿಪಡಿಸಿ, ನಮ್ಮದಾಗಿಸಿಕೊಳ್ಳುವ ಈ ಸಾಹಸದಲ್ಲಿ ಭಾಭಾ ತಮ್ಮನ್ನು ತೊಡಗಿಸಿಕೊಂಡಿದ್ದಲ್ಲದೆ, ಇದಕ್ಕಾಗಿ ಬೇಕಾದ ವಿಜ್ಞಾನಿಗಳ ಪಡೆಯನ್ನೇ ಸೃಷ್ಟಿಸಿದರು. ಅವರಿಗೆ ತಮ್ಮದೇ ಆವೇಶ ಬರುವಂತೆ ಸ್ಫೂರ್ತಿ ನೀಡಿದರು. ನಮಗಿಂತಲೂ ಆರ್ಥಿಕವಾಗಿ, ತಾಂತ್ರಿಕವಾಗಿ ಮುಂದುವರಿದ ರಾಷ್ಟ್ರಗಳು ಇನ್ನೂ ತೊಡಗಿಸಿಕೊಳ್ಳದಿದ್ದು, ಈ ನವ ಶತಮಾನದ ಹೊಸ ವೈಜ್ಞಾನಿಕ ಆವಿಷ್ಕಾರದಲ್ಲಿ ಅನ್ವೇಷಣೆಯಲ್ಲಿ ಕಳೆದ ಐದು ದಶಕಗಳಲ್ಲಿ ನಾವು ಸಾಧಿಸಿರುವುದು ಮಹತ್ತರವಾಗಿದ್ದು ನಾವು ಒಂದು ರಾಷ್ಟ್ರವಾಗಿ ಹೆಮ್ಮೆ ಪಡುವಂಥದು. ಜಗತ್ತಿನ ಹಲವಾರು ರಾಷ್ಟ್ರಗಳು ಈ ಕುರಿತು ನಮ್ಮ ಬಗ್ಗೆ ಅಸೂಯೆ ತೋರಿಸಿದರೆ ಅದರಲ್ಲಿ ಸೋಜಿಗವಿಲ್ಲ. ಇದು ಭಾರತದ ಪ್ರತ್ಯೇಕ ಹಾದಿ, ಏಕೆಂದರೆ ನಮಗೆ ಥೋರಿಯಂ ಅಪಾರವಾಗಿ ಲಭ್ಯವಿದ್ದು ಬೇರಾರೂ ಹಿಡಿಯದ ಮಾರ್ಗವಾದ ಥೋರಿಯಂ ಸಂಸ್ಕರಣೆಯ ಮಾರ್ಗ ನಮ್ಮದು.

**ಹೊಸತು :** ೧೯೭೪ರಲ್ಲಿ, ೧೯೯೮ರಲ್ಲಿ ನಾವು ಅಣುಪ್ರಯೋಗ ನಡೆಸಿದ್ದು ಸರಿಯೆ ?

**ಎ. ಎನ್. ಪ್ರಸಾದ್ :** ಅರವತ್ತರ ದಶಕದಲ್ಲಿ – ನಾವು ಇನ್ನೂ ೧೯೭೪ರ ಅಣುಪ್ರಯೋಗ ಮಾಡುವುದಕ್ಕೆ ಮುಂಚೆ – ಈ ಕ್ಷೇತ್ರ ಕುರಿತು ಹಲವಾರು ಅಂತರ ರಾಷ್ಟ್ರೀಯ ಚರ್ಚೆ, ವಿಚಾರ ಸಂಕಿರಣಗಳಲ್ಲಿ ಭಾರತಕ್ಕೂ ಆಹ್ವಾನ ಇರುತ್ತಿತ್ತು. ಅಲ್ಲಿ ಅಣುಶಕ್ತಿಯ ಅಪಾರ ಸಾಧ್ಯತೆಗಳನ್ನು ಕುರಿತು ಮುಕ್ತ ಚರ್ಚೆ ನಡೆಯುತ್ತಿತ್ತು. ಅಣು ಬಾಂಬನ್ನು ಭೂಗರ್ಭದಲ್ಲಿ ಸ್ಫೋಟಿಸಿ, ನದಿಗಳ ಪಾತ್ರ, ದಿಕ್ಕನ್ನೇ ನಮಗೆ ಬೇಕಾದಂತೆ ಬದಲಾಯಿಸಿಕೊಳ್ಳಬಾರದೇಕೆ, ಭೂಮಿಯ ಅಂತರಾಳದಲ್ಲಿರುವ ಅಪಾರ ಅನಿಲದ ಶಕ್ತಿಮೂಲವನ್ನು ಹೊರತೆಗೆಯಬಾರದೇಕೆ, ಮುಂತಾದುವು ಅಂಥ ಕೆಲ ವಿಷಯಗಳು. ವೈಜ್ಞಾನಿಕ ಕುತೂಹಲವೆನ್ನಿ, ರಾಜಕೀಯ ಅವಕಾಶವೆನ್ನಿ, ಬೇರೇನಾದರೂ ಎನ್ನಿ, ಅಂಥದೊಂದು ಪ್ರಯತ್ನ ನಮ್ಮ ಮೂಲ ಉದ್ದೇಶಕ್ಕೆ ಸಹಕಾರಿಯಾಗುತ್ತದೆಯಾದ್ದರಿಂದ, ನಾವು ಅಂಥ ಒಂದು ಪ್ರಯೋಗ ಮಾಡುವುದೆಂದು ನಿರ್ಧರಿಸಲಾಯ್ತು. ರಾಜಸ್ತಾನದ ಪೋಕ್ರಾನ್‌ನಲ್ಲಿ ನಾವು ೧೯೭೪ರಲ್ಲಿ ನಡೆಸಿದ ಪ್ರಯೋಗದ ಸಂದರ್ಭ ಇದು. ಆಗ ಈ ಕ್ಷೇತ್ರದ ಜ್ಞಾನದ ಏಕಸ್ವಾಮ್ಯ ಕೆಲವೇ ರಾಷ್ಟ್ರಗಳದ್ದಾಗಿದ್ದ ಕಾಲ. ಇದನ್ನು ನಾವು ಸ್ಫೋಟವೆಂದು (ಎಕ್ಸ್‌ಪ್ಲೋಷನ್) ಎನ್ನಲಿಲ್ಲ. ಇಂದಿರಾ ಗಾಂಧಿಯವರು ''ಇಂಪ್ಲೋಷನ್'' ಎಂಬ ಪದ ಬಳಸಿದರು. ಅಂದರೆ ನಾವು ಬಾಹ್ಯಾಕಾಶ ಪರಿಸರವನ್ನೂ ಕೆಡಿಸಲಿಲ್ಲ. ಅದು ಒಂದು ಶಾಂತಿ ಉದ್ದೇಶದ ಅಣು ಪ್ರಯೋಗ ಎಂದೆವು. ಅಂದರೆ ಮಾನವ ಉಪಯೋಗೀ ತಂತ್ರಜ್ಞಾನದ ಅನ್ವೇಷಣೆಯ ಪ್ರಯತ್ನ ಎಂದೆವು. ನಾವು ಇಂಥದೊಂದು ಪ್ರಯೋಗ ಮಾಡಿ ನಮ್ಮ ವೈಜ್ಞಾನಿಕ ಸಾಮರ್ಥ್ಯವನ್ನು ಹೊರಗೆಡವಿದಂತೆಯೇ, ಮರುಘಳಿಗೆಯಿಂದ, ಇಂಥ ವಿಷಯಕ ಅಂತರರಾಷ್ಟ್ರೀಯ ಸಭೆಗಳನ್ನು ಬಹಿರಂಗವಾಗಿ ನಡೆಸುವುದನ್ನು ನಿಲ್ಲಿಸಿದರು. ಅಮೆರಿಕಾದ ನೇತೃತ್ವದಲ್ಲಿ, ಯುರೇನಿಯಂ ಪೂರೈಸುವ ಇತರ ದೇಶಗಳನ್ನು ಸೇರಿಸಿಕೊಂಡು, ನಮ್ಮ ವಿರುದ್ಧ ಅಂತರರಾಷ್ಟ್ರೀಯ ಅಣುವಾಣಿಜ್ಯದಲ್ಲಿ ಯಾವುದೇ ಪ್ರವೇಶ ದೊರಕದಂತೆ ಗುಂಪು ಕಟ್ಟಿಕೊಂಡುವು. ಅದೇ ನ್ಯೂಕ್ಲಿಯರ್ ಸಪ್ಲೈಯರ್ಸ್ ಗ್ರೂಪ್ (ಎನ್‌ಎಸ್‌ಜಿ). ಈ ಗುಂಪು ನಮಗೆ ಒಂದು ರೀತಿಯ ಬಹಿಷ್ಕಾರ ಹಾಕಿತು. ಅಲ್ಲಿಂದ ನಮಗೆ ಯುರೇನಿಯಂ ಮತ್ತು ತಂತ್ರಜ್ಞಾನವನ್ನು ಆಮದು ಮಾಡಿಕೊಳ್ಳಲು ಅವಕಾಶ ಕೊಡಲಿಲ್ಲ. ನಮ್ಮ ಆಂತರಿಕ ಅಣುವೈಜ್ಞಾನಿಕ ಸಾಮರ್ಥ್ಯವನ್ನು ನಾವೇ ವೃದ್ಧಿಪಡಿಸಿಕೊಳ್ಳುವುದು ಅಲ್ಲಿಂದ ಮುಂದೆ ಅನಿವಾರ್ಯವಾಯ್ತು, ಒಂದು ದೊಡ್ಡ ಸವಾಲೇ ಆಯ್ತು. ಈ ಸವಾಲನ್ನು ನಾವು ಸ್ವೀಕರಿಸಿ ಜಯಶೀಲರಾದೆವು. ೧೯೯೮ರಲ್ಲಿ ನಡೆಸಿದ ಅಣುಪರೀಕ್ಷೆ ರಕ್ಷಣಾ ವಿಷಯಕ್ಕೆ ಸಂಬಂಧಿಸಿತ್ತು. ಸಂಬಲರ್ಹವಾದ, ಇತರರು ಹೆದರಬಹುದಾದ, ಶಸ್ತ್ರಾಸ್ತ್ರ ವ್ಯವಸ್ಥೆಯನ್ನು ನಾವು ರೂಪಿಸಿಕೊಳ್ಳಬೇಕಾಗಿತ್ತು. ಆ ೧೯೯೮ರ ಸಾಧನೆಯೂ ನಮ್ಮ ವಿಜ್ಞಾನಿಗಳು ಹೆಮ್ಮೆಪಡಬೇಕಾದ ಸಾಧನೆಯೆ. ಆದರೆ ಇದರ ಬೆನ್ನಿಗೇ ಎನ್‌ಎಸ್‌ಜಿ ನಮ್ಮ ವಿರುದ್ಧ ಮತ್ತೂ ಕಷ್ಟಕರವಾದ ಬಹಿಷ್ಕಾರಗಳನ್ನು ಹೇರಿಸಿತು. ಶಸ್ತ್ರಾಸ್ತ್ರಗಳ ತಯಾರಿಕೆಗೆ ಉಪಯೋಗಿಸಬಹುದಾದ ಕೆಲವು ವಸ್ತುಗಳು ಮತ್ತು ತಂತ್ರಜ್ಞಾನವನ್ನು ನಿತ್ಯೋಪಯೋಗಿ ಉಪಯುಕ್ತ ಅವಶ್ಯಕ ಸಾಮಗ್ರಿಗಳ ತಯಾರಿಕೆಗೂ ಬಳಸಬಹುದು. ಇದನ್ನೇ ಡ್ಯೂಯಲ್ ಯೂಸ್ ಟೆಕ್ನಾಲಜಿ ಎನ್ನುತ್ತಾರೆ. ಉದಾಹರಣೆಗೆ ರಾಸಾಯನಿಕ ಗೊಬ್ಬರದ ತಂತ್ರಜ್ಞಾನದಲ್ಲಿ ಮೂಲದ್ರವ್ಯದಲ್ಲಿ, ಸಿಡಿಮದ್ದನ್ನು ಮಾಡಬಹುದು. ನಾವು ಯುದ್ಧ ಸಾಮಗ್ರಿಗೆ ಬಳಸುತ್ತೇವೆಂಬ ಅನುಮಾನದಿಂದ ಅಂಥ ವಸ್ತುಗಳನ್ನೂ ನಮಗೆ ನೀಡೆವು ಎಂಬುದು ಈ ಬಹಿಷ್ಕಾರದ ಅರ್ಥ. ಇಂಥ ಅನ್ಯಾಯಗಳನ್ನೆಲ್ಲಾ ನಾವು ಎದುರಿಸಿದ್ದೇವೆ ಇಲ್ಲಿಯವರೆಗೆ. **ಇದು ನಮ್ಮ ದೇಶೀ ಸಾಧನೆ ಎಂಬುದನ್ನು ನಮ್ಮ ಜನತೆಗೆ ತಿಳಿಸಬೇಕು.**

**ಹೊಸತು :** ಮೂರೂ ಹಂತದ ಅಭಿವೃದ್ಧಿಯ ತಾಂತ್ರಿಕತೆಯನ್ನು ವಿಜ್ಞಾನಿಗಳಲ್ಲದವರಿಗೆ ಒಂದಿಷ್ಟು ವಿವರಿಸಬಹುದೆ ?

**ಎ. ಎನ್. ಪ್ರಸಾದ್ :** ಮೂರು ಹಂತದ ಅಣುಶಕ್ತಿ ಅಭಿವೃದ್ಧಿ ಎಂದರೆ ಏನು ಎಂದು ಸ್ಥೂಲವಾಗಿ ತಿಳಿಯುವುದು ಮುಖ್ಯ. ಪ್ರಕೃತಿಯಲ್ಲಿ ಯುರೇನಿಯಂ ಮತ್ತು ಥೋರಿಯಂ ಎರಡೂ ಸ್ವಾಭಾವಿಕರೂಪದಲ್ಲಿ ದೊರೆಯುತ್ತವೆ.



*ಚಿತ್ರದಲ್ಲಿರುವವರು : ಡಾ|| ಎ. ಎನ್. ಪ್ರಸಾದ್, ಡಾ|| ಜಿ. ಆರ್., ಶ್ರೀ ಕೆ. ಎಸ್. ಪಾರ್ಥಸಾರಥಿ*

ಅಣುಕ್ಷೇತ್ರಕ್ಕೆ ಇವೆರಡೂ ಮೂಲ ಸಾಮಗ್ರಿಗಳು. ಐದು ದಶಕಗಳ ಹಿಂದೆ ನಮ್ಮ ಆಂತರಿಕ ಸರ್ವೇಕ್ಷಣದಿಂದ ನಮ್ಮಲ್ಲಿ ಸ್ವಲ್ಪ ಪ್ರಮಾಣದಲ್ಲಿ ಯುರೇನಿಯಂ ದೊರೆಯುತ್ತದೆ, ಇದು ಪೂರ್ವೋತ್ತರ ಪ್ರದೇಶದಲ್ಲಿ ಎಂದು ತಿಳಿಯಿತು. ಥೋರಿಯಂ, ವಿಶ್ವದಲ್ಲಿಯೇ ಗಣನೀಯ ಪ್ರಮಾಣದಲ್ಲಿ, ಮುಖ್ಯವಾಗಿ ಕೇರಳ ಮತ್ತು ಒರಿಸ್ಸಾದ ಸಮುದ್ರ ತಟದ ಮಾನೋಸೈಟ್ ಮರಳಿನಲ್ಲಿ ದೊರೆಯುತ್ತದೆ. ಯುರೇನಿಯಂನಲ್ಲಿ ಅಲ್ಪಪ್ರಮಾಣದಲ್ಲಿ ವಿದಳನಶೀಲ (ಫಿಸೈಲ್) ವಸ್ತುವಿದ್ದರೂ ಸಾಕು, ಅದನ್ನು ಪರಿಶುದ್ಧಗೊಳಿಸಿ, ಅಣುಘಟಕಗಳಲ್ಲಿ ಇಂಧನವಾಗಿ ಬಳಸಬಹುದು. ಫಿಸೈಲ್ ವಸ್ತುವೇ ಇಲ್ಲದ ಪ್ರಕೃತಿಯಲ್ಲಿ ಸ್ವಾಭಾವಿಕವಾಗಿ ದೊರೆಯುವ ಥೋರಿಯಂಅನ್ನು ಮುಂದುವರಿದ ಹಂತದ ರಿಯಾಕ್ಟರ್‌ಗಳಲ್ಲಿ ಸಂಸ್ಕರಿಸಿದರೆ ಫಿಸೈಲ್ ಗುಣ ಉಳ್ಳ ಯುರೇನಿಯಂ ಐಸೋಟೋಪ್ ಪಡೆಯಬಹುದು. ಈ ಐಸೋಟೋಪ್ ಅಣು ಘಟಕಕ್ಕೆ ಇಂಧನವಾಗಬಹುದು. ಭಾಭಾ ಈ ಹಂತಗಳನ್ನು ಹಾಯ್ದು ನಮಗೆ ಬೇಕಾದ ಇಂಧನದ ಸ್ವಾವಲಂಬತ್ವವನ್ನು ನಮ್ಮಲ್ಲಿ ಲಭ್ಯವಿರುವ ಥೋರಿಯಂ ಬಳಸಿ, ಪಡೆದುಕೊಳ್ಳಬೇಕೆಂಬ ದೂರದೃಷ್ಟಿಯಿಂದ, ಮೂರುಹಂತದ ಬೆಳವಣಿಗೆಯನ್ನು ನಮ್ಮ ಮುಂದಿನ ಗುರಿಯಾಗಿ ಇಟ್ಟರು. ಹೀಗೆ ಶಕ್ತಿಯ ಕ್ಷೇತ್ರದಲ್ಲಿ ಸ್ವಾವಲಂಬಿಯಾಗಬೇಕೆಂಬ ಮಹತ್ವಾಕಾಂಕ್ಷೆಯನ್ನು, ಥೋರಿಯಂ ಸಂಸ್ಕರಣೆಯ ಮೂಲಕ ಸಾಧಿಸಿಕೊಳ್ಳುವುದು ಸಾಧ್ಯವೆಂಬುದನ್ನು ಗುರುತಿಸಿದ್ದು ಅವರ ಹೆಗ್ಗಳಿಕೆ. ನಮ್ಮಲ್ಲಿ ಸದ್ಯ ಆಂತರಿಕವಾಗಿ ಲಭ್ಯವಾಗಿರುವ ಯುರೇನಿಯಂನಿಂದ ಸುಮಾರು ೧೦೦೦೦ ಮೆಗಾವಾಟ್‌ಗಳಷ್ಟು ವಿದ್ಯುತ್ ಉತ್ಪಾದನೆ ಮಾಡಿಕೊಳ್ಳುವುದು ಸಾಧ್ಯ ಅಷ್ಟೆ. ಆದರೆ ಥೋರಿಯಂ ತಂತ್ರಜ್ಞಾನದಿಂದ, ನಮ್ಮದೇ ನಿಕ್ಷೇಪ ಬಳಸಿ, ಸುಮಾರು ೩,೫೦,೦೦೦ ಮೆಗಾವಾಟ್ ವಿದ್ಯುತ್ ಪಡೆಯುವ ಸಾಮರ್ಥ್ಯವಿದೆ ನಮ್ಮಲ್ಲಿ. ಹೀಗಾಗಿ ನಮ್ಮ ಎಲ್ಲಾ ಪ್ರಯತ್ನವೂ ಇದರ ಸಾಧನೆಗೆ ಇಲ್ಲಿಯವರೆಗೂ ಕೇಂದ್ರೀಕೃತವಾಗಿದೆ.

ಒತ್ತಡಕ್ಕೆ ಒಳಪಡಿಸಿದ ಭಾರಜಲ (ಪ್ರೆಷರೈಸ್ಡ್ ಹೆವಿ ವಾಟರ್)ವನ್ನು ಬಳಸುವ ರಿಯಾಕ್ಟರುಗಳ ತಂತ್ರಜ್ಞಾನವನ್ನು ಮೊದಲನೆಯ ಹಂತದಲ್ಲಿ ಬೆಳೆಸಿದ್ದೇವೆ. ನಮ್ಮಲ್ಲಿರುವ ಯುರೇನಿಯಂ ಬಳಸಿ ವಿನ್ಯಾಸಮಾಡಿರುವ ಈ ರಿಯಾಕ್ಟರುಗಳಲ್ಲಿ ಸಾಕಷ್ಟು ಪ್ಲುಟೋನಿಯಂ ಸೃಷ್ಟಿಯಾಗುತ್ತದೆ. ಥೋರಿಯಂ ಬಳಸುವ ತಂತ್ರಜ್ಞಾನದಲ್ಲಿ ಪ್ಲುಟೋನಿಯಂ ಬೇಕು. ಮೊದಲನೆಯ ಹಂತ ಹೀಗೆ ಎರಡನೆಯ ಹಂತಕ್ಕೆ, ಪ್ಲುಟೋನಿಯಂ ನೀಡಿ, ನೆರವಾಗುತ್ತದೆ. ಈಗಷ್ಟೆ ಆಗಿರುವ ಅಣು

ಒಪ್ಪಂದದಲ್ಲೂ ಭಾರಜಲ ಮತ್ತು ಒಮ್ಮೆ ಉಪಯೋಗಿಸಿದ ಇಂಧನ ಉಳಿಕೆಯ ಮರು ಸಂಸ್ಕರಣೆಯನ್ನೂ ಸೂಕ್ಷ್ಮತಂತ್ರಜ್ಞಾನವೆಂದು (ಅಂದರೆ ಮಿಲಿಟರಿಗೆ ಬಳಸಬಹುದು ಎಂದು ಅರ್ಥ) ಅಮೆರಿಕಾ ಹೇಳುತ್ತದೆ. ಇದಕ್ಕೆ ಕಾರಣವೆಂದರೆ ರಿಯಾಕ್ಟರಿನಲ್ಲಿ ಭಾರಜಲ ಟ್ರೈಟಿಯಂ ಎಂಬ ಮತ್ತೊಂದು ವಸ್ತುವನ್ನು ಸೃಷ್ಟಿಸುತ್ತದೆ. ಇದನ್ನು ಅಣ್ವಸ್ತ್ರಗಳಲ್ಲಿ ಪ್ರಾರಂಭಿಕ ಸಿಡಿಮದ್ದಿನಂತೆ ಬಳಸಬಹುದು. ಹಾಗೆಯೇ ಅಲ್ಲೇ ಉತ್ಪತ್ತಿಯಾಗುವ ಪ್ಲುಟೋನಿಯಂಅನ್ನು ನಾವು ಯೋಜಿಸಿರುವ ಎರಡನೆಯ ಹಂತಕ್ಕೇ ಅಲ್ಲದೆ, ಶಸ್ತ್ರಾಸ್ತ್ರಗಳ ತಯಾರಿಕೆಯಲ್ಲೂ ಬಳಸಬಹುದು. ಆಂತರಿಕವಾಗಿ ನಾವು ಯಾರ ಸಹಾಯವೂ ಇಲ್ಲದೆ ಮೊದಲನೆಯ ಹಂತವನ್ನು ಸಂಪೂರ್ಣವಾಗಿ ಬೆಳೆಸಿಕೊಂಡಿದ್ದೇವೆ.

ಮೊದಲನೆಯ ಹಂತದ ವೈಜ್ಞಾನಿಕ ಸಂಶೋಧನೆಯಲ್ಲೇ ಥೋರಿಯಂ ಬಳಕೆಗೂ ಬೇಕಾದ ಸಂಶೋಧನೆ ಅಂತರ್ಗತವಾಗಿದೆ. ಸಮುದ್ರ ತಟದ ಮಾನೊಸೈಟ್ ಮರಳಿನಿಂದ ಥೋರಿಯಂ ಅನ್ನು ಬೇರ್ಪಡಿಸಬೇಕು. ಅದನ್ನು ಅಣುವೈಜ್ಞಾನಿಕ ಮಟ್ಟಕ್ಕೆ ಸಂಸ್ಕರಿಸಬೇಕು. ನಂತರ ಅದನ್ನು ಇಂಧನವನ್ನಾಗಿಸಬೇಕು. ಸಂಶೋಧನೆಯ ಹಾಗೂ ವಿದ್ಯುತ್ ಉತ್ಪಾದಕ ಘಟಕವಾಗುವ ರಿಯಾಕ್ಟರುಗಳಲ್ಲಿ ಥೋರಿಯಂಅನ್ನು ಅಣು ವಿಕಿರಣಕ್ಕೆ ಒಳಪಡಿಸಿದರೆ ಅದು ಒಂದಿಷ್ಟು ಫಿಸೈಲ್ ಯುರೇನಿಯಂ ನೀಡುತ್ತದೆ. ಇದನ್ನು ಮರು ಸಂಸ್ಕರಣೆಗೆ ಒಳಪಡಿಸಿದಾಗ, ಇಂಧನವಾಗಬಲ್ಲ ಗುಣಮಟ್ಟದ ಫಿಸೈಲ್ ಯುರೇನಿಯಂ ಆಗಿಬಿಡುತ್ತದೆ. ನಾವು ಈಗ ಒಂದು ಪ್ರಯೋಗಾತ್ಮಕ ಸಣ್ಣ ರಿಯಾಕ್ಟರಿನಲ್ಲಿ ಹೀಗೆ ಥೋರಿಯಂ ಸಂಸ್ಕರಣೆಯಿಂದ ದೊರೆತ ಯುರೇನಿಯಂ ಬಳಸಲು ಸಫಲರಾಗಿದ್ದೇವೆ. ನಮ್ಮ ಈ ಮಟ್ಟದ ತಾಂತ್ರಿಕ ಕೌಶಲ್ಯವನ್ನು ಬೇರಾವ ರಾಷ್ಟ್ರವೂ ಸಾಧಿಸಿಲ್ಲ.

ಎರಡನೆಯ ಹಂತದಲ್ಲಿ ಬಳಸುವ ರಿಯಾಕ್ಟರು ಬೇರೆಯೇ ತರಹದ್ದು. ಇದಕ್ಕೆ ಫಾಸ್ಟ್ ಬ್ರೀಡರ್ ರಿಯಾಕ್ಟರ್ ಎನ್ನುತ್ತೇವೆ. ಹಿಂದೆ ಹೇಳಿದಂತೆ ಮರು ಸಂಸ್ಕರಣಾ ಮಾರ್ಗದಲ್ಲಿ ದೊರೆತ ಪ್ಲುಟೋನಿಯಂಅನ್ನು, ಒಮ್ಮೆ ಬಳಕೆಯಾದ ಕುಗ್ಗಿದ ಸಾಮರ್ಥ್ಯದ ಯುರೇನಿಯಂ ಜತೆ ಮಿಶ್ರಣಮಾಡಿ ಅದನ್ನು ಫಾಸ್ಟ್ ಬ್ರೀಡರ್ ರಿಯಾಕ್ಟರುಗಳಲ್ಲಿ ಇಂಧನವಾಗಿ ಬಳಸುತ್ತೇವೆ. ಈ ಪ್ರಕ್ರಿಯೆಯಲ್ಲಿ ಪ್ರಾರಂಭದ ಘಟ್ಟದಲ್ಲಿ ಒಂದು ಕಡೆ ಪ್ಲುಟೋನಿಯಂ ಭಸ್ಮವಾಗುತ್ತಿರುತ್ತದೆ; ಆದರೆ ಮತ್ತೊಂದು ಕಡೆ ಕುಗ್ಗಿದ ಸಾಮರ್ಥ್ಯದ ಯುರೇನಿಯಂ ಪ್ಲುಟೋನಿಯಂ ಆಗಿ ಪರಿವರ್ತನೆಯಾಗುತ್ತಿರುತ್ತದೆ. ಒಟ್ಟಾರೆ ಭಸ್ಮವಾದುದಕ್ಕಿಂತ ಹೆಚ್ಚು ಪ್ಲುಟೋನಿಯಂ ಉತ್ಪತ್ತಿಯಾಗುತ್ತಿರುತ್ತದೆ. ಅದಕ್ಕೆ ಈ ಕ್ರಿಯೆಯನ್ನು ಬ್ರೀಡರ್ (ಜನಕ) ಎಂದು ಕರೆಯುವುದು. ಈಗಾಗಲೇ ಒಮ್ಮೆ ಬಳಸಿದ ಕುಗ್ಗಿದ ಸಾಮರ್ಥ್ಯದ ಯುರೇನಿಯಂನಿಂದ ಬೇರ್ಪಡಿಸಿ ಪಡೆದ ಪ್ಲುಟೋನಿಯಂ, ಎರಡನೆಯ ಹಂತದಲ್ಲಿ ಮುಂದಿನ ರಿಯಾಕ್ಟರುಗಳಿಗೆ ಇಂಧನವಾಗಿ ಬಳಕೆಯಾಗುತ್ತಾ ಹೋಗುತ್ತದೆ. ಅಂದರೆ ಇವು ಸ್ವಾವಲಂಬಿಯಾಗಿ ಮುಂದುವರಿಯುತ್ತಲೇ ಹೋಗುತ್ತವೆ. ಥೋರಿಯಂನಿಂದ ಯುರೇನಿಯಂಅನ್ನು ಬಿಡಿಸಿ ತೆಗೆದಾಗ ಅದು ಮೂರನೆಯ ಹಂತಕ್ಕೆ ಬಳಸುವ ಇಂಧನವಾಗುತ್ತದೆ.

ಈ ತಂತ್ರಜ್ಞಾನವನ್ನು ಪಳಗಿಸಿಕೊಂಡು ಪರಿಣತಿ ಪಡೆಯುವುದಕ್ಕಾಗಿ, ೪೦ ಮೆಗಾವಾಟ್ ಸಾಮರ್ಥ್ಯದ ಫಾಸ್ಟ್‌ಬ್ರೀಡರ್ ರಿಯಾಕ್ಟರನ್ನು ಪ್ರಯೋಗಾತ್ಮಕವಾಗಿ ೨೦ ವರ್ಷಗಳಷ್ಟು ಹಿಂದೆಯೇ ನಿರ್ಮಾಣ ಮಾಡಿಕೊಂಡೆವು. ಕಲ್ಪಾಕಂನಲ್ಲಿರುವ ಇಂದಿರಾ ಗಾಂಧಿ ಅಣು ಸಂಶೋಧನಾ ಕೇಂದ್ರ ಫಾಸ್ಟ್ ಬ್ರೀಡರ್ ತಂತ್ರಜ್ಞಾನದ ಅಭ್ಯಾಸಕ್ಕೆ ಮೀಸಲು. ಅಲ್ಲಿ ಈಗ ಇದೇ ಮಾದರಿಯ ೫೦೦ ಮೆಗಾವಾಟ್ ಸಾಮರ್ಥ್ಯದ ರಿಯಾಕ್ಟರನ್ನು ನಿರ್ಮಾಣ ಮಾಡುತ್ತಿದ್ದೇವೆ. ಇಲ್ಲಿ ಅಣುವಿಕಿರಣದ ಪ್ರಖರತೆ ತೀರ ಹೆಚ್ಚು. ಹೀಗಾಗಿ ಮನುಷ್ಯರು ಹತ್ತಿರ ಇರಲಾಗದು. ಅದಕ್ಕಾಗಿ ರೋಬೋಗಳನ್ನು ಬಳಸುತ್ತಿದ್ದೇವೆ. ಈ ಪ್ರಕ್ರಿಯೆಯಲ್ಲಿ ಬರುವ ಇಂಧನ ತಯಾರಿ, ಉಳಿಕೆ ಇಂಧನದ ಮರು ಸಂಸ್ಕರಣ, ವಿಕಿರಣಶೀಲ ಉಳಿಕೆ ಅಣುವಸ್ತುಗಳನ್ನು ಸುಕ್ಷೇಮವಾಗಿ ನಿರ್ವಹಿಸುವ ಬಗೆ, ಹೀಗೆ ಹಲವಾರು ಅತಿ ಸೂಕ್ಷ್ಮವೂ ಜಟಿಲವೂ ಆದ ಸಮಸ್ಯೆಗಳು ಉಂಟಾಗುತ್ತವೆ. ಇವುಗಳನ್ನೆಲ್ಲಾ ಅಭ್ಯಸಿಸಿ, ಕೈವಶ ಮಾಡಿಕೊಳ್ಳುವ ಪ್ರಯತ್ನದಲ್ಲಿ ತಮ್ಮನ್ನು ತಾವು ಮುಡಿಪಾಗಿಟ್ಟ ವಿಜ್ಞಾನಿಗಳು, ತಂತ್ರಜ್ಞರು, ಅಹೋರಾತ್ರಿ ಕಟಿಬದ್ಧರಾಗಿ ದುಡಿಯುತ್ತಿದ್ದಾರೆ.

ಥೋರಿಯಂಅನ್ನು ಹೆಚ್ಚು ಪ್ರಮಾಣದಲ್ಲಿ ಬಳಸುವ ಉದ್ದೇಶದಿಂದ ಪ್ರಯೋಗಾತ್ಮಕವಾಗಿ 'ಅಡ್ವಾನ್ಸ್‌ಡ್ ಹೆವಿ ವಾಟರ್ ರಿಯಾಕ್ಟರ್' ಎಂಬ ಹೊಸ ಮಾದರಿಯನ್ನು ಅನ್ವೇಷಣ ಮಾಡಲಾಗುತ್ತಿದೆ. ಇದಕ್ಕಾಗಿ ೩೦೦ ಮೆಗಾವಾಟ್ ಸಾಮರ್ಥ್ಯದ ಈ ಮಾದರಿಯ ರಿಯಾಕ್ಟರನ್ನು ನಿರ್ಮಿಸುವ ಕೆಲಸವೂ ಸಾಗಿದೆ. ಇದರಲ್ಲೂ ಪ್ಲುಟೋನಿಯಂ ಮತ್ತು ಥೋರಿಯಂಅನ್ನು ಬಳಸಲಾಗುತ್ತಿದೆ. (ಪ್ಲುಟೋನಿಯಂ ಪ್ರಕೃತಿಯಲ್ಲಿ ಸ್ವಾಭಾವಿಕವಾಗಿ ದೊರೆಯುವುದಿಲ್ಲ). ದೇಶೀ ತಾಂತ್ರಿಕ ಸಾಮರ್ಥ್ಯ ಮತ್ತು ಲಭ್ಯ ಮೂಲವಸ್ತುಗಳನ್ನು ಬಳಸಿಕೊಳ್ಳುವ ಈ ಮಹಾನ್ ಪ್ರಯತ್ನದಲ್ಲಿ ಈ ಮೂರನೆಯ ಹಂತದ ಸಾಧನೆ ಶಕ್ತಿಯ ಸ್ವಾವಲಂಬನೆಯನ್ನು ಸಾಧಿಸುವಲ್ಲಿ ಹಿರಿಯ ಹೆಜ್ಜೆ. ಇದನ್ನು ತ್ವರಿತವಾಗಿ ಸಾಧಿಸುವ ಹಂಬಲ ನಮ್ಮದು. **ಆದರೆ ಈ ಹೊಸ ಒಪ್ಪಂದದಿಂದ ಇದು ಕೇವಲ ಹಂಬಲವಾಗಿಯೇ ಉಳಿಯುವ ಆತಂಕ ಉಂಟಾಗಿದೆ. ಈ ಸಾಧನೆಯನ್ನು ಮಾಡಲು ನಮ್ಮ ವಿಜ್ಞಾನಿಗಳಿಗೆ ಸ್ವಾತಂತ್ರ್ಯ ನೀಡಿ, ನೆರವು ನೀಡಿ. ಆಗ ಜಗತ್ತಿನಲ್ಲಿ ನಾವು ಈ ಕ್ಷೇತ್ರದಲ್ಲಿ ಎಲ್ಲರಿಗಿಂತ ಮುಂದು, ಏಕೈಕವೆಂಬ ಹಿರಿಮೆ ನಮ್ಮದಾಗುತ್ತದೆ. ಇದಕ್ಕೆ ಒಂದಿಷ್ಟು ಆತ್ಮವಿಶ್ವಾಸ, ಸಹನೆ, ಪ್ರಯತ್ನಶೀಲತೆ ಬೇಕು ಅಷ್ಟೆ.**

**ಹೊಸತು** : ಪ್ರಸ್ತುತ ಅಣು ಒಪ್ಪಂದವನ್ನು ನೀವು ಏಕೆ ಇಷ್ಟೊಂದು ವಿರೋಧಿಸುತ್ತೀರಾ ? ಇದು ಸರಿ ಎನ್ನುವವರೆಲ್ಲ ಹುಂಬರೆ ?

**ಎ. ಎನ್. ಪ್ರಸಾದ್** : ಈ ಒಪ್ಪಂದ ಸರಿಯಾದುದು ಎಂದು ಹೇಳುವವರು ನೀಡುವ ಸಮರ್ಥನೆ ಎಂದರೆ (ಅ) ಇನ್ನು ಮುಂದೆ ಭಾರತವನ್ನು ಅಮೆರಿಕಾದಂತೆ ಇತರ ರಾಷ್ಟ್ರಗಳೊಡನೆ ಅಣುವಿಜ್ಞಾನದಲ್ಲಿ ಸಮಾನವೆಂದು ಪರಿಗಣಿಸಲಾಗುತ್ತದೆ; (ಆ) ಇದು ಸಂಪೂರ್ಣ ಅಣುಶಕ್ತಿ ಸಹಕಾರವನ್ನು ನಮಗೆ ತಂದುಕೊಡುತ್ತದೆ; (ಇ) ನಾವು ಈಗ ಜಾಗತಿಕವಾಗಿ ಅನುಭವಿಸುತ್ತಿರುವ ಅಣುಶಕ್ತಿ ಸಂಬಂಧದ ಬಹಿಷ್ಕಾರ ಹೋಗುತ್ತದೆ, ಎಲ್ಲರೊಡನೆ ಸಂಬಂಧ ಉಂಟಾಗುತ್ತದೆ; (ಈ) ಯುರೇನಿಯಂ ಕೊರತೆ ನೀಗುತ್ತದೆ. ರಿಯಾಕ್ಟರುಗಳ ಆಜೀವನ ಪರ್ಯಂತ ಅಗತ್ಯವಾದಷ್ಟು ಇಂಧನವನ್ನು ಶೇಖರಿಸಿಟ್ಟುಕೊಳ್ಳುವುದು ಸಾಧ್ಯವಾಗುತ್ತದೆ; (ಉ) ಸಾಕಷ್ಟು ಪ್ರಮಾಣದಲ್ಲಿ ವಿದ್ಯುತ್ ಉತ್ಪತ್ತಿಯಾಗುತ್ತದೆ; (ಊ) ಬಳಸಿದ ಮೇಲೆ ಬರುವ ಉಳಿಕೆಯ ಪುನಸ್ಸಂಸ್ಕರಣೆ ಮಾಡಿಕೊಳ್ಳಲು ಯಾವ ಅಡ್ಡಿಯೂ ಇಲ್ಲ; (ಎ) ನಮಗೆ ಎಂದಾದರೂ ಯುರೇನಿಯಂ ಪೂರೈಕೆಯನ್ನು ಯಾವುದೇ ಕಾರಣಕ್ಕೆ ಪೂರೈಸುವವರು ನಿಲ್ಲಿಸಿದಾಗ, ನಾವು ಪರಿಸ್ಥಿತಿಯನ್ನು ಸರಿಪಡಿಸಿಕೊಳ್ಳುವಂತೆ ತಿದ್ದಿಕೊಳ್ಳುವ ಪ್ರಕ್ರಿಯೆಗೆ ಅವಕಾಶವಿದೆ; (ಏ) ಅತ್ಯಾಧುನಿಕ ತಂತ್ರಜ್ಞಾನ ದೊರೆಯುತ್ತದೆ; (ಐ) ನಮ್ಮ ಆಂತರಿಕ ಮೂರು ಹಂತದ ಕಾರ್ಯಕ್ರಮಕ್ಕೆ ಯಾವುದೇ ಅಡ್ಡಿ ಇಲ್ಲ; (ಒ) ಯಾವುದೇ ಷರತ್ತುಗಳಿಲ್ಲದ, ಸ್ಪಷ್ಟವಾದ, ಯುರೇನಿಯಂ ಪೂರೈಕೆ ಕುರಿತ ಶುದ್ಧವಾದ ವಿನಾಯಿತಿಯನ್ನು ಎನ್‌ಎಸ್‌ಜಿ ನೀಡುತ್ತದೆ; (ಓ) ಈ ಒಪ್ಪಂದ ಕೇವಲ ೧.೨.೩ ಒಪ್ಪಂದಕ್ಕೆ ಮಾತ್ರ ಬಾಧ್ಯವಾದುದು, ಹೈಡ್ ಆಕ್ಟ್‌ಗೆ ಅಲ್ಲ; (ಔ) ನಾವು ರಕ್ಷಣಾ ವಿಷಯಕವಾಗಿ ಇಟ್ಟುಕೊಂಡಿರುವ ಕಾರ್ಯಕ್ರಮಕ್ಕೆ ಮತ್ತು ಕಾನೂನುಬದ್ಧವಾದ


**M. I. PUBLICATIONS**

First Floor, Maruti Tower, 20/4, Sanjay Place, AGRA - 282 002

Useful books for college students, ICSE, CBSE, Higher Secondary, +2 and competitive examinations

Prof. R. P. Chaturvedi

HINDI-HINDI-ENGLISH DICTIONARY
WITH PRONUNCIATION IN ENGLISH

**HINDI-ENGLISH DICTIONARY**
**ENGLISH-ENGLISH DICTIONARY** (MINI)

Unparalleled Books by Prof. M. P.Bhatia
*For I.A.S., P.C.S., College Students and all other higher competitive examinations*

**PRACTICAL ENGLISH GRAMMAR**

**A Handbook of APPLIED GRAMMAR & COMPOSITION**

ಅಣುಪರೀಕ್ಷೆಯ ಹಕ್ಕು ಇವೆರಡಕ್ಕೂ ಈ ಒಪ್ಪಂದದಿಂದ ಯಾವ ಅಡ್ಡಿಯೂ ಇಲ್ಲ.

ಆದರೆ ಈ ಒಂದೊಂದೂ ಅಂಶವನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಈ ಸಮರ್ಥನೆಗಳು ಎಷ್ಟು ಪೊಳ್ಳಾದುವು ಎಂದು ತಿಳಿಯುತ್ತದೆ.

ಮೊದಲನೆಯದಾಗಿ ಜುಲೈ ೧೮, ೨೦೦೮ರಂದು ನೀಡಿದ ಅಮೆರಿಕಾ ಭಾರತದ ಜಂಟಿ ಹೇಳಿಕೆಯಂತೆ ಭಾರತವನ್ನು ಅಮೆರಿಕಾದಂತೆ ಸಮಾನವಾದ ಅಣುಶಸ್ತ್ರ ಪಡೆದ, ಜವಾಬ್ದಾರಿಯುತ ರಾಷ್ಟ್ರವೆಂದು ಪರಿಗಣಿಸ ಲಾಗುತ್ತದೆ ಎಂಬುದು. ಆದರೆ ಒಪ್ಪಂದದಲ್ಲಿ ಎಲ್ಲೂ ಈ ಅರ್ಥವನ್ನು ಸ್ಪಷ್ಟವಾಗಿ ಗುರುತಿಸಲೇ ಆಗದು. ಸರ್ಕಾರ ಈ ಕುರಿತು ವಿವರಣೆ ನೀಡಬೇಕು. ಇಲ್ಲಿಯವರೆಗೆ ಅದು ಸುತ್ತಿಬಳಸಿ ಮಾತನಾಡುತ್ತಿದೆ ಅಷ್ಟೆ.



ಯುರೇನಿಯಂ ಸಾಮರ್ಥ್ಯ ಹೆಚ್ಚಿಸುವ ಸಂಸ್ಕರಣ, ಬಳಸಿದ ಉಳಿಕೆ ಇಂಧನದ ಮರು ಸಂಸ್ಕರಣ ಮತ್ತು ಭಾರಜಲ ತಂತ್ರಜ್ಞಾನ ಇವುಗಳನ್ನು ಒಪ್ಪಂದದಿಂದ ಹೊರಗಿಡಲಾಗಿದೆ. ಇದು 'ಸಂಪೂರ್ಣ ಸಹಕಾರ' ಹೇಗಾಯಿತು? ಇದು ನಮ್ಮ ಶರಣಾಗತಿಯಷ್ಟೆ. 'ಸಂಪೂರ್ಣ ಅಣು ಇಂಧನ ಆವರ್ತ' ಎಂದರೆ ಏನು ಎಂದು ಈ ಒಪ್ಪಂದ ವಿವರಿಸುವುದೇ ಇಲ್ಲ. 'ರಿಯಾಕ್ಟರ್' ಎಂದರೆ ಏನು ಎಂದು ಈ ಸುಲಭ ಪದಕ್ಕೂ ವಿವರಣೆ ನೀಡುವ ಈ ಒಪ್ಪಂದದ ಭಾಷೆಯಲ್ಲಿ ಇಂಧನ ಆವರ್ತದ ಸೊಲ್ಲೇ ಇಲ್ಲವಲ್ಲ ಎಂದರೆ ಸರ್ಕಾರ ಹೇಳುವುದೇನು? ಇದೇನೂ ನಮಗೆ ಮಾತ್ರ ವಿಧಿಸಿದ್ದಲ್ಲ. ಅದು ಅಮೆರಿಕಾದ ಕಾನೂನು, ಇಂಧನ ಪೂರೈಕೆಗೆ ವಿಧಿಸಿರುವ ನಿಯಮಾನುಸಾರವಿದೆ ಅಷ್ಟೆ ಎಂದು. ಹಾಗಿದ್ದರೆ ಜುಲೈ ೧೮ರ ಹೇಳಿಕೆಯಲ್ಲಿ 'ಸಂಪೂರ್ಣ ಸಹಕಾರ' ಎಂದು ಹೇಳಿದ್ದೇಕೆ? ಅರ್ಥಾತ್ ನಮ್ಮನ್ನು ಈ ಕ್ಷೇತ್ರದಲ್ಲಿ ಹಿಂದುಳಿದ ರಾಷ್ಟ್ರವೆಂದಂತಾಯ್ತು. ಅವರು ಏನಾದರೂ ಹೇಳಿಕೊಳ್ಳಲಿ ಬಿಡಿ, ನಮಗೆ ಆಂತರಿಕವಾಗಿ ನಮ್ಮದೆ ಈ ಕುರಿತ ತಂತ್ರಜ್ಞಾನ ಲಭ್ಯವಿದೆಯಲ್ಲ ಎಂದು ತೇಲಿಸುತ್ತಾರೆ. ಅಂತರರಾಷ್ಟ್ರೀಯವಾಗಿ ಮಾರುಕಟ್ಟೆಯಲ್ಲಿ ಲಭ್ಯವಿರುವ, ನಮಗೆ ಅಗತ್ಯವಾದ ಯಂತ್ರ ಸಾಮಗ್ರಿಗಳನ್ನು ಮುಕ್ತವಾಗಿ ಪಡೆದುಕೊಳ್ಳಲಾದರೂ ನಮಗೆ ಹಕ್ಕಿಲ್ಲದೆ ಹೋದರೆ ಈ ಒಪ್ಪಂದದಿಂದ ಏನು ಪ್ರಯೋಜನ? ಇಲ್ಲಿಯವರೆಗಿನ ಬಹಿಷ್ಕಾರ ಮುಂದುವರಿದಂತೆಯೆ ಆಯ್ತಲ್ಲ?

ಹೌದು, ಅಂತರರಾಷ್ಟ್ರೀಯ ಬಹಿಷ್ಕಾರ ೧೯೭೪ರಿಂದ ನಾವು ಅಣುಪರೀಕ್ಷೆ ನಡೆಸಿದ್ದುದರ ನೇರ ಪರಿಣಾಮ. ಆದರೆ ಇದರಿಂದ ಆದದ್ದೇನು? ನಾವು ಮತ್ತಷ್ಟು ದೃಢತೆಯಿಂದ ಕಷ್ಟಪಟ್ಟು ಸ್ವಾವಲಂಬನೆಯನ್ನು ಸಾಧಿಸಿದೆವು. ಈ ಬಹಿಷ್ಕಾರ ಪರಿಸ್ಥಿತಿಯನ್ನು ಸವಾಲಾಗಿ ಸ್ವೀಕರಿಸಿ, ವರಪ್ರದವಾಗಿಸಿಕೊಂಡೆವು (ಬಾಹ್ಯಾಕಾಶ ಕ್ಷೇತ್ರದಲ್ಲಿ ಆದಹಾಗೆ). ಅಣ್ವಸ್ತ್ರವೇ ಇರಲಿ, ವಿದ್ಯುತ್ತೇ ಇರಲಿ ಎರಡರಲ್ಲೂ ಬಹಳ ಮುಂದುವರಿದಿದ್ದೇವೆ. ಈಗ ಇದನ್ನು ಏಕೆ ಕೈಬಿಡಬೇಕು, ಇನ್ನೇನು ಫಲ ಕಾಣುತ್ತೇವೆ ಎನ್ನುವಾಗ?

ಈ ಒಪ್ಪಂದದಲ್ಲೂ ಕಾನೂನುಬದ್ಧವಾದ ವಿಧಿಯೇನೂ ಇಲ್ಲ, ಯುರೇನಿಯಂ ಪೂರೈಕೆ ಮಾಡೇ ಮಾಡುತ್ತಾರೆ ಎನ್ನುವುದಕ್ಕೆ. ಥೋರಿಯಂ ಬಳಕೆಯ ಮಾರ್ಗದಲ್ಲಿ ನಾವು ಸಫಲರಾಗುವುದು ಸನ್ನಿಹಿತವಾಗಿದೆ. ತಾರಾಪುರ ಘಟಕಕ್ಕೆ ಯುರೇನಿಯಂ ಪೂರೈಸುವ ಮಾತಿಗೆ ತಪ್ಪಿದ, ವಚನಭ್ರಷ್ಟ ಅಮೆರಿಕಾದೊಡನೆ ಈಗಲೂ ಈ ಕುರಿತು ಸ್ಪಷ್ಟವಾದ ಆಶ್ವಾಸನೆ ಕಂಡುಬರುತ್ತಿಲ್ಲ.

ಭಾರತದೊಡನೆ ಈ ಒಪ್ಪಂದದ ಮೂಲಕ ಅಮೆರಿಕಾಕ್ಕೆ ೧೫೦ ಬಿಲಿಯ ಡಾಲರ್ ಅಣು ವ್ಯಾಪಾರ ದೊರಕುವ ಆಸೆಯಿಂದ ಪ್ರೇರಿತವಾದುದು ಈ ಒಪ್ಪಂದ, ನಮಗೆ ನೆರವು ನೀಡಲಲ್ಲ. 'ಅಣ್ವಸ್ತ್ರ ಪ್ರಸಾರ ವಿರೋಧಿ' (ಎನ್‌ಸಿಟಿ) ಒಪ್ಪಂದ, ಅಣು ಪರೀಕ್ಷೆಯ ನಿಷೇಧ (ಎನ್‌ಬಿಟಿ) ಇವೆಲ್ಲಾ ಪ್ರಾಸಂಗಿಕ ವಿಷಯಗಳಷ್ಟೆ. ನಾವೇ ದೇಶೀ ತಂತ್ರಜ್ಞಾನ ಬೆಳೆಸಿದರೆ ಜಗತ್ತಿನಲ್ಲಿ ಈ ಕುರಿತು ವಾಣಿಜ್ಯದಲ್ಲೂ ಎಲ್ಲರಿಗೂ ಪೈಪೋಟಿ ನೀಡುವ ಸಾಮರ್ಥ್ಯ ನಮಗೆ ದೊರೆಯುವ ಹಂತದಲ್ಲಿರುವಾಗ, ನಾವು ಹೀಗೆ ವಿದೇಶಿ ವಾಣಿಜ್ಯ ಹಿತಾಸಕ್ತಿಗೆ ಶರಣಾಗುತ್ತಿರುವುದು ದುರಂತ. ಮುಂದಿನ ೨೦ ವರ್ಷಗಳಲ್ಲಿ ೪೦,೦೦೦ ಮೆಗಾವಾಟ್ ವಿದ್ಯುತ್ ಪಡೆಯುತ್ತೇವೆ ಎಂಬುದು ಮೇಲ್ನೋಟಕ್ಕೆ ಆಕರ್ಷಕ. ಆದರೆ ಇದಕ್ಕೆ ನಾವು ಇಂಧನ ಮತ್ತು ತಂತ್ರಜ್ಞಾನ ಎರಡಕ್ಕೂ ಪರಾಧೀನರಾಗುತ್ತಿದ್ದೇವೆ ಎಂಬುದನ್ನು ಮರೆಯಲಾಗದು. ಭಾರತ ಸರ್ಕಾರ ತನ್ನ ಜನತೆಯೊಡನೆ ಹಂಚಿಕೊಳ್ಳಲಾಗದ ರಹಸ್ಯವೊಂದನ್ನು ಅಮೆರಿಕಾದ ಕಾಂಗ್ರೆಸ್ ಸದಸ್ಯರೊಡನೆ ಹಂಚಿಕೊಂಡಿದೆ ಅನ್ನಿಸುತ್ತದೆ. ಈಗಾಗಲೇ ೧೦,೦೦೦ ಮೆಗಾವಾಟ್‌ಗಳಷ್ಟು ಸಾಮರ್ಥ್ಯದ ರಿಯಾಕ್ಟರ್‌ಗಳನ್ನು ಅಮೆರಿಕಾದಿಂದ ಕೊಂಡುಕೊಳ್ಳುವ ಉದ್ದೇಶವಿದೆ ಎಂದು ಅದರೊಡನೆ ಹೇಳಿಕೊಂಡಿದೆ. ಇದು ರಷ್ಯಾ ಮತ್ತು ಫ್ರಾನ್ಸ್ ಎರಡೂ ದೇಶಗಳಿಂದ ಒಟ್ಟಾರೆ ನಿರೀಕ್ಷಿಸುವುದಕ್ಕಿಂತ ಹೆಚ್ಚಿನ ವ್ಯಾಪಾರದ ಅವಕಾಶ. ಅವರ ಕಾಂಗ್ರೆಸ್ ಒಪ್ಪಿಗೆ ನೀಡಲೆಂದು ಅವರಿಗೆ ನೀಡಿದ ಆಮಿಷ ಇದು. ಇನ್ನೂ ಇದಕ್ಕೆ ಸಂಬಂಧಪಟ್ಟ ವಾಣಿಜ್ಯ ನಿಯಮಗಳೇ ಸಿದ್ಧವಾಗದಿರುವಾಗ ಸರ್ಕಾರ ಈ ರೀತಿಯ ಆಶ್ವಾಸನೆ ನೀಡುವುದು ಸರಿಯೇ? ಅದರಲ್ಲೂ ಅಮೆರಿಕಾದ ಅಣು ಕೈಗಾರಿಕೆ ೧೯೭೪ ರಿಂದೀಚೆಗೆ, ಉತ್ಪಾದಿಸದೆ, ಹೊಸದೇನೂ ಇಲ್ಲದೆ, ನಿತ್ರಾಣವಾಗಿ ಹಿಂದೆ ಬಿದ್ದಿರುವಾಗ? ಭಾರತದ ವಿಜ್ಞಾನಿಗಳೇ ಅಮೆರಿಕಾಕ್ಕೆ ಹೋಗಿ ಅಲ್ಲಿಯ ಅಣು ಕೈಗಾರಿಕೆಯನ್ನು ಪುನಃ ಚೇತನಗೊಳಿಸಿ, ನಾವು ಆಮದು ಮಾಡಿಕೊಳ್ಳಬೇಕಾಗಬಹುದು! ಇದೂ ಲಾಭವೆಂದೇ ಹೇಳುತ್ತದೇನೋ ಸರ್ಕಾರ!

ಬಳಸಿದ ಇಂಧನದ ಮರುಸಂಸ್ಕರಣೆಯ ತಂತ್ರಜ್ಞಾನದಲ್ಲಿ ಭಾರತ ಯಾರಿಗೂ ಕಡಿಮೆ ಇಲ್ಲ. ಹಾಗಿರುವಾಗ ಈ ಒಪ್ಪಂದದ ಮೂಲಕ ಭಾರತ ಇದಕ್ಕೆ ಅಪ್ಪಣೆ ಪಡೆಯುತ್ತದೆ ಎಂದು ಹೇಳುವುದು ಹಾಸ್ಯಾಸ್ಪದ. ಆಮದು ಮಾಡಿಕೊಂಡ ಯುರೇನಿಯಂ ಇಂದ ಉದ್ಭವವಾಗುವ ಯುರೇನಿಯಂ ಶೇಷವಸ್ತುವಿನ ಮರು ಸಂಸ್ಕರಣೆಯನ್ನು ಅವರ ಒಪ್ಪಿಗೆ ಇಲ್ಲದೆ ಮಾಡುವಂತಿಲ್ಲ ಎಂದು ಹೇಳಲಾಗುತ್ತದೆ. 'ಪುನಃ ಸಂಸ್ಕರಣ'ದ ವಿಷಯದಲ್ಲಿ ನಾವು ಯಾರೊಡನೆಯೂ ಸಂಧಾನಮಾಡುವುದಿಲ್ಲ ಎಂದು ನಮ್ಮ ಮಂತ್ರಿಗಳು ಹೇಳಿದ್ದೂ ಹೇಳಿದ್ದೆ. ಆದರೆ ಈ ಒಪ್ಪಂದದಲ್ಲಿ ಈ ಷರತ್ತಿಗೆ ಸಹಿ ಹಾಕಲಾಗಿದೆ! "ಈ ಕುರಿತು ನಾವು ಮುಂದೆ ಪ್ರತ್ಯೇಕ ಒಪ್ಪಂದ ಮಾಡಿಕೊಳ್ಳೋಣ, ಈ ಒಪ್ಪಂದವನ್ನು ಅಮೆರಿಕಾದ ಕಾಂಗ್ರೆಸ್ಸೂ ಒಪ್ಪಬೇಕು ಮತ್ತೆ" ಎನ್ನಲಾಗಿದೆ. ಇದು ಎಷ್ಟು ಹೀನಾಯವಾದ ಪರಿಸ್ಥಿತಿ? ಇನ್ನು ಇಂಧನ ಪೂರೈಕೆ ನಿಲ್ಲಿಸಿದರೆ ನಾವೇನು ಮಾಡಬಹುದು ಎಂಬ ವಿಷಯ. ಇದು ಇನ್ನೂ ರಹಸ್ಯಮಯವಾಗಿಯೇ ಇದೆ. ಅಂಥ ಪ್ರಸಂಗ ಬಂದಾಗ ನಾವು ಅದಾವುದೋ ಸಾರ್ವಭೌಮ ಹಕ್ಕನ್ನು ಬಳಸುತ್ತೇವೆ ಎನ್ನುವವರು ಅದೇನೆಂದು ಬಿಡಿಸಿಹೇಳಲೊಲ್ಲರು. ಅಂತರರಾಷ್ಟ್ರೀಯ ಒಪ್ಪಂದಗಳಲ್ಲಿ ಇಂಥ ಅಸ್ಪಷ್ಟತೆ ಇರಲು ಹೇಗೆ ಸಾಧ್ಯ? ನಮ್ಮ ಸರ್ಕಾರವನ್ನು ಐಎಇಎ, ಎನ್‌ಎಸ್‌ಜಿ ಹಾಗೂ ಅಮೆರಿಕಾದ ಕಾಂಗ್ರೆಸ್ ಈ ಕುರಿತು ಪ್ರಶ್ನಿಸಿರಬೇಕು. ನಮ್ಮ ಸರ್ಕಾರ ಸಮಜಾಯಿಷಿ ನೀಡಿರಬೇಕು. ಆದರೆ ಅದೇನೆಂದು ನಮ್ಮ ಜನತೆಗೆ ಮಾತ್ರ ಹೇಳಿಲ್ಲ ಎಂಬ ಗುಮಾನಿ ಉಂಟಾಗುತ್ತದೆ. ಐಎಇಎಗೆ ಈ ಕುರಿತು ಭಾಷೆ ನೀಡುವಾಗ, ನಾವು ನಮ್ಮ ಮಾತು ಉಳಿಸಿಕೊಳ್ಳಬೇಕಾದರೆ ಒಂದು ಘಟಕದ ಜೀವಾವಧಿಯಲ್ಲಿ (ಸುಮಾರು ೪೦ ವರ್ಷಗಳಲ್ಲಿ) ಯಾವುದೇ ಕಾರಣಕ್ಕೂ ಯುರೇನಿಯಂ ಪೂರೈಕೆಯನ್ನು ನಿಲ್ಲಿಸಲಾಗುವುದಿಲ್ಲ ಎಂಬ ಆಶ್ವಾಸನೆ ಬೇಕೆಂದೂ, ಅದಕ್ಕೆ ವಿಫಲವಾದಾಗ ನಮಗೆ ನಮ್ಮ ಆಸಕ್ತಿಗಳನ್ನು ನಮಗೆ ತೋರಿದಂತೆ ರಕ್ಷಿಸಿಕೊಳ್ಳುವ ಹಕ್ಕಿದೆ ಎಂದೂ ಸ್ಪಷ್ಟನೆ ನೀಡಬೇಕಿತ್ತು. ಆದರೆ ಐಎಇಎ ಇಲ್ಲಿ ಇಬ್ಬಂದಿ ಭಾಷೆ ಬಳಸಿದೆ. ನಮ್ಮ ಸರ್ಕಾರ ಶರಣಾಗಿದೆ; ಆದರೂ ನಮ್ಮ ಹಿತಾಸಕ್ತಿಯನ್ನು ಕಾಪಾಡಿದ್ದೇವೆ ಎನ್ನುತ್ತದೆ ಸರ್ಕಾರ.

ಒಪ್ಪಂದದಿಂದ ಅತ್ಯಾಧುನಿಕ ತಂತ್ರಜ್ಞಾನ ದೊರೆಯುತ್ತದೆ ಎಂಬುದು ಭ್ರಮೆ. ಮೂಲೆಗೆ ಬಿದ್ದ ತಂತ್ರಜ್ಞಾನದ ಅಮೆರಿಕಾದ ರಿಯಾಕ್ಟರುಗಳ ವ್ಯಾಪಾರವಷ್ಟೇ ಇದರಲ್ಲಿ ಅಡಗಿರುವ ವಿಷಯ. ನಮ್ಮದೇ ಫಾಸ್ಟ್ ರಿಯಾಕ್ಟರುಗಳಿಗೆ ಬೇಕಾದ ಕೆಲವು ತಂತ್ರಜ್ಞಾನವನ್ನಾದರೂ ಮಾರುಕಟ್ಟೆಯಲ್ಲಿ ನಾವು ಇನ್ನು ಮುಂದೆ ಕೊಳ್ಳಬಹುದೆ? ಈಗಂತೂ ಈ ವಿಷಯ ಸ್ಪಷ್ಟವಿಲ್ಲ.

ನಮ್ಮದೇ ಮೂರು ಹಂತದ ಅಣುತಂತ್ರಜ್ಞಾನ ಬೆಳವಣಿಗೆಗೆ ಯಾವ ಅಡ್ಡಿಯೂ ಈ ಒಪ್ಪಂದದಿಂದ ಇಲ್ಲ ಎಂದು ಪದೇ ಪದೇ ಹೇಳಲಾಗುತ್ತಿದೆ. ಇತ್ತೀಚಿನ ಸರ್ಕಾರಗಳು ಈ ಕ್ಷೇತ್ರಕ್ಕೆ ಈಗಾಗಲೆ ಅನಾದರ ತೋರುತ್ತಿವೆ. ಯುರೇನಿಯಂ ನಿಕ್ಷೇಪದ ಹುಡುಕುವಿಕೆಗೆ ಆಸಕ್ತಿ ತೋರುತ್ತಿಲ್ಲ. ನ್ಯೂಕ್ಲಿಯರ್ ಪವರ್ ಕಾರ್ಪೊರೇಷನ್ನಿಗೆ ಸಾಕಷ್ಟು ಹಣ ನೀಡುತ್ತಿಲ್ಲ. ಸರ್ಕಾರದ ಬೆಂಬಲವಿಲ್ಲದ್ದೇ ಕಾರಣ ಈ ಕ್ಷೇತ್ರದಲ್ಲಿ ಬಯಸಿದಷ್ಟು ಪ್ರಗತಿಯಾಗಿಲ್ಲ. ಆದರೂ ನ್ಯೂಕ್ಲಿಯರ್ ಕಾರ್ಪೊರೇಷನ್ನಿನ ವೈಫಲ್ಯವನ್ನು ತೆಗಳುತ್ತಾರೆ. ಹೀಗಾಗಿ ದೇಶದ ಒಟ್ಟಾರೆ ಶಕ್ತಿಯಲ್ಲಿ ಅಣುಶಕ್ತಿಯ ಭಾಗ ಕೇವಲ ಶೇ. ೩ರಷ್ಟು. ಆದರೆ ಅಣುಕ್ಷೇತ್ರದಲ್ಲಿ ಸಂಶೋಧನೆ ಮತ್ತು ತಂತ್ರಜ್ಞಾನದ ಬೆಳವಣಿಗೆಯಲ್ಲಿ, ವಿಶ್ವದ ಅಗ್ರಪಂಕ್ತಿಗೆ ಸೇರುವಂತೆ ಸಾಧನೆ ಗಮನಾರ್ಹವಾಗಿದೆ. ಅದಕ್ಕೆ ಸ್ವಲ್ಪ ಬೆಂಬಲ

ನೀಡಿದರೂ, ಮಹತ್ತರ ವಿಕಾಸವಾಗುವ ಸಮಯ ಸನ್ನಿಹಿತವಾಗಿದೆ. ೧೫೦ ಬಿಲಿಯನ್ ಡಾಲರಷ್ಟು ಹಣವನ್ನು ವಿದೇಶಿ ಯಂತ್ರಗಳ ಆಮದಿಗೇ ವಿನಿಯೋಗ ಮಾಡಿದರೆ ನ್ಯೂಕ್ಲಿಯರ್ ಪವರ್ ಕಾರ್ಪೊರೇಷನ್ನಿಗೆ ಹಣ ಎಲ್ಲಿ? ಸ್ವಾವಲಂಬಿ ತಂತ್ರಜ್ಞಾನಕ್ಕೆ ಅಗತ್ಯವಾದ ಬಜೆಟ್ ಬೆಂಬಲ ನೀಡದೆ ಗಮನವೆಲ್ಲ ಆಮದಿಗೇ ಸರಿದು, ನಮ್ಮ ದೇಶಿ ಪ್ರಯತ್ನ ವಿಫಲವಾಗುವ ಸಾಧ್ಯತೆ ಹೆಚ್ಚಿದೆ. ಆಮದಿನ ಹಾದಿ ಸದ್ಯಕ್ಕೆ ಸುಲಭವಾದುದು. ಆದರೆ ಅದು ಸ್ವಾವಲಂಬನೆಯಲ್ಲ, ಪರಾಧೀನತೆ. ನಮ್ಮ ಇಡೀ ಇಂಧನ ವ್ಯವಸ್ಥೆ ಪರಾಧೀನವಾಗುವ ಗಂಭೀರ ಪರಿಸ್ಥಿತಿ ಉಂಟಾಗುತ್ತಿದೆ.

ಸ್ಪಷ್ಟ, ಶುದ್ಧ ಮತ್ತು ಬೇಷರತ್ ಒಪ್ಪಂದವನ್ನು ಎನ್‌ಎಸ್‌ಜಿ ಜತೆ ಮಾಡಿಕೊಳ್ಳುತ್ತೇವೆ ' ಎಂದವರು, ಕೊನೆಕೊನೆಗೆ 'ಸ್ಪಷ್ಟ' ಪದವನ್ನು ಕೈಬಿಟ್ಟರು. ರಾಯಭಾರಿಗಳಿಗೆ 'ಸ್ಪಷ್ಟ' ಪದ ಹಿಡಿಸದು!

**ಹೊಸತು :** ಈಗಿನ ಒಪ್ಪಂದದ ಬಗ್ಗೆ ಚರ್ಚಿಸುತ್ತಿರುವುದು ವಿದೇಶಾಂಗ ಇಲಾಖೆ, ವಾಣಿಜ್ಯವೂ ಅಲ್ಲ, ತಂತ್ರಜ್ಞಾನವೂ ಅಲ್ಲ ಎಂಬುದನ್ನು ಗಮನಿಸಬಹುದು.

**ಎ. ಎನ್. ಪ್ರಸಾದ್ :** ಹೌದು. ಈಗ ಯುರೇನಿಯಂ ಆಮದಿಗೆ ಸಂಬಂಧಪಟ್ಟ ನಮಗೆ ದೊರೆತಿರುವ ವಿನಾಯತಿ, ಷರತ್ತುಗಳಿಂದ ಕೂಡಿದ್ದು. ಈ ಷರತ್ತುಗಳ ಭಾಷೆ ದ್ವಂದ್ವಮಯವಾಗಿದೆ. ಒಂದೊಂದು ರಾಷ್ಟ್ರವೂ ಒಂದೊಂದು ರೀತಿ ಅರ್ಥೈಸುತ್ತಿದೆ. ಎನ್‌ಎಸ್‌ಜಿ ಎನ್ನುವುದು ಒಂದು ಪರಸ್ಪರ ಅವಿನಾಭಾವದಿಂದ ಬೆಸೆದುಕೊಂಡ ಕಾರ್ಟೆಲ್ಲು. ಅಮೆರಿಕಾ ಮಿಕ್ಕೆಲ್ಲರನ್ನೂ ತನ್ನದೇ ಹಾದಿಗೆ ಬಗ್ಗಿಸುವ ಸಾಮರ್ಥ್ಯ ಪಡೆದಿದೆ. ಆದ್ದರಿಂದ ಪ್ರತ್ಯೇಕವಾಗಿ ಫ್ರಾನ್ಸ್ ಅಥವಾ ರಷ್ಯದೊಡನೆ ಒಪ್ಪಂದ ಸಾಧ್ಯವಾಗುವುದಿಲ್ಲ. ಇನ್ನು ೧.೨.೩. ಒಪ್ಪಂದಕ್ಕೆ ಬರೋಣ. ಇದನ್ನು ರಾಯಭಾರಿಗಳು ರಚಿಸಿದ್ದಾರೆ. ಅಂದರೆ ಅದನ್ನು ಹೇಗೆ ಬೇಕೋ ಹಾಗೆ ಸಮಯಕ್ಕೆ ತಕ್ಕಂತೆ ವ್ಯಾಖ್ಯಾನಿಸಬಹುದು. ಅಮೆರಿಕಾದೊಡನೆ ಎಷ್ಟು ಬೇಕಾದರೂ ಚರ್ಚಿಸಬಹುದು. ಆದರೆ ಆಖೈರು ತೀರ್ಮಾನ ಅಮೆರಿಕಾದ್ದು ಎನ್ನುತ್ತದೆ ಇದು! ನಾವು ಏನೇ ಹೇಳಲಿ ಅಮೆರಿಕಾ ಸರ್ಕಾರ ೧.೨.೩. ಒಪ್ಪಂದ, ಹೈಡ್ ಆಕ್ಟ್‌ಗೆ ಅಧೀನವಾದುದು ಎನ್ನುತ್ತದೆ. ಹೈಡ್ ಆಕ್ಟ್‌ನಲ್ಲಿ ಎಲ್ಲವೂ ಸ್ಪಷ್ಟ. ಅದೊಂದು ಶಾಸನ. ಈ ಒಪ್ಪಂದಗಳಲ್ಲಿ ಎಲ್ಲೂ ವಿವಾದ ಬಂದಾಗ, ಮಧ್ಯಸ್ಥಿಕೆಗೆ ಒಪ್ಪಿಸುವ ಮಾತೇ ಇಲ್ಲ, ಪೂರೈಕೆ ಮಾಡುವವರದೇ ಆಖೈರು ತೀರ್ಮಾನ. ಇದೇ ರೀತಿ ನಮ್ಮ ಸರ್ಕಾರವನ್ನು ಲೋಕಸಭೆಗೆ ಬದ್ಧಮಾಡುವ ಯಾವ ಕಾನೂನನ್ನೂ ನಾವು ಮಾಡಿಕೊಂಡಿಲ್ಲ. ೧.೨.೩. ಒಪ್ಪಂದ ಅಷ್ಟೊಂದು ಸ್ಪಷ್ಟವಿದ್ದರೆ, ಅಮೆರಿಕಾ ಕಾಂಗ್ರೆಸ್ಸಿನ ಸದಸ್ಯರು ಇದರ ಮೇಲೆ ೪೫ ಸ್ಪಷ್ಟನೆಗಳನ್ನು ಕೇಳಿದ್ದೇಕೆ, ಅವರ ಸರ್ಕಾರ ಅವುಗಳಿಗೆ ನೀಡಿದ ಉತ್ತರಗಳನ್ನು ನಮ್ಮ ಸರ್ಕಾರ ಗುಟ್ಟಾಗಿ ಇಟ್ಟಿದ್ದೇಕೆ? ತೆರೆಮರೆಯಲ್ಲಿ ನಮ್ಮ ಸರ್ಕಾರ ಏನೆಲ್ಲಾ ಒಪ್ಪಿಕೊಂಡಿದೆಯೋ ಎಂಬ ಆತಂಕ ಇದ್ದೇ ಇದೆ.

ಅಗತ್ಯ ಬಿದ್ದರೆ ಅಣುಪರೀಕ್ಷೆ ಮಾಡಿಕೊಳ್ಳುವ ಹಕ್ಕನ್ನೂ ನಾವು ಕಳೆದುಕೊಂಡಿರುವುದು ಸ್ಪಷ್ಟ. ನಾವೇನಾದರೂ ಪರೀಕ್ಷಿಸಿದರೆ ಹೈಡ್ ಆಕ್ಟ್ ಪ್ರಕಾರ ತಕ್ಷಣವೇ ಯುರೇನಿಯಂ ಪೂರೈಕೆ ನಿಲ್ಲಿಸುವುದೇ ಅಲ್ಲದೆ ಹಲವಾರು ಶಿಕ್ಷೆಯ ಕ್ರಮಗಳನ್ನು ಅವರ ಕಾಂಗ್ರೆಸ್ ತೆಗೆದುಕೊಳ್ಳುವ ಸೂಚನೆ ಹೊರಬಿದ್ದಿದೆ. ಅವರಿಂದ ನೆರವು ಪಡೆದು ಅಷ್ಟೊಂದು ಪ್ರಮಾಣದಲ್ಲಿ ವಿದ್ಯುತ್ ಕ್ಷೇತ್ರವನ್ನು ವಿಸ್ತರಿಸಿದ ಮೇಲೆ, ಈ ವ್ಯವಸ್ಥೆಯನ್ನು ಅಸ್ತವ್ಯಸ್ತಗೊಳಿಸುವ ಯಾವುದೇ ಕ್ರಮವನ್ನು ಕೈಗೊಳ್ಳುವ ಧೈರ್ಯ ನಮ್ಮ ಸರ್ಕಾರಕ್ಕೆ ಹೇಗೆ ಬರಬೇಕು? ಅಂದರೆ ವಾಸ್ತವದಲ್ಲಿ ನಾವು ಅಣು ಪರೀಕ್ಷೆಯನ್ನು ಸ್ಪಷ್ಟವಾಗಿ ಕೈಬಿಟ್ಟಿದ್ದೇವೆ ಎಂದೆನಿಸುತ್ತದೆ. ಇದು ಭವಿಷ್ಯದಲ್ಲಿ ನಮ್ಮ ರಕ್ಷಣೆಗೆ ಸಂಬಂಧಿಸಿದಂತೆ ಆತಂಕಕಾರಿಯಾದುದು.

ಈ ಒಪ್ಪಂದದಿಂದ ನಮ್ಮ ಜಿಡಿಪಿ ಹೆಚ್ಚಬಹುದು. ಆರ್ಥಿಕವಾಗಿ ಅಭಿವೃದ್ಧಿಯಾಗಲೂಬಹುದು. ಒಂದಿಷ್ಟು ನಮ್ಮ ಆಂತರಿಕ ಶಕ್ತಿಕ್ಷೇತ್ರದಲ್ಲಿ ವಿಸ್ತಾರವಾಗ ಬಹುದು. ಆದರೆ ಅದು ವಿದೇಶೀಯರನ್ನು ಅವಲಂಬಿಸಿರುತ್ತದೆ. ಆ ಕುರಿತ ನಮ್ಮ ಸ್ವಾಯತ್ತತೆ ಅಂದರೆ ನಮ್ಮ ಅರ್ಥ ವ್ಯವಸ್ಥೆ ಪರಾವಲಂಬಿಯಾಗಬಹುದು.

ನಾವು ಪ್ರಾರಂಭದಲ್ಲಿ ಅಣುಶಕ್ತಿಯ ದೇಶೀ ವಿಕಾಸದಿಂದ, ಸ್ವಾಯತ್ತತೆಯನ್ನು ಸಾಧಿಸಿ, ಜಾಗತಿಕವಾಗಿ ಮುಂಚೂಣಿಯಲ್ಲಿರಬೇಕೆಂದು ಬಯಸಿದ್ದೆವು. ಇಂದು ಭಾಭಾರವರ ಈ ಆಕಾಂಕ್ಷೆಯನ್ನು ಕೈಬಿಡಲಾಗಿದೆ. ನಮ್ಮ ವಿಜ್ಞಾನಿಗಳಿಗೆ ಉತ್ಸಾಹ ತುಂಬುತ್ತಿದ್ದ ಆ ಮಹತ್ವಾಕಾಂಕ್ಷೆ ಇನ್ನಿಲ್ಲವಾಗುತ್ತದೆಯೋ ಏನೋ?

---

ಲೇಖನ ಸಿದ್ಧಪಡಿಸಿದವರು : **ಕೆ. ಎಸ್. ಪಾರ್ಥಸಾರಥಿ**
೨೪೭, 'ಬೆಳಕು', ವುಡ್ಸ್ ಎನ್‌ಕ್ಲೇವ್, ಟೆಲಿಕಾಂ ಬಡಾವಣೆ, ವಿದ್ಯಾನಗರ, ಬೆಂಗಳೂರು - ೫೬೨೧೫೭

With Best Compliments From



**B. I. PUBLICATIONS PVT. LTD.**

147, Infantry Road, Bangalore - 560 001
Ph : 22204652, 22260542, 22207717 Fax: 91-080-22205696
e-mail : bangalore@bipgroup.com

Regd. Office : 359, D.N. Road, Mumbai - 400 023 H. O: B. I. House, 54, Janpath, New Delhi - 110 001

BRANCHES : AHMEDABAD-1, Aishwarya Apartments, 9-B, Kumkum Society, Near Sardar Patel Statue, Stadium Road, Ahmedabad - 380 014 CHENNAI-9/10, Agurchand Mansion (1st Floor), 150, Mount Road, Chennai - 600 002 • KOLKATA- 13/1A, Govt. Place East, Kolkata - 700 069 • MUMBAI - Lansdowne House, 18 Lansdowne Road (Behind Regal Cinema), Mumbai - 400 039 • NEW DELHI- 13, Daryaganj, New Delhi - 110 002 • THIRUVANANTHAPURAM-28/2758, Geethanjali, Chettikulangara, Tiruvananthapuram-695 001

# ಪರಿಣಾಮ

—ಕಥೆ

ಕುಂ. ವೀರಭದ್ರಪ್ಪ



(ಅದೊಂದು ಬಹು ದೊಡ್ಡ ನಗರ. ಅಲ್ಲಿನ ಪ್ರಜೆಗಳು ಸಮಾನಾಂತರ ರೇಖೆಗಳೇ ಸರಿ. ಅವರು ಆರಕ್ಕೇರುವವರಲ್ಲ, ಮೂರಕ್ಕೆ ಇಳಿಯುವವರಂತೂ ಖಂಡಿತ ಅಲ್ಲ. ಒಂದು ರೀತಿಯ ರೋಬಟ್‌ಗಳಂತೆ. ತಾವಾಯಿತು ತಮ್ಮ ಹೆಂಡರು ಮಕ್ಕಳಿಂದೊಡಗೂಡಿದ ಬದುಕಾಯಿತು ಎಂಬಂತೆ ಬದುಕುವುದನ್ನು ರೂಢಿಮಾಡಿಕೊಂಡಿರುವಂಥವರು, ಪತ್ರಿಕೆಗಳನ್ನು ಮುಟ್ಟಿದರೆಲ್ಲಿ ತಮ್ಮ ಕೈಗೆ ನೆತ್ತರು ಅಂಟುವುದೋ ಎಂಬ ಭಯ ಅವರದು. ಆದ್ದರಿಂದಾಗಿ ಅವರು ಪತ್ರಿಕೆಗಳನ್ನು ಓದುವುದು ಇನ್ನಿತರ ಕಾರಣಗಳಿಗಾಗಿ, ಅದು ಕೈಗೆ ಬಂದಿರುವ ಮಕ್ಕಳಿಗೆ ವಧು, ವರರನ್ನು ಹುಡುಕುವುದಾಗಿರಬಹುದು, ನೌಕರಿ ಹುಡುಕುವುದಾಗಿರಬಹುದು, ರಿಯಲ್ ಎಸ್ಟೇಟ್ ಸಂಪರ್ಕಿಸುವುದಾಗಿರಬಹುದು, ಷೇರ್ ಪೇಟೆಯ ವಹಿವಾಟನ್ನು ಗಮನಿಸುವುದಾಗಿರಲೂ ಬಹುದು, ಅಥವಾ ರಾಶಿ ಫಲ ಕಂಡುಕೊಳ್ಳುವುದಾಗಿರಲೂಬಹುದು. ಇಂಥ ಜೀವನ ಶೈಲಿಯಿಂದಾಗಿ ಅವರು ಯಾವತ್ತೂ ಹುಬ್ಬುಗಳನ್ನು ಮೇಲೇರಿಸುವ ಗೋಜಿಗೆ ಹೋಗುವುದೇ ಇಲ್ಲ. ಯೋಗ, ಧ್ಯಾನ ಮತ್ತಿತರ ಅಲೌಕಿಕ ವಿಷಯಗಳ ಕಡೆ ಅವರು ಬಿಡುವು ದೊರಕಿದಾಗ ಕೊಂಚ ಯೋಚಿಸುವುದನ್ನು ಹೊರತುಪಡಿಸಿದರೆ... ದೇಶದ ಪ್ರತಿಯೊಂದು ಹಿತ-ಅಹಿತಕರ ಘಟನೆಗಳನ್ನು ಆಗಾಗ್ಗೆ ಕೇಳಿ ಅವರು ರೋಮಾಂಚನಗೊಳ್ಳುವುದುಂಟು. ಕ್ರಾಂತಿಕಾರಿ ಭಾಷಣಗಳೂ ಸಹ ಅವರಿಗೆ ಮನರಂಜನೆಯ ವಿಷಯಗಳೆ. ಸದರಿ ನಗರದಲ್ಲಿ 'ಕೋಮು ಸೌಹಾರ್ದ ವೇದಿಕೆ' ಆ ದಿವಸ ನಗರದ ಆಜಾದ್ ಮೈದಾನದಲ್ಲಿ ಮತಾಂತರ ಪಿಡುಗು – ಒಂದು ಚರ್ಚೆ ಎಂಬ ವಿಷಯ ಕುರಿತು ವಿಚಾರ ಸಂಕಿರಣ ಏರ್ಪಡಿಸಿತು. ನಾಡಿನ ಪ್ರಮುಖ ವಿಚಾರವಾದಿಗಳೂ, ಬುದ್ಧಿಜೀವಿಗಳೂ ಭಾಗವಹಿಸಿದ್ದ ಆ ಕಾರ್ಯಕ್ರಮದಲ್ಲಿ ಓಬಳೇಶ್ ಭಾಗವಹಿಸದಿದ್ದಲ್ಲಿ ಅಷ್ಟೊಂದು ಸಂಖ್ಯೆಯಲ್ಲಿ ಪ್ರಜೆಗಳೂ ಸೇರುತ್ತಿರಲಿಲ್ಲವೇನೋ! ಆತನ ಕುರಿತು ಅಲ್ಪ-ಸ್ವಲ್ಪ ಪರಿಚಯವಿರುವ ನಿಮಗೆ ನಾನು ಹೇಳುವುದೇನಿದೆ? ಆತನ ಭಾಷಣದ ಮುಖ್ಯಾಂಶಗಳು ಕೆಳಗಿನಂತಿವೆ.)

"**...ಈ** ದೇಶದ ನೈರುತ್ಯ ದಿಕ್ಕಿನಲ್ಲಿ ನೀವು ಪ್ರವಾಸ ಮಾಡಿರಲಾರಿರಿ. ಅಲ್ಲೆಲ್ಲಾ ನಿಮ್ಮ ಮನಸ್ಸನ್ನು ಸೂರೆಗೊಳ್ಳುವಂಥದ್ದೇನೂ ಇಲ್ಲ. ಅದು ನಿಮ್ಮ ಭಾವನೆ, ನೀವು ಸೃಜನಶೀಲರಾಗಿದ್ದಲ್ಲಿ. ಅದನ್ನು ರೂಢಿಸಿಕೊಳ್ಳುವ ಹೆಬ್ಬಯಕೆ ಅಥವಾ ಸಾವಿರದೆಂಟು ಜಾತಿ ಉಪಜಾತಿಗಳಿಂದ ಕಿಕ್ಕಿರಿದಿರುವ ಸದರಿ ಸಮಾಜವನ್ನು ಒಂಚೂರು ಅರ್ಥ ಮಾಡಿಕೊಂಡು ಮಾನವೀಯವಾಗಿ ಸ್ಪಂದಿಸಲು ನೀವು ತಯಾರಿದ್ದಲ್ಲಿ ಒಂದೇ ಒಂದು ಸಲ ಆ ಕಡೆ ಸುತ್ತಾಡಿ ಬನ್ನಿ. ಆ ಕಡೆ ಕುರುಚಲು ಕಾಡುಗಳು, ಅವುಗಳ ನಡುವೆ ಅಲ್ಲೊಂದಿಲ್ಲೊಂದರಂತಿರುವ ಸಣ್ಣ ಸಣ್ಣ ಹಟ್ಟಿಗಳು, ಗೂಡೆ-ವಾಡೆಗಳು, ಮತ್ತವುಗಳಲ್ಲಿ ಅನಾದಿ ಕಾಲದಿಂದ ವಾಸಿಸುತ್ತಿರುವ ಜನರ ಕುರಿತು ನೀವು ಯೋಚಿಸಿದಿರೆಂದರೆ ನೀವು ರೆಪ್ಪೆಗೆ ರೆಪ್ಪೆಯಂಟಿಸಿ ನಿದ್ದೆ ಮಾಡಲಾರಿರಿ ಮತ್ತು ಒಂದು ತುತ್ತು ಹೆಚ್ಚಿಗೆ ಉಂಡು ಡೇಗಲಾರಿರಿ, ಕಾರಣ ಆ ಮಂದಿ ಬದುಕುತ್ತಿರುವುದು ಶತಶತಮಾನಗಳ ಹಿಂದಿನ ಬದುಕನ್ನು, ನವ ನಾಗರಿಕತೆಯ ಸೋಂಕು ಈ ದೇಶದ ಹೆದ್ದಾರಿಗಳ ಎಲ್ಲೆ ಮೀರಿ ಆ ಕಡೆ ಸುಳಿದಿಲ್ಲ. ಆ ಇರಾದೆಯೂ ಅದಕ್ಕಿಲ್ಲ. ಆದ್ದರಿಂದಾಗಿ ಕಳ್ಳ ಕಪಟ, ಕೂದಲು ಸೀಳುವ ಬುದ್ಧಿ, ನಯ ಮಾತುಗಾರಿಕೆ ಇವ್ಯಾವು ಅವರಿಗೆ ಸೋಂಕಿಲ್ಲ. ಆ ನಿರುಪದ್ರವಿಗಳಿಗೆ ತಮ್ಮ ದೇಶದ ಹೆಸರಾಗಲೀ, ತಮ್ಮ ಜಾತಿಯ ಕೂನು ಗುರುತುಗಳಾಗಲೀ ತಿಳಿಯದು, ಅವರು ತಮಗೆ ಏನೇ ಅನ್ಯಾಯ ಜರುಗಿದರೂ ತುಟಿಪಿಟಕ್ಕೆನ್ನುವುದಿಲ್ಲ. ನೀವ್ಯಾರಾದರೂ ಕೆನ್ನೆಗೆ ಹೊಡಿದಿರೆಂದರೆ ತಮ್ಮ ಇನ್ನೊಂದು ಕೆನ್ನೆಯನ್ನು ಪುಕ್ಕಟೆಯಾಗಿ ಬಿಟ್ಟುಕೊಡುವರೇ ಹೊರತು ಪ್ರತಿಭಟಿಸಲಾರರು. ಅಂದ ಮಾತ್ರಕ್ಕೆ ಅವರನ್ನು ಹೇಡಿಗಳೆಂದು ಅಪಾರ್ಥ ಮಾಡಿಕೊಳ್ಳದಿರಿ, ಅವರ ಪೂರ್ವಜರು ಮಾಮೂಲು ಆಯುಧಗಳಿಂದ ಹುಲಿ, ಸಿಂಹಗಳಂಥ ಕ್ರೂರ ಮೃಗಗಳನ್ನು ಬೇಟೆಯಾಡಿ ಅಂದಿನ ರಾಜ ಮಹಾರಾಜರುಗಳಿಂದಲೂ, ಫರಂಗಿ ಅಧಿಕಾರಿಗಳಿಂದಲೂ ಪಾರಿತೋಷಕಗಳನ್ನು ಪಡೆದಿರುವುದುಂಟು. ಶಿಕಾರಿಯೆಂಬುವ ಮನರಂಜನೆ ಸಲುವಾಗಿ ಅಲ್ಲಿಗೆ ಆಗಮಿಸುತ್ತಿದ್ದ ಆಳುವವರಿಗೆ ಅವರು ಸಹಕರಿಸುತ್ತಿದ್ದುದುಂಟು. ಕೆಲವು ರಾಜರಂತೂ ಬೇಟೆಯ ಸೂಕ್ಷ್ಮಗಳನ್ನು ಅವರಿಂದ ಕಲಿತು ವೀರಾಗ್ರಣಿಗಳಾಗಿರುವುದೂ ಉಂಟು. ಒಮ್ಮೊಮ್ಮೆ ಯಾರಿಂದಲಾದರೂ ಸಂಭವಿಸಿರಬಹುದಾದ ತಪ್ಪು, ಅಪರಾಧಗಳಿಗೆ ಅವರನ್ನು ಹಿಡಿದೊಯ್ದು ಶಿಕ್ಷಿಸಿರುವುದೂ ಉಂಟು. ಶಿಕ್ಷೆಯೆಂದರೆ ಕೆಲವೊಮ್ಮೆ ನುರಣ

ಂಡನೆಗಳಿಲ್ಲದಿರುತ್ತಿರಲಿಲ್ಲ. ಅವುಗಳನ್ನವರು ಅನ್ಯಾಯ, ದೌರ್ಜನ್ಯವೆಂದು ಭಾವಿಸಿಲ್ಲ. ತ್ರಿಪದಿಗಳಿಗೆ ಎಳ್ಳು ೀರಿಗೆ ಹೇಗೆ ಮೂಲ ಧಾತುಗಳೋ ಹಾಗೆಯೇ ನನನ ಮತ್ತು ಮರಣ ತಮ್ಮ ಬದುಕಿಗೆ ಮೂಲ ಾತುಗಳೆಂದು ಭಾವಿಸಿ ಬದುಕುತ್ತಿದ್ದಂಥವರು. ಗಲೂ ಅವರ ಬದುಕಿನಲ್ಲಿ ಏರುಪೇರುಗಳಾಗಿಲ್ಲ. ದಕ್ಕವರು ಆಸ್ಪದ ಮಾಡಿಕೊಡುವುದೂ ಇಲ್ಲ. ವರು ತಮಗೆ ಅಂದರೆ ತಮ್ಮ ಸೋಕಾಲ್ಡ್ ದೇಶಕ್ಕೆ ್ವಾತಂತ್ರ್ಯ ಬಂದಿದೆ ಎಂದು ಲವಲೇಶ ತಿಳಿದೇ ಲ್ಲ. ಸದರಿ ದೇಶದ ಹೆಸರೊತ್ತಟ್ಟಿಗಿರಲಿ ತಮ್ಮ ವಾಸಗಳಿಗಾಜುಬಾಜಿಕ್ಕಿರುವ ಹೋಬಳಿ ಯಾ ನಗರ, ಟ್ಟಣಗಳ ಹೆಸರು ಸಹ ತಿಳಿಯದು ಅಂದ ಮೇಲೆ ೀವೇ ಊಹಿಸಿಕೊಳ್ಳಬಹುದು. ಅಂದ ಮಾತ್ರಕ್ಕೆ ಅವರ್‍ಯಾರೂ ನಗರ ಪಟ್ಟಣಗಳಿಂದ ದೂರ ಳಿದಿರುವರೆಂದು ಅನ್ಯಥಾ ಭಾವಿಸಬಾರದು. ೇನು, ಸಣ್ಣ ಪುಟ್ಟ ಪ್ರಾಣಿಗಳ ಚರ್ಮ, ಷಧೀಯ ಮರ ಗಿಡಗಳ ಕಾಂಡ, ಬೇರುಗಳಿತ್ಯಾದಿ ಳನ್ನು ತೆಗೆದುಕೊಂಡಲ್ಲಿಗೆ ಹೋಗಿ ಕೇಳಿದ ಬೆಲೆಗೆ ಾರಿ ಬಂದು ಜೀವನ ನಿರ್ವಹಿಸುತ್ತಿರುವರು. ಮಾರಿ ರುವಾಗ್ಗ ದಾರಿಯಲ್ಲಿ ಸಿಗುವ ಹಳ್ಳ-ತೊರೆಗಳಲ್ಲಿಳಿದು ಳಕ ಮಾಡುವುದರ ಮೂಲಕ ನಾಗರಿಕತೆಯ ೋಂಕು ತೊಳೆದುಕೊಂಡು ತಮ್ಮ ತಮ್ಮ ಹಟ್ಟಿಗಳನ್ನು ್ರವೇಶಿಸುವರು, ಅವರಿಗೆ ಮೃಷ್ಟಾನ್ನದ ಅಗತ್ಯವಿಲ್ಲ. ಳುಕಡಿ ಇರದಿದ್ದಲ್ಲಿ ಇಲಿ, ಅಳಿಲು ಹೀಗೆ ಸಣ್ಣ ುಟ್ಟ ಪ್ರಾಣಿಗಳನ್ನು ಸುಟ್ಟೋ, ಬೇಯಿಸಿಯೋ ಅಥವಾ ಸಿ ಹಸಿಯಾಗಿಯೋ ತಿಂದು ತಮ್ಮ ಸರಿಸೃಪ ಾಯಮಾನದ ಕ್ಷುದ್ಬಾಧೆಯನ್ನು ನೀಗಿಸಿಕೊಳ್ಳುವರು. ಜನಾಂಗೀಯರ ಮದುವೆ, ಲೈಂಗಿಕ ಚಟುವಟಿಕೆಗಳೂ ೈವಿಧ್ಯಮಯ. ದೇಹ ತೀಟೆ ತೀರಿಸಿಕೊಳ್ಳಲು ಹೆಣ್ಣು ಂಡುಗಳ ನಡುವೆ ಪರಸ್ಪರ ಒಪ್ಪಿಗೆ ಇದ್ದರಾಯಿತು. ೇವಲ ಸ್ರವಿಸುವುದಕ್ಕೆ ಮಾತ್ರ ಅವರು ಪ್ರಾಧಾನ್ಯತೆ ೊಡುವುದುಂಟು. ಲೈಂಗಿಕ ದಾಹ ಪರಿಹರಿಸಿಕೊಂಡ ಳಿಕ ಹುಡುಕಿಕೊಳ್ಳುವ ದಾರಿ ಅವರವರದ್ದು. ಾವುದೇ ಕಟ್ಟು ಪಾಡುಗಳಾಗಲೀ, ನಾಗರಿಕ ನೀತಿ ಂಹಿತೆಯ ಲಕ್ಷ್ಮಣ ರೇಖೆಗಳಾಗಲೀ ಅವರ ನಡುವೆ ರುವುದಿಲ್ಲ. ಯಾರು ಯಾರ ಹತ್ತಿರ ಮಲಗಿ ೊಂಡರೂ ಅವರು ತಲೆ ಕೆಡಿಸಿಕೊಳ್ಳುವುದಿಲ್ಲ. ಈ ರಣದಿಂದಾಗಿ ತಮ್ಮ ಸಂಬಂಧಗಳನ್ನು ಬಲಿ ೊಡುವುದಿಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ವರು ಕಾಡಿನ ಮಕ್ಕಳು. ಪ್ರಕೃತಿಯೇ ಅವರ ದೈವ, ಂದ ಮಾತ್ರಕ್ಕೆ ಅವರಿಗೆ ಅವರವೇ ಆದಂಥ ೇವತೆಗಳು ಇಲ್ಲವೆಂದೇನಿಲ್ಲ, ಕೋಲೇರಮ್ಮ, ಲಮಯ್ಯದಮ್ಮ, ಈರ-ಬೀರ ಉರುಕುಂದಿ, ೊಂಜಾಡಲ ಹೀಗೆ ದೇವತೆಗಳ ದಂಡುಂಟು. ವೆಲ್ಲವುಗಳಿಗೆ ನಿರ್ದಿಷ್ಟ ಗುಡಿ ಗುಂಡಾರಗಳಿಲ್ಲ. ಹುತೇಕ ಅವೆಲ್ಲ ಅವರಂತೆಯೇ ಅಲೆಮಾರಿ ಸ್ವಭಾವ ವುಗಳು. ಜಂಗಮ ಜಾಯಮಾನದ ಅವು ಮರದ ೊಟರೆ, ಹೆಬ್ಬಂಡೆಗಳ ಸಂದು, ಗವಿ ಗಹ್ವರ ಹೀಗೆ ಾ ಒಂದೊಂದು ಜಾಗಗಳನ್ನು ಹುಡುಕಿ ೊಂಡಿರುತ್ತವೆ. ಅಮಾಸೆ, ಹುಣ್ಣಿಮೆಗಳಂಥ ವಿಶೇಷ ದಿನಗಳಲ್ಲಿ ಅವು ತಮ್ಮ ಭಕುತಾದಿ ಮಂದಿಯ ಮೈಯೊಳಗೆ ತೂರಿಕೊಂಡು ಕಚ್ಚಾಡುತ್ತಿರುತ್ತವೆ. ಅವೇ ಅವರಿಗೆ ದಿಕ್ಕುದೆಸೆ. ಅವುಗಳ ಕಾರಣಿಕದಂತೆಯೇ ಅವರು ನಡೆದುಕೊಳ್ಳುವುದು. ಆ ಒಂದೊಂದು ದೇವತೆಗಳ ಕುರಿತು ಅವರು ಹಾಡು, ಕಥೆಗಳನ್ನು ಕಟ್ಟಿ ಹಾಡಿಕೊಳ್ಳುತ್ತಾರೆ. ಶಿಷ್ಟ ಸಂಬಂಧೀ ಪೌರಾಣಿಕ ಕಥೆಗಳಲ್ಲಿನ ಬಹುತೇಕ ಪಾತ್ರಗಳು ಅವರು ಹೇಳುವ ಕಥೆ, ಕಬ್ಬಗಳಲಿ ಬರುವವಾದರೂ ಅವೆಲ್ಲ ವಿಚಿತ್ರ ಮತ್ತು ವಿಲಕ್ಷಣ. ಶಿಷ್ಟರ ಕಾವ್ಯಗಳಲ್ಲಿ ಯಾವುದು ನಿಷಿದ್ಧವೋ ಅವೆಲ್ಲ ಇವರ ಕಾವ್ಯಗಳಲ್ಲಿ ಸುಸಂಬದ್ಧ. ಬಹುಪಾಲು ದೇವತೆಗಳೆಲ್ಲ ಅವರಂತೆಯೇ ಮಾಂಸಾಹಾರಿ ಸ್ವಭಾವದವುಗಳು. ಹೀಗೆ ಅವರ ನಂಬಿಕೆ ಆಚರಣೆಗಳ ಕುರಿತು ಹೇಳುತ್ತ ಹೋದರೆ... ಬೇಡ ಸ್ವಾಮಿ



ಬೇಡ...ಬೇಡವೇ ಬೇಡ. ಅದನ್ನು ಆಲಿಸುವ ವ್ಯವಧಾನ ನಿಮಗೆಲ್ಲಿಯದು? ಕಾಲಾಯ ತಸ್ಮೈ ನಮಃ ಎಂಬ ಆರ್ಯೋಕ್ತಿ ನಿಮಗೆ ನೆನಪಿರಲಿಕ್ಕಿಲ್ಲ. ಜಾಗತೀಕರಣಕ್ಕೆ ನಾವು ನಮ್ಮೆಲ್ಲ ಪಂಚೇಂದ್ರಿಯಗಳನ್ನು ಬಲಿ ಕೊಟ್ಟು ಒಂದೆರಡು ದಶಕಗಳೇ ಕಳೆದಿವೆ. ಪೈಪೋಟಿಗೆ ಬಿದ್ದು ನಮ್ಮ ನಮ್ಮ ಅಸ್ತಿತ್ವ ಉಳಿಸಿಕೊಳ್ಳುವ ಸಲುವಾಗಿ ಹೆಣಗಾಡುತ್ತಿದ್ದೇವೆ. ಇದಕ್ಕಾಗಿ ಅಕ್ಕ ಪಕ್ಕದವರನ್ನು ಬಲಿ ಕೊಡುವುದಕ್ಕೂ ಹೇಸಲಾರದಂಥ ಅಮಾನವೀಯ ಹಂತಕ್ಕೆ ತಲುಪಿದ್ದೇವೆ. ಏನೇ ಅನ್ಯಾಯ ಜರುಗಿದರೂ ನಾವ್ಯಾರೂ ಚಕಾರ ಎತ್ತುತ್ತಿಲ್ಲ. ನೋಡಿಯೂ ನೋಡದವರಂತೆ, ಕೇಳಿಯೂ ಕೇಳದವರಂತೆ, ಮಾಡಿಯೂ ಮಾಡದವರಂತೆ, ಹ್ಹೂ...ಹ್ಹು. ಬಿಡಿ, ಪ್ರಸ್ತಾಪಿಸಲು ನಾಚಿಕೆಯಾಗುತ್ತೆ. ಅಲ್ರೀ.. ಈಗ್ಗೆ ಎರಡು ಮೂರು ದಶಕಗಳ ಹಿಂದಿನ ಮಾತು. ಎಲ್ಲೋ ಒಂದು ಚಿಕ್ಕ ಅನ್ಯಾಯ ನಡೆದರೂ ಎಷ್ಟೊಂದು ಚಳುವಳಿ, ಪ್ರತಿಭಟನೆಗಳು ನಡೆಯುತ್ತಿದ್ದವು... ಏನು ಕಥೆ! ಚಳುವಳಿಗಳು ಸ್ವಾಸ್ಥ್ಯ ಸಮಾಜದ ಬುನಾದಿಗಳಾಗಿದ್ದವು. ಚಳುವಳಿಗಳಿರದ ಸಮಾಜ ಒಂದು ಸಮಾಜವೇನು? ಬಾಯಿ ತೆರೆಯಬೇಕಾದಲ್ಲಿ ಮೂಗು ಹಿಡಿಯುವುದು ಅಗತ್ಯವೆಂಬ ಅರಿವಿತ್ತು. ಈಗದೆಲ್ಲ ಎಲ್ಲಿದೇಂತ ಹೇಳಿ ನೋಡೋಣ. ಈಗ ಜಿಸ್ ಕಿ ಲಾಠಿ ಉಸ್ ಕಿ ಭೈಂಸ್ ಅಂತಾರಲ್ಲ ಹಾಗಿದೆ. ಆಳುವವರು ಕ್ರೂರ ಮೃಗಗಳಂತಾಗಿರುವುದಕ್ಕೆ, ಉಳ್ಳವರು ಹಗಲು ದರೋಡೆಕೋರರಾಗಿರುವುದಕ್ಕೆ, ಬ್ಯೂರೋಕ್ರಾಟ್ಸ್ ಪ್ರಜೆಗಳಿಗಿಂತ ಮುಖ್ಯವಾಗಿ ತಮ್ಮ ತಮ್ಮ ಮನೆಗಳ ಡಾಬರ್‌ಮನ್ನುಗಳ ಕಡೆ ಗಮನ ಕೊಡುತ್ತಿರುವುದಕ್ಕೆ ನಮ್ಮ ಈ ಜನ್ಮಭೂಮಿಯನ್ನು ಅಮೆರಿಕಾಕ್ಕೆ ಒತ್ತೆಯಿಡುತ್ತಿರುವುದಕ್ಕೆ ಸದರಿ ದೇಶ ಬೆನ್ನೆಲುಬು ಕಳೆದುಕೊಂಡು ಅಕಶೇರುಕ ಆಗಿರುವುದಕ್ಕೆ..ಪ್ರಪಾತದ ಅಂಚಿಗೆ ಸಾಗಿರುವುದಕ್ಕೆ... ನಾವು ಕಲಿತಿರುವ ಅಕ್ಷರಗಳು ತುಕ್ಕು ಹಿಡಿದಿರುವುದಕ್ಕೆ ಸೋಕಾಲ್ಡ್ ಸಾಹಿತಿಗಳು ಗೀಚುತ್ತಿರುವ ಕಥೆ, ಕಾದಂಬರಿ, ಕವಿತೆಗಳ ಜಠರಗಳ ತುಂಬೆಲ್ಲ ಹಳಸಲು ತುಂಬಿರುವುದಕ್ಕೆ... ಇದನ್ನೆಲ್ಲ ಬರೆಯುವುದಕ್ಕೆ ನಾಚಿಕೆಯಾಗುತ್ತೆ, ಮೈ ಪರಚಿಕೊಳ್ಳಬೇಕೆನಿಸುತ್ತೆ. ಏನೇ ಬರೆದರೂ, ಏನೇ ಹೇಳಿದರೂ ನಿಷ್ಪ್ರಯೋಜಕವೆಂಬ ಅರಿವು ನಿಮ್ಮವರೊಳಗೊಬ್ಬನಾಗಿ ಇರುವ ನನಗೂ ಇದೆ. ನನ್ನನ್ನು ನಾನೇ ಸಂತೈಸಿಕೊಳ್ಳುವ ಸಲುವಾಗಿ...

ನಾನೀ ಮುಂದೆ ಪ್ರಸ್ತಾಪಿಸಲಿರುವ ಘಟನೆಗಳು ನಿಮಗೆ ಅಪರಿಚಿತವೇನಲ್ಲ. ಆದರೆ ನೀವು ಅಷ್ಟಾಗಿ ತಲೆ ಕೆಡಿಸಿಕೊಳ್ಳದಿರುವುದಕ್ಕೆ ಕಾರಣ... ನೀವು ವೃತ್ತ ಪತ್ರಿಕೆಗಳನ್ನು ಕೇವಲ ಸ್ವಲಾಭ ಮತ್ತು ಸ್ವಹಿತಾಸಕ್ತಿ ಸಲುವಾಗಿ ಓದುವ ಜಾಯಮಾನದವರಾಗಿ ರೂಪಾಂತರಗೊಂಡಿರುವಿರಿ, ವೃತ್ತ ಪತ್ರಿಕೆಗಳು ಕರಿಶಾಯಿಯ ರೂಪದಲ್ಲಿರುವ ಮಾನವ ನೆತ್ತರಿನಿಂದ ಸುದ್ದಿಗಳನ್ನು ಪ್ರಕಟಿಸುತ್ತಿವೆ ಎಂಬ ಅರಿವು ನಿಮಗಿಲ್ಲ. ಆದರೂ ಅಷ್ಟಾಗಿ ಕೇರ್ ಮಾಡದವರು ನೀವು. ಹ್ಹಾ... ಇರಲಿ. ಈಗ ನಮ್ಮ ಬುಡಕಟ್ಟು ಪ್ರಜೆಗಳ ಕಥಾನಕ(?)ಕ್ಕೆ ಬರೋಣ. ಕಾಡಿನ ಉತ್ಪನ್ನಗಳೇ ಇವರ ಜೀವಾಳ. ಗಿಡ-ಮರಗಳಂತೆಯೇ ಇವರು ನಿರುಪದ್ರವಿಗಳು, ಜುಳು ಜುಳು ನಾದಗೈಯುತ್ತ ಹರಿಯುವ ಹಳ್ಳಗಳ ಸ್ಫಟಿಕ ಜಲದಂತೆಯೇ ಇವರ ಮನಸ್ಸು. ಇವರು ಅದೆಷ್ಟು ಮುಗ್ಧರೆಂದರೆ ಇವರು ತಮ್ಮ ಮೇಲಾಗಲಾರಂಭಿಸಿದ.. ಅದೂ ಈ ದೇಶಕ್ಕೆ ಮುಕ್ತಿ ಸ್ವಾತಂತ್ರ್ಯ ಲಭಿಸಿದ ತರುವಾಯ ದೌರ್ಜನ್ಯಗಳ ಬಗ್ಗೆ ಅರಿವೇ ಇರಲಿಲ್ಲ. ಕಾರಣ ಅವರಿಗೆ

ದೌರ್ಜನ್ಯಗಳೆಂದರೆ ಇರುವೆ ಕಡಿತಕ್ಕೆ ಸಮಾನ. ಅನ್ಯಾಯ-ಅಕ್ರಮಣಗಳಂಥ ಇತಿಹಾಸ ಪ್ರಸಿದ್ಧ ಶಬ್ದಗಳ ನಿಕಟ ಪರಿಚಯವೂ ಅವರಿಗಿಲ್ಲವೆಂದರೆ ನೀವೇ ಲೆಕ್ಕ ಹಾಕಿಕೊಳ್ಳಿ. ಒದ್ದರೆ ಒದೆಸಿಕೊಳ್ಳುವ ಬಯ್ದರೆ ಬಯ್ಯಿಸಿಕೊಳ್ಳುವ ಜಾಯಮಾನದವರು - ಅಮಾಯಕರು - ಮುಗ್ಧರು.

ಈಗ್ಗೆ ಏಳೆಂಟು ವರ್ಷಗಳ ಹಿಂದಿನ ಮಾತು. ಸದರಿ ನಾಡಿನ ಈಶಾನ್ಯ ದಿಕ್ಕಿನಲ್ಲಿರುವ ದೇವರಹಟ್ಟಿ ನಿಮಗೆ ಗೊತ್ತಿರುವ ಸಾಧ್ಯತೆ ಇದೆ. ಕುರುಚಲು ಕಾಡು, ಹತ್ತಾರು ಹಿರಿ ಕಿರಿಯ ಗುಡ್ಡ ಬೆಟ್ಟಗಳ ನಡುವಿರುವ ಅದು ಹತ್ತು ವರ್ಷಗಳ ಹಿಂದಿನವರೆಗೆ ಮಾನವ. ಉಪಟಳಗಳ ನೇಪಥ್ಯದಲ್ಲಿತ್ತಷ್ಟೆ. ಅಲ್ಲಿನ ಯಾವುದೇ ವಿದ್ಯಮಾನವೂ ನಾಗರಿಕ ಸಮಾಜಕ್ಕೆ ತಿಳಿಯುತ್ತಿರಲಿಲ್ಲ. ಶ್ರೀಮಂತರೋ. ದೊಡ್ಡ ದೊಡ್ಡ ಐಷಾರಾಮಿ ಅಧಿಕಾರಿಗಳೋ, ಬುಡಕಟ್ಟು ಯಾ ಆದಿವಾಸಿಗಳ ನಡೆ ನುಡಿ ಕುರಿತು ಅಧ್ಯಯನ ಮಾಡುವಂಥವರೋ... ಹೀಗೆ ದಾರಿ ಇಲ್ಲದ ಕಡೆ ದಾರಿ ಮಾಡಿಕೊಂಡು ಅಲ್ಲಿಗೆ ಬಂದು ಹೋಗುತ್ತಿದ್ದವರೋ... ಒಬ್ಬರಾ ಇಬ್ಬರಾ... ಅವರೆಲ್ಲರ ಉದ್ಧಾರಗಳಿಂದ ಆ ಪ್ರದೇಶವು ಕಿಕ್ಕಿರಿದುಬಿಟ್ಟಿರುವುದು. ಹಾನಿ ಕೇವಲ ಕಾಡು ಪ್ರಾಣಿಗಳಿಗಷ್ಟೆ ಸಂಭವಿಸುತ್ತಿರಲಿಲ್ಲ. ಅವರ ದೃಷ್ಟಿಲಿ ಅಲ್ಲಿನ ಅಮಾಯಕರೂ ಕಾಡು ಪ್ರಾಣಿಗಳೇ ಆಗಿರುತ್ತಿದ್ದರು. ಬೇಟೆಗೋ, ಮೈತೀಟೆಗೋ, ಮನರಂಜನೆಗೋ... ಮತ್ತಿತರ ಕೆಲಸಗಳಿಗೋ...ಒಟ್ಟಿನಲ್ಲಿ ಅಲ್ಲಿನ ಆದಿವಾಸಿಗಳಿಗೆ ಇದು ತಮ್ಮ ಮತ್ತು ತಮ್ಮ ಸೃಜನಶೀಲ ಮನಸ್ಸಿನ ಮೇಲೆ ನಡೆಯುತ್ತಿರುವ ಹಲ್ಲೆ ಎಂದು ಅನ್ನಿಸುತ್ತಲೇ ಇರಲಿಲ್ಲ... ಅದು ಅರಿವಿಗೆ ಬರುತ್ತಿದ್ದದ್ದು ಪರಿಣಾಮ ಸಂಭವಿಸಿದನಂತರವೇ... ಅವರು ಬಿಡುತ್ತಲಿದ್ದ ಒಂದೇ ಒಂದು ನಿಟ್ಟುಸಿರು ಶೋಷಣೆಯನ್ನು ಮರೆಮಾಚಿಬಿಡುತ್ತಲಿತ್ತು.

ಸೋಕಾಲ್ಡ್ ಜಾನಪದ ವಿದ್ವಾಂಸರಿಂದ ಸಂಭವಿಸುತ್ತಲಿದ್ದ ಹಲ್ಲೆ ಇತರೆ ಹಲ್ಲೆಗಳಿಗಿಂತ ಹೆಚ್ಚು ಮಾರಣಾಂತಿಕವಾಗಿರುತ್ತಿತ್ತು. ಅವರೆದೆಯಲ್ಲಿ ಪುಂಖಾನುಪುಂಖವಾಗಿರುವ ಹಾಡು-ಪಾಡುಗಳು, ಆದಿ ಅಂತ್ಯವಿರದ ಕಥೆಗಳು, ಅವರ ತರಾವರಿ ಭಾವಚಿತ್ರಗಳು, ಅವರ ಜಾನಪದಶೈಲಿಯ ಹಟ್ಟಿಗಳಂಥ ನಿವಾಸ ಸ್ಥಾನಗಳು, ಅವರ ಸೃಜನಶೀಲ ಕಲೆ ಇತ್ಯಾದಿಗಳನ್ನು ಲಪಟಾಯಿಸಿ ನಗರಗಳಿಗೆ ಸಾಗಿಸಿ ನಗದಾಗಿ ಪರಿವರ್ತಿಸಿಕೊಂಡು ಶ್ರೀಮಂತರಾಗಿರುವ ಜಾನಪದ ವಿದ್ವಾಂಸರು ಈ ನಾಡಿನ ಅನೇಕ ವಿಶ್ವವಿದ್ಯಾಲಯಗಳಲ್ಲುಂಟು. ಅಂಥವರಿಗಾಗಿ ಬುಡಕಟ್ಟು ಜಾನಪದ ಕಲೆಯು ನಗರಗಳಲ್ಲಿನ ಪಂಚತಾರಾ ಹೋಟಲುಗಳಲ್ಲಿ ಬಿಕರಿಯಾಗುತ್ತಿರುವುದೂ ಉಂಟು. ಇದೆಲ್ಲ ದಶಕಗಳಿಂದ ಇಂದಿನತನಕ ನಡೆದುಬರುತ್ತಿರುವುದು ಅಕ್ಷರ ಬಲ್ಲ ಯಾರಿಗೆ ತಾನೆ ತಿಳಿಯದು ? ಆದರೂ ನಾವು, ನೀವೆಲ್ಲ ಜಾಣ ಕುರುಡಿಗೆ ಹೆಸರಾಗಿರುವಂಥವರು ತಾನೆ ! ಯಾಮಾರಿಸುವ, ತಮ್ಮನ್ನು ತಾವು ಸಮರ್ಥಿಸಿಕೊಳ್ಳುವ ಅಪಾಯಕಾರಿ ಕಲೆಯನ್ನು ಅಕ್ಷರ ನಮ್ಮೆಲ್ಲರಿಗೆ ಕಲಿಸಿಕೊಟ್ಟಿರುವುದಷ್ಟೆ. ಆದ್ದರಿಂದಾಗಿ ನಾವ್ಯಾರೂ ಈ ಬೌದ್ಧಿಕ ಶೋಷಣೆ ವಿರುದ್ಧ ಚಕಾರವೆತ್ತುತ್ತಿಲ್ಲ. ಜಾಗತೀಕರಣದ ಪ್ರಭಾವವೋ ಸುಡುಗಾಡವೋ ತಿಳಿಯದು ಕಣ್ರೆ, ಜಾನಪದರ ಭಾವನಾತ್ಮಕತೆ ಬಗೆಗಾಗಲೀ, ಅವರ ಬೇಕು ಬೇಡಗಳ ಬಗೆಗಾಗಲೀ ತಿಳಿಯುವ ದರದು ಆಳುವ ಸರ್ಕಾರಗಳಿಗೆಲ್ಲಿಂದ ಬಂದೀತು. ಎಷ್ಟು ಮಂದಿ ಜನಪ್ರತಿನಿಧಿಗಳ ಎದೆಯಲ್ಲಿ ಅಕ್ಷರಗಳ ಬೆಳಕುಂಟು ? ದೇಶದ ಅತ್ಯುನ್ನತ ಸ್ಥಾನದಲ್ಲಿರುವವರೇ ಜಾಗತೀಕರಣದ ಮೋಡಿಗೊಳಗಾಗಿ ಸದರಿ ದೇಶವನ್ನು ಅಮೆರಿಕಾದ ಕಾಲ ಬುಡಕ್ಕೆ ತಳ್ಳಲು ಅಂತರ್ರಾಷ್ಟ್ರೀಯವಾಗಿ ಸಂಚು ರೂಪಿಸುತ್ತ ಅವಘಡಗಳಿಗೆ ಸಾಂವಿಧಾನಿಕ ರೂಪವನ್ನು ನೀಡುತ್ತಿರುವರಷ್ಟೆ. ಇದರ




ನೀಟಾಗಿ ಕತ್ತರಿಸಿದ ಹೂಗಿಡಗಳ ನಡುವೆ
ಒಡ್ಡೋಲಗಸ್ಥ ಮಹಾರಾಜನ ಹಾಗೆ
ವಿರಾಜಮಾನವಾಗಿದೆ ಆ ಮನೆ.
ಶೆಡ್ಡಿನಲಿ ಮಲಗಿದ ಕಾರು-ಪಕ್ಕದಲೆ
ಆಳೆತ್ತರದ ಆಲ್ಸೇಶನ್ ನಾಯಿ. ಗೇಟಿನಲಿ
'ನಾಯಿಗಳಿವೆ, ಎಚ್ಚರಿಕೆ !' ಫಲಕ.

ಒಳಹೊಕ್ಕರೆ ಸ್ವಾಗತಿಸುವ ಭವ್ಯ ದಿವಾನಖಾನೆ
ಬೃಹದಾತ್ರದ ಟಿ. ವಿ. ಮೂಲೆಗಳಲ್ಲಿ ಸೈನಿಕರಂತೆ ನಿಂತ
ಎತ್ತರದ ವಿಗ್ರಹಗಳು ; ಹೂಕುಂಡಗಳು -
ಕುಳಿತರೆ, ಪಾತಾಳಕ್ಕೆಸೆವ ಸೋಫಾಗಳು. ಅದರಾಚೆ
ಹೊಕ್ಕರೆ ಹೊರಡಲು ದಾರಿಸಿಗದಂತೆ ಹತ್ತಾರು
ಕೊಠಡಿಗಳು, ಮುಚ್ಚಿರುವ ಬಾಗಿಲುಗಳು.
ತಿರುವುಗಳಲ್ಲಿ
ಮಾಯವಾಗುವ ಪುಟ್ಟಹಾದಿಗಳು. ಎಲ್ಲಿಂದಲೋ

ಕೇಳಿಸುವ ಹಾಡಿನ ತುಣುಕುಗಳು... ಆಹಹಾ ! ಈ
ಮಯನರಮನೆ ತುಂಬ ವಿದೇಶೀ ಸೆಂಟಿನ ಗಮಲು.

ತಾಯಿ, ಮಕ್ಕಳು, ಸೊಸೆಯಂದಿರು, ಮೊಮ್ಮಕ್ಕಳು
ಅವರವರ ಕೋಣೆಗಳಲ್ಲಿ - ನಡುವೆ
ಸಂಪರ್ಕ ಆಗೀಗ ಮೊಬೈಲ್‌ಗಳ ಮೂಲಕವೆ
ಇಳಿದನಿಯ ತುಂಡು ಮಾತುಗಳು. ಕಂಪ್ಯೂಟರಲ್ಲಿ
ಕೀಲಿಸಿದ ಕಣ್ಣುಗಳು. ಆಗೀಗೊಮ್ಮೆ ಆಚೀಚೆ
ಸರಿದಾಡುವ ನೆರಳುಗಳು; ಹೆಜ್ಜೆ ಸದ್ದುಗಳು.

ಇನ್ನೂ ಒಳಗೆ - ಅನಾಥ ಎಂಬಂತೆ
ತೆರೆದುಕೊಂಡೇ ಇರುವ ಡೈನಿಂಗ್
ಹಾಲ್-ಮೇಜಿನ ಮೇಲೆ
ಅಚ್ಚುಕಟ್ಟಾಗಿ ಜೋಡಿಸಿಟ್ಟಿರುವ
ವಿಧವಿಧದ ತಿಂಡಿ ತಿನಿಸುಗಳು; ಹಣ್ಣುಗಳು.
ಯಾವಾಗ
ಯಾರು ಇಲ್ಲಿಗೆ ಬರುತ್ತಾರೆ - ಯಾವಾಗ
ಇವೆಲ್ಲ ಖಾಲಿಯಾಗುತ್ತವೆ -
ಯಾರಿಗೂ ಗೊತ್ತಿಲ್ಲ.
ಒಮ್ಮೊಮ್ಮೆ ಕೇಳಿಸುವ ನಗುವಿನ ಸದ್ದು,
ಗದರುವ ಸದ್ದು

ಪಿಸುದನಿಯ ಗೊಣಗಿನ ಸದ್ದು – ಸದ್ದಿನ ಆಚೆ
ಸದಾ ನೆಲೆ ನಿಂತಿರುವ ಗಾಢ ನಿಗೂಢ ಮೌನ.

ಹೊರಗೆ–
ಎಲೆಯುದುರಿಸಿದ ಮರದ ಕೊಂಬೆಯಲಿ
ಕುಳಿತ ಆ ಒಂಟಿ ಹಕ್ಕಿ ಉಲಿಯುತ್ತದೆ :
ಆಹ ! ಎಷ್ಟು ಸುಂದರ ! ಆಹ !
ಅಲ್ಲಿರುವುದು ಅಂಥ ಮನೆ ; ಇಲ್ಲಿರುವುದು ಸುಮ್ಮನೆ !



**ಸುಬ್ರಾಯ ಚೊಕ್ಕಾಡಿ**
ಚೊಕ್ಕಾಡಿ - ೫೭೪೨೧೨, ಸುಳ್ಯ,
ದಕ್ಷಿಣ ಕನ್ನಡ

ಸಲುವಾಗಿ ಈ ದೇಶದ ಮುಗ್ಧತೆ, ಅಮಾಯಕತೆಯನ್ನು ಬಲಿಕೊಡಲು ಏನೆಲ್ಲ ಮಸಲತ್ತು ನಡೆಸಿರುವರಷ್ಟೆ. ಅದಕ್ಕೆ ಪೂರಕವಾಗಿ ಸರ್ಕಾರಗಳು ಜಾರಿ ತಂದ ಕಾನೂನುಗಳು ಒಂದೇ ಎರಡೇ... ಕಾಡುಗಳಿಂದ ಬುಡಕಟ್ಟು ಜನರನ್ನು ಒಕ್ಕಲೆಬ್ಬಿಸಲು, ಕಾಡುಗಳಿಂದ ಅವರನ್ನು ಹೊರದೂಡಲು, ಏನೆಲ್ಲಾ ಸವಲತ್ತುಗಳ ಆಮಿಷ ಒಡ್ಡಿದರೆಂಬುದನ್ನು ನೆನಪಿಸಿಕೊಂಡರೆ... ಸೂಕ್ಷ್ಮಗ್ರಾಹಿಗಳೂ, ತುಸು ಸಂವೇದನಾಶೀಲರೂ ಆದಂಥ ನಿಮ್ಮೆಲ್ಲರಿಗೂ ತಿಳಿದಿರುವ ಸಂಗತಿ. ನಿಮ್ಮ ಪೈಕಿ ಕೆಲವರು ಅವರನ್ನು ರಕ್ಷಿಸುವ ಸಲುವಾಗಿ ಟೊಂಕ ಕಟ್ಟಿದ್ದಿರಿ. ನಾನಾ ನಮೂನೆಯ ಗಡ್ಡ-ಮೀಸೆ, ದಿರಿಸು ಧರಿಸಿ ಕಾಡುಗಳಿಗೆ ನುಗ್ಗಿ ಆದಿವಾಸಿಗಳ ಪರವಾಗಿಯೂ, ಸರ್ಕಾರಗಳ ಬಂಡವಾಳಶಾಹಿ ಮನೋಭಾವದ ವಿರುದ್ಧ ಉದ್ದ ಉದ್ದನೆಯ ಭಾಷಣಗಳನ್ನು ಬಿಗಿದಿರಿ, ಸಾರಿ, ಮಾಡಿದಿರಿ. ವಿಚಿತ್ರ ಪಾರಿಭಾಷಿಕ ಶಬ್ದಗಳಿಂದ ಕಿಕ್ಕಿರಿದಿದ್ದ ಆ ನಿಮ್ಮ ಉಪನ್ಯಾಸಗಳು ಅದೆಷ್ಟು ಅರ್ಥಪೂರ್ಣವಾಗಿದ್ದವೆಂದರೆ ಅವನ್ನು ಕೇಳಿಸಿಕೊಂಡ ಜಾರ್ಜ್ ಬುಷ್ ತಲೆದೂಗಿರಲೂಬಹುದು. ನಿಮ್ಮ ಪೈಕಿ ಕೆಲವರನ್ನು ಸಾದರಪೂರ್ವಕವಾಗಿ ತನ್ನ ಅಮೆರಿಕಾಕ್ಕೆ ಬರಮಾಡಿಕೊಂಡು ಲ್ಯಾಟಿನ್ ಅಮೆರಿಕನ್ ದೇಶಗಳ ವಿರುದ್ಧ ಭಾಷಣಿಸಬೇಕೆಂದು ಯೋಚಿಸುತ್ತಿರಲೂಬಹುದು. ಬ್ಲೇಕನ ಥರ ಕೂತಲ್ಲಿಯೇ ತ್ರಿಕಾಲಜ್ಞಾನಿಗಳ ರೀತಿಯಲ್ಲಿ ಯೋಚಿಸುವ ಸಾಮರ್ಥ್ಯವಿರುವ ನಿಮಗೆ ಇದೆಲ್ಲವೂ ತಿಳಿದಿರದೆ ಇರಲಾರದು ಕಣ್ರಿ. ಕಾರಣ ನೀವು ಅಮೇರಿಕನ್ ಓರಿಯಂಟೆಡ್ ಇಂಟಲೆಕ್ಚುಯಲ್ಸ್ ಎಂಬುದನ್ನು ನೀವು ಸಾರ್ವಜನಿಕವಾಗಿ ಒಪ್ಪಿಕೊಳ್ಳುವುದಿಲ್ಲವೆಂಬ ಸಂಗತಿ ಗೊತ್ತು. ಒಂದು ಅಂತರರಾಷ್ಟ್ರೀಯ ಖ್ಯಾತಿಯ ವಿಚಿತ್ರ ವಿಷಯವೆಂದರೆ ಅಮೆರಿಕನ್ ವಿರೋಧಿ ರಾಷ್ಟ್ರಗಳೆನಿಸಿರುವ ಕಮ್ಯೂನಿಸ್ಟ್ ದೇಶಗಳು ಹೇಗೆ ತೆಪ್ಪಗಿರಲು ಸಾಧ್ಯ? ಜಗತ್ತಿನ ಹಲವು ತೃತೀಯ ರಾಷ್ಟ್ರಗಳಲ್ಲಿ ಭೂಗತವಾಗಿದ್ದುಕೊಂಡೇ ಹೋರಾಡುತ್ತಿರುವ ಮಾವೋವಾದಿಗಳು ಸುಮ್ಮನಿರಲಾದೀತೇನು? ಅವರು ನಿರುದ್ಯೋಗಿಗಳೂ, ಜೀವನದಲ್ಲಿ ಜಿಗುಪ್ಸೆ ಹೊಂದಿರುವಂಥವರೂ ಆದಂಥ ಯುವಕ, ಯುವತಿಯರನ್ನು ನಕ್ಸಲೈಟರನ್ನಾಗಿ ಪರಿವರ್ತಿಸಿ ನಮ್ಮ ಕಾಡುಗಳಿಗಟ್ಟಿದ್ದು ನಿಮ್ಮೆಲ್ಲರಿಗೆ ಗೊತ್ತಿರುವ ಸಂಗತಿ. ಮೊದಲೇ ಪ್ಯಾಂಟು, ಟಸ್ಸಾ-ಪುಸ್ಸಾ ಇಂಗ್ಲಿಷ್, ಪಾರಿಭಾಷಿಕ ಪದಗಳು... ಇವುಗಳು ಅವರ ಪಾಲಿಗೆ ಮೈಲಿಗೆ, ಬಂದೂಕು ಕಂಡೊಡನೆ ಬೆಚ್ಚದೆ ಇದ್ದಾರೇನು? ಹ್ಞಾ... ಕ್ರಮೇಣ ಹೊಂದಿಕೊಂಡರೂಂತ ಇಟ್ಟುಕೊಳ್ಳಿ... ಅದರ ಹಿಂದೆಯೇ ಕೇಳಲಾರಂಭಿಸಿದ ಸದ್ದು ಬೂಟುಗಳದ್ದಾಗಿತ್ತು... ಕ್ಲುಪ್ತ ಕಾಲದಲ್ಲಿಯೇ ನಮ್ಮವರ ಪರಿಸ್ಥಿತಿ ಅತ್ತ ದರಿ-ಇತ್ತ ಪುಲಿ ಎಂಬಂತಾಯಿತು ಕಣ್ರೀ... ಒಂದೆರಡು ಕಡೆ ಹಾರಾಡಲಾರಂಭಿಸಿದ ಕಾಗೆ, ಹದ್ದುಗಳು ಗುರುತಿಸಿದ ಹೆಣಗಳು ಮಾಧ್ಯಮಗಳ ಗಮನ ಸೆಳೆದ ಪರಿಣಾಮವಾಗಿ... ಸರ್ಕಾರಗಳು ಒಂದರ ಹಿಂದೊಂದರಂತೆ ಪ್ಯಾಕೇಜುಗಳನ್ನು ಪ್ರಕಟಿಸಲಾರಂಭಿಸಿದ ಪರಿಣಾಮವಾಗಿ... ನಮ್ಮವರು ಹೊಟ್ಟೆಯ ಕರುಳುಗಳನ್ನು ತಮ್ಮತಮ್ಮ ಬಾಯಿಗಳಿಗೆ ತಂದುಕೊಂಡ ಪರಿಣಾಮವಾಗಿ... ಹತ್ತಾರು ಹೆರಿಗೆಗಳು ಸೆರೆಮನೆಗಳಲ್ಲೋ, ಗವಿಗಹ್ವರಗಳಲ್ಲೋ ಸಂಭವಿಸಲಾರಂಭಿಸಿದ ಪರಿಣಾಮವಾಗಿ... ಸಾವಿರಾರು ಅಶ್ಲೀಲ ಬಯ್ಗುಳೂ, ಆಕ್ರಂದನಗಳೂ... ಅವನ್ನೆಲ್ಲ ವಿವರಿಸುತ್ತ ಹೋದಲ್ಲಿ... ಅದು ಇದೆಲ್ಲ ನಿಮಗೆ ಅರ್ಥವಾಗಲಾರದು ಕಣ್ರೀ... ನೀವು ಮಾಧ್ಯಮಗಳ ಮೂಲಕ ತಿಳಿದುಕೊಂಡಿರುವುದೇ ಬೇರೆ, ವಸ್ತುಸ್ಥಿತಿಯೇ ಬೇರೆ. ಕ್ಲುಪ್ತ ಸಮಯದಲ್ಲಿ ನಮ್ಮ ಹಾಡೆ-ಹಟ್ಟಿ-ವೂಡೆ-ವಾಡೆಗಳೆಲ್ಲ ಅಲ್ಲಾಡಿಹೋಗದೆ ಇರಲಿಲ್ಲ. ಸರ್ಕಾರಗಳು ಒಡ್ಡಿದ ಆಮಿಷಗಳೇ ಮೇಲ್ನೋಟಕ್ಕೇನೋ ಸರಿ. ವಿವಿಧ ಹಂತದ ಅಧಿಕಾರಿಗಳು ನಮ್ಮವರ ದುಃಖ ಹತಾಶೆಗಳನ್ನು ತಮ್ಮ ಆಳ ಅಳತೆಗಳಿಗೆ ತಕ್ಕಂತೆ ನಗದಾಗಿ ಪರಿವರ್ತಿಸಿಕೊಂಡ ಪರಿಣಾಮವಾಗಿ... ಕಾಡುಗಳನ್ನು ಎದೆಯಲ್ಲಿಟ್ಟುಕೊಂಡವರು ನಾಡುಗಳಲ್ಲಿನ ಕಾಂಕ್ರೀಟು ಕಾಡುಗಳಿಗೆ ಹೇಗೆ ಹೊಂದಿಕೊಂಡಾರು? ಇವುಗಳೆಲ್ಲದರ ಮೇಲೆ ಬರೆ ಹಾಕಿದಂತೆ...

ಸದರಿ ದೇಶದಂಥ ವಿಚಿತ್ರ ದೇಶ ಈ ಪ್ರಪಂಚದಲ್ಲಿ ಇನ್ನೊಂದಿರಲಾರದು.

ಉದ್ಯಮಗಳಿಗೆ ಸಾಲ ಹೆಚ್ಚಳ




ನೌಕರಿ, ಉದ್ಯಮ ಅಂತ ಅದ್ಯಾಕೆ ಕಷ್ಟಪಡ್ತೀರಿ... ನನ್ನ ಹಾಗೆ ಮಂತ್ರ ಕಲಿತು ಹಾಯಾಗಿರಬಾರದೆ?!

ಸಾವಿರಾರು ಸಂಖ್ಯೆಯಲ್ಲಿರುವ ಜಾತಿಗಳು ಈ ದೇಶದ ಹಿತಾಸಕ್ತಿ ಕಾಪಾಡುವ ಸಲುವಾಗಿ ಒಟ್ಟಾಗಿ ಶ್ರಮಿಸಿರುವ ಉದಾಹರಣೆಗಳಿದ್ದಲ್ಲಿ ದಯವಿಟ್ಟು ಹೇಳಿ ಸ್ವಾಮಿ. ಈ ದೇಶದ ಮನುಷ್ಯ ತನ್ನ ಜಾತಿಗೆ, ಕುಲಕ್ಕೆ ಧಕ್ಕೆಯೊದಗಿದಾಗ ಸಿಡಿದೆದ್ದ ದೃಷ್ಟಾಂತಗಳುಂಟೇ ಹೊರತು... ಇಂಡಿಯಾ ಎಂಬ ದೇಶ ಜಾತಿಗಳ ಕಾರಣಗಳಿಂದಾಗಿ ಸದಾ ವಿಘಟಿಸುತ್ತಲೇ ಇರುತ್ತದೆ ಎಂದು ನೂರಾರು ವರ್ಷಗಳ ಹಿಂದೆಯೇ ಕಾರ್ಲ್ ಮಾರ್ಕ್ಸ್ ಘಂಟಾಘೋಷವಾಗಿ ಕಾರಣಿಕ ನುಡಿದಿರುವುದು ನಿಜವಾಗುತ್ತಲೇ ಇದೆ. ಅದರಲ್ಲೂ ತ್ರೀಅಂಡಾಫ್ ಪರ್ಸೆಂಟ್ ಅಲ್ಪ ಸಂಖ್ಯಾತ ಜನರಿದ್ದಾರಲ್ಲ, ಅವರು ತಮ್ಮ ಸನಾತನವೂ, ಭ್ರಮಿತವೂ ಆದಂಥ ತಿಳಿವಳಿಕೆಯನ್ನು ಅಸ್ತ್ರದ ರೀತಿಯಲ್ಲಿ ಝಳಪಿಸುತ್ತಿರುವುದು ಇತ್ತೀಚಿಗೆ ಸಾಂಕ್ರಾಮಿಕವಾಗುತ್ತಿರುವುದೂ ನಿಮಗೆ ಗೊತ್ತಿಲ್ಲದಿರಲು ಸಾಧ್ಯವಿಲ್ಲ. ನಿಮ್ಮ ಪೈಕಿ ಹಲವರು ಅವರನ್ನು ಓಲೈಸಲು ಶ್ರಮಿಸುತ್ತಿರುವುದೂ ನಿಮಗೆ ಗೊತ್ತು. ಪ್ರಾಚೀನಾತಿ ಪ್ರಾಚೀನವಾದ ಪಳೆಯುಳಿಕೆಗಳನ್ನು ತಿಕ್ಕಿತೊಳೆದು ವಾಸ್ತವಕ್ಕೆ ಅಳವಡಿಸಲು ಪ್ರಯತ್ನಿಸುತ್ತಿರುವುದರ ಮೂಲಕ ಸದರಿ ದೇಶಕ್ಕೆ ಕೌಪೀನ ತೊಡಿಸುತ್ತಿರುವುದು ಅಂಗೈ ಹುಣ್ಣಿನಷ್ಟೆ ಸತ್ಯ. ಈ ಐತಿಹಾಸಿಕ ಅನಾಹುತವನ್ನು ಪ್ರತಿಭಟಿಸದಿದ್ದಲ್ಲಿ ಸದರಿ ದೇಶ ಆಮೂಲಾಗ್ರವಾಗಿ ಹಾಳಾಗುವುದರಲ್ಲಿ ಸಂದೇಹವಿಲ್ಲ ಕಣ್ರೀ. ಸದರಿ ದೇಶ ಹತ್ತು ಹಲವು ಶತಮಾನಗಳ ಹಿಂದೆ ಈಗಿರುವ ಹೆಸರನ್ನು ಹೊಂದಿತ್ತೇನು? ಈ ದೇಶದಲ್ಲಿ ತ್ರೀಪರ್ಸೆಂಟ್ ಮಂದಿ ಡಂಗುರಿಸುವಂಥ ಒಂದು ಧರ್ಮವಿತ್ತೇನು? ಹ್ಞೂ... ಹ್ಞು... ಇಲ್ಲವೇ ಇಲ್ಲ ಕಣ್ರೀ... ಈ ಸಂಗತಿ ಪ್ರಾಜ್ಞರಾದ ನಿಮಗೂ ಗೊತ್ತು. ನಮಗೂ ಗೊತ್ತು. ಆದರೂ ಏನು ಮಾಡೋದು ಹೇಳ್ರಿ. ಸತ್ಯವನ್ನು ಸಾರ್ವಜನಿಕವಾಗಿ ಹೇಳಿದರೆಲ್ಲಿ ಯಾವ ಗ್ರಹಚಾರ ಕಾದಿದೆಯೋ ಅಂತ ತೆಪ್ಪಗಿದ್ದೇವೆ. ಕಾರಣ ನಮಗೆ ನಮ್ಮ ದೇಶಕ್ಕಿಂತ ನಮ್ಮ ನಮ್ಮ ಹೆಂಡರು ಮಕ್ಕಳು ಮುಖ್ಯ. ನಮ್ಮ ನಮ್ಮ ಹಿತಾಸಕ್ತಿ ವೈಯಕ್ತಿಕ ಕಾಳಜಿ ಮುಖ್ಯ. ಆಧುನಿಕ ಕಪ್ಪೆ ಚಿಪ್ಪಿನ ಪರಿವೇಷದೊಳಗೆ ನಾವು ಸನಾತನತೆಯನ್ನು ಗುಟ್ಟಾಗಿ ಸಾಕಿ ಕಾಪಾಡಿಕೊಂಡು ಬರುತ್ತಿದ್ದೇವೆ. ಸನಾತನತೆಯ ಸಂಕೇತವಾದ ಜುಟ್ಟು ಮತ್ತು ಆಧುನಿಕ ಸಂಕೇತವಾದ ಕ್ರಾಪನ್ನು ಜೊತೆ ಜೊತೆಯಾಗಿ ಜೋಪಾನ ಜತನತೆಯಿಂದ ನೋಡಿಕೊಳ್ಳುತ್ತ ಇಬ್ಬಂದಿತನವನ್ನು ಮರೆಯುತ್ತಿದ್ದೇವೆ. ಈ ಕಾರಣದಿಂದಾಗಿ ನಾವ್ಯಾರೂ ತ್ರಿಕರಣ ಪೂರ್ವಕ ರೀತಿಯಲ್ಲಿ ಚಕಾರವೆತ್ತುತ್ತಿಲ್ಲ ಕಣ್ರೀ. ಇದೇ ಮನಃಸ್ಥಿತಿ ಮುಂದುವರಿದಲ್ಲಿ ಸದರಿ ದೇಶ ಎಕ್ಕುಟ್ಟಿಹೋಗುವುದರಲ್ಲಿ ಸಂಶಯವಿಲ್ಲ. ಆದ್ದರಿಂದ ನಾವೆಲ್ಲರೂ ಈ ಕೂಡಲೆ ಮಾಡಬೇಕಿರುವುದೇನೆಂದರೆ...

ಈ ಮುಂದೆ ಹೇಳಲಿರುವುದನ್ನು ನೀವು ಚಿತ್ತವಿಟ್ಟು ಕೇಳಿ. ಇದನ್ನು ಕಟ್ಟು ಕಥೆ ಎಂದು ಭಾವಿಸಿದಲ್ಲಿ ಅದು ನಿಮ್ಮ ತಪ್ಪೇ ಹೊರತು ನನ್ನದಲ್ಲ. ಮಾನಸಿಕವಾಗಿ ನೀವು ಸಂಸಿದ್ಧರಿದ್ದಲ್ಲಿ ಮಾತ್ರ ನಾನು ಪ್ರಾಮಾಣಿಕವಾಗಿ ಮುಂದಿನದನ್ನು ಹೇಳಲಾದೀತು. ಇದಕ್ಕೆ ಮುಖ್ಯವಾಗಿ ಏಕಾಗ್ರತೆ ಮತ್ತು ಸಾಮಾಜಿಕ ಕಾಳಜಿ ಅಗತ್ಯವಿದೆ. ಇತ್ತೀಚಿನ ದಿವಸಗಳಲ್ಲಿ ನಮ್ಮ ನಿರುಪದ್ರವಿ ಸಮಾಜದಲ್ಲಿ ಎಂತೆಂಥ ಅವಘಡಗಳು ಸಂಭವಿಸುತ್ತಿವೆ ಎಂಬುದು ನಿಮಗೆ ಗೊತ್ತುಂಟು. ಅದನ್ನು ವಿವರಿಸುವ ಅಗತ್ಯವಿಲ್ಲ. ನಮ್ಮ ಈ ದೇಶವಿದೆಯಲ್ಲ, ಇದು ವೈವಿಧ್ಯಮಯ ಮತ್ತು ಹತ್ತು ಹಲವು ಸಂಸ್ಕೃತಿಗಳ ಕಲಸು ಮೇಲೋಗರ. ಈಗ್ಗೆ ಕೆಲವೇ ಕೆಲವು ವರ್ಷಗಳ ಹಿಂದಿನತನಕ ಜಾತಿ ಜಾತಿಗಳ ನಡುವೆ ಸಾಮರಸ್ಯವಿತ್ತು. ಪಂಗಡಗಳ ನಡುವೆ ಮಧುರ ಸಂಬಂಧವಿತ್ತು. ಆದರೆ ಈಗ ಅದೆಲ್ಲ ನಾಪತ್ತೆಯಾಗಲಾರಂಭಿಸಿದೆ. ಮನುಷ್ಯ ಮನುಷ್ಯನನ್ನು ಆಯುಧದ ರೀತಿಯಲ್ಲಿ ಉಪಯೋಗಿಸುತ್ತಿದ್ದಾನೆ. ಪಂಗಡ ಪಂಗಡಗಳ ನಡುವೆ ಕಂದಕಗಳನ್ನು ಸೃಷ್ಟಿಸುತ್ತಿದ್ದಾನೆ. ಅದಕ್ಕೆ ಮಾಧ್ಯಮಗಳನ್ನು ಆಧುನಿಕ ತಂತ್ರಜ್ಞಾನ ಮತ್ತಿತರ ಸಂಪನ್ಮೂಲಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದಾನೆ. ತನ್ನ ಧರ್ಮ ಜಾತಿಗಳಿಗೆ ರಣರಂಗದ ಪ್ರಭಾವಳಿ ತೊಡಿಸುತ್ತಿದ್ದಾನೆ. ಇತ್ತೀಚೆಗಂತೂ ಧರ್ಮ ರಾಜಕೀಯ ಪರಿವೇಷ ತೊಡುತ್ತಿದೆ. ಈ ಜಗತ್ತಿನ ಎಲ್ಲಾ ಧರ್ಮ ಸಂಸ್ಥಾಪಕರ

ಪ್ರಣಾಳಿಕೆ ಒಂದೇ ಆಗಿರುವುದರ ಅರಿವು ನಮ್ಮೆಲ್ಲರಿಗಿದೆ. ಆದರೂ ಏಕೆ ಈ ಮೇಲಾಟಗಳು ಎಂಬುದೇ ನಮಗೆ ಅರ್ಥವಾಗುತ್ತಿಲ್ಲ. ಧರ್ಮಕ್ಕೆ ಏಕೆ ಜಾತಿಯ ಮುಖವಾಡ ಹಾಕುತ್ತಿರುವರೆಂಬುದೇ ಅರ್ಥವಾಗುತ್ತಿಲ್ಲ ಓಟ್ ಬ್ಯಾಂಕ್ ರಾಜಕಾರಣ ಈ ಎಲ್ಲ ಹಿಕಮತ್ತುಗಳ ಹಿಂದಿರುವುದೆಂಬುದು ಸತ್ಯ. ಈ ದೇಶದ ರಾಜಕೀಯ ಪಕ್ಷಗಳ ಕಿವಿ ಹಿಂಡಿ ಬುದ್ಧಿ ಹೇಳುವ ನೈತಿಕ ಸ್ಥೈರ್ಯವನ್ನು ಈ ದೇಶದ ಲೇಖಕರು, ಬುದ್ಧಿಜೀವಿಗಳು ಯಾಕೆ ಕಳೆದುಕೊಂಡಿರುವರೋ ನಾ ಕಾಣೆ. ಜಾತಿ ಕಾರಣಗಳಿಂದಾಗಿ ಮನುಷ್ಯ ಮನುಷ್ಯನನ್ನು ದ್ವೇಷಿಸುವ, ದೂರವಿಡುತ್ತಿರುವ ಈ ಹಿಂದೂ ಪ್ರಣೀತ ಸಮಾಜದಲ್ಲಿ ನಿಮ್ನ ವರ್ಗದಿಂದ ಬಂದವರು ತಲೆಎತ್ತಿ ಬದುಕುವುದು ಸಾಧ್ಯವಿದೆಯೇ ?... ಆತ್ಮ ಗೌರವವಿರುವ ಈ ದೇಶದ ಶೋಷಿತನಿಗೆ ತನ್ನ ದುರ್ಬಲ ಬದುಕಿಗೆ ತನ್ನದೇ ಆದಂಥ ಉರುಗೋಲನ್ನು ಆಯ್ಕೆ ಮಾಡಿಕೊಳ್ಳುವ ಅಧಿಕಾರವನ್ನು ಸಂವಿಧಾನವೇ ಕೊಟ್ಟಿರುವುದಷ್ಟೆ. ಇದನ್ಯಾಕೆ ಸ್ವಯಂಘೋಷಿತ ಧರ್ಮರಕ್ಷಕರು ಸಶಸ್ತ್ರವಾಗಿ ವಿರೋಧಿಸುತ್ತಿರುವರು ?

ಈ ದೇಶದಲ್ಲಿರುವ ಅಸಂಖ್ಯಾತ ಜಾತಿ-ಉಪಜಾತಿಗಳ ಕುರಿತು ವಿವರಿಸುವ ಅಗತ್ಯವಿಲ್ಲ. ತಾವು ಉಚ್ಚಜಾತಿ ಸಂಜಾತರು ಎಂದು ಬೀಗುವುದು ಈ ದೇಶದ ದೌರ್ಭಾಗ್ಯ. ಆದರೆ ನಾಡಿನ ಸಮಸ್ತ ಜಂಜಡಗಳಿಂದ ದೂರವಿರುವ ಮತ್ತು ಕಾಡಿನ ನಡುವೆ ನಮ್ಮ ಪಾಡಿಗೆ ನಾವು ಮಾಡಿರುವ ಕರ್ಮವಾದರೂ ಏನು ? ನಮಗೆ ನಿಮಗಿರುವಂಥ ಯಾವುದೇ ಜಾತಿ-ಕುಲಗಳ ಹಂಗಿಲ್ಲ. ನಮಗಿರುವ ಜಾತಿಗಳಿಗೂ ಹಿಂದೂ ಪ್ರಣೀತ ಜಾತಿಗಳಿಗೂ ಯಾವುದೇ ಸಂಬಂಧವಿಲ್ಲ. ಇಂಥ ನಮ್ಮ ಬುಡಕಟ್ಟು ಸಮುದಾಯಗಳ ಗೊಡವೆಗೆ ಇವರ‍್ಯಾಕೆ ಬರುವುದು ? ನೀವೇ ಯೋಚಿಸಿ... ಸದರಿ ಸರ್ಕಾರ ಆವಿರ್ಭವಿಸಿದ ಬಳಿಕವೇ ಹತ್ತಾರು ಎಡ, ಬಲಪಂಥೀಯ ಸಂಘಟನೆಗಳ ನೇತಾರರು ಎಗ್ಗಿಲ್ಲದೆ ಕಾಡುಗಳಿಗೆ ನುಗ್ಗಿ...

'ಕೋಣಗಳೆರಡುಂ ಹೋರೆ ಗಿಡುವಿಂಗೆ ಮಿತ್ತು' ಅಂತ ರಾಘವಾಂಕ ಹೇಳಿರುವಂತೆ ಉಭಯ ಸಂಬಂಧೀ ಉಪಟಳಗಳ ನಡುವೆ ನಮ್ಮವರ ಬದುಕು !... ನಮ್ಮ ಪನ್ನೋಬಳ ಹಟ್ಟಿಯ ಹೆಸರನ್ನು ನೀವು ಕೇಳಿರುವಿರಾದರೆ ಅದು ಸವಾರೆಕ್ಕ ಎಂಬ ಮುದುಕಿಯಿಂದಾಗಿ ಮಾತ್ರ. ಆಕೆಗೆ ಘನ ಸರ್ಕಾರ ಜಾನಪದಶ್ರೀ ಪ್ರಶಸ್ತಿ ನೀಡಿರದಿದ್ದಲ್ಲಿ ನಮ್ಮ ನಿರುಪದ್ರವಿ ಹಟ್ಟಿ ಎಂದಿನಂತೆ ನಾಗರಿಕ ಪ್ರಪಂಚದ ನೇಪಥ್ಯದಲ್ಲಿಯೇ ಇರುತ್ತಿತ್ತು. ಅಭಿನಂದಿಸುವ ಸಲುವಾಗಿ ಬರುತ್ತಿದ್ದವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಾ ಹೋಯಿತು. ಕ್ರಮೇಣ ವಿವಿಧ ಧರ್ಮಗಳ ಪ್ರಚಾರಕರೂ ಬರಲಾರಂಭಿಸಿದರು. ಇವತ್ತು ಕ್ರಿಶ್ಚಿಯನ್, ನಾಳೆ ಹಿಂದು ಮತ ಪ್ರಚಾರಕರು ನಾಡಿದ್ದು ಬೇರೊಂದು ಧರ್ಮದವರು... ಒಬ್ಬೊಬ್ಬರ ಹಿಂದೆ ದಂಡು ದಂಡು ಮಂದಿ. ಅವರ ಕೇಸರೀ ವರ್ಣದ ಭಾಷಣಗಳೋ... ಮಾಡಲಾರಂಭಿಸಿದ ಜುಲುಮಿಯೋ... ಒಂದೊಂದು ಹಟ್ಟಿ ಗುಡಿಸಲುಗಳ ತಡಿಕೆಗಳನ್ನು ಅಲಂಕರಿಸಿದ ಭಯಾನಕ ಭಿತ್ತಿಚಿತ್ರಗಳೋ... ಒಡ್ಡಲಾರಂಭಿಸಿದ ಆಮಿಷಗಳೋ... ಅವರೆಸೆವ ಕಿಲುಬು ಕಾಸಿಗೆ ಆಸೆಪಟ್ಟು ಕೇಸರಿವರ್ಣ, ಮತ್ತಿತರ ಧರ್ಮಗಳ ಧ್ವಜಗಳ ಹಿಂದೆ ಪಲಾಯನವಾಗಲಾರಂಭಿಸಿದ ನಮ್ಮ ಕಾಡುಗಳ ಯುವಕರೋ...



ಅವರ ಪೈಕಿ ಶ್ರೀ ಶ್ರೀ ವಿಬುಧಾನಂದಸ್ವಾಮೀಜಿ ಎಂಬುವವರು ತೀರಾ ಮುಖ್ಯ. ಧರ್ಮಲಾಂಛನಗಳ ಅಂಗಡಿಯೇ ಮನುಷ್ಯ ರೂಪದಲ್ಲಿರುವಂತೆ ಅವರು ಭಾಸವಾಗುತ್ತಿದ್ದರು. ಅವರ ಉಪನ್ಯಾಸಗಳ ಒಂದೊಂದು ಮಾತು ಹರಿತ ಚೂರಿಯೇ ಸರಿ. ಒಂದೊಂದು ವಾಕ್ಯವಂತೂ... ಭಗವ ಧ್ವಜದ ಘನತೆ ಗೌರವ ರಕ್ಷಿಸುವ ಸಲುವಾಗಿ... ಮ್ಲೇಚ್ಛರಿಂದ ಧರ್ಮವನ್ನು ಕಾಪಾಡುವ ಸಲುವಾಗಿ... ಮುಖ್ಯವಾಗಿ ಯುವಕರು ಪ್ರಾಣಾರ್ಪಣೆ ಮಾಡುವ ಸಲುವಾಗಿ... ಒಟ್ಟಿನಲ್ಲಿ ಅವರು ತಾಳೆಗರಿಯಿಂದೊಡಮೂಡಿ ಮಾತಾಡುತ್ತಿರುವಂತೆ ಭಾಸವಾಗುತ್ತಿತ್ತು. ಅವರ ಹಿಂಬಾಲಕರಂತೂ ಹಟ್ಟಿಯ ಓಣಿಗಳಲ್ಲಿ ಕೋರ್ಟ್ ಮಾರ್ಷಲ್ ನಡೆಸುತ್ತಿದ್ದುದಂತೂ ವಿಚಿತ್ರವೂ, ಭಯಾನಕವೂ, ಆವೇಶಪೂರ್ಣವೂ ಆಗಿರುತ್ತಿತ್ತು. ನಮ್ಮ ಹಟ್ಟಿಯ ಯುವಕನೋರ್ವ ಜಾತಿ ವಿನಾಶ ಕುರಿತು ಕೇಳಿದ ಪ್ರಶ್ನೆಗೆ ಸಮಾಧಾನ ನೀಡುವ ಬದಲು ದುರುಗುಟ್ಟಿ ನೋಡಿದ ಪರಿಣಾಮವಾಗಿ ಅವನು ಇಡೀ ವಾರ ದಿನ ಮಾನ ನಾನಾರೀತಿಯ ಹಿಂಸೆ ಅನುಭವಿಸಬೇಕಾಗಿ ಬಂತು. ದರೂರು ಚರ್ಚ್‌ನ ಫಾದರ್ ತಮ್ಮ ಸಂಗಡಿಗರೊಂದಿಗೂ ಹಟ್ಟಿಗೆ ಬಂದು ತಮ್ಮ ಧರ್ಮ ಕುರಿತು, ಮತಾಂತರ ಕುರಿತು ಮತ್ತು ತದನಂತರ ದೊರಕಲಿರುವ ಸೌಲಭ್ಯ ಕುರಿತು ಪ್ರಚಾರ ಮಾಡುತ್ತಿದ್ದುದೇ ಸ್ವಾಮೀಜಿಯವರ ಕೆಂಗಣ್ಣಿಗೆ ಕಾರಣವಾಗಿತ್ತು ಎಂಬುದರಲ್ಲಿ ಅನುಮಾನವಿರಲಿಲ್ಲ. ಸಾಮಾಜಿಕ ಸಮಾನತೆ ದೊರಕುವುದಾದಲ್ಲಿ ಯಾವ ಜಾತಿಯಾದರೇನು ? ಜಾತಿಗಳ ಸಾವಿರ ಸುತ್ತಿನ ಕೋಟೆಯೊಳಗೆ ಪ್ರತಿನಿತ್ಯ ಉಸಿರುಗಟ್ಟಿ ಸಾಯುತ್ತಿರುವ ಬದಲು... ಈ ರೀತಿ ನಿಮ್ನಕೋಮಿನವರಾದ ನಮ್ಮವರು ಯೋಚಿಸದೇ ಇರಲಿಲ್ಲ. ಒಂದೆರಡು ಕುಟುಂಬಗಳು ಒಂದು ಹೆಜ್ಜೆ ಮುಂದೆ ಹೋಗಿಬಿಟ್ಟವು. ಅವರಿಗೆ ನಕ್ಸಲೀಯನೆನ್ನಲಾದ ಯುವಕ ಬೆನ್ನೆಲುಬಾಗಿದ್ದನೆಂದು ತದನಂತರ ತಿಳಿಯಿತು.

ಅದಾದ ಎರಡು ದಿವಸಗಳನಂತರ ವಿಬುಧಾನಂದಸ್ವಾಮೀಜಿಯ ಹೆಣ ನಮ್ಮ ಹಟ್ಟಿಗೆ ಅಂಟಿಕೊಂಡಂತ ಬಿದ್ದಿತ್ತು. ಆ ದಿನದಿಂದ ಆರಂಭಗೊಂಡ... (ಕಣ್ಣಲ್ಲಿ ನೀರು ತಂದುಕೊಂಡನಲ್ಲದೆ ಅಂಗಿಯ ಚುಂಗಿನಿಂದ ಒರೆಸಿಕೊಂಡು ಮುಂದುವರಿಸಿದನು) ತದನಂತರ ನಮ್ಮ ಹಟ್ಟಿ ಒಂದು ಅರ್ಥದಲ್ಲಿ ರಣರಂಗವಾಗದೆ ಇರಲಿಲ್ಲ. ಸದರಿ ಕೊಲೆಯ ಆಪಾದನೆಯನ್ನು ನಕ್ಸಲೈಟ್‌ರು ತಾವು ಹೆಗಲಿಗೇರಿಸಿಕೊಂಡರೂ... ಕೇಸರಿವರ್ಣದ ಯುವಕರು... ಅವರೊಂದಿಗೆ ಆಡಳಿತಾರೂಢ ಪಕ್ಷದ ರಾಜಕಾರಣಿಗಳು... ನಮ್ಮವರ ಪರಿಸ್ಥಿತಿ ಅತ್ತ ದರಿ ಇತ್ತ ಪುಲಿ ಎಂಬಂತಾಗದೆ ಇರಲಿಲ್ಲ. ಅವರ ಧಮಕಿಗೆ ಹೆದರಿ ಅನೇಕರು ಹಟ್ಟಿಯಿಂದ ಓಡಿ ಹೋಗದೆ ಇರಲಿಲ್ಲ.

ಆ ದಿವಸದಿಂದ ನಮ್ಮ ಹಟ್ಟಿಯ ಹೆಸರು ನಾಡಿನಾದ್ಯಂತ... ನಮ್ಮೂರಿಗೆ ಏರ್ಪಟ್ಟ ಹಾದಿಗಳಂತೂ ಹತ್ತಾರು... ಧೂಳೆಬ್ಬಿಸುತ್ತ ಓಡಲಾರಂಭಿಸಿದ ವಾಹನಗಳು ನೂರಾರು... ಕೇಳಲಾರಂಭಿಸಿದ ಯಕ್ಷಪ್ರಶ್ನೆಗಳೋ ಸಾವಿರಾರು... ಓಬಳೇಸು ಗಂಟಲುಕಟ್ಟಿ ತಡವರಿಸಿದ. ಸಭೆ ಕರತಾಡನಗೈಯುವ ಬದಲು ಬಿಟ್ಟ ನಿಟ್ಟುಸಿರು ಚಂಡಮಾರುತದಂತೆ ಸುಳಿಯಿತು. ಸಭೆಯ ಒಂದು ಮೂಲೆಯಲ್ಲಿ ನಿಂತಿದ್ದ ಯುವಕರ ಬಾಯಿಗಳಿಂದ ಅಶ್ಲೀಲ ಪದಗಳು ಪುಂಖಾನುಪುಂಖವಾಗಿ ಉದುರಲಾರಂಭಿಸಿದ ಪರಿಣಾಮವಾಗಿ ಮಧ್ಯ ಪ್ರವೇಶಿಸಿದ ಕೆಲ ಕನಿಷ್ಠಬಿಲ್ಲೆಗಳಂತೂ...

* * *

ಎರಡು ದಿವಸಗಳ ನಂತರ ವೃತ್ತ ಪತ್ರಿಕೆಗಳು ಕೆಳ ಮೂಲೆಯಲ್ಲಿ ಪ್ರಕಟಿಸಿದ ಸುದ್ದಿ:

ನಗರ: ಅ:೨೫- ಸರ್ಕಾರಕ್ಕೂ ಮತ್ತು ಸಮಾಜಕ್ಕೂ ತಲೆ ನೋವಾಗಿದ್ದ ಕುಖ್ಯಾತ ನಕ್ಸಲೈಟ್ ಓಬುಳೇಶ್ ಹುಲಿಗುಡ್ಡ ಅರಣ್ಯ ಪ್ರದೇಶದಲ್ಲಿ ನಡೆದ ಗುಂಡಿನ ಚಕಮಕಿಯಲ್ಲಿ ಹತನಾಗಿದ್ದಾನೆಂದು ಪೊಲೀಸ್ ಮೂಲಗಳು ದೃಢಪಡಿಸಿವೆ. ಮೃತನ ಬಳಿ ಅಂಬೇಡ್ಕರ್, ಮಾವೋ, ಗಾಂಧೀಜಿಯವರ ಅಪಾಯಕಾರಿ ಸಾಹಿತ್ಯವನ್ನು ಪೊಲೀಸರು ವಶಪಡಿಸಿಕೊಂಡು ಗೃಹ ಮಂತ್ರಿಗಳ ಸುಪರ್ದಿಗೆ ಒಪ್ಪಿಸಿರುವರೆಂದು ನಂಬಲರ್ಹ ಮೂಲಗಳಿಂದ ತಿಳಿದುಬಂದಿದೆ.

ಕುಂ. ವೀರಭದ್ರಪ್ಪ
ಕೊಟ್ಟೂರು - ೫೮೩ ೧೩೪, ಬಳ್ಳಾರಿ ಜಿಲ್ಲೆ

ಪ್ರಪಂಚ ಇಂದು ಸಮಸ್ಯೆಗಳ ಮಹಾಪೂರವನ್ನೇ ಎದುರಿಸುತ್ತಿದೆ. ಜನಸಂಖ್ಯೆಯ ಹೆಚ್ಚಳ, ಸಂಪನ್ಮೂಲಗಳ ಕೊರತೆ, ತಾಪಮಾನದ ಏರಿಕೆ, ವಾಯುಗುಣದಲ್ಲಿ ತೀವ್ರ ಬದಲಾವಣೆಗಳು, ಆಹಾರೋತ್ಪಾದನೆಯಲ್ಲಿ ಇಳಿತ, ಸಾರ ಕಳೆದುಕೊಳ್ಳುತ್ತಿರುವ ನೆಲ, ಮಲಿನವಾಗುತ್ತಿರುವ ಜಲ, ಹಸಿವು, ಅನಾರೋಗ್ಯ... ಈ ಪಟ್ಟಿಗೆ ಕೊನೆಯೇ ಇಲ್ಲವೇನೋ ಎನ್ನುವಂತೆ ಭಾಸವಾಗುತ್ತಿದೆ. ಈ ಸಮಸ್ಯೆಗಳ ನಿವಾರಣೆಗೆ ದಾರಿಯೇ ಇಲ್ಲವೇ ಎಂಬ ಪ್ರಶ್ನೆಯನ್ನು ಆಡಳಿತದ ಚುಕ್ಕಾಣಿ ಹಿಡಿದವರನ್ನು, ವಿಜ್ಞಾನಿ, ತಂತ್ರಜ್ಞ, ವೈದ್ಯ, ವಿವಿಧ ಕ್ಷೇತ್ರಗಳ ಪರಿಣತರನ್ನು ಕೇಳಿನೋಡಿ. ನಿಮಗೆ ದೊರೆಯುವ ಉತ್ತರ ಹೆಚ್ಚು ಕಡಿಮೆ ಒಂದೇ! ''ಖಂಡಿತ ಸಾಧ್ಯವಿದೆ. ಸಮಸ್ಯೆಗಳನ್ನು ಬಗೆಹರಿಸುವ ಮಾರ್ಗಗಳು ನಮಗೆ ತಿಳಿದಿದೆ. ಅಗತ್ಯವಾದ ತಂತ್ರಜ್ಞಾನಗಳು ಲಭ್ಯವಿದೆ. ಆದರೆ ತೊಡಕಿರುವುದು ಪರಿಹಾರೋಪಾಯಗಳನ್ನು ಯಶಸ್ವಿಯಾಗಿ ಅಳವಡಿಸಿ ಜಾರಿಗೊಳಿಸುವಲ್ಲಿ. ಅದು ಸಾಧ್ಯವಾದರೆ ನಮ್ಮೆಲ್ಲ ಸಮಸ್ಯೆಗಳನ್ನು ನಾವು ಬಗೆಹರಿಸಿಕೊಳ್ಳಬಹುದು.'' ಈ ಉತ್ತರವನ್ನು ನೀಡುತ್ತಿರುವವರ ಮನಸ್ಸಿನಲ್ಲಿ ''ನಮ್ಮಲ್ಲಿರುವ ಪರಿಹಾರಗಳು ಮತ್ತು ಅವನ್ನು ಜಾರಿಗೆ ತರಲು ಪ್ರಯತ್ನಿಸುತ್ತಿರುವ ಮಾರ್ಗಗಳೇ ಸಮಸ್ಯೆಗಳು ಮತ್ತಷ್ಟು ಜಟಿಲವಾಗಿ, ಉಲ್ಬಣಗೊಳ್ಳಲು ಕಾರಣವಾಗುತ್ತಿರಬಹುದೇ'' ಎಂಬ ಅನುಮಾನ ಕ್ಷಣಕಾಲವೂ ಸುಳಿಯುವುದಿಲ್ಲ.

ಒಂದೆರಡು ಸರಳ ನಿದರ್ಶನಗಳನ್ನು ನೋಡಿ. ಅಭಿವೃದ್ಧಿಶೀಲ ದೇಶಗಳ ಜನರನ್ನು ಇಂದಿಗೂ ಕಾಡುತ್ತಿರುವ ಸಮಸ್ಯೆಯೆಂದರೆ ಹಸಿವು. ಆಫ್ರಿಕಾ ಖಂಡದ ೨೫ ದೇಶಗಳು, ಏಷ್ಯಾದ ೧೧, ಲ್ಯಾಟಿನ್ ಅಮೆರಿಕಾದ ೨ ಹಾಗೂ ಯೂರೋಪಿನ ಒಂದು ದೇಶದ ಒಟ್ಟು ೮೫ ಕೋಟಿ ಜನ ಹಸಿವೆಯಿಂದ ಕಂಗೆಟ್ಟಿದ್ದಾರೆ. ನಮ್ಮ ದೇಶವೂ ಈ ಪಟ್ಟಿಯಲ್ಲಿದೆ. ವಿಶ್ವ ಆಹಾರ ಮತ್ತು ಕೃಷಿ ಸಂಸ್ಥೆಯ ಅಭಿಪ್ರಾಯದಂತೆ ಈ ಸಮಸ್ಯೆಗೆ ಕಾರಣ ಆಹಾರದ ಅಭಾವವಲ್ಲ. ಆಹಾರವನ್ನು ಕೊಳ್ಳಲು ಬೇಕಾದ ಹಣದ ಕೊರತೆ. ಆರೋಗ್ಯದ ಕಥೆಯೂ ಇದೇ! ಅನಾರೋಗ್ಯದಿಂದ ನರಳುವವರ, ಚಿಕ್ಕ ವಯಸ್ಸಿನಲ್ಲೇ ಸಾಯುವವರ ಪರಿಸ್ಥಿತಿಗೆ ಕಾರಣ ಔಷಧಗಳ ಕೊರತೆಯಲ್ಲ. ಅಂತಹ




# ಪರಿಹಾರಗಳೇ ಸಮಸ್ಯೆಗಳಾದರೆ...?

> ''ಈ ಭೂಮಿಯ, ಪ್ರಕೃತಿಯ ಪ್ರತಿಯೊಂದು ವ್ಯವಸ್ಥೆಯಲ್ಲಿಯೂ ಅರೆಕೊರೆಗಳಿವೆ. ಈ ನ್ಯೂನತೆಗಳನ್ನು ಸರಿಪಡಿಸುವ ಸಾಮರ್ಥ್ಯವಿರುವುದು ವಿಜ್ಞಾನಕ್ಕೆ ಮಾತ್ರ. ವಿಜ್ಞಾನ - ವಿಜ್ಞಾನಿಗಳು ಪ್ರಕೃತಿ ವ್ಯವಸ್ಥೆಯಲ್ಲಿ ಮಧ್ಯಪ್ರವೇಶಿಸಿ ಈ ದೋಷಗಳನ್ನು ಸರಿಪಡಿಸಬೇಕು; ಪ್ರಕೃತಿಯನ್ನು ಪರಿಪೂರ್ಣಗೊಳಿಸಬೇಕು. ಈ ಪ್ರಯತ್ನಗಳು ಜಗತ್ತಿನ ಹಿತಕ್ಕಾಗಿಯೇ ನಡೆಯುವುದರಿಂದ ವಿಜ್ಞಾನಿಗಳ ಸ್ವಾತಂತ್ರ್ಯವನ್ನು ಯಾರೂ ಮೊಟಕುಗೊಳಿಸಬಾರದು.''

**ಡಾ|| ಎಚ್. ಆರ್. ಕೃಷ್ಣಮೂರ್ತಿ**

ಔಷಧಗಳನ್ನು ಕೊಳ್ಳಲು ಹಣವಿಲ್ಲದಿರುವುದು. ಹೀಗಾಗಿ ಹಸಿವು, ಅನಾರೋಗ್ಯ ಮೂಲಭೂತವಾಗಿ ಆರ್ಥಿಕ ಸಮಸ್ಯೆಗಳು! ಹಾಗಾದರೆ ಈ ಪರಿಸ್ಥಿತಿಗೆ ಪರಿಹಾರ? 'ಜನರ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸುವ, ಆದಾಯವನ್ನು ಹೆಚ್ಚಿಸುವ ಅಭಿವೃದ್ಧಿ ಕಾರ್ಯಗಳು, ಅದಕ್ಕಾಗಿ ಅಧಿಕ ಪ್ರಮಾಣದಲ್ಲಿ ಬಂಡವಾಳದ ಹೂಡಿಕೆ ಇತ್ಯಾದಿ. ನಮಗೆ ಇಂಥ ಬಂಡವಾಳ ಹೂಡಲು ಸಾಧ್ಯವಿಲ್ಲದಿದ್ದಲ್ಲಿ ವಿದೇಶಿ ಸಂಸ್ಥೆಗಳಿಗೆ ಬಂಡವಾಳ ಹೂಡಲು ಸರ್ವಸಕಲ ಸೌಲಭ್ಯಗಳನ್ನೂ ಕಲ್ಪಿಸಿಕೊಡಬೇಕು!' ಆದರೆ ಕೇವಲ ೫-೬ ದಶಕಗಳ ಹಿಂದೆ, ಹೆಚ್ಚಿನ ಹಣವಿಲ್ಲದೇ, ಹಸಿವೆಯಿಂದ ಕಂಗೆಟ್ಟು ಸಾಯದೇ, ಸಾಕಷ್ಟು ಆರೋಗ್ಯವಂತರಾಗಿ ಜನ ಬದುಕುತ್ತಿರಲಿಲ್ಲವೇ? ಉದಾಹರಣೆಗೆ, ಪಶ್ಚಿಮ ಆಫ್ರಿಕಾದ ಹಲವಾರು ದೇಶಗಳಲ್ಲಿ ಬದುಕಿ, ಅಲ್ಲಿನ ಜನಸಮುದಾಯವನ್ನು ಅಧ್ಯಯನ ಮಾಡಿದ ಫ್ರೆಂಚ್ ಸಮಾಜಶಾಸ್ತ್ರಜ್ಞ ಸೆರ್ಜ್ ಲ ತೋಚೆ ಆ ಸಮಾಜಗಳಲ್ಲಿ 'ಬಡತನ'ಕ್ಕೆ ಸಂವಾದಿಯಾದ ಪದವೇ ಇಲ್ಲ ಎನ್ನುತ್ತಾರೆ. ಬಡತನಕ್ಕೆ ತೀರಾ ಹತ್ತಿರವಾದ ಪದ 'ತಬ್ಬಲಿ' - ಸಾಮಾಜಿಕ ಬೆಂಬಲವನ್ನು ಕಳೆದುಕೊಂಡ ವ್ಯಕ್ತಿ. ಕುಟುಂಬ, ಸಮುದಾಯ ಮತ್ತು ಭೂಮಿ - ಈ ಮೂರೂ ಮೂಲಗಳ ಬೆಂಬಲವನ್ನು ಕಳೆದುಕೊಂಡಾತ ಮಾತ್ರ 'ತಬ್ಬಲಿ' ಯಾಗುತ್ತಾನೆ. ಆಗ ಮಾತ್ರ ಹಸಿವೆ, ಅನಾರೋಗ್ಯ ಸಮಸ್ಯೆಯಾಗುತ್ತವೆ. ಟಾಂಜಾನಿಯಾದ ಹಿಂದಿನ ಪ್ರಧಾನಿ ಜ್ಯೂಲಿಯಸ್ ನೈರೇರೆ ಹೇಳುತ್ತಿದ್ದ ಮಾತುಗಳನ್ನು ಇಲ್ಲಿ ನೆನೆಯಬೇಕು - ''ಆಫ್ರಿಕಾದ ಬಹುತೇಕ ಸಮಾಜಗಳಲ್ಲಿ ವೈಯಕ್ತಿಕ ಸಂಪತ್ತು, ಆದಾಯಗಳಿಲ್ಲವೆಂಬ ಕಾರಣದಿಂದ ಯಾರೂ ಸಾಯುವುದಿಲ್ಲ. ವ್ಯಕ್ತಿ ಸಮುದಾಯದ ಸದಸ್ಯನಾಗಿರುವುದರಿಂದ ಸಮುದಾಯದ ಸಂಪತ್ತಿನ ಮೇಲೆ ಆತ ಅವಲಂಬಿತನಾಗಬಹುದು.'' ಇಂಥ ಉದಾಹರಣೆಗಳು ಅಪರೂಪವಾಗುತ್ತಿದ್ದರೂ ಸಂಪೂರ್ಣವಾಗಿ ಮಾಯವಾಗಿಲ್ಲ. ನಮಗೆ ಸಮೀಪವಾಗಿ ಲಡಾಕ್‌ನಲ್ಲೇ ಇಂಥ ನಿದರ್ಶನ ದೊರೆಯುತ್ತದೆ. ಸಮಾಜದ ಎಲ್ಲ ಸಮಸ್ಯೆಗಳಿಗೂ ಅಭಿವೃದ್ಧಿ ಯೋಜನೆಗಳ ಮೂಲಕ ವೈಯಕ್ತಿಕ ಆದಾಯವನ್ನು ಹೆಚ್ಚಿಸುವುದೇ ಏಕೈಕ ಮಂತ್ರವೆಂಬ ಭ್ರಮೆಯಲ್ಲಿ ಕುಟುಂಬ, ಸಮುದಾಯದ ಅನೇಕ ಮೌಲ್ಯಗಳು ಇಂದು ನೆಲಕಚ್ಚಿವೆ. ಈ ಪರಿಸ್ಥಿತಿಯಲ್ಲಿ ಮೇಲೆ ಹೇಳಿದಂತಹ ನಿದರ್ಶನಗಳ ಪ್ರಸ್ತಾಪ ಬಂದಾಗ, ಅಭಿವೃದ್ಧಿಯ ವಕ್ತಾರರು, ಅಂತಹ ಕೋಟ್ಯಂತರ ಜನರನ್ನು 'ಅಭಿವೃದ್ಧಿಪೂರ್ವ ಸಮುದಾಯ' ಕ್ಕೆ (ಪ್ರಿ ಡೆವಲೆಪ್‌ಮೆಂಟ್ ಕಮ್ಯುನಿಟಿ) ಸೇರಿದವರೆಂದು ವರ್ಗೀಕರಿಸಿ ಅವರಿಂದ ಕಲಿಯುವಂತಹದು ಏನೂ ಇಲ್ಲವೆಂದು ಸಾಧಿಸುತ್ತಾರೆ.

'ದಿ ನ್ಯೂ ಅಟ್ಲಾಂಟಿಸ್' – ೧೫ನೆಯ ಶತಮಾನದ ಇಂಗ್ಲಿಷ್ ಚಿಂತಕ, ತತ್ವಜ್ಞಾನಿ ಫ್ರಾನ್ಸಿಸ್ ಬೇಕನ್‌ನ ಕೃತಿ. ಈ ಕೃತಿಯ ಕೇಂದ್ರಬಿಂದು 'ಹೌಸ್ ಆಫ್ ಸಾಲೋಮನ್ಸ್' ಎಂಬ ವಿಶೇಷ ತಂಡ. ಇದು ಪ್ರತಿಭಾನ್ವಿತ ಸಂಶೋಧಕರ, ಚಿಂತಕರ ಗುಂಪು. ''ಈ ಭೂಮಿಯ, ಪ್ರಕೃತಿಯ ಪ್ರತಿಯೊಂದು ವ್ಯವಸ್ಥೆಯಲ್ಲಿಯೂ ಅರೆಕೊರೆಗಳಿವೆ. ಈ ನ್ಯೂನತೆಗಳನ್ನು ಸರಿಪಡಿಸುವ ಸಾಮರ್ಥ್ಯವಿರುವುದು ವಿಜ್ಞಾನಕ್ಕೆ ಮಾತ್ರ. ವಿಜ್ಞಾನ - ವಿಜ್ಞಾನಿಗಳು ಪ್ರಕೃತಿ ವ್ಯವಸ್ಥೆಯಲ್ಲಿ ಮಧ್ಯಪ್ರವೇಶಿಸಿ ಈ ದೋಷಗಳನ್ನು ಸರಿಪಡಿಸಬೇಕು; ಪ್ರಕೃತಿಯನ್ನು ಪರಿಪೂರ್ಣಗೊಳಿಸಬೇಕು. ಈ ಪ್ರಯತ್ನಗಳು ಜಗತ್ತಿನ ಹಿತಕ್ಕಾಗಿಯೇ ನಡೆಯುವುದರಿಂದ ವಿಜ್ಞಾನಿಗಳ ಸ್ವಾತಂತ್ರ್ಯವನ್ನು ಯಾರೂ ಮೊಟಕುಗೊಳಿಸಬಾರದು.'' ಇದು 'ಹೌಸ್ ಆಫ್ ಸಾಲೋಮನ್ಸ್' ತಂಡದ ಖಚಿತ ನಿಲುವು. ಈ ನಿಲುವಿಗೆ ಬದ್ಧವಾಗಿ ತಂಡ ಸಾಧಿಸ ಹೊರಟ ಕನಸೆಂದರೆ ''ಜೀವನಾವಧಿಯನ್ನು ಹೆಚ್ಚಿಸಿ, ಜಾರುವ ಯೌವನಕ್ಕೆ ಕಡಿವಾಣ ಹಾಕಿ, ವೃದ್ಧಾಪ್ಯವನ್ನು ಹಿಮ್ಮೆಟ್ಟಿಸಿ, ವಾಯುಗುಣವನ್ನು

ನಮ್ಮ ಅನುಕೂಲಕ್ಕೆ ತಕ್ಕಂತೆ ಮಾರ್ಪಡಿಸಿ, ಹೊಸ ಪ್ರಭೇದವನ್ನು ಸೃಷ್ಟಿಸಿ, ಪ್ರಕೃತಿ – ಪ್ರಕೃತಿ ವ್ಯವಸ್ಥೆಗಳನ್ನು ಮೆಟ್ಟಿನಿಂತ, ನಿಸರ್ಗನಿರ್ಮಿತ ಪ್ರಪಂಚಕ್ಕಿಂತ ಎಲ್ಲ ದೃಷ್ಟಿಗಳಿಂದಲೂ ಉತ್ತಮವಾದ ಪ್ರಪಂಚವನ್ನು ವಿಜ್ಞಾನ ತಂತ್ರಜ್ಞಾನಗಳ ನೆರವಿನಿಂದ ಸೃಷ್ಟಿಸುವುದು.'' ಕಳೆದ ೫ ಶತಮಾನಗಳ ವಿಜ್ಞಾನದ ಇತಿಹಾಸವನ್ನು ಪರಿಗಣಿಸಿದಾಗ ಮನುಷ್ಯ ಹಿಡಿದಿರುವುದು ಇದೇ ಹಾದಿಯನ್ನೆಂಬುದು ಸ್ಪಷ್ಟವಾಗುತ್ತದೆ. ನಾವಿಂದು ಎದುರಿಸುತ್ತಿರುವ ಬಹುತೇಕ ಸಮಸ್ಯೆಗಳ ಮೂಲವಿರುವುದು ಈ ಧೋರಣೆಯಲ್ಲೇ!

ವೈಜ್ಞಾನಿಕ ಸಂಶೋಧನೆ, ಸ್ವತಂತ್ರವಾದ, ಪೂರ್ವಗ್ರಹಗಳಿಂದ ಮುಕ್ತವಾದ, ವಸ್ತುನಿಷ್ಠವಾದ ಸತ್ಯಾನ್ವೇಷಣೆಯ ಪ್ರಕ್ರಿಯೆ. ಸಮಸ್ಯೆಯೊಂದು ಸವಾಲಾಗಿ ನಿಂತಾಗ, ವೈಜ್ಞಾನಿಕ ಸಂಶೋಧನೆಗಳ/ ಚಿಂತನೆಗಳ ಮೂಲಕವಾಗಿ ವಿಜ್ಞಾನಿ ಅದಕ್ಕೆ ಪರಿಹಾರ ಕಂಡುಹಿಡಿಯುತ್ತಾನೆ. ವಿಜ್ಞಾನ ಸೂಚಿಸಿದ ಪರಿಹಾರವನ್ನು ಜಾರಿಗೆ ತರುವ ಜವಾಬ್ದಾರಿ ಸರ್ಕಾರದ್ದು. ಸರ್ಕಾರ ಸಮಸ್ಯೆಗೆ ಸಂಬಂಧಪಟ್ಟ ಎಲ್ಲ ಆಯಾಮಗಳನ್ನೂ ಪರೀಕ್ಷಿಸಿ, ವೈಜ್ಞಾನಿಕ ಪರಿಹಾರ ಎಷ್ಟರಮಟ್ಟಿಗೆ ಸೂಕ್ತ, ಸಾಮಾಜಿಕ ಪರಿಸ್ಥಿತಿಗಳೊಡನೆ ಅದು ಎಷ್ಟರಮಟ್ಟಿಗೆ ಹೊಂದಿಕೊಳ್ಳುತ್ತದೆ ಎಂಬುದನ್ನು ಪರಿಶೀಲಿಸಿ ನಿರ್ಧಾರ ಕೈಗೊಳ್ಳಬಹುದು. ಅದರ ಬದಲಿಗೆ ವಿಜ್ಞಾನ ತಂತ್ರಜ್ಞಾನಗಳು ಸೂಚಿಸುವ ಪರಿಹಾರಗಳನ್ನು ಸಾಮಾಜಿಕ ವಿವೇಚನೆಯಿಲ್ಲದೇ ಅಥವಾ ಮತ್ತಾವುದೋ ಒತ್ತಡಕ್ಕೆ ಈಡಾಗಿ ಅನುಷ್ಠಾನಕ್ಕೆ ತಂದಾಗ ಅದರಿಂದಾಗುವ ಅನಾಹುತಗಳೇ ಹೆಚ್ಚು. ನಮ್ಮ ದೇಶದ ಹಸಿರು ಕ್ರಾಂತಿ ಇದಕ್ಕೊಂದು ಉದಾಹರಣೆ.

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದಾಗ ನಮ್ಮ ಮುಂದಿದ್ದ ಅತಿದೊಡ್ಡ ಸಮಸ್ಯೆಯೆಂದರೆ ಆಹಾರೋತ್ಪಾದನೆಯದು. ಈ ಸಮಸ್ಯೆಗೆ ದೊರೆತ ಪರಿಹಾರ ಡಾ॥ ನಾರ್ಮನ್ ಬೋರ್ಲಾಗ್ ಅವರ ನೇತೃತ್ವದಲ್ಲಿ ಮೆಕ್ಸಿಕೋದ ಪ್ರಯೋಗಾಲಯಗಳಲ್ಲಿ, ರೈತರ ಗದ್ದೆಗಳಲ್ಲಿ ಅಭಿವೃದ್ಧಿಗೆಂದು ಬಳಕೆಯಾಗುತ್ತಿದ್ದ ಅಧಿಕ ಇಳುವರಿ ನೀಡುವ ಸುಧಾರಿತ ತಳಿಗಳ ಬಳಕೆ. ಆಹಾರದ ಕೊರತೆಯನ್ನು ನೀಗಲು ಕಾತುರವಾಗಿದ್ದ ಸರ್ಕಾರ ಈ ಪರಿಹಾರವನ್ನು ಒಪ್ಪಿ, ಅಧಿಕ ಇಳುವರಿಯ ಬೀಜ, ರಸಗೊಬ್ಬರ, ಕ್ರಿಮಿನಾಶಕಗಳು, ನೀರಾವರಿ ಸೌಲಭ್ಯಗಳನ್ನು ವ್ಯಾಪಕವಾಗಿ ಬಳಕೆಗೆ ತಂದಿತು. ಈ ಕ್ರಮಗಳಿಂದ ಆಹಾರೋತ್ಪಾದನೆಯ ಪ್ರಮಾಣ, ಕೃಷಿ ಭೂಮಿಯ ಉತ್ಪಾದಕತೆ ಹೆಚ್ಚಿದ್ದು ನಿಜ. ಆದರೆ ಇದೇ ಸಮಯದಲ್ಲಿ ಕೃಷಿಕರ ನಡುವಿನ ತಾರತಮ್ಯವೂ ಹೆಚ್ಚಿತು. ಹೆಚ್ಚಿನ ಸಂಪನ್ಮೂಲವಿದ್ದಂತಹ ಶ್ರೀಮಂತ ರೈತರು ಸಣ್ಣ ರೈತರಿಗಿಂತ ಹೆಚ್ಚು ಯಶಸ್ವಿಯಾಗಿ ಹಸಿರು ಕ್ರಾಂತಿಯ ಸೌಲಭ್ಯಗಳನ್ನು ಬಳಸಿಕೊಂಡರು. ಇದರಿಂದ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಬೀಜ, ರಸಗೊಬ್ಬರ, ನೀರಾವರಿ ಸೌಲಭ್ಯ ದೊರೆಯುವುದು ಮತ್ತಷ್ಟು ದುರ್ಲಭವಾಗಿ ಅವರ ಪರಿಸ್ಥಿತಿ ಮತ್ತಷ್ಟು ಕಷ್ಟಕರವಾಯಿತು. ಸಮಾಜವೊಂದರಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ ಅಸಮಾನತೆಗಳನ್ನು ಗಮನಿಸದೇ, ವಿವೇಚಿಸದೇ ಅಭಿವೃದ್ಧಿಯ ಹೆಸರಿನಲ್ಲಿ ಆಧುನಿಕ ತಂತ್ರಜ್ಞಾನವನ್ನಾಧರಿಸಿದ ಹೊಸ ಪರಿಪಾಠಗಳನ್ನು ಜಾರಿಗೆ ತಂದಾಗ ಎಂಥ ಪರಿಣಾಮಗಳು ಕಂಡುಬರುತ್ತವೆಯೆಂಬುದನ್ನು ಹಸಿರು ಕ್ರಾಂತಿಯ ಪರಿಣಾಮಗಳು ತೋರಿಸಿಕೊಟ್ಟವು. ನಮ್ಮ ಸಮಾಜದಲ್ಲಿದ್ದ ಅಸಮಾನತೆ, ಆಧುನಿಕ ತಂತ್ರಜ್ಞಾನದ ಸೌಲಭ್ಯಗಳು ಎಲ್ಲರ ಕೈಗೆ ಎಟುಕದಂತೆ ಮಾಡಿದವು. ಇದರ ಪರಿಣಾಮವಾಗಿ ಅಸಮಾನತೆ ಮತ್ತಷ್ಟು ಹೆಚ್ಚಿತು. ಹೊಸ ವಿಜ್ಞಾನ, ತಂತ್ರಜ್ಞಾನಗಳನ್ನು ಆಧರಿಸಿದ ಆಧುನೀಕರಣ ಪ್ರಕ್ರಿಯೆ ಸಂಘರ್ಷಗಳನ್ನು ಕಡಿಮೆ ಮಾಡುವುದರ ಬದಲಿಗೆ ಹೆಚ್ಚಿಸಿತು. ಹಸಿರು ಕ್ರಾಂತಿಯಾಗಿ ಐದು ದಶಕಗಳ ನಂತರ, ಇಂದು, ರಾಜಕೀಯ, ಸಾಮಾಜಿಕ, ಆರ್ಥಿಕ ಅಸಮಾನತೆಗಳೊಡನೆ ಜಾಗತೀಕರಣ ಹಾಗೂ ಲಾಭವೇ ಮುಖ್ಯ ಗುರಿಯಾಗಿರುವ ವಾಣಿಜ್ಯೋದ್ಯಮ ಶಕ್ತಿಗಳೂ ಸೇರಿ ಪರಿಸ್ಥಿತಿ ಮತ್ತಷ್ಟು ಬಿಗಡಾಯಿಸಿದೆ.

ನಮ್ಮ ಮುಂದಿರುವ ಸಮಸ್ಯೆಗಳಿಗೆ ವಿಜ್ಞಾನ-ತಂತ್ರಜ್ಞಾನಗಳು ಸೂಕ್ತ ಪರಿಹಾರಗಳನ್ನು ಒದಗಿಸಬಲ್ಲವೆಂಬುದು ವಿಜ್ಞಾನಿಗಳ ನಿಲುವಾದರೆ ಬಂಡವಾಳ ಮತ್ತು ಅಭಿವೃದ್ಧಿಗಳೇ ಎಲ್ಲ ಸಮಸ್ಯೆಗಳ ನಿವಾರಣೆಯ ಮೂಲಮಂತ್ರಗಳಾಗಬೇಕೆಂಬುದು ಅರ್ಥಶಾಸ್ತ್ರಜ್ಞರ ಅಭಿಮತ. ವರಮಾನದ ಏರಿಕೆ ಮತ್ತು ಬಂಡವಾಳದ ವೃದ್ಧಿ, ವಿಸ್ತರಣೆಗಳೇ ಅಭಿವೃದ್ಧಿಯ ಸೂಚಿಗಳೆಂದು ಒಪ್ಪಿಕೊಂಡಿರುವ ದೇಶಗಳು ನಿಸರ್ಗ



ಉತ್ತಮ ಪುಸ್ತಕ
ಇಂದಿಗೂ ಎಂದೆಂದಿಗೂ


ವಸಂತ ಪ್ರಕಾಶನ
email: vasantha_prakashana@rediffmail.com
ನಂ. ೩೬೦, ೧೦ನೇ 'ಬಿ' ಮುಖ್ಯ ರಸ್ತೆ, 3ನೇ ಬ್ಲಾಕ್ ಜಯನಗರ, ಬೆಂಗಳೂರು - ೫೬೦ ೦೧೧
ದೂರವಾಣಿ: 22443996

ಸಂಪನ್ಮೂಲಗಳ ವ್ಯಾಪಕ ಶೋಷಣೆಯ ಫಲವಾಗಿ ದೊರೆಯುವ ಪ್ರಾಪಂಚಿಕ ಆಸ್ತಿ ಹಾಗೂ ಸುಖ-ಸಂಪತ್ತುಗಳನ್ನೇ ಗುರಿಯಾಗಿಟ್ಟುಕೊಂಡು ಆ ದಿಕ್ಕಿನಲ್ಲಿ ಧಾವಿಸುತ್ತಿವೆ. ಈ ಪರಿಕಲ್ಪನೆಯ ಅಭಿವೃದ್ಧಿಯನ್ನೇ ನಮ್ಮೆಲ್ಲ ಶಿಕ್ಷಣ ವ್ಯವಸ್ಥೆ, ಪಠ್ಯವಸ್ತು, ವಿಶ್ವವಿದ್ಯಾಲಯಗಳಲ್ಲಿನ ಬೋಧನೆಗಳು ಪುರಸ್ಕರಿಸುತ್ತವೆ, ಪೋಷಿಸುತ್ತವೆ. ಆಧುನಿಕ ಅರ್ಥಶಾಸ್ತ್ರದ ಒಂದು ಸಮಸ್ಯೆಯೆಂದರೆ, ಭೂಮಿಯ ಮೇಲೆ ಮಾನವ ಕಾಣಿಸಿಕೊಂಡಾಗಿನಿಂದ ಇಲ್ಲಿಯವರೆಗಿನ ಅಭಿವೃದ್ಧಿಯ ಅನುಭವ, ಇತಿಹಾಸಗಳಲ್ಲಿ ಒಟ್ಟಾರೆ ದೃಷ್ಟಿಯಿಂದ ಅಲ್ಪಕಾಲಿಕವಾದ, ಪ್ರಾತಿನಿಧಿಕವಲ್ಲದ ಕೈಗಾರಿಕಾ ಕ್ರಾಂತಿಗೆ ಮಾತ್ರ ತನ್ನ ಗಮನವನ್ನು ಕೇಂದ್ರೀಕರಿಸಿರುವುದು. ಅರ್ಥಶಾಸ್ತ್ರಜ್ಞರು ಮತ್ತು ರಾಜಕೀಯ ಧುರೀಣರು ನಮ್ಮ ಇಂದಿನ ಸಮಸ್ಯೆಗಳಿಗೆ ಪರಿಹಾರವನ್ನು ಕೈಗಾರಿಕಾ ಕ್ರಾಂತಿಯ ನಂತರದ ಬೆಳವಣಿಗೆಗಳಲ್ಲೆ ಹುಡುಕುತ್ತಿದ್ದಾರೆ. ಕೈಗಾರಿಕಾ ಕ್ರಾಂತಿಯ ಹಿಂದಿನ ಅವಧಿಯಲ್ಲಿನ ಮನುಷ್ಯರ ಅನುಭವಗಳು, ಕೌಶಲಗಳು, ಪರಿಣತಿಗಳನ್ನು ಇಂದಿನ ಸಮಸ್ಯೆಯ ಪರಿಹಾರಕ್ಕಾಗಿ ಬಳಸಿಕೊಳ್ಳಬಹುದೆಂಬ ನಿಲುವನ್ನು ಆಧುನಿಕ ಅರ್ಥಶಾಸ್ತ್ರ ಸಾರಾಸಗಟಾಗಿ ನಿರಾಕರಿಸುತ್ತದೆ. ವಿಜ್ಞಾನ ಈ ದೃಷ್ಟಿಯಲ್ಲಿ ಸ್ವಲ್ಪ ಉತ್ತಮ !

ಹನಿಗವಿತೆ

ಭಾರೀ ಬಂಡೆಯ
ಮುಂಬರಿಸಲು
ಒತ್ತೆಯಾಗುವ ಕಿರುಗಲ್ಲು

— ಎಸ್. ಕುಮಾರಸ್ವಾಮಿ
ಪ್ರಾಚಾರ್ಯರು
ಸ.ಪ.ಪೂ. ಕಾಲೇಜು
ಮೇಗರವಳ್ಳಿ - ೫೭೭೪೧೮

ಅಭಿವೃದ್ಧಿಶೀಲ ದೇಶಗಳ ಆರ್ಥಿಕ ಅಭಿವೃದ್ಧಿಯ ಪಥವನ್ನು ನಿರ್ಧರಿಸುತ್ತಿರುವ ಆಧುನಿಕ ಅರ್ಥಶಾಸ್ತ್ರದ ಮತ್ತೊಂದು ಸಮಸ್ಯೆಯೆಂದರೆ ಅದರ ಪ್ರತ್ಯೇಕತೆ. ''ಆಧುನಿಕ ಅರ್ಥಶಾಸ್ತ್ರಜ್ಞರಿಗೆ ಆರ್ಥಿಕ ಪ್ರಕ್ರಿಯೆ, ಒಂದು ಮುಚ್ಚಿದ ವ್ಯವಸ್ಥೆಯಲ್ಲಿ, ಉತ್ಪಾದನೆ ಮತ್ತು ಬಳಕೆಗಳ ನಡುವೆ ಚಲಿಸುವ ಲೋಲಕದಂತೆ; ಆರ್ಥಿಕ ಪ್ರಕ್ರಿಯೆ ಮತ್ತು ಪರಿಸರ ವ್ಯವಸ್ಥೆಗಳ ನಡುವೆ ನಡೆಯುವ ನಿರಂತರ ಅಂತರಕ್ರಿಯೆ ಒಂದನ್ನೊಂದು ಪ್ರಭಾವಿಸುತ್ತದೆಂಬುದನ್ನು ಆಧುನಿಕ ಅರ್ಥಶಾಸ್ತ್ರಜ್ಞರು ಗಮನಿಸುವುದೇ ಇಲ್ಲ''ವೆಂಬುದು ವಾಂಡರ್‌ಬಿಲ್ಟ್ ವಿಶ್ವವಿದ್ಯಾಲಯದ ಭಿನ್ನಮತೀಯ ಅರ್ಥಶಾಸ್ತ್ರಜ್ಞ ಪ್ರೊ॥ ನಿಕೊಲಸ್ ಜಾರ್ಜ್ ಸ್ಕ್ಯೂ ರೋಚೆನ್ ಅವರ ಕಟು ಟೀಕೆ. ಅಭಿವೃದ್ಧಿಯನ್ನು ಸಂಪೂರ್ಣವಾಗಿ ಆರ್ಥಿಕ ಪ್ರಕ್ರಿಯೆಯೆಂದೇ ಪರಿಭಾವಿಸುವ ದೃಷ್ಟಿಯಿಂದ ಅದು ತರುವ ಸಾಮಾಜಿಕ, ಪಾರಿಸರಿಕ ಪರಿಣಾಮಗಳನ್ನು ಕಡೆಗಣಿಸುವ ಕಾಲವೊಂದಿತ್ತು. ೬೦-೭೦ರ ದಶಕಗಳಲ್ಲಿ ನಡೆದ ಅಭಿವೃದ್ಧಿ ಯೋಜನೆಗಳು ತಂದ ದುಷ್ಪರಿಣಾಮಗಳಿಗೆ ಈ ನಿಲುವೇ ಕಾರಣವಾಯಿತು. ಇಂದಿನ ಪರಿಸ್ಥಿತಿ ಸ್ವಲ್ಪ ಬದಲಾಗಿದೆಯೆಂಬುದು ನಿಜ. ಎಲ್ಲ ಅಭಿವೃದ್ಧಿ ಯೋಜನೆಗಳಿಗೆ ಒಪ್ಪಿಗೆ ನೀಡುವ ಮುನ್ನ ಅದು ತರುವ ಪಾರಿಸರಿಕ ಪರಿಣಾಮಗಳ ವಿಶ್ಲೇಷಣೆಯನ್ನು ಯೋಜನೆಯ ಅನುಷ್ಠಾನಕ್ಕೆ ಮುಂಚೆಯೇ ಕಡ್ಡಾಯವಾಗಿ ಮಾಡಬೇಕು. ಆದರೆ ಇಂತಹ ವಿಶ್ಲೇಷಣೆ ಕೇವಲ ಔಪಚಾರಿಕವಾಗಿರುವ, ಸರ್ಕಾರಕ್ಕೆ ನಿಷ್ಠರಾಗಿರುವ ವಿಜ್ಞಾನಿಗಳಿಂದ, ಸಂಸ್ಥೆಗಳಿಂದ ನಡೆದಿರುವ ನೂರಾರು ಉದಾಹರಣೆಗಳಿವೆ. ಸುಮಾರು ಎರಡು ಕೋಟಿ ಮೀನುಗಾರರ ಬದುಕನ್ನು ಮೂರಾಬಟ್ಟೆ ಮಾಡಿ, ಮನ್ನಾರ್ ಖಾರಿಯ ಜೈವಿಕ ವೈವಿಧ್ಯದ ಚಿತ್ರವನ್ನೇ ಬದಲಿಸಲಿರುವ ಸೇತುಸಮುದ್ರಂ ಯೋಜನೆಯ ಕೆಲಸ ಪರಿಸರ ಪರಿಣಾಮ ವಿಶ್ಲೇಷಣೆಯ ಸಂಪೂರ್ಣ ವರದಿ ಬರುವ ಮೊದಲೇ ಪ್ರಾರಂಭವಾದದ್ದು ಇತ್ತೀಚಿನ ಒಂದು ಉದಾಹರಣೆ ಅಷ್ಟೆ! ಸಮಸ್ಯೆಗಳ ಸರಮಾಲೆಯನ್ನೇ ತರುವ ಆರ್ಥಿಕ ಅಭಿವೃದ್ಧಿ ಹಾಗೂ ಪರಿಸರದ ಮೇಲೆ ಅದು ಬೀರುವ ಪರಿಣಾಮಗಳ ಸೆಣಸಾಟದಲ್ಲಿ ನ್ಯಾಯಾಲಯ ಮಧ್ಯಪ್ರವೇಶಿಸದ ಹೊರತು ಆರ್ಥಿಕ ಅಭಿವೃದ್ಧಿಯೇ ಮೇಲುಗೈ ಸಾಧಿಸುತ್ತದೆಂಬುದು ಕಟು ಸತ್ಯ.

ನಮ್ಮೆದುರು ಎರಡು ಪ್ರಪಂಚಗಳಿವೆ. ಮೊದಲನೆಯದು ವಿಕಾಸ ಕ್ರಿಯೆಯ ಮೂಲಕ ಬೆಳೆದುಬಂದಿರುವ, ಪ್ರಕೃತಿಯ ಮೇಲೆ ಆಧರಿತವಾಗಿರುವ 'ಸಹಜ ಪ್ರಪಂಚ'. ಎರಡನೆಯದು ಬೇಕನ್ ಪ್ರತಿಪಾದಿತವಾದ, ನಿಸರ್ಗವನ್ನು ಮೆಟ್ಟಿ ನಿಂತು ಅದರ ಮೇಲೆ ಸಾರ್ವಭೌಮತ್ವ ಸಾಧಿಸಲು ಪ್ರಯತ್ನಿಸುತ್ತಿರುವ 'ನವೀನ ಪ್ರಪಂಚ'. ಆರ್ಥಿಕ ಅಭಿವೃದ್ಧಿ ನಮ್ಮನ್ನು ಈ ನವೀನ ಪ್ರಪಂಚದ ಆರಾಧಕರನ್ನಾಗಿ, ದಾಸರನ್ನಾಗಿ ಮಾಡುತ್ತಿದೆ. ವಿಜ್ಞಾನ, ತಂತ್ರಜ್ಞಾನ ಮತ್ತು ಆರ್ಥಿಕ ಬಂಡವಾಳ ನಮ್ಮೆಲ್ಲ ಸಮಸ್ಯೆಗಳನ್ನೂ ಬಗೆಹರಿಸಬಲ್ಲದೆಂಬ ಭ್ರಮೆಯನ್ನು ಸೃಷ್ಟಿಸುವುದರಲ್ಲಿ ಯಶಸ್ವಿಯಾಗಿದೆ. ಅಭಿವೃದ್ಧಿಶೀಲ ದೇಶಗಳು ಈ ಹಾದಿಯಲ್ಲಿ ನಡೆದಷ್ಟೂ ಬಹುರಾಷ್ಟ್ರೀಯ ಕಂಪನಿಗಳ ಲಾಭ ಹೆಚ್ಚುತ್ತಿದೆ. ಆರ್ಥಿಕ ಅಭಿವೃದ್ಧಿ ಸೃಷ್ಟಿಸಿದ ಪ್ರತಿಯೊಂದು ಹೊಸ ಸಮಸ್ಯೆಯೂ ಶ್ರೀಮಂತ ರಾಷ್ಟ್ರಗಳಿಗೆ ತಮ್ಮ ವ್ಯಾಪಾರ, ವಹಿವಾಟುಗಳನ್ನು ವೃದ್ಧಿಸಿಕೊಳ್ಳುವ ಹೊಸ ಅವಕಾಶವಾಗುತ್ತಿದೆ. ಪ್ರಪಂಚ ಎದುರಿಸುತ್ತಿರುವ ಭೂಮಿಯ ತಾಪಮಾನದ ಹೆಚ್ಚಳ ಮತ್ತು ವಾಯುಗುಣ ಬದಲಾವಣೆ ಇದಕ್ಕೊಂದು ಉತ್ತಮ ನಿದರ್ಶನ.

ವಾಯುಮಂಡಲಕ್ಕೆ ಸೇರುತ್ತಿರುವ ಕಾರ್ಬನ್ ಡೈ ಆಕ್ಸೈಡ್ ಮತ್ತು ಇನ್ನಿತರ ಹಸಿರು ಮನೆ ಅನಿಲಗಳಿಂದ ಭೂಮಿಯ ತಾಪ ನಿಧಾನವಾಗಿ ಏರುತ್ತಿದೆ. ಈ ಸಮಸ್ಯೆಗಿರುವ ಪರಿಹಾರವೆಂದರೆ ಫಾಸಿಲ್ ಇಂಧನದ ಬಳಕೆಯನ್ನು ಕಡಿಮೆ ಮಾಡುವುದು, ಶಕ್ತಿಯ ಬಳಕೆಯ ದಕ್ಷತೆಯನ್ನು ಹೆಚ್ಚಿಸುವುದು. ಅಭಿವೃದ್ಧಿಶೀಲ ದೇಶಗಳಲ್ಲಿ ಈ ಕ್ರಮಗಳನ್ನು ಅಳವಡಿಸಲು ಬಂಡವಾಳ ಬೇಕು, ಆಧುನಿಕ ತಂತ್ರಜ್ಞಾನದ ನೆರವು ಬೇಕು. ೨೦೦೫ರಲ್ಲಿ ಜಾರಿಗೆ ಬಂದ ಕ್ಯೋಟೋ ಒಪ್ಪಂದದಂತೆ ಶ್ರೀಮಂತ ರಾಷ್ಟ್ರಗಳಿಂದ ಈ ನೆರವು ದೊರೆಯಬೇಕು. ಆದರೆ ಕಳೆದ ಮೂರು ವರ್ಷಗಳ ಅವಧಿಯಲ್ಲಿ ಇಂಥ ಯಾವ ನೆರವೂ ದೊರೆತಿಲ್ಲ. ಈಗಾಗಲೇ ಬೇರೆಯ ಉದ್ದೇಶಗಳಿಗಾಗಿ ದೊರೆಯುತ್ತಿರುವ ಹಣದ ಒಂದು ಭಾಗವನ್ನೇ ಹಸಿರು ಮನೆ ಅನಿಲಗಳ ನಿಯಂತ್ರಣಕ್ಕೆ ಬಳಸಿ ಎಂದು ಅಮೆರಿಕಾ ಸೂಚಿಸಿದೆ. ಇನ್ನು ತಂತ್ರಜ್ಞಾನದ ಮಾತು. ''ಇಂಥ ತಂತ್ರಜ್ಞಾನ ಲಭ್ಯವಿದ್ದರೂ ಅದರ ಮೇಲೆ ಸರ್ಕಾರದ ಹಿಡಿತವಿಲ್ಲ; ಹೀಗಾಗಿ ಮುಕ್ತ ಮಾರುಕಟ್ಟೆಯಲ್ಲಿರುವ ತಂತ್ರಜ್ಞಾನವನ್ನು ಅಲ್ಲಿಂದಲೇ ಹಣ ಕೊಟ್ಟು ಪಡೆದುಕೊಳ್ಳಿ'' ಎಂಬ ನಿಲುವು ವ್ಯಕ್ತವಾಗಿದೆ. ತಾಪಮಾನದ ಏರಿಕೆ ತರಲಿರುವ ಅಪಾಯಕಾರಿ ಪರಿಣಾಮಗಳಿಂದ ತಪ್ಪಿಸಿಕೊಳ್ಳಲು ಅಭಿವೃದ್ಧಿಶೀಲ ದೇಶಗಳು ತ್ವರಿತಗತಿಯಲ್ಲಿ ಕ್ರಮ ಕೈಗೊಳ್ಳಬೇಕು. ಆದರೆ ಈ ಸಮಸ್ಯೆಯ ತೀವ್ರತೆ, ಪರಿಹಾರವನ್ನು ಅಳವಡಿಸಬೇಕಾದ ತುರ್ತು ಅಗತ್ಯಗಳೇ ಶ್ರೀಮಂತ ರಾಷ್ಟ್ರಗಳ ಬಹುರಾಷ್ಟ್ರೀಯ ಕಂಪನಿಗಳಿಗೆ ಹೊಸದಾದ, ಅಪಾರ ಲಾಭ ತರುವ ವ್ಯಾಪಾರದ ಅವಕಾಶಗಳಾಗಿವೆ !

ತೈಲದ ಮೇಲಿನ ಅವಲಂಬನೆಯನ್ನು ಕಡಿಮೆ ಮಾಡಿ ಅದರ ಜಾಗದಲ್ಲಿ ಜೈವಿಕ ಮೂಲಗಳಿಂದ ಪಡೆದ ದ್ರವ ಇಂಧನಗಳನ್ನು ಬಳಸುವುದು ಜಾಗತಿಕ ತಾಪಮಾನದ ಏರಿಕೆಯ ನಿಯಂತ್ರಣಕ್ಕಿರುವ ಒಂದು ವೈಜ್ಞಾನಿಕ ಪರಿಹಾರ. ಎಥೆನಾಲ್ ಮತ್ತು ಬಯೋಡೀಸೆಲ್ ಇಂಥ ಎರಡು ಇಂಧನಗಳು. ಮೆಕ್ಕೆಜೋಳ ಮತ್ತು ಕಬ್ಬುಗಳಿಂದ ಎಥೆನಾಲ್‌ಅನ್ನು ಪಡೆಯಬಹುದು. ಪಾಮ್, ಸೋಯಾ, ರೇಪ್‌ಸೀಡ್‌ಗಳಿಂದ ಬಯೋಡೀಸೆಲ್‌ಅನ್ನು ಪಡೆಯಬಹುದು.

೨೦೦೬ರಲ್ಲಿ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ''ಅಮೆರಿಕಾ ಸಂಯುಕ್ತ ಸಂಸ್ಥಾನವನ್ನು ಎಥೆನಾಲ್ ಮತ್ತು ಬಯೋಡೀಸೆಲ್‌ಗಳನ್ನು ಉತ್ಪಾದಿಸುವ ಕೃಷಿ ಇಂಧನ ದೇಶವನ್ನಾಗಿ ಮಾಡಿ, ಅರಬ್ ರಾಷ್ಟ್ರಗಳ ಮೇಲೆ ತೈಲಕ್ಕಾಗಿ ಅವಲಂಬಿತವಾಗಿರುವುದನ್ನು ತಪ್ಪಿಸುತ್ತೇವೆಂದು'' ಘೋಷಿಸಿದರು. ಆದರೆ ಅಮೆರಿಕಾ ಉತ್ಪಾದಿಸುವ ಎಲ್ಲ ಕೃಷಿ ಇಂಧನವನ್ನು (ಮೆಕ್ಕೆಜೋಳ, ಕಬ್ಬು, ಪಾಮ್, ಸೋಯಾ, ರೇಪ್‌ಸೀಡ್ ಇತ್ಯಾದಿ) ಜೈವಿಕ ಇಂಧನದ ಉತ್ಪಾದನೆಗೆ ಬಳಸಿದರೂ ಆ ದೇಶದ ಶೇಕಡಾ ೧೨ರಷ್ಟು ಪೆಟ್ರೋಲ್ ಹಾಗೂ ಶೇಕಡಾ ೬ರಷ್ಟು ಡೀಸೆಲ್ ಬೇಡಿಕೆಯನ್ನು ಮಾತ್ರ ಅದು ಪೂರೈಸಬಲ್ಲದು. ಉಳಿದ ಭಾಗವನ್ನು ಉತ್ಪಾದಿಸಲು ಬೇರೆ ದೇಶಗಳಲ್ಲಿ ಬೆಳೆದ ಕೃಷಿ ಇಂಧನವನ್ನು ಆಮದು ಮಾಡಿಕೊಳ್ಳಬೇಕು. ಅಭಿವೃದ್ಧಿಶೀಲ ದೇಶಗಳಿಗೆ ಇದು ರಫ್ತನ್ನು ಹೆಚ್ಚಿಸುವ ಅವಕಾಶವಾದರೆ ಬೃಹತ್ ವ್ಯಾಪಾರೀ ಸಂಸ್ಥೆಗಳಿಗೆ ಹಣ ಮಾಡುವ ಸುವರ್ಣಾವಕಾಶ. ಅಲ್ಪ ಪ್ರಮಾಣದಲ್ಲಿ ಈ ಬೆಳೆಗಳನ್ನು ಬೆಳೆಯುತ್ತಿದ್ದ ಅಭಿವೃದ್ಧಿಶೀಲ ದೇಶಗಳಿಗೆ ಜೈವಿಕ ಇಂಧನದ ಅಮಲು ಹತ್ತಿತು. ಕೆಲವೇ ವರ್ಷಗಳ ಹಿಂದೆ ೧,೮೮,೦೦೦ ಹೆಕ್ಟೇರುಗಳಲ್ಲಿ ಎಣ್ಣೆಪಾಮ್‌ನ ನೆಡುತೋಪನ್ನು ಹೊಂದಿದ್ದ ಕೊಲಂಬಿಯಾ ಅದನ್ನು ೪,೮೮,೦೦೦ ಹೆಕ್ಟೇರುಗಳಿಗೆ ವಿಸ್ತರಿಸಿತು. ೫ ಲಕ್ಷ ಹೆಕ್ಟೇರುಗಳಲ್ಲಿ ಆಯಿಲ್ ಪಾಮ್ ಬೆಳೆಸಿದ್ದ ಇಂಡೋನೇಷ್ಯಾ ಇಂದು ೬೦ ಲಕ್ಷ ಹೆಕ್ಟೇರುಗಳಲ್ಲಿ ನೆಡುತೋಪನ್ನು ಬೆಳೆಸಿದೆ. ಬೋರ್ನಿಯೋದ ಅರಣ್ಯಗಳ ಹೃದಯ ಭಾಗದಲ್ಲಿ ೧೬ ಲಕ್ಷ ಹೆಕ್ಟೇರುಗಳಷ್ಟು ಮಳೆಯ ಅರಣ್ಯವನ್ನು ಈ ನೆಡುತೋಪಿಗಾಗಿ ಸವರಿಹಾಕಲಾಗುತ್ತಿದೆ. ಬ್ರೆಜಿಲ್‌ನ ಒಟ್ಟು ಕೃಷಿ ಭೂಮಿಯ ಶೇಕಡಾ ೨೧ರಷ್ಟರಲ್ಲಿ ಸೋಯಾ ಬೆಳೆಯಲಾಗುತ್ತಿದೆ. ಕೃಷಿ ಇಂಧನಕ್ಕಿರುವ ಬೇಡಿಕೆಯಿಂದ ಬ್ರೆಜಿಲ್ ಹೊಸತಾಗಿ ೬ ಕೋಟಿ ಹೆಕ್ಟೇರುಗಳಲ್ಲಿ ಸೋಯಾ ಬೆಳೆಸುವ ಸಿದ್ಧತೆಯಲ್ಲಿದೆ. ಭಾರತವೂ ಈ ಸ್ಪರ್ಧೆಯಲ್ಲಿ ಹಿಂದೆ ಬಿದ್ದಿಲ್ಲ. ಜೈವಿಕ ಇಂಧನಕ್ಕೆ ಸಂಬಂಧಪಟ್ಟ ಹಾಗೆ


ಗೋಪಾಲ ಮತ್ತು ಗೋವಳ
ರೂ. 25/-



MAHABHARATA (3 BOOKS)
Rs. 1100/-


ಶ್ರೀ ರಾಮಕೃಷ್ಣರು ಹೇಳಿದ ಕಥೆಗಳು
ರೂ. 25/-



DASHA AVATAR Rs. 80/-



TINKLE (DOUBLE DIGEST)
Rs. 75/-



TINKLE (DIGEST)
Rs. 40/-



RAMA CHARIT MANAS Rs. 250/-



GANESHA Rs. 35/-



MUMBAI DIARY 2009 Rs. 350/-



VALMIKI'S RAMAYANA Rs. 80/-




# INDIA BOOK HOUSE PVT LTD

Jayadeva Hostel Building, 5th Main Road, Gandhinagar, Bangalore - 560 009.
Tel : 22261305/22252385. Fax : 22258104. e-mail : ibhblr@vsnl.net / ibhbangalore@ibhworld.com

:: CORPORATE OFFICE ::
412, Tulsiani Chambers, 212, Nariman Point, Mumbai - 400 021 Tel : 22840626/78, Fax : 22835099

BRANCHES AT : AHMEDABAD, CHENNAI, CHANDIGARH, HYDERABAD, KOLKATTA, MUMBAI, NEW DELHI, PUNE, TRIVANDRUM

ಖಚಿತವಾದ ರಾಷ್ಟ್ರೀಯ ನೀತಿಯನ್ನು ರೂಪಿಸುವ ಮುಂಚೆಯೇ ೨೦೧೨ರ ವೇಳೆಗೆ ೧೪೦ ಲಕ್ಷ ಹೆಕ್ಟೇರುಗಳಲ್ಲಿ ಜೈವಿಕ ಇಂಧನದ ಮತ್ತೊಂದು ಮೂಲ ಸಾಮಗ್ರಿಯಾದ 'ಜತ್ರೋಪಾ' ಸಸ್ಯವನ್ನು ಬೆಳೆಸುವ ನಿರ್ಧಾರ ಮಾಡಿದೆ. ಆಫ್ರಿಕಾ, ಏಷ್ಯಾ, ಲ್ಯಾಟಿನ್ ಅಮೆರಿಕಾ ದೇಶಗಳಲ್ಲಿ ಹಬ್ಬುತ್ತಿರುವ ಜೈವಿಕ ಇಂಧನದ ಉತ್ಪಾದನೆಯ ಭರದಲ್ಲಿ ಈ ಎಲ್ಲ ದೇಶಗಳಲ್ಲಿ ವಸಾಹತುಶಾಹಿ ಪ್ಲಾಂಟೇಶನ್ ಆರ್ಥಿಕ ವ್ಯವಸ್ಥೆ ಹೊಸರೂಪದಲ್ಲಿ ನಿಧಾನವಾಗಿ ಹರಡುತ್ತಿದೆಯೆಂಬುದನ್ನು ಯಾರೂ ಹೆಚ್ಚಾಗಿ ಗಮನಿಸಿದಂತಿಲ್ಲ.

ಆಫ್ರಿಕಾ, ಲ್ಯಾಟಿನ್ ಅಮೆರಿಕ ಹಾಗೂ ಪೂರ್ವ ಏಷ್ಯಾ ದೇಶಗಳಿಗೆ ಸಂಬಂಧ ಪಟ್ಟಂತೆ ಬಹುರಾಷ್ಟ್ರೀಯ ಕಂಪನಿಗಳು ಸಿದ್ಧಪಡಿಸಿರುವ ಜೈವಿಕ ಇಂಧನದ ನೀಲಿನಕ್ಷೆಯನ್ನು ನೋಡಿ. ''ಇಡೀ ಜಗತ್ತಿಗೆ ಬೇಕಾದ ಜೈವಿಕ ಇಂಧನದ ಶೇಕಡಾ ೫೦ರಷ್ಟನ್ನು ಉತ್ಪಾದಿಸುವ ಸಾಮರ್ಥ್ಯ ಈ ದೇಶಗಳಿಗಿದೆ. ಇದು ಸಾಧ್ಯವಾಗ ಬೇಕಾದರೆ ಈ ದೇಶಗಳಲ್ಲಿನ ಅದಕ್ಷ ಹಾಗೂ ಕಡಿಮೆ ಇಳುವರಿಯ ಕೃಷಿ ನಿರ್ವಹಣಾ ವ್ಯವಸ್ಥೆಗಳನ್ನು ಕೈಬಿಟ್ಟು ಅದರ ಜಾಗದಲ್ಲಿ ಅತ್ಯುತ್ತಮ ತಂತ್ರಜ್ಞಾನ, ಕೃಷಿ ಪದ್ಧತಿಗಳು ಹಾಗೂ ಆಧುನಿಕ ನಿರ್ವಹಣಾ ವ್ಯವಸ್ಥೆಗಳನ್ನು ಜಾರಿಗೆ ತರಬೇಕು.'' ಸರಳವಾದ, ನೇರವಾದ ಭಾಷೆಯಲ್ಲಿ ಈ ಮಾತಿನ ಅರ್ಥ ಇಷ್ಟೇ! ''ಲಕ್ಷಾಂತರ ಹಕ್ಟೇರುಗಳಷ್ಟು ಭೂಮಿಯಲ್ಲಿ ಸ್ಥಳೀಯ ಕೃಷಿ ವ್ಯವಸ್ಥೆಗಳನ್ನು ಆಧರಿಸಿ ಬದುಕುತ್ತಿರುವ ಜನ ಹಾಗೂ ಅವರ ಕೃಷಿ ಪದ್ಧತಿಗಳನ್ನು ಪಕ್ಕಕ್ಕೆ ಸರಿಸಿ ಬೃಹತ್ ವಿಸ್ತೀರ್ಣದ ನೆಡುತೋಪುಗಳಿಗೆ ಜಾಗ ಮಾಡಿಕೊಡಬೇಕು. ಜೈವಿಕ ವೈವಿಧ್ಯ ಆಧರಿತ ಸ್ಥಳೀಯ ಬೆಳೆಗಳ ಬದಲಿಗೆ, ಜೀನೀಯ ಇಂಜಿನಿಯರಿಂಗ್‌ನಿಂದ ಪಡೆದ ಏಕ ಪ್ರಭೇದದ ಹೆಚ್ಚು ಇಳುವರಿಯ ಸಸ್ಯವನ್ನು ಬೆಳೆಸಬೇಕು. ಬೃಹತ್ ವಿಸ್ತೀರ್ಣದ ನೆಡುತೋಪುಗಳನ್ನು ನಿರ್ವಹಿಸುವ ಜವಾಬ್ದಾರಿಯನ್ನು ಅದರ ಅನುಭವವಿರುವ ಬಹುರಾಷ್ಟ್ರೀಯ ಕಂಪನಿಗಳಿಗೆ ನೀಡಬೇಕು. ಈ ದೇಶಗಳಲ್ಲಿರುವ ಲಕ್ಷಾಂತರ ಹೆಕ್ಟೇರುಗಳಷ್ಟು ವ್ಯರ್ಥ ಹಾಗೂ ಅಲ್ಪ ಪ್ರಯೋಜನದ ಭೂಮಿಯನ್ನು ನೆಡುತೋಪು ಬೆಳೆಸಲು ಬಳಸಬೇಕು. ಮೋನ್ಸಾಂಟೋ, ಕಾರ್ಗಿಲ್, ಸೈನ್ ಜೆಂಟಾ, ಟ್ರಾಯಿನ್, ಶೆಲ್, ಟೇಟ್ ಅಂಡ್ ಲೈಲ್ ಮುಂತಾದ ಕಂಪನಿಗಳು ಜೀನೀಯ ಇಂಜಿನಿಯರಿಂಗ್ ತಂತ್ರಜ್ಞಾನದ ಬಳಕೆಯಿಂದ ಈಗಾಗಲೇ ರೂಪಿಸಿರುವ ಜೈವಿಕ ಇಂಧನ ಸಸ್ಯಪ್ರಭೇದಗಳನ್ನು ವ್ಯಾಪಕವಾಗಿ ಬಳಸಬೇಕು.'' ಈ ನೀಲಿ ನಕ್ಷೆಯಲ್ಲಿನ ಅಂಶಗಳನ್ನು ವಿವೇಚನಾರಹಿತವಾಗಿ ಅದೇ ರೂಪದಲ್ಲಿ ಕಾರ್ಯಗತಗೊಳಿಸಿದರೆ ಮುಂದಿನ ೫ ವರ್ಷಗಳಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳ ೫೦ ಕೋಟಿ ಹೆಕ್ಟೇರ್‌ಗಳಷ್ಟು ಮಳೆನೀರು ಆಧರಿತ ಕೃಷಿ ಭೂಮಿ ಸಂಪೂರ್ಣವಾಗಿ ನಿರುಪಯುಕ್ತವಾಗುತ್ತದೆ. ಆಹಾರದ ತೀವ್ರ ಅಭಾವ ತಲೆದೋರಿ ಹಸಿವೆಯ ಹಾಹಾಕಾರ ಪ್ರಾರಂಭವಾಗುತ್ತದೆ. ಹೆಚ್ಚುಕಡಿಮೆ ನೀಲಿನಕ್ಷೆಯ ಹಾದಿಯನ್ನೇ ಹಿಡಿದಿರುವ ಬ್ರೆಜಿಲ್‌ನಲ್ಲಿ ೫೩ ಲಕ್ಷ ಜನ ತಮ್ಮ ನೆಲವನ್ನು ಈ ನೆಡುತೋಪುಗಳಿಗಾಗಿ ಈಗಾಗಲೇ ಕಳೆದುಕೊಂಡಿದ್ದಾರೆ. ೯,೪೧,೦೦೦ ಸಣ್ಣ ಹಾಗೂ ಮಧ್ಯಮ ಗಾತ್ರದ ಕೃಷಿ ಕೇಂದ್ರಗಳು ನಾಶವಾಗಿವೆ. ''ಒಂದು ದೊಡ್ಡ ಕಾರಿನ ಇಂಧನದ ಟ್ಯಾಂಕನ್ನು ಒಂದು ಬಾರಿಗೆ ಎಥೆನಾಲ್‌ನಿಂದ ತುಂಬಿಸಲು ಅಗತ್ಯವಾಗುವ ಧಾನ್ಯ ಒಬ್ಬ ವ್ಯಕ್ತಿಗೆ ಒಂದು ವರ್ಷಕ್ಕೆ ಸಾಕಾಗುತ್ತದೆ'' ಎನ್ನುವ ವಿಶ್ವ ರಾಷ್ಟ್ರ ಸಂಸ್ಥೆಯ ಆಹಾರ ತಜ್ಞ ಜೀನ್ ಜೈಗ್ಲರ್, ''ಹಸಿವೆಯಿಂದ ಜನ ಸಾಯುವುದನ್ನು ತಪ್ಪಿಸಲು ಮುಂದಿನ ೫ ವರ್ಷಗಳ ಕಾಲ ಜೈವಿಕ ಇಂಧನದ ಉತ್ಪಾದನೆಯ ಮೇಲೆ ನಿರ್ಬಂಧ ಹೇರಬೇಕೆಂದು'' ಒತ್ತಾಯಿಸಿದ್ದಾರೆ.

ಹಿಂದೆಂದೂ ಕಂಡು, ಕೇಳರಿಯದಂತಹ ಬೃಹತ್ ಪ್ರಮಾಣದಲ್ಲಿ ಜೈವಿಕ ಇಂಧನದ ಉತ್ಪಾದನೆಗೆ ನಡೆಯುತ್ತಿರುವ ಪ್ರಯತ್ನಗಳಿಂದ ವಾಯುಮಂಡಲಕ್ಕೆ ಸೇರುತ್ತಿರುವ ಇಂಗಾಲದ ಡೈ ಆಕ್ಸೈಡ್ ಪ್ರಮಾಣ ಕಡಿಮೆಯಾಗಲಿದೆಯೇ? ಈ ಪ್ರಶ್ನೆಯನ್ನು ಉತ್ತರಿಸಲು ಇಂದಿನ ಪರಿಸ್ಥಿತಿಯನ್ನೇ ನೋಡಬಹುದು. ವಾಯು ಮಂಡಲದಲ್ಲಿರುವ ಇಂಗಾಲದ ಡೈ ಆಕ್ಸೈಡ್‌ನ್ನು ಹೀರಿ ಕೊಳ್ಳುವುದರಲ್ಲಿ ಅರಣ್ಯಗಳ ಪಾತ್ರ ಬಹುದೊಡ್ಡದು. ಆದರೆ ನೆಡುತೋಪುಗಳನ್ನು ಬೆಳೆಸಲು ಈ ಅರಣ್ಯಗಳನ್ನೇ ನಾಶಮಾಡುತ್ತಿರುವುದರಿಂದ ಇಂಗಾಲದ ಡೈ ಆಕ್ಸೈಡ್ ಪ್ರಮಾಣ ಏರುತ್ತಿದೆ. ಅರಣ್ಯದ ಮರಗಿಡಗಳನ್ನು ಸಂಪೂರ್ಣವಾಗಿ ತೆಗೆದ ನಂತರ, ನೆಡುತೋಪಿಗೆ ಭೂಮಿ ಸಿದ್ಧಪಡಿಸುವ ಮುನ್ನ ಅಲ್ಲಿ ಉಳಿದ ಪೊದೆ, ಹೊದರು, ಬೇರುಗಳಿಗೆ ಬೆಂಕಿ ಹಾಕುವುದರಿಂದ ಅಗಾಧ ಪ್ರಮಾಣದಲ್ಲಿ ಇಂಗಾಲದ ಡೈ ಆಕ್ಸೈಡ್ ವಾಯುಮಂಡಲಕ್ಕೆ ಸೇರುತ್ತದೆ. ಸಂಚಾರ ಉದ್ದೇಶಕ್ಕಾಗಿ ಎಥೆನಾಲನ್ನು ಉತ್ಪಾದಿಸುವ ಪ್ರಯತ್ನದಲ್ಲಿ ಉಳಿದೆಲ್ಲ ದೇಶಗಳಿಗಿಂತ ಮುಂದಿರುವ ಬ್ರೆಜಿಲನ್ನು ನೋಡಿ. ಅಲ್ಲಿ ಉತ್ಪತ್ತಿಯಾಗುವ ಹಸಿರುಮನೆ ಅನಿಲಗಳಲ್ಲಿ ಶೇಕಡಾ ೮೦ ಭಾಗ ಇಂದು ಬರುತ್ತಿರುವುದು ಸೋಯಾ ಮತ್ತು ಕಬ್ಬುಗಳನ್ನು ಬೆಳೆಸಲು ಅರಣ್ಯಗಳನ್ನು ನೆಲಸಮ ಮಾಡಿ, ನೆಡುತೋಪುಗಳಿಗೆ ಭೂಮಿಯನ್ನು ಸಿದ್ಧಪಡಿಸುತ್ತಿರುವ ಕೆಲಸಗಳಿಂದ. ಒಂದು ಟನ್ ಎಥೆನಾಲನ್ನು ಉತ್ಪಾದಿಸಲು, ನೆಡುತೋಪನ್ನು ಬೆಳೆಸುವುದರಿಂದ ಹಿಡಿದು ಎಥೆನಾಲಿನ ಉತ್ಪಾದನೆಯವರೆಗೆ ವಿವಿಧ ಹಂತಗಳಲ್ಲಿ ಬಿಡುಗಡೆಯಾಗುವ ಇಂಗಾಲದ ಡೈ ಆಕ್ಸೈಡ್‌ನ್ನು ಪರಿಗಣಿಸಿದರೆ, ಅದು ಒಂದು ಟನ್ ಫಾಸಿಲ್ ಇಂಧನವನ್ನು ಉರಿಸಿದಾಗ ಹೊರಬರುವ ಇಂಗಾಲದ ಡೈ ಆಕ್ಸೈಡ್ ಪ್ರಮಾಣದ ೨ ರಿಂದ ೮ ಪಟ್ಟು ಹೆಚ್ಚಿರುತ್ತದೆ. ಅಂದರೆ ಪರಿಹಾರವೇ ಹೆಚ್ಚಿನ ತೊಡಕುಗಳನ್ನು ಸೃಷ್ಟಿಸುತ್ತದೆ!

ಪ್ರಕೃತಿಯ ರಹಸ್ಯಗಳನ್ನು ವಸ್ತುನಿಷ್ಠವಾಗಿ, ನಿಷ್ಠುರವಾಗಿ ಅನ್ವೇಷಿಸುವ ಪ್ರಾಮಾಣಿಕ ಶಕ್ತಿಯಾಗಿ ವಿಜ್ಞಾನ ತನ್ನ ಹಿಂದಿನ ಅಂತಃಸತ್ವವನ್ನು ಇಂದು ಉಳಿಸಿಕೊಂಡಿಲ್ಲವೆಂದರೆ ತಪ್ಪಾಗಲಾರದು. ವಿಜ್ಞಾನ ತಂತ್ರಜ್ಞಾನ ಕ್ಷೇತ್ರಗಳಲ್ಲಿ ಇಂದು ಬೃಹತ್ ಬಂಡವಾಳವಿದೆ. ಬಂಡವಾಳಶಾಹಿ ಆಸಕ್ತಿಗಳಿವೆ. ಲಾಭ-ನಷ್ಟಗಳ ಕಟ್ಟುನಿಟ್ಟಿನ ಲೆಕ್ಕಾಚಾರವಿದೆ. ಬಹುರಾಷ್ಟ್ರೀಯ ಉದ್ಯಮ ಸಂಸ್ಥೆಗಳ ಸಂಶೋಧನಾ ವಿಭಾಗವು, ಸಂಸ್ಥೆಯ ಆರ್ಥಿಕ ಹಿತಾಸಕ್ತಿಗಳಿಗೆ ಬದ್ಧವಾಗಿ ಅದನ್ನು ಬೆಳೆಸುವಂತಹ ಜ್ಞಾನವನ್ನು ಮಾತ್ರ ಸೃಷ್ಟಿಸುತ್ತದೆ. ಅಂಥ ಜ್ಞಾನವೇ ಪರಮ ಸತ್ಯವೆಂಬ ಭ್ರಮೆಯನ್ನು ಸೃಷ್ಟಿಸುವ ಪ್ರಚಾರ ತಂತ್ರಗಳ ಮೂಲಕ ಸರ್ಕಾರಗಳ ನೀತಿ - ನಿಲುವುಗಳನ್ನು ಈ ಸಂಸ್ಥೆಗಳು ಪ್ರಭಾವಿಸುತ್ತಿರುವ ಅನೇಕ ನಿದರ್ಶನಗಳನ್ನು ನಾವಿಂದು ನೋಡುತ್ತಿದ್ದೇವೆ. ವಿಜ್ಞಾನ-ತಂತ್ರಜ್ಞಾನಗಳ ಮೂಲಭೂತ ಉದ್ದೇಶ ಎಷ್ಟೇ ಒಳ್ಳೆಯದಿರಲಿ, ಉದ್ಯಮಪತಿಗಳು ಹಾಗೂ ರಾಜಕೀಯ ಶಕ್ತಿಗಳ ಹಿಡಿತದಲ್ಲಿ ಅವು ಹೇಗೆ ಕೈಗೊಂಬೆಗಳಾಗುತ್ತವೆ ಎಂಬುದಕ್ಕೆ ಕೃಷಿ ಅರ್ಥಶಾಸ್ತ್ರಜ್ಞ ಪ್ರೊ|| ಫಿಲಿಪ್ ರೌಸ್ ಉತ್ತಮ ಉದಾಹರಣೆಯೊಂದನ್ನು ನೀಡುತ್ತಾರೆ: ''ಕೃಷಿಯ ದೃಷ್ಟಿಯಿಂದ ನಿರುಪಯುಕ್ತವಾಗುತ್ತಿರುವ ಭೂಮಿಯ ಪ್ರಮಾಣ ಹೆಚ್ಚುತ್ತಿದೆ ಎಂಬ ಮಾತನ್ನು ನಾವು ಆಗಾಗ ಕೇಳುತ್ತಿರುತ್ತೇವೆ. ಏನು ಈ ಮಾತಿನ ಅರ್ಥ? ಭೂಮಿ ಎಷ್ಟೇ ಹಾಳಾಗಿರಲಿ, ವಿಜ್ಞಾನ, ತಂತ್ರಜ್ಞಾನ ಮತ್ತು ಬಂಡವಾಳಗಳ ನೆರವಿನಿಂದ ಅದನ್ನು ಫಲವತ್ತಾಗಿ ಮಾಡಲು ಸಾಧ್ಯ. ಆದರೆ ಮಾರುಕಟ್ಟೆಯ ದೃಷ್ಟಿಯಿಂದ, ಲಾಭ-ನಷ್ಟಗಳ ದೃಷ್ಟಿಯಿಂದ ಅಂತಹ ಪ್ರಯತ್ನಕ್ಕೆ ಪ್ರೋತ್ಸಾಹ ದೊರೆಯುವುದಿಲ್ಲ. ಅದರ ಬದಲಿಗೆ ಅಂತಹ ಭೂಮಿಯನ್ನು ಕೈಗಾರಿಕೆಗಳ ಬಳಕೆಗೆ ಮೀಸಲಿಡುವುದೇ ಸೂಕ್ತ ಎಂಬಂತಹ ವಾತಾವರಣವನ್ನು ಎಲ್ಲ ಆಸಕ್ತ ಪಕ್ಷಗಳೂ ಒಟ್ಟಿಗೆ ಸೇರಿ ನಿರ್ಮಿಸುತ್ತವೆ. ರೈತರ ಬದುಕು ನೆಮ್ಮದಿಗಳು ಇಲ್ಲಿ ಮುಖ್ಯವಾಗುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಭೂಮಿಯ ಒಡೆಯರಾದ ರೈತರನ್ನು ಬಿಟ್ಟು ಉಳಿದವರೆಲ್ಲರಿಗೂ ಲಾಭವಾಗುತ್ತದೆ.'' ಈ ರೀತಿಯ ಸನ್ನಿವೇಶದಲ್ಲಿ ವಿಜ್ಞಾನ, ತಂತ್ರಜ್ಞಾನಗಳು ನಿಸ್ಸಹಾಯಕವಾಗುತ್ತವೆ.




ನಾವು ಈ ಭೂಮಿಯ ಮೇಲೆ ಮತ್ತಷ್ಟು ಕಾಲ ನೆಮ್ಮದಿಯಿಂದ ಬದುಕಬೇಕಾದರೆ ನಮ್ಮ ಜೀವನಶೈಲಿ, ದೃಷ್ಟಿಕೋನಗಳಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿ ಕೊಳ್ಳಬೇಕಾದುದು ಅಗತ್ಯ. ಆರ್ಥಿಕ ಪ್ರಗತಿಯನ್ನು ನಿಲ್ಲಿಸಿ, ಹಿಮ್ಮುಖವಾಗಿಸಿ, ಅಭಿವೃದ್ಧಿಪೂರ್ವ ಸಮುದಾಯದ ಜೀವನಶೈಲಿಗೆ ಹಿಂದಿರುಗುವುದು ಸಾಧ್ಯವಿಲ್ಲ; ಅದು ಅಗತ್ಯವೂ ಅಲ್ಲ. ಆದರೆ ಅಂತಹ ಸಮುದಾಯಗಳ ಜೀವನ ಕೌಶಲವನ್ನು, ಪ್ರಕೃತಿಯೊಂದಿಗೆ ಹೊಂದಿ ಬಾಳುವ ದೃಷ್ಟಿ – ಧೋರಣೆಗಳನ್ನು ಇಂದಿನ ಜೀವನದಲ್ಲಿ ನಾವು ಅತಿ ತುರ್ತಾಗಿ ಅಳವಡಿಸಿಕೊಳ್ಳಬೇಕು.

ಡಾ|| ಎಚ್. ಆರ್. ಕೃಷ್ಣಮೂರ್ತಿ
೧೫೬, 'ಅಭಿಲಾಷಾ', ೪ನೇ ಮುಖ್ಯರಸ್ತೆ, ಪದ್ಮನಾಭನಗರ,
ಬೆಂಗಳೂರು - ೫೬೦ ೦೭೦

# ಮಾರ್ಕ್ಸ್‌ವಾದ ಇವರ ಉಸಿರು

## ರಂಗನಾಯಕಮ್ಮ



### ಸಂದರ್ಶನ

ಹದಿಮೂರು ವರ್ಷಗಳ ಹಿಂದಿನ ಮಾತು. ಹೈದರಾಬಾದ್‌ನಲ್ಲಿ 'ವಿಮೆನ್ಸ್ ರೈಟಿಂಗ್ ಇನ್ ಇಂಡಿಯ' ಪುಸ್ತಕದ ಎರಡನೇ ಸಂಪುಟದ ಬಿಡುಗಡೆಯ ಸಂದರ್ಭದಲ್ಲಿ ಹೈದರಾಬಾದ್‌ನ ಮಹಿಳಾ ಸಂಘಗಳು ಸ್ತ್ರೀವಾದಿ ಬರಹವನ್ನು ಕುರಿತ ಕಾರ್ಯಾಗಾರವನ್ನು ವ್ಯವಸ್ಥೆಗೊಳಿಸಿದ್ದು, ಆ ಕಾರ್ಯಕ್ರಮದಲ್ಲಿ ಭಾಗವಹಿಸಲು ನಾನು ಮತ್ತು ಗೆಳತಿ ಸುಮಿತ್ರಾಬಾಯಿ ಆಹ್ವಾನಿತರಾಗಿದ್ದೆವು. ಈ ಕಾರ್ಯಕ್ರಮದಲ್ಲಿ ಭಾಗವಹಿಸಲು ನಮ್ಮಿಬ್ಬರಿಗೂ ಮತ್ತೊಂದು ಆಕರ್ಷಣೆಯಿತ್ತು. ಅದೆಂದರೆ, ತೆಲುಗು ಲೇಖಕಿ ರಂಗನಾಯಕಮ್ಮನವರನ್ನು ಭೇಟಿಯಾಗುವುದು. ಆ ವೇಳೆಗಾಗಲೇ ಕನ್ನಡದಲ್ಲಿ ಹೆಚ್.ವಿ. ಸಾವಿತ್ರಮ್ಮನವರ 'ಸೀತೆ, ರಾಮ, ರಾವಣ' ಮತ್ತು 'ವಿಮುಕ್ತೆ'ಯ ಕುರಿತು ಚರ್ಚೆ ನಡೆಯುತ್ತಿದ್ದಂತೆಯೇ ತೆಲುಗಿನಲ್ಲಿ ರಂಗನಾಯಕಮ್ಮನವರ 'ರಾಮಾಯಣ ವಿಷವೃಕ್ಷಮು' ವ್ಯಾಪಕವಾದ ಚರ್ಚೆಗೊಳಗಾಗಿತ್ತು. ಅಲ್ಲದೆ, ರಂಗನಾಯಕಮ್ಮನವರ ಬರಹಗಳನ್ನು ಕುರಿತ ವಿಮರ್ಶೆಯ ಕೆಲವು ಲೇಖನಗಳನ್ನು ಆ ವೇಳೆಗಾಗಲೇ 'ಅಚಲ' ಪತ್ರಿಕೆಯಲ್ಲಿ ಪ್ರಕಟಿಸಿದ್ದೆವು. ತಮ್ಮ ವಿಶಿಷ್ಟ ಹಾಗೂ ಕ್ರಾಂತಿಕಾರಕ ವ್ಯಕ್ತಿತ್ವದಿಂದ ಪ್ರಸಿದ್ಧರಾಗಿದ್ದ, ಹೈದರಾಬಾದ್‌ನಲ್ಲಿ ವಾಸವಾಗಿದ್ದ ಶ್ರೀಮತಿ ರಂಗನಾಯಕಮ್ಮನವರನ್ನು ಭೇಟಿ ಮಾಡಿ ಸಂದರ್ಶಿಸಬೇಕೆಂಬ ಹಂಬಲ ನಮ್ಮಲ್ಲಿ ಮೂಡಿತ್ತು. ಅಂತಹದೊಂದು ಅವಕಾಶಕ್ಕಾಗಿ ಎದುರುನೋಡುತ್ತಿದ್ದ ನಾವು ಈ ಸಂದರ್ಭವನ್ನು ಬಳಸಿಕೊಂಡು ರಂಗನಾಯಕಮ್ಮನವರನ್ನು ಭೇಟಿಯಾಗಬೇಕೆಂದು ಮುಂಚಿತವಾಗಿಯೇ ಹೈದರಾಬಾದ್ ತಲುಪಿ ಆ ಕಾರ್ಯಕ್ರಮದ ವ್ಯವಸ್ಥಾಪಕರನ್ನು ರಂಗನಾಯಕಮ್ಮನವರ ವಿಳಾಸ ಬೇಕೆಂದು ಕೇಳಿದೆವು. ಅದೇಕೋ ಅಲ್ಲಿ ಯಾರಿಗೂ ನಾವು ರಂಗನಾಯಕಮ್ಮನವರನ್ನು ಭೇಟಿಯಾಗಲು ಹೋಗುವುದು ಅಷ್ಟೊಂದು ಇಷ್ಟವಾಗಲಿಲ್ಲ. ಆದ್ದರಿಂದ ಏನೇನೋ ಸಬೂಬು ಹೇಳಿದರು. ರಂಗನಾಯಕಮ್ಮನವರಿಗೆ ತೆಲುಗು ಬಿಟ್ಟು ಬೇರೆ ಭಾಷೆ ಮಾತನಾಡಲು ಬರುವುದಿಲ್ಲ, ಅವರು ಖಡಾಖಂಡಿತವಾಗಿ ಮಾತನಾಡುವ ಹೆಂಗಸು, ಬಹಳ ಜಿಗುಟಾದ ನಿಯಮಗಳನ್ನು ಹಾಕಿಕೊಂಡು ಹೊರಗಿನವರಿಗೆ ಬಹಳ ಮುಜುಗರ ಉಂಟುಮಾಡುತ್ತಾರೆ, ಹೀಗೆ ಪಟ್ಟಿ ಬೆಳೆದಿತ್ತು. ಅಷ್ಟೇ ಅಲ್ಲದೆ, 'ವಿಮೆನ್ಸ್ ರೈಟಿಂಗ್ ಇನ್ ಇಂಡಿಯಾ' ಪುಸ್ತಕಕ್ಕೆ ಅವರ ಬರಹವನ್ನು ಸೇರಿಸಿಕೊಳ್ಳಲು ಕೊಟ್ಟಿರಲಿಲ್ಲ ಎಂಬ ಆಕ್ಷೇಪಣೆಯೂ ಕೇಳಿಬಂತು. ಅಂತೂ ರಂಗನಾಯಕಮ್ಮನವರನ್ನು ಭೇಟಿಯಾಗದೆ ಹಿಂತಿರುಗಿದ್ದರಿಂದ ಬಹಳ ನಿರಾಸೆಯಾಯಿತಾದರೂ, ಅವರನ್ನು ನೋಡಿಯೇ ತೀರಬೇಕೆಂಬ ಆಕಾಂಕ್ಷೆ ಇದರಿಂದ ಮತ್ತಷ್ಟು ತೀವ್ರವಾಯಿತು.

ಈ ಘಟನೆ ನಡೆದ ಮೂರು ವರ್ಷಗಳ ನಂತರ ಒಮ್ಮೆ ರಜೆಗೆಂದು ಹೈದರಾಬಾದ್‌ಗೆ ಹೋಗಿದ್ದಾಗ, ಹೈದರಾಬಾದ್ ವಿಶ್ವವಿದ್ಯಾಲಯದ ಪ್ರೊಫೆಸರ್‌ರೊಬ್ಬರ ನೆರವಿನಿಂದ ಅಂತೂ ರಂಗನಾಯಕಮ್ಮನವರನ್ನು ಭೇಟಿಯಾಗುವುದು ಸಾಧ್ಯವಾಯಿತು. ಫೋನಿನಲ್ಲಿಯೇ ನಮ್ಮನ್ನು ಪರಿಚಯಿಸಿಕೊಂಡು ಅವರನ್ನು ಭೇಟಿಯಾಗಲು ಬರುವುದಾಗಿ ತಿಳಿಸಿದಾಗ ತಕ್ಷಣವೇ ಅನುಮತಿ ನೀಡಿದ್ದಲ್ಲದೆ, ಅವರ ಮನೆಯಲ್ಲಿ ಊಟಕ್ಕೂ ಆಹ್ವಾನವಿತ್ತರು. ನಾನು, ಮಗಳು ಮೈತ್ರಿ ಮತ್ತು ಜಿ.ಆರ್. – ಮೂವರೂ ನಗರದಿಂದ ದೂರ ಇರುವ ಅವರ ಮನೆಗೆ ಹೋಗಿದ್ದೆವು. ಅವರನ್ನು ಸಂದರ್ಶಿಸ ಬೇಕೆಂಬ ನಮ್ಮ ಮನದ ಇಂಗಿತವನ್ನು ವ್ಯಕ್ತಪಡಿಸಿದಾಗ, ಅದಕ್ಕೆ ಮಾನಸಿಕವಾಗಿ ಪೂರ್ವಸಿದ್ಧತೆ ಮಾಡಿಕೊಂಡಿರದ ಅವರು ಪ್ರಶ್ನಾವಳಿ ಕೊಟ್ಟರೆ ಉತ್ತರಿಸುವುದಾಗಿ ಹೇಳಿದರು. ಸಂದರ್ಶನ ಮಾಡಿಕೊಳ್ಳದಿದ್ದರೂ, ದೀರ್ಘವಾಗಿ ಅವರೊಡನೆ ಮಾತನಾಡಿ, ಅವರ ಬಗ್ಗೆ ಇದ್ದ ಅನುಮಾನಗಳನ್ನು ಬಗೆಹರಿಸಿಕೊಂಡು, ಕುತೂಹಲವನ್ನು ತಣಿಸಿಕೊಂಡು, ಹೊಸದೊಂದು ಅನುಭವದೊಂದಿಗೆ

ಸಂದರ್ಶಕರು: ಡಾ॥ ಎನ್. ಗಾಯತ್ರಿ, ಡಾ॥ ಜಿ. ಆರ್.
ಚಿತ್ರಗಳು: ಡಾ॥ ಎನ್. ಗಾಯತ್ರಿ

ಹಿಂತಿರುಗಿದೆವು. ಅದಾದ ನಂತರ ಅವರನ್ನು ಸಂದರ್ಶಿಸಬೇಕೆಂದು ಎಷ್ಟೋ ಬಾರಿ ಅಂದುಕೊಂಡರೂ ಅದೇಕೋ ಸಾಧ್ಯವೇ ಆಗಿರಲಿಲ್ಲ. ಆದರೂ ಬೆಂಗಳೂರಿನಲ್ಲಿ ವಿಜ್ಞಾನಿಯಾಗಿ ಕೆಲಸ ಮಾಡುತ್ತಿರುವ ಅವರ ಮಗ ಉದಯ್‌ರವರ ಮೂಲಕ ಅವರ ಸಂಪರ್ಕದ ಒಂದು ಎಳೆ ನಮ್ಮೊಂದಿಗೆ ಹರಡಿತು.

ಗಾಂಧಿ ಜಯಂತಿಯ ಕಾರಣಕ್ಕಾಗಿ ಹೈದರಾಬಾದ್ ವಿಶ್ವವ್ಯಾಲಯದಲ್ಲಿ ನಡೆಯುತ್ತಿದ್ದ ಸೆಮಿನಾರ್‌ನಲ್ಲಿ ಭಾಗವಹಿಸುತ್ತಿದ್ದ ಜಿ.ಆರ್.ರವರ ಸಂಗಡ ಹೋಗಿ ರಂಗನಾಯಕಮ್ಮನವರ ಸಂದರ್ಶನ ಮಾಡಿಕೊಳ್ಳುವ ಎಂದುಕೊಂಡು ಅವರನ್ನು ಸಂಪರ್ಕಿಸಿದಾಗ, ಎಂದಿನಂತೆ ಅವರಿಂದ ತುಂಬು ಹೃದಯದ ಸ್ವಾಗತ ದೊರಕಿತು. ಪ್ರಶ್ನಾವಳಿ ಕಳುಹಿಸಿ, ಅವರ ಕೃತಿಗಳ ಬಗ್ಗೆ ಪ್ರಾಥಮಿಕ ಅರಿವು ಗಳಿಸಿ ಅವರ ಮನೆಗೆ ಭೇಟಿ ಕೊಟ್ಟೆ. ಹೋಗುವ ಮುಂಚೆ ಅವರ ವ್ಯಕ್ತಿತ್ವದ ಬಗ್ಗೆ ನನಗೆ ಸ್ಪಷ್ಟವಾದ ಚಿತ್ರಣವಿದ್ದುದು ನನಗೆ ತುಂಬಾ ನೆರವಾಗಿತ್ತು.

ಹೈದರಾಬಾದ್‌ನ ಹೊರವಲಯದಲ್ಲಿದ್ದ ಮೇದಾಪುರದಲ್ಲಿ ಅವರ ಮನೆ ಹುಡುಕಿ ಹೊರಟೆವು. ಮನೆಯ ಹೊರಗೆ ವಿಶಾಲವಾದ ಜಗುಲಿ. ಬಲದಲ್ಲಿ ನಗುತ್ತಿದ್ದ ನಂಜಬಟ್ಟಲ ಹೂವುಗಳನ್ನು ಮೈತುಂಬಿ ನಿಂತ ಗಿಡ. ಜಗುಲಿಯ ಎದುರಿಗೆ ಒಂದು ಸೂಚನಾ ಫಲಕ. 'ನಿಮ್ಮ ಚಪ್ಪಲಿ ಹೊರಗೆ ಬಿಟ್ಟು ಬನ್ನಿ.' ಕಳೆದ ಹತ್ತು ವರ್ಷಗಳ ಹಿಂದೆ ಹೋಗಿದ್ದಾಗಲೂ ಇಂತಹ ಬೋರ್ಡ್ ಕಂಡಿದ್ದೆವು. ವ್ಯತ್ಯಾಸ ಒಂದೇ. ಆಗಿನದು ಕೈಬರಹದ್ದಾದರೆ, ಈಗಿನದು ಕಂಪ್ಯೂಟರ್ ಮುದ್ರಿತವಾದದ್ದು. ಚಪ್ಪಲಿ ಬಿಟ್ಟು ಬಾಗಿಲು ತಟ್ಟಿದಾಗ ಬಾಗಿಲು ತೆರೆದು ಒಳಗೆ ಸ್ವಾಗತಿಸಿದ್ದು ಗಾಂಧಿ. ನಂತರ ಒಳಗಿನಿಂದ ಬಂದ ರಂಗನಾಯಕಮ್ಮನವರೂ ನಮ್ಮೊಡನೆ ಮಾತಿಗೆ ಸೇರಿಕೊಂಡರು. ಅವರ ಮನೆಯೊಳಗೆಲ್ಲಾ ಮೊದಲು ಕಂಡಂತಹ ಹಲವು ಸೂಚನಾ ಫಲಕಗಳು ಕಂಡುಬಂದವು. ಎಲ್ಲವನ್ನೂ ಗಮನಿಸುತ್ತಾ ಮಾತಿನಲ್ಲಿ ತೊಡಗಿಕೊಂಡೆವು. ಮೊದಲೇ ಸಿದ್ಧಗೊಳಿಸಿದ್ದ ಪ್ರಶ್ನೋತ್ತರ ಸಿದ್ಧವಾಗಿ ಕುಳಿತಿತ್ತು. ಅದನ್ನು ಆಧರಿಸಿಯೇ ಮತ್ತಷ್ಟು ವಿವರಣೆಯನ್ನು ಪಡೆದುಕೊಂಡೆವು.

**ಬದುಕು**

ಪಶ್ಚಿಮ ಗೋದಾವರಿ ಜಿಲ್ಲೆಗೆ ಸೇರಿದ ತಾಡೆಪಲ್ಲಿಗೂಡೆಂನ ಬೊಮ್ಮಿದಿ ಹಳ್ಳಿಯಲ್ಲಿ ೧೯೩೯ರಲ್ಲಿ ಜನಿಸಿದ ರಂಗನಾಯಕಮ್ಮ ಆಧುನಿಕ ತೆಲುಗು ಸಾಹಿತ್ಯದ ಅತ್ಯಂತ ವಿವಾದಾಸ್ಪದ ಲೇಖಕಿ. ಇವರು ಹದಿನೈದು ಕಾದಂಬರಿಗಳು, ಎಪ್ಪತ್ತು ಕಥೆಗಳು, ಐವತ್ತಕ್ಕೂ ಹೆಚ್ಚು ವಿಚಾರ ಸಾಹಿತ್ಯದ ಪ್ರಬಂಧಗಳನ್ನು ರಚಿಸಿದ್ದಾರೆ. ಯಾರೊಡನೆ ಬೇಕಾದರೂ ಕತ್ತಿ ಮಸೆಯಲು ಸಿದ್ಧರಿರುವ ಈಕೆಗೆ ಹೊಂದಾಣಿಕೆ, ಒಪ್ಪಂದಗಳು ಅಪಥ್ಯ.

ಇವರ ತಂದೆ ಮನೆಯಲ್ಲಿ ಜೀವನ ನಿರ್ವಹಣೆಗಾಗಿ ಪ್ರೆಸ್ ಇಟ್ಟುಕೊಂಡಿದ್ದರು. 'ಪದ್ಮಪತ್ರಿಕಾ' ಎಂಬ ಜಾತಿ ಸಂಬಂಧವಾದ ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. ಈ ವಾತಾವರಣದಲ್ಲೇ ರಂಗನಾಯಕಮ್ಮ ಬೆಳೆದರು. ಮನೆಯ ಬಳಿಯಿದ್ದ ಪುಸ್ತಕ ಭಂಡಾರದಿಂದ ಹೊತ್ತು ತರುತ್ತಿದ್ದ ಪುಸ್ತಕಗಳು ಅವರ ಓದಿನ ದಾಹವನ್ನು ತಣಿಸುತ್ತಿದ್ದವು. ಸುಮಾರು ಏಳೆಂಟು ವರ್ಷದ ವಯಸ್ಸಿಗೆ ಅಸಾಧ್ಯ ಓದಿನ ಹುಚ್ಚು ಹತ್ತಿಸಿಕೊಂಡಿದ್ದ ರಂಗನಾಯಕಮ್ಮ ತಂದೆಯ ಒತ್ತಾಯಕ್ಕೆ ಅವರ ಪತ್ರಿಕೆಗೆ ಕಥೆಗಳನ್ನು ಬರೆಯುತ್ತಿದ್ದರು. ಆ ಕಥೆಗಳೆಲ್ಲಾ ರಾಜ, ರಾಣಿ, ರಾಜಕುಮಾರಿ, ರಾಕ್ಷಸರನ್ನೊಳಗೊಂಡ ಕಲ್ಪಿತ ಕಥೆಗಳೇ ಆಗಿದ್ದವು. ಓದಿನ ಜೊತೆಗೆ ಸಂಗೀತದ ಹುಚ್ಚು; ಹಾರ್ಮೋನಿಯಂ ಕಲಿಕೆ, ಎಲ್ಲವೂ ಸಾಗಿತ್ತು. ಈ ಸುಂದರ ಬಾಲ್ಯದಲ್ಲೇ ಹೈಸ್ಕೂಲ್‌ವರೆಗೆ ವಿದ್ಯಾಭ್ಯಾಸ ಮುಗಿಸಿ ಸ್ವಂತ ಹಿಂದಿಯ ಕಲಿಕೆ ಕೈಗೊಂಡರು. ಮನೆಯಲ್ಲಿ ಬಡತನವಿದ್ದರೂ, ಆರು ಹೆಣ್ಣುಮಕ್ಕಳಲ್ಲಿ ಒಬ್ಬಳಾಗಿ ಜನಿಸಿದರೂ ಪ್ರೀತಿ, ವಿಶ್ವಾಸಕ್ಕೆ, ಸಂತೋಷದ ಗಳಿಗೆಗೆ ಅಭಾವವಿರಲಿಲ್ಲ. ಈ ಎಲ್ಲ ಸಂಭ್ರಮಕ್ಕೆ ಭಯಂಕರ ತಿರುವು ಸಿಕ್ಕಿದ್ದು ಅವರ ೨೦ನೇ ವಯಸ್ಸಿನಲ್ಲಿ ಮನೆಯವರು ನಿಶ್ಚಯಿಸಿದ ಸಾಂಪ್ರದಾಯಿಕ ಮದುವೆಯಿಂದ. ಅವರ ಮಾತಿನಲ್ಲೇ ಹೇಳುವುದಾದರೆ: ''ನಾನು ದಿಢೀರನೆ ನರಕದಲ್ಲಿ ಬಿದ್ದಂತಾಯಿತು. ಬೇಡನ ಪಂಜರದಲ್ಲಿನ ಪಕ್ಷಿಯೂ ನನ್ನಷ್ಟು ಬಾಧೆ ಪಟ್ಟಿರುವುದಿಲ್ಲವೇನೋ! ಮನುಷ್ಯರ ವೇಷದಲ್ಲಿ ಮೃಗಗಳು ವಾಸಿಸಬಹುದು ಎಂಬುದು ನನ್ನ ಅನುಭವಕ್ಕೆ ಬಂದಿತು. ಈ ಎಲ್ಲಾ ಅನುಭವದ ಸಾರದಿಂದ ನನ್ನ ಕೃತಿಗಳು ಹುಟ್ಟಿಕೊಂಡವು.''

ಗಂಡನೊಡನೆ ೧೨ ವರ್ಷಗಳ ಕಾಲ ವೈವಾಹಿಕ ಜೀವನ ನಡೆಸಿ ಕಂಗೆಟ್ಟು ಹೊರ ಬಂದಾಗ ತನ್ನ ಪುಸ್ತಕಗಳಿಗಾಗಿ, ತನ್ನ ಮೂವರು ಮಕ್ಕಳಿಗಾಗಿ ರಂಗನಾಯಕಮ್ಮ ಕೋರ್ಟ್ ಕಟ್ಟೆ ಹತ್ತುತ್ತಾರೆ. ಹೈದರಾಬಾದ್‌ನಲ್ಲಿದ್ದ ಅಭಿಮಾನಿ ಓದುಗರ ಮತ್ತು ಸ್ನೇಹಿತರ ನೆರವಿನಿಂದ ಹೊಸ ಜೀವನ ಕಟ್ಟಿಕೊಳ್ಳುವಲ್ಲಿ




ಯಶಸ್ವಿಯಾದರು. ಬರವಣಿಗೆಯ ಜೊತೆ ಜೊತೆಯಲ್ಲಿ ತಮ್ಮ ಓದನ್ನು ವಿಸ್ತರಿಸಿಕೊಂಡರು. ಈ ಸಂದರ್ಭದಲ್ಲೇ ಮಾರ್ಕ್ಸ್‌ವಾದಿ ಅಧ್ಯಯನಕೂಟದ ಸಂಪರ್ಕಕ್ಕೆ ಬಂದರು. ಚಲಂರ ವಿಚಾರಗಳಿಂದ ಈ ವೇಳೆಗಾಗಲೇ ಪ್ರಭಾವಿತರಾಗಿದ್ದ ರಂಗನಾಯಕಮ್ಮ ಚಿಲಿಯ ಅಲೆಂಡೆಯವರ ಹತ್ಯೆಯನ್ನು ಕುರಿತ ಪುಸ್ತಕವನ್ನು ಓದಿದರು. ಅಲ್ಲಿಂದ ಅವರಿಗೆ ಮಾರ್ಕ್ಸ್‌ವಾದವನ್ನು ಆಳವಾಗಿ ತಿಳಿಯಬೇಕೆಂಬ ಹುಚ್ಚು ಹತ್ತಿತು. ಅವರು ಗಾಂಧಿಯವರನ್ನು ಭೇಟಿಯಾದದ್ದು ಇಲ್ಲೇ. ಬಾಪೂಜಿಯೆಂಬುದು ಗಾಂಧಿಯವರ ಅಧಿಕೃತ ನಾಮಧೇಯ; ಅವರು ಆಗ ಹೈದರಾಬಾದ್ ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ವಿದ್ಯಾರ್ಥಿಯಾಗಿದ್ದರು. ಮಾರ್ಕ್ಸ್‌ವಾದಿಯಾಗಿದ್ದ, ವಯಸ್ಸಿನಲ್ಲಿ ತಮಗಿಂತ ಹತ್ತು ವರ್ಷ ಚಿಕ್ಕವರಾದ, ಅವಿವಾಹಿತ ಗಾಂಧಿಯವರೊಂದಿಗೆ ರಂಗನಾಯಕಮ್ಮ ಯಾವುದೇ ವೈವಾಹಿಕ ವಿಧಿ, ವಿಧಾನಗಳಿಲ್ಲದೆ ತಮ್ಮ ಮೂವರು ಮಕ್ಕಳೊಂದಿಗೆ ಜೀವಿಸಲು ಪ್ರಾರಂಭಿಸಿದರು.

ಗಾಂಧಿ ಮತ್ತು ರಂಗನಾಯಕಮ್ಮ - ಇಬ್ಬರೂ ೧೯೭೩ರಿಂದ ೧೯೮೯ರವರೆಗೆ ಮಾವೋವಾದಿಗಳ ಒಂದು ಗುಂಪು ಯು ಸಿ ಸಿ ಆರ್- ಎಂ ಎಲ್ ನೊಂದಿಗೆ ಅದರ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಘಟಕದಲ್ಲಿ ಕೆಲಸ ಮಾಡುತ್ತಿದ್ದರು. ಇದೇ ಸಮಯದಲ್ಲಿ ೧೯೭೭ರಿಂದ ೧೯೮೯ರವರೆಗೆ 'ಪ್ರಜಾ ಸಾಹಿತಿ' ಎಂಬ ಪತ್ರಿಕೆಯನ್ನು ಸ್ವತಃ ಸಂಪಾದಿಸಿ, ಪ್ರಕಟಿಸಿದರು.

**ಬರಹ**

ತಂದೆ ಪ್ರಕಟಿಸುತ್ತಿದ್ದ ಪತ್ರಿಕೆಗೆ ರಾಜಕುಮಾರ, ಕುಮಾರಿಯರ, ರಾಕ್ಷಸನ ಮಾಯಾ ಜಾಲದ ಕಥೆಗಳನ್ನು ಬರೆಯಲು ಪ್ರಾರಂಭಿಸಿ, ತನ್ನ ವಿಷಮ ವೈವಾಹಿಕ ಜೀವನದ ಬೇಗೆಯಿಂದ ನೊಂದು ಬರೆಯಲು ಮೊದಲುಮಾಡಿದ್ದು ಹೆಣ್ಣಿನ ನೋವಿನ ಕಥೆಗಳನ್ನು. ಪ್ರೇಮವಿವಾಹ ಮತ್ತು ಸಂಬಂಧಿಗಳ ನಡುವಿನ ವಿವಾಹವನ್ನು ಪುರಸ್ಕರಿಸುವ ಕಥೆಗಳನ್ನು ಬರೆದರು. 'ಪೇಕಮೇಡಲು' ಅಂತಹದೊಂದು ಕಥೆ. ಹೆಣ್ಣಿಗಾಗುವ ಅವಮಾನವನ್ನು ವಿರೋಧಿಸುವುದೇ ಅವರ ಮುಖ್ಯ ಗುರಿಯಾಗಿತ್ತು. ಕಮಲಾ, ಕೃಷ್ಣವೇಣಿ, ಭಾನುಮತಿ, ರಾಜೇಶ್ವರಿ, ಜಾನಕಿ – ಹೀಗೆ ಒಂದೊಂದು ಪಾತ್ರವೂ ಅವರ ಅನುಭವದ ಮೂಸೆಯಲ್ಲಿ ಮೈಪಡೆದವು. ಆದರೆ ಸ್ವೀಟ್ ಹೋಂನ ಮಾಲತಿ ಅವರ ಕನಸಿನ ಆದರ್ಶ ಪಾತ್ರವಾಗಿರಬಹುದು! ಅವರ ಪ್ರಕಟಣೆಗೆ ಅವರು 'ಸ್ವೀಟ್ ಹೋಂ ಪ್ರಕಾಶನ' ಎಂದು ಹೆಸರಿಸಿರುವುದನ್ನು ಗಮನಿಸಿ.

೧೯೭೦-೭೧ರಲ್ಲಿ ಮಾರ್ಕ್ಸ್‌ವಾದದ ಪ್ರಭಾವದೊಳಗೆ ಬಂದಂತೆ ಇವರ ಸ್ತ್ರೀವಾದ ಹೆಚ್ಚು ಹರಿತವಾಯಿತು. ನಂತರ ಬಂದ ಬರವಣಿಗೆಯು ಬೇರೆಯೇ ಜಾಡು ಹಿಡಿಯಿತು. ಈಕೆಯ ಉತ್ತಮ ಕಾದಂಬರಿಗಳಲ್ಲಿ ಒಂದೆನಿಸಿದ 'ಜಾನಕಿ ವಿಮುಕ್ತಿ'ಯಲ್ಲಿ ಮಾರ್ಕ್ಸ್‌ವಾದ ಮತ್ತು ಸ್ತ್ರೀವಾದ – ಈ ಎರಡೂ ತತ್ವಗಳಿಗೆ ರಂಗನಾಯಕಮ್ಮನಿಗಿರುವ ನಿಷ್ಠೆ, ಕಲಾತ್ಮಕ ಅಭಿವ್ಯಕ್ತಿ ಪಡೆದಿದೆ. ಅಸಮಾನತೆಯಿಂದ ಅಸಮಾನತೆಯೆಡೆಗೆ, ಮನೆಯೊಳಗಿನ ಕೆಲಸ-ಹೊರಗಿನ ಕೆಲಸ, ಸ್ತ್ರೀ ಸ್ವೇಚ್ಛಾ – ಇವು ಅವರು ಸ್ತ್ರೀವಾದಿ ಸಾಹಿತ್ಯಕ್ಕೆ ನೀಡಿರುವ ಕೊಡುಗೆ.

ಈ ಅವಧಿಯ ಮತ್ತೊಂದು ಪ್ರಮುಖ ಕೃತಿ ಮೂರು ಸಂಪುಟಗಳ ಸುಮಾರು ೨೦೦೦ ಪುಟಗಳ 'ರಾಮಾಯಣ ವಿಷವೃಕ್ಷಮು.' ಈ ಕೃತಿಯಲ್ಲಿ ರಾಮಾಯಣವನ್ನು ಮಾರ್ಕ್ಸ್‌ವಾದ, ಸ್ತ್ರೀವಾದ ಮತ್ತು ಕೋಮುವಾದದ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಈ ಕೃತಿ ಅವರಿಗೆ ಕೀರ್ತಿ- ಅಪಕೀರ್ತಿಯನ್ನು ಒಟ್ಟಿಗೇ ತಂದುಕೊಟ್ಟಿತು. ಮಾರ್ಕ್ಸ್‌ನ ಕ್ಯಾಪಿಟಲ್‌ಗೆ ಐದು ಸಂಪುಟಗಳ ಟಿಪ್ಪಣಿ ಬರೆದದ್ದು ಅವರು ಮಾರ್ಕ್ಸ್‌ವಾದಕ್ಕೆ ನೀಡಿರುವ ಅನುಪಮ ಕೊಡುಗೆ. ಚಾರ್ಲ್ಸ್ ಬೆತ್ಲೆಹೇಮ್‌ನ **ಚೀನಾ ಸಿನ್ಸ್ ಮಾವೋ ಮತ್ತು ಕಲ್ಚರಲ್ ರೆವೆಲ್ಯೂಷನ್ ಅಂಡ್ ಇಂಡಸ್ಟ್ರಿಯಲ್ ರೆವೆಲ್ಯೂಷನ್** ಕೃತಿಗಳನ್ನು ತೆಲುಗು ಭಾಷೆಯಲ್ಲಿ ಸಂಗ್ರಹಾನುವಾದ ಮಾಡಿಕೊಟ್ಟಿದ್ದಾರೆ. 'ದಲಿತರ ಸಮಸ್ಯೆಗೆ ಬುದ್ಧ ಸಾಲದು, ಅಂಬೇಡ್ಕರ್ ಸಾಲದು, ಮಾರ್ಕ್ಸ್ ಬೇಕು' ಎನ್ನುವ ಅವರ ಕೃತಿ ಮಾರ್ಕ್ಸ್‌ವಾದದಲ್ಲಿನ ಅವರ ದೃಢವಾದ ನಂಬಿಕೆಯನ್ನು ಪ್ರಕಟಿಸುತ್ತದೆ.

**ಹೊಸತು** : ಕಳೆದ ಒಂದು ದಶಕದಲ್ಲಿ ವಿಚಾರವಾದದ ಆಲೋಚನಾ ಧೋರಣೆ ಹಿಂದಕ್ಕೆ ಸರಿದಿದೆಯೆಂದು ನಿಮಗೆ ಅನಿಸುತ್ತದೆಯೆ ? ಹಾಗಿದ್ದರೆ, ಅದಕ್ಕೆ ನೀವು ಯಾವ ಕಾರಣಗಳನ್ನು ಗುರುತಿಸುತ್ತೀರಾ ?

ರಂಗನಾಯಕಮ್ಮ : ಪ್ರಗತಿಪರ ಭಾವಗಳು, ವಿಚಾರವಾದ, ಕ್ರಾಂತಿಕಾರಿ ಭಾವನೆ – ಈ ವಿಷಯಗಳಲ್ಲಿ ಹೊಸ ಆವಿಷ್ಕಾರಗಳು, ಬೆಳವಣಿಗೆ ಇಂದು ಸ್ವಲ್ಪ ಕಡಿಮೆಯಾಗಿದೆಯೆಂದು ಹೇಳಬೇಕಾದ್ದು ಅನಿವಾರ್ಯವಾಗಿದೆ. ಹಿಂದೆ ಅತ್ಯುತ್ಸಾಹದಿಂದ ಅಂತರಜಾತೀಯ ವಿವಾಹ ಮಾಡಿಕೊಂಡಿದ್ದ ಜನರೇ ಇಂದು ತಮ್ಮ ಜಾತಿ, ಅಂತಸ್ತಿಗೆ ತಕ್ಕಂತೆ ಮಕ್ಕಳಿಗೆ ಮದುವೆ ಮಾಡಲು ತಾಪತ್ರಯ ಪಡುತ್ತಿದ್ದಾರೆ. ಹಿಂದಿನ ಕಾಲದಲ್ಲಿ ಸರಳವಾಗಿ ಮದುವೆ ಮಾಡುತ್ತಿದ್ದ ಮಂದಿ, ಇಂದು ತಮ್ಮ ಮಕ್ಕಳಿಗೆ ಮಂತ್ರಪೂರ್ವಕ ಮದುವೆ ಮಾಡುತ್ತಿದ್ದಾರೆ. ಹಿಂದಿನ ತಂದೆ, ತಾಯಿಯರಿಗೆ ಕಮ್ಯುನಿಸ್ಟ್ ರಾಜಕೀಯ ವಾತಾವರಣವು ಒಂದು ಪ್ರೇರಣೆಯಾಗಿತ್ತು. ಅಂದಿಗೆ ಸೋವಿಯತ್ ಒಕ್ಕೂಟ, ಪೀಪಲ್ಸ್ ಚೈನಾ ಇದ್ದವು. ಅವುಗಳ ಪ್ರಭಾವ ವಿಶ್ವದಾದ್ಯಂತ ಬೆಳಕು ಹರಿಸುವಂತಿತ್ತು. ಈಗ ಅವು ಅಳಿಸಿಹೋಗಿವೆ. (ಹಾಗೇಕಾಯಿತು, ಎಂಬುದು ಬೇರೆಯೇ ಪ್ರಶ್ನೆ.) ಸೋವಿಯತ್ ರಷ್ಯಾದ ಕ್ರಾಂತಿಕಾರಿ ಪ್ರಭಾವದ ನೆಲೆಯಲ್ಲಿಯೇ ಭಾರತ ಕಮ್ಯುನಿಸ್ಟ್ ಚಳುವಳಿಗಳು ಕೂಡ ವರ್ಗ ಹೋರಾಟವನ್ನು ತೊರೆದು, ವರ್ಗ ಸಾಮರಸ್ಯದ ಮಾತುಗಳನ್ನು ಆಡಹತ್ತಿದ್ದಾರೆ. ಕೆಲವು ಪಕ್ಷಗಳು ವರ್ಗ ಹೋರಾಟವನ್ನು ಇಂದಿಗೂ ಪ್ರಸ್ತುತವೆಂದು ಭಾವಿಸುತ್ತವಾದರೂ ಅವುಗಳಿಗೆ ಪ್ರಬಲವಾದ ವರ್ಗ ಚೈತನ್ಯವನ್ನು ನೀಡುವ ಸ್ಥಿತಿಯಿಲ್ಲ.

ಕಮ್ಯುನಿಸ್ಟ್ ಹೋರಾಟಗಳ ತಗ್ಗುವಿಕೆಯೆಂದರೆ, ಬಂಡವಾಳಶಾಹಿ ಸಂಬಂಧಗಳ ವೃದ್ಧಿ ಎಂದರ್ಥ. ಬಂಡವಾಳಶಾಹಿ ಬೆಳೆಯುತ್ತಿದ್ದಂತೆ ಸರಕುಗಳ ಪ್ರಪಂಚ ಹಿಗ್ಗುತ್ತದೆ. ನಿರುದ್ಯೋಗಿಗಳ ಮತ್ತು ಕಾರ್ಮಿಕರ ಮಧ್ಯೆ ಸ್ಪರ್ಧೆಗಳು ಹೆಚ್ಚುತ್ತವೆ. ಬಡತನವಲ್ಲದೆ ಹೊಸ ಅನೇಕ ಸಮಸ್ಯೆಗಳು ಹುಟ್ಟಿಕೊಳ್ಳುತ್ತವೆ. ಯುವ ಜನಾಂಗದಲ್ಲಿ ಭವಿಷ್ಯದ ಬಗೆಗಿನ ಅನಿಶ್ಚಿತತೆ ಹುಟ್ಟಿ, ಅವರ ಆದರ್ಶ ಜೀವನದ ಉತ್ಸಾಹಗಳು ತಗ್ಗಿ ಹತಾಶೆ ಮನೆಮಾಡುತ್ತದೆ. ಹಿಂದಿನ ಕ್ರಾಂತಿಕಾರಿ ಭಾವನೆಗಳು ಮತ್ತು ವಿಚಾರವಾದದ ದೃಷ್ಟಿಕೋನವು ಕೂಡ ಹಿಂದಕ್ಕೆ ಸರಿದು ಬದುಕಿನ ಬವಣೆಯೇ ಪ್ರಧಾನವಾಗುತ್ತದೆ. ಹೀಗೆ ಹೊಟ್ಟೆ ಹೊರೆಯುವಾಗ ಸ್ವಂತದ ತಾಪತ್ರಯಗಳನ್ನು ನಿವಾರಿಸಿಕೊಳ್ಳುವ ಹಂತದಲ್ಲಿ ಪ್ರಗತಿಯ ಆಶಯಗಳು ಹಿಂದಕ್ಕೆ ಸರಿಯುತ್ತವೆ.

ಹಿಂದೆ ಇರದಿದ್ದ ಮತ್ತು ಇಂದು ಇರುವ ನೆಗೆಟಿವ್ ಅಂಶ ಎಂದರೆ, ಟಿ.ವಿ. ಇಂದಿನ ಟಿ.ವಿ.ಯು ಬಂಡವಾಳಶಾಹಿ ತಂತ್ರದ ಒಂದು ಪ್ರತ್ಯಕ್ಷ ನಿದರ್ಶನ. ಮೂಢನಂಬಿಕೆಗಳ ಪ್ರಚಾರವು ಹಿಂದೆಯೂ ಇದ್ದಿತು. ಆದರೆ, ಬಂಡವಾಳಶಾಹಿ ವ್ಯವಸ್ಥೆಗೆ ಸೇವೆ ಸಲ್ಲಿಸುವ ಪ್ರಚಾರಗಳಿಗೆ ಹೋಲಿಸಿದರೆ ಈಗ ಅತ್ಯಧಿಕವೆನ್ನಬಹುದು. ಮನೆಯಲ್ಲೇ, ಕಣ್ಣೆದುರಿಗೇ ದಿನನಿತ್ಯವೂ ಬುದ್ಧಿಯನ್ನು ಮಂಕುಗೊಳಿಸುವ ಸಾಧನವಿದು. ಈ ಸಾಧನವನ್ನು ಉತ್ತಮವಾಗಿ ಉಪಯೋಗಿಸಲು ಸಾಧ್ಯವಿರುವಂತೆ ವಿನಾಶಕಾರಿಯಾಗಿಯೂ ಬಳಸಬಹುದಾಗಿದೆ.

## ಇವರ ಸ್ತ್ರೀವಾದದ ಒಂದು ಸ್ಯಾಂಪಲ್ !

ಇವರ ಊಟದ ಮನೆಯಲ್ಲೊಂದು ಸೂಚನಾ ಫಲಕವುಂಟು: ಊಟಕ್ಕೆ ಕೂರುವಾಗ ಕುರ್ಚಿ ಎಳೆದಾಡಿ, ಶಬ್ದ ಮಾಡಬೇಡಿ. ಅಗೆಯುವಾಗ, ಕುಡಿಯುವಾಗ (ಅದರಲ್ಲೂ ವಿಶೇಷವಾಗಿ ಗಂಡಸರು ಶಬ್ದ ಮಾಡುತ್ತಾರೆ ) ಕೆಮ್ಮು, ತೇಗು, ಸೀನು ಬಂದರೆ ಪಕ್ಕದಲ್ಲಿ ಊಟ ಮಾಡುವವರಿಗೆ ತೊಂದರೆಯಾಗದಂತೆ ಕರ್ಚೀಫು ಅಡ್ಡ ಇಟ್ಟು ನಿವಾರಿಸಿಕೊಳ್ಳಿ. ನಿಮ್ಮ ಬಳಿ ಕರ್ಚೀಫು ಇಲ್ಲದಿದ್ದರೆ, ಒಗೆದ ಕರ್ಚೀಫು ನಾವೇ ಕೊಡುತ್ತೇವೆ. ಊಟ ಆದ ಮೇಲೆ ನಿಮ್ಮ ತಟ್ಟೆ ನೀವೇ ತೆಗೆದು ನಾವು ತೋರಿಸಿದ ಜಾಗದಲ್ಲಿ ಇಡಬೇಕು. ಗಂಡಂದಿರ ತಟ್ಟೆಯನ್ನು ಇಲ್ಲಿ ಹೆಂಡತಿಯರು ತೆಗೆಯುವಂತಿಲ್ಲ. ಯಾರು ಊಟ ಮಾಡುತ್ತಾರೋ ಅವರೇ ತೆಗೆಯಬೇಕು. ಇಲ್ಲಿ ಮಾತ್ರಾ ಅಲ್ಲ, ಅವರ ಮನೆಯಲ್ಲೂ ಹಾಗೇ ಮಾಡಿದರೆ ಒಳ್ಳೆಯದು.(ಒತ್ತು ನನ್ನದು !)


With Best Compliments From




KARNATAKA PRADESH BANK EMPLOYEES' FEDERATION

'Shell House' 2nd Floor, # 86, J. C. Road
BANGALORE - 560 002



*ಡಾ|| ಎನ್. ಗಾಯತ್ರಿ ಮತ್ತು ಶ್ರೀಮತಿ ರಂಗನಾಯಕಮ್ಮ*

ಬಂಡವಾಳಶಾಹಿ ವಿಧಾನವು ತನ್ನ ಅನುಕೂಲಕ್ಕೆ ತಕ್ಕಂತೆ ಅಗತ್ಯವಾದ ಎಲ್ಲ ಪದ್ಧತಿಗಳನ್ನು ಅನುಸರಿಸುತ್ತದೆ.

ಇಷ್ಟಾಗಿಯೂ ವಿಚಾರವಾದ ಮತ್ತು ಕ್ರಾಂತಿಕಾರಿ ಭಾವಗಳು ಸಂಪೂರ್ಣವಾಗಿ ನೆಲ ಕಚ್ಚಿ ಹೋಗುತ್ತವೆಂದು ಮತ್ತು ಇನ್ನು ಮುಂದೆ ಬಂಡವಾಳಶಾಹಿ ವಿಧಾನವು ನಿತ್ಯ ನೂತನವಾಗಿ ಬೆಳೆಯುತ್ತದೆಂದು ಭಾವಿಸುವ ಅಗತ್ಯವಿಲ್ಲ. ಅದು ಹುಟ್ಟುಹಾಕುವ ಸಮಸ್ಯೆಗಳೇ ಅದರ ಮರಣ ಶಯ್ಯೆಯನ್ನು ತಯಾರು ಮಾಡುತ್ತದೆ. ಗುಲಾಮಗಿರಿಯ ಸಮಾಜವು ನಶಿಸಿಹೋಗಲು ನೂರಾರು ವರ್ಷಗಳೇ ಬೇಕಾದಾವು. ಆದ್ದರಿಂದ ಬಂಡವಾಳಶಾಹಿಯ ಚರಮಗೀತೆ ಹಾಡುವ ದಿನವೂ ಬರುತ್ತದೆ.

**ಹೊಸತು** : ರಾಮಾಯಣವನ್ನು ಕುರಿತ ನಿಮ್ಮ ಪುಸ್ತಕವು ಪ್ರಕಟವಾದ ನಂತರ ಸಂಪ್ರದಾಯವಾದಿಗಳಿಂದ ನಿಮಗೇನಾದರೂ ಸಮಸ್ಯೆಗಳು ಎದುರಾದವೇ ?

**ರಂಗನಾಯಕಮ್ಮ** : ನೇರವಾಗಿ ನನಗೆ ಯಾವ ಸಮಸ್ಯೆಯೂ ಬರಲಿಲ್ಲ, ಪರೋಕ್ಷವಾಗಿ ಬೈಗುಳ ಸುರಿಸುವುದನ್ನು ಬಿಟ್ಟು. ನಾನು ಮಂಡಿಸಿದ ಪ್ರತಿಯೊಂದು ವಾದಕ್ಕೂ ವಾಲ್ಮೀಕಿಯಿಂದಲೇ ಅಡಿ ಟಿಪ್ಪಣಿಗಳ ರೂಪದಲ್ಲಿ ಆಧಾರಗಳನ್ನು ಕೊಟ್ಟಿದ್ದೇನೆ. ಲತಾ ಎಂಬ ಒಬ್ಬ ಲೇಖಕಿ , ರಾಮಾಯಣ ವಿಷವೃಕ್ಷ ಖಂಡನ ಎಂಬ ಹೆಸರಿನಲ್ಲಿ ಮೂರು ಸಂಪುಟಗಳನ್ನು ಬರೆಯುವುದಾಗಿ ಪ್ರಕಟಿಸಿ, ಮೊದಲನೆಯದನ್ನು ಮುಗಿಸುವುದರಲ್ಲಿ ಸುಸ್ತಾದರು. ಪ್ರಕಟವಾಗಿರುವುದರಲ್ಲೂ ಬೈಗುಳ ಬಿಟ್ಟು ಬೇರೇನೂ ಇಲ್ಲ. ನನ್ನ ಪುಸ್ತಕದ ಬಗ್ಗೆ ಆಗ್ಗೆ ಬಂದ ಕೆಲವು ಪರ ಮತ್ತು ವಿರೋಧ ಅಭಿಪ್ರಾಯಗಳನ್ನು ಆ ಪುಸ್ತಕದಲ್ಲಿಯೇ ಅನುಬಂಧವಾಗಿ ಸೇರಿಸಿದ್ದೇನೆ.

**ಹೊಸತು** : ರಾಮಾಯಣದ ಮೇಲಿನ ನಿಮ್ಮ ವಿಶ್ಲೇಷಣೆಗಳನ್ನು ಗಮನದಲ್ಲಿಟ್ಟು ನೋಡುವಾಗ ಆ ಪ್ರಾಚೀನ ಕಾಲದ (ಸುಮಾರು ಕ್ರಿ. ಪೂ. ೩ನೇ ಶತಮಾನದ) ಒಬ್ಬ ಕವಿಯು ಅಂದಿನ ಸಾಮಾಜಿಕ ವಾತಾವರಣವನ್ನು ಮತ್ತು ಸಾಮಾಜಿಕ ರಚನೆಯ ಬಗೆಗಿನ ಅಭಿಪ್ರಾಯಗಳನ್ನು ಮೀರಿ ನಿಲ್ಲಲು ಸಾಧ್ಯವಿದ್ದಿತೇ ? (ಉದಾಹರಣೆಗೆ, ಮಹಿಳೆಯರ ಸ್ಥಾನಮಾನ, ನಗರ ಮತ್ತು ಅರಣ್ಯಗಳ ನಡುವಣ ಸಂಘರ್ಷ ಇತ್ಯಾದಿ).

**ರಂಗನಾಯಕಮ್ಮ**: ತನ್ನ ಕಾಲದ ಸಾಮಾಜಿಕ ವಾತಾವರಣವನ್ನು ಮತ್ತು ಭಾವನೆಗಳನ್ನು ಮೀರಿ ನಿಲ್ಲುವ ಸಾಧ್ಯತೆ ಯಾವ ಕಾಲದಲ್ಲೂ ಇರಲಾರದು. ರಾಮಾಯಣದ ಕವಿ ಹಾಗಿರುತ್ತಾನೆ ಅಥವಾ ಇರಬೇಕು ಎಂದೇನೂ ನಾನು ಹೇಳಲಿಲ್ಲ. ಕವಿಯು ತನ್ನ ಕಾಲದ ಭಾವನೆಗಳನ್ನು ಹೇಗೆ ಪ್ರತಿಬಿಂಬಿಸುತ್ತಾನೆಂದು ನೋಡಲು ಪ್ರಯತ್ನಿಸುತ್ತಾನೆಂದು ನೋಡಲು ಪ್ರಯತ್ನಿಸುತ್ತೇನೆ. ಅಂದಿನ ಕಾಲವನ್ನೇ ತೆಗೆದುಕೊಂಡರೂ ಆ ಭಾವನೆಗಳು ಮತ್ತು ನಿಲುವುಗಳು ಅಂದಿಗೆ ಸಹ ಮಹಿಳೆಯರಿಗೆ ಅನುಕೂಲಕರವಾಗಿರಲಿಲ್ಲ. ಅಂತೆಯೇ ಕೆಳಜಾತಿಯವರಿಗೆ ಮತ್ತು ಅರಣ್ಯ ವಾಸಿಗಳಿಗೆ ಸಹ ಅಂದಿನ ಜೀವನ ಮೌಲ್ಯಗಳು ಅನುಕೂಲಕರವಾಗಿರಲಿಲ್ಲ ಎಂದು ಗಮನಿಸಬಹುದು. ವಿಷವೃಕ್ಷಮು ಕೃತಿಯಲ್ಲಿ ನಾನು ಹೇಳ ಹೊರಟಿರುವುದು ಇದನ್ನೆ.

**ಹೊಸತು**: ಕಮ್ಯುನಿಸ್ಟ್ ಪಕ್ಷಗಳ ಬಗ್ಗೆ (ಸಿ.ಪಿ.ಐ., ಸಿ.ಪಿ.ಎಂ. ಇತ್ಯಾದಿ) ನಿಖರವಾಗಿ ನಿಮ್ಮ ಟೀಕೆ ಏನು ? ಅವರ ತಿಳುವಳಿಕೆಯ ಬಗ್ಗೆ, ಅವರ ಕಾರ್ಯವಿಧಾನದ ಬಗ್ಗೆ ಮತ್ತು ಸೈದ್ಧಾಂತಿಕ ಬದ್ಧತೆಯ ಬಗ್ಗೆ ನಿಮ್ಮ ಅಭಿಪ್ರಾಯ ಏನು ?

**ರಂಗನಾಯಕಮ್ಮ** : ಈಗಿರುವ ಕಮ್ಯುನಿಸ್ಟ್ ಪಕ್ಷಗಳಲ್ಲಿ, ವಿಶೇಷವಾಗಿ ಸಿ.ಪಿ.ಐ. ಮತ್ತು ಸಿ.ಪಿ.ಎಂ. ಪಕ್ಷಗಳು, ಹೆಸರಿಗೆ ಮಾತ್ರವೇ ಕಮ್ಯುನಿಸ್ಟ್ ಪಕ್ಷಗಳಾಗಿವೆಯೇ ವಿನಾ ಆಚರಣೆಯಲ್ಲಿ ಅವು ಬೂರ್ಜ್ವಾ ಪಕ್ಷಗಳೊಡನೆ ಮೈತ್ರಿ ಸಾಧಿಸಿ ಚುನಾವಣೆಗಳಲ್ಲಿ ಹೆಚ್ಚಿನ ಸ್ಥಾನ ಗಳಿಸುವುದೇ ಅವಕ್ಕೆ ಪ್ರಧಾನವಾಗಿಬಿಟ್ಟಿದೆ. ದುಡಿಮೆಯ ಸ್ಥಳಗಳಲ್ಲಿ ಕಾರ್ಮಿಕರನ್ನು ಸಂಘಟಿಸುವುದು, ಆ ಮೂಲಕ ಕೂಲಿ- ಬಂಡವಾಳಗಳ ನಡುವಿನ ಸಂಬಂಧಗಳನ್ನು ಸಮಾಜವಾದಿ ಸಂಬಂಧವನ್ನಾಗಿ ಮಾರ್ಪಾಡು ಮಾಡುವುದರಲ್ಲೇ ಬಿಡುಗಡೆಯ ಹಾದಿ ಅಡಗಿದೆ, ಎಂಬ ಮಾರ್ಕ್ಸ್‌ವಾದಿ ಸಿದ್ಧಾಂತದ ಕ್ರಮಗಳು ಆ ಪಕ್ಷಗಳಿಗೆ ಮುಖ್ಯವಾಗಿ ಉಳಿದಿಲ್ಲ. ಹಾಗಿದ್ದಾಗ್ಯೂ, ಆ ಪಕ್ಷಗಳಲ್ಲಿರುವ ಸಾಮಾನ್ಯ ಕಾರ್ಯಕರ್ತರಲ್ಲಿ ಬಹುಮಂದಿ ಪಕ್ಷವು ನಿರ್ವಹಿಸುವ ಕಾರ್ಯಕ್ರಮಗಳಲ್ಲಿ ಶ್ರದ್ಧೆಯಿಂದ ಭಾಗವಹಿಸುತ್ತಾರೆ. ಅವರ ನಂಬಿಕೆ, ಆಶಯ ಅಗಾಧವಾದುದು. ನಾಯಕತ್ವದಲ್ಲಿರುವ ತಪ್ಪುಗಳಿಂದಾಗಿ ಕಾರ್ಯಕರ್ತರು ಕೂಡ ತಪ್ಪು ಹಾದಿಯಲ್ಲಿ ನಡೆಯುವ

## ಮಾರ್ಕ್ಸ್‌ವಾದವೇ ಇವರ ಕಣ್ಣು

೧೯೫೫ರಿಂದಲೇ ಬರವಣಿಗೆಯಲ್ಲಿ ತೊಡಗಿಕೊಂಡಿದ್ದ ರಂಗನಾಯಕಮ್ಮ ೧೯೭೩ರಿಂದ ಮಾರ್ಕ್ಸ್‌ವಾದದ ಪ್ರಭಾವಕ್ಕೆ ಒಳಗಾದ ನಂತರ ತಮ್ಮ ದೃಷ್ಟಿಕೋನವನ್ನು ಬದಲಿಸಿಕೊಂಡರು. ತಮ್ಮ ಅಲ್ಲಿಯವರೆಗಿನ ಪುಸ್ತಕಗಳಿಗೆ ಹೊಸ ಮುನ್ನುಡಿಗಳನ್ನು ಬರೆದರು; ತಮ್ಮ ಹಿಂದಿನ ಬರವಣಿಗೆಯ ಬಗ್ಗೆ ಆತ್ಮವಿಮರ್ಶೆ ಮಾಡಿಕೊಂಡರು. ಕೆಲವು ಪುಸ್ತಕಗಳನ್ನು, ಕಥೆಗಳನ್ನು ನಿರಾಕರಿಸಿಬಿಟ್ಟರು. ೧೯೬೫ರಲ್ಲಿ ಅವರ **ಬಲಿ ಪೀಠಂ** ಕಾದಂಬರಿಗೆ ಆಂಧ್ರಪ್ರದೇಶ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿತ್ತು. ಮಾರ್ಕ್ಸ್‌ವಾದಿಯಾದ ನಂತರ ಅವರು ಎಲ್ಲ ರೀತಿಯ ಸನ್ಮಾನ, ಬಹುಮಾನಗಳನ್ನು ಸ್ವೀಕರಿಸುವುದನ್ನು ನಿರಾಕರಿಸಿದರು. ಚೀನಾ ಮತ್ತು ರಷ್ಯಾದಲ್ಲಿನ ಈಗಿನ ಕಮ್ಯುನಿಸ್ಟ್ ಆಡಳಿತವನ್ನು ಕಟುವಾಗಿ ಟೀಕಿಸುವ ಅವರು ನಾವು ಅವರ ಮನೆಗೆ ಹೋದಾಗಲು ಚೀನಾ ದೇಶದ ಬಗೆಗಿನ ಪುಸ್ತಕವನ್ನು ಕುರಿತು ಅಧ್ಯಯನ ನಡೆಸಿದ್ದರು.

ಮಾರ್ಕ್ಸ್‌ವಾದವನ್ನು ಬದುಕಿನ ಬಲವಾದ ನಂಬಿಕೆಯಾಗಿ ಸ್ವೀಕರಿಸಿರುವ ಅವರ ಬದುಕು ಮತ್ತು ವಿಚಾರಗಳು ಮನೆ, ಮಂದಿಯ ಮೇಲೆಯೂ ಅಷ್ಟೇ ಪ್ರಭಾವ ಬೀರಿರುವುದು ಅಚ್ಚರಿ ಹುಟ್ಟಿಸುತ್ತದೆ. ನಾವು ಅವರ ಮನೆಗೆ ಹೋಗಿದ್ದಾಗ ಮನೆಯಲ್ಲಿ ತೊಟ್ಟಿಲಲ್ಲಿ ಎರಡನೇ ಮಗನ ಮೂರು ತಿಂಗಳ ಮಗು ನಗುತ್ತಾ ಮಲಗಿತ್ತು. ಬಳಿಯಲ್ಲಿ ನಿಂತಿದ್ದ ಮಗುವಿನ ಪುಟ್ಟ ಅಕ್ಕನನ್ನು ಪಾಪುನ ಹೆಸರೇನು ಎಂದು ಕೇಳಿದೆ. ಬಾಲಕಿ ನಗುತ್ತಾ ಹೇಳಿದಳು : ಸ್ಪಾರ್ಟಕಸ್



ಅನಿವಾರ್ಯತೆ ಬರುತ್ತಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಕನಿಷ್ಠ ಪರಿಚಯವೂ ಇಲ್ಲದೆ ಕಮ್ಯುನಿಸ್ಟ್ ಪಕ್ಷಗಳನ್ನು ನಂಬಿಕೊಂಡು ಎಷ್ಟೋ ಹೋರಾಟಗಳಲ್ಲಿ ಅವರು ಪಾಲ್ಗೊಳ್ಳುತ್ತಿದ್ದಾರೆ; ಅನೇಕ ತ್ಯಾಗಗಳನ್ನು ಮಾಡುತ್ತಿದ್ದಾರೆ. ಆದರೆ ಅವರ ಚಟುವಟಿಕೆಗಳೆಲ್ಲಾ ಕೊನೆಗೆ ಚುನಾವಣೆ ಮತ್ತು ಮತದಾನಗಳಲ್ಲಿಯೇ ಪರ್ಯವಸಾನವಾಗುತ್ತದೆ.

ಕ್ರಾಂತಿಕಾರಿ ಕಮ್ಯುನಿಸ್ಟ್ ಪಕ್ಷಗಳು ಕೂಡ ಬೂರ್ಜ್ವಾ ಆಚರಣೆಗಳಿಂದ ಭಿನ್ನವಾಗಿಲ್ಲ. ದುಡಿಯುವ ವರ್ಗದ ಮಹತ್ವವನ್ನು ವಿವರಿಸುವ ಮಾರ್ಕ್ಸ್‌ವಾದಿ ಸಿದ್ಧಾಂತದಲ್ಲಿ ಬಹಳ ಗುಂಪುಗಳಿಗೆ ಕನಿಷ್ಠ ಮಟ್ಟದ ತಿಳುವಳಿಕೆಯೂ ಇಲ್ಲ. ಕಾರ್ಯ ವಿಧಾನಗಳೆಲ್ಲಾ ಬೂರ್ಜ್ವಾ ವಿಧಾನಗಳೇ. ಸೈದ್ಧಾಂತಿಕ ಬದ್ಧತೆಗಿಂತಲೂ ಯಾಂತ್ರಿಕವಾಗಿ ಪಕ್ಷದ ನಾಯಕತ್ವವು ಸೂಚಿಸುವುದನ್ನು ಯಾವ ವಿಮರ್ಶೆಯೂ ಮಾಡದೆ ಅನುಸರಿಸುವುದೇ ಹೆಚ್ಚು.

**ಹೊಸತು :** ನಿಮ್ಮ ಪ್ರಕಾರ ಮಹಿಳಾ ಪ್ರಶ್ನೆಯ ಪ್ರಧಾನಾಂಶವು ಏನಾಗಿರಬೇಕು?

**ರಂಗನಾಯಕಮ್ಮ :** ಚಳುವಳಿಯಲ್ಲಿ ಪಾಲ್ಗೊಳ್ಳುವವರ ಸಾಮರ್ಥ್ಯ ಮತ್ತು ಸಂಘಟನೆಗಳಿಗೆ ಅನುಗುಣವಾಗಿ ದಿನನಿತ್ಯದ ಸಮಸ್ಯೆಗಳಿಂದ ಹಿಡಿದು ಸ್ತ್ರೀ ಪುರುಷರ ಸಂಪೂರ್ಣ ಸಮಾನತ್ವದವರೆಗೂ ಎಲ್ಲ ಪ್ರಶ್ನೆಗಳು ಮಹಿಳಾ ಪ್ರಶ್ನೆಯಲ್ಲಿ ಅಡಕವಾಗುವುದು ಒಳ್ಳೆಯದು. ತೆಲುಗು ಸಮಾಜದಲ್ಲಿ ವೀರೇಶಲಿಂಗಂ ಪಂತಲುರವರು ಸ್ತ್ರೀಶಿಕ್ಷಣ ಮತ್ತು ಬಾಲವಿಧವೆಯರ ಪುನರ್ವಿವಾಹಗಳನ್ನು ಕೇಂದ್ರೀಕರಿಸಿ ಮಹತ್ವದ ಕೆಲಸ ಮಾಡಿದ್ದಾರೆ. ರಾಜಾರಾಂ ಮೋಹನ ರಾಯ್ ಸತಿಸಹಗಮನವನ್ನು ಕೇಂದ್ರೀಕರಿಸಿ ಕೆಲಸ ಮಾಡಿದ್ದಾರೆ. ದಿನನಿತ್ಯದ ಸಮಸ್ಯೆಗಳನ್ನು ಪರಿಹರಿಸುವತ್ತ ಸಂಘಟನೆಗಳು ಆದ್ಯತೆ ಕೊಡಬೇಕು. ಮಹಿಳೆಯರ ಯಾವುದೇ ಸಮಸ್ಯೆಯ ವಿರುದ್ಧ ಹೋರಾಡಿದರೂ ಅದು ಮಹಿಳೆಯರ ಹಿತ ಕಾಯುವಂತಹುದೇ ಆಗಿರುತ್ತದೆ. ತಾತ್ಕಾಲಿಕ ಸಮಸ್ಯೆಗಳನ್ನಾಧರಿಸಿ ಕೆಲಸ ಮಾಡುವವರಿಗೆ ದುಡಿಮೆಯ ಸಂಬಂಧಗಳ ತಿಳುವಳಿಕೆಯೂ ಇರಬೇಕಾಗುತ್ತದೆ.

ಎಲ್ಲ ಮಹಿಳೆಯರೂ ಒಂದೇ ರೀತಿಯ ದುಡಿಮೆಯ ಸಂಬಂಧಗಳಲ್ಲಿ ಇಲ್ಲವೆಂಬುದನ್ನು ತಿಳಿಯಬೇಕು. ಕೆಲವು ಮಹಿಳೆಯರು ಯಜಮಾನಿಕೆಯ ಸ್ಥಾನದಲ್ಲಿದ್ದಾರೆ. ಕೆಲವರು ದುಡಿಯುವ ಸ್ಥಾನದಲ್ಲಿರುತ್ತಾರೆ. ಅಂದರೆ, ಎಲ್ಲ ಮಹಿಳೆಯರು ಒಂದೇ ವರ್ಗದವರಲ್ಲ. ಎಲ್ಲ ಮಹಿಳೆಯರಿಗೆ ಸಂಬಂಧಿಸಿದ ಕೆಲವು



ಶ್ರೀಮತಿ ರಂಗನಾಯಕಮ್ಮ ಮತ್ತು ಪ್ರೊ॥ ಗಾಂಧಿ

ಸಾಮಾನ್ಯ ಸಮಸ್ಯೆಗಳಿರುತ್ತವೆ. ಅಲ್ಲದೆ, ದುಡಿಮೆಯ ಸ್ಥಳವನ್ನು ಕುರಿತಂತೆ ಪ್ರತ್ಯೇಕ ಸಮಸ್ಯೆಗಳಿರುತ್ತವೆ. ದುಡಿಯುವ ಮಹಿಳೆಯರಿಗೆ ಯಜಮಾನ ಸ್ತ್ರೀ-ಪುರುಷರೊಡನೆ ಇರುವುದು ಬೇರೆಯದೇ ಆದ ಸಮಸ್ಯೆಗಳು. ಆದ್ದರಿಂದ ಮಹಿಳಾ ಚಳುವಳಿಗೆ ಸ್ತ್ರೀ-ಪುರುಷ ಸಮಾನತ್ವವೇ ಪ್ರಧಾನ ಅಂಶವಾಗಿರಬೇಕು. ದಿನನಿತ್ಯದ ಜೀವಿತದಲ್ಲಿರುವ ಸಮಸ್ಯೆಗಳ ವಿರುದ್ಧದ ಹೋರಾಟಗಳೇ ಸ್ತ್ರೀ-ಪುರುಷರ ನಡುವೆ ಸಮಾನತೆಯನ್ನು ತರುವ ಸಾಧನಗಳು. ಇಂತಹ ಹೋರಾಟಗಳೇ ತಪ್ಪು ಹಾದಿಯನ್ನು ಹಿಡಿದರೆ, ಅದು ಯಾವ ಪ್ರಗತಿಯನ್ನೂ ಸಾಧಿಸಲಾರದು. ವೇಶ್ಯೆಯರ ಪ್ರಶ್ನೆಗೆ ಕೆಲವರು ಲೈಸೆನ್ಸ್ ನೀಡಬೇಕೆಂದು ಆಗ್ರಹಿಸುತ್ತಾರೆ. ಮತ್ತೆ ಕೆಲವರು ಮನೆಗೆಲಸಕ್ಕೆ ಗಂಡನೋ, ಸರ್ಕಾರವೋ ಕೂಲಿ ಕೊಡಬೇಕೆಂದು ಆಗ್ರಹಿಸುತ್ತಾರೆ. ಹೋರಾಟಗಳು ಸರಿಯಾದ ದಿಕ್ಕಿನಲ್ಲಿ ಇರದಿದ್ದರೆ, ಆಗ ಅವು ಅನುಪಯುಕ್ತ ಪರಿಹಾರಗಳು.

**ಹೊಸತು:** ನಿಮ್ಮನ್ನು ಮಾರ್ಕ್ಸ್‌ವಾದಿ ಸ್ತ್ರೀವಾದಿ ಎಂದು ಕರೆಯಬಹುದೇ ?

**ರಂಗನಾಯಕಮ್ಮ :** ಮಾರ್ಕ್ಸ್‌ವಾದ ನನ್ನ ದೃಷ್ಟಿಕೋನ. ಆದ್ದರಿಂದ ನಾನು ಮಾರ್ಕ್ಸ್‌ವಾದಿ ಅಷ್ಟೇ. ಆದರೆ ನಾನು ಯಾವ ಕಮ್ಯುನಿಸ್ಟ್ ಪಕ್ಷದವಳೂ ಅಲ್ಲ. ಆದ್ದರಿಂದ ನಾನು ನನ್ನ ಬದುಕಿನ ಆಚರಣೆಯಲ್ಲಿ, ನಂಬಿಕೆಯಲ್ಲಿ ಮಾರ್ಕ್ಸ್‌ವಾದಿ. ಸ್ತ್ರೀ-ಪುರುಷ ಸಮಾನತೆಯೆನ್ನುವುದು ಸಮಾಜದ ಇನ್ನಿತರ ಸಂಬಂಧಗಳಲ್ಲಿ ಅದು ಇಲ್ಲದಿರುವಾಗಲೂ ಸಾಧಿಸಬಹುದೆಂಬುದು ಸುಳ್ಳು ಮಾತು. ಎಲ್ಲ ರೀತಿಯ ಸಮಾನತೆಯನ್ನು ಸಾಧಿಸುವುದಕ್ಕೆ ಮಾರ್ಕ್ಸ್‌ವಾದಿ ತಾತ್ವಿಕ ನೆಲೆಗಟ್ಟಿನ ಮೇಲೆ ದುಡಿಯುವ ವರ್ಗದ ಹೋರಾಟವೊಂದೇ ದಾರಿ ಎಂದು ದೃಢವಾಗಿ ನಂಬಿರುವವರೇ ನಿಜವಾದ ಮಾರ್ಕ್ಸ್‌ವಾದಿಗಳು. ಇದರಲ್ಲೇ ಸ್ತ್ರೀ-ಪುರುಷ ಸಮಾನತೆಯೆನ್ನುವುದು ಅಡಕವಾಗಿರುತ್ತದೆ. ಆದ್ದರಿಂದ ಮಾರ್ಕ್ಸ್‌ವಾದಿ ಸ್ತ್ರೀವಾದಿ ಎಂಬ ಪ್ರತ್ಯೇಕ ಹೆಸರು ಬೇಕಿಲ್ಲ. ಆದರೂ ನನ್ನನ್ನು ಮಾರ್ಕ್ಸ್‌ವಾದಿ ಸ್ತ್ರೀವಾದಿ ಎಂದು ಕರೆದರೆ ಅದಕ್ಕೆ ನನ್ನದೇನೂ ಅಭ್ಯಂತರವಿಲ್ಲ. ಎಲ್ಲ ರೀತಿಯ ಅಸಮಾನತೆಗಳಿಂದ ಬಾಧೆಗೊಳಗಾದವರೆಲ್ಲರ ವಿಮೋಚನೆಯಾಗಬೇಕೆಂಬ ನನ್ನನ್ನು ಕೇವಲ ಸ್ತ್ರೀವಾದಿ ಎಂದು ಕರೆಯುವುದು ಸರಿಯೇ ?

**ಹೊಸತು :** ಮಾರ್ಕ್ಸ್‌ವಾದಿ ಸ್ತ್ರೀವಾದಿಗಳೆಂದು ಪ್ರಸಿದ್ಧರಾದ ಶೈಲಾ ರೊಬಾಥಮ್, ಜೂಲಿಯೆಟ್ ಮಿಶೆಲ್ ಮುಂತಾದವರ ಬಗ್ಗೆ ನಿಮ್ಮ ಅಭಿಪ್ರಾಯವೇನು ? ಸ್ತ್ರೀವಾದಿ ಪ್ರಶ್ನೆಯನ್ನು ಅರ್ಥ ಮಾಡಿಕೊಳ್ಳಲು ಮಾರ್ಕ್ಸ್‌ವಾದಕ್ಕೆ ಕೆಲವು ಮಿತಿಗಳಿವೆ, ಎಂಬುದರ ಬಗ್ಗೆ ನಿಮ್ಮ ಅಭಿಪ್ರಾಯವೇನು ?

**ರಂಗನಾಯಕಮ್ಮ :** ಶೈಲಾ ರೊಬಾಥಮ್, ಜೂಲಿಯೆಟ್ ಮಿಶೆಲ್– ಇವರುಗಳ ಹೆಸರು ಕೇಳಿದ್ದೇನೆ. ಅಲ್ಲದೆ, ಕೇಟ್ ಮಿಲೆಟ್, ಶುಲಾಮಿತ್ ಫೈರ್‌ಸ್ಟನ್, ಜಾನ್ ಓಕ್ಲೆ– ಇವರುಗಳನ್ನು ನಾನು ಬಲ್ಲೆ. ಅವರ ವಿಚಾರಗಳ ಬಗ್ಗೆ ಕೇಳಿ ಗೊತ್ತು. ಆದರೆ ನಾನೇ ಸ್ವತಃ ಓದಿಕೊಂಡಿಲ್ಲ. ಅವರ ಬಗೆಗಿನ ನನ್ನ ಜ್ಞಾನ ಬಹಳ ಕಡಿಮೆ.

ಮಾರ್ಕ್ಸ್‌ವಾದವನ್ನು ಟೀಕಿಸುವ ಸ್ತ್ರೀವಾದಿಗಳೊಡನೆ ನನ್ನನ್ನು ಗುರುತಿಸಿಕೊಳ್ಳಲಾರೆ. ಹಾಗೆಯೇ ಮಹಿಳಾ ಪ್ರಶ್ನೆಯನ್ನು ಅರ್ಥ ಮಾಡಿಕೊಳ್ಳಲು ಮಾರ್ಕ್ಸ್‌ವಾದದಲ್ಲಿ ಸುಧಾರಣೆಗಳು ಅಗತ್ಯ ಎಂಬುದನ್ನು ನಾನು ಒಪ್ಪುವುದಿಲ್ಲ.

ಡಾ॥ ಎನ್. ಗಾಯತ್ರಿ
೧೧೮, ಸ್ಕೈಲೈನ್ ಸುರಭಿ, ವಿದ್ಯಾಪೀಠ ರಸ್ತೆ ಬೆಂಗಳೂರು - ೫೬೦ ೦೧೯

With Best Compliments From

D. M. Ravikumar



TYPE FOUNDRY

Graphic, Spares & Service

* Offset Printing Machinery * Spares * Springs
* Chemicals * Inks * other Materials

# 8/1, P. S. Lane, 3rd Cross, Cottonpet, Bangalore-53
(Behind Thirumala Lodge, Opp. Om Shakthi Lodge)
Phone : 41221088, Mobile : 9845068788
e-mail : dmmspares@yahoo.com

Spare Parts - Springs - Materials

Complete solution for Offset Printers, Mini Offset Printers, Machinery, Cutting Machine, Perforation, Spiral & Die Punching, Power Pinning, Lamination, Master Heater, Rubber Suckers, Paste-up Materials, Chemicals, Rubber Blanket, Cleaning Wipers, Cutting Machine Blades, Gears, Rubber Sponge, Punching Materials and Industrial Supplies.

# 'ತಾಯಿ' ಮತ್ತು ಸಾಮ್ರಾಜ್ಯಶಾಹಿ ವಿರೋಧಿ ಹೋರಾಟ




ಸಾಮಾನ್ಯವಾಗಿ ನಮಗೆ ಎಂತಹ ಕಲೆ, ಸಾಹಿತ್ಯ, ಸಂಸ್ಕೃತಿ ಹಾಗೂ ಹೋರಾಟ ಬೇಕು ಎಂಬ ಆಶಯವನ್ನಿಟ್ಟುಕೊಂಡೇ ಅವುಗಳ ಬಗೆಗೆ ಚರ್ಚೆ ನಡೆಯುತ್ತದೆ. ಅದು ನಮಗೆ ಎಂತಹ ಸಮಾಜ ಬೇಕು ಎಂಬ ರಾಜಕೀಯ ದೃಷ್ಟಿಕೋನವನ್ನು ಅವಲಂಬಿಸಿದೆ. ಕರ್ನಾಟಕವೂ ಸೇರಿದಂತೆ ಭಾರತದ ಸಾಮಾನ್ಯ ಜನತೆ ಸಾಮ್ರಾಜ್ಯಶಾಹಿಯ ಸುತ್ತುವರೆದ ಸುಲಿಗೆಗೆ ಸೋತು ಸುಣ್ಣವಾಗಿದ್ದಾರೆ. ಸಾಮ್ರಾಜ್ಯಶಾಹಿಯು ತನ್ನ ವಿರುದ್ಧದ ಪ್ರತಿಭಟನೆ ಮತ್ತು ಹೋರಾಟವನ್ನಲ್ಲದೆ ಬೇರೆ ಏನನ್ನೂ ಸೃಷ್ಟಿ ಮಾಡಲು ಸಾಧ್ಯವಿಲ್ಲದ ಸ್ಥಿತಿ ತಲುಪಿದೆ. ಅಥವಾ ಇದುವೇ ಅದರ ನಿಜವಾದ ಆಂತರಿಕ ವಸ್ತುಸ್ಥಿತಿ ಕೂಡ. ಪರಿಸ್ಥಿತಿ ಹೀಗಿದ್ದಾಗಲೂ ಅದು ತನ್ನ ಶೋಷಣೆಯ ವಿಧಾನಗಳನ್ನು ಬದಲಾಯಿಸುತ್ತಲೆ ಸಾಗಿದೆ. ಸುಲಿಗೆಯನ್ನು ಸುಧಾರಣೆ ಎಂತಲೂ, ವಿಗತಿಯನ್ನು ಪ್ರಗತಿ ಎಂತಲೂ ಪ್ರಚಾರ ಮಾಡುತ್ತಲೆ ಹೋಗುತ್ತಿದೆ. ಭಾರತವೂ ಸೇರಿದಂತೆ ಜಗತ್ತಿನಾದ್ಯಂತ ಅದರ ಸುಲಿಗೆ ಹಾಗೂ ಶೋಷಣೆಯ ವಿರುದ್ಧ ರಾಜಿ ರಹಿತ ಹೋರಾಟಗಳು ನಡೆಯುತ್ತಿವೆ. ಈ ಹೋರಾಟಗಳ ಭಾಗವಾಗಿ ಕಲೆ, ಸಾಹಿತ್ಯ, ಸಂಸ್ಕೃತಿಗಳ ಚರ್ಚೆಯೂ ನಡೆಯುತ್ತಿದೆ. ಆದರೆ ಇದೇ ಕಾಲಕ್ಕೆ ಸಾಮ್ರಾಜ್ಯಶಾಹಿಯು 'ಪೋಸ್ಟ್ ಮಾಡರ್ನಿಸಂ' ಎಂಬ ತನ್ನ ಜನವಿರೋಧಿ ಸೈದ್ಧಾಂತಿಕ ಅಸ್ತ್ರವನ್ನೂ ಅತ್ಯಂತ ಬಲವಾಗಿ ಸಾಹಿತ್ಯ, ಸಂಸ್ಕೃತಿ ಮತ್ತು ವೈಚಾರಿಕ ವಲಯಗಳಲ್ಲಿ ಹರಿಯಬಿಟ್ಟಿದೆ. ಅಂದರೆ ಸಾಮ್ರಾಜ್ಯಶಾಹಿ ಕೇವಲ ತನ್ನ ಭೌತಿಕ ದಾಳಿ, ಲೂಟಿಯ ಮೂಲಕ ಮಾತ್ರ ಬರುತ್ತಿಲ್ಲ. ಬದಲಾಗಿ ಅದು ತನ್ನದೇ ಆದ ಆಲೋಚನಾ ಕ್ರಮ, ಜೀವನ ವಿಧಾನ, ಸಂಸ್ಕೃತಿ ಈ ಎಲ್ಲವನ್ನೂ ಒಳಗೊಂಡ ಒಂದು ಸಾಮಾಜಿಕ ವ್ಯವಸ್ಥೆಯಾಗಿ ಬರುತ್ತಿದೆ. ಹಾಗಾಗಿ ಸಾಮ್ರಾಜ್ಯಶಾಹಿಯ ಸುತ್ತುವರೆದ ದಾಳಿಯ ಸಮಗ್ರ ಹಾಗೂ ಸಂಕೀರ್ಣ ಆಯಾಮಗಳನ್ನು ಗ್ರಹಿಸುವ ಹಾಗೂ ಅದಕ್ಕೆ ಪರ್ಯಾಯವನ್ನು ಕಂಡುಕೊಳ್ಳುವ ವಿಧಾನವೇ ಸಾಮ್ರಾಜ್ಯಶಾಹಿ ವಿರೋಧಕ್ಕೆ ಪರ್ಯಾಯ ದಾರಿಯಾಗಿದೆ. ಇಂದು ಹೋರಾಟ, ಬದ್ಧತೆ, ಸಾಮಾಜಿಕ ಜವಾಬ್ದಾರಿ ಇವುಗಳ ಬಗ್ಗೆ ಸಾಕಷ್ಟು ಮಾತುಕತೆ ಚರ್ಚೆ ನಡೆಯುತ್ತಿವೆ. ಆದರೆ ಅವುಗಳಲ್ಲಿ ಶಕ್ತಿಶಾಲಿಯಾದ ರಾಜಕೀಯ ಧೋರಣೆಯ ಗೈರುಹಾಜರಿ ಇದೆ. ೧೯೯೦ರ ದಶಕದ ನಂತರ ಸಾಮ್ರಾಜ್ಯಶಾಹಿಯು ತನ್ನ ನವವಸಾಹತು ಲೂಟಿಯನ್ನು ತೀವ್ರಗೊಳಿಸಿ, ಅದನ್ನು ಅನಿವಾರ್ಯವೆಂದು ಒಪ್ಪುವಂತೆ ಮಾಡಲು ವೈಚಾರಿಕ ರಂಗದಲ್ಲಿ ಸಾಕಷ್ಟು ತಂತ್ರಗಳನ್ನು ನಡೆಸಿತು. ಅವುಗಳಲ್ಲಿ 'ಮಾರ್ಕ್ಸ್‌ವಾದ ಮುಗಿಯಿತು', 'ಮಾರ್ಕ್ಸ್‌ವಾದ ಸೋತಿತು' ಎಂಬ ಘೋಷಣೆಗಳು ಮುಖ್ಯವಾದವು. ಕರ್ನಾಟಕವೂ ಸೇರಿದಂತೆ ಭಾರತದಾದ್ಯಂತ ೬೦-೭೦ರ ದಶಕಗಳಲ್ಲಿ ವರ್ಗದೃಷ್ಟಿಕೋನದ ಹೋರಾಟ ಮತ್ತು ವಿಚಾರಗಳು ಮುಂಚೂಣಿಗೆ ಬರಲಾರಂಭಿಸಿದವು. ಅಂದಿನಿಂದ ಇಂದಿನವರೆಗೆ ಅಂಬೇಡ್ಕರ್ ಮತ್ತು ಲೋಹಿಯಾ ಅಭಿಮಾನಿಗಳು (ಇವರನ್ನು ಅಂಬೇಡ್ಕರ್‌ವಾದಿಗಳು, ಲೋಹಿಯಾವಾದಿಗಳು ಎಂದು ತಪ್ಪಾಗಿ ಕರೆಯಲಾಗುತ್ತಿದೆ) ಹೊಸ ಸಂಶೋಧನೆಯೊಂದನ್ನು ಹರಡತೊಡಗಿದರು. ಅದೇನೆಂದರೆ 'ಭಾರತದಲ್ಲಿ ವರ್ಗಗಳಿಲ್ಲ, ಜಾತಿಗಳು ಮಾತ್ರ ಇವೆ, ಮಾರ್ಕ್ಸ್‌ವಾದ ಹೊರದೇಶದ್ದು' ಎಂಬುದು. 'ಕಲೆ, ಸಾಹಿತ್ಯ, ಸಂಸ್ಕೃತಿ, ಸಮಾಜ ಮುಂತಾದುವುಗಳನ್ನು ಮಾರ್ಕ್ಸ್‌ವಾದಿ ದೃಷ್ಟಿಕೋನದಲ್ಲಿ ಗ್ರಹಿಸುವುದು ವ್ಯರ್ಥ' ಎಂಬ ನಂಬಿಕೆಯನ್ನು ವ್ಯಾಪಕವಾಗಿ ಹರಡಲಾಯಿತು. ಮತ್ತೊಂದು ಕಡೆ ಸ್ಥಳೀಯತೆ, ದೇಶಿ, ಬಹುಸಂಸ್ಕೃತಿ, ಬಹುಭಾಷೆ, ಧರ್ಮ ಮುಂತಾದುವುಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಗ್ರಹಿಸುವ ವಿಧಾನವನ್ನು ಜಾರಿಗೊಳಿಸಲಾಯಿತು. ಫಲವಾಗಿ ಅಸಮಾನತೆ, ಶೋಷಣೆ, ವರ್ಗಸಂಘರ್ಷ ಇವುಗಳನ್ನು ಬಿಟ್ಟು ಉಳಿದೆಲ್ಲ ವಿಷಯಗಳು ವೈಚಾರಿಕ ರಂಗದ ವ್ಯಾಪ್ತಿಯನ್ನು ಆಕ್ರಮಿಸಿಕೊಂಡವು. ಜಗತ್‌ಪ್ರಸಿದ್ಧ ಸಮಾಜವಾದಿ ಲೇಖಕ ಮ್ಯಾಕ್ಸಿಂ ಗೋರ್ಕಿ ಅವರ 'ತಾಯಿ' ಕಾದಂಬರಿಯ ಚರ್ಚೆಗೆ ಇದೊಂದು ತಾತ್ವಿಕ ಪ್ರವೇಶಿಕೆ.

ಗೋರ್ಕಿ 'ತಾಯಿ' ಕಾದಂಬರಿ ಬರೆಯಲು ನಿರ್ಧರಿಸಿದುದು ೧೯೦೨ರಲ್ಲಿ. ನಿಜ್ನಿ ನೊವ್ಗೊರೋದ್‌ನ ಕಾರ್ಮಿಕರು

ಡಾ॥ ಬಿ. ಎಂ. ಪುಟ್ಟಯ್ಯ



'ತಾಯಿ' ಕಾದಂಬರಿ ಜಗತ್ತಿನ ಯಾವುದೇ ಸಮಾಜಕ್ಕೆ ಸಂಬಂಧಿಸಿದ ಮೂಲಭೂತ ಪ್ರಶ್ನೆಗಳನ್ನು ಎತ್ತುತ್ತದೆ. ಈ ಹಿನ್ನೆಲೆಯಲ್ಲಿ ಇದು ಮನುಷ್ಯ ಸಮಾಜ ಇರುವ ಜಗತ್ತಿನ ಯಾವುದೇ ಪ್ರದೇಶದ, ಯಾವುದೇ ಭಾಗದ ಜನಜೀವನದ ಕಥೆಯಾಗಿ, ವ್ಯಥೆಯಾಗಿ, ಸಾಹಿತ್ಯವಾಗಿ ಕ್ರಿಯಾಶೀಲವಾಗುತ್ತದೆ. ಈ ಹಿನ್ನೆಲೆಯಲ್ಲಿ ಕಾದಂಬರಿಯಲ್ಲಿನ ಮುಂದಿನ ಸಾಲುಗಳನ್ನು ಗಮನಿಸಬಹುದು : "ಜನತೆಯ ಬಾಳು ಏಕಿಷ್ಟು ಹೊಲಸಾಗಿದೆ ಎಂಬುದನ್ನು ತಿಳಿಯುವುದಕ್ಕಾಗಿ, ಜನರು ತಾವೇ ಏಕಿಷ್ಟು ಹೊಲಸಾಗಿದ್ದಾರೆ ಎಂಬುದನ್ನು ತಿಳಿಯುವುದಕ್ಕಾಗಿ, ಅವರ ಬಾಳಿನ ಮೂಲವನ್ನು ಪರಿಶೀಲಿಸುವುದು ಅಗತ್ಯ. ಪೂರ್ಣ ಸತ್ಯವನ್ನೂ ಪೂರ್ಣ ಮಿಥ್ಯವನ್ನೂ ನಾವು ತಿಳಿದುಕೊಳ್ಳಲೇಬೇಕು."

## ನಾಳಿನ ಸ್ಪರ್ಧಾತ್ಮಕ ಜಗತ್ತಿಗೆ ಇಂದಿನಿಂದಲೇ ನಿಮ್ಮ ತಯಾರಿ

+2 ಹಂತದ ವಿಜ್ಞಾನದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ

ಉತ್ತಮ ತರಬೇತಿ ಕೇಂದ್ರ




**ನಮ್ಮಲ್ಲಿ ನಡೆಯುವ ಕೋರ್ಸ್‌ಗಳು**

I & II PUC
CBSE XI & XII,
CET, AIEEE
SSLC & X ICSE.




THE SOUTHERN ACADEMY FOR FORMAL EDUCATION

**Head Office: # 271/1, 14th Cross, CMH Road (Opp. Health & Glow), Indiranagar 2nd Stage, Bangalore - 560 038. Ph: 25286126 / 41523636.**

BRANCHES
JEEVAN BHIMA NAGAR ★ COX TOWN ★ KORAMANGALA ★ MALLESHWARAM ★ HSR LAYOUT
41269333 | 41253888 | 41313888 | 42061084 | 65330797

ವಾಸಿಸುತ್ತಿದ್ದ ಉಪನಗರ ಸೋರ್ಮೊವೊನಲ್ಲಿ ಮೇ ದಿನಾಚರಣೆ ಆಚರಿಸಿದರು. ಅದರಲ್ಲಿ ಭಾಗವಹಿಸಿದವರನ್ನು ಬಂಧಿಸಿ, ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿಪಡಿಸಿದರು. ಗೋರ್ಕಿ ಮೇ ದಿನಾಚರಣೆಯಲ್ಲಿ ಭಾಗವಹಿಸಿದ್ದ ಅನೇಕರನ್ನು ಕಂಡಿದ್ದರು. ಅದರಲ್ಲಿ ಧ್ವಜ ಹಿಡಿದಿದ್ದ ಸೋರ್ಮೊವೊ ಸೋಷಿಯಲ್ ಡೆಮೊಕ್ರಾಟಿಕ್ ಸಂಘಟನೆಯ ನಾಯಕರಲ್ಲೊಬ್ಬನಾಗಿದ್ದ ಕಾರ್ಮಿಕ ಪ್ಯೋತ್ರ್ ಜಲೋಮೊವ್ ಮತ್ತು ಅವನ ತಾಯಿ ಅನ್ನ ಕಿರಿಲ್ಲೋವ್ನ ಜಲೋಮೊವಳನ್ನು ವೈಯಕ್ತಿಕವಾಗಿ ತಿಳಿದಿದ್ದರು. ಇವರೇ ಕಾದಂಬರಿಯ ಪಾವೆಲ್ ವ್ಲಾಸೋವ್ ಹಾಗೂ ಪೆಲಗೇಯ ನಿಲೋವ್ನ ವ್ಲಾಸೋವ ಪಾತ್ರಗಳಿಗೆ ಮೂಲ ವ್ಯಕ್ತಿಗಳು. ೧೯೦೬ರಲ್ಲಿ ಮೊದಲ ಬಾರಿಗೆ ಇದರ ಇಂಗ್ಲಿಷ್ ಆವೃತ್ತಿ ಪ್ರಕಟವಾಯಿತು. ಆಗ ಅದರ ಹೆಸರು 'ಸಂಗಾತಿಗಳು' ಎಂದಿತ್ತು. ಇದರ ಪ್ರಕಾರ ೨೦೦೬ಕ್ಕೆ 'ತಾಯಿ' ಕಾದಂಬರಿಗೆ ನೂರು ವರುಷ ತುಂಬಿತು.

ಭಾರತದ ಹಲವು ಭಾಷೆಗಳೂ ಸೇರಿದಂತೆ ಜಗತ್ತಿನ ಸುಮಾರು ೧೨೭ಕ್ಕೂ ಹೆಚ್ಚು ಭಾಷೆಗಳಿಗೆ ಈ ಕಾದಂಬರಿ ಅನುವಾದವಾಗಿದೆ. ಕನ್ನಡದ ಪ್ರಗತಿಶೀಲ ಲೇಖಕ ನಿರಂಜನ ಅವರು ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ೧೯೪೯ರಲ್ಲಿ 'ಚಿತ್ರಗುಪ್ತ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಇದು ಪ್ರಕಟವಾಯಿತು. ೧೯೫೪ರಲ್ಲಿ ಮೈಸೂರಿನ ಭಾರತಿ ಪ್ರಕಾಶನ ಪುಸ್ತಕ ರೂಪದಲ್ಲಿ ಇದನ್ನು ಪ್ರಕಟಿಸಿತು. ನಂತರ ಮಾಸ್ಕೋದ ರಾದುಗ ಪ್ರಕಾಶನ ೧೯೮೧ರಲ್ಲಿ ಇದರ ಎರಡನೆ ಆವೃತ್ತಿಯನ್ನು ಪ್ರಕಟಿಸಿತು. ೨೦೦೬ರಲ್ಲಿ ನವಕರ್ನಾಟಕ ಪ್ರಕಾಶನವು 'ತಾಯಿ' ಕಾದಂಬರಿ ಪ್ರಕಟವಾದ ನೂರು ವರುಷದ ನೆನಪಿಗೆ ಇದರ ಮೂರನೆ ಮುದ್ರಣವನ್ನು ಹೊರತಂದಿದೆ. 'ತಾಯಿ' ಕಾದಂಬರಿ ಕನ್ನಡಕ್ಕೆ ಅನುವಾದವಾಗಿ ಅರ್ಧಶತಮಾನವೇ ಆಗಿಹೋಯಿತು. ಈ ಅವಧಿಯಲ್ಲಿ ಇದು ಕನ್ನಡದ್ದೇ, ಕನ್ನಡ ಜಗತ್ತಿನದ್ದೇ ಎಂಬಷ್ಟರಮಟ್ಟಿಗೆ ಕನ್ನಡ ಸಾಹಿತ್ಯ ಓದುಗರ ಪ್ರಜ್ಞೆಯ ಮತ್ತು ತಿಳುವಳಿಕೆಯ ಭಾಗವಾಗಿದೆ. ೭೦-೮೦ರ ದಶಕಗಳಲ್ಲಿ 'ತಾಯಿ' ಕಾದಂಬರಿ ನಾಡಿನ ಚಿಂತಕರಿಗೆ, ಹೋರಾಟಗಾರರಿಗೆ ಸ್ಫೂರ್ತಿ ಮತ್ತು ಮಾರ್ಗದರ್ಶನದ ಕೃತಿಯಾಗಿತ್ತು. ಹಾಗಾಗಿಯೇ ಇದು ಕನ್ನಡದಲ್ಲಿ ಹಲವು ನಾಟಕ ಕೃತಿಯಾಗಿ, ರಂಗ ಕೃತಿಯಾಗಿ ಪ್ರಕಟವಾಯಿತು. ಇತ್ತೀಚೆಗೆ ಬರಗೂರು ರಾಮಚಂದ್ರಪ್ಪ ಅವರು ಇದನ್ನು ಆಧರಿಸಿ ಸಿನಿಮಾ ಕೂಡ ಮಾಡಿದ್ದಾರೆ.

'ತಾಯಿ' ಕಾದಂಬರಿ ಜಗತ್ತಿನ ಯಾವುದೇ ಸಮಾಜಕ್ಕೆ ಸಂಬಂಧಿಸಿದ ಮೂಲಭೂತ ಪ್ರಶ್ನೆಗಳನ್ನು ಎತ್ತುತ್ತದೆ. ಈ ಹಿನ್ನೆಲೆಯಲ್ಲಿ ಇದು ಮನುಷ್ಯ ಸಮಾಜ ಇರುವ ಜಗತ್ತಿನ ಯಾವುದೇ ಪ್ರದೇಶದ, ಯಾವುದೇ ಭಾಗದ ಜನಜೀವನದ ಕಥೆಯಾಗಿ, ವ್ಯಥೆಯಾಗಿ, ಸಾಹಿತ್ಯವಾಗಿ ಕ್ರಿಯಾಶೀಲವಾಗುತ್ತದೆ. ಈ ಹಿನ್ನೆಲೆಯಲ್ಲಿ ಕಾದಂಬರಿಯಲ್ಲಿನ ಮುಂದಿನ ಸಾಲುಗಳನ್ನು ಗಮನಿಸಬಹುದು : ''ಜನತೆಯ ಬಾಳು ಏಕಿಷ್ಟು ಹೊಲಸಾಗಿದೆ ಎಂಬುದನ್ನು ತಿಳಿಯುವುದಕ್ಕಾಗಿ, ಜನರು ತಾವೇ ಏಕಿಷ್ಟು ಹೊಲಸಾಗಿದ್ದಾರೆ ಎಂಬುದನ್ನು ತಿಳಿಯುವುದಕ್ಕಾಗಿ, ಅವರ ಬಾಳಿನ ಮೂಲವನ್ನು ಪರಿಶೀಲಿಸುವುದು ಅಗತ್ಯ. ಪೂರ್ಣ ಸತ್ಯವನ್ನೂ ಪೂರ್ಣ ಮಿಥ್ಯವನ್ನೂ ನಾವು ತಿಳಿದುಕೊಳ್ಳಲೇಬೇಕು. ನಮಗೆ ಬೇಕಾದ್ದೇನು? ತುಂಬಿದ ಹೊಟ್ಟೆ ಮಾತ್ರವೊ? ಖಂಡಿತ ಅಲ್ಲ. ನಮ್ಮ ಬೆನ್ನ ಮೇಲೆ ಹೊರೆ ಹೇರಿ ಕಣ್ಣಿಗೆ ಪರದೆ ಹಾಕಿರುವವರಿಗೆ, ನಾವು ತೋರಿಸಿ ಕೊಡಲೇಬೇಕು - ನಮಗೆ ಪ್ರತಿಯೊಂದೂ ಕಾಣಿಸುತ್ತೆ ಎಂದು. ನಾವು ಮೂರ್ಖರಲ್ಲ, ತುಂಬಿದ ಹೊಟ್ಟೆಗಾಗಿ ಮಾತ್ರ ಆಸೆ ಪಡೋಕೆ ನಾವೇನೂ ಮೃಗಗಳಲ್ಲ. ಮಾನವರಿಗೆ ಯೋಗ್ಯವಾದ ಬಾಳ್ವೆ ನಡೆಸೋದು ನಮಗೆ ಬೇಕಾಗಿದೆ. ನಮ್ಮ ವೈರಿಗಳು ಕಷ್ಟದ ದುಡಿಮೆಯ ಹೊರೆ ನಮ್ಮ ಮೇಲೆ ಹೊರಿಸಿದರೇನಂತೆ? ಸಹೃದಯ ಮಾನವೀಯ ಸೋದರತಾ ಭಾವನೆಯಿರುವ ರಾಜ್ಯದೆಡೆಗೆ, ಈ ಕೊಳಕು ಜೀವನದ ಕೆಸರಿನ ಮೇಲೆ, ನಾವು ಸೇತುವೆ ಕಟ್ಟಬೇಕು. ಸಂಗಾತಿಗಳೇ ಅದೇ ನಮ್ಮೆದುರಿಗಿರುವ ಕಾರ್ಯಭಾರ'' (ಪುಟ ೪೨, ೪೪). ಕಾದಂಬರಿಯ ಆರಂಭದಲ್ಲೆ ಹೋರಾಟಕ್ಕೆ ಸಜ್ಜಾಗುತ್ತಿರುವ ಯುವಕ ಯುವತಿಯರ ಮೂಲಕ ಮೇಲಿನ ಮಾತುಗಳು ಕಾದಂಬರಿಯಲ್ಲಿ ಬಂದಿವೆ. ಹೋರಾಟವೆಂದರೆ, ಕ್ರಾಂತಿ ಎಂದರೆ ಕೇವಲ ಹೊಟ್ಟೆಯ ಅಗತ್ಯವನ್ನು ನೀಗಿಸಿಕೊಳ್ಳುವುದು ಮಾತ್ರವಲ್ಲ, ಮಾನವರಿಂದ ಮಾನವರ ಶೋಷಣೆಯನ್ನು ಕೊನೆಗೊಳಿಸುವುದೇ ಅದರ ಅಂತಿಮ ಉದ್ದೇಶ ಎಂಬುದು ಬಹಳ ಮುಖ್ಯ. ಇಡೀ ವ್ಯವಸ್ಥೆ ಯಾಕೆ ಎಲ್ಲಾ ರೀತಿಯಲ್ಲೂ ಕೆಟ್ಟುಹೋಗಿದೆ? ಇದಕ್ಕೆ ಕಾರಣವೇನು ಹಾಗೂ ಪರಿಹಾರದ ದಾರಿ ಯಾವುದು ಎಂಬುದನ್ನು ಕಾದಂಬರಿ ಉದ್ದಕ್ಕೂ ನಿರಂತರವಾಗಿ ಅನ್ವೇಷಿಸುತ್ತಾ ಹೋಗುತ್ತದೆ. ಈ ಅನ್ವೇಷಣೆಯ ವಿಧಾನ ಯಾಂತ್ರಿಕವಾದುದಲ್ಲ, ನಿರಂತರ ಬದಲಾಗುತ್ತ, ಬದಲಾಗಿಸುತ್ತ ಸಾಗುವಂತಹದ್ದು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಇದು ಪ್ರಕ್ರಿಯಾಶೀಲವಾದುದು. ಹಾಗಾಗಿಯೇ ಇಡೀ ಕಾದಂಬರಿಯಲ್ಲಿ ಯಾವ ಸಂಗತಿಯೂ, ಯಾವ ಸನ್ನಿವೇಶವೂ ಜಡರೂಪದಲ್ಲಿ ಕ್ರಿಯಾಶೀಲವಾಗುವುದಿಲ್ಲ.

ಜನರ ವಸ್ತುಸ್ಥಿತಿಯನ್ನು ಕಾದಂಬರಿ ಕಟ್ಟಿಕೊಡುವುದು ಹೀಗೆ: ''ಅವರೊಳಗೆ ಪರಸ್ಪರ ಸಂಬಂಧಗಳಲ್ಲಿ ಬಹಳ ಮುಖ್ಯವಾಗಿದ್ದುದು, ಒಬ್ಬರ ಬಗ್ಗೆ ಇನ್ನೊಬ್ಬರಿಗಿದ್ದ ಮುಚ್ಚುಮರೆಯ ಅಸೂಯಾ ಭಾವನೆ. ಈ ಭಾವನೆಯು ವಾಸಿಮಾಡಲು ಅಸಾಧ್ಯವಾದ ಅವರ ತೋಳಿನ ಬಳಲಿಕೆಯಷ್ಟೇ ಹಳೆಯದಾಗಿತ್ತು. ಈ ಮನೋಭಾವನೆಯ ರೋಗವನ್ನು ಪಿತ್ರಾರ್ಜಿತವಾಗಿ ಪಡೆದೇ ಅವರು ಹುಟ್ಟುತ್ತಿದ್ದರು. ಕರಿಯ ನೆರಳಿನಂತೆ ಆ ಭಾವನೆ, ಗೋರಿಯವರೆಗೂ ಅವರನ್ನು ಹಿಂಬಾಲಿಸುತ್ತಿತ್ತು. ಇದರ ಫಲವಾಗಿಯೇ ಅವರು ಗುರಿಯಿಲ್ಲದ ತುಚ್ಛವಾದ ವಿವೇಕಶೂನ್ಯವಾದ ಕ್ರೂರ ಕೃತ್ಯಗಳನ್ನು ಮಾಡುತ್ತಿದ್ದರು'' (ಪುಟ ೧೮). ಬಹುಶಃ ಈ ಸ್ವಭಾವಗಳಿಲ್ಲದ ಜನಸಮೂಹಗಳು ಸಿಗಲಾರವು. ಜನತೆಯ ಬಗೆಗೇ ವರ್ಗಪಕ್ಷಪಾತಿಯಾದ ಪ್ರಗತಿಪರ ಆಶಯದ ಲೇಖಕ ಸಮಾಜವಾದಿ ದೃಷ್ಟಿಕೋನದವನಾದಾಗ ಮಾತ್ರ ಈ ಬಗೆಯಲ್ಲಿ ಜನಸಮೂಹವನ್ನು ಗ್ರಹಿಸಬಲ್ಲ. ಇಲ್ಲದಿದ್ದರೆ ಈ ಕ್ರೂರ ವಾಸ್ತವದ ಮೇಲೆ ಹುಸಿ ವಾಸ್ತವದ ಸೌಧ ಕಟ್ಟುತ್ತಾನಷ್ಟೆ. ಜನಸಮೂಹಗಳ ಈ ಬಗೆಯ ಕ್ರೂರ ಸ್ವಭಾವಕ್ಕೆ ಕಾರಣ ಎಲ್ಲಿದೆ ಎಂಬ ಶೋಧನೆ ಕಾದಂಬರಿಯ ಬಹಳ ಮುಖ್ಯವಾದ ಹುಡುಕಾಟ. ಕ್ರೂರ ಸ್ವಭಾವ ಜನರಿಂದಲೇ ಅಥವಾ ವ್ಯಕ್ತಿಗಳಿಂದಲೇ ಹುಟ್ಟುತ್ತದೊ ಅಥವಾ ವ್ಯವಸ್ಥೆಯು ತನ್ನ ಕ್ರೌರ್ಯವನ್ನು ಪ್ರಕಟಿಸಲು ವ್ಯಕ್ತಿಗಳನ್ನು ಸಾಧನವನ್ನಾಗಿ ಬಳಸಿ ಕೊಳ್ಳುತ್ತದೊ ಎಂಬ ಮಹತ್ವದ ಪ್ರಶ್ನೆಯನ್ನು ಕಾದಂಬರಿ ಎತ್ತಿಕೊಳ್ಳುತ್ತದೆ. ಇಡೀ ವ್ಯವಸ್ಥೆಯೇ ಅಪರಾಧದಿಂದ ಕೂಡಿದೆ. ವ್ಯವಸ್ಥೆಯಲ್ಲಿ ಮೂಲಕಾರಣವಾಗಿರುವ ಈ ಅಪರಾಧಗಳು ವ್ಯಕ್ತಿಯ ಮೂಲಕವಷ್ಟೇ ಪ್ರಕಟವಾಗುತ್ತವೆ. ಆಗ ಅಂತಹ ವ್ಯಕ್ತಿಗಳೇ ಸಾಮಾನ್ಯ ಗ್ರಹಿಕೆಗೆ ಅಪರಾಧಿಗಳಾಗಿ ಕಾಣುತ್ತಾರೆ. ಮಿಹಯೀಲ್ ವ್ಲಾಸೋವ್ ಅಂಥವರಲ್ಲಿ ಒಬ್ಬ. ಅವನು ತನ್ನ ಹೆಂಡತಿ ಪೆಲಗೇಯಳನ್ನು ಯಾವಾಗಲೂ 'ಹಾದರಗಿತ್ತಿ' ಎಂದೇ ಕರೆಯುತ್ತಿದ್ದ. ಮಗ ಪಾವೆಲ್‌ನನ್ನು 'ನೀನೂ ಸೂಳೆ ಮಗನೆ ಸರಿ' ಎಂದಿದ್ದ (ಪುಟ ೨೧). ಅವನು ಸತ್ತಾಗ ಕೆಲವರು, ''ಅವನು ಬಾಳಿದ್ದೂ ನಾಯಿಯಂತೆ, ಸತ್ತದ್ದೂ ನಾಯಿಯಂತೆ'' ಎಂದು ಮಾತಾಡಿಕೊಂಡರು. ಇದು ಮಿಹಯೀಲ್‌ನ ವಸ್ತುಸ್ಥಿತಿಯ ನಿಜವಾದ ಮೌಲ್ಯಮಾಪನವಲ್ಲ, ಬದಲಾಗಿ ಜನರಿಗೆ ಆ ರೀತಿ ಮಾತಾಡುವಂತಹ ಪ್ರಜ್ಞೆಯನ್ನು ತುಂಬಿರುವ ವ್ಯವಸ್ಥೆಯ ಪ್ರತಿಬಿಂಬ. ಮಿಹಯೀಲ್‌ನ ವಸ್ತುಸ್ಥಿತಿಗೆ ಕಾರಣ ಇರುವುದು ವ್ಯವಸ್ಥೆಯಲ್ಲಿ. ಈ ಬಗೆಯ ಅಸಾಮಾನ್ಯ ಒಳನೋಟವೇ ಸಮಾಜವಾದಿ ಲೇಖಕನ ಗ್ರಹಿಕೆ. ಇದರ ಸೂಕ್ಷ್ಮ ಗೊತ್ತಾಗುವುದು ಕಾದಂಬರಿಯ ಮುಂದಿನ ಸಾಲುಗಳಲ್ಲಿ. ಪಾವೆಲ್ ತನ್ನ ತಾಯಿ ಪೆಲಗೇಯಳಿಗೆ ಹೇಳುತ್ತಾನೆ: ''ಸ್ವಲ್ಪ ಯೋಚಿಸಿ ನೋಡಮ್ಮ. ಎಂತಹ ಬಾಳ್ವೆ ನಮ್ಮದು? ನಲ್ವತ್ತು ವರ್ಷ ವಯಸ್ಸಾಯಿತೆ



ನಿನಗೆ. ಜೀವನದಲ್ಲಿ ನೀನೇನು ಸಾಧಿಸಿದೆ? ಅಪ್ಪ ನಿನಗೆ ಹೊಡೀತಿದ್ದ. ತನ್ನ ಸಂಕಟವನ್ನು, ಜೀವನದ ಎಲ್ಲಾ ಕಹಿಯನ್ನು ಮರೆಯೋಕೆ ಆ ರೀತಿ ಹೊಡೀತಿದ್ದ. ಹಾಗಂತ ಈಗ ನಾನು ತಿಳಕೊಂಡಿದ್ದೇನೆ. ಆ ನರಳಾಟ ಸಹಿಸೋಕೆ ಅವನಿಂದ ಆಗ್ತಿರಲಿಲ್ಲ. ಅದೆಲ್ಲಾ ಯಾಕೆ ಎಲ್ಲಿಂದ ಬರ್ತಿದೆ ಅಂತ ಆತ ತಿಳಕೊಳ್ಳಲೂ ಇಲ್ಲ'' (ಪುಟ ೩೧). ಪಾವೆಲ್ ಈ ಮಾತುಗಳನ್ನು ಕೂಲಿಕಾರರ ಬಗೆಗೆ ಸತ್ಯ ಹೇಳುವ ನಿಷಿದ್ಧ ಪುಸ್ತಕಗಳನ್ನು ಓದಿದ ನಂತರ ಹೇಳುತ್ತಿದ್ದಾನೆ. ಇಂದು ಕೂಲಿಕಾರರ ಬಗೆಗೆ ಸತ್ಯ ಹೇಳುವ ಆಲೋಚನೆಗಳನ್ನೇ ನಯವಾಗಿ ನಿಷೇಧಿಸಲಾಗಿದೆ. ಹಾಗಾಗಿ ಅಪರಾಧದ ವ್ಯವಸ್ಥೆಯ ಕಾರಣಗಳನ್ನು ಮುಚ್ಚಿಟ್ಟು ಜನರ ಮೂಲಕ ವ್ಯಕ್ತವಾಗುತ್ತಿರುವ ಅಭಿಪ್ರಾಯಗಳನ್ನೇ ಮೂಲಕಾರಣ ಎಂದು ತೀರ್ಮಾನಿಸಲಾಗಿದೆ. ಇದೇನೇ ಇರಲಿ, ಮಿಹಯಿಲ್ ವ್ಲಾಸೋವ್‌ನ ಕ್ರೂರತನದ ಹಿಂದೆ ವೈಯಕ್ತಿಕ ಕಾರಣ ಇರದೆ ವ್ಯವಸ್ಥೆಯ ಕ್ರೌರ್ಯವೇ ಅವನ ಮೂಲಕ ಪ್ರಕಟವಾಗುತ್ತಿತ್ತು ಎಂಬುದು ಬಹಳ ಮುಖ್ಯ. ಆತ ಸತ್ತಾಗ ಅಲ್ಲಿ ಸೇರಿದ್ದ ಜನರು ಮತ್ತೊಂದು ಮಾತನ್ನು ಹೇಳಿದ್ದರು: ''ಆತ ಹೋದನೆಂದು ಪೆಲಗೇಯಗೆ (ಆತನ ಹೆಂಡತಿ) ನಿಜವಾಗಿಯೂ ಸಂತೋಷವಾಗಿರಲೇ ಬೇಕು'' (ಪುಟ ೨೩) ಎಂದು. ಆದರೆ ಆತನ ಮಗನಾದ ಪಾವೆಲ್‌ನ ಮೂಲಕ ಬರುವ ಮಾತುಗಳು ಮಿಹಯೀಲ್‌ನನ್ನು 'ಸ್ವತಂತ್ರ ಅಪರಾಧಿ'ಯನ್ನಾಗಿ ಪರಿಗಣಿಸುವುದಿಲ್ಲ; ಅವನ ಸ್ವಭಾವದ ಹಿಂದಿದ್ದ ವ್ಯವಸ್ಥೆಯ ಕ್ರೌರ್ಯವನ್ನು ಅನಾವರಣ ಮಾಡುತ್ತವೆ. ಮುಂದೆ ಕಾದಂಬರಿ ಬೆಳೆಯುವ ಸ್ವರೂಪ ಬಹಳ ಕುತೂಹಲಕಾರಿಯಾದುದು. ಹೆಂಡತಿಯನ್ನು 'ಹಾದರಗಿತ್ತಿ' ಎಂದವನನ್ನು, ಸ್ವತಃ ಮಗನನ್ನು 'ಸೂಳೆ ಮಗನೆ' ಎಂದವನನ್ನು ಉದಾರವಾದಿ ಲೇಖಕರಾಗಿದ್ದರೆ ಅಥವಾ ಕೇವಲ ಪುರುಷ ವಿರೋಧಿ ಮಹಿಳಾ ಪರ ಲೇಖಕರಾಗಿದ್ದರೆ, ಇವರಿಬ್ಬರ (ತಾಯಿ, ಮಗ) ಕೋಪ ಮತ್ತು ಅಸಮಾಧಾನವನ್ನು ಅದೇ ವ್ಯಕ್ತಿಯ (ಮಿಹಯೀಲ್ ವ್ಲಾಸೋವ್) ವಿರುದ್ಧ ಮಾತ್ರವೇ ತಿರುಗಿಸುತ್ತಿದ್ದರು. ಆದರೆ ಸಮಾಜವಾದಿ ಲೇಖಕನ ಸೃಜನಶೀಲ ತಾತ್ವಿಕ ಮಾರ್ಗ ಆ ಸಂಕುಚಿತ ದಾರಿಯನ್ನು ಹಿಡಿಯುವುದಿಲ್ಲ. ಅದು ಮಿಹಯೀಲ್‌ನಂತಹ ವ್ಯಕ್ತಿಯೊಳಗಿನ ಕ್ರೌರ್ಯಕ್ಕೆ ಕಾರಣವಾಗಿರುವ ವ್ಯವಸ್ಥೆಯ ವಿರುದ್ಧ ಇವರಿಬ್ಬರ ಆಕ್ರೋಶ ಮತ್ತು ಅಸಮಾಧಾನವನ್ನು ತಿರುಗಿಸುತ್ತದೆ. ಅಷ್ಟು ಮಾತ್ರವಲ್ಲ, ಅದನ್ನು ಕ್ರಾಂತಿಕಾರಿ ರಾಜಕೀಯ ದೃಷ್ಟಿಕೋನವನ್ನಾಗಿ ಮಾರ್ಪಡಿಸುತ್ತದೆ. ಕೇವಲ ಗಂಡು-ಹೆಣ್ಣುಗಳ ವಿರುದ್ಧದ, ಒಂದು ಕೌಟುಂಬಿಕ ಕಥೆಯಾಗಬಹುದಾಗಿದ್ದ ಈ ಸನ್ನಿವೇಶವನ್ನು ಗೋರ್ಕಿ, ಇಡೀ ವ್ಯವಸ್ಥೆಯ ಕಥೆಯಾಗಿ, ಅಷ್ಟೇ ಅಲ್ಲದೆ ಮಾನವರಿಂದ ಮಾನವರ ಶೋಷಣೆಯ ಇಡೀ ಮನುಕುಲದ ಕಥೆಯಾಗಿ ನಿರೂಪಿಸುತ್ತ ಹೋಗಿದ್ದಾರೆ.

ವ್ಯಕ್ತಿಗಳ ಮೂಲಕ ಪ್ರಕಟವಾಗುವ ಕೆಟ್ಟ ನಡವಳಿಕೆ, ಭಾವನೆಯನ್ನು ನಾಶ ಮಾಡುವುದು ಹೇಗೆ? ಇದೇ ಕಾದಂಬರಿಯ ಶೋಧದ ಕೇಂದ್ರಕಾಳಜಿ. ಮಾನವ ಮನೋಭಾವ, ಚಿಂತನೆಗಳಲ್ಲಿ, ಆಗುತ್ತಿದ್ದ ಕ್ರಾಂತಿಕಾರಿ ಪರಿವರ್ತನೆಗಳ ಮೇಲೆ, ಆತ್ಮಿಕ ಜೀವನದ ಪ್ರಕ್ರಿಯೆಗಳ ಮೇಲೆ ಗಮನವನ್ನು ಕೇಂದ್ರೀಕರಿಸಿ ಗೋರ್ಕಿ ಈ ಪ್ರಕ್ರಿಯೆಗಳ ಹಾಗೂ ಪರಿವರ್ತನೆಗಳ ವಾಸ್ತವ ಹಿನ್ನೆಲೆಯನ್ನು ತೋರಿಸಿಕೊಟ್ಟರು. ಮಾನವರನ್ನು ದಾಸ್ಯಕ್ಕೊಳಪಡಿಸುವ ಬಾಹ್ಯ ಶಕ್ತಿಗಳ ವಿರುದ್ಧದ ಹೋರಾಟ ಮಾತ್ರ ಅವರ ಅಂತರ್ಯವನ್ನು ಬಿಡುಗಡೆ ಮಾಡಬಲ್ಲದು, ಪರಿಶುದ್ಧಗೊಳಿಸಬಲ್ಲದು ಎಂದು 'ತಾಯಿ'ಯ ಪಾತ್ರಗಳ ಆಗುಹೋಗುಗಳು ಮನವೊಪ್ಪುವಂತೆ ತೋರಿಸಿಕೊಡುತ್ತವೆ. ''ಜನರ ಹೃದಯ ಪೂರ್ಣ ಸ್ವಚ್ಛವಾಗಬೇಕು'' ಎನ್ನುತ್ತಾನೆ ರೀಬಿನ್. ''ಕೊಳಕಾದ ಮನುಷ್ಯನಿಗೆ ಮೈಯುಜ್ಜಿ ಸ್ನಾನ ಮಾಡಿಸಿ, ಚೊಕ್ಕ ಬಟ್ಟೆ ಹಾಕಿ ಅವನನ್ನು ನೋಡೋ ಹಾಗೆ ಮಾಡಬಹುದು. ಆದರ ಆ ಮನುಷ್ಯನ ಅಂತರ್ಯವನ್ನು ಚೊಕ್ಕಟ ಮಾಡುವುದು ಹೇಗೆ?'' (ಮುನ್ನುಡಿ, ಪುಟ ೯). ಇದು ಕಾದಂಬರಿಯ ಮುಖ್ಯ ಹುಡುಕಾಟ. ಈ ಹಿನ್ನೆಲೆಯಲ್ಲಿ ಇಡೀ ಕಾದಂಬರಿಯ ಉದ್ದಕ್ಕೂ ಎರಡು ಬಗೆಯ ಪಾತ್ರಗಳು ಸೃಷ್ಟಿಯಾಗುತ್ತಾ, ಕ್ರಿಯಾಶೀಲವಾಗುತ್ತಾ ಹೋಗುತ್ತವೆ. ಒಂದು ಕಡೆ ಅವರೆಲ್ಲ ಬಹುತೇಕ ಮಹಿಳೆಯರಾಗಿರುತ್ತಾರೆ, ಮತ್ತೊಂದು ಕಡೆ ಅವರೆಲ್ಲ ಬಹುತೇಕ ಯುವಜನರಾಗಿರುತ್ತಾರೆ. ಇವರೆಲ್ಲ ತಮ್ಮ ತಿಳುವಳಿಕೆ, ಸ್ವಭಾವ, ನಂಬಿಕೆ ಮುಂತಾದುವುಗಳನ್ನು ಬದಲಾಯಿಸಿಕೊಳ್ಳುವುದಕ್ಕೆ ನಿರಂತರವಾಗಿ ಪ್ರಯತ್ನಿಸುತ್ತಾರೆ. ಅದರ ಒಟ್ಟು ಫಲಿತವಾಗಿ ವ್ಯವಸ್ಥೆಯನ್ನು ಬದಲಾಯಿಸಲು ಸಜ್ಜುಗೊಳ್ಳುತ್ತಾರೆ. ವ್ಯಕ್ತಿಗಳನ್ನು ಆಂತರಿಕವಾಗಿ ಸಜ್ಜುಗೊಳಿಸುವ ಕ್ರಿಯೆಯೇ ಇಡೀ ಕಾದಂಬರಿಯಲ್ಲಿ ಅಂತರ್‌ವಾಹಿನಿಯಾಗಿ ಕ್ರಿಯಾಶೀಲವಾಗಿದೆ.

ಪೆಲಗೇಯ ಕಾರ್ಮಿಕನೊಬ್ಬನ ವಿಧವೆ. ಕಾರ್ಮಿಕನೊಬ್ಬನ ತಾಯಿ. ಅನಕ್ಷರಸ್ಥ ಮಹಿಳೆ. ಮೊದಮೊದಲು ಇನ್ನೂ ಹುಡುಗಿ - ಹುಡುಗರಾಗಿರುವವರ ಓದು, ಚರ್ಚೆ ಹಾಗೂ ಮಾತುಕತೆಗಳನ್ನು ಆಲಿಸಿಕೊಂಡು ಅದರ ಪರಿಣಾಮದ ಬಗೆಗೆ ಹೆದರುತ್ತಾಳೆ. ಆ ಹೆದರಿಕೆ ಕೂಡ ವ್ಯವಸ್ಥೆಯೇ ಅವಳ ಮೇಲೆ ಬಲಾತ್ಕಾರವಾಗಿ ಹೇರಿದ್ದ ಕವಚ. ಮುಂದಿನ ದಿನಗಳಲ್ಲಿ ಅವಳ ಮೇಲೆ ಹೇರಲ್ಪಟ್ಟಿದ್ದ ಕವಚವನ್ನು ಅವಳು ಕ್ರಮೇಣ ಕಿತ್ತೊಗೆಯುತ್ತಾಳೆ. ಅವರ ಜೊತೆಯಲ್ಲಿ ತಾನೂ ಸೇರಿಕೊಳ್ಳುತ್ತಾಳೆ. ಹೋರಾಟವು ಪ್ರಾಥಮಿಕವಾಗಿ ನಿರೀಕ್ಷಿಸುವ ಓದು, ಬರಹವನ್ನು ಕಲಿತುಕೊಳ್ಳುತ್ತಾಳೆ. ಮೊದಲು ದೇವರನ್ನು ನಂಬುತ್ತಿದ್ದವಳು ನಂತರದ ದಿನಗಳಲ್ಲಿ ಅದನ್ನೂ ಬಿಟ್ಟುಬಿಡುತ್ತಾಳೆ. ಅಂದರೆ ಶೋಷಿತರು ಬಹುದೊಡ್ಡ ಹೋರಾಟಕ್ಕೆ ತಮಗೆ ತಾವೇ ಸಜ್ಜಾಗಬೇಕಾದ ವಿಧಾನ


ನಮ್ಮ ಇತ್ತೀಚಿನ ಪ್ರಕಟಣೆಗಳು

ದ್ರಾಕ್ಷಿ ಕೃಷಿ

ಸ್ಟೀಫನ್ ಹಾಕಿಂಗ್ ಬದುಕು ಮತ್ತು ವಿಚಾರ

ವಿರಕ್ತ ರಾಷ್ಟ್ರಕ ಡಿವಿಜಿ

ಪುಟ : ೧೨೦ ರೂ. ೮೦ | ಪುಟ : ೧೨೦ ರೂ. ೧೦೦ | ಪುಟ : ೩೨ ರೂ. ೨೨ | ಪುಟ : ೮೮ ರೂ. ೬೦ | ಪುಟ : ೩೪೪ ರೂ. ೨೦೦

ಪುಸ್ತಕಗಳ ಮೊಬಲಗಿನ ಜೊತೆಗೆ ರಿಜಿಸ್ಟರ್ಡ್ ಅಂಚೆ/ಕೊರಿಯರ್ ವೆಚ್ಚ ರೂ. ೨೦ ಸೇರಿಸಿ ಒಟ್ಟು ಹಣವನ್ನು ಎಂ.ಓ. ಅಥವಾ ಡಿ.ಡಿ. ಮೂಲಕ ಈ ಕೆಳಕಂಡ ವಿಳಾಸಕ್ಕೆ ಕಳುಹಿಸಿ

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ೧೧, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೯, ಬೆಂಗಳೂರು-೧
ದೂರವಾಣಿ : ೦೮೦-೨೨೨೦೩೫೮೦/೮೧/೮೨, ೩೦೫೭೮೦೨೦/೨೨ ಫ್ಯಾಕ್ಸ್ : ೦೮೦-೩೦೫೭೮೦೨೩
e-mail : navakarnataka@dataone.in website : www.navakarnataka.com

ಶಾಖೆಗಳು

ಬೆಂಗಳೂರು ೨೨೨೫೧೩೮೨ ★ ಮೈಸೂರು ೨೪೨೪೮೯೪ ★ ಮಂಗಳೂರು ೨೪೪೧೧೦೬ ★ ಗುಲ್ಬರ್ಗಾ ೨೨೪೩೦೨

ಮತ್ತು ಸ್ವರೂಪ ಯಾವುದು ಎಂಬುದನ್ನು ಕಾದಂಬರಿ ಉದ್ದಕ್ಕೂ ಪರೋಕ್ಷವಾಗಿ ನಿರೂಪಿಸುತ್ತಾ ಸಾಗುತ್ತದೆ. ಇದರ ಭಾಗವಾಗಿಯೇ ಪೆಲಗೇಯ ತನ್ನ ಹಿಂದಿನ ತಿಳುವಳಿಕೆ ಮತ್ತು ನಂಬಿಕೆಯನ್ನು ಬದಲಾಯಿಸಿಕೊಂಡಳು. ಹೋರಾಟಕ್ಕೆ ಸಜ್ಜಾಗುತ್ತಿದ್ದ ಸಂದರ್ಭವು ಇವಳಲ್ಲಿ ಆ ಬಗೆಯ ಬದಲಾವಣೆಯನ್ನು ಉಂಟುಮಾಡಿತು. ಇವಳಲ್ಲಿ ಆದ ಬದಲಾವಣೆಯು ಹೋರಾಟಕ್ಕೆ ಸಜ್ಜಾಗುತ್ತಿದ್ದ ಕ್ರಿಯೆಗೆ ವೇಗವರ್ಧಕವಾಯಿತು. ಇದು ಏಕಕಾಲಕ್ಕೆ ವ್ಯಕ್ತಿಗಳನ್ನು ಬದಲಾಯಿಸುತ್ತಲೆ, ತನ್ನನ್ನೆ ತಾನು ಬದಲಾಯಿಸಿಕೊಳ್ಳುವ ದ್ವಂದ್ವಾತ್ಮಕ ಪ್ರಕ್ರಿಯೆ. ಅಂದರೆ ಹೋರಾಟದ ದಾರಿಯಲ್ಲಿ ಶೋಷಕರ ವಿಚಾರಗಳನ್ನು ಇಟ್ಟುಕೊಂಡಿರಲು ಸಾಧ್ಯವಾಗುವುದಿಲ್ಲ. ಅಥವಾ ಶೋಷಕರ ವಿಚಾರಗಳು ಹೋರಾಟದ ದಾರಿಯನ್ನು ಮುನ್ನಡೆಸುವುದಿಲ್ಲ. ಈ ಹಿನ್ನೆಲೆಯಲ್ಲಿ ಕಾದಂಬರಿಯ ಅನೇಕ ಕಡೆಗಳಲ್ಲಿ ಸೃಜನಶೀಲ ತಾತ್ವಿಕತೆ ತನ್ನನ್ನು ತಾನು ಮೂರ್ತಗೊಳಿಸಿಕೊಳ್ಳುತ್ತಾ ಸಾಗುತ್ತದೆ. ''ನಾವು ಸಮಾಜವಾದಿಗಳು. ನಮಗೆ ಪಂಗಡಗಳ ಹಾಗೂ ರಾಷ್ಟ್ರಗಳ ಭೇದವಿಲ್ಲ. ಇರುವವರು, ಸಂಗಾತಿಗಳು ಮತ್ತು ವೈರಿಗಳು ಮಾತ್ರ. ಎಲ್ಲ ಶ್ರಮಿಕರೂ ನಮ್ಮ ಸಂಗಾತಿಗಳು. ಎಲ್ಲ ಬಂಡವಳಿಗರೂ, ಎಲ್ಲ ಸರಕಾರಗಳೂ ನಮ್ಮ ವೈರಿಗಳು'' (ಪುಟ ೫೧). ''ಚರ್ಚುಗಳನ್ನೂ, ಕಾರ್ಖಾನೆಗಳನ್ನೂ ಕಟ್ಟುವವರು ನಾವು. ಸಂಕೋಲೆಗಳನ್ನೂ ಹಣವನ್ನೂ ತಯಾರಿಸುವವರು ನಾವು. ತೊಟ್ಟಿಲಿನಿಂದ ಗೋರಿಯವರೆಗೆ ಎಲ್ಲರಿಗೂ ಆಹಾರ ದೊರೆತು ಅವರು ಬದುಕುವಂತೆ ಮಾಡುವ ಜೀವಂತ ಶಕ್ತಿ ನಾವು. ಯಾವಾಗಲೂ ಎಲ್ಲ ಕಡೆಯಲ್ಲೂ ದುಡಿಯೋದಕ್ಕೆ ನಾವೇ ಮೊದಲು. ಆದರೆ ದಯ ದಾಕ್ಷಿಣ್ಯದ ವಿಷಯದಲ್ಲಿ ನಮ್ಮ ಸರತಿ ಬರೋದು ಕಟ್ಟಕಡೆಗೆ. ಯಾರು ಕೇಳ್ತಾರೆ ನಮ್ಮನ್ನು? ನಮ್ಮ ಹಿತಕ್ಕಾಗಿ ಒಂದು ಕಡ್ಡಿ ಎತ್ತಿ ಆಚೀಚೆ ಯಾರು ಇಟ್ಟಿದ್ದಾರೆ? ನಾವೂ ಮನುಷ್ಯ ಜೀವಿಗಳೂಂತ ಭಾವಿಸುವವರಾದರೂ ಇದ್ದಾರಾ? ಒಬ್ಬರೂ ಇಲ್ಲ'' (ಪುಟ ೭೮). ''ನಾವು ಕ್ರಾಂತಿಕಾರರು. ಕೆಲವರು ಬರಿಯ ಯಜಮಾನರಾಗಿ, ಉಳಿದವರೆಲ್ಲ ಬರಿಯ ಕೆಲಸಗಾರರು ಮಾತ್ರ ಆಗಿರುವ ಪದ್ಧತಿ ಇರುವವರೆಗೂ ಕ್ರಾಂತಿಕಾರರಾಗಿಯೇ ನಾವು ಉಳಿಯುತ್ತೇವೆ. ಯಾವ ಸಮಾಜಹಿತಗಳನ್ನು ರಕ್ಷಿಸೋದಕ್ಕೆ ನೀವು ಆಜ್ಞಾಧಾರಿಗಳಾಗಿದ್ದೀರೊ ಆ ಸಮಾಜಕ್ಕೆ ನಾವು ವಿರೋಧಿಗಳು'' (೩೨೩).

ಮಾವೋ ತ್ಸೆ ತುಂಗ್, ಹೋರಾಟ ಮತ್ತು ಚಳುವಳಿಯನ್ನು ಕುರಿತು ಬಹಳ ಮುಖ್ಯವಾದ ಒಂದು ಮಾತನ್ನು ಹೇಳಿದ್ದಾರೆ. ಯಾವುದೇ ಹೋರಾಟ ಮತ್ತು ಹೋರಾಟಗಾರ ಕೇಳಿಕೊಳ್ಳಬೇಕಾದ ಮುಖ್ಯ ಪ್ರಶ್ನೆಯೆಂದರೆ ನಮ್ಮ ಶತ್ರುಗಳು ಯಾರು ಮತ್ತು ಮಿತ್ರರು ಯಾರು ಎಂಬುದು. ಈ ಪ್ರಶ್ನೆ ಇಂದು ಬಹಳ ಮುಖ್ಯ. ಯಾಕೆಂದರೆ ಬಹುರಾಷ್ಟ್ರೀಯ ಕಂಪನಿಗಳನ್ನು, ವಿದೇಶಿ ಸಾಲಗಳನ್ನು ನಮ್ಮ ಮಿತ್ರರೆಂದು ಬಗೆದು ಅವರಿಗೆ ಎಲ್ಲಾ ಬಗೆಯ ಅವಕಾಶ ಮತ್ತು ರಕ್ಷಣೆ ಕೊಡಲಾಗುತ್ತಿದೆ. ಅನೇಕ ಹೋರಾಟಗಳು ಪ್ರಶ್ನಾತೀತವಾಗಿ ಇದನ್ನು ಬೆಂಬಲಿಸುತ್ತಿವೆ. ಖಾಸಗೀಕರಣದಲ್ಲೂ ಮೀಸಲಾತಿ ಕೇಳುವ ಮೂಲಕ ಖಾಸಗೀಕರಣವನ್ನು, ಒಂದನೇ ತರಗತಿಯಿಂದಲೇ ಇಂಗ್ಲಿಷ್ ಕಲಿಸಿ ಎಂದು ಕೇಳುವ ಮೂಲಕ ಶಿಕ್ಷಣದ ಖಾಸಗೀಕರಣವನ್ನು ಒತ್ತಾಯಿಸಲಾಗುತ್ತಿದೆ. ಪೆಪ್ಸಿ ಕೋಲಾಕ್ಕೆ ಬದಲು ಎಳೆನೀರು ಎನ್ನುವ ಮೂಲಕ ಭೂಮಾಲಿಕತ್ವವನ್ನೂ, ಬಂಡವಾಳಶಾಹಿ ಸಂಸ್ಕೃತಿಗೆ ವಿರುದ್ಧವಾಗಿ ದೇಶಿ ಸಂಸ್ಕೃತಿ ಎಂಬುದರ ಮೂಲಕ ಊಳಿಗಮಾನ್ಯಶಾಹಿ ಶೋಷಣೆಯ ಸಂಸ್ಕೃತಿಯನ್ನೂ ಒತ್ತಾಯಿಸಲಾಗುತ್ತಿದೆ. ಇಲ್ಲೆಲ್ಲ ವಸ್ತುಸ್ಥಿತಿಯನ್ನು ನೋಡುವಾಗ ನಮ್ಮ ಶತ್ರು ಯಾರು ಮತ್ತು ಮಿತ್ರ ಯಾರು ಎಂಬುದರ ಗ್ರಹಿಕೆಯ ಬಹುದೊಡ್ಡ ಗೈರುಹಾಜರಿ ಎದ್ದು ಕಾಣುತ್ತಿದೆ. ಇದನ್ನೇ ಪ್ರಗತಿಪರ ಚಿಂತನೆ ಎಂತಲೊ, ಪರ್ಯಾಯ ಆಲೋಚನೆ ಎಂತಲೊ ನಂಬಿಸಲಾಗುತ್ತಿದೆ, ನಂಬಲಾಗಿದೆ. ಆದರೆ 'ತಾಯಿ' ಕಾದಂಬರಿ ಈ ಬಗೆಯ ತಾತ್ವಿಕ ಬಡತನಕ್ಕೆ ಇಲ್ಲವೆ ತಾತ್ವಿಕ ಅಪಕ್ವತೆಗೆ ಅವಕಾಶ ಕೊಡುವುದಿಲ್ಲ.

ಕಾದಂಬರಿಯಲ್ಲಿ ಹೋರಾಟದ ಸಿದ್ಧತೆ ಎಲ್ಲ ಆಯಾಮಗಳಿಂದ ತೀವ್ರಗೊಳ್ಳುತ್ತದೆ. ಆಗ ಇದನ್ನು ಶತ್ರು ವಲಯಕ್ಕೆ ಮತ್ತು ಪೊಲೀಸರಿಗೆ ರವಾನಿಸುವ ಹೋರಾಟದ ವಿರೋಧಿ ಕೆಲಸವೂ ನಡೆಯುತ್ತದೆ. ಅಂಥವರಲ್ಲಿ ಒಬ್ಬ ಇಸಾಯ್. ಕಾದಂಬರಿಯಲ್ಲಿ ಅವನ ಕೊಲೆಯಾಗುತ್ತದೆ. ಆದರೆ ಅದು ಯಾರಿಂದ ಆಯಿತು ಎಂಬುದು ಗುಪ್ತವಾಗಿ ಉಳಿದಿರುತ್ತದೆ. ಇದನ್ನು ಕುರಿತು ಹೋರಾಟಗಾರರ ಒಳಗೇ ಮಾತುಕತೆ ನಡೆಯುತ್ತದೆ. ಆಗ ಅಂದ್ರೇಯ್ ಹೇಳುತ್ತಾನೆ: ''ಜನರನ್ನು ಪ್ರೀತಿಸೋ ದಿನ ಬೇಗನೆ ಬರಲೀಂತ ಅವರನ್ನು ದ್ವೇಷಿಸೋ ಸ್ಥಿತಿ ಬಂದಿದೆ. ಪ್ರಗತಿಯ ಹಾದೀಲಿ ಯಾರೇ ಅಡ್ಡ ನಿಂತಿರ್ಲಿ, ತನಗೋಸ್ಕರ ಕೀರ್ತಿ ಭದ್ರತೆ ಸಂಪಾದಿಸೋಕೆ ಜನರನ್ನು ಹಣಕ್ಕಾಗಿ ಮಾರುವವನು ಯಾರೇ ಇರಲಿ, ಅವನನ್ನು ನಾವು ತೊಡೆದುಹಾಕಲೇಬೇಕು. ಪ್ರಾಮಾಣಿಕ ಜನರಿಗೆ ಅಡ್ಡಿ ಮಾಡಿ ದ್ರೋಹ ಬಗೆಯೋಕೆ ಅವಕಾಶ ಕಾಯ್ತಿರೋ ಒಬ್ಬ ದ್ರೋಹಿ ಇದಾನೇಂತಿಟ್ಕೊ. ಅಂತವನನ್ನ ಅಳಿಸದೇ ಹೋದರೆ ನಾನೇ ದ್ರೋಹಿಯಾಗ್ತೀನಿ. ಹಾಗೆ ಮಾಡೋಕೆ ನನಗೆ ಅಧಿಕಾರವಿಲ್ಲ ಅಂತೀಯೇನು? ಆದರೆ ಮಾಲೀಕರಿಗೆ ಸೈನ್ಯಗಳನ್ನೂ ಕೊಲೆಗಡುಕರನ್ನೂ ಇಡೋಕೆ ಅಧಿಕಾರ ಇದೆಯೊ? ತಮ್ಮ ಸುಖವನ್ನೂ ಭದ್ರತೆಯನ್ನೂ ಕಾಪಾಡೋಕ್ಕೋಸ್ಕರ, ಜನರಿಗಾಗಿ ವೇಶ್ಯೆಯರ ಮನೆಗಳು, ಜೈಲುಗಳು, ಗಡಿಪಾರಿನ ಜಾಗಗಳು, ಇವನ್ನೆಲ್ಲ ಇಟ್ಟಿದ್ದಾರಲ್ಲ. ಹೀಗಿಡೋಕೆ ಅವರಿಗೆ ಆ ಅಧಿಕಾರ ಇದೆಯೊ? ಬೇರೆ ಹಾದಿ ಇಲ್ಲದೆ ಅವರ ಶಸ್ತ್ರಾಸ್ತ ನಾನೂ ಒಮ್ಮೊಮ್ಮೆ ಕೈಲೆತ್ತಿಕೊಂಡರೆ ಅದು ನನ್ನ ತಪ್ಪೆ? ನಾನೇನೊ ಯಾವ ಯೋಚನೆಯೂ ಇಲ್ಲದೆ ಆ ಆಯುಧಾನ ಎತ್ಕೋತೀನಿ. ಸಹಸ್ರ ಸಹಸ್ರವಾಗಿ ನಮ್ಮನ್ನ ಅವರು ಕೊಲ್ಲೋವಾಗ, ನನ್ನ ತೋಳೆತ್ತಿ, ಅವರಲ್ಲಿ ಒಬ್ಬನ ತಲೆಗೆ ಏಟು ಬೀಸೋಕೆ ನನಗೆ ಅಧಿಕಾರವಿದೆ'' (೧೪೨). ''ಅವರ ರಕ್ತದಿಂದ ಚಿಕ್ಕಾಸಿನ ಪ್ರಯೋಜನವೂ ಇಲ್ಲಾಂತ ನನಗೆ ಗೊತ್ತಿದೆ. ಅದು ಬರಡಾದ ನಿಷ್ಫಲವಾದ ರಕ್ತ. ನಮ್ಮದಾದರೆ, ಚೆಲ್ಲಿಹೋದಾಗ ಅದರಿಂದ ಸತ್ಯ ಹುಟ್ಟುತ್ತೆ – ಭೂಮಿಯ ಮೇಲೆ ಬಿದ್ದ ಮಳೆ ನೀರಿನ ಹಾಗೆ'' (೧೪೨). ಹೋರಾಟವು ಚಳುವಳಿಯಾಗಿ, ಚಳುವಳಿಯು ಕ್ರಾಂತಿಯ ದಾರಿಯನ್ನು ಹಿಡಿದರೆ ಇವೆಲ್ಲ ಅನಿವಾರ್ಯ. ಕ್ರಾಂತಿಯ ಸ್ವರೂಪವನ್ನು ಕೇವಲ ಹೋರಾಟದ ಸ್ತರದಲ್ಲಿ ಅರ್ಥೈಸಲು ಬರುವುದಿಲ್ಲ. ಹೋರಾಟಕ್ಕೆ ರಕ್ತ ಚೆಲ್ಲುವ ಅಗತ್ಯ ಬರದೇ ಹೋಗಬಹುದು. ಆದರೆ ಕ್ರಾಂತಿಯಲ್ಲಿ ರಕ್ತ ಚೆಲ್ಲುವುದು ಅನಿವಾರ್ಯ. ಮಗುವಿಗೆ ಜನ್ಮ ಕೊಡುವಾಗಿನ ತಾಯಿಯ ಗರ್ಭದ ಸ್ಥಿತಿ ಅದು. ಗರ್ಭದ ಸ್ಥಿತಿಯದು ಜೈವಿಕ ನಿಯಮವಾದರೆ, ಕ್ರಾಂತಿಯದು ಸಾಮಾಜಿಕ ನಿಯಮ. ಆದ್ದರಿಂದ

'ತಡೆಯಲಾಗದು ಹಿಡಿಯಲಾಗದು ದುಡಿವ ಜನರ ಯುದ್ಧವೊ
ಧೀರ ಯೋಧರ ವೀರಮರಣದಿ ನೂರು ಭುಜಗಳು ಎದ್ದವೊ
ಭೂಮಿ ಅಗೆದು ಬೀಜ ಹುಗಿದರೆ ಮೊಳಕೆಯಾಗಿ ಅರಳಿತೊ
ಮೂಡಣದಲಿ ಮೋಡ ಕವಿದರು ಸೂರ್ಯ ಕಿರಣ ಚಿಮ್ಮಿತ್ತೊ' (ರಕ್ತದ ರಂಗೋಲಿ, ಆರ್. ಮಾನಸಯ್ಯ).

ಮೇ ದಿನಾಚರಣೆಯಂದು ಪ್ರದರ್ಶನ ನಡೆಸಿದರೆಂದು ಪಾವೆಲ್ ಮುಂತಾದವರನ್ನು ಬಂಧಿಸಿ, ಅವರನ್ನು ಕೋರ್ಟಿನಲ್ಲಿ ವಿಚಾರಣೆಗೆ ಒಳಪಡಿಸಲಾಗುತ್ತದೆ. ಆಗ ಪಾವೆಲ್ ಆಡುವ ಮಾತುಗಳನ್ನು ಗಮನಿಸಬೇಕು: ''ಸಮಾಜವಾದಿ ಪ್ರಜಾಪ್ರಭುತ್ವದ ಬಾವುಟದ ಕೆಳಗೆ ನಾವು ನಡೆಸಿದ ಪ್ರದರ್ಶನ ಮೆರವಣಿಗೆಯನ್ನ ಪ್ರಾಸಿಕ್ಯೂಟರ್, ಆಳುವ ವರ್ಗಕ್ಕೆ ವಿರುದ್ಧವಾದ ಬಂಡಾಯವೆಂದು ಕರೆದಿದ್ದಾನೆ. ಅವನು ಉದ್ದಕ್ಕೂ ತ್ಸಾರ್ ಚಕ್ರವರ್ತಿಯನ್ನ ಪದಚ್ಯುತ ಮಾಡೋದಕ್ಕೆ ಪ್ರಯತ್ನಪಡುತ್ತಿರೊ ಜನರಾಗಿ ನಮ್ಮನ್ನ ಕಂಡಿದಾನೆ. ನಮ್ಮ ದೇಶವನ್ನ ಕಟ್ಟಿಹಾಕಿರೊ ಸಂಕೋಲೆ, ಅರಸೊತ್ತಿಗೆ ಮಾತ್ರ ಅಂತ ನಾವು ಪರಿಗಣಿಸೋದಿಲ್ಲ. ಅರಸೊತ್ತಿಗೆ, ಮೊದಲ ಮತ್ತು ಸುಲಭವಾಗಿ ಕೈಗೆ ಎಟಕ್ತಿರೊ ಸಂಕೋಲೆ ಮಾತ್ರ. ನಮ್ಮ ಜನರನ್ನ ಅದರಿಂದ ಮುಕ್ತಗೊಳಿಸೋದು ನಮ್ಮ ಕರ್ತವ್ಯವಾಗಿದೆ'' (ಪುಟ ೩೨೨). ''ನಾವು ಕ್ರಾಂತಿಕಾರರು. ಕೆಲವರು ಬರಿಯ ಯಜಮಾನರಾಗಿ, ಉಳಿದವರೆಲ್ಲ ಕೆಲಸಗಾರರು ಮಾತ್ರ ಆಗಿರುವ ಪದ್ಧತಿ ಇರುವವರೆಗೂ ಕ್ರಾಂತಿಕಾರರಾಗಿಯೇ ನಾವು ಉಳಿಯುತ್ತೇವೆ. ಯಾವ ಸಮಾಜದ ಹಿತಗಳನ್ನು ರಕ್ಷಿಸೋದಕ್ಕೆ ನೀವು ಆಜ್ಞಾಧಾರಿಗಳಾಗಿದೀರೊ ಆ ಸಮಾಜಕ್ಕೆ ನಾವು ವಿರೋಧಿಗಳು. ನಾವು, ಅದರ ಹಾಗೂ ನಿಮ್ಮ, ಬದ್ಧ ವೈರಿಗಳು. ನಮ್ಮ ಹೋರಾಟದಲ್ಲಿ ನಾವು ವಿಜಯಿಗಳಾಗೋ ತನಕ ನಮ್ಮೊಳಗೆ ರಾಜಿಯಾಗೋದು ಸಾಧ್ಯವಿಲ್ಲ. ಕಾರ್ಮಿಕರಾದ ನಾವು ವಿಜಯಿಗಳಾಗೋದು ಖಂಡಿತ!'' (ಪುಟ ೩೨೩). ಮೇಲಿನ ಸಾಲುಗಳನ್ನು ಬರೆದು ನೂರು ವರುಷ ಗತಿಸಿದೆ. ಸಾಮ್ರಾಜ್ಯಶಾಹಿ ಇಂದು ಇದೇ ಕೆಲಸವನ್ನು ಮಾಡುತ್ತಿದೆ. ನಾಗರಿಕತೆ ಆಧುನಿಕತೆಯ ಹೆಸರಿನಲ್ಲಿ ಯುವಜನಾಂಗವನ್ನು ಹೋರಾಟಕ್ಕೆ ಬರದಂತೆ ಮಾಡಿ, ಮೃಗಜೀವನದ ಸ್ಥಿತಿಗೆ ತಳ್ಳಿದೆ.

ಮಿಹಯೀಲ್, ಪೆಲಗೇಯ ಮತ್ತು ಪಾವೆಲ್‌ನ ಕಾರ್ಮಿಕ ಕುಟುಂಬದಿಂದ ಒಂದು ಹನಿ ಎಂಬಂತೆ ಶುರುವಾಗುವ ಕಾದಂಬರಿ, ಮುಂದೆ ಇಡೀ ಕಾರ್ಮಿಕ ವರ್ಗವನ್ನು ಆವರಿಸಿಕೊಳ್ಳುತ್ತದೆ. ಮೊದಲ ಹಂತದಲ್ಲಿ ಜನರ ವಸ್ತುಸ್ಥಿತಿಗೆ ಕಾರಣಗಳನ್ನು ಪರಿಶೀಲಿಸುತ್ತದೆ. ಅದಕ್ಕೆ ಪರಿಹಾರದ ದಾರಿ ಕೇವಲ ವ್ಯಕ್ತಿಗಳನ್ನು ಬದಲಾಯಿಸುವುದರಲ್ಲಿ ಮಾತ್ರ ಇದೆಯೊ ಅಥವಾ ಆ ವ್ಯಕ್ತಿಗಳು ಇರುವಂತಹ ವ್ಯವಸ್ಥೆಯನ್ನು ಬದಲಾಯಿಸುವುದರಲ್ಲಿ ಇದೆಯೊ ಎಂಬ ಮಹತ್ವದ ಮಾತುಕತೆ ಮತ್ತು ಚರ್ಚೆಗೆ ತಿರುಗುತ್ತದೆ. ಎರಡನೆ ಹಂತದಲ್ಲಿ ಕಾದಂಬರಿಯು ವ್ಯಕ್ತಿಗಳ ಆಂತರಿಕ ಬದಲಾವಣೆ ಹಾಗೂ ವ್ಯವಸ್ಥೆಯ ಬದಲಾವಣೆ ಇವು ಒಂದನ್ನೊಂದು ಅವಲಂಬಿಸಿರುವ ದ್ವಂದ್ವಾತ್ಮಕ ಪ್ರಕ್ರಿಯೆ ಎಂಬ ನೆಲೆಗೆ ಬರುತ್ತದೆ. ಹಾಗಾದರೆ

ವ್ಯವಸ್ಥೆಯನ್ನು ಬದಲಾಯಿಸುವವರು ಯಾರು? ಶೋಷಣೆ ಮತ್ತು ಅಪರಾಧದ ವ್ಯವಸ್ಥೆಯಿಂದ ಯಾರು ಲಾಭ ಪಡೆಯುತ್ತಿದ್ದಾರೊ ಅವರಂತೂ ಇದನ್ನು ಬದಲಾಯಿಸಲಾರರು. ಮಾತ್ರವಲ್ಲ, ಅದರ ಬದಲಾವಣೆಗಾಗಿ ನಡೆಸುವ ಪ್ರಯತ್ನಗಳನ್ನೆಲ್ಲ ಅಪರಾಧಗಳೆಂದು ಪರಿಗಣಿಸಿ, ಅದರಲ್ಲಿ ತೊಡಗುವವರನ್ನೂ ಅಪರಾಧಿಗಳೆಂದು ಪರಿಗಣಿಸಲಾಗುತ್ತದೆ. ಶೋಷಣೆಯನ್ನು ಅನುಭವಿಸುತ್ತಿರುವ ಜನರಿಗೆ ಅನ್ಯಾಯ ಮತ್ತು ಶೋಷಣೆ ಎಂಬುವು ಅಭ್ಯಾಸವಾಗಿಹೋಗಿರುತ್ತವೆ. ಈ ಅಭ್ಯಾಸವನ್ನು ಅವರಿಂದ ಹೊಡೆದೋಡಿಸಿ, ಅವರಲ್ಲಿ ಹೊಸಪ್ರಜ್ಞೆಯನ್ನು ತುಂಬಬೇಕು. ಆ ಮೂಲಕ ವ್ಯಕ್ತಿಗಳು ಬದಲಾಗಬೇಕು. ಬದಲಾದ ವ್ಯಕ್ತಿಗಳ ಮೂಲಕ ಮಾತ್ರವೇ ವ್ಯವಸ್ಥೆಯನ್ನು ಬದಲಾಯಿಸಲು ಸಾಧ್ಯ ಎಂಬ ಪ್ರಕ್ರಿಯಾಶೀಲ ದಾರಿಯನ್ನು ಕಾದಂಬರಿ ಉದ್ದಕ್ಕೂ ತಣ್ಣಗೆ ನಿರೂಪಿಸುತ್ತ ಬರುತ್ತದೆ. 'ತಾಯಿ' ಕಾದಂಬರಿಯನ್ನು ಓದುವುದೆಂದರೆ ಸಂತೋಷಪಡಲು ಅಲ್ಲ, ಬೂರ್ಷ್ವಾ ವಿಧಾನದಲ್ಲಿ ಅದರ ಕಲಾತ್ಮಕ ಅಂಶಗಳನ್ನು ಕೊಂಡಾಡಲು ಅಲ್ಲ, ಬದಲಾಗಿ ಕೊನೆಯ ಪಕ್ಷ ಆ ಕಾದಂಬರಿಯೊಳಗಿನ ಒಂದು ಪಾತ್ರದ ಸಮೀಪಕ್ಕೆ ನಾವು ಹೋಗಬಲ್ಲೆವೆ ಎಂಬ ಆತ್ಮವಿಮರ್ಶೆಗಾಗಿ. ಅಕಡೆಮಿಕ್ ಚಟುವಟಿಕೆಗಳು ವ್ಯಾವಹಾರಿಕವಾಗಿರುವಾಗ ಇಲ್ಲವೆ ಮನರಂಜನೆಯ ಸರಕಾಗಿರುವಾಗ ಈ ಜವಾಬ್ದಾರಿ ಬಹಳ ಮುಖ್ಯ. ಮೇ ದಿನದ ಮೆರವಣಿಗೆಯ ಸಭೆಯಲ್ಲಿ ಪಾವೆಲ್ ಮಾಡುವ ಭಾಷಣದ ನುಡಿಗಳು ಹೀಗಿವೆ: ''ಸಂಗಾತಿಗಳೇ! ನಾವೊಂದು ತೀರ್ಮಾನ ಮಾಡಿ ಈ ದಿನ ಇಲ್ಲಿಗೆ ಬಂದಿದ್ದೀವಿ. ನಾವು ಯಾರು ಅನ್ನೋದನ್ನ ಈ ದಿನ ಘೋಷಿಸಬೇಕು. ವಿಚಾರದ, ನ್ಯಾಯದ, ಸ್ವಾತಂತ್ರ್ಯದ ನಮ್ಮ ಬಾವುಟಾನ ಈ ದಿನ ಹಾರಿಸ್ಬೇಕು ಅನ್ನೋದೆ ಆ ನಿರ್ಧಾರ!'' (ಪುಟ ೧೬೪). ಮುಂದುವರಿದು ಪಾವೆಲ್ ಹೇಳುತ್ತಾನೆ: ''ಸಂಗಾತಿಗಳೇ! ಸೋಷಿಯಲ್ ಡೆಮಾಕ್ರಾಟಿಕ್ ಕಾರ್ಮಿಕ ಪಾರ್ಟಿ,-ನಮ್ಮ ವಿಚಾರಗಳ ಉತ್ಪತ್ತಿಸ್ಥಾನ - ಚಿರಾಯುವಾಗಲಿ!'' (೧೬೫).

'ತಾಯಿ' ಕಾದಂಬರಿ ಜಗತ್ತಿನ ಸುಮಾರು ೧೨೦ಕ್ಕೂ ಹೆಚ್ಚು ಭಾಷೆಗಳಲ್ಲಿ ಅನುವಾದವಾಗಿದೆ. ಮಿಲಿಯಗಟ್ಟಲೆ ಓದುಗರು ಇದನ್ನು ಓದಿದ್ದಾರೆ. ವಿ. ಐ. ಲೆನಿನ್ ಅವರು 'ತಾಯಿ' ಕಾದಂಬರಿ ಕುರಿತು ಈ ರೀತಿ ಹೇಳಿದ್ದಾರೆ: ''ಅನೇಕ ಶ್ರಮಿಕರು ತಮಗೆ ಅರಿವಿಲ್ಲದಂತೆಯೇ ಸಹಜ ಪ್ರವೃತ್ತಿಯಿಂದ ಕ್ರಾಂತಿಕಾರಿ ಚಳುವಳಿಯಲ್ಲಿ ಭಾಗವಹಿಸಿದ್ದಾರೆ. ಈಗ ಅವರು 'ತಾಯಿ' ಕಾದಂಬರಿಯನ್ನು ಓದಿ ಬಹಳ ಪ್ರಯೋಜನ ಪಡೆಯುತ್ತಾರೆ. ಇದು ಎಲ್ಲ ಕಾಲಕ್ಕೂ ಅತ್ಯಂತ ಸಕಾಲಿಕ ಕೃತಿ''. ಹೋರಾಟಕ್ಕೆ ಸಜ್ಜಾಗುವ ಪ್ರಕ್ರಿಯೆಯನ್ನು ಕುರಿತ ಕಾದಂಬರಿಯೊಂದನ್ನು ಮಿಲಿಯಗಟ್ಟಲೆ ಓದುಗರು ಯಾಕೆ ಓದಿದರು? ಇದರಲ್ಲಿ ಹೋರಾಟಕ್ಕೆ ಬೇಕಾದ ಗುಣಪಾಠಗಳಿವೆ ಎಂಬ ಕಾರಣಕ್ಕೊ, ಅಥವಾ ಅದರೊಳಗಿನ ಕಲಾತ್ಮಕತೆಯ ಕಾರಣಕ್ಕೊ? ಹಾಗೆ ನೋಡಿದರೆ 'ತಾಯಿ' ಕಾದಂಬರಿ ಕೇವಲ ಹೋರಾಟವನ್ನು ಕುರಿತ ಒಣ ವರದಿ ಅಲ್ಲ. ''ಕಾದಂಬರಿ ಚಿತ್ರಿಸುವುದು ಕೇವಲ ಕ್ರಾಂತಿಕಾರಿ ಹೋರಾಟವನ್ನಲ್ಲ, ಆ ಹೋರಾಟದ ಸಮಯದಲ್ಲಿ ಮಾನವನಲ್ಲಾಗುವ ಒಳ ಬದಲಾವಣೆಗಳ ಪ್ರಕ್ರಿಯೆ, ಅದರ ಶುದ್ಧೀಕರಣ ಜ್ವಾಲೆಯಲ್ಲಿ ಮಾನವ ದ್ವಿತೀಯ ಜನ್ಮ ಪಡೆಯುವುದು ಎಂಬುದನ್ನು ಅರ್ಥಮಾಡಿಕೊಳ್ಳಬೇಕು'' ಎಂಬ ಮುನ್ನುಡಿಯ ಮಾತು ಬಹಳ ಮುಖ್ಯವಾದುದು.

ಹಾಗಿದ್ದರೆ 'ತಾಯಿ' ಕಾದಂಬರಿಯ ಸಾಹಿತ್ಯಕ ಮತ್ತು ಕಲಾತ್ಮಕತೆಯ ಶಕ್ತಿ ಯಾವುದು? ಇಡೀ ಕಾದಂಬರಿಯಲ್ಲಿ ಯಾವೊಬ್ಬ ಮಾಲಿಕನ, ಒಡೆಯನ ಹೆಸರು ಬರುವುದಿಲ್ಲ ಯಾಕೆ? ಶತ್ರು ವಲಯವನ್ನು ಕೇವಲ ಸ್ವತಂತ್ರ ವ್ಯಕ್ತಿಗಳ ಖಳನಾಯಕರ ರೂಪದಲ್ಲಿ ಕಾದಂಬರಿ ಎಲ್ಲಿಯೂ ಉಲ್ಲೇಖಿಸುವುದಿಲ್ಲ. ಜೊತೆಗೆ ಕಾದಂಬರಿಯ ಬಹುತೇಕ ಪಾತ್ರಗಳು ಕಾರ್ಮಿಕರಾಗಿದ್ದರೂ, ಅವರೆಲ್ಲ ಶೋಷಿತರಾಗಿದ್ದರೂ, ಅವರ ಉತ್ಪಾದನಾ ಚಟುವಟಿಕೆಗಳನ್ನು ಕಾದಂಬರಿ ಎಲ್ಲಿಯೂ ಚಿತ್ರಿಸುವುದಿಲ್ಲ. ಆ ಮೂಲಕ ಕಾದಂಬರಿ ಏನನ್ನು ಪ್ರಕಟಿಸಲು ಪ್ರಯತ್ನಿಸುತ್ತಿದೆ? ಹೀಗೆ ಇದರ ಸಾಹಿತ್ಯಕ ಮತ್ತು ಕಲಾತ್ಮಕ ಅಂಶಗಳನ್ನು ಕುರಿತು ಚರ್ಚಿಸುವಾಗ ಸಮಾಜವಾದಿಯೇತರ ಸಾಹಿತ್ಯಕ ಹಾಗೂ ಕಲಾತ್ಮಕ ಅಂಶಗಳ ನೆಲೆಗೇ ಬಿದ್ದುಬಿಡುತ್ತೇವೆ. 'ತಾಯಿ' ಕಾದಂಬರಿಯ ಸಾಹಿತ್ಯಕ ಹಾಗೂ ಕಲಾತ್ಮಕ ಸ್ವರೂಪವು ಸಮಾಜವಾದಿ ರಾಜಕೀಯ ನೆಲೆಯದು. ಹಾಗಾಗಿ ಈ ರಾಜಕೀಯ ಪ್ರಶ್ನೆಯಿಂದ ಕಲಾತ್ಮಕ ಪ್ರಶ್ನೆಯನ್ನು, ಕಲಾತ್ಮಕ ಪ್ರಶ್ನೆಯಿಂದ ರಾಜಕೀಯ ಪ್ರಶ್ನೆಯನ್ನು ಬೇರ್ಪಡಿಸಲು ಬರುವುದಿಲ್ಲ. ಕಾದಂಬರಿಯಲ್ಲಿ ನಿಕೊಲಾಯ್ ಒಂದು ಕಡೆ ಪೆಲಗೇಯಳಿಗೆ ಹೀಗೆ ಹೇಳುತ್ತಾನೆ: ''ಎಲ್ಲ ಹೊತ್ತೂ


ನಮ್ಮ ಕೆಲವು ಪ್ರಕಟಣೆಗಳು


← ರೂ. 120/-


ರೂ. 40/- →



ಕೃಷಿವಿಕಾಸ್ ಪಬ್ಲಿಕೇಷನ್ಸ್
ನಂ. 225, 3ನೇ ಅಡ್ಡರಸ್ತೆ, 9ನೇ ಮುಖ್ಯರಸ್ತೆ
ವೃಷಭಾವತಿನಗರ, ಕಾಮಾಕ್ಷಿಪಾಳ್ಯ
ಬೆಂಗಳೂರು - 560 079
ಮೊಬೈಲ್ : 99458 03463


← ರೂ. 80/-



ರೂ. 160/- →

ಕೆಲಸಗಾರರ ಜತೇಲಿದ್ದು, ಅವರಿಗೆ ಓದಿ ಹೇಳ್ತಾ ಅವರೊಡನೆ ಮಾತಾಡ್ತಾ ಅವರನ್ನು ನಿರೀಕ್ಷಿಸ್ತಾ ಇಷ್ಟು ದಿನ ಇದ್ದೆ. ನನ್ನ ಹೃದಯ, ಅತ್ಯಾಶ್ಚರ್ಯಕರವಾದ ಯಾವುದೋ, ಸಮಗ್ರವಾದ ಯಾವುದೋ, ಒಂದರಿಂದ ತುಂಬಿಕೊಂಡಿದೆ. ಅವರು ಅಷ್ಟೊಂದು ಭವ್ಯ ಜನರು. ಅವರನ್ನು ನೋಡ್ತಾ ಇದ್ರೆ, ಮುಂದೆ ಒಂದು ದಿವಸ ರಷ್ಯಾ ಪ್ರಪಂಚದಲ್ಲೇ ಅತ್ಯಂತ ಪ್ರಜಾಪ್ರಭುತ್ವವಾದಿಯಾದ ರಾಷ್ಟ್ರವಾಗ್ತದೆ ಎಂಬ ಯೋಚನೆ ಬರುತ್ತೆ!'' (ಪುಟ ೨೮೮). ರಾಜಕೀಯವಾದ ಈ ಆಶಯವನ್ನು ಕಾದಂಬರಿಯ ಮೂಲಕ ವ್ಯಕ್ತಪಡಿಸಿದ ೧೦-೧೧ ವರುಷಗಳ ನಂತರ (೧೯೧೭) ರಷ್ಯಾ ಪ್ರಪಂಚದಲ್ಲೆ ಅತ್ಯಂತ ಪ್ರಜಾಪ್ರಭುತ್ವ ರಾಷ್ಟ್ರವಾಗಿ ಸ್ಥಾಪನೆಯಾಯಿತು. ಈ ಬಗೆಯ ರಾಜಕೀಯ ಮುಂಗಾಣ್ಕೆ ಸಮಾಜವಾದಿ ಲೇಖಕನಿಂದ ಮಾತ್ರ ಸಾಧ್ಯ ಎಂಬುದು ಖಚಿತ.

ಕಾದಂಬರಿಯ ಕೊನೆ ಪುಟಗಳಲ್ಲಿ ಬರುವ ತಾಯಿಯ (ಪೆಲಗೇಯಳ) ಮಾತುಗಳನ್ನು ಗಮನಿಸಬೇಕು: ''ನಮ್ಮ ಮಕ್ಕಳು ಭೂಮಿಯ ಮೇಲೆ ಮುಂದಕ್ಕೆ ನಡೀತಿದ್ದಾರೆ. ಇಡೀ ಭೂಮಿಯ ಮೇಲೆ, ಎಲ್ಲಾ ಮೂಲೆಗಳಿಂದಲೂ, ಒಂದೇ ಗುರಿಯ ಕಡೆಗೆ. ಅವರೆಲ್ಲರ ಶಕ್ತಿಯೂ ಒಂದೇ ಗುರಿಯ ಕಡೆಗೆ, ನ್ಯಾಯದ ಕಡೆಗೆ ಬೊಟ್ಟು ಮಾಡ್ತಿದೆ. ಮಾನವ ದುಃಖವನ್ನು ಜಯಿಸೋದಕ್ಕೆ ಅವರು ಮುನ್ನುಗ್ಗುತ್ತಿದ್ದಾರೆ. ಹೊಸ ಸೂರ್ಯನ್ನ ಹಚ್ಚಿಡ್ತೀವಿ ಅಂತ ಅವರಲ್ಲೊಬ್ಬ ನನಗೆ ಹೇಳಿದ್ದಾನೆ, ಅವರು ಅದನ್ನ ಹಚ್ಚಿಡೋದು ಖಂಡಿತ! ಎಲ್ಲ ಜನರನ್ನೂ ಬೆಳಗೋ ಒಂದು ದೀಪ ಇದೇಂತ, ಎಲ್ಲರೂ ಅದನ್ನು ನೋಡುವ ಸಮಯ ಮುಂದೆ ಬರ್ತದೇಂತ, ತಮ್ಮ ಪೂರ್ತಿ ಹೃದಯದಿಂದ ಜನ ಅದರ ಕಡೆಗೆ ತಿರುಗ್ತಾರೇಂತ, ತಿಳಿದಿರೋದು ಎಷ್ಟೊಂದು ಒಳ್ಳೆಯದು! ಇದು ಜನರೆಡೆಯಲ್ಲಿ ಹೊಸ ದೇವರು ಹುಟ್ಟಿದ ಹಾಗೆ! ಪ್ರತಿಯೊಂದೂ ಎಲ್ಲರಿಗಾಗಿ, ಎಲ್ಲವೂ ಪ್ರತಿಯೊಬ್ಬರಿಗಾಗಿ! ಅದೀಗ ನನಗೆ ಅರ್ಥವಾಗೋ ರೀತಿ. ಸತ್ಯದಲ್ಲೇ ನಾವೆಲ್ಲ ಸಂಗಾತಿಗಳು; ಎಲ್ಲರೂ ಸಂಬಂಧಿಕರು; ಎಲ್ಲರೂ ಒಂದೇ ತಾಯಿಯ ಮಕ್ಕಳು. ಸತ್ಯವೇ ಆ ತಾಯಿ!'' (ಪುಟ ೩೪೭). ಸಮಾಜವಾದಿ ರಾಜಕೀಯ ಸಾಹಿತ್ಯಕ ಕಲಾತ್ಮಕತೆಯು ಜನರನ್ನು ಎಲ್ಲ ರೀತಿಯಿಂದ ಉನ್ನತ ಸ್ತರಕ್ಕೆ ಹಾಗೂ ಉನ್ನತ ಸ್ಥಾಯಿಗೆ ಕೊಂಡೊಯ್ಯುತ್ತದೆ. ಅದಕ್ಕೇ ಜನರಲ್ಲಿ ಹಾಗೂ ಅವರು ಒಂದುಗೂಡುವ ಶಕ್ತಿಯ ಕ್ರಿಯೆಯಲ್ಲಿ ಬಲವಾದ ನಂಬಿಕೆ. ಅದು ಸಾಮಾಜಿಕವಾದ ಪರಿಣಾಮವನ್ನು ನಿಶ್ಚಿತವಾಗಿ ಉಂಟುಮಾಡಿಯೇ ತೀರುತ್ತದೆ ಎಂಬ ರಾಜಕೀಯ ಮುಂದಾಲೋಚನೆ. ಈ ಮುಂದಾಲೋಚನೆಯು ಕೇವಲ ಒಂದು ಊಹೆಯಾಗಿ, ಕಲ್ಪನೆಯಾಗಿ ಮೂಡುವುದಿಲ್ಲ. ಜನರಲ್ಲಿ ಉಂಟಾಗಿರುವ ವಸ್ತುಸ್ಥಿತಿಯಲ್ಲಿ ನಿಂತು ಮುಂದೆ ಅದು ಉಂಟುಮಾಡುವ ಪರಿಣಾಮವನ್ನು ಪ್ರಕ್ರಿಯಾತ್ಮಕ ಗತಿಯಲ್ಲಿ ಗ್ರಹಿಸುತ್ತದೆ.

ಗೋರ್ಕಿ ಅವರ ಕಲಾತ್ಮಕ ಸೂಕ್ಷ್ಮವನ್ನು ಸೂಕ್ಷ್ಮವಾಗಿಯೇ ಗ್ರಹಿಸಬೇಕು. ಇದು ಕಾದಂಬರಿಯಲ್ಲಿ ಸಾಕಷ್ಟು ಕಡೆ ಬಂದಿದೆ. ಕಾದಂಬರಿಯ ಕೊನೆಯಲ್ಲಿ ತಾಯಿ ಕರಪತ್ರದ ಪೆಟ್ಟಿಗೆ ಹಿಡಿದು ರೈಲು ನಿಲ್ದಾಣ ತಲುಪುತ್ತಾಳೆ. ಆಗ ಅಲ್ಲಿಗೆ ಬರುವ ಯುವಕನ ಚಲನವಲನದ ಬಗೆಗಿನ ಸಾಲುಗಳನ್ನು ಗಮನಿಸಬೇಕು: ''ಆಕೆ ತಿರುಗಿ ನೋಡಿದಾಗಲೂ ಆತ ಅದೇ ಜಾಗದಲ್ಲಿ, ಒಂದು ಪಾದದಿಂದ ಇನ್ನೊಂದು ಪಾದಕ್ಕೆ ದೇಹದ ಭಾರವನ್ನು ಬದಲಾಯಿಸುತ್ತ, ಏನನ್ನೊ ಮಾಡಲು ಬಯಸಿ, ಆದರೆ ನಿರ್ಧಾರಕ್ಕೆ ಬರಲಾರದವನ ಹಾಗೆ ನಿಂತಿದ್ದ'' (ಪುಟ ೩೪೯). ಆಕೆಯನ್ನ ಗೂಢಚಾರ, ಕಾವಲುಗಾರ ತೀವ್ರವಾಗಿ ಗಮನಿಸತೊಡಗಿದನು. ಆಗ ತಾಯಿಗೆ ''ಸಾವಿನ ಭಯದಿಂದ ತನ್ನನ್ನು ಅವಹೇಳನ ಮಾಡುತ್ತಿದ್ದಂತೆ ಭಾಸವಾಯಿತು. ಕಿವಿಯ ಬಳಿ ನಾಡಿಗಳು ಭೀಕರವಾಗಿ ಮಿಡಿಯತೊಡಗಿದವು. ಆಕೆಯ ಕೂದಲ ಬುಡಗಳೆಲ್ಲ ಬೆಚ್ಚಗಾದವು'' (ಪುಟ ೩೫೦). ಬೆವರು ಬರುವ ಕ್ರಿಯೆಯನ್ನು ಗೋರ್ಕಿ ಕಟ್ಟಿಕೊಡುವುದು ಹೀಗೆ, 'ಕೂದಲ ಬುಡ ಬೆಚ್ಚಗಾದವು' ಎಂದು. ಬೆವರು ಕೂದಲ ಬುಡದಿಂದಲೆ ಬರುತ್ತದೆ ಎಂಬುದು ಜೈವಿಕ ಹಾಗೂ ನಿಸರ್ಗ ನಿಯಮ. ಆದರೆ 'ಬೆಚ್ಚಗೆ' ಎಂಬುದು ಎಚ್ಚರಿಕೆ, ಪ್ರತಿಭಟನೆ, ಪ್ರತಿರೋಧ ಇತ್ಯಾದಿಗಳನ್ನೂ ಸೂಚಿಸುತ್ತದೆ. ಆದರೆ ಬೆಚ್ಚಗಾದ ಬುಡದಿಂದ ತಣ್ಣನೆಯ ನೀರು (ಬೆವರು) ಬರುತ್ತದೆ. ಕ್ರಾಂತಿಯ ಪ್ರಕ್ರಿಯೆ ಕೂಡ ಹೀಗೇ ತಾನೆ? ''ಆ ಕಾವಲುಗಾರ ಆಕೆಯ ಎದುರು ನಿಂತು, ಒಂದು ನಿಮಿಷ ಸುಮ್ಮನಿದ್ದು, ಬಳಿಕ ಮೆಲುದನಿಯಲ್ಲಿ ಹೇಳಿದ.

''ಏನು ನೋಡ್ತಾ ಇದೀಯಾ?''

''ಏನೂ ಇಲ್ಲ.''

''ಹಾಗೊ? ಕಳ್ಳಿ! ಈ ವಯಸ್ನಲ್ಲೂ ಇಂತಹ ವೃತ್ತಿ ಮಾಡ್ತೀಯಲ್ಲ!''

ಆ ಪದಗಳೇ ಮುಖದ ಮೇಲಿನ ಹೊಡೆತಗಳಾದವು. ಒಂದು, ಎರಡು, ಮೂರು! ಆ ಪದಗಳ ಕರ್ಕಶ ದೂಷಣೆ ಕೇಳಿ, ಕೆನ್ನೆಯನ್ನು ಹರಿದು ಇಬ್ಭಾಗ ಮಾಡುವಾಗ, ಕಣ್ಣುಗಳನ್ನು ಕೀಳುವಾಗ ಆಗುವಷ್ಟು ನೋವಾಯಿತು ತಾಯಿಗೆ. ''ನಾನು? ನಾನು ಕಳ್ಳಿಯಲ್ಲ! ನೀನು ಸುಳ್ಳಾಡ್ತಿದೀಯ'' ಎಂದು ಸಾಧ್ಯವಿದ್ದಷ್ಟು ಗಟ್ಟಿಯಾಗಿ ತಾಯಿ ಕೂಗಿದಳು. 'ಸುತ್ತಲಿದ್ದುದೆಲ್ಲವೂ ಆಕೆಯ ರೋಷದ ದ್ವೇಷದ ಅವಮಾನದ ಬಿರುಗಾಳಿಯಲ್ಲಿ ಹಾರಾಡಿದವು' (ಪುಟ ೩೫೨). ''ಪೊಲೀಸರು ಆಕೆಯ ಬೆನ್ನಿಗೆ ಗುದ್ದಿ ಕತ್ತು ಹಿಡಿದು ತಳ್ಳಿದರು. ಭುಜದ ಮೇಲೂ ತಲೆಯ ಮೇಲೂ ಹೊಡೆದರು. ಅವರು ಒಂದು ಬಾಗಿಲಿನೊಳಕ್ಕೆ ಆಕೆಯನ್ನು ತಳ್ಳಿದರು. ಒಂದು ಕೈಯನ್ನು ಸೆಳೆದು ಬಿಡಿಸಿಕೊಂಡು ತಾಯಿ, ಬಾಗಿಲ ಅಗಣಿಯನ್ನು ಹಿಡಿದುಕೊಂಡಳು.

''ರಕ್ತಸಾಗರ ಕೂಡ ಸತ್ಯವನ್ನ ಮುಳುಗಿಸಲಾರದು!''

''ಆ ಕೈಗೆ ಅವರು ಹೊಡೆದರು.

''ಮೂರ್ಖರೆ! ನಾವು ನಿಮ್ಮನ್ನ ದ್ವೇಷಿಸೋ ಹಾಗೆ ಮಾತ್ರ ನೀವು ಮಾಡಬಲ್ಲಿರಿ! ಇದೆಲ್ಲಾ ನಿಮ್ಮ ತಲೆ ಮೇಲೆಯೇ ಬರುತ್ತೆ!''

ಇದು 'ತಾಯಿ' ಕಾದಂಬರಿಯ ಅತ್ಯಂತ ಸ್ಥೂಲವಾದ ಮತ್ತು ಅತ್ಯಂತ ಸೂಕ್ಷ್ಮವಾದ ಸಮಾಜವಾದಿ ಸಾಹಿತ್ಯಕ ಕಲಾತ್ಮಕತೆ. ಪ್ರಕ್ರಿಯೆಯ ನೆಲೆಯಲ್ಲಿ ವರ್ಗಪಕ್ಷಪಾತಿಯಾಗಿ ಇರುವುದೇ ಇದರ ಮೂಲಗುಣ. ಕ್ರಿಯೆಯ ಆಗುವಿಕೆಯ ಮುಂಗಾಣ್ಕೆಯನ್ನು ಜನತೆಯ ಉನ್ನತ ಸ್ಥಾಯಿಯಲ್ಲಿ ಗ್ರಹಿಸುವುದು ಅದರ ಸೂಕ್ಷ್ಮ ಸ್ವರೂಪ.

ಈ ಲೇಖನದ ಆರಂಭದ ಒಂದು ಸಾಲನ್ನು ಮತ್ತೆ ನೆನಪಿಸುವ ಅಗತ್ಯವಿದೆ. ''ಸಾಮ್ರಾಜ್ಯಶಾಹಿಯು ತನ್ನ ವಿರುದ್ಧದ ಪ್ರತಿಭಟನೆ ಮತ್ತು ಹೋರಾಟವನ್ನಲ್ಲದೆ ಬೇರೆ ಏನನ್ನೂ ಸೃಷ್ಟಿ ಮಾಡಲು ಸಾಧ್ಯವಿಲ್ಲದ ಸ್ಥಿತಿ ತಲುಪಿದೆ. ಅಥವಾ ಇದುವೇ ಅದರ ನಿಜವಾದ ಆಂತರಿಕ ವಸ್ತುಸ್ಥಿತಿ ಕೂಡ''. ಇದನ್ನು ತಾಯಿ (ಪಾತ್ರದ ಹೆಸರೂ ಹೌದು, ಕಾದಂಬರಿಯ ಹೆಸರೂ ಹೌದು) ಹೇಳುವ ''ಮೂರ್ಖರೆ! ನಾವು ನಿಮ್ಮನ್ನ ದ್ವೇಷಿಸೋ ಹಾಗೆ ಮಾತ್ರ ನೀವು ಮಾಡಬಲ್ಲಿರಿ!'' ಎಂಬ ಮಾತಿನೊಂದಿಗೆ ಹೋಲಿಸಿ ನೋಡಬೇಕು. ಇಂದು ಸಾಮ್ರಾಜ್ಯಶಾಹಿಯ ಸೈದ್ಧಾಂತಿಕ ಅಸ್ತ್ರವು ಕಾರ್ಮಿಕರ ವಿಚಾರಗಳನ್ನು ಮತ್ತು ಕಾರ್ಮಿಕರ ಪಾರ್ಟಿಗಳನ್ನು ಕಾರ್ಮಿಕರಿಂದಲೇ ಬೇರ್ಪಡಿಸಿದೆ. ಹಾಗಾಗಿ ಕಾರ್ಮಿಕರ ಬಗ್ಗೆ, ಕಾರ್ಮಿಕರ ಪಾರ್ಟಿಯ ಬಗ್ಗೆ ಹಾಗೂ ಅವರ ಹೋರಾಟದ ಬಗ್ಗೆ ಚರ್ಚೆ ಮಾಡುವುದು ಮುಜುಗರದ ಸಂಗತಿ ಎಂಬ ಜನವಿರೋಧಿ ಭಾವನೆ ಅಕಡೆಮಿಕ್ ವಲಯದಲ್ಲಿ ಬೇರೂರಿದೆ. ಫಲವಾಗಿ ಸಂಸ್ಕೃತಿ ಎಂದು ಹೆಸರಿಸಲಾಗಿರುವ (ಅದು ಯಾವುದು ಎಂದು ಇನ್ನೂ ಖಚಿತವಾಗಿಲ್ಲ) ವಿಷಯದ ಬಗ್ಗೆ ಟನ್‌ಗಟ್ಟಲೆ ಚರ್ಚೆ ಮತ್ತು ಬರವಣಿಗೆ ಪ್ರಕಟವಾಗುತ್ತಿದೆ. ಅದರಲ್ಲಿ ಬಹುಸಂಸ್ಕೃತಿ, ಬಹುಸತ್ಯ, ಬಹುಪರ್ಯಾಯ ಇತ್ಯಾದಿ ಅಂಶಗಳು ಮತ್ತೆಮತ್ತೆ ಪುನರಾವರ್ತನೆಯಾಗುತ್ತಿವೆ. ಡಬ್ಲ್ಯು.ಎಸ್.ಎಫ್. (ಜಾಗತಿಕ ಸಾಮಾಜಿಕ ವೇದಿಕೆ) ಮೂಲಕ ಇದನ್ನು ಜಗತ್ತಿನಾದ್ಯಂತ ಸಾರಲಾಗಿದೆ. ಪ್ರಗತಿಪರ ಬುದ್ಧಿಜೀವಿಗಳೂ ಕೂಡ ಆ 'ಬಹುಪರ್ಯಾಯ'ವನ್ನು ತಮಗರಿವಿಲ್ಲದಂತೆಯೇ ಪ್ರಶ್ನಾತೀತವಾಗಿ ನಂಬಿ ಬಿಟ್ಟಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ತಾಯಿ (ಪಾತ್ರ ಹಾಗೂ ಕಾದಂಬರಿ) ಹೇಳುವ ''ಇಡೀ ಭೂಮಿಯ ಮೇಲೆ, ಎಲ್ಲಾ ಮೂಲೆಗಳಿಂದಲೂ, ಒಂದೇ ಗುರಿಯ ಕಡೆಗೆ, ಅವರೆಲ್ಲರ ಶಕ್ತಿಯೂ ಒಂದೇ ಗುರಿಯ ಕಡೆಗೆ, ನ್ಯಾಯದ ಕಡೆಗೆ ಬೊಟ್ಟು ಮಾಡ್ತಿದೆ'' ಎಂಬುದು ಸಾಮ್ರಾಜ್ಯಶಾಹಿಗೆ ಸಮಾಜವಾದ ಮಾತ್ರ ಏಕೈಕ ಪರ್ಯಾಯ ಎಂಬುದನ್ನು ಸೂಚಿಸುತ್ತಿದೆ. ಹಾಗಾಗಿ 'ತಾಯಿ'ಕಾದಂಬರಿಯ ಓದು ಮತ್ತು ಚರ್ಚೆ ಕಾರ್ಮಿಕರ ಭೌತಿಕ ಹಾಗೂ ಆಂತರಿಕ ಸ್ಥಿತಿಯನ್ನು ಬದಲಾಯಿಸಲು ಕ್ರಿಯಾಶೀಲರಾಗುವಂತೆ ಒತ್ತಾಯಿಸುತ್ತದೆ. ಆ ಮೂಲಕ ಇಡೀ ವ್ಯವಸ್ಥೆಯ ಬದಲಾವಣೆಯ ದಾರಿಯ ಬಗ್ಗೆ ಆಲೋಚಿಸುವಂತೆ ಮಾಡುತ್ತದೆ. ಅದಕ್ಕಾಗಿಯೇ ಇಡೀ ಕಾದಂಬರಿಯ ಉದ್ದಕ್ಕೂ ದುಡಿವ ವರ್ಗದ ಅಂತರರಾಷ್ಟ್ರೀಯ ಗೀತೆ ಅನುರಣಿಸುತ್ತದೆ:

*ಎದ್ದೇಳಿ ಹಸಿವಿನ ಖೈದಿಗಳೆ ಸಿಡಿದೇಳಿ ಲೋಕದ ಶೋಷಿತರೆ*
*ಶ್ರಮಿಕರು ತೋರಿದ ಮಾರ್ಗವು ಅದುವೇ ಮುಕ್ತಿಯ ಸನ್ಮಾರ್ಗವು*
*ಯುಗಯುಗಗಳ ಕುಟಿಲ ಕಪಟವನು ಕೊನೆಗೊಳಿಸಲು ಹೋಗುವ ನಾವಿಂದು*
*ಅಳಿಸೋಣ ಬಡವರ ಗೋಳಾಟ ಇದು ಜೀವನ್ಮರಣದ ಹೋರಾಟ.*

ಈ ಜೀವನ್ಮರಣದ ಹೋರಾಟದಲ್ಲಿ 'ತಾಯಿ' ಕಾದಂಬರಿಯನ್ನು ಓದುವುದು ಮತ್ತು ಚರ್ಚಿಸುವುದೂ ಕೂಡ ಇದೆ.

**ಡಾ|| ಬಿ. ಎಂ. ಪುಟ್ಟಯ್ಯ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩೨೭೬

## ಜನಪದ ಪ್ರಕಾಶನದ ಜನಪ್ರಿಯ ಪ್ರಕಟಣೆಗಳು



ರೂ. 40/-



ರೂ. 20/-



ರೂ. 30/-



ರೂ. 35/-




ರೂ. 30/-




ರೂ. 30/-



ರೂ. 20/-




ರೂ. 25/-




ರೂ. 20/-




ರೂ. 35/-




ರೂ. 35/-




ರೂ. 35/-



ರೂ. 25/-



ರೂ. 30/-



ರೂ. 25/-



ರೂ. 25/-



# ಜನಪದ ಪ್ರಕಾಶನ

ನಂ. 57, ಮೊದಲನೆಯ ಮುಖ್ಯರಸ್ತೆ
ಯಶವಂತಪುರ, ಬೆಂಗಳೂರು - 560 022



ರೂ. 30/-

# ಕಾಡುವ ಬಣ್ಣಗಳು

ಡಾ|| ಸಬಿಹಾ ಭೂಮಿಗೌಡ

ದಾರಿಮಧ್ಯೆ ಬಸ್ಸನ್ನೇರಿದ ಸಾಮಾನ್ಯ ರೂಪಿನ ಯುವತಿಯು ನನ್ನ ಕಣ್ಮನಗಳನ್ನು ಏಕಕಾಲಕ್ಕೆ ಸೂರೆಗೊಂಡಳು. ಆಕೆ ತೊಟ್ಟಿದ್ದ ಕಡುಗುಲಾಬಿ ಬಣ್ಣದ, ಒಡಲಲ್ಲಿ ಚಿನ್ನದ ಬಣ್ಣದ ಬುಟ್ಟಾಗಳನ್ನು ಹೊಂದಿದ್ದ ಚೂಡಿದಾರವು ನನ್ನನ್ನು ಇಡಿಯಾಗಿ ಸೆಳೆದಿತ್ತು. ಆಕಸ್ಮಿಕವೆಂಬಂತೆ ಅವಳು ನನ್ನ ಮಗ್ಗುಲಲ್ಲೇ ಕುಳಿತಾಗ, ನನ್ನೊಳಗೆ ಅರ್ಥವಾಗದ ಒಂದು ಬಗೆಯ ಚಡಪಡಿಕೆ ತೀವ್ರವಾಗತೊಡಗಿತು. ನನ್ನ ಕಣ್ಣುಗಳು ಅವಳ ಉಡುಗೆಯನ್ನೇ ಏದೇಕಚಿತ್ತದಿಂದ ಈಕ್ಷಿಸುತ್ತಿದ್ದವು. ನೋಡನೋಡುತ್ತಿದ್ದಂತೆ ಅದು ನನಗೆ ಅತ್ಯಂತ ಪ್ರಿಯವೂ ಪರಿಚಿತವೂ ಆಪ್ತವೂ ಆಗಿದ್ದಂತೆ, ಅದರೊಂದಿಗೆ ನಿಡುಗಾಲದ ಸಂಬಂಧವೊಂದನ್ನು ನಾನು ಹೊಂದಿದ್ದಂತೆ ಭಾಸವಾಯಿತು. ಅಷ್ಟೇ ಅಲ್ಲ, ದೀರ್ಘಕಾಲದಿಂದ ನಾನು ಅಗಲಿದ್ದ ಆಪ್ತ ವ್ಯಕ್ತಿಯೋರ್ವರನ್ನು ಇದ್ದಕ್ಕಿದ್ದಂತೆ ಎದುರ್ಗೊಂಡ ಸಂತಸ ನನ್ನ ಮೈಯ ಕಣಕಣಗಳಲ್ಲೂ ಮೂಡಮೂಡತೊಡಗಿತು. 'ಇವಳ ಈ ಉಡುಗೆಯು ಸೀರೆಯಿಂದಲೇ ಹೊಲಿಸಿದ್ದಿರಬೇಕು. ಆ ಸೀರೆಯೂ ನಿಸ್ಸಂಶಯವಾಗಿ ಅಚ್ಚ ರೇಷ್ಮೆಯದೇ ಆಗಿರಬೇಕು. ಬಹುಶಃ ಅವಳ ಅಮ್ಮನ ಸೀರೆ ಈಗ ಈ ರೂಪವನ್ನು ತಾಳಿರಬೇಕು. ಅಂಥ ಸೀರೆಯೊಂದು ಚೂಡಿದಾರವಾಗಿ ರೂಪಾಂತರಗೊಳ್ಳುವುದಕ್ಕೆ ಏನು ಕಾರಣವಿದ್ದಿರಬಹುದು? ಸೀರೆಯನ್ನು ಮಗಳಿಗೆ ಕೊಡಲು ಆ ತಾಯಿಯ ಮನಸ್ಸು ಹೇಗೆ ಚಡಪಡಿಸಿರಬಹುದು?' ಹೀಗೆ ಹತ್ತಾರು ಯೋಚನೆಗಳು, ಊಹಾಪೋಹಗಳು ನನ್ನನ್ನು ಮುತ್ತಿ, ಈ ಬಗ್ಗೆ ಅವಳನ್ನು ಪ್ರಶ್ನಿಸಲೇ ಬೇಡವೇ ಎಂಬ ತುಡಿತ ಒಳಗಿನಿಂದ ಪುಟಿಯುತ್ತಿದ್ದರೆ, ವಿವೇಕವು ನನ್ನ ಬಾಯಿಗೆ ಬಿರಡೆ ಹಾಕಿ, ಮಾತು ಹೊರ ತುಳುಕದಂತೆ ಒತ್ತಿಹಿಡಿದಿತ್ತು.

ಬಸ್ಸು ಇನ್ನೊಂದಷ್ಟು ದೂರ ಹೋಗುತ್ತಿದ್ದಂತೆ, ಆ ಬಟ್ಟೆ, ಅದರ ಬಣ್ಣ, ಒಡಲು, ಬುಟ್ಟಾ–ಒಂದೊಂದೂ ನನ್ನೊಂದಿಗೆ ಮಾತನಾಡತೊಡಗಿದಂತೆ ಹಾಗೂ ಅದರ ಮೂಲಕ ಒಂದು ಬಗೆಯ ಪರಿಚಿತ ಗಂಧ ನನ್ನನ್ನು ಆವರಿಸುತ್ತಿರುವಂತೆ ಅನಿಸತೊಡಗಿತು. ಅಷ್ಟೇ ಅಲ್ಲ, ನಾನು ಅದೆಷ್ಟೋ ಯುಗಗಳಿಂದ ಅದರ ಹುಡುಕಾಟದಲ್ಲಿ ಇದ್ದೇನೇನೋ ಎಂದೂ ಅನಿಸತೊಡಗಿತು. ವಿಚಿತ್ರವೆಂದರೆ, ಈವರೆಗೆ ಬಟ್ಟೆ ಖರೀದಿಗೆಂದು ಅಂಗಡಿಗೆ ನಾನು ಅದೆಷ್ಟು ಬಾರಿ ಹೋಗಿದ್ದೆನೋ ನನಗೇ ಹೇಳಲಸಾಧ್ಯ. ಅಂತಹ ಯಾವ ಸಂದರ್ಭಗಳಲ್ಲೂ ನಾನು ಆ ಬಣ್ಣಕ್ಕಾಗಲೀ ಅಂಥ ಬಟ್ಟೆಗಾಗಲೀ ಹುಡುಕಾಟ ನಡೆಸಿದ್ದೇ ಇಲ್ಲ. ಹೀಗಿದ್ದೂ ಯಾಕೆ? ಯಾಕೆ ಈ ಬಣ್ಣ ನನ್ನನ್ನು ಕಾಡುತ್ತಿದೆ...?

ಯೋಚನೆ ಸಾಗುತ್ತಿರುವಾಗಲೇ ದಿಢೀರನೆ ಮಿಂಚು ಸುಳಿದು ಮಾಯವಾದಂತೆ ನೆನಪೊಂದು ಮನದ ಕನ್ನಡಿಯಲ್ಲಿ ಪ್ರತಿಫಲಿಸಿತು. ಇಷ್ಟು ಹೊತ್ತು ನನ್ನನ್ನು ಭಾವಪರವಶಳನ್ನಾಗಿಸಿದ್ದ ಅದು, ನನ್ನಮ್ಮನ ಮದುವೆ ಸೀರೆಯನ್ನು...? ಹೌದು, ಅದು ಹೀಗೇ ಇತ್ತಲ್ಲವೇ... ಶುದ್ಧ ರೇಷ್ಮೆಯ ಕಡು ಗುಲಾಬಿ ಬಣ್ಣದ, ಬೆಳ್ಳಿ ಸರಿಗೆಯಿಂದ ಕೂಡಿದ ಜರಿಯ ಅಂಚು, ವರ್ಣರಂಜಿತ ಸೆರಗನ್ನು, ಒಡಲಲ್ಲಿ ಚಿನ್ನದ ಬಣ್ಣದ ಚಿಲ್ಲಿಯಾಕಾರದ ಬುಟ್ಟಾ ಹೊಂದಿದ್ದ ಅಮ್ಮನ ಸೀರೆಯನ್ನೇ... ವರ್ಷಕ್ಕೊಮ್ಮೆ ಬಿಸಿಲಿಗೆ ಮೈತೆರೆದುಕೊಂಡು ಮತ್ತೆ ಜೋಪಾನವಾಗಿ ಕಪಾಟು ಸೇರುತ್ತಿದ್ದ, ಆಕೆಯ ಪ್ರೀತಿಯ, ಅಭಿಮಾನದ ಮತ್ತು ನಾವೆಲ್ಲ ಆಸೆಯಿಂದ ಮುಟ್ಟಿ, ತಟ್ಟಿ, ಅಘ್ರಾಣಿಸಿ, ಅಪರೂಪಕ್ಕೊಮ್ಮೆ ಮೈಮೇಲೆ ಅದನ್ನು ಹೊದ್ದುಕೊಂಡು ಸಂಭ್ರಮ, ಪುಲಕಗಳನ್ನು ಅನುಭವಿಸುತ್ತಿದ್ದ ಅಮ್ಮನ ಮದುವೆಯ ಸೀರೆಯನ್ನೇ – ಹುಡುಗಿಯ ಆ ಉಡುಗೆಯು ಹೋಲುತ್ತಿತ್ತು!

ಅಮ್ಮ ಅದನ್ನು ಎಷ್ಟು ಜತನದಿಂದ ಕಾದುಕೊಂಡು ಬಂದಿದ್ದಳೆಂದರೆ, ಅವಳ ವಿವಾಹದ ಬೆಳ್ಳಿಮಹೋತ್ಸವದಂದೂ ಅದು ಆಗತಾನೇ ಅಂಗಡಿಯಿಂದ ತಂದದ್ದೇನೋ ಎಂಬಂತೆ ಭಾಸವಾಗುತ್ತಿತ್ತು. ಹಾಗಂತ ಯಾರಾದರೂ ಹೇಳಿದರೆಂದರೆ, ಅವಳ ಕಣ್ಣಲ್ಲಿ ಮೂಡುತ್ತಿದ್ದ ಬೆಳಕನ್ನು ಈಗಲೂ ಮರೆಯಲಾಗುತ್ತಿಲ್ಲ. ಅದನ್ನು ತನ್ನ ತಂದೆ ಎಲ್ಲಿಂದ ತಂದಿದ್ದರು, ಎಷ್ಟು ಅಲೆದಾಡಿ ತನ್ನ ಪ್ರೀತಿಯ ಬಣ್ಣವನ್ನೇ ಹುಡುಕಿದ್ದರು, ಆ ಕಾಲಕ್ಕೇ ಅದಕ್ಕೆ ಎಷ್ಟು ಬೆಲೆ ಇತ್ತು, ಅದರ ಜರಿ ಎಂಥದ್ದು... ಹೀಗೆ ಅವಳು ಒಂದೊಂದನ್ನೇ ವಿವರಿಸುತ್ತಿದ್ದರೆ, ನಾವೆಲ್ಲ ಅದೇ ಮೊದಲಬಾರಿಗೆ ಕೇಳುತ್ತಿದ್ದೇವೇನೋ ಎಂಬಂತೆ ಕುಳಿತಿರುತ್ತಿದ್ದೆವು. ಒಮ್ಮೆ ಅಂತಹ ಭಾವಪ್ರಪಂಚದಲ್ಲಿ ತೇಲಾಡುತ್ತಿರುವಾಗಲೇ, ''ಅದರಲ್ಲಿ ನಿಜವಾದ ಬೆಳ್ಳೀನೇ ಇರೋದೇನಮ್ಮಾ'' ಎಂದಿದ್ದೆ; ''ನೂರಕ್ಕೆ ನೂರು ನಿಜ'' ಎಂದಾಗ, ''ಹಂಗಾದ್ರೆ ಅದ್ರಲ್ಲಿ ನಂಗೆ ಒಂದು ಗೆಜ್ಜೆ ಮಾಡ್ಸಿ ಕೊಡ್ತೀಯಾ?'' ಎಂದು ಮಕ್ಕಳಲ್ಲಿ ಯಾರೋ ಕೇಳಿದ್ದೆವು. ಅಷ್ಟಗಲವಾಗಿದ್ದ ಅವಳ ಮುಖ ಈ ಮಾತು ಕೇಳಿದ್ದೇ ಹಿಡಿಯಷ್ಟಾಗಿ ಕಪ್ಪಾಗಿಬಿಟ್ಟಿತ್ತು. ಅನಂತರ ನಾವು ಬೆಳೆದಂತೆ ಅವಳು ಅದರ ಕುರಿತು ಹೊಂದಿದ್ದ ಭಾವಪ್ರಪಂಚವು ನಮಗೆ ಸ್ಫುಟವಾಗುತ್ತ ಸಾಗಿತ್ತು.

ಇದೆಲ್ಲ ಎಷ್ಟು ವರ್ಷಗಳ ಹಿಂದಿನ ಮಾತು! ಈ ನಡುವೆ ಮೂವತ್ತೈದು-ನಲವತ್ತು ವಸಂತಗಳೇ ಉರುಳಿಹೋಗಿವೆ. ಆದರೂ ಆ ಸೀರೆಯ



ಬಣ್ಣ, ನುಣುಪು, ಸುಗಂಧ, ಅದು ಮೂಡಿಸಿದ್ದ ಬೆರಗು, ಸಂಭ್ರಮ ಎಲ್ಲವೂ ಇದೀಗ ಅನುಭವಿಸಿದ್ದು ಎಂಬಷ್ಟು ಹಸಿಯಾಗಿದೆಯಲ್ಲ ಎಂದು ಅರಿವಾಗುತ್ತಿದ್ದಂತೆ ಮೈಯೆಲ್ಲ ನವಿರೆದ್ದಿತು. ಯುವತಿಯಿಂದ ಸೀರೆ, ಸೀರೆಯಿಂದ ಅಮ್ಮ, ಅವಳ ಮೂಲಕ ಈವರೆಗೆ ಮರೆತ, ಮರೆಯಲೆತ್ನಿಸಿದ್ದ, ಮರೆತಿದ್ದೇನೆಂದು ತಿಳಿದಿದ್ದ ಸ್ಮೃತಿಯೊಂದು ಹೀಗೆ ಹೊರಹೊಮ್ಮಿ ಉಂಟುಮಾಡಿದ ಸ್ಪಂದನ ಅಪೂರ್ವವಾದುದು.

ಅಂಜುತ್ತಂಜುತ್ತಲೇ ಗೆಳತಿಯ ಮುಂದೆ ನನ್ನೊಳಗನ್ನು ಅರುಹಿದಾಗ ಅವಳನ್ನು ಕಾಡಿದ ಹಸಿರು ಬಣ್ಣದ ಇನ್ನೊಂದು ಲೋಕ ನನ್ನೆದುರು ತೆರೆದುಕೊಂಡಿತು. ಉತ್ತರ ಕರ್ನಾಟಕದ ಹಿನ್ನೆಲೆಯ ಆಕೆಗೆ ಬಾಲ್ಯದಿಂದಲೂ ದಟ್ಟ ಹಸಿರು ಬಣ್ಣದ ರೇಷ್ಮೆಬಳೆಗಳ ಕುರಿತು ವಿಚಿತ್ರ ಸೆಳೆತ. ಅಲ್ಲಿ ಹುಡುಗಿ ಮೈನೆರೆದಾಗ, ಮದುವೆಯ ಮತ್ತು ಸೀಮಂತದ ಆಚರಣೆಗಳಲ್ಲಿ ಹಸಿರು ರೇಷ್ಮೆಬಳೆಗಳನ್ನು ತೊಡಿಸುವ ಪದ್ಧತಿ. ಮನೆಯಲ್ಲಿ ಯಾರಿಗೇ ಹಸಿರು ಬಳೆ ತೊಡಿಸುತ್ತಿದ್ದರೆ ಆಕೆ ಅಲ್ಲಿ ಪ್ರತ್ಯಕ್ಷ. ಅವಳ ಬಳೆಯ ಈ ಮೋಹವನ್ನು ಕಂಡ ಹಿರಿಯರು, ''ನಿನ್ ಲಗ್ನದಾಗ ನಿಂಗ ಮುಂಗೈಯಿಂದ ಮೊಣಕೈ ತನ್ಕ ಅವ ಬಳಿ ತೊಡಿಸಿತೀನಂತ ಸುಮ್ನಿರು'' ಎಂದು ಚ್ಯಾಷ್ಟಿ ಮಾಡುತ್ತಿದ್ದುದೂ ಇತ್ತು. ಅದೇ ಬಣ್ಣದ ಇಳಕಲ್ ಸೀರೆ ಕಂಡರೂ ಅವಳಿಗೆ ಅದೇನೋ ಆಕರ್ಷಣೆ. ಹೀಗಿದ್ದರೂ ಅವಳ ಬದುಕಲ್ಲಿ ಅಂತಹ ಬಳೆ ತೊಡಿಸಿಕೊಳ್ಳುವ ಅವಕಾಶಗಳೇ ಒದಗಿಬರದಿದ್ದುದು ಅವಳ ಬಾಳಿನ ಕರಿಯ ಪುಟ. ಇಂದಿಗೂ ಬಳೆ ಅಂಗಡಿಗೆ ಹೋದರೆ ಅವಳ ಕೈಗಳು ಹಸಿರು ಬಳೆಗಳನ್ನು ನೇವರಿಸುತ್ತಲೇ ನಿಲ್ಲುತ್ತವೆ. ಅದನ್ನು ಕಂಡಾಗಲೆಲ್ಲ, ''ಒಮ್ಮೆ ಮನಃಪೂರ್ತಿ ಹಸಿರು ರೇಷ್ಮೆ ಬಳೆ ತೊಟ್ಟು ಬಿಡೇ'' ಎನ್ನುತ್ತೇನೆ. ಅವಳು ಮಾತಾಡುವುದಿಲ್ಲ; ತುಟಿಗಳ ಮೇಲೆ ವಿಷಾದದ ನಗುವೊಂದನ್ನು ಉರುಳಿಸುತ್ತಾಳೆ. ಮತ್ತೂ ಕಾಡಿದರೆ, ''ಬಳೆ ತೊಟ್ಟರೆ ತೊಡಿಸಿಕೊಂಡಂತಾಯ್ತೇ ? ಕೇಳಿದರೆ ಬಳೆಗಾರನೇ ತೊಡಿಸಿಯಾನು, ಆದರೆ ಹಸಿರು ಬಳೆ ತೊಡಿಸಿಕೊಳ್ಳುವ ಸಂದರ್ಭ ನನಗೆ ಒದಗಿದಂತಾಯ್ತೇ ?'' ಎನ್ನುತ್ತಾಳೆ.



ಮೊದಲ ಬಾರಿಗೆ ಅತ್ತೆಗಾಗಿ ಸೀರೆ ಖರೀದಿಸಲು ಹೋಗಿದ್ದೆ. ಅವರ ಪ್ರೀತಿಯ ಬಣ್ಣ ಹಸಿರು ಎಂದು ಅರಿತು, ಹಸಿರಿನ ಹತ್ತಾರು ಛಾಯೆಯ ಸೀರೆಗಳಲ್ಲಿ ಕಣ್ಸೆಳೆಯುವ ಒಂದನ್ನು ಖರೀದಿಸಿ ಅವರಿಗೆ ಉಡುಗೊರೆಯಾಗಿ ನೀಡಿದ್ದೆ. ''ಹೇಗಿದೆ'' ಎಂದು ನಾನಾಗಿ ಕೇಳಿದಾಗ, ''ಚೆನ್ನಾಗಿದೆ'' ಎಂದಿದ್ದರು. ಯಾಕೋ ನನಗೆ ತೃಪ್ತಿಯಾಗಲಿಲ್ಲ. ಅವರ ಕಣ್ಣುಗಳು ಅರಳುವಂತಾಗಲೆಂದು ಒಮ್ಮೆ ಅಂಗಡಿಗೇ ಅವರನ್ನು ಕರೆದೊಯ್ದಿದ್ದೆ. ಅಂಗಡಿಯಾತ ಹತ್ತಾರು ಹಸಿರು ಸೀರೆಗಳನ್ನು ಹರಡಿದರೂ ಅವರ ಕಣ್ಣುಗಳು ಮಾತ್ರ ಇನ್ನೂ ಯಾವುದರದ್ದೋ ಹುಡುಕಾಟದಲ್ಲಿ ಇದ್ದಂತೆ ಕಂಡಿತ್ತು. ಅನಂತರದ ವರ್ಷಗಳಲ್ಲೂ ಅವರ ಹೆಣ್ಣುಮಕ್ಕಳು, ಸೊಸೆಯಂದಿರು ಯಾವುದೇ ಹಸಿರು ಸೀರೆ ತಂದರೂ ಒಂದಿಷ್ಟು ತಿಳಿ ಅಥವಾ ಕಡು ಬಣ್ಣ ಇರಬೇಕಿತ್ತು ಎಂಬ ಟಿಪ್ಪಣಿ ಅವರಿಂದ (ನಮಗೆ ಕೇಳಿಯೂ ಕೇಳಿಸದಂತೆ) ಹಾದುಬಂದದ್ದಿದೆ. ಮೊದಮೊದಲು ಅವರ ಮಾತಿನ ಅರ್ಥ ಹೊಳೆಯದಿದ್ದರೂ ಈಗ ಅರ್ಥವಾಗತೊಡಗಿದೆ. ಅತ್ತೆಯ ಇಷ್ಟದ ಬಣ್ಣ ಬೇರೆ ಎಲ್ಲೂ ಇಲ್ಲ; ಅವರ ಮನದಲ್ಲೇ ಭದ್ರವಾಗಿ ತಳಊರಿದೆ. ಅವರು ಯಾವತ್ತೋ ಎಲ್ಲೋ ಕಂಡಿದ್ದ ಅಥವಾ ಉಟ್ಟಿದ್ದ ಇಲ್ಲವೇ ಅವರ ಪ್ರೀತಿಪಾತ್ರರೊಬ್ಬರು ಉಟ್ಟಿದ್ದಿರಬಹುದಾದ ಹಸಿರು ಬಣ್ಣದ ಹುಡುಕಾಟದಲ್ಲಿ ಅವರಿದ್ದಾರೆ ಎಂಬ ಬಲವಾದ ಗುಮಾನಿ ನನ್ನನ್ನು ಆವರಿಸಿದೆ.

ಇತ್ತೀಚೆಗೆ ಸೀರೆ ಅಂಗಡಿಗೆ ಹೋದಾಗ ಈ ಬಣ್ಣದ ಹುಡುಕಾಟ ಇನ್ನಷ್ಟು ನಿಚ್ಚಳವಾಗತೊಡಗಿತು. 'ಅರಿಶಿನ ಬಣ್ಣದ ಕಡುಗೆಂಪು ಅಂಚಿನ ರೇಷ್ಮೆ ಸೀರೆ ಕೊಡಿ' ಎಂದೆ. ತಂದಿಟ್ಟ ಐದಾರು ಸೀರೆಗಳಲ್ಲಿ ಒಂದನ್ನು ಎತ್ತಿ ತಂದೆ. ಅಂಥ ಸೀರೆ ನನಗೆ ನನ್ನ ತವರಿನ ಮೊದಲ ಉಡುಗೊರೆಯಾಗಿತ್ತು. ಅದರ ನುಣುಪು, ಅದರ ಬಿಸುಪು, ಅದನ್ನುಟ್ಟಾಗ ಈತನ ಕಣ್ಣುಗಳು ಅರಳಿದ್ದು... ಇವೇ ಹತ್ತಾರು ನೆನಪುಗಳು ಆ ಸೀರೆಯ ಹುಡುಕಾಟಕ್ಕೆ ನನ್ನನ್ನು ಪ್ರೇರಿಸಿದ್ದು ಅರಿವಿಗೆ ಬಂತು. ಬಣ್ಣಗಳು ಕೇವಲ ಬಣ್ಣಗಳಲ್ಲ; ಅವುಗಳು ಸಂಬಂಧದ ಜೊತೆ, ಸ್ಮೃತಿಗಳ ಜೊತೆ ತಳುಕು ಹಾಕಿಕೊಂಡಿರುತ್ತವೆ. ಅಂತೆಯೇ ನಾವು ಆಯುವ ಬಣ್ಣಗಳು ಹೊರಗೆ ಇದ್ದು ನಮ್ಮನ್ನು ಪ್ರೇರಿಸುತ್ತವೋ ಅಥವಾ ನಮ್ಮ ಒಳಗೇ ಇದ್ದು ಹೊರಗಿನ ಬಣ್ಣಗಳಿಗೆ ಕೈಒಡ್ಡುವಂತೆ ಮಾಡುತ್ತವೋ ಎಂಬುದು ವೃಕ್ಷ-ಬೀಜ ನ್ಯಾಯದಂತಿದೆ.

ಬಣ್ಣಗಳೆಂದರೆ ಇಷ್ಟು ಪ್ರಭಾವಶಾಲಿಯಾದವು ಎಂದು ನನಗೆ ಗೊತ್ತೇ ಇರಲಿಲ್ಲ. ಬಣ್ಣಗಳು ಹತ್ತಾರು ಸವಿನೆನಪುಗಳನ್ನು ಹೊತ್ತು ತರುವಂತೆ ಕಹಿನೆನಪನ್ನೂ ತರುತ್ತವೆ. ಕಡುಕೆಂಪಿನ ಒಡಲಲ್ಲಿ ಲಿಲ್ಲಿ ಹೂಗಳನ್ನು ಹೊತ್ತ ಕರಿಯ ಅಂಚಿನ ಸೀರೆಯೊಂದು ಕಾಲೇಜು ದಿನಗಳಲ್ಲಿ ನನಗೆ ಅತ್ಯಂತ ಅಚ್ಚುಮೆಚ್ಚಿನದಾಗಿತ್ತು. ಅದನ್ನು ಉಟ್ಟು ನಡೆಯುತ್ತಿದ್ದರೆ ಅದೆಂಥದೋ ಸಂಭ್ರಮ; ಗಾಳಿಯಲ್ಲಿ ಹತ್ತಿಯಂತೆ ತೇಲಿದಂತೆ ನಾನೋರ್ವ ಗಂಧರ್ವಕನ್ಯೆಯೇನೋ ಎಂಬ ಪುಳಕವನ್ನು ಅದು ನನ್ನಲ್ಲಿ ಹುಟ್ಟಿಸುತ್ತಿತ್ತು. ಇಂಥ ಸೀರೆಯನ್ನು ಉಟ್ಟು ಸಂಭ್ರಮದಿಂದ ತೆಗೆಸಿಕೊಂಡಿದ್ದ ಫೋಟೋವೊಂದನ್ನು ಗೆಳತಿಗೆ ತೋರಿದ್ದೆ. ಆಗ ಆಕೆ, 'ಇದು ಥೇಟ್ ಸಾಬರ ಬಣ್ಣ' ಎಂದು ಪ್ರತಿಕ್ರಿಯಿಸಿದಾಗ ಕಿನ್ನರಲೋಕದಿಂದ ಸೀದಾ ಪಾತಾಳಕ್ಕೆ ಬಿದ್ದ ಅನುಭವ ನನ್ನದಾಗಿತ್ತು. ಎಂದರೆ ಯಾವ ಅನನ್ಯತೆಯಿಂದ ಹೊರಗುಳಿಯಲು ನಾನು ಬಾಲ್ಯದಿಂದಲೂ ಹೋರಾಟ ನಡೆಸಿದ್ದೆನೋ ಆ ಅಸ್ಮಿತೆಯಲ್ಲೇ, ಆ ಸೀರೆಯಿಂದ ಅದರ ಬಣ್ಣದಿಂದ ನನ್ನನ್ನು ಗೆಳತಿ ಸಿಲುಕಿಸಿಬಿಟ್ಟಿದ್ದಳು. ಅಂಥ ಬಣ್ಣದ ಉಡುಗೆಯನ್ನು ಜಾತಿ, ಧರ್ಮ ವರ್ಗ, ತ್ವಚೆಯ ಭೇದವಿಲ್ಲದೆ ಹಲವರು ತೊಡುತ್ತಿದ್ದುದನ್ನು ನನ್ನ ಮನಸ್ಸು ಅನಂತರದ ದಿನಗಳಲ್ಲಿ ಗ್ರಹಿಸಿದರೂ, ಆ ಸೀರೆಯು ನನ್ನ ಪ್ರೀತಿಯ ಸೀರೆಯಾಗಿದ್ದರೂ ಅಂದಿನಿಂದ ನಾನು ಅದರಿಂದ, ಅದರ ಬಣ್ಣದಿಂದ ದೂರವೇ ಉಳಿದಿದ್ದೆ. ಬಣ್ಣಗಳಿಂದ ಅವು ಬಿಂಬಿಸುವ ಅರ್ಥಗಳಿಂದ ಹೊರಜಿಗಿಯುವ ಈ ಬಗೆಯ ಯತ್ನ ನನ್ನ ಬದುಕಲ್ಲಿ ಬೇಡವೆಂದರೂ ನಿರಂತರ ಸಾಗುತ್ತಲೇ ಬಂದಿದೆ. ಇಷ್ಟದ ಬಿಳಿಯ ಬಣ್ಣದ ಉಡುಗೆ 'ವಿರಾಗಿಣಿ'ಯ ಅರ್ಥ ನೀಡೀತೆಂದು, ತಿಳಿ ನೀಲಿ ಬಣ್ಣ ಮನೆಗೋಡೆಗೆ ಹಾಕಿದರೆ ಅದು ನಿರ್ದಿಷ್ಟ ಗುಂಪಿನವರ ಮನೆ ಎನಿಸೀತೆಂದು, ಬೇಗ ಕೊಳೆ ಕಾಣದ ಕಾವಿಬಣ್ಣದ ಲುಂಗಿ ಕೇಸರೀಕರಣದ ಸೂಚನೆಯೆಂದು, ಕೈಕಸೂತಿಯಿಂದ ತಯಾರಿಸಿದ ಮೇಜಿನ ಮೇಲ್ಹಾಸುಗಳು, ಟೊಪ್ಪಿಗಳು ತಮ್ಮ ಕಲಾತ್ಮಕತೆಯಿಂದ ಮನಸೆಳೆದರೂ ಅವು ಸಾಬರ ಪ್ರತೀಕವೆಂದು ಅಲ್ಲಲ್ಲೇ ಕೊಡವಿಕೊಳ್ಳುತ್ತ ಬಂದಿದ್ದೇನೆ. ಬಣ್ಣಗಳು ನೀಡುವ ಅನನ್ಯತೆಯಿಂದ ತಪ್ಪಿಸಿಕೊಳ್ಳುವ ನನ್ನ ಈ ಓಟದ ಕುರಿತು ಇಂದು ಪುನರ್ ವಿಮರ್ಶೆ ಮಾಡಿಕೊಳ್ಳುವ ತಿರುವಿಗೆ ಬಂದು ನಿಂತಿದ್ದೇನೆ. ಬಣ್ಣಗಳನ್ನು ಕೇವಲ ಬಣ್ಣಗಳನ್ನಾಗಿ ಮಾತ್ರ ನೋಡಲು ಸಾಧ್ಯವಿಲ್ಲವೇ ? ಬಣ್ಣಗಳನ್ನು ನಿರ್ದಿಷ್ಟ ಕಾರಣಗಳಿಗಾಗಿ ನಿರಾಕರಿಸುತ್ತ, ಅಂಚಿಗೆ ತಳ್ಳುತ್ತ ಸಾಗುವುದು ಎಷ್ಟು ವ್ಯಾವಹಾರಿಕ ಎಂಬ ಪ್ರಶ್ನೆ ಎದುರಾಗತೊಡಗಿದೆ. ಬೊಳುವಾರ್ ಮಹಮದ್ ಕುಂಞಯವರ **ಕೇಸರಿ ಬಿಳಿ ಹಸಿರು ಮೂರು ಬಣ್ಣ ನಡುವೆ ಚಕ್ರವು** ಕತೆಯಲ್ಲಿ ಕೇಸರಿ, ಹಸಿರು ಬಣ್ಣಗಳ ಚರ್ಚೆ ಸಾಗುವ ಬಗೆ ವಿಶಿಷ್ಟವಾಗಿದೆ. ಅಗ್ಗದ ಬೆಲೆಗೆ ಸಿಗುತ್ತದೆಂದು ಕೇಸರಿ ಲುಂಗಿ ತೊಟ್ಟು ಮಸೀದಿಗೆ ಬರುವ ಮುಸ್ಲಿಂ ಯುವಕ, ಆತನಿಗೇ ಅರಿವಿಲ್ಲದಂತೆ ದೊಡ್ಡ ಕ್ರಾಂತಿಯನ್ನು ಹುಟ್ಟುಹಾಕುವ ನಾಟಕೀಯತೆ ಇದೀಗ ನನಗೆ ಆಪ್ಯಾಯಮಾನವೆನಿಸಿದೆ. ಬಣ್ಣಗಳು ಕೇವಲ ಬಣ್ಣಗಳಲ್ಲ; ಅವು ಒಂದು ಸಮುದಾಯದ ಪ್ರತಿನಿಧಿಗಳು ಎಂದು ತಿಳಿದೊಡನೆ, ಪರಸ್ಪರರನ್ನು ಪ್ರತ್ಯೇಕಿಸಲು, ತುಳಿಯಲು, ಅಪಮಾನಿಸಲು ಇವು ಸರಕುಗಳಾಗುತ್ತವೆ.

ಒಂದು ವೇಳೆ ನಾವು ಬಣ್ಣಗಳನ್ನು ನಿರ್ದಿಷ್ಟ ಜಾತಿ, ಧರ್ಮಗಳ ಗಡಿಗಳಿಂದ ಹೊರಗೆಳೆಯಲು ಸಾಧ್ಯವಾದರೆ, ಅವುಗಳು ಶೋಷಣೆಯ ಸರಕುಗಳಾಗುವ ಅಪಾಯ ತಪ್ಪುತ್ತದೆ; ಎಲ್ಲರೂ ತಮ್ಮಿಷ್ಟದ ಎಲ್ಲ ಬಣ್ಣಗಳನ್ನೂ ನಿಸ್ಸಂಕೋಚದಿಂದ ಅಪ್ಪಿಕೊಳ್ಳುವುದು ಸಾಧ್ಯವಾಗುತ್ತದೆ. ಇನ್ನೊಂದು ಗುಂಪಿನ, ವರ್ಗದ, ಧರ್ಮದ ಬಣ್ಣವನ್ನೂ ನಿರ್ಮಮಕಾರದಿಂದ ಸ್ವೀಕರಿಸುವ ಸ್ಥಿತಿಗೆ ತಲುಪುವುದೂ ಒಂದು ಮಹತ್ವದ ಹೆಜ್ಜೆಯಲ್ಲವೇ.

**ಡಾ॥ ಸಬಿಹಾ ಭೂಮೀಗೌಡ**
ಕನ್ನಡ ಪ್ರಾಧ್ಯಾಪಕರು, ಮಂಗಳೂರು ವಿಶ್ವವಿದ್ಯಾನಿಲಯ, ಕೊಣಾಜೆ, ಮಂಗಳೂರು

## ಪುಸ್ತಕ ಪ್ರಕಾಶನ

91, 9ನೇ ಮುಖ್ಯರಸ್ತೆ
ಸರಸ್ವತಿಪುರಂ
ಮೈಸೂರು - 570 009
ಫೋನ್ : 0821-2545774

ಪುಸ್ತಕ ಪ್ರಕಾಶನ

## ಪುಸ್ತಕ ಪ್ರಕಾಶನ

ಬುಕ್‌ಪೋಸ್ಟ್ ಸರ್ವೀಸ್
ಪಿ. ಬಿ. ನಂ. 58, ಮೂಡಿಗೆರೆ
ಚಿಕ್ಕಮಗಳೂರು ಜಿಲ್ಲೆ-577132
ಫೋನ್ : 08263-228353, 240202
ಮೊಬೈಲ್ : 94482 03730
e-mail : praghu2@sancharnet.in

### ಪುಸ್ತಕ ಬೆಲೆ ಪಟ್ಟಿ - 2009*

| | |
|---|---|
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ :** | |
| ಕಿರಗೂರಿನ ಗಯ್ಯಾಳಿಗಳು | 69.00 |
| ಕರ್ವಾಲೊ | 81.00 |
| ಚಿದಂಬರ ರಹಸ್ಯ | 132.00 |
| ಸಹಜ ಕೃಷಿ | 51.00 |
| ಪರಿಸರದ ಕತೆ | 75.00 |
| ಮಿಸ್ಸಿಂಗ್ ಲಿಂಕ್ | 69.00 |
| ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | 87.00 |
| ಜುಗಾರಿ ಕ್ರಾಸ್ | 132.00 |
| ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು | 57.00 |
| ಫ್ಲೈಯಿಂಗ್ ಸಾಸರ್ಸ್ (1) | 57.00 |
| ಫ್ಲೈಯಿಂಗ್ ಸಾಸರ್ಸ್ (2) | 57.00 |
| ಕಾಡಿನ ಕತೆಗಳು 1, 2, 3, 4 ಪ್ರತಿಯೊಂದೂ | 57.00 |
| ರುದ್ರಪ್ರಯಾಗದ ಭಯಾನಕ ನರಭಕ್ಷಕ | 80.00 |
| ಕನ್ನಡನಾಡಿನ ಹಕ್ಕಿಗಳು (1) - ಮಿಂಚುಳ್ಳಿ | 69.00 |
| (2) - ಹೆಜ್ಜೆ ಮೂಡದ ಹಾದಿ | 69.00 |
| ಹಕ್ಕಿ-ಪುಕ್ಕ | 300.00 |
| ಅಣ್ಣನ ನೆನಪುಗಳು | 150.00 |
| ಹುಲಿಯೂರಿನ ಸರಹದ್ದು | 72.00 |
| ಅಬಚೂರಿನ ಪೋಸ್ಟಾಫೀಸು | 69.00 |
| ಮಿಲನಿಯಮ್ (1) - ಹುಡುಕಾಟ | 57.00 |
| ಮಿಲನಿಯಮ್ (2) - ಜೀವನ ಸಂಗ್ರಾಮ | 57.00 |
| ಮಿಲನಿಯಮ್ (3) - ಪೆಸಿಫಿಕ್ ದ್ವೀಪಗಳು | 57.00 |
| ಮಿಲನಿಯಮ್ (4) - ಚಂದ್ರನ ಚೂರು | 57.00 |
| ಮಿಲನಿಯಮ್ (5) - ನೆರೆಹೊರೆಯ ಗೆಳೆಯರು | 57.00 |
| ಮಿಲನಿಯಮ್ (6) - ಮಹಾಯುದ್ಧ (1) | 57.00 |
| ಮಿಲನಿಯಮ್ (7) - ಮಹಾಯುದ್ಧ (2) | 57.00 |
| ಮಿಲನಿಯಮ್ (8) - ಮಹಾಯುದ್ಧ (3) | 57.00 |
| ಮಿಲನಿಯಮ್ (9) - ದೇಶ ವಿದೇಶ (1) | 60.00 |
| ಮಿಲನಿಯಮ್ (10) - ದೇಶ ವಿದೇಶ (2) | 60.00 |
| ಮಿಲನಿಯಮ್ (11) - ದೇಶ ವಿದೇಶ (3) | 57.00 |
| ಮಿಲನಿಯಮ್ (12) - ದೇಶ ವಿದೇಶ (4) | 57.00 |
| ಮಿಲನಿಯಮ್ (13) - ವಿಸ್ಮಯ ವಿಶ್ವ (1) | 57.00 |
| ಮಿಲನಿಯಮ್ (14) - ಮಹಾಪಲಾಯನ | 57.00 |
| ಮಿಲನಿಯಮ್ (15) - ವಿಸ್ಮಯ ವಿಶ್ವ (2) | 57.00 |
| ಮಿಲನಿಯಮ್ (16) - ಅಡ್ವೆಂಚರ್ | 57.00 |
| ಮಾಯಾಲೋಕ - 1 | 198.00 |
| ಹಕ್ಕಿಗಳ ಗ್ರೀಟಿಂಗ್‌ಕಾರ್ಡ್ (30 ಬಗೆಗಳು) ಒಂದು ಕಾರ್ಡ್ ಬೆಲೆ | 13.00 |
| The Stories of My Environment | 144.00 |
| ಪಾಕ ಕ್ರಾಂತಿ ಮತ್ತು ಇತರ ಕತೆಗಳು | 60.00 |
| ವ್ಯಕ್ತಿ ವಿಶಿಷ್ಟ ಸಿದ್ಧಾಂತ ಮತ್ತು ಯಮಳ ಪ್ರಶ್ನೆ | 51.00 |
| ಬೃಹನ್ನಳೆ ಸೋಮುವಿನ ಸ್ವಗತ ಲಹರಿ ಮತ್ತು ಇತರ ಕವನಗಳು | 60.00 |
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ - ಶ್ರೀ ಪ್ರದೀಪ ಕೆಂಜಿಗೆ :** | |
| ವಿಸ್ಮಯ (1) | 51.00 |
| (2) (3) ಪ್ರತಿಯೊಂದೂ | 57.00 |
| ಪ್ಯಾಪಿಲಾನ್ (1) (2) ಪ್ರತಿಯೊಂದೂ | 132.00 |
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ - ಡಾ|| ಬಿ. ಬಿ. ಬೆಳವಾಡಿ :** | |
| ಹುಳುಗಳ ವಿಸ್ಮಯ ಕೋಶ (1) ನಡೆಯುವ ಕಡ್ಡಿ! ಹಾರುವ ಎಲೆ! | 45.00 |
| **ಶ್ರೀ ಪ್ರದೀಪ ಕೆಂಜಿಗೆ :** | |
| ಬರ್ಮುಡಾ ಟ್ರ್ಯಾಂಗಲ್ | 57.00 |
| ಅದ್ಭುತ ಯಾನ | 60.00 |
| **ಶ್ರೀ ಜಿ. ಪಿ. ಬಸವರಾಜು** | |
| ಭೂಕಂಪದ ಅಂತರಂಗ | 40.00 |
| **ಶ್ರೀ ಎಮ್. ಶಿವಕುಮಾರ್** | |
| ಸೈಕಲ್ ಪಾಲ | 40.00 |
| ಯೋಗಿ ಮತ್ತು ಅಪ್ಸರೆ | 66.00 |
| ಕಂಪ್ಯೂಟರ್ ಕಲಿಯಿರಿ | 135.00 |
| **ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣಗೌಡರು :** | |
| ಅಚ್ಚ ಕನ್ನಡ ನುಡಿಕೋಶ | 360.00 |
| **ಶ್ರೀ ನರೇಂದ್ರ ರೈ ದೇರ್ಲ :** | |
| ಸಾಯುವ ಕೃಷಿ | 45.00 |
| **ಶ್ರೀ ಕೃಪಾಕರ - ಸೇನಾನಿ :** | |
| ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು | 93.00 |
| **ಶ್ರೀ ಕೃಷ್ಣ ಆಲನಹಳ್ಳಿ :** | |
| ಗೋಡೆ | 66.00 |
| **ಡಾ|| ಎಸ್. ಎಂ. ವೃಷಭೇಂದ್ರ ಸ್ವಾಮಿ :** | |
| ತರಗತಿಗಳಲ್ಲಿ ಕುವೆಂಪು | 180.00 |
| **ಶ್ರೀ ದೇವನೂರು ಮಹಾದೇವ** | |
| ಕುಸುಮಬಾಲೆ | 60.00 |
| **ಶ್ರೀಮತಿ ತಾರಿಣಿ ಚಿದಾನಂದ :** | |
| ಮಗಳು ಕಂಡ ಕುವೆಂಪು | 240.00 |

* ಹೊಸ ಆವೃತ್ತಿ (Edition) ಬಿಡುಗಡೆಗೊಂಡಾಗ್ಗೆ ಮುಖಪುಟ ಬೆಲೆಯಲ್ಲಿ ವ್ಯತ್ಯಾಸವಿರುವುದು.

# ಮತ ಮತ್ತು ಮತಾಂತರ: ಪ್ರಜಾಸತ್ತಾನಿಕತೆಯ ನಿರೂಪಣೆಗಳು; ಪರ್ಯಾಯ ಕಥನಗಳು

ಜಿ. ರಾಜಶೇಖರ

ವಿಮರ್ಶಕ ವಾಲ್ಟರ್ ಬೆಂಜಮಿನ್‌ನ ಒಂದು ಜಾಣ್ನುಡಿ ಹೀಗಿದೆ: ''ಉದ್ಯೋಗ ಪಡೆಯುವುದೇ ಈಗ ವೇಶ್ಯಾವೃತ್ತಿಯಾಗಿ ಮಾರ್ಪಟ್ಟಿರುವುದರಿಂದ ವೇಶ್ಯಾವೃತ್ತಿಯನ್ನು ಅಗತ್ಯವಾಗಿ ಉದ್ಯೋಗವೆಂದು ಪರಿಗಣಿಸಬೇಕು.'' ಈ ಮಾತಿಗೆ ಬಹುಶಃ ಅವನ ವೈಯಕ್ತಿಕ ಬದುಕಿನ ಹಿನ್ನೆಲೆಯೂ ಇದೆ. ಜರ್ಮನಿಯ, ಅನುಕೂಲವಂತ ಯಹೂದಿ ಕುಟುಂಬವೊಂದರಲ್ಲಿ ಹುಟ್ಟಿ ಬೆಳೆದ ಬೆಂಜಮಿನ್ ೧೯೪೦ರಲ್ಲಿ ನಾಝಿ ಸೈನಿಕರ ಸೆರೆಯಾಳು ಆಗುವುದನ್ನು ತಪ್ಪಿಸಿಕೊಳ್ಳಲು ಆತ್ಮಹತ್ಯೆ ಮಾಡಿಕೊಂಡ. ನಾಝಿ ಜರ್ಮನಿಯಿಂದ ತಪ್ಪಿಸಿಕೊಂಡು ಆತ ಫ್ರಾನ್ಸ್‌ಗೆ ಬಂದಿದ್ದ. ಫ್ರಾನ್ಸ್ ಕೂಡ ನಾಝಿಗಳ ವಶವಾದ ಮೇಲೆ, ಆತ ಅಲ್ಲಿಂದಲೂ ತಪ್ಪಿಸಿಕೊಂಡುಹೋಗುವ ಪ್ರಯತ್ನದಲ್ಲಿದ್ದಾಗ, ತನ್ನ ೪೮ನೆಯ ವಯಸ್ಸಿನಲ್ಲಿ ತೀರಿಕೊಂಡ. ತಾಂತ್ರಿಕವಾಗಿ ಅವನ ಸಾವು ಆತ್ಮಹತ್ಯೆ; ವಾಸ್ತವದಲ್ಲಿ ಅದು ನಾಝಿಗಳು ನಡೆಸಿದ ಕಗ್ಗೊಲೆ. ರಾಜಕೀಯ, ಸಾಹಿತ್ಯ ಮತ್ತು ಸಂಸ್ಕೃತಿಗಳ ಬಗ್ಗೆ ಅಸಾಧಾರಣ ತಿಳುವಳಿಕೆ ಮತ್ತು ಒಳನೋಟಗಳಿದ್ದ ಬೆಂಜಮಿನ್ ಬದುಕಿನ ಉದ್ದಕ್ಕೂ ಮಾರ್ಕ್ಸ್‌ವಾದ ಮತ್ತು ಯಹೂದಿ ಶ್ರದ್ಧೆಗಳ ನಡುವೆ ಯಾವುದು ತನ್ನ ನಿಜವಾದ ನೆಲೆ ಎಂದು ತಿಳಿಯದೆ, ಡೋಲಾಯಮಾನ ಮನಃಸ್ಥಿತಿಯಲ್ಲೇ ತನ್ನ ಕಾಲದ ಗೊಂದಲಗಳನ್ನೂ ವಿಪರ್ಯಾಸಗಳನ್ನೂ ಗ್ರಹಿಸಿದವನು. ಅವನ ಎಡಪಂಥೀಯ ನಿಲುವುಗಳಿಂದಾಗಿ ಜರ್ಮನಿಯಲ್ಲಿ ಅವನಿಗೆ ನಿಶ್ಚಿತ ಉದ್ಯೋಗವೆಂಬುದೇ ಇರಲಿಲ್ಲ. ಅಧ್ಯಾಪಕ ವೃತ್ತಿ ಬಿಟ್ಟು ಬೇರೆ ಯಾವುದಕ್ಕೂ ಅವನಿಗೆ ಅರ್ಹತೆ ಇರಲಿಲ್ಲ. ಡಾಕ್ಟರೇಟ್ ಪದವಿಗಾಗಿ ಬರ್ನ್ ವಿಶ್ವವಿದ್ಯಾಲಯಕ್ಕೆ ಆತ ಸಲ್ಲಿಸಿದ ಪ್ರಬಂಧ ತಿರಸ್ಕೃತವಾಗಿತ್ತು. ವಿಶ್ವವಿದ್ಯಾಲಯದ ಪ್ರಕಾರ, ಅದು ಸಾಹಿತ್ಯ ಮತ್ತು ತತ್ವಶಾಸ್ತ್ರ ಎರಡನ್ನೂ ಒಳಗೊಳ್ಳುವ ತಪ್ಪುಮಾಡಿತ್ತು! ಡಾಕ್ಟರೇಟ್ ಪದವಿ ಇಲ್ಲದೆ ಅವನಿಗೆ ಎಲ್ಲೂ ಉದ್ಯೋಗ ಸಿಗುವಂತಿರಲಿಲ್ಲ. ಜೀವನ ನಿರ್ವಹಣೆಗೆ ಅಗತ್ಯವಾದ ದುಡ್ಡಿಗೇ ಆತ ಪರದಾಡಬೇಕಿತ್ತು; ಅಂತಹದ್ದರಲ್ಲಿ ಆತನಿಗೆ ಅಪರೂಪದ ಹಳೆಯ ಪುಸ್ತಕಗಳನ್ನು ಸಂಗ್ರಹಿಸುವ ದುಬಾರಿ 'ಚಟ'ವಿತ್ತು. ಹೀಗಾಗಿ ಉದ್ಯೋಗ ಮತ್ತು ವೇಶ್ಯಾವೃತ್ತಿಗಳ ಕುರಿತು ಅವನು ಆಡಿದ ಮಾತು, ಅವನ ಸ್ವಂತ ಅನುಭವದಿಂದಲೇ ಹೊರಹೊಮ್ಮಿದ್ದಾಗಿರಬಹುದು.

ಕನ್ನಡದ ಪ್ರಮುಖ ಪತ್ರಿಕೆಯೊಂದರಲ್ಲಿ ಮತಾಂತರ ಕುರಿತು ಇತ್ತೀಚೆಗೆ ನಡೆದ ಸುದೀರ್ಘ ಚರ್ಚೆಯ ಹಿನ್ನೆಲೆಯಲ್ಲಿ ಮೇಲೆ ಹೇಳಿದ ಬೆಂಜಮಿನ್‌ನ ಮಾತನ್ನು ಹೀಗೂ ಓದಿಕೊಳ್ಳಬಹುದಾಗಿದೆ: ''ಈಗ ದುಡ್ಡಿನ ವ್ಯವಹಾರವೇ ಧರ್ಮದ ಸ್ಥಾನವನ್ನು ಪಡೆದಿರುವುದರಿಂದ ಧರ್ಮವನ್ನು ಅಗತ್ಯವಾಗಿ ಒಂದು ವ್ಯವಹಾರವೆಂದು ಪರಿಗಣಿಸಬೇಕು''. ಇಲ್ಲಿ 'ವ್ಯವಹಾರ' ಎಂಬ ಶಬ್ದವನ್ನು ಅದರ ಒಳ್ಳೆಯ ಅರ್ಥದಲ್ಲೇ ಬಳಸಲಾಗಿದೆ; ದುಡ್ಡಿನ ಬಗ್ಗೆ ಸಹ ಈ ಮಾತಿನಲ್ಲಿ ತಿರಸ್ಕಾರಭಾವವಿಲ್ಲ. ದುಡ್ಡು ಮತ್ತು ವ್ಯವಹಾರಗಳಿಲ್ಲದೆ ನಮ್ಮಂತಹ ಲೌಕಿಕರ ಜೀವನ ನಡೆಯುವುದಿಲ್ಲ. ಅದೇ ಕಾರಣಕ್ಕೆ ಲೌಕಿಕರ ಬದುಕಿನಲ್ಲಿ ಧರ್ಮ ದಿನನಿತ್ಯದ ಹಲವು ವ್ಯವಹಾರಗಳಲ್ಲಿ ಒಂದು ಶಿವಾಯಿ ಅದೇ ಸರ್ವಸ್ವವಲ್ಲ. ರೈತರು, ಕಾರ್ಮಿಕರು, ನೌಕರರು, ಅಷ್ಟೇ ಯಾಕೆ ನಮ್ಮ ಮನೆಗಳ ಹೆಂಗಸರು ಕೂಡ ದೇವರಲ್ಲಿ ನಂಬಿಕೆ ಉಳ್ಳವರಾದರೂ ಗುಡಿಗಳಿಗೆ ಹೋಗುವುದು ಅಪರೂಪಕ್ಕೆ ಒಮ್ಮೊಮ್ಮೆ. ಗುಡಿ, ಚರ್ಚು, ಮಸೀದಿ ಮುಂತಾದ ಶ್ರದ್ಧಾಕೇಂದ್ರಗಳ ಉಸ್ತುವಾರಿ ಮಾಡುವವರಿಗೂ ಧರ್ಮ ಲಾಭದಾಯಕ ಧಂಧೆ ಎಂಬ ಅರ್ಥದಲ್ಲಿ ಒಂದು 'ವ್ಯವಹಾರ'. ವಾಲ್ಟರ್ ಬೆಂಜಮಿನ್ ಕೂಡ ವೇಶ್ಯಾ ವೃತ್ತಿಯನ್ನು ಅಗೌರವದಿಂದ ಕಾಣುವುದಿಲ್ಲ. ಎಡಪಂಥೀಯನಾದ ಆತ, ಜೀವನ ನಿರ್ವಹಣೆಗಾಗಿ ಕೈಗೊಳ್ಳುವ ಯಾವ ಕಾಯಕವನ್ನೂ ತುಚ್ಛವಾಗಿ ಕಾಣಲಾರ. ಆತನ ತಿರಸ್ಕಾರವಿದ್ದದ್ದು, ಆಳುವವರ ಮರ್ಜಿ ಹಿಡಿದು ತಮ್ಮ ಬೇಳೆ ಬೇಯಿಸಿಕೊಳ್ಳುವ ಸಮಕಾಲೀನ ಜರ್ಮನ್ ಬುದ್ಧಿಜೀವಿಗಳ ಬಗ್ಗೆ.

ಧರ್ಮ, ಠಕ್ಕು ಮತ್ತು ಸಾಚಾ ಎರಡೂ ಬಗೆಯ ಯತಿಗಳು, ಮಠಾಧೀಶರು, ಪಾದ್ರಿಗಳು, ಮೌಲವಿಗಳು ಮತ್ತಿತರ ಧಾರ್ಮಿಕ ವ್ಯಕ್ತಿಗಳಿಗೆ ಪೂರ್ಣಾವಧಿ ವ್ಯವಹಾರವಾದರೆ, ಸಾಮಾನ್ಯರ ಮಟ್ಟಿಗೆ ಅದು ಎಂದೂ ಪೂರ್ಣಾವಧಿಯ ಚಟುವಟಿಕೆ ಅಲ್ಲ. ಹಾಗೆಯೇ ಧರ್ಮಗುರುವೊಬ್ಬನಿಗೆ – ಯಾವ ಧರ್ಮದವನೇ ಇರಲಿ – ಲೋಕದ ಕಣ್ಣಿಗೆ ಕಾಣುವಂತೆ ಇರುವುದು ಒಂದೇ ಒಂದು ವ್ಯಕ್ತಿತ್ವ – 'ಧರ್ಮಗುರುವಿನದ್ದು'. ಅದೇ ಅವನ ಅಧಿಕೃತ ವ್ಯಕ್ತಿತ್ವವೂ ಹೌದು. ಆದರೆ ಸಂಸಾರವಂದಿಗರೂ, ಲೌಕಿಕರೂ ಆಗಿರುವ ಜನಸಾಮಾನ್ಯರೆಲ್ಲರೂ ಸಮಯ, ಸಂದರ್ಭಗಳಿಗೆ ಅನುಗುಣವಾಗಿ ಹಲವು ಬಗೆಯ ವ್ಯಕ್ತಿತ್ವಗಳುಳ್ಳವರು. ನಮ್ಮ ನಮ್ಮ ಮನೆಗಳ ಒಳಗೆ ನಾವೆಲ್ಲರೂ ನಮ್ಮ ನಮ್ಮ ಜಾತಿಗೆ ಸೇರಿದವರು. ಮನೆಯ ಹೊರಬಂದರೆ, ನಾವು ಕನ್ನಡಿಗರು, ಜೊತೆಗೆ ಯಾವುದೋ ಊರು, ಜಿಲ್ಲೆ,

**ಧರ್ಮದ ವ್ಯಾವಹಾರಿಕ ಮುಖಗಳನ್ನು ಕಡೆಗಾಣಿಸುವವರು, ಧರ್ಮವೇ ಎಲ್ಲ ಗಂಡಸರು ಮತ್ತು ಹೆಂಗಸರ ೨೪×೭ ಕಾಳಜಿ ಎಂದು ಹಠ ಹಿಡಿಯುತ್ತಾರೆ. ಲಿಂಗ, ಜಾತಿ, ವರ್ಗ, ವರ್ಣ ಇತ್ಯಾದಿ ಯಾವ ತಾರತಮ್ಯವನ್ನೂ ಅವರು ಲೆಕ್ಕಿಸುವುದಿಲ್ಲ; ಜನಸಾಮಾನ್ಯರ ನಿತ್ಯಜೀವನದ ನೂರೆಂಟು ತಾಪತ್ರಯಗಳ ಬಗೆಗೂ ಅವರಿಗೆ ಸಹಾನುಭೂತಿ ಇಲ್ಲ. ಜನಸಾಮಾನ್ಯರ ವ್ಯಕ್ತಿತ್ವದ ಬಹುರೂಪಗಳನ್ನು ಅಲ್ಲಗಳೆಯುವವರು ಹಿಂದು, ಮುಸ್ಲಿಮ್, ಕ್ರೈಸ್ತ – ಈ ಪ್ರಕಾರವಾದ ಧಾರ್ಮಿಕ ಹಣೆಪಟ್ಟಿಗಳೇ, ಅವರ ವ್ಯಕ್ತಿತ್ವದ ಏಕೈಕ ನಿರ್ವಚನ ಎಂದು ಹಠ ಹಿಡಿಯುತ್ತಾರೆ. ಈ ಹಠ ಭಾಷೆ ಮತ್ತು ಪ್ರದೇಶ ಆಧಾರಿತ ಐಡೆಂಟಿಟಿ ರಾಜಕಾರಣವಾಗಿಯೂ ಮಾರ್ಪಡಬಹುದು. ಇದು ಮೂಲತಃ ಸರ್ವಾಧಿಕಾರೀ ಮನೋವೃತ್ತಿಯ ಮತ್ತು ಸರ್ವಾಧಿಕಾರೀ ಪ್ರಭುತ್ವವನ್ನು ಸ್ಥಾಪಿಸಲು ಯತ್ನಿಸುವ ರಾಜಕಾರಣ.**

ಪ್ರದೇಶಗಳಿಗೆ ಸೇರಿದವರು. ನಮ್ಮ ಉದ್ಯೋಗವೂ ನಮ್ಮ ವ್ಯಕ್ತಿತ್ವವೇ. ವಿದೇಶೀಯರ ಎದುರು ನಾವು ಭಾರತೀಯರು; ತಮಿಳರು, ತೆಲುಗರು ಅಥವಾ ಮರಾಠಿಗರು ಎದುರಾದಾಗ ನಾವು ಕನ್ನಡಿಗರು. ಮುಸ್ಲಿಮರ ಮಾತು ಬಂದಾಗ ಮಾತ್ರ ನಾವೆಲ್ಲರೂ ಹಿಂದುಗಳು. ''ಹಿಂದುಗಳಿಗೆ ಮಾತ್ರ ಈ ಸಮಸ್ಯೆ ಇರುವುದು. ಅವರಿಗೆ ತಾವು ಹಿಂದುಗಳು ಎಂದು ಗುರುತಿಸಿಕೊಳ್ಳಲು ಎದುರಿಗೆ ಮುಸ್ಲಿಮರು ಇರಬೇಕು. ಆದರೆ ಮುಸ್ಲಿಮರಿಗೆ ಈ ಸಮಸ್ಯೆ ಇಲ್ಲ'' ಎಂದು ಮನಃಶಾಸ್ತ್ರಜ್ಞ ಸುಧೀರ್ ಕಕ್ಕರ್ ಹೇಳುತ್ತಾರೆ.

ಧರ್ಮದ ವ್ಯಾವಹಾರಿಕ ಮುಖಗಳನ್ನು ಕಡೆಗಾಣಿಸುವವರು, ಧರ್ಮವೇ ಎಲ್ಲ ಗಂಡಸರು ಮತ್ತು ಹೆಂಗಸರ ೨೪×೭ ಕಾಳಜಿ ಎಂದು ಹಠ ಹಿಡಿಯುತ್ತಾರೆ. ಲಿಂಗ, ಜಾತಿ, ವರ್ಗ, ವರ್ಣ ಇತ್ಯಾದಿ ಯಾವ ತಾರತಮ್ಯವನ್ನೂ ಅವರು ಲೆಕ್ಕಿಸುವುದಿಲ್ಲ; ಜನಸಾಮಾನ್ಯರ ನಿತ್ಯಜೀವನದ ನೂರೆಂಟು ತಾಪತ್ರಯಗಳ ಬಗೆಗೂ ಅವರಿಗೆ ಸಹಾನುಭೂತಿ ಇಲ್ಲ. ಜನಸಾಮಾನ್ಯರ ವ್ಯಕ್ತಿತ್ವದ ಬಹುರೂಪಗಳನ್ನು ಅಲ್ಲಗಳೆಯುವವರು ಹಿಂದು, ಮುಸ್ಲಿಮ್, ಕ್ರೈಸ್ತ – ಈ ಪ್ರಕಾರವಾದ ಧಾರ್ಮಿಕ ಹಣೆಪಟ್ಟಿಗಳೇ ಅವರ ವ್ಯಕ್ತಿತ್ವದ ಏಕೈಕ ನಿರ್ವಚನ ಎಂದು ಹಠ ಹಿಡಿಯುತ್ತಾರೆ. ಈ ಹಠ ಭಾಷೆ ಮತ್ತು ಪ್ರದೇಶ ಆಧಾರಿತ ಐಡೆಂಟಿಟಿ ರಾಜಕಾರಣವಾಗಿಯೂ ಮಾರ್ಪಡಬಹುದು. ಇದು ಮೂಲತಃ ಸರ್ವಾಧಿಕಾರೀ ಮನೋವೃತ್ತಿಯ ಮತ್ತು ಸರ್ವಾಧಿಕಾರೀ ಪ್ರಭುತ್ವವನ್ನು ಸ್ಥಾಪಿಸಲು ಯತ್ನಿಸುವ ರಾಜಕಾರಣ. ಇದರ ಅತ್ಯುತ್ತಮ ಅಭಿವ್ಯಕ್ತಿ ಮಹಾರಾಷ್ಟ್ರದ ಶಿವಸೇನೆ. ಅದು ''ಮುಂಬಯಿ ಕೇವಲ ಮುಂಬೈಕರ್‌ಗಳಿಗೆ'' ಎಂದು ಚಳುವಳಿ ಮಾಡುತ್ತದೆ; 'ಮರಾಠಿ ಮಾಣೂಸ್'ನನ್ನು ವಹಿಸಿಕೊಂಡು, ಮುಂಬಯಿಯ ಮರಾಠಿಯೇತರ ಭಾಷಿಕ ಸಮುದಾಯದ ಬಡವರಿಗೆ (ಮತ್ತು ಬಡವರಿಗೆ ಮಾತ್ರ) ಆವಾಜ್ ಹಾಕುತ್ತದೆ. ಶಿವಸೇನೆಯ ದಾದಾಗಳು, ಕಮ್ಯುನಿಸ್ಟ್ ನಾಯಕತ್ವದ ಕಾರ್ಮಿಕ ಸಂಘಟನೆಗಳನ್ನು ವಶಪಡಿಸಿಕೊಂಡು, ಬಂಡವಾಳಶಾಹಿಗಳಿಗೆ ಅನುಕೂಲಮಾಡಿಕೊಡುತ್ತಾರೆ. ಇದೆಲ್ಲದರ ಜೊತೆಗೆ ಬಿಜೆಪಿ ಜೊತೆ ಸೇರಿಕೊಂಡು, ದೇಶದ ಮುಸ್ಲಿಮರಿಗೂ ಒಂದು ಗತಿ ಕಾಣಿಸುವ ಕಾರ್ಯಕ್ರಮವನ್ನೂ ಅವರು ಹಾಕಿಕೊಂಡಿದ್ದಾರೆ. ಹಾಗಾಗಿ ಶಿವಸೇನೆಯಾಗಲೀ, ಬಿಜೆಪಿಯಾಗಲಿ ಕೇವಲ ರಾಜಕೀಯ ಪಕ್ಷಗಳಲ್ಲ. ಅವು ಫ್ಯಾಸಿಸ್ಟ್ ಮನಃಸ್ಥಿತಿಗಳೂ ಹೌದು.

ಕನ್ನಡದಲ್ಲಿ ಅತ್ಯಧಿಕ ಪ್ರಸಾರವುಳ್ಳ ದಿನಪತ್ರಿಕೆ ಎಂಬ ಹೆಗ್ಗಳಿಕೆಯ ವಿಜಯ ಕರ್ನಾಟಕದಲ್ಲಿ ಇತ್ತೀಚೆಗೆ ಪ್ರಕಟವಾದ ಮತಾಂತರ ಕುರಿತ ಎಸ್. ಎಲ್.ಭೈರಪ್ಪನವರ ಲೇಖನ ಕೂಡ ಓದುಗರಾದ ನಮಗೆಲ್ಲ ಧರ್ಮಾಧಾರಿತವೂ, ಏಕೈಕವೂ ಆದ ವ್ಯಕ್ತಿತ್ವವನ್ನು ಆರೋಪಿಸುವ ಮತ್ತು ಹಿಂದುಯೇತರ ಮತ ಧರ್ಮಗಳನ್ನು ಯದ್ವಾತದ್ವಾ ಹೀಗಳೆಯುವ ಫ್ಯಾಸಿಸ್ಟ್ ಕಾರ್ಯಕ್ರಮವನ್ನು ಹೊಂದಿದೆ. ಅವರ 'ಆವರಣ' ಕಾದಂಬರಿಯಲ್ಲಿ ಈಗಾಗಲೇ ವ್ಯಕ್ತವಾಗಿರುವ ಅಭಿಪ್ರಾಯ ಮತ್ತು ಪೂರ್ವಗ್ರಹಗಳೆಲ್ಲ ಈ ಲೇಖಕನದಲ್ಲೂ ಕಾಣಿಸಿಕೊಂಡಿವೆ; ಆದರೆ ಒಂದು ವ್ಯತ್ಯಾಸವಿದೆ. 'ಆವರಣ'ದಲ್ಲಿ ಮುಸ್ಲಿಮ್ ಸಮುದಾಯವನ್ನು ಲೇಖಕರು ಕಟಕಟೆಯಲ್ಲಿ ನಿಲ್ಲಿಸಿದ್ದರೆ, ಪ್ರಸ್ತುತ ಲೇಖನದಲ್ಲಿ ಆರೋಪಿಯಾಗಿ ಆ ಸ್ಥಳದಲ್ಲಿ ನಿಂತವರು ಕ್ರೈಸ್ತರು. ಭೈರಪ್ಪನವರ ಲೇಖನಕ್ಕೆ ನೆವವಾದದ್ದು ಕರ್ನಾಟಕದಲ್ಲಿ ಇತ್ತೀಚೆಗೆ ಚರ್ಚುಗಳ ಮೇಲೆ ನಡೆದ ದಾಳಿ. ಒರಿಸ್ಸದಲ್ಲಿ ಈ ದಾಳಿ ಇನ್ನಷ್ಟು ಭೀಕರವಾಗಿ ನಡೆದಿದ್ದು ೫೦ ಜನ ಸಾವಿಗೀಡಾಗಿದ್ದರೆ, ಸುಮಾರು ೨೫೦೦೦ ಜನ ತಮ್ಮ ಮನೆಮಾರು ತೊರೆದು ನಿರಾಶ್ರಿತರ ಕ್ಯಾಂಪುಗಳಲ್ಲಿ ವಾಸಿಸಬೇಕಾಯಿತು. ಕರ್ನಾಟಕ ಮತ್ತು ಒರಿಸ್ಸಾಗಳಲ್ಲಿ ನಡೆದ ಈ ದಾಳಿಗೆ, ಕ್ರೈಸ್ತ ಮಿಷನರಿಗಳು ಮಾಡುತ್ತಿರುವ ಬಲಾತ್ಕಾರದ ಮತಾಂತರವೇ ಕಾರಣವೆಂದು ವಿಹಿಂಪ ಮತ್ತು ಭಜರಂಗದಳಗಳು ಆರೋಪಿಸಿವೆ. ಕರ್ನಾಟಕದ ಭಜರಂಗದಳದ ಮಾಜಿ ಸಂಚಾಲಕರಂತೂ ಈ ದಾಳಿಗಳನ್ನು ತಾವೇ ನಡೆಸಿದ್ದು ಎಂದು ಪತ್ರಕರ್ತರ ಸಮ್ಮುಖದಲ್ಲೇ ಹೇಳಿಕೊಂಡಿದ್ದಾರೆ. ಅದಕ್ಕೆ ಅವರು ನೀಡಿರುವ ಕಾರಣವಾದರೂ ಏನು? ಕ್ರೈಸ್ತ ಮಿಷನರಿಗಳು ಹಿಂದು ದೇವತೆಗಳನ್ನು ಅವಹೇಳನ ಮಾಡುವ 'ಸತ್ಯದರ್ಶಿನಿ' ಎಂಬ ಕಿರು ಪುಸ್ತಿಕೆಯನ್ನು ಮುದ್ರಿಸಿ ಜನರಿಗೆ ಹಂಚುತ್ತಿದ್ದಾರೆ ಎಂದು ಅವರು ಆರೋಪಿಸಿದರು. ಕ್ರೈಸ್ತ ವಿರೋಧಿ ಪ್ರಚಾರದಲ್ಲಿ ಭೈರಪ್ಪನವರ ಜೊತೆ ದನಿಗೂಡಿಸಿದ ಅನೇಕರು ಈ ಆರೋಪವನ್ನು ಗಟ್ಟಿಯಾಗಿ ಹಿಡಿದುಕೊಂಡರು. ಪುಸ್ತಕ, ಪತ್ರಿಕೆಗಳ ಯಾವ ಅಂಗಡಿಯಲ್ಲೂ ಕಾಣಸಿಗದ ಈ ಪುಸ್ತಕ ಭಜರಂಗಿಗಳಿಗೆ ಹೇಗೆ ದೊರೆಯಿತು? ಅದು ಹೇಗೂ ಇರಲಿ, ಪತ್ರಿಕೆಗಳಲ್ಲಿ ಪ್ರಕಟವಾದ ಅದರ ಕೆಲವು ಸಾಲುಗಳನ್ನು ನೋಡಿದರೆ, ಅದನ್ನು ಬರೆದ ಮೂಲ ತೆಲುಗು ಲೇಖಕ ಒಬ್ಬ ಮೂರ್ಖ ಎಂದು ಯಾರಿಗಾದರೂ ಹೊಳೆದೀತು. ಅದನ್ನು ಕನ್ನಡಕ್ಕೆ ಅನುವಾದಿಸಿದವನಿಗೆ ಕನ್ನಡ ವಾಕ್ಯರಚನೆಯೂ ಬರುವುದಿಲ್ಲ. ಭಜರಂಗದಳದ ನೀಚರು ಈ ಪುಸ್ತಿಕೆಯನ್ನೇ ಹಿಂದುಧರ್ಮದ ವಿರುದ್ಧ ಕ್ರೈಸ್ತರು ನಡೆಸಿದ ಒಳಸಂಚು ಎಂದು ಪರಿಗಣಿಸಿ ಚರ್ಚುಗಳ ಮೇಲೆ ದಾಳಿ ನಡೆಸಿದರೆ, ಭೈರಪ್ಪ ತಮ್ಮ ಲೇಖನದಲ್ಲಿ ಅದನ್ನು ಸಮರ್ಥಿಸುತ್ತಾರೆ! ಅಷ್ಟು ಮಾತ್ರವಲ್ಲ, ಕ್ರೈಸ್ತ ಸಮುದಾಯವನ್ನೂ ಆ ಧರ್ಮವನ್ನೂ ಮನಸ್ವೀ ನಿಂದಿಸುತ್ತಾರೆ! 'ಸತ್ಯದರ್ಶಿನಿ' ಕರ್ನಾಟಕದಲ್ಲಿ ಯಾರೂ ಮೂಸಿಯೂ ನೋಡದ ಪುಸ್ತಿಕೆ! ಭೈರಪ್ಪನವರ ವಿಷಪೂರಿತ ಲೇಖನ ಪ್ರಕಟವಾದ ವಿಜಯ ಕರ್ನಾಟಕ ಕನ್ನಡದ ಅತ್ಯಧಿಕ ಪ್ರಸಾರದ ಪತ್ರಿಕೆ! ಆದಾಗ್ಯೂ ಕರ್ನಾಟಕದ ಕ್ರೈಸ್ತರು ಭೈರಪ್ಪ ಮತ್ತು ವಿಜಯ ಕರ್ನಾಟಕ ಪತ್ರಿಕೆ, ತಮ್ಮ ವಿರುದ್ಧ ನಡೆಸಿದ ಈ ಅಸಹ್ಯ ಅಶ್ಲೀಲ ಅಭಿಯಾನವನ್ನು ಅಸಾಧಾರಣ ತಾಳ್ಮೆ ಮತ್ತು ಘನತೆಗಳಿಂದ ಸಹಿಸಿಕೊಂಡರು. ಮುಸ್ಲಿಮರು 'ಆವರಣ'ಕ್ಕೆ ತೋರಿಸಿದ ನಿರ್ಲಕ್ಷ್ಯದ ಪ್ರತಿಕ್ರಿಯೆಯನ್ನೇ ಕ್ರೈಸ್ತರು ಈ ಲೇಖನಕ್ಕೂ ತೋರಿಸಿ ಭೈರಪ್ಪನವರನ್ನು ನಿರಾಶೆಗೊಳಿಸಿದರು.

ಮತಾಂತರವನ್ನು ಭೈರಪ್ಪ ಯಾಕೆ ವಿರೋಧಿಸುತ್ತಾರೆ? ತಮ್ಮ ಲೇಖನದಲ್ಲಿ ಅವರೇ ಹೇಳುವ ಪ್ರಕಾರ ಮತಾಂತರ ಕೋಮುಸಾಮರಸ್ಯಕ್ಕೆ ಧಕ್ಕೆ ತರುತ್ತದೆ. ಆದರೆ ಭಾರತದಲ್ಲಿ ವಿಭಿನ್ನ ಕೋಮುಗಳ ಸಹಬಾಳ್ವೆಯನ್ನೇ ಭೈರಪ್ಪ ಸಹಿಸುವುದಿಲ್ಲ. ''ಅನ್ಯ ಮತ'' ಎಂದರೆ ಹಿಂದೂವೇತರ ಮತಗಳ ಬಗ್ಗೆ ಭೈರಪ್ಪನವರಿಗೆ ಎಷ್ಟು ಉಗ್ರವಾದ ಅಸಹನೆ ಇದೆ ಎಂಬುದು ಅವರ 'ಆವರಣ' ಕಾದಂಬರಿಯಲ್ಲೇ ಜಗಜ್ಜಾಹೀರಾಗಿದೆ. ಭೈರಪ್ಪನವರ ಧರ್ಮಾಧಾರಿತ ರಾಷ್ಟ್ರದ ಆರ್.ಎಸ್.ಎಸ್. ಪ್ರಣೀತ ಪರಿಕಲ್ಪನೆಗೆ ಅನುಗುಣವಾಗಿ ಭಾರತವೆಂದರೆ ಹಿಂದುಸ್ತಾನವೇ ಸರಿ. ಆದರೆ ಸಮಸ್ಯೆ ಎಂದರೆ ಈ ಜಗತ್ತಿನಲ್ಲಿ ಇರುವುದು ಕೇವಲ ಐದು ಪ್ರಧಾನ ಧರ್ಮಗಳು – ಹಿಂದು, ಇಸ್ಲಾಂ, ಕ್ರೈಸ್ತ, ಬೌದ್ಧ ಮತ್ತು ಯಹೂದಿ; ರಾಷ್ಟ್ರಗಳ ಸಂಖ್ಯೆಯಾದರೋ ಸುಮಾರು ಅದರ ಐದುಪಟ್ಟು. ಒಂದೇ ಧರ್ಮಕ್ಕೆ ಸೇರಿದ ಜನಸಮುದಾಯ ಹಲವು ರಾಷ್ಟ್ರಗಳಾಗಿ ಹಂಚಿಹೋಗಿರುವುದು, ಮತ್ತು ಒಂದೇ ರಾಷ್ಟ್ರದಲ್ಲಿ ಹಲವು ಮತಧರ್ಮಗಳ ಜನ ಸಹಬಾಳ್ವೆ ನಡೆಸುವುದು - ಆಧುನಿಕ ರಾಷ್ಟ್ರಗಳ ಈ ಪ್ರಶ್ನಾತೀತ ವಾಸ್ತವವನ್ನು ಭೈರಪ್ಪ ಗಣನೆಗೇ ತೆಗೆದುಕೊಳ್ಳುವುದಿಲ್ಲ. ಅವರ ರಾಷ್ಟ್ರದ ಪರಿಕಲ್ಪನೆಗೆ ಅನುಗುಣವಾಗಿ ಭಾರತ ಹಿಂದೂಸ್ತಾನವೇ ಆಗಿಬಿಟ್ಟರೆ, ಇಲ್ಲಿನ ಹಿಂದೂವೇತರ ಪ್ರಜೆಗಳು 'ಸಮಸ್ಯೆ' ಆಗುತ್ತಾರೆ. ನೂರಾರು ವರ್ಷಗಳಿಂದ ಸಹಬಾಳ್ವೆ ನಡೆಸುತ್ತಿದ್ದ ವಿಭಿನ್ನ ಸಮುದಾಯಗಳು ಇದ್ದಕ್ಕಿದ್ದಂತೆ ತಮ್ಮನ್ನು ತಾವು ಬಹುಸಂಖ್ಯಾತ ಮತ್ತು ಅಲ್ಪಸಂಖ್ಯಾತ ಸಮುದಾಯಗಳು


ಸಮಸ್ತ ಪುಸ್ತಕಪ್ರೇಮಿಗಳಿಗೆ ಹೊಸ ವರ್ಷದ ಶುಭಾಶಯಗಳು

**ವಿಶ್ವಕವಿ, ವರಕವಿ, ಜ್ಞಾನಪೀಠ ಪ್ರಶಸ್ತಿ ವಿಜೇತ ಡಾ॥ ದ. ರಾ. ಬೇಂದ್ರೆಯವರ ಕೃತಿಗಳು**

| | | | |
|---|---|---|---|
| 1. ನಾಕುತಂತಿ | 60.00 | 10. ನೂರು ಮರ ನೂರು ಸ್ವರ ಒಂದೊಂದು ಅತಿ ಮಧುರ (ಜನಪ್ರಿಯ ಗೀತೆಗಳ ಸಂಕಲನ) | 140.00 |
| 2. ಗರಿ | 75.00 | | |
| 3. ನಾದಲೀಲೆ | 45.00 | 11. ಕುಣಿಯೋಣ ಬಾ | 15.00 |
| 4. ಸಖೀಗೀತ | 60.00 | 12. ಉತ್ತರಾಯಣ | 60.00 |
| 5. ಶ್ರೀಮಾತಾ | 50.00 | 13. ಚತುರೋಕ್ತಿ ಮತ್ತು ಇತರ ಕವನಗಳು | 40.00 |
| 6. ಮುಗಿಲ ಮಲ್ಲಿಗೆ | 60.00 | | |
| 7. ಶತಮಾನ | 130.00 | 14. ಸಂಚಯ | 60.00 |
| 8. ಕಾವ್ಯ ವೈಖರಿ | 45.00 | 15. ಯಕ್ಷ ಯಕ್ಷಿ | 60.00 |
| 9. ಮರ್ಯಾದೆ | 60.00 | 16. ಮೌನಯೋಗ | 100.00 |

**ಡಿಸೆಂಬರ್ 2008ರಲ್ಲಿ ಬಿಡುಗಡೆ ಆಗಿರುವ ನಮ್ಮ ಪ್ರಕಾಶನದ ಹೊಸ ಪುಸ್ತಕಗಳು**

| | | |
|---|---|---|
| ಔದುಂಬರಗಾಥೆ (ಸಮಗ್ರ ಕಾವ್ಯಗಳು. 8 ಬೃಹತ್ ಸಂಪುಟಗಳಲ್ಲಿ) **ರೂ. 2600.00** | ಚಂದ್ರಕಾಂತಾ ಮತ್ತು ಚಂದ್ರಕಾಂತಾ ಸಂತತಿ (ಬಾಬು ದೇವಕೀನಂದನ ಖತ್ರೀ. ಕನ್ನಡ ಅನುವಾದ - 6 ಭಾಗಗಳಲ್ಲಿ) ಒಂದು ಸೆಟ್‌ಗೆ **ರೂ. 1080.00** | ಔದುಂಬರಗಾಥೆ (ಸಮಗ್ರ ನಾಟಕಗಳು. 2 ಬೃಹತ್ ಸಂಪುಟಗಳಲ್ಲಿ) **ರೂ. 1350.00** |

ರವೀಂದ್ರ ಪುಸ್ತಕಾಲಯ ಪ್ರಕಾಶಕರು, ಸಗಟು ಪುಸ್ತಕ ವ್ಯಾಪಾರಿಗಳು
ಚಾಮರಾಜಪೇಟೆ, ಸಾಗರ - 577401 (ಶಿವಮೊಗ್ಗ ಜಿಲ್ಲೆ) ✆ 08183-228616




-೧-

ಮಾತುಗಳನ್ನೆಲ್ಲ ಗುಡಿಸಿ ಹಾಕಿ
ಮೌನಕ್ಕೆ ಶರಣಾದಾಗ
ಎದುರಾದವನು ಅಲ್ಲಮ.
ಗೊತ್ತು ಅವನಿಗೆ ವಾಲ್ಮೀಕಿಯ ಶೋಕವೂ
ವ್ಯಾಸನ ಬಿಕ್ಕಟ್ಟುಗಳೂ.
ಅವನೆದುರಿಗಿದ್ದಾರೆ ಈಗ :
ಯುಗದ ಉತ್ಸಾಹವಾದವನು
ಬತ್ತಲನ್ನೆ ಕೆಣಕಿದವಳು
ಕೈಯದು ಕುರುಹು ಬಾಯದು ಬೊಬ್ಬೆ
ಎಂದಬ್ಬರಿಸಿದ ಹಳ್ಳಿಯ ಹುಡುಗಿ.
ಅವನಿಗೆ ಬೆರಗಾದದ್ದು
ಒಂದೇ ವಿಷಯಕ್ಕೆ :
ಈ ಐದಿಂದ್ರಿಯಗಳು
ಮತ್ತವುಗಳ ಮೇಲೆ ಸವಾರಿ ಮಾಡುವ
ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳು
ಇಡುವ ಮೊಟ್ಟೆಗಳು !

-೨-

ಭೂಮಿ ಆಕಾಶಗಳ
ಬಾಂಧವ್ಯಗಳ ತಿರುಗಣಿಯಲ್ಲಿ
ಕಾರಣವಾದವನ್ನಾಗಲಿ
ಪರಿಣಾಮವಾದವನ್ನಾಗಲಿ
ನಂಬದ ಅವನಿಗೆ ಗಂಟುಬೀಳಲಿಲ್ಲ
ಬುದ್ಧ ನಾಗಾರ್ಜುನ ಶಂಕರರು.
ಅವನಿದುರಿಗೆ ನಿಂತಿವೆ
ದೇಹ - ಆತ್ಮ
ಪಾಪ-ಪುಣ್ಯ
ಇಂಥ ದ್ವಂದ್ವಗಳೆ
ನಿರ್ವಾಣಕ್ಕೂ
ಒಂದು ಸವಾಲಾಗಿ.

**ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯ**
ನಂ.೨೦೫, ೭ನೇ 'ಎ' ಮುಖ್ಯ ರಸ್ತೆ, ಆರ್.ಪಿ.ಸಿ. ಲೇಔಟ್, ವಿಜಯನಗರ ೨ನೇ ಹಂತ, ಬೆಂಗಳೂರು - ೫೬೦ ೦೪೦

ಎಂದು ಗುರುತಿಸಿಕೊಳ್ಳುವುದು, ಪ್ರತ್ಯೇಕಗೊಳ್ಳುವುದು, ಪರಸ್ಪರ ದ್ವೇಷಿಸುವುದು ಮತ್ತು 'ಸಮಸ್ಯೆ' ಆಗುವುದು – ಸಮುದಾಯಗಳು ರಾಷ್ಟ್ರಪ್ರಭುತ್ವಗಳಾಗಿ ರೂಪುಗೊಳ್ಳುವ ಪ್ರಕ್ರಿಯೆಯ ಈ ಹಳವಂಡ, ಭಾರತವನ್ನೂ ಒಳಗೊಂಡು ಪಶ್ಚಿಮ ಏಷ್ಯದ ರಾಷ್ಟ್ರಗಳಿಗೆ ವಸಾಹತುಶಾಹಿ ಕೊಟ್ಟ ಉಡುಗೊರೆ! ಭೈರಪ್ಪ ಈ ಐರೋಪ್ಯ, ವಸಾಹತುಶಾಹಿ ಪರಿಕಲ್ಪನೆಯನ್ನೇ ಇಡಿಯಾಗಿ ತನ್ನದಾಗಿಸಿಕೊಂಡು, ಇಲ್ಲಿನ ಹಿಂದುವೇತರ ಪ್ರಜೆಗಳನ್ನು ಸಮಸ್ಯೆ ಎಂಬಂತೆ ಚಿತ್ರಿಸುತ್ತಿದ್ದಾರೆ; 'ಆವರಣ' ಕಾದಂಬರಿಯಲ್ಲೂ ಪ್ರಸ್ತುತ ಲೇಖನದಲ್ಲೂ ಭೈರಪ್ಪ ಮುಸ್ಲಿಮ್ ಮತ್ತು ಕ್ರೈಸ್ತ ಸಮುದಾಯಗಳನ್ನು ಚಿತ್ರಿಸಿರುವುದು ಭಾರತದ ಸಮಸ್ಯೆಗಳು ಎಂಬಂತೆಯೇ. ಈ ಸಮಸ್ಯೆಗೆ ಇರುವುದು ಎರಡೇ ಪರಿಹಾರಗಳು; ಒಂದೋ ಇಲ್ಲಿನ ಹಿಂದೂವೇತರ ಪ್ರಜೆಗಳು, ಎರಡನೆಯ ದರ್ಜೆಯ ನಾಗರಿಕರಾಗುವುದು ಅಥವಾ ಜರ್ಮನಿಯಲ್ಲಿ ಯಹೂದಿಗಳ 'ಸಮಸ್ಯೆಗೆ' ನಾಝಿಗಳು ಅನುಸರಿಸಿದ, 'ಅಂತಿಮ ಪರಿಹಾರ'. ಇವುಗಳಲ್ಲಿ ಮೊದಲನೆಯ ಪರಿಹಾರವನ್ನು ಭೈರಪ್ಪ ಉತ್ಸಾಹದಿಂದ ಅನುಮೋದಿಸುತ್ತಾರೆ; ಎರಡನೆಯದ್ದರ ಬಗ್ಗೆ ಅವರಿಗೆ ಏನೂ ಆಕ್ಷೇಪವಿಲ್ಲ. ಭೈರಪ್ಪನವರ ಕಲ್ಪನೆಯ ಹಿಂದೂ ರಾಷ್ಟ್ರದಲ್ಲಿ ಹಿಂದೂವೇತರರೇ ಇರುವುದಿಲ್ಲ; ಇದ್ದರೂ ಗುಲಾಮರ ಹಾಗೆ ಇರುತ್ತಾರೆ. ಅಂದಮೇಲೆ ಕೋಮು ಸಂಘರ್ಷಗಳೂ ಇರುವುದಿಲ್ಲ. ಆದರೆ ಅವರ ಆದರ್ಶ ಹಿಂದೂ ರಾಷ್ಟ್ರದಲ್ಲೂ ಜಾತಿಜಾತಿಗಳ ನಡುವೆ ಹಾಗೂ ಅಸ್ಪೃಶ್ಯರು ಮತ್ತು ಸವರ್ಣೀಯರ ನಡುವೆ ಸಂಘರ್ಷಗಳು ಇರುತ್ತವೆ; ಅಸಮಾನತೆ ಇರುವಷ್ಟು ಕಾಲ ವರ್ಗಸಂಘರ್ಷವೂ ಇರುತ್ತದೆ. ವಿಭಿನ್ನ ಭಾಷೆ ಮತ್ತು ಪ್ರದೇಶಗಳ ನಡುವಿನ ಸಂಘರ್ಷಗಳು ಮುಂದುವರಿಯುತ್ತವೆ. ಈ ಸಂಘರ್ಷ ಹೋರಾಟಗಳಿಗೆ ಭೈರಪ್ಪನವರು ಸೂಚಿಸುವ ಪರಿಹಾರವೇನು ? ಅವುಗಳ ಕುರಿತು ಅವರು ತೋರಿಸುವ ಅತೀವ ಅಸಹನೆಯಲ್ಲೇ, ಅವರು ಸೂಚಿಸುವ ಪರಿಹಾರವೂ ಇದೆ. ಕಮ್ಯುನಿಸ್ಟರು, ಎಡಪಂಥೀಯರು, ಪ್ರಗತಿಪರರು ಮತ್ತು ಸಮಾನತೆಗಾಗಿ ಹೋರಾಡುವ ಎಲ್ಲ ಬಗೆಯ ಸಂಘಟನೆಗಳ ಬಗೆಗೂ ಫ್ಯಾಸಿಸ್ಟರಿಗೆ ಇರುವ ದ್ವೇಷ ದುರಾಗ್ರಹಗಳು ಭೈರಪ್ಪನವರಲ್ಲೂ ಇದ್ದು ಈ ಹೋರಾಟಗಳನ್ನು ಮೆಟ್ಟಿ ತುಳಿಯುವುದೇ ಅವರು ಸೂಚಿಸುವ ಪರಿಹಾರ.

ಧರ್ಮ ಆಧುನಿಕ ಜಗತ್ತಿನಲ್ಲಿ 'ವ್ಯವಹಾರ' ಆಗಿರುವ ವಾಸ್ತವವನ್ನು ಫ್ಯಾಸಿಸ್ಟ್‌ರೂ ಮರೆಮಾಚುತ್ತಾರೆ. ಧರ್ಮವನ್ನು ಜೀವಂತ ಜನಸಮುದಾಯಗಳ ನಿತ್ಯದ ಬದುಕಿನಿಂದ ಬೇರ್ಪಡಿಸಿ, ಅದೊಂದು ಪ್ರಶ್ನಾತೀತ ಆದರ್ಶ; ಅದಕ್ಕೆ ಶರಣಾಗತನಾಗದೆ ಪ್ರಜೆಗಳಿಗೆ ಬೇರೆ ಆಯ್ಕೆಗಳೇ ಇಲ್ಲ ಎಂಬ ಹಠ ಧಾರ್ಮಿಕ ಮೂಲಭೂತವಾದದ್ದು ಮಾತ್ರವಲ್ಲ, ಅದು ಫ್ಯಾಸಿಸ್ಟ್ ಸಿದ್ಧಾಂತದ ಒಂದು ಅಂಶವೂ ಹೌದು. ಈ ಹಿನ್ನೆಲೆಯಲ್ಲೇ ಇಟಲಿಯಲ್ಲಿ ರೋಮನ್ ಕ್ಯಾಥೊಲಿಕ್ ಚರ್ಚ್ ಫ್ಯಾಸಿಸ್ಟರನ್ನು ಬೆಂಬಲಿಸಿದರೆ, ಜರ್ಮನಿಯಲ್ಲಿ ಪ್ರಾಟೆಸ್ಟಂಟ್ ಲೂಥೆರನ್ ಚರ್ಚ್ ನಾಝಿಗಳ ಪರವಾಗಿತ್ತು. ಭಾರತದಲ್ಲೂ ಬಿಜೆಪಿಗೆ ಮಠ ಮಂದಿರಗಳು ಕೊಡುತ್ತಿರುವ ಸಹಕಾರವೂ ಇದೇ ಬಗೆಯದ್ದು. ಈ ಮಠ ಮಂದಿರಗಳು ತಮ್ಮ 'ವ್ಯಾವಹಾರಿಕ' ಸತ್ಯಗಳನ್ನು ಮರೆಮಾಚಿ ಕೇವಲ ಪಾವಿತ್ರ್ಯದ ತಾಣಗಳೆಂದೂ ಅಧ್ಯಾತ್ಮದ ಸಾಕಾರರೂಪವೆಂದೂ ತಮ್ಮನ್ನು ಜನ ಪರಿಗಣಿಸಬೇಕು ಎಂದು ಬಯಸುತ್ತವೆ. ಅದು ಧರ್ಮದ ಕುರಿತ ಫ್ಯಾಸಿಸ್ಟರ ಆದರ್ಶವಾದೀ ಗ್ರಹಿಕೆಯೂ ಹೌದು. ಉದಾಹರಣೆಗೆ, ಮತಾಂತರ ಕುರಿತ ತಮ್ಮ ಲೇಖನದಲ್ಲಿ ಭೈರಪ್ಪ ಹಿಂದುಧರ್ಮದ ಎಲ್ಲ ಕಳಂಕಗಳನ್ನೂ ಕಡೆಗಣಿಸಿ, ಅದನ್ನು ಕೇವಲ ಅಧ್ಯಾತ್ಮಜ್ಞಾನ ಎಂಬಂತೆ ಚಿತ್ರಿಸುತ್ತಾರೆ. ಅವರ ಪ್ರಕಾರ ಅದು "ಕಾಡಿನ ಪರ್ಣಶಾಲೆಯಲ್ಲಿ, ಬೆಟ್ಟದ ಗುಹೆಗಳಲ್ಲಿ, ಹಿಮಾಲಯದ ಹೆಪ್ಪು ಗಟ್ಟಿಸುವ ಎತ್ತರದಲ್ಲಿ ಕುಳಿತು ಅಂತರ್ಮುಖಿಯಾಗುವ ಸಾಧನೆ". ಯಾವ ಕಾಲದಲ್ಲಿ ಹಿಂದುಧರ್ಮ ಇಂತಹ ಪರಿಶುದ್ಧವಾದ ಪುತ್ಥಳಿ ಚಿನ್ನದಂತಹ ಸ್ಥಿತಿಯಲ್ಲಿತ್ತು? ಭೈರಪ್ಪ ವೇದೋಪನಿಷತ್ತುಗಳ ಕಾಲದ ಬಗ್ಗೆ ಹೇಳುತ್ತಿದ್ದಾರೆ ಎಂದೇ ಇಟ್ಟುಕೊಂಡರೂ, ಆಗಲಾದರೂ ಇಂತಹ ಸಾಧನೆಯಲ್ಲಿ ನಿರತರಾದವರು ಎಷ್ಟು ಮಂದಿ? ಕೃಷಿ, ಕಸುಬು, ವ್ಯಾಪಾರ ಮುಂತಾದ್ದರಲ್ಲಿ ತೊಡಗಿಕೊಂಡ ಲೌಕಿಕರೇ ಇರಲಿಲ್ಲವೆ? ಬೌದ್ಧ ಜೈನ ಧರ್ಮಗಳು ಪ್ರಾಚೀನ ಸಮಾಜದ ಗರ್ಭದಿಂದ ಮೇಲೊತ್ತಿಕೊಂಡು ಬಂದು ಮೈತಳೆದು ನಿಂತ ಚಳುವಳಿ ರೂಪದ ಧರ್ಮಗಳೊ ಅಥವಾ ಅವು ಕೂಡ ಭೈರಪ್ಪ ಹೇಳುವ "ಅಂತರ್ಮುಖಿಯಾಗುವ ಸಾಧನೆಗಳೋ?" ಅವರು ತನ್ನ ಲೇಖನದಲ್ಲಿ ಜೈನಮತವನ್ನು ವಿಶೇಷವಾಗಿ ಪ್ರಸ್ತಾಪಿಸಿಲ್ಲ. ಆದರೆ ಬೌದ್ಧಮತ ಹಿಂದುಧರ್ಮದ್ದೇ ಕಾಣ್ಕೆ ಎಂಬ ಹಸಿ ಸುಳ್ಳನ್ನು ಹೇಳಿದ್ದಾರೆ. ಭಾರತದ ಭಾಷಿಕ ಸಂಸ್ಕೃತಿಗಳಲ್ಲಿ ಬೌದ್ಧಮತದ ನೆನಪುಗಳು ಕೂಡ ನಾಶವಾಗಿರುವುದು, ಅದು ವೈದಿಕ ಧರ್ಮದ ವಿರುದ್ಧ ಸೋತ ಬಂಡಾಯ ಎಂಬುದನ್ನು ಸೂಚಿಸುವುದಿಲ್ಲವೆ?

ಭಾರತದಲ್ಲಿ ಮೂಲಬೌದ್ಧರ ಜನಸಮುದಾಯವೂ ಸಂಪೂರ್ಣವಾಗಿ ನಾಶವಾಗಿದೆ. ಭಾರತದ ನೆರೆ ರಾಷ್ಟ್ರಗಳ, ಉದಾಹರಣೆಗೆ, ಸಿಲೋನ್, ಬರ್ಮ, ನೇಪಾಳ, ಥ್ಯಾಲೆಂಡ್, ಕ್ಯಾಂಬೋಡಿಯಾ, ಮುಂತಾದ ರಾಷ್ಟ್ರಗಳ ಬೌದ್ಧರು ತಮ್ಮನ್ನು ಭಾರತೀಯ ಎಂದಾಗಲೀ, ಹಿಂದುಗಳೆಂದಾಗಲೀ ಪರಿಗಣಿಸುವುದಿಲ್ಲ. ಭೈರಪ್ಪನವರಿಗೆ ತಮ್ಮ 'ರಾಷ್ಟ್ರ' ಮತ್ತು 'ಧರ್ಮ'ಗಳ ಪರಿಕಲ್ಪನೆಯ ಈ ವಿಪರ್ಯಾಸಗಳೆಲ್ಲ ಕಾಣುವುದೇ ಇಲ್ಲ. ಧರ್ಮವನ್ನು ಕೇವಲ ಅಮೂರ್ತ, ಆದರ್ಶ ಎಂದು ಅವರು ತಿಳಿಯುವುದರಿಂದ ಜೀವಂತ ಜನಸಮುದಾಯಗಳಿಗೂ ಧರ್ಮಕ್ಕೂ ಇರುವ ಸಂಕೀರ್ಣ ಸಂಬಂಧವೂ ಅವರ ಗ್ರಹಿಕೆಗೆ ಮೀರಿದ್ದು. ಆದ್ದರಿಂದಲೇ ಅವರು ಹಿಂದುಧರ್ಮದ (ಯಥಾರ್ಥವಾಗಿ ವೈದಿಕಮತದ) ಅಮೂರ್ತ ತತ್ವಗಳನ್ನು, ಸಮಕಾಲೀನ ಕ್ರೈಸ್ತ ಸಮುದಾಯಕ್ಕೆ ಎದುರಾಗಿ ನಿಲ್ಲಿಸಿ ಹಿಂದು ಧರ್ಮವೇ ಮೇಲು ಎಂದು ವಾದಿಸುತ್ತಾರೆ. ಅವರ ವಾದಮಂಡನೆಯಲ್ಲಿ ಹಿಂದು ಜನಸಮುದಾಯವೂ ನಾಪತ್ತೆ; ಅದರ ಕರಾಳ ಅಸಮಾನತೆಗಳ ಚರಿತ್ರೆಯೂ ನಾಪತ್ತೆ! ಭೈರಪ್ಪನವರ ಪ್ರಕಾರ ಅವೆಲ್ಲ ಸಮಾಜಶಾಸ್ತ್ರಕ್ಕೆ ಸಂಬಂಧಿಸಿದವಾಗಿದ್ದು ಹಿಂದು ಧರ್ಮದ ಸಮಸ್ಯೆಗಳೇ ಅಲ್ಲ. ಆದರೆ ಅವರು ತಮ್ಮ ಲೇಖನದಲ್ಲಿ ಈ ವಿನಾಯಿತಿಯನ್ನು ಕ್ರೈಸ್ತ ಧರ್ಮಕ್ಕೆ ಕೊಟ್ಟಿಲ್ಲ. ಹಿಂದು ಧರ್ಮ ಮತ್ತು ಪರಂಪರೆಗಳ ಬಗ್ಗೆ ಬರೆಯುವಾಗ ಭೈರಪ್ಪ ವೇದೋಪನಿಷತ್ತುಗಳು, ರಾಮಾಯಣ ಮಹಾಭಾರತದಂತಹ ಕೃತಿಗಳು ಹಾಗೂ ರಾಮಕೃಷ್ಣ ಪರಮಹಂಸ, ವಿವೇಕಾನಂದ, ಅರವಿಂದ ಮುಂತಾದ ಸಾಧಕರುಗಳನ್ನು ನೆನಪಿಸಿಕೊಳ್ಳುತ್ತಾರೆ; ಆದರೆ ಕ್ರೈಸ್ತರು ಮತ್ತು ಮುಸ್ಲಿಮರ ಬಗ್ಗೆ ಬರೆಯುವಾಗ ಮಾತ್ರ ಥೇಟು ಸಮಾಜಶಾಸ್ತ್ರಜ್ಞರಂತೆ ಈ ಸಮುದಾಯಗಳ ಒಳಗೆ ಇರುವ ವರ್ಗಭೇದಗಳು, ಅನ್ಯಮತಗಳ ಬಗ್ಗೆ ಅವುಗಳಿಗೆ ಇರುವ ಅಸಹನೆ, ಆಚಾರವಿಚಾರಗಳ ವಿರೋಧಾಭಾಸ ಮುಂತಾದವನ್ನು ಎತ್ತಿ ತೋರಿಸುತ್ತಾರೆ. ಮತ ಧರ್ಮಗಳು ಆಧ್ಯಾತ್ಮಿಕ ಜ್ಞಾನವೂ ಹೌದು; ಅಧಿಕಾರ ಮತ್ತು ಯಜಮಾನಿಕೆಯ ಸಂರಚನೆಗಳೂ ಹೌದು. ಆದರೆ ಭೈರಪ್ಪನವರ ಮಟ್ಟಿಗೆ ಹಿಂದುಧರ್ಮ ಮಾತ್ರ ಅಧ್ಯಾತ್ಮ ಜ್ಞಾನ; ಇತರ ಧರ್ಮಗಳು ಬರೀ ಅಧಿಕಾರ ಮತ್ತು ದಬ್ಬಾಳಿಕೆಯ ನಾನಾ ರೂಪಗಳು. ವಿಜಯ ಕರ್ನಾಟಕದಲ್ಲಿ ಭೈರಪ್ಪನವರು ನಡೆಸಿದ ಚರ್ಚಾಸ್ಪರ್ಧೆಯಲ್ಲಿ ನಿಸ್ಸಂದೇಹವಾಗಿ ಭೈರಪ್ಪನವರಿಗೇ ಪ್ರಥಮ ಬಹುಮಾನ! ಯಾಕೆಂದರೆ ಈ ಸ್ಪರ್ಧೆಯ ನಿಯಮ ಮತ್ತು ಪೂರ್ವಪಕ್ಷಗಳನ್ನು ತೀರ್ಮಾನಿಸಿದವರೂ ಅವರೇ! ಸ್ಪರ್ಧೆಯ ಕೊನೆಯಲ್ಲಿ ಎದುರಾಳಿಗಳ ವಾದಗಳಿಗೆ 'ಉತ್ತರ' ಕೊಟ್ಟವರೂ ಅವರೇ. ಜಿಜೆಪಿಯ ಪ್ರಚಾರಕ್ಕೇ ಮೀಸಲಾಗಿರುವ ವಿಜಯ ಕರ್ನಾಟಕ, ಈ ಸುದೀರ್ಘ ಚರ್ಚೆಯನ್ನು ನಡೆಸಿ ಕೊಟ್ಟದ್ದರ ಹಿಂದೆ ಸಂಘಪರಿವಾರದ ಈ ಕೆಳಗಿನ ಅಜೆಂಡಾ ಇರುವಂತೆ ಕಾಣುತ್ತದೆ:

೧. ಮತಾಂತರ ಅತಿ ದೊಡ್ಡ ಸಮಸ್ಯೆಯಾಗಿ ಬೆಳೆದುನಿಂತಿದೆ ಎಂದು ಜನರನ್ನು ನಂಬಿಸುವುದು.

೨. ಮತಾಂತರ ನೈತಿಕವಾಗಿ ಮತ್ತು ಕಾನೂನು ರೀತ್ಯಾ ಅಪರಾಧ; ಎಲ್ಲ ಮತಾಂತರಗಳೂ ಬಲಾತ್ಕಾರಗಳೇ; ಆಮಿಷ ಕೂಡ ಬಲಾತ್ಕಾರ. ಹಾಗಾಗಿ ಸರಕಾರ ಮತಾಂತರ ನಿಷೇಧ ಕಾಯ್ದೆಯನ್ನು ಜಾರಿಗೆ ತರಬೇಕು ಎಂದು ಒತ್ತಾಯಿಸುವುದು.

೩. ಹಿಂದು ಧರ್ಮವೇ ಈ ನಾಡಿನ 'ಅಧಿಕೃತ' ಧರ್ಮ. ಉಳಿದವೆಲ್ಲ 'ಅನ್ಯಮತ'ಗಳು.

– ಎಂಬ ಹಿಂದುತ್ವದ ಹಠವನ್ನು ಜನರ ತಿಳುವಳಿಕೆಯನ್ನಾಗಿ ಮಾರ್ಪಡಿಸುವುದು. ಭೈರಪ್ಪ ಮತಾಂತರ ಕುರಿತ ತಮ್ಮ ನಿರೂಪಣೆಯನ್ನು ಈ ಅಜೆಂಡಾಕ್ಕೆ ಅನುಗುಣವಾಗಿಯೇ ಸಿದ್ಧಪಡಿಸಿದ್ದಾರೆ. ಆದರೆ ಅದೃಷ್ಟವಶಾತ್ ಈ ವಿಷಯಕ್ಕೆ ಸಂಬಂಧಿಸಿದಹಾಗೆ ಭೈರಪ್ಪನವರ ನಿರೂಪಣೆಯನ್ನು ಪ್ರಶ್ನಿಸುವ, ಅಲ್ಲಗಳೆಯುವ ಮತ್ತು ಅಪ್ರಸ್ತುತಗೊಳಿಸುವ ಹಲವು ಕಥನಗಳಿವೆ. ಕ್ರೈಸ್ತ ಮಿಷನರಿಗಳ ವೃತ್ತಾಂತಗಳು, ಸರಕಾರೀ ದಾಖಲೆಗಳು, ಪ್ರವಾಸಿ ಕಥನಗಳು, ಜನಗಣತಿ ವರದಿಗಳು, ಬಾಸೆಲ್ ಮಿಷನ್‌ನಂತಹ ಸಂಸ್ಥೆಗಳ ದಾಖಲೆಗಳು, ಮೊದಮೊದಲ ಕತೆ ಕಾದಂಬರಿಗಳು ಮುಂತಾದ ಮಾಹಿತಿಯ ಆಕರಗಳು ಕೂಡ ಹೇರಳವಾಗಿವೆ. ಈ ಲೇಖನದಲ್ಲಿ ಮತಾಂತರ ಕುರಿತು ಕೇವಲ ಮೂರು ಪರ್ಯಾಯ ಕಥನಗಳ ವಿವರಗಳನ್ನು ಸಣ್ಣದರಲ್ಲಿ ಕೊಡಲಾಗಿದೆ. ಭೈರಪ್ಪನವರ ನಿರೂಪಣೆಯ ಸುಳ್ಳುಗಳನ್ನು ಕಾಣಿಸಲು ಇಷ್ಟು ಸಾಕು.

ಭೈರಪ್ಪನವರ ಮಟ್ಟಿಗೆ ಮತಾಂತರವೆಂದರೆ ಬಲಾತ್ಕಾರದ ಮತಾಂತರ. ಮತಾಂತರಗೊಳ್ಳುವ ವ್ಯಕ್ತಿಗೆ ಎಷ್ಟೇ ವಯಸ್ಸಾಗಿರಲಿ, ಅವನು ಮುಗ್ಧ ಮತ್ತು ಅಮಾಯಕ. ಮತಾಂತರಗೊಳ್ಳುವವರು ಎಲ್ಲರೂ ಮುಗ್ಧರು; ಮತಾಂತರ ನಡೆಸುವ ಎಲ್ಲರೂ ಧೂರ್ತರು. ಮತಾಂತರಗೊಳ್ಳುವವರು ತಮ್ಮ ಹಿಂದಿನ ಮತವನ್ನು ಸಂಪೂರ್ಣವಾಗಿ ಬಿಟ್ಟುಕೊಡುತ್ತಾರೆ; ಮತ್ತು ತಾವು ಹೊಸದಾಗಿ ಸೇರಿದ ಮತದ ಜೊತೆ ತಮ್ಮನ್ನು ಸಂಪೂರ್ಣವಾಗಿ ಗುರುತಿಸಿಕೊಳ್ಳುತ್ತಾರೆ. ಭೈರಪ್ಪನವರ ಮಟ್ಟಿಗೆ ಇವೆಲ್ಲವೂ ಇಷ್ಟೇ ಸ್ಪಷ್ಟವಾದ ಮತ್ತು ನಿಖರವಾದ ಸ್ಥಿತಿಗಳು. ಇದರಲ್ಲಿ ಸಂದೇಹ, ಗೊಂದಲ, ಹೊಯ್ದಾಟ, ಧರ್ಮಸಂಕಟ, ಉಭಯ ಧರ್ಮಗಳಲ್ಲೂ ನಂಬಿಕೆ ಮುಂತಾದ ಯಾವ ತೊಡಕೂ ಅವರಿಗೆ ಕಾಣುವುದಿಲ್ಲ. ಮತಾಂತರಗೊಳ್ಳುವವ, ಭೈರಪ್ಪನವರಿಗೆ ಬಲಿಪಶುವಿನಂತೆಯೂ ಮುಗ್ಧ ಶಿಶುವಿನಂತೆಯೂ ಕಾಣುವುದರಿಂದ ಒಬ್ಬ ಸಾಮಾನ್ಯ ಮನುಷ್ಯನ ಬುದ್ಧಿಮತ್ತೆ ಮತ್ತು ಲೋಕಜ್ಞಾನವಾದರೂ ಅವನಲ್ಲಿ ಇದ್ದೀತು ಎಂದು ಒಪ್ಪಿಕೊಳ್ಳುವುದಿಲ್ಲ. ಆದ್ದರಿಂದಲೇ ಅಲ್ಲವೆ ಅಂತಹ ಮುಗ್ಧ ಅಮಾಯಕರಿಗೆ ಭೈರಪ್ಪನಂತಹವರ ವಕಾಲತ್ತು ಬೇಕಾಗಿರುವುದು ?

ಮತಾಂತರ ಕುರಿತ ತನ್ನ ಸುದೀರ್ಘ ಲೇಖನದಲ್ಲಿ ಭೈರಪ್ಪ ದಲಿತ ಮತ್ತಿತರ ದಮನಿತ ಸಮುದಾಯಗಳ ಬಗ್ಗೆ ಏನನ್ನು ಹೇಳುತ್ತಿದ್ದಾರೆ ? ''ಈ ಜನಗಳಿಗೆ ಸ್ವಂತ ಬುದ್ಧಿಯೂ ಇಲ್ಲ; ಸ್ವಂತದ ಆಯ್ಕೆಗಳೂ ಇಲ್ಲ. ಅವರು ಅಸಹಾಯಕರು ಮತ್ತು ಅಮಾಯಕರು; ಅವರೆಲ್ಲರೂ, ಯಾವುದೇ ಪ್ರಾಯದವರಿರಲಿ, ಮಗುವಿನಷ್ಟು ಮುಗ್ಧರು. ಅಂತಹ ಜನಗಳನ್ನು ಧೂರ್ತ ಮಿಷನರಿಗಳು ಬಲಾತ್ಕಾರದಿಂದ / ಆಮಿಷವೊಡ್ಡಿ / ಮರುಳು ಮಾಡಿ / ಮತಾಂತರಗೊಳಿಸುತ್ತಿದ್ದಾರೆ ಹಾಗೂ ಈ 'ಕ್ರೈಸ್ತೀಕರಣ' ಭಾರೀ ಪ್ರಮಾಣದಲ್ಲಿ ನಡೆದಿದೆ.'' ಮತಾಂತರ ಕುರಿತ ತನ್ನ ಈ ನಿರೂಪಣೆ ಪಶ್ಚಿಮದ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿಯ ಸಾಂಸ್ಕೃತಿಕ ಹುನ್ನಾರಗಳನ್ನು ಸಹ ಬಯಲಿಗೆ ಎಳೆಯುವಂತಹದ್ದು ಎಂದೂ ಭೈರಪ್ಪ ಹೇಳಿಕೊಳ್ಳುತ್ತಾರೆ. ಆದರೆ ತಮಗಿಂತ ಭಿನ್ನವಾಗಿ ಬದುಕುವವರನ್ನು ಮತ್ತು ಯೋಚಿಸುವವರನ್ನು 'ದಡ್ಡರು/ಮುಗ್ಧರು/ಅಮಾಯಕರು/ಹಿಂದುಳಿದವರು' ಎಂದು ಮುಂತಾಗಿ ತಿಳಿಯುವ ಸ್ವಕೇಂದ್ರಿತ ಚಿಂತನ ಕ್ರಮವನ್ನು ಭೈರಪ್ಪ ಪಡೆದದ್ದೇ ವಸಾಹತುಶಾಹಿಯಿಂದ. ವಸಾಹತುಗಳ ಹಿಂದುಳಿದ ಅಮಾಯಕ ಕರಿಯರ ಜೀವನವನ್ನು 'ಸುಧಾರಣೆ' ಮಾಡಲೆಂದೇ ತಾವು ಬಂದಿರುವುದು, ಅದು ತಮ್ಮ ಮೇಲಿರುವ 'ಬಿಳಿಯನ ಮೇಲಿನ ಹೊರೆ' ಎಂದು ವಸಾಹತುಶಾಹಿ ದೃಢವಾಗಿ ನಂಬಿತ್ತು. ಈಗ ಭೈರಪ್ಪ ಬಿಳಿಯರು ಹೊತ್ತಿದ್ದ ಹೊರೆಯನ್ನು ತಮ್ಮ ಹೆಗಲಿಗೆ ವರ್ಗಾಯಿಸಿಕೊಂಡಿದ್ದಾರೆ.

ನಾಲ್ವಾಡ ಬ್ರದರ್ಸ್ Nalwad Brothers BANGALORE NALWAD BROTHERS

WHOLESALE BOOK DEALERS & SUPPLIERS

VIKRAM DIGEST, ZEN BOOKS, D.Ed., B.A., B.Ed., M.A., M.Ed.
Law, Departmental Text Books, GEM Dictionaries
Colourful Charts, Ganesh Pocket Note Books & General Books

# 79, Sanjeevappa Lane, Opp. Rice Memorial Church, Avenue Road Cross
Bangalore - 560 002. Ph. : 22243132 Mobile : 9845467784 / 9448711002

ಭಾರತವನ್ನು ಹಿಂದುಧರ್ಮದೊಡನೆ ಹಾಗೂ ಹಿಂದು ಧರ್ಮವನ್ನು ವೈದಿಕ ಶ್ರದ್ಧೆ ಮತ್ತು ಸಂಸ್ಕೃತ ಸಾಹಿತ್ಯಗಳೊಡನೆ ಸಮೀಕರಿಸುವ ಭೈರಪ್ಪನವರ ವರಸೆ ಕೂಡ ವಸಾಹತುಶಾಹಿಯದ್ದೇ ಬಳುವಳಿ. ಆದ್ದರಿಂದಲೇ ವಸಾಹತುಶಾಹಿಯ ಯಜಮಾನಿಕೆ, ದರ್ಪ ಮತ್ತು ಅನ್ಯದ ಕುರಿತ ಅಸಹನೆಗಳೆಲ್ಲ ಭೈರಪ್ಪನವರ ನಿರೂಪಣೆಯಲ್ಲೂ ಕಾಣಿಸುತ್ತದೆ.

ಮತಾಂತರ ಕುರಿತ ಈ ಯಜಮಾನಿಕೆಯ ನಿರೂಪಣೆಯನ್ನು ಇಡಿಯಾಗಿ ಅಲ್ಲಗಳೆಯುವುದರ ಜೊತೆಗೆ ಅದು ಒಳಗೊಂಡಿರುವ ಸಂಕೀರ್ಣ ಸಮಸ್ಯೆಗಳನ್ನು ಸಹಾನುಭೂತಿಯಿಂದ ಪರಿಶೀಲಿಸುವ ಒಂದು ಪರ್ಯಾಯ ನಿರೂಪಣೆ ನಮಗೆ ಶಿವರಾಮ ಕಾರಂತರ ಕಾದಂಬರಿ 'ಚೋಮನ ದುಡಿ'ಯಲ್ಲಿ ದೊರೆಯುತ್ತದೆ. ಈ ಕಾದಂಬರಿ ಮೊದಲು ಪ್ರಕಟವಾದದ್ದು ೧೯೩೩ರಲ್ಲಿ; ಆಗ ಭಾರತ ವಸಹಾತುಶಾಹಿಯ ಅಧೀನದಲ್ಲಿತ್ತು. ಆದರೆ ಕಾದಂಬರಿಯ ಅಧಿಕಾರ ಮತ್ತು ಯಜಮಾನಿಕೆಯ ಸಂರಚನೆಗಳಿಗೆ ವಸಾಹತುಶಾಹಿ ನೇರವಾಗಿ ಸಂಬಂಧಿಸಿಲ್ಲ. ಕಾದಂಬರಿಯ ನಾಯಕ ಚೋಮ ಹೊಲೆಯ, ಅಸ್ಪೃಶ್ಯ, ಅವನಿಗೆ ನೆಲದೊಡೆಯನಾಗುವ, ಹೋಗಲಿ, ನೆಲ ಉಳುವ ಹಕ್ಕೂ ಇಲ್ಲ. ತನ್ನ ಹಳ್ಳಿಯ ಇತರ ರೈತರಂತೆ ತಾನೂ ನೊಗಕ್ಕೆ, ಪ್ರೀತಿಯಿಂದ ಸಾಕಿ ಬೆಳೆಸಿದ ತನ್ನ ಎತ್ತು ಕಟ್ಟಿ ಗದ್ದೆ ಉಳಬೇಕು ಎಂಬುದು ಅವನ ತೀರದಾಸೆ. ಅವನು ಅಸ್ಪೃಶ್ಯನಾಗಿರುವುದರಿಂದ, ಆ ಆಸೆ ಕೊನೆಗೂ ಕೈಗೂಡುವುದಿಲ್ಲ. ಆಗ ಹತಾಶನಾಗಿ ಚೋಮ ಕ್ರೈಸ್ತಮತಕ್ಕೆ ಮತಾಂತರಗೊಳ್ಳಲು ನಿರ್ಧರಿಸುತ್ತಾನೆ. ಅದಕ್ಕೂ ಮುನ್ನ ಅವನ ಹಿರಿಯ ಮಗ ಕ್ರೈಸ್ತ ಹುಡುಗಿಯೊಬ್ಬಳನ್ನು ಮದುವೆಯಾಗಿ, ತಾನೂ ಕ್ರೈಸ್ತನಾಗಿ ಚೋಮನಿಗೆ ಹೊಟ್ಟೆ ಉರಿಯುವಂತೆ 'ಗದ್ದೆ ಬೇಸಾಯ' ಮಾಡಿಕೊಂಡಿರುತ್ತಾನೆ. ಚೋಮನ ಇನ್ನೊಬ್ಬ ಮಗ ಕೆರೆಗೆ ಬಿದ್ದು ಮುಳುಗಿ ಸಾಯುತ್ತಿದ್ದಾಗ ಊರವರು ಯಾರೂ ಅವನ ರಕ್ಷಣೆಗೆ ಬರುವುದಿಲ್ಲ. ಚೋಮ ಮತಾಂತರವಾಗಲು ನಿರ್ಧರಿಸುವುದು ಈ ಹಿನ್ನೆಲೆಯಲ್ಲಿ. ಆದರೆ ಕೊನೆಗೂ ಅವನು ಮತಾಂತರಗೊಳ್ಳುವುದಿಲ್ಲ. ಕ್ರೈಸ್ತನಾಗಲು ತನ್ನ ಮನೆಯಿಂದ ಹೊರಟ ಚೋಮ ವಾಪಸು ಬರುತ್ತಾನೆ. ಚೋಮ ತನ್ನ ಮನೆಯಿಂದ ಎಲ್ಲಿಗೆ ಹೊರಹೋಗುವುದಿದ್ದರೂ, ಮನೆಗೆ ಸಮೀಪದ ಪಂಜುರ್ಲಿ ಗುಡಿಯನ್ನು ದಾಟಿಯೇ ಹೋಗಬೇಕು. ಯಾವಾಗಲೂ ಪಂಜುರ್ಲಿಗೆ ನಮಸ್ಕರಿಸಿಯೇ ಅವನು ಮುಂದೆ ಹೋಗುವುದು. ಅವನ ಸಾಕುನಾಯಿಗೂ ಅದು ಗೊತ್ತು. ಆ ದಿನವೂ ಅವನಿಗಿಂತ ಮುಂದೆ ಹೊರಟ ಅವನ ನಾಯಿ ಪಂಜುರ್ಲಿ ಗುಡಿ ಸಮೀಪಿಸಿದ ಕೂಡಲೆ ಅಭ್ಯಾಸಬಲದಲ್ಲಿ ನಿಂತುಬಿಡುತ್ತದೆ; ಚೋಮನೂ ನಿಲ್ಲುತ್ತಾನೆ. ''ಇಷ್ಟು ದಿನ ನನ್ನನ್ನು ನಂಬಿ ಈಗ ನನ್ನ ಕೈಬಿಡುತ್ತೀಯಾ ?'' ಎಂದು ಪಂಜುರ್ಲಿ ತನ್ನನ್ನು ಕೇಳಿದ ಹಾಗೆ ಚೋಮನಿಗೆ ಭಾಸವಾಗುತ್ತದೆ. ಚೋಮ ತನ್ನ ಗುಡಿಸಲಿಗೆ ವಾಪಸಾಗುತ್ತಾನೆ. ಮತಾಂತರವಾಗಲು ನಿರ್ಧರಿಸುವುದು, ನಂತರ ನಿರ್ಧಾರ ಬದಲಿಸಿ ತನ್ನ ಮತದಲ್ಲೇ ಮುಂದುವರಿಯುವುದು – ಚೋಮ ಕೈಗೊಳ್ಳುವ ಈ ಎರಡು ಕ್ರಿಯೆಗಳು ಬಲಾತ್ಕಾರದಿಂದ ನಡೆದಂತಹವಲ್ಲ. ಹಾಗೆಂದು ಅವು ಚೋಮ ಸ್ವತಂತ್ರ ಮನಃಸ್ಥಿತಿಯಲ್ಲಿ ಕೈಗೊಂಡ ತೀರ್ಮಾನಗಳೂ ಅಲ್ಲ. ಚೋಮನಂತಹವರ ಬದುಕಿನಲ್ಲಿ 'ಬಲಾತ್ಕಾರ' ಮತ್ತು 'ಸ್ವಾತಂತ್ರ್ಯ' – ಎರಡೂ ಕೂಡ ಅತ್ಯಂತ ಸಮಸ್ಯಾತ್ಮಕವಾಗಿರುವಂತಹವು. ಚೋಮನ ಮತ ಯಾವುದು ಎಂಬುದು ಸಹ ಅಷ್ಟೇ ಸಮಸ್ಯಾತ್ಮಕವಾಗಿದೆ. ಚೋಮನ ಬ್ರಾಹ್ಮಣ ದಣಿ ಸಂಕಪ್ಪಯ್ಯ ನೂರಕ್ಕೆ ನೂರು ಹಿಂದು ಎಂದು ಸಂದೇಹವಿಲ್ಲದೆ ಹೇಳಬಹುದು. ಆದರೆ ಪಂಜುರ್ಲಿಯಂತಹ 'ನಾಡ ದೈವ'ಗಳಿಗೆ ನಡೆದುಕೊಳ್ಳುವ ಚೋಮನ ಧರ್ಮ ಯಾವುದು ? ಅವನೂ ಒಬ್ಬ ಹಿಂದು ಎಂದೇ ಇಟ್ಟುಕೊಂಡರೂ ಆ ಧರ್ಮದಲ್ಲಿ ಅವನಿಗೆ ದಕ್ಕುವುದು ಎಷ್ಟು? ಅವನದ್ದು ಹಿಂದು ಧರ್ಮವೇ ಹೌದಾದರೆ, ಅದು ಅವನಿಗೆ ಒಂದು ಸೆರೆಮನೆಯೂ ಹೌದಲ್ಲವೆ ? ದಲಿತ ಮತ್ತಿತರರ ಮತಾಂತರ ದೇಶಕ್ಕೆ ಬಂದೊದಗಿರುವ ಭಾರೀ ಗಂಡಾಂತರ ಎಂದು ಕೂಗೆಬ್ಬಿಸುವ ಭೈರಪ್ಪನವರಿಗೆ ಈ ಸೂಕ್ಷ್ಮಗಳು ಹೊಳೆಯುವುದಿಲ್ಲ. ಮತಾಂತರ ಜನಗಳ ಸ್ವತಂತ್ರ ಮತ್ತು ಪ್ರಜ್ಞಾಪೂರ್ವಕ ಆಯ್ಕೆಯಾಗಿರಬಹುದು ಎಂಬ ಸಾಧ್ಯತೆಯ ಬಗ್ಗೆ ಅವರು ಯೋಚಿಸಲು ಸಿದ್ಧರಿಲ್ಲ. ಚೋಮನ ದುಡಿ ಮತಾಂತರದ ಪರವಾಗಿದೆಯೋ, ವಿರುದ್ಧವಾಗಿದೆಯೋ, ಎಂಬ ಪ್ರಶ್ನೆಯೇ ಅಪ್ರಸ್ತುತ. ಕಾರಂತರು ಚೋಮನಂತಹವರ ಬದುಕಿನ ಅಸಹಾಯಕತೆಯನ್ನು ಮತ್ತು ನಂಬಿಕೆಯ ಬಿಕ್ಕಟ್ಟುಗಳನ್ನು ಸಹಾನುಭೂತಿಯಿಂದ ಪರಿಶೀಲಿಸುತ್ತಾರೆ. ಚೋಮನ ದುಡಿಯಲ್ಲಿ ಧರ್ಮ, ಧರ್ಮಸಂಕಟದ ಹಾಗೆಯೂ ಚಿತ್ರಿತವಾಗಿದೆ. ಮತಾಂತರಕ್ಕೆ ಕಾರಣವಾಗುವ ಅಸಹಾಯಕತೆಯ ಬಗ್ಗೆ ಕಾರಂತರದ್ದು ಅನುಕಂಪದ ನಿಲುವು; ಆದರೆ ಮತಧರ್ಮಗಳ ಬಗ್ಗೆ ಅವರು ನಿಷ್ಠುರರು. ಭೈರಪ್ಪ ಸಹ ನಿಷ್ಠುರವಾದಿ, ಪರಧರ್ಮಗಳ ಮಟ್ಟಿಗೆ, ಸಹಾನುಭೂತಿ ಮಾತ್ರ ಯಾರಿಗೂ ಇಲ್ಲ.

ಮತಾಂತರ ಕುರಿತ ಭೈರಪ್ಪನವರ ಸುಳ್ಳು ಅರೆ ಸತ್ಯಗಳ ನಿರೂಪಣೆಗೆ ಪರ್ಯಾಯವಾಗಿ ನಾನು ಕೊಡಬಯಸುವ ಇನ್ನೊಂದು ಉದಾಹರಣೆ ಪಂಡಿತ ರಮಾಬಾಯಿ (೧೮೫೮-೧೯೨೨) ಅವರ ಅಸಾಧಾರಣ ಬದುಕು ಮತ್ತು ಹೋರಾಟದ ಕಥನ. ಪಂಡಿತ ರಮಾಬಾಯಿ, ತನ್ನ ಜೀವಿತಾವಧಿಯಲ್ಲಿ ಜಾತಿ ಪದ್ಧತಿ, ಬಾಲ್ಯವಿವಾಹ, ವೈಧವ್ಯ, ಲಿಂಗಶೋಷಣೆ ಮುಂತಾದ ಪರಂಪರಾಗತ ಸಮಾಜದ ಕೆಡುಕುಗಳ ವಿರುದ್ಧ ಹೋರಾಡಿದ ಧೀಮಂತ ಮಹಿಳೆ. ದಕ್ಷಿಣ ಕನ್ನಡ ಜಿಲ್ಲೆಯ ಒಂದು ಕರ್ಮಠ ಚಿತ್ಪಾವನ ಬ್ರಾಹ್ಮಣ ಕುಟುಂಬದಲ್ಲಿ ರಮಾಬಾಯಿ ಹುಟ್ಟಿ ಬೆಳೆದರು. ಅವರ ಹೆತ್ತವರು ಆ ಕಾಲದ ರೂಢಿಯಂತೆ, ಆಕೆ ಇನ್ನೂ ಬಾಲಕಿಯಾಗಿದ್ದಾಗಲೇ ಮದುವೆ ಮಾಡಿಸಿದರು; ರಮಾಬಾಯಿ ಮದುವೆಯಾದಷ್ಟೇ ಬೇಗ ಗಂಡನನ್ನು ಕಳೆದುಕೊಂಡು ವಿಧವೆ ಆದರು. ಆ ಸ್ಥಿತಿಯಲ್ಲೇ ಅವರು ಹಠ ಹಿಡಿದು ತನ್ನ ವಿದ್ಯಾಭ್ಯಾಸ ಮುಂದುವರಿಸಿದ್ದಲ್ಲದೆ, ಮರು ವಿವಾಹವನ್ನು – ಅದೂ ಬೇರೆ ಜಾತಿಯ ವರನೊಂದಿಗೆ – ಮಾಡಿಕೊಳ್ಳುವ ಧೈರ್ಯ ತೋರಿದರು. ರಮಾಬಾಯಿಯವರನ್ನು  ಜಾತಿಯಿಂದ ಬಹಿಷ್ಕರಿಸಲಾಯಿತು. ಅವರ ಕುಟುಂಬದವರೂ ಅವರನ್ನು ದೂರವಿಟ್ಟರು. ರಮಾಬಾಯಿ ಕ್ರೈಸ್ತಧರ್ಮಕ್ಕೆ ಮತಾಂತರಗೊಂಡರು. ೧೮೮೪-೧೮೮೬ರ ನಡುವೆ ಅವರು ಇಂಗ್ಲೆಂಡ್‌ನ ಮಹಿಳಾ ಕಾಲೇಜು ಒಂದರಲ್ಲಿ ಸಂಸ್ಕೃತ ಪ್ರಾಧ್ಯಾಪಿಕೆಯೂ ಆಗಿದ್ದರು. ತನ್ನ ಜೀವಮಾನವಿಡೀ ಮಹಿಳೆಯರ ಶಿಕ್ಷಣ, ವಿಧವಾವಿವಾಹ ಚಳುವಳಿ, ಪತಿತೆಯರು ಮತ್ತು ರೋಗಿಷ್ಠ ಮಹಿಳೆಯರ ಸೇವೆ ಮುಂತಾದವುಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದ ರಮಾಬಾಯಿ ಪುಣೆಯಲ್ಲಿ ಭಾರತದ ಪ್ರಥಮ ಮಹಿಳಾ ವಿಶ್ವವಿದ್ಯಾಲಯದ ಸ್ಥಾಪನೆಗೂ ಕಾರಣರಾದರು. ಹಿಂದುಧರ್ಮ ದಲಿತರಿಗೆ ಒಂದು ಬಗೆಯ ಸೆರೆಮನೆಯಾದರೆ, ಹೆಂಗಸರಿಗೆ ಇನ್ನೊಂದು ಬಗೆಯ ಸೆರೆಮನೆ. ರಮಾಬಾಯಿ ಈ ಸೆರೆಮನೆ ವಾಸವನ್ನು ಧಿಕ್ಕರಿಸುವ ಧೈರ್ಯ ತೋರಿದರು. ಆದ್ದರೆ ಆಗಲೂ ಬಾಲಗಂಗಾಧರ ತಿಲಕರಂತಹ ಬಲಪಂಥೀಯ ರಾಷ್ಟ್ರೀಯವಾದಿಗಳು, ರಮಾಬಾಯಿ ಮತಾಂತರದಲ್ಲಿ ತೊಡಗಿದ್ದಾರೆ ಎಂದು ಆಪಾದಿಸಿದ್ದರು !

ಮತಾಂತರ ಕುರಿತ ತಮ್ಮ ಪ್ರಬಂಧದಲ್ಲಿ ಮತಾಂತರಗೊಂಡವರ ಬಗ್ಗೆ ಉದ್ದಕ್ಕೂ ಭೈರಪ್ಪನವರೇ ಮಾತಾಡುತ್ತಾರೆ. ಸ್ವತಃ ಮತಾಂತರಗೊಂಡವರೇ, ತಮ್ಮ ಬಗ್ಗೆ ತಾವು ಏನು  ಹೇಳುತ್ತಾರೆ ? ಭೈರಪ್ಪನವರ ಪ್ರಬಂಧದಲ್ಲಿ ಕ್ರೈಸ್ತರ ದನಿಯೇ ಕೇಳಿಸುವುದಿಲ್ಲ. ಕ್ರೈಸ್ತರನ್ನು ಆರೋಪಿಗಳಾಗಿ ಕಟಕಟೆಯಲ್ಲಿ ನಿಲ್ಲಿಸಿದ ಮೇಲೆ, ಅವರ ಅಹವಾಲಿಗೆ ತುಸುವಾದರೂ ಅವಕಾಶ ಕಲ್ಪಿಸಬೇಡವೆ ? ಆದರೆ ಭೈರಪ್ಪ ಎಂತಹ ಶುಂಠ ವಕೀಲನೆಂದರೆ ಎದುರಾಳಿಯ ವಾದಗಳನ್ನು ಕೇಳಿಸಿಕೊಳ್ಳುವ ವಿನಯವಾಗಲೀ, ತಾಳ್ಮೆಯಾಗಲೀ ಅವರಿಗೆ ಇಲ್ಲವೇ ಇಲ್ಲ. ಭೈರಪ್ಪನವರ ದರ್ಪ, ಅಸಹನೆ ಮತ್ತು ಯಜಮಾನಿಕೆಯ ನಿರೂಪಣೆಗೆ ಪರ್ಯಾಯವಾಗಿ ನಾನು ಕೊಡಬಯಸುವ ಮೂರನೆಯ ಉದಾಹರಣೆ, ಗೋವಾದ ಖ್ಯಾತ ಲೇಖಕಿ ಮೇರಿಯಾ ಆರೋರಾ ಕೌಟೋ (Maria Auroracouto) ಅವರ ಕೃತಿ, 'Goa - A daughter remembers' (ಪೆಂಗ್ವಿನ್ಸ್ - ನ್ಯೂಡೆಲ್ಲಿ - ೨೦೦೪). ಮೇರಿಯಾ ಆರೋರಾಕೌಟೋ ಗೋವಾದ ಕ್ಯಾಥೊಲಿಕ್ ಕ್ರೈಸ್ತ ಕುಟುಂಬವೊಂದರಲ್ಲಿ ಹುಟ್ಟಿ ಧಾರವಾಡದಲ್ಲಿ ಶಿಕ್ಷಣ ಪಡೆದು, ಈಗ ಗೋವಾದ ತನ್ನ ಹಳ್ಳಿಯಲ್ಲೇ ವಾಸಿಸುತ್ತಿರುವವರು. ಮೂಲತಃ ಸಾರಸ್ವತ ಬ್ರಾಹ್ಮಣರಾಗಿದ್ದ ಅವರ ಕುಟುಂಬದ ಪೂರ್ವಿಕರು ೧೬ನೆಯ ಶತಮಾನದಲ್ಲಿ ಪೋರ್ಚುಗೀಸರಿಂದ ಬಲಾತ್ಕಾರವಾಗಿ ಮತಾಂತರಗೊಂಡರು. ಪೋರ್ಚುಗೀಸರು ೧೫೧೦ರಲ್ಲಿ ಯೂಸುಫ್ ಆದಿಲ್‌ಶಾಹನ ಅಧೀನದಲ್ಲಿದ್ದ ಗೋವಾವನ್ನು ವಶಪಡಿಸಿಕೊಂಡ ನಂತರ ಅವರ ಆಳ್ವಿಕೆಯ ಮೊದಲ ೨೦೦ ವರ್ಷಗಳಲ್ಲಿ ಗೋವಾದಲ್ಲಿ ಅವರು ದೊಡ್ಡ ಸಂಖ್ಯೆಯಲ್ಲಿ ಸ್ಥಳೀಯ ಹಿಂದುಗಳನ್ನು ಬಲಾತ್ಕಾರದಲ್ಲಿ ಕ್ರೈಸ್ತಧರ್ಮಕ್ಕೆ ಮತಾಂತರಗೊಳಿಸಿದರು. ಮತಾಂತರಗೊಳ್ಳಲು ನಿರಾಕರಿಸುವವರನ್ನು ಚಿತ್ರಹಿಂಸೆಗೆ ಒಳಪಡಿಸುವುದು, ಅವರ ಸ್ಥಿರಚರಾಸ್ತಿಗಳನ್ನು ಸ್ವಾಧೀನಪಡಿಸಿಕೊಳ್ಳುವುದು, ಮತಾಂತರಗೊಂಡವರಿಗೆ ಮಾತ್ರ ಆಸ್ತಿಯ ಉತ್ತರಾಧಿಕಾರ, ಹಿಂದು ಧಾರ್ಮಿಕ ಆಚರಣೆಗಳ ಮೇಲೆ ಕಠೋರ ನಿರ್ಬಂಧ ಮುಂತಾದ ವಿಧಾನಗಳನ್ನು ಪೋರ್ಚುಗೀಸರು ಅನುಸರಿಸಿದರೂ ಸಾಕಷ್ಟು ಜನ ಹಿಂದುಗಳು ಆಸ್ತಿ, ಅಧಿಕಾರ, ಸವಲತ್ತು ಮುಂತಾದವುಗಳ ಆಶೆಯಲ್ಲಿ ಬಲಾತ್ಕಾರವಿಲ್ಲದೆಯೂ ಮತಾಂತರಗೊಂಡರು. ಪ್ರಾಯಶಃ ಮೇರಿಯಾ ಆರೋರಾಕೌಟೋ ಅವರ ಕುಟುಂಬದ ಪೂರ್ವಜರೂ ಹೀಗೆಯೇ ಮತಾಂತರಗೊಂಡವರು. ೧೯೮೦ರ ನಂತರ ಹಿಂದುತ್ವದ ಪ್ರಭಾವ ಗೋವಾದಲ್ಲೂ ಬೆಳೆಯುತ್ತಿದ್ದು ಬಿಜೆಪಿ ಈಗ ಅಲ್ಲಿನ ಪ್ರಮುಖ ರಾಜಕೀಯ ಪಕ್ಷವಾಗಿದೆ; ಹಿಂದುತ್ವದ ಸಂಘಟನೆಗಳು ಗೋವಾದ ಬಹುಸಂಖ್ಯಾತ ಹಿಂದುಗಳಲ್ಲಿ - ಅವರು ಶೇಕಡಾ ೬೦ರಷ್ಟಿದ್ದಾರೆ; ಗೋವಾದಲ್ಲಿ ಯಾವ ಕಾಲದಲ್ಲೂ ಕ್ರೈಸ್ತರು ಬಹುಸಂಖ್ಯಾಕರಾಗಿರಲೇ ಇಲ್ಲ - ಕ್ರೈಸ್ತವಿರೋಧಿ ಭಾವನೆಗಳನ್ನು ಕೆರಳಿಸುವುದರಲ್ಲಿ

ತೊಡಗಿವೆ. ಗೋವಾದ ಕ್ರೈಸ್ತರಿಗೆ ಇದು ಸಂಕಟ ಮತ್ತು ಆತ್ಮಪರೀಕ್ಷೆಯ ಕಾಲ. ಮೇರಿಯಾ ಆರೋರಾ ಕೌಟೋ ತನ್ನ ಆತ್ಮ ಚರಿತ್ರೆ, ತನ್ನ ಕುಟುಂಬದ ಚರಿತ್ರೆ ಮತ್ತು ಗೋವಾದ ಚರಿತ್ರೆ – ಮೂರನ್ನೂ ಮೇಳವಿಸಿಕೊಂಡ ಈ ಅಪೂರ್ವಕೃತಿಯಲ್ಲಿ ಪೋರ್ಚುಗೀಸರು ನಡೆಸಿದ ಬಲಾತ್ಕಾರದ ಮತಾಂತರಗಳನ್ನು ಮರೆಮಾಡುವುದಿಲ್ಲ. ''ಯೇಸುವಿನ ಚರ್ಚ್‌ಗೆ ರೋಮನ್ ಚರ್ಚ್ ಒಂದು ಕಳಂಕವಾದರೆ ಗೋವಾದ ಚರ್ಚ್‌ಗೆ ಪೋರ್ಚುಗಲ್‌ನ ಚರ್ಚು ಅತಿದೊಡ್ಡ ಶತ್ರು'' ಎಂದು ಅವರು ಒಂದೆಡೆ ಹೇಳುತ್ತಾರೆ. ಆದರೆ ಮೊದಲ ೨೦೦ ವರ್ಷಗಳಲ್ಲಿ ದಬ್ಬಾಳಿಕೆಯ ಮೂಲಕ ಗೋವಾದಲ್ಲಿ ನೆಲೆಯೂರಿದ ಕ್ರೈಸ್ತಧರ್ಮ ಕ್ರಮೇಣ ತನ್ನ ಮೂಲತತ್ವಗಳಿಗೆ ಮರಳಿ ಸಹನೆ, ಅರ್ಪಣೆ ಮತ್ತು ಸೇವೆಗಳ ಧರ್ಮವಾಗಿ ರೂಪುಗೊಂಡದ್ದನ್ನೂ ಲೇಖಕಿ ನಿರೂಪಿಸುತ್ತಾರೆ. ತನ್ನದು ಹೀಗೆ ಪರಿವರ್ತನೆಗೊಂಡ ಕ್ರೈಸ್ತ ಧರ್ಮ ಎನ್ನುವ ಲೇಖಕಿ, ಗೋವಾದಲ್ಲಿ ಕೊಂಕಣಿಭಾಷೆ ಮತ್ತು ಸ್ಥಳೀಯ ಸಂಸ್ಕೃತಿಗಳ ಸುತ್ತ ಒಂದು ಗೋವನ್ ಕ್ರೈಸ್ತ ಸಮುದಾಯ ರೂಪುಗೊಂಡದ್ದರ ಕಥನವನ್ನೂ ನಿರೂಪಿಸುತ್ತಾರೆ.

ಯಾವುದೋ ಪುರಾತನಕಾಲದಲ್ಲಿ ತನ್ನ ಪೂರ್ವಜರು (ಎಷ್ಟು ತಲೆಮಾರುಗಳ ಹಿಂದಣ ಪೂರ್ವಜರು!) ಮತಾಂತರಗೊಂಡರು ಎಂಬ ಕಾರಣಕ್ಕೆ ಈಗ ಯಾಕೆ, ತಾನು ವಿವರಣೆ ಕೊಡಬೇಕು ? ಯಾಕೆ ಹಿಂದುತ್ವವಾದಿಗಳ ಬಳಿ ಕ್ಷಮೆ ಯಾಚಿಸಬೇಕು ಎಂದು ಕೌಟೋ ತನ್ನ ಈ ವೃತ್ತಾಂತದಲ್ಲಿ ನೋವಿನಲ್ಲಿ ಕೇಳುತ್ತಾರೆ. ತನ್ನ ಕ್ಯಾಥೊಲಿಕ್ ಕ್ರೈಸ್ತ ಶ್ರದ್ಧೆಯ ಬಗ್ಗೆ ಕೌಟೋ ಬರೆಯುತ್ತಾರೆ, ''...ನನ್ನ ಹೆತ್ತವರ ಶ್ರದ್ಧೆ ಗ್ರಾಮೀಣ ಸಮುದಾಯಗಳನ್ನು ಬೆಸೆದ ಶ್ರದ್ಧೆ ಮತ್ತು ಬಾಳಿನ ಉದ್ದಕ್ಕೂ ನನ್ನ ಜೊತೆಗಿದ್ದು ಕಾಪಾಡಿದ ಶ್ರದ್ಧೆ ಒಂದು ವಾಸ್ತವ. ಆದರೆ ಇದಕ್ಕೆ ಎದುರಾಗಿ ಬಲಾತ್ಕಾರ ಬೆದರಿಕೆಗಳ ಚಾರಿತ್ರಿಕ ವಿದ್ಯಮಾನಗಳನ್ನೂ, ಗೋವಾದ ಪರಂಪರೆಯನ್ನು ಅಳಿಸಿಹಾಕುವ ಪ್ರಯತ್ನಗಳನ್ನೂ ನಾವು ಗಮನಿಸಲೇಬೇಕು'' (ಪುಟ ೧೧೭). ಹಿಂದುತ್ವದ ಕರಾಳ ಶಕ್ತಿಗಳನ್ನು ಎದುರಿಸುತ್ತಲೇ, ಗೋವಾದ ಕ್ರೈಸ್ತರು, ಗತಕಾಲದ ತಮ್ಮ ಧರ್ಮದ ಕರಾಳತೆಯನ್ನು ಒಂದು ಅಸ್ತಿತ್ವವಾದೀ ಪ್ರಶ್ನೆಯಾಗಿ ಎದುರಿಸಬೇಕು ಎಂದು ಕೌಟೋ ಹೇಳುತ್ತಾರೆ. ಆಕೆಯ ಪುಸ್ತಕವೇ, ತನ್ನ ಧರ್ಮದ ಜೊತೆ ತಾದಾತ್ಮ್ಯ, ನಂಬಿಕೆ, ಸಂದೇಹ, ಆತ್ಮ ನಿವೇದನೆ ಹಾಗೂ ಆತ್ಮಶೋಧನೆಗಳ ಒಂದು ಗಾಢವಾದ ಅನುಭವ. ಲೇಖಕಿ ತನ್ನ ಈ ಕೃತಿಯ ಬರವಣಿಗೆಯ ಬಗ್ಗೆ ದಿ. ಎ. ಕೆ. ರಾಮಾನುಜನ್ ಜೊತೆ ಚರ್ಚಿಸಿದಾಗ ಅವರು ಹೇಳಿದರಂತೆ, ''ಆತ್ಮಶೋಧನೆ ಸದಾ ನೋವಿನಿಂದ ಕೂಡಿರುತ್ತದೆ. ಅದು ನೀರುಳ್ಳಿ ಸಿಪ್ಪೆ ಸುಲಿದ ಹಾಗೆ; ಕಣ್ಣೀರು ಬರುತ್ತದೆ ಎಂದು ನಿಲ್ಲಿಸಬೇಡ. ನಿನ್ನ ಈ ಬರಹದಿಂದ ನಿನಗೂ ನಿನ್ನ ಅನುಭವದಲ್ಲಿ ಪಾಲುಗೊಳ್ಳುವವರಿಗೂ ಒಳ್ಳೆಯದಾಗುತ್ತದೆ.'' (ಪುಟ ೩೨೧). ಮೇರಿಯಾ ಆರೋರಾ ಕೌಟೋ ಅವರಿಗೆ ಧಾರವಾಡದಲ್ಲಿ ಸಹಪಾಠಿಯಾಗಿದ್ದ ಗಿರೀಶ ಕಾರ್ನಾಡ, ಈ ಕೃತಿಯ ಬಗ್ಗೆ ಬರೆದಿರುವುದು ಕೂಡ ಮತಾಂತರ ಕುರಿತು ಭೈರಪ್ಪನವರ ಪೂರ್ವಗ್ರಹದ ನಿರೂಪಣೆಗೆ ಒಂದು ಪರ್ಯಾಯ ನಿರೂಪಣೆ. ಗಿರೀಶ ಬರೆಯುತ್ತಾರೆ:

''... ಮತಾಂತರ ಬಲಾತ್ಕಾರದಲ್ಲೇ ನಡೆದಿದ್ದರೂ ಜನರ ಶ್ರದ್ಧೆ ಸಾಂಸ್ಕೃತಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಬದುಕನ್ನು ಹೇಗೆ ಉಜ್ವಲಗೊಳಿಸಬಹುದು ಎಂಬುದನ್ನು ತೋರಿಸುವ ನಿರೂಪಣೆ ಇದು.

''ಮೊನ್ನೆ ವಿ. ಹೆಚ್. ಪಿ. ಯ ಕಟ್ಟಾ ಬೆಂಬಲಿಗನಾದ ನನ್ನ ಸೋದರ ಸಂಬಂಧಿಯೊಬ್ಬ ಹಿಂದೂಧರ್ಮಕ್ಕೆ ಮಿಷನರಿಗಳಿಂದ ಹಾನಿ ಆಗುತ್ತಿರುವುದರ ಬಗ್ಗೆ ನನಗೆ ಪತ್ರ ಬರೆದ. ಅವನಿಗೆ ನಾನು ಕೊಟ್ಟ ಉತ್ತರದಲ್ಲಿ ಇಬ್ಬರು ಹೆಂಗಸರ ಬಗ್ಗೆ ಬರೆದೆ. ಅವರಲ್ಲಿ ಒಬ್ಬಾಕೆ ನನ್ನ ಅಮ್ಮ; ಮತ್ತೊಬ್ಬರು ನೀವು (ಮೇರಿಯಾ ಆರೋರಾ ಕೌಟೋ). ನನ್ನ ಸೋದರ ಸಂಬಂಧಿಗೆ ನಾನು ಬರೆದೆ; ವೈಯಕ್ತಿಕವಾಗಿ ನಾನು ಚರಿತ್ರೆಯನ್ನು ಪ್ರತ್ಯಕ್ಷವಾಗಿ ನೋಡಬಯಸುತ್ತೇನೆ. ಆಯಿ ಇನ್ನೂ ಹುಡುಗಿಯಾಗಿದ್ದಾಗ ಮತ್ತು ಮರ್ಯಾದಸ್ಥ ಹಿಂದುಮನೆತನಗಳ ಹುಡುಗಿಯರ ಹೆಣ್ಣುಮಕ್ಕಳಿಗೆ ಶಿಕ್ಷಣದ ಅಗತ್ಯವಿಲ್ಲ ಎಂದು ಎಲ್ಲರೂ ಭಾವಿಸಿದ್ದಾಗ, ಪುಣೆಯಲ್ಲಿ ಕ್ರೈಸ್ತ ಮಿಷನರಿ ಸಿಸ್ಟರ್‌ಗಳು ತೆರೆದಿದ್ದ ಶಾಲೆಯಲ್ಲಿ ಮಾತ್ರ ಆಯಿ ತನ್ನ ಮೊದಲ ಪಾಠಗಳನ್ನು ಕಲಿಯಲು ಸಾಧ್ಯವಾಯಿತು. ಅಪ್ಪನಿಗೆ ಗದಗಕ್ಕೆ ವರ್ಗಾವಣೆ ಆದಾಗ, ಗದಗದಲ್ಲಿ ಹೆಮ್ಮಕ್ಕಳ ಶಾಲೆ ಇರಲಿಲ್ಲವಾಗಿ ಪುಣೆಯಲ್ಲಿ ಶಾಲೆ ನಡೆಸುತ್ತಿದ್ದ ಆ ಇಬ್ಬರು ಸಿಸ್ಟರ್‌ಗಳು, ಆಯಿಯನ್ನು ಪುಣೆಯಲ್ಲೇ ಉಳಿಯಬಿಡಲು ಅಜ್ಜನನ್ನು ಒತ್ತಾಯಿಸಿದರು. ಆಯಿ ಕಲಿಯುವುದರಲ್ಲಿ ತುಂಬಾ ಜಾಣೆ ಎಂದೂ ಆಕೆಯ ವಿದ್ಯಾಭ್ಯಾಸದ ಜವಾಬ್ದಾರಿಯನ್ನು ತಾವು ಹೊರುತ್ತೇವೆ ಎಂದೂ ಅವರು ದುಂಬಾಲುಬಿದ್ದು ಹೇಳಿದರು. ಆದರೆ ನನ್ನ ಅಜ್ಜ ಅವರ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಆಯಿಯನ್ನು ಅವರು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸುವರು ಎಂದು ಅಜ್ಜ ಹೆದರಿದ್ದರು. (ನೋಡು, ಕರ್ಮಠ ಹಿಂದು ಗ್ರಹಿಕೆಗಳು ನೂರುವರ್ಷ ಕಳೆದರೂ ಬದಲಾಗಿಲ್ಲ!)

''ಅದಾಗಿ ೫೦ ವರ್ಷಗಳು ಕಳೆದ ನಂತರ ಆ ಸಂಗತಿಯನ್ನು ಆಯಿ ನನ್ನೊಡನೆ ಹೇಳುವಾಗಲೂ ಅಳುತ್ತಿದ್ದಳು. ಆಯಿ ತನ್ನ ಜೀವಮಾನದ ಉದ್ದಕ್ಕೂ ಆದರ್ಶ ಮತ್ತು ಮಾದರಿ ಎಂದು ಗೌರವಿಸುತ್ತಿದ್ದುದು ಜಾತಿ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡ ಲಕ್ಷ್ಮೀಬಾಯಿ ತಿಲಕ್‌ರಂತಹ ಮಹಿಳೆಯರನ್ನು. ಇತ್ತೀಚೆ ಆರೋರಾ ಕೌಟೋ (ಕಾಲೇಜಿನಲ್ಲಿ ನನ್ನ ಸೋದರಿ ಪ್ರೇಮಕ್ಕಳ ಸಹಪಾಠಿ) ಲಂಡನ್‌ನಲ್ಲಿ ಕೆಲವು ದಿನ ನನ್ನ ಮನೆಯಲ್ಲಿ ತಂಗಿದ್ದರು. ಆಕೆ ಗೋವಾದ ಬಗ್ಗೆ ತನ್ನ ವೈಯಕ್ತಿಕ ಚರಿತ್ರೆ ಬರೆಯುತ್ತಿದ್ದಾರೆ. ಅವರು ತನ್ನ ಸಾರಸ್ವತ ಬ್ರಾಹ್ಮಣ ಕುಟುಂಬದ ಪೂರ್ವಿಕರನ್ನು ಪೋರ್ಚುಗೀಸರು ಬಲಾತ್ಕಾರದಲ್ಲಿ ಮತಾಂತರ ನಡೆಸಿದ್ದನ್ನು ಒಪ್ಪಿಕೊಳ್ಳುತ್ತಾರೆ. ಆದಾಗ್ಯೂ ಕೌಟೋ, ತಮ್ಮ ಪುಸ್ತಕದಲ್ಲಿ ಗೋವಾದ ಸಮಾಜ ೪೦೦ ವರ್ಷಗಳ ಪೋರ್ಚುಗೀಸ್ ಕ್ಯಾಥೊಲಿಕ್ ಪರಂಪರೆ ಹಾಗೂ ಆ ಶ್ರದ್ಧೆಯ ಭಾವನಾತ್ಮಕ ಬೌದ್ಧಿಕ ಮತ್ತು ಆಧ್ಯಾತ್ಮಿಕ ಸತ್ವಗಳನ್ನು ಮೈಗೂಡಿಸಿಕೊಂಡದ್ದನ್ನೂ ಕಾಣಿಸುತ್ತಾರೆ. ಇಂತಹ ಸಂಕೀರ್ಣ ಅಸ್ತಿತ್ವವಾದಿ ಅನುಭವಗಳನ್ನು ಈ ಕಾಲದ ವಿಷಪೂರಿತ ರಾಜಕೀಯ ಸಿದ್ಧಾಂತಗಳು ಅರಗಿಸಿಕೊಳ್ಳಲಾರವು.'' (ಪುಟ ೧೫೨,೧೫೩).

ಈಗ ಕೆಲವು ವರ್ಷಗಳ ಹಿಂದೆಯೇ ಗಿರೀಶ ಕಾರ್ನಾಡ ಈ ಮಾತುಗಳನ್ನು ಹೇಳಿದ್ದರೂ, ಅವು ಭೈರಪ್ಪನವರ ವಿಷಪೂರಿತ ಲೇಖನದ ಬಗ್ಗೆ ಮಾಡಿದ ವಿಮರ್ಶೆಯಂತಿವೆ !

ಜಿ.ರಾಜಶೇಖರ
ವಿಷ್ಣುಚಂದನ್, ಚಾಕೊಲೇಟ್ ಫ್ಯಾಕ್ಟರಿ ಬಳಿ
ಕೋಳಂಜೆ, ಉಡುಪಿ

'ಹೊಸತು' ಚಂದಾ ನೋಂದಣಿಗೆ ಮತ್ತು ಸದಭಿರುಚಿಯ ಪುಸ್ತಕಗಳಿಗೆ
ಕೆಳಕಂಡ ನವಕರ್ನಾಟಕ ಪುಸ್ತಕ ಪ್ರದರ್ಶನಗಳಿಗೆ ಭೇಟಿ ನೀಡಿ

ನವಕರ್ನಾಟಕ ಪುಸ್ತಕ ಪ್ರದರ್ಶನ
ಕಲಾಭವನದ ಆವರಣ, ಕಡಪಾ ಮೈದಾನ, ಧಾರವಾಡ - ೫೮೦ ೦೦೧

ನವಕರ್ನಾಟಕ ಪುಸ್ತಕ ಪ್ರದರ್ಶನ
ಬೀರಲಿಂಗೇಶ್ವರ ದೇವಸ್ಥಾನದ ಆವರಣ, ಪಿ.ಬಿ. ರಸ್ತೆ, ದಾವಣಗೆರೆ - ೫೭೭ ೦೦೧

ನವಕರ್ನಾಟಕ ಪುಸ್ತಕ ಪ್ರದರ್ಶನ
ಪುರಭವನದ ಆವರಣ, ಶ್ರೀ ಜಯಚಾಮರಾಜೇಂದ್ರ ವೃತ್ತ, ಮೈಸೂರು - ೫೭೭ ೦೦೧

ನವಕರ್ನಾಟಕ ಪುಸ್ತಕ ಪ್ರದರ್ಶನ
ಜಿಲ್ಲಾ ಕೇಂದ್ರ ಗ್ರಂಥಾಲಯದ ಆವರಣ, ಬಿ. ಎಚ್. ರಸ್ತೆ, ತುಮಕೂರು - ೫೭೨ ೧೦೧

ನವಕರ್ನಾಟಕ ಪುಸ್ತಕ ಪ್ರದರ್ಶನ
ದಿ ಕಾಡೋಜ಼್ ಲೈಬ್ರರಿ ಕಾಂಪೌಂಡ್, ಗಾಂಧಿವೃತ್ತ, ಸ್ಟೇಷನ್ ರಸ್ತೆ, ಗದಗ - ೫೮೨ ೧೦೧

ನವಕರ್ನಾಟಕ ಪುಸ್ತಕ ಪ್ರದರ್ಶನ
ಕಿತ್ತೂರ ಕಾಂಪ್ಲೆಕ್ಸ್, ದೇನಾ ಬ್ಯಾಂಕ್ ಬಳಿ, ಜುಬಿಲಿ ಸರ್ಕಲ್, ಧಾರವಾಡ - ೫೮೦ ೦೦೧

ನವಕರ್ನಾಟಕ ಪುಸ್ತಕ ಪ್ರದರ್ಶನ
ವಿಶ್ವೇಶ್ವರಯ್ಯ ವಸ್ತು ಸಂಗ್ರಹಾಲಯ, ಮೊದಲನೇ ಮಹಡಿ, ಕಸ್ತೂರಬಾ ರಸ್ತೆ, ಬೆಂಗಳೂರು - ೫೬೦ ೦೦೧

ನವಕರ್ನಾಟಕ ಪುಸ್ತಕ ಪ್ರದರ್ಶನ
ಸಾರ್ವಜನಿಕ ಶಿಕ್ಷಣ ಇಲಾಖೆ, ಉಪನಿರ್ದೇಶಕರ ಕಚೇರಿ ಆವರಣ, ಬಿ. ಬಿ. ರಸ್ತೆ, ಚಿಕ್ಕಬಳ್ಳಾಪುರ - ೫೬೨ ೧೦೧

# ಸಂಗೀತ ರಸಿಕನ ಡೈರಿ

ಶಾಂತಾ ನಾಗರಾಜ್

**ಈ** ದಿನ ಈ ಸಂಗೀತ ಕಛೇರಿಗೆ ಬರುವುದು ನನಗೆ ನಿಜವಾಗಿಯೂ ಇಷ್ಟವಿರಲಿಲ್ಲ. ಇದು ಹೇಳಿ ಕೇಳೀ ಹಿಂದೂಸ್ತಾನಿ ಸಂಗೀತ. ನನಗೆ ಚೆನ್ನಾಗಿ ಅರ್ಥವಾಗದ ಸಂಗೀತ. ಆದರೆ ನಮ್ಮ ಓಣಿಯ ಹುಡುಗರು ಬಿಡಬೇಕಲ್ಲ? ಹೊಸದಾಗಿ ಸಂಸ್ಥೆಯನ್ನು ಶುರು ಮಾಡಿದ್ದಾರೆ. ನಿನ್ನೆ ನನ್ನ ಕೈಲೇ ಉದ್ಘಾಟನೆಯನ್ನೂ ಮಾಡಿಸಿದ್ದಾರೆ. ನನ್ನ ಗೆಳತಿಯದೇ ಕರ್ನಾಟಕ ಸಂಗೀತದ ಕಛೇರಿ ಏರ್ಪಡಿಸಿ ಜಯಭೇರಿ ಬಾರಿಸಿದ್ದಾರೆ. ''ಆಂಟಿ, ನಾಳೆನೂ ನೀವು ಬರಲೇ ಬೇಕು. ನೀವು ಉತ್ತೇಜನ ಕೊಡದಿದ್ದರೆ ಮತ್ಯಾರು ಕೊಡುತ್ತಾರೆ ?'' ಎಂದು ಒತ್ತಾಯದ 'ನೋಟಿಸ್' ಬೇರೆ ಜಾರಿ ಮಾಡಿದ್ದಾರೆ. ಹೀಗಾಗಿ ಇಂದು ಇಲ್ಲಿದ್ದೇನೆ. ನಮ್ಮ ಜನಗಳಿಗೋ ಶಾಸ್ತ್ರೀಯ ಸಂಗೀತವೆಂದರೆ ಅಸಡ್ಡೆ. ನಿನ್ನೆಯಂತೆ ಇಂದೂ ಖಾಲಿ ಕುರ್ಚಿಗಳು ಭಣಗುಟ್ಟುತ್ತಿವೆ. ನಿನ್ನೆಯಂತೇ ನಿಧಾನವಾಗಿ ಕುರ್ಚಿಗಳು ತುಂಬಿಕೊಳ್ಳಲಿ ಎಂದು ಮನದಲ್ಲೇ ಹಾರೈಸುತ್ತೇನೆ. ಮೈಕ್‌ನವನ ಮೈಕ್ ಟೆಸ್ಟಿಂಗ್ ಒನ್ ಟು ತ್ರೀಗಳು, ಕೊಂಯ್ ಶಬ್ದ, ಕಿವಿಯೊಳಗೆ ಚೂರಿಯಂತೆ ಆಡುತ್ತಾ ಹಿಂಸೆಯನ್ನು ಹುಟ್ಟುಹಾಕುತ್ತಿದೆ. ನಮ್ಮ ಓಣಿಯ ಹುಡುಗರೋ ಪ್ರೀತಿಯಿಂದ ನನ್ನನ್ನು ಮುಂದಿನ ಸಾಲಿನ ಕುರ್ಚಿಯಲ್ಲಿ ಕಟ್ಟಿಹಾಕಿಬಿಟ್ಟಿದ್ದಾರೆ.

ಆಗ ಇದ್ದಕ್ಕಿದ್ದಂತೇ ಆ ವಾತಾವರಣವೇ ಝಗ್ಗನೆ ಪ್ರಕಾಶಮಾನವಾದಂತೆ ಆ ವೃದ್ಧರ ಆಗಮನವಾಗುತ್ತದೆ. ಸುಮಾರು ಎಂಬತ್ತರ ವಯಸ್ಸಿನ, ಸಪೂರ ಶರೀರದ, ಆಳ ಜ್ಞಾನ ತುಂಬಿದ ಕಣ್ಣುಗಳ, ಚೂಪು ಮೂಗಿನ ಬಿಳಿಯ ಬಣ್ಣದ ಆ ವೃದ್ಧರು ಈ ಇಳಿವಯಸ್ಸಿನಲ್ಲೂ ಸುಂದರರೂ ತೇಜಃಪುಂಜರೂ ಆಗಿದ್ದಾರೆ. ಅವರು ನನ್ನ ಪಕ್ಕದ ಒಂದು ಕುರ್ಚಿಯನ್ನು ಬಿಟ್ಟು, ಅದರ ಪಕ್ಕದಲ್ಲಿ ಕುಳಿತರು. ನಮ್ಮಿಬ್ಬರ ನಡುವಿನ ಖಾಲಿ ಕುರ್ಚಿಯಲ್ಲಿ ಕೆಂಪು ರಟ್ಟಿನ ಒಂದು ಡೈರಿ ಪುಸ್ತಕವನ್ನು ಇಟ್ಟರು. ನಾನು ಯಾರಿಗಾಗಿಯೋ ಸ್ಥಳವನ್ನು ಕಾದಿರಿಸುತ್ತಿದ್ದಾರೆ ಎಂದುಕೊಂಡೆ. ಅವರ ಆಗಮನವನ್ನು ಈ ಉತ್ಸಾಹೀ ತರುಣರು ಗಮನಿಸಲಿಲ್ಲ. ಅಂಗಳದ ಹಿಂದೆ ಯಾರೊಡನೆಯೋ ಮಾತಾಡುತ್ತಾ ನಿಂತಿದ್ದ ನಡುವಯಸ್ಸಿನ ಸಂಗೀತಗಾರರೊಬ್ಬರು ಇವರನ್ನು ಗಮನಿಸಿ ಧಡಧಡನೆ ಬಂದು ವೃದ್ಧರ ಪಾದಮುಟ್ಟಿ ನಮಸ್ಕರಿಸಿದರು. ವೃದ್ಧರು ಸಂಕೋಚದಿಂದ ಎದ್ದುನಿಂತರು. ನಮಸ್ಕರಿಸಿದಾತ 'ಕುಳಿತುಕೊಳ್ಳಿ' ಎಂದು ಉಪಚಾರ ಮಾಡಿ, ಆ ಹಿರಿಯರ ಎದುರು ಮತ್ತೇನೂ ಮಾತಾಡಲು ತೋಚದೆ ಮತ್ತೊಮ್ಮೆ ಕೈಮುಗಿದು, ತಮ್ಮ ಮೊದಲ ಸ್ಥಾನಕ್ಕೇ ಹೊರಟುಹೋದರು. ಆ ವೇಳೆಗೆ ಅತ್ಯಂತ ಧಡೂತಿಯಾದ ಒಬ್ಬ ವ್ಯಕ್ತಿಯ ಆಗಮನವಾಯಿತು. ಥೇಟ್ ಯಕ್ಷಗಾನದ ರಾವಣನಂತೆಯೇ ದಾಪುಗಾಲಿಡುತ್ತಾ ಇರುವ ಒಂದೇ ತಲೆಯನ್ನು ಹತ್ತೂ ಕಡೆಗೆ ಸುತ್ತಿಸುತ್ತಾ ಆತ ಆ ಅಂಗಳಕ್ಕೆ ಆಗಮಿಸಿದ ರೀತಿಯಲ್ಲೇ ಎಲ್ಲರ ಗಮನ ತನ್ನೆಡೆಗೆ ಎಳೆಯುವ ಹುನ್ನಾರ ಕಾಣಿಸುತ್ತಿತ್ತು. ಆತನ ಹಿಂದೆ ಅವನ ಅಭಿಮಾನಿಗಳ ತಂಡವೇ ಇತ್ತು. ಆತನೂ ಅವನ ತಂಡವೂ ಮುಂದಿನ ಎಲ್ಲ ಸೀಟುಗಳನ್ನೂ ಆಕ್ರಮಿಸಿಬಿಟ್ಟರು. ನಾನು ಕಕ್ಕಾಬಿಕ್ಕಿಯಾಗಿ ನೋಡುತ್ತೇನೆ, ಆವರೆಗೂ ಆ ಆವರಣಕ್ಕೇ ನೂರು ಕ್ಯಾಂಡಲ್ ಬಲ್ಬಿನಂದದಿ ಪ್ರಭೆಯನ್ನು ಬೀರಿದ ಆ ವೃದ್ಧರು ಯಾವುದೋ ಮಾಯದಲ್ಲಿ ಕಣ್ಮರೆಯಾಗಿ ಬಿಟ್ಟಿದ್ದರು. ''ಆಂಟೀ ಇದು ನಿಮ್ಮದೇ ? ಇಲ್ಲಿ ಯಾರಾದರೂ ಬರುತ್ತಾರಾ ?'' ಈ ಎರಡೂ ಪ್ರಶ್ನೆಗಳು ನನ್ನನ್ನು ವಾಸ್ತವಕ್ಕಿಳಿಸಿತು. ಆ ಹುಡುಗ ಕೈಲಿ ಕೆಂಪು ಬಣ್ಣದ ಡೈರಿ ಹಿಡಿದು ನಿಂತಿದ್ದ.

''ಆಂ ? ಇದು ನನ್ನದಲ್ಲ, ಆ ಮುದುಕರದು. ಎಲ್ಲಿ ಹೋದರು ಅವರು ?'' ನಾನು ಕನಸಿನಲ್ಲೆಂಬಂತೆ ಕನವರಿಸಿದೆ. ''ಎಲ್ಲೋ ಗೊತ್ತಿಲ್ಲ ಆಂಟಿ. ನೀವೇ ಅವರಿಗೆ ಕೊಡಿ'' ಎನ್ನುತ್ತಾ ಆ ಡೈರಿಯನ್ನು ನನ್ನ ತೊಡೆಯ ಮೇಲಿರಿಸಿ, ಡೈರಿ ಆಕ್ರಮಿಸಿದ ಕುರ್ಚಿಯನ್ನು ತಾನು ಆಕ್ರಮಿಸಿಕೊಂಡ ಹುಡುಗ. ಈಗ ಡೈರಿ ನನ್ನ ತೊಡೆಯ ಮೇಲೆ ಬೆಚ್ಚಗೆ ಆವರಿಸಿತು.'ಆತ ಇದೀಗ ಎದ್ದು ಹೋಗಿದ್ದಾರೆ ಇಲ್ಲೇ ಎಲ್ಲೋ ಇರಬಹುದು ಕೊಟ್ಟೇಬಿಡೋಣ' ಎನಿಸಿ ಅಲ್ಲಿಂದೆದ್ದು ಹೊರಬಂದೆ. ಅಂಗಳವನ್ನೆಲ್ಲಾ ಸುತ್ತಿದೆ. ರಸ್ತೆಯಲ್ಲೂ ಕಣ್ಣಾಡಿಸಿದೆ. ವೃದ್ಧರ ಸುಳಿವಿಲ್ಲ! ಹೊಸದೊಂದು ಜವಾಬ್ದಾರಿ ಹೆಗಲೇರಿದಂತೆ ಮೈಯೆಲ್ಲಾ ಭಾರವೆನಿಸಿತು. ಈ ಕಾರ್ಯಕ್ರಮವನ್ನು ಸಂಘಟಿಸುತ್ತಿರುವ ಹುಡುಗರ ಕೈಲೇ ಕೊಟ್ಟು ಕೈತೊಳೆದುಕೊಳ್ಳೋಣವೆಂದು



ಒಂದಿಬ್ಬರನ್ನು ಕೇಳಿದೆ. ''ಯಾವ ಮುದುಕರು ಆಂಟಿ? ನಾವು ಯಾರನ್ನೂ ನೋಡಲಿಲ್ಲವಲ್ಲ? ಆ ಡೈರಿಯಲ್ಲೇ ನೇಮು ಅಡ್ರೆಸ್ಸು ಇರತ್ತೆ ನೋಡಿ, ನೀವೇ ತಲುಪಿಸಿಬಿಡಿ'' ಎಂದು ಹಾರಿಕೆಯ ಉತ್ತರವಿತ್ತು ಜಾರಿಕೊಂಡರು ಕಿಲಾಡಿಗಳು. ವಿಧಿಯಿಲ್ಲದೆ ಡೈರಿ ನನ್ನ ಮನೆಯ ಟೇಬಲ್ಲಿನ ಮೇಲೆ ವಿರಾಜಮಾನವಾಯಿತು.

ಮರುದಿನ ಬೆಳಗಿನ ಎಲ್ಲ ಕೆಲಸಗಳನ್ನು ಮುಗಿಸಿ ವಿರಾಮ ಸಿಕ್ಕಾಗ ಈ ಡೈರಿಯನ್ನು ಹಿಡಿದುಕೊಂಡೆ. ಮತ್ತೊಬ್ಬರ ಡೈರಿ ಒಳಪುಟಗಳನ್ನು ಓದಬಾರದು ಎನ್ನುವ ಎಚ್ಚರ, ಆದರೆ ವಿಳಾಸ ಫೋನ್ ನಂಬರ್ ಇವುಗಳನ್ನು ಪತ್ತೆ ಮಾಡಲಾದರೂ ಪುಟಗಳನ್ನು ತೆರೆಯಲೇಬೇಕಲ್ಲ – ಎನ್ನುವ ಅನಿವಾರ್ಯ! ಅರೆ ಮನಸ್ಸಿನಿಂದಲೇ ಪುಟ ತೆರೆದೆ. ಆಶ್ಚರ್ಯ!! ಮೊದಲ ಪುಟದ ಎಲ್ಲ ಕಾಲಂಗಳೂ ಖಾಲಿಖಾಲಿ! ಹೆಸರಿಲ್ಲ, ವಿಳಾಸವಿಲ್ಲ, ಫೋನ್ ನಂಬರ್ ಇಲ್ಲ. ಇದನ್ನು ಹೇಗೆ ಇದರ ಒಡೆಯರಿಗೆ ತಲುಪಿಸುವುದು ? ಚಿಂತೆಯಾಯಿತು. ನನಗ್ಯಾಕೆ ಬೇಕಿತ್ತು ಇದರ ಉಸಾಬರಿ ? ನನಗೆ ಗೊತ್ತಿಲ್ಲವೆಂದು ಅಲ್ಲೇ ಇದನ್ನು ಇಟ್ಟು ಬರಬೇಕಿತ್ತು ಎಂದುಕೊಂಡೆ. ಆದರೂ ಏಕೋ ಈ ಡೈರಿ ಏನೋ ಸಂದೇಶವನ್ನೇ ಹೇಳುತ್ತಿದೆ ಎನಿಸಿತು. ಮಕ್ಕಳು ಮಾಡುವಂತೆ ಎಲ್ಲ ಪುಟಗಳನ್ನೂ ಎಡಗೈ ಹೆಬ್ಬೆರಳಿನಿಂದ ಒಮ್ಮೆ ಬೀಸಣಿಕೆಯ ಹಾಗೆ ಜಾರಿಸಿದೆ. ನನ್ನ ಕಾಲಬಳಿ ಪಟ್ಟೆಂದು ಒಂದು ಪುಟ್ಟ ಮಡಿಸಿದ ಕಾಗದ ಬಿತ್ತು. ಬಗ್ಗಿ ತೆಗೆದು ನೋಡಿದೆ. ಆಶ್ಚರ್ಯ! ಅದರ ಮೇಲೆ ನನ್ನ ಹೆಸರಿದೆ!! 'ಎಲ ಎಲಾ ಮುದುಕರೇ, ಇದು ಪೂರ್ವನಿಯೋಜಿತವೇ' ? ಒಂದು ಉದ್ಗಾರ ಅಯಾಚಿತವಾಗಿ ಹೊರಬಂತು. ಕಥೆ ಹೇಳಲು ಹೊರಟ ಮಾಯದ ಮುದುಕಿಯಂತೆ ಆ ಕೆಂಪು ಡೈರಿ ಟೇಬಲ್ಲಿನ ಮೇಲೆ ನಸುನಗುತ್ತಿತ್ತು. ಡಾಕ್ಟರ್ ಬಳಸುವಂಥಾ ಪುಟ್ಟ ಸ್ಕ್ರಿಬ್ಲಿಂಗ್ ಪ್ಯಾಡ್‌ನಿಂದ ಹರಿದ ಪುಟ್ಟ ಕಾಗದವದು. ನಾಲ್ಕು ಮಡಿಕೆ ಮಡಿಸಿದ್ದು. ಮೆಲ್ಲಗೆ ಬಿಡಿಸಿ ನೋಡಿದೆ. ''ಮಾನ್ಯ ಲೇಖಕಿಯವರೇ, ನನಗೆ ಈ ಡೈರಿಯನ್ನು ವಾಪಸ್ ಕೊಡಬೇಕಾಗಿಲ್ಲ, ನಿಮಗೆ ಬೇಕಾದಂತೆ ಬಳಸಿಕೊಳ್ಳಬಹುದು'' ಎನ್ನುವ ಒಂದೇ ಸಾಲಿನ ಸಂದೇಶ!! 'ಅಲ್ಲ? ನಾನ್ಯಾಕೆ ಇದನ್ನು ಬಳಸಿಕೊಳ್ಳಲಿ? ಏನಿದೆ ಇದರಲ್ಲಿ?' ಪ್ರಶ್ನೆಗಳ ಸುರಿಮಳೆ ತಲೆಯಲ್ಲಿ. ಈಗ ಕುಳಿತು ಡೈರಿಯನ್ನು ತಿರುವುಹಾಕಲೇಬೇಕಾಯಿತು.

ಪ್ರಾರಂಭದ ನಾಲ್ಕು ಪುಟಗಳಲ್ಲಿ ಏನೂ ಬರೆದೇ ಇಲ್ಲ. ನಂತರದ ಹಾಳೆಯ ಗುಂಡನೆ ಮುತ್ತು ಪೋಣಿಸಿದಂಥಾ ಅಕ್ಷರಗಳಲ್ಲಿ ಒಂದು ಸೂಚನೆಯೆನ್ನುವಂಥ ಆದೇಶವನ್ನು ಬರೆಯಲಾಗಿದೆ.

'ನನಗೆ ಇತ್ತೀಚೆಗೆ ಸಂಗೀತವಿಮರ್ಶೆಗಳನ್ನು ಬರೆಯುವ ಮನಸ್ಸಿಲ್ಲ. ಏಕೆಂದ ಇಂದಿನ ಕಲಾವಿದರಿಗೆ ವಿಮರ್ಶೆಯನ್ನು ಸ್ವೀಕರಿಸಿ, ತಮ್ಮನ್ನು ತಿದ್ದಿಕೊಳ್ಳಬೇಕೆಂ ಜಾಯಮಾನವೇ ಇಲ್ಲ. ಜೊತೆಗೆ ಇಂದಿನ ಸಂಗೀತ ನನ್ನ ದೃಷ್ಟಿಯಲ್ಲಿ ಶಾಸ್ತ್ರೀ ಸಂಗೀತವೇ ಅಲ್ಲ. ಬರೀ ಅನುಕರಣೆ ಅಥವಾ ಸಪ್ತಸ್ವರಗಳ ಸರ್ಕಸ್!! ಆದರೂ ಐವತ್ತು ವರ್ಷಗಳ ಕಾಲ ವಿಮರ್ಶೆ ಬರೆದ ಅನುಭವ ಬರೆಯಲು ಪ್ರಚೋದಿಸುತ್ತದೆ ಬೆರಳುಗಳು ಬೇಡಬೇಡವೆಂದರೂ ಪೆನ್ ಹಿಡಿಯುತ್ತವೆ. ಇದೀಗ ನನಗೆ ಯಾ ಪತ್ರಿಕೆಯ ಹಂಗೂ ಇಲ್ಲದ್ದರಿಂದ ಹೆಚ್ಚು ವಸ್ತುನಿಷ್ಠವಾಗಿ, ನನಗೆ ಬರೆಯಲೆ ಬೇಕೆನಿಸಿದಾಗ ಮಾತ್ರ ಬರೆದಿದ್ದೇನೆ. 'ಇದು ಮುಂದೆ ಯಾರಾದರೂ ಸಹೃದಯ ಕಣ್ಣಿಗೆ ಬೀಳಬಹುದು. ಅವರು ಇದನ್ನು ಜಗತ್ತಿಗೆ ತಿಳಿಸಲಿ' ಎನ್ನುವ ಏಕೈಕ ಆಸೆಯಿಂದ.'

ನನಗೆ ಯಾವುದೇ ಸಂಗೀತದ ಬಗ್ಗೆ ಸ್ಮರಣೆ ಬಂದಾಗಲೂ ಆ ಪುಟ್ಟ ಹುಡುಗ ನೆನಪು ಕಾಡುತ್ತದೆ. ಜೊತೆಗೆ ಅವನ ಸಂಗೀತವೂ!! ಸಣ್ಣವಯಸ್ಸಿಗೆ ವೇಣುವಾದನವೆನ್ನುವುದು ಎಂಥಾ ಪ್ರೌಢರೀತಿಯಲ್ಲಿ ಒಲಿದಿತ್ತು ಆತನಿಗೆ! ಭಗವಂ ಅವನಿಗೆ ಒಂದು ಕೈಯಲ್ಲಿ ಸಂಗೀತ ಸಾಗರವನ್ನೇ ಕರುಣಿಸಿಬಿಟ್ಟ, ಮತ್ತೊಂದು ಕೈಯಲ್ಲಿ ಅವನ ಆಯುಷ್ಯವನ್ನು ಯಾಕೆ ಕಸಿದುಕೊಂಡನೋ? ಕ್ರೂರಿ! ನನಗಿಂದಿಗೂ ನೆನಪಿದೆ. ಮೊಟ್ಟಮೊದಲ ಬಾರಿಗೆ ನನಗಾದ ಆ ಅಪೂರ್ವ ಅನುಭವ. ಅದು ದೈವಿಕವಾದ್ದು, ಅನಪೇಕ್ಷಿತವಾಗಿ, ಅಪ್ರಯತ್ನಪೂರ್ವಕವಾಗಿ ನನಗೆ ಲಭಿಸಿದ್ದು. ಇಂಥಾ ಅನುಭವಗಳನ್ನು ಸಿದ್ಧರ ಮತ್ತು ತಪಸ್ವಿಗಳ ಚರಿತ್ರೆಯಲ್ಲಿ ಓದ ತಿಳಿದಿದ್ದೆ. ಈ ಪುಟ್ಟ ಮಗು ಅಂದು ಅಂಥಾ ಒಂದು ಅನುಭೂತಿಯನ್ನು ನನಗೆ ಅಯಾಚಿತವಾಗಿ ಕರುಣಿಸಿಬಿಟ್ಟಿತು. ಅಂದಿನ ಅನೂಹ್ಯ ರೋಮಾಂಚನ ಇಂದಿಗೂ







**ಶುಭಾಶಯಗಳೊಂದಿಗೆ**

# ಲಂಕೇಶ್ ಪ್ರಕಾಶನ

ನಂ. 9, ಇ.ಎ.ಟಿ. ರಸ್ತೆ, ಬಸವನಗುಡಿ, ಬೆಂಗಳೂರು–560 004. ಫೋನ್ : 26676427

*ಪಿ. ಲಂಕೇಶ್ ಅವರ ಕೆಲವು ಜನಪ್ರಿಯ ಕೃತಿಗಳು*

| ಶೀರ್ಷಿಕೆ | ಮಾಧ್ಯಮ | ಬೆಲೆ |
|---|---|---|
| ಟೀಕೆ-ಟಿಪ್ಪಣಿ 2 | ಸಮಕಾಲೀನ ಬರಹಗಳು | 120 |
| ಟೀಕೆ-ಟಿಪ್ಪಣಿ 3 | ಸಮಕಾಲೀನ ಬರಹಗಳು | 200 |
| ಸಾಹಿತಿ-ಸಾಹಿತ್ಯ | ಸಮಕಾಲೀನ ಬರಹಗಳು | 300 |
| ರೂಪಕ ಲೇಖಕರು | ಪ್ರಸಿದ್ಧ ಲೇಖಕರ ಬದುಕು-ಬರಹ | 70 |
| ಕಂಡದ್ದು ಕಂಡಹಾಗೆ | ಸಮಕಾಲೀನ ಬರಹಗಳು | 125 |
| ಪ್ರಸ್ತುತ | ಸಮಕಾಲೀನ ಬರಹಗಳು | 80 |
| ಹುಳಿಮಾವಿನ ಮರ | ಆತ್ಮಕಥೆ | 200 |
| ಮುಸ್ಸಂಜೆಯ ಕಥಾ ಪ್ರಸಂಗ | ಕಾದಂಬರಿ | 200 |
| ಅಕ್ಕ | ಕಾದಂಬರಿ | 80 |
| ಮಂಜು ಕವಿದ ಸಂಜೆ | ಕಥಾ ಸಂಕಲನ | 85 |
| ಕಲ್ಲು ಕರಗುವ ಸಮಯ | ಕಥಾ ಸಂಕಲನ | 125 |
| ಉಮಾಪತಿಯ ಸ್ಕಾಲರ್‌ಶಿಪ್ ಯಾತ್ರೆ ಮತ್ತು ಇತರ ಕಥೆಗಳು | ಕಥಾ ಸಂಕಲನ | 70 |

| ಶೀರ್ಷಿಕೆ | ಮಾಧ್ಯಮ | ಬೆಲೆ |
|---|---|---|
| ನಾನಲ್ಲ | ಕಥಾ ಸಂಕಲನ | 70 |
| ಕೆರೆಯ ನೀರನುಕೆರೆಗೆ ಚೆಲ್ಲಿ | ಕಥಾ ಸಂಕಲನ | 60 |
| ಉಲ್ಲಂಘನೆ | ಕಥಾ ಸಂಕಲನ | 80 |
| ನೀಲು ಕಾವ್ಯ | ಕಾವ್ಯ ಸಂಕಲನ | 150 |
| ಪಾಪದ ಹೂವುಗಳು | ಕವನ ಸಂಕಲನ | 60 |
| ಸಂಕ್ರಾಂತಿ | ನಾಟಕ | 45 |
| ತೆರೆಗಳು | ನಾಟಕ | 35 |
| ಈಡಿಪಸ್ ಮತ್ತು ಅಂತಿಗೊನೆ | ನಾಟಕ | 80 |
| ಟಿ. ಪ್ರಸನ್ನನ ಗೃಹಸ್ಥಾಶ್ರಮ | ನಾಟಕ | 35 |
| ಗುಣಮುಖ | ನಾಟಕ | 60 |
| ಕ್ರಾಂತಿ ಬಂತು ಕ್ರಾಂತಿ | ನಾಟಕ | 30 |
| ದರವೇಶಿ ಕತೆಗಳು ( ಅನು. : ಗೌರಿ ಲಂಕೇಶ್) | ಕತೆಗಳು | 90 |





ನನ್ನ ನರನಾಡಿಗಳಲ್ಲಿ ಮಿಡಿಯುತ್ತದೆ.

ಅಂದು ಆ ಮಗುವಿನ ಕೊಳಲಲ್ಲಿ 'ಬಿಲಹರಿ' ಕೇಳುತ್ತಿದ್ದೆ!! ಬಿಲಹರಿ ನನ್ನ ಮೆಚ್ಚಿನ ರಾಗ. ಅದೊಂದು ಪುಟ್ಟ ಪೆಂಡಾಲ್. ಅಲ್ಲಿ ಸಾಕಷ್ಟು ಜನ ಸೇರಿದ್ದರು. ಆ ಹುಡುಗನ ಜನಪ್ರಿಯತೆ ಆಗಲೇ ಮನೆಮಾತಾಗಿತ್ತು. ಪೆಂಡಾಲಿನಲ್ಲಿ ಜಾಗ ಇಲ್ಲದ್ದರಿಂದ ಹೊರಗೆ ಬೀದಿಯಲ್ಲಿ ಜನಸಾಗರವೇ ಜಮಾಯಿಸಿತ್ತು. ನಾನು ಮುಂದಿನ ಸೀಟಿನಲ್ಲೇ ಆಸೀನನಾಗಿದ್ದೆ. ರಾಗ ಕೇಳುತ್ತಾ ಕೇಳುತ್ತಾ ನನ್ನ ಒಳಗಣ್ಣಿನ ಚಿತ್ರಪಟಲದ ಮೇಲೆ ನಾನು ಬೇಲೂರಿನ ಚೆನ್ನಿಗರಾಯಸ್ವಾಮಿ ದೇವಾಲಯದ ಆವರಣದಲ್ಲಿ ದೇವರಿಗೆ ಮುಖಮಾಡಿ ನಿಂತಿದ್ದೇನೆ. ನನ್ನ ಬಲಪಕ್ಕದಿಂದ ಒಂದು ಪುಟ್ಟ ಉತ್ಸವಮೂರ್ತಿಯ ಮೆರವಣಿಗೆ ಬರುತ್ತಿದೆ. ಆರೇ ಜನ ಜರಿ ಅಂಚಿನ ಬಿಳಿ ಪಂಚೆಯುಟ್ಟು ಅಡ್ಡಪಲ್ಲಕ್ಕಿಯನ್ನು ಹೊತ್ತು ಬರುತ್ತಿದ್ದಾರೆ!! ಏನಾಶ್ಚರ್ಯ ಉತ್ಸವದ ಮುಂದೆ ನಾದಸ್ವರವಿಲ್ಲ! ಬದಲಿಗೆ ಈತನ ಕೊಳಲವಾದನ ಇಡೀ ಪರಿಸರವನ್ನೆಲ್ಲಾ ತುಂಬಿದೆ!! ಬೆಚ್ಚಿಬಿದ್ದು ಕಣ್ಣು ಬಿಡಲೇ? ಇಲ್ಲ ನಾನು ಕಣ್ಣುಬಿಟ್ಟುಕೊಂಡೇ ಕುಳಿತಿದ್ದೇನೆ. ಇಲ್ಲಿ ಹೊರಡುತ್ತಿರುವ ಸ್ವರಮಾಧುರ್ಯ ನನ್ನ ಮನದಾಳದಲ್ಲಿ ಏನೇನೋ ಚಿತ್ರಗಳನ್ನು ಕಲ್ಪಿಸುತ್ತಿದೆ. ಸಂಗೀತ ಮಾಡಬಹುದಾದ ಅತ್ಯುನ್ನತ ಅನುಭೂತಿಯ ಅನುಭವವಿದು!! ಅದಕ್ಕೇ ಅಲ್ಲವೇ ಇದನ್ನು ಗಂಧರ್ವ ಕಲೆಯೆನ್ನುವುದು? ಎಷ್ಟು ಜನರ ಮನದ ದುಗುಡಗಳನ್ನೆಲ್ಲಾ ನಿವಾರಿಸಿಬಿಡುವ ಶಕ್ತಿ ಇತ್ತು ಈ ಮಗುವಿಗೆ? ಆದರೆ ದೇವರು ತುಂಬಾ ಕಠೋರಿ. ಹುಡುಗನಿಗೆ ಅರ್ಧ ಆಯುಷ್ಯವನ್ನು ಮಾತ್ರ ಕರುಣಿಸಿದ, ಪರಿಪೂರ್ಣ ಕಲೆಯನ್ನೂ ಕೊಟ್ಟ. ಈಗ ಬಹುಶಃ ತನ್ನ ಓಲಗದಲ್ಲೇ ಹುಡುಗನ ಸಂಗೀತವನ್ನು ಆಲಿಸುತ್ತಿದ್ದಾನೇನೋ?

(೧) ದಿನಾಂಕ: ಅಗತ್ಯವಿಲ್ಲ

ಕಲಾವಿದೆಯ ಹೆಸರು: ಇದೂ ಅಗತ್ಯವಿಲ್ಲ

'ಈ ಮಹಾತಾಯಿ ತನ್ನನ್ನು ತಾನು ಸಂಗೀತ ಕ್ಷೇತ್ರದ ಉದ್ಧಾರಕಿ ಎಂದೇ ಭಾವಿಸಿದ್ದಾಳೆ. ಇದುವರೆವಿಗೂ ಪರ ಊರಿನಲ್ಲಿ ರಾಜ್ಯಭಾರ ಮಾಡುತ್ತಿದ್ದಳಂತೆ. ಇದೀಗ ಈಕೆ ಬೆಂಗಳೂರನ್ನು ಉದ್ಧಾರ ಮಾಡಲು ಆಗಮಿಸಿದ್ದಾಳಂತೆ. ಹಾಗಂತ ಆಕೆ ಯಾರೊಂದಿಗೋ ಹೇಳಿಕೊಂಡಿದ್ದನ್ನು ಅವರು ನನಗೆ ತಿಳಿಸಿದರು. ಪುರೋಹಿತರಿಗೆ ಮಂತ್ರಕ್ಕಿಂತಾ ಉಗುಳೇ ಹೆಚ್ಚು ಎನ್ನುವ ಕನ್ನಡ ಗಾದೆಯಂತೆ ಈಕೆ ಹಾಡುವುದಕ್ಕಿಂತಾ ಬೆಡಗುಗಳೇ ಅಧಿಕ. ಮೈಕ್ ಸರಿಯಾಗಿ ಇಡಿ, ಸ್ಪೀಕರ್ ಹಿಂದೆಯೂ ಇಡಿ, ಫೀಡ್‌ಬ್ಯಾಕ್ ಸರಿಯಾಗಿಲ್ಲ, ಒಂದೇ ಎರಡೇ ಇವಳ ಪಿರುಕಣೆ? ಈಕೆ ಸಂಗೀತ ಶುರು ಮಾಡುವಷ್ಟರಲ್ಲಿ ಸಂಘಟಕರನ್ನು ವೇದಿಕೆಯ ಸುತ್ತ ಮೂರು ಸುತ್ತು ಕುಣಿಸಿರುತ್ತಾಳೆ. ಇವತ್ತೂ ಹಾಗೆಯೇ ಥಕಧಿಮಿಯಾಯಿತು. ವರ್ಣದಲ್ಲೇ ಎರಡು ಸಲ ತಾಳ ತಪ್ಪಿದಳು. ಆಲಾಪನೆಯಲ್ಲಿ ಅನವಶ್ಯಕವಾಗಿ ಹೆಚ್ಚು ಬಾರಿ ಕಳ್ಳ ಧ್ವನಿಯನ್ನು ಬಳಸಿದಳು. ಹಾಕುವ ಸ್ವರಗಳೋ ಅದೇ ಹಳಸಲು ಮಾದರಿ. ಹೊಸದೇನೂ ಈಕೆಯಲ್ಲಿ ಹುಟ್ಟುವುದೇ ಇಲ್ಲ. ಅಂಗಚೇಷ್ಟೆಗಳು ವಿಪರೀತ. ನನ್ನ ಪಕ್ಕದಲ್ಲಿ ಒಂದು ಹತ್ತು ವರ್ಷದ ಹೆಣ್ಣು ಮಗು ಕುಳಿತಿದೆ. ಮೊದಲು ಮುದ್ದಾಗಿ ತಾಳ ಹಾಕುತ್ತಿತ್ತು. ಈಗ ಆಕಳಿಸುತ್ತಿದೆ. ಅದರ ಪಕ್ಕ ಮಗುವಿನ ಅಜ್ಜಿ, ಅಜ್ಜಿಯ ಪಕ್ಕ ಈ ಹೆಣ್ಣುಮಗುವಿನ ತಮ್ಮನಿರಬೇಕು, ತುಂಟನಿದ್ದಾನೆ. ಪಿಸುಮಾತಿನಲ್ಲಿ ಅಜ್ಜಿಗೆ ತೊಂದರೆ ಕೊಡುತ್ತಿದ್ದಾನೆ. ಹೆಣ್ಣುಮಗು ಮೆಲ್ಲನೆ ಹೇಳಿತು ''ಅಜ್ಜಿ, ಮನೆಗೆ ಹೋಗೋಣ.'' ಅಜ್ಜಿ ಪಿಸುಮಾತಿನಲ್ಲೇ ಗದರಿಸಿದರು: ''ಇಬ್ಬರೂ ಸಂಗೀತ ಕಲೀತೀರಿ? ಒಳ್ಳೆ ಸಂಗೀತ ಕೇಳಲೂ ಬೇಕು ಗೊತ್ತಾ?'' ಹೆಣ್ಣು ಅಲವತ್ತುಕೊಂಡಿತು. ''ಒಳ್ಳೆ ಸಂಗೀತ ಕೇಳಬೇಕು ಗೊತ್ತು ಅಜ್ಜೀ. ಆದ್ರೆ ಇದೆಂಥಾ ಒಳ್ಳೆ ಸಂಗೀತ? ಇವರು ಬರೀ ಮೂಗಲ್ಲೇ ಹೇಳ್ತಾ ಇದಾರೆ?'' ತುಂಟ ತಕ್ಷಣ ತನ್ನ ಧ್ವನಿಯನ್ನೂ ಸೇರಿಸಿದ, ''ಹೌದು ಅಜ್ಜೀ ಒಂದೊಂದು ಸರ್ತಿ ಇವ್ರು ಬರೀ ಕಣ್ಣಲ್ಲೂ ಹಾಡ್ತಾರೆ''... ಈಕೆಯ ಸಂಗೀತಕ್ಕೆ ಈ ಮಕ್ಕಳ ಮಾತಿಗಿಂತಾ ಹೆಚ್ಚಿನ ವಿಮರ್ಶೆಯ ಅಗತ್ಯವಿಲ್ಲವೆನಿಸುತ್ತದೆ.

(೨) ದಿನಾಂಕ ಕಲಾವಿದ ಎರಡೂ ಯಥಾಪ್ರಕಾರ ದಾಖಲಿಸುವ ಅಗತ್ಯವೇ ಇಲ್ಲ

'ರಾವಣನಿಗೆ ಕುಂಭಕರ್ಣ ವಿಭೀಷಣರೇ ಅಲ್ಲದೆ ಥೇಟ್ ರಾವಣನಂಥಾ ತಮ್ಮನೇನಾದರೂ ಇದ್ದಿದ್ದರೆ ಅವನು ಈ ಕಲಾವಿದನಂತೇ ಇರುತ್ತಿದ್ದ. ಈತನಿಗೆ ಕಿರೀಟ, ಭುಜಕೀರ್ತಿ ಯಾವುದೂ ಇಲ್ಲದೇ ರಾವಣನ ನೆನಪನ್ನು ತಂದುಕೊಡುತ್ತಾನೆ. ಧ್ವನಿಯೂ ಅಷ್ಟೇ ಸಾ... ಎಂದು ರಾಗ ತೆಗೆದರೆ ಸಾಕು ನಾಲ್ಕು ಕತ್ತೆಗಳು ಒಟ್ಟಿಗೇ ಅರಚಿದಂತೆ!! ಅಷ್ಟೊಂದು ಸುಮಧುರ!! ಆದರೂ ಈತ ಅದ್ವಿತೀಯ ಸಂಗೀತಗಾರ. ಹಾಗಂತ ತನ್ನನ್ನು ತಾನೇ ಬಹಳ ಚೆನ್ನಾಗಿಯೇ ಪ್ರೊಜೆಕ್ಟ್ ಮಾಡಿಕೊಂಡಿದ್ದಾನೆ. ಸ್ವಂತಿಕೆಯೆನ್ನುವುದು ಸೂಜಿಮೊನೆಯಷ್ಟೂ ಇಲ್ಲ. ಇವನಿನ್ನೂ ದ್ವಂದ್ವಗಾಯನದ ಸರ್ಕಸ್ ಮಾಡುತ್ತಿದ್ದ ಕಾಲ. ಒಂದು ಸಂಗೀತದ ವಿಚಾರಸಂಕಿರಣದಲ್ಲಿ ನನ್ನ ಪಕ್ಕವೇ ಕುಳಿತಿದ್ದ. ನಾನಿನ್ನೂ ಪತ್ರಿಕೆಗಳಿಗೆ ಬರೆಯುತ್ತಿದ್ದೆ ಆಗ. ಬಹಳ ನಯ ವಿನಯಗಳನ್ನು ಪ್ರದರ್ಶಿಸಿದ. ವೇದಿಕೆಯ ಮೇಲೆ ದಾಸಸಾಹಿತ್ಯದ ಬಗ್ಗೆ ಮಾತನಾಡುತ್ತಿದ್ದ ವಿದ್ವಾಂಸರು 'ಸನ್ಯಾಸಿಗಳಾದರೂ ದೇವರನಾಮಗಳನ್ನು ರಚಿಸಿದ' 'ಯತಿ' ಹೆಸರಿನ ಸನ್ಯಾಸಿಗಳ ಬಗ್ಗೆ ಹೇಳಿದರು. ಇವನು ಪೆದ್ದುಪೆದ್ದಾಗಿ ''ಯಾರು ಸಾರ್ ಆ ಸನ್ಯಾಸಿಗಳು? ಅವರೇನೇನು ಬರೆದಿದ್ದಾರೆ?'' ಎಂದು ಕೇಳಿದ. ನಾನು ಬಹಳ ಉತ್ಸಾಹದಿಂದ ಆ ಯತಿಗಳ ಬಗ್ಗೆ ಅಲ್ಪಸ್ವಲ್ಪ ವಿವರಣೆ ನೀಡಿ ಅವನ ಮುಖ ನೋಡುತ್ತೇನೆ! ಅವನಿಗೆ ನನ್ನ ಮಾತಿನ ಕಡೆಗೆ ಲಕ್ಷ್ಯವೇ ಇಲ್ಲ! 'ಹೂಂ ಹೂಂ' ಎನ್ನುತ್ತಿದ್ದಾನೆ ಅಷ್ಟೆ, ಆದರೆ ಅವನ ಕಣ್ಣುಗಳು ಯಾರನ್ನೋ ಹುಡುಕುತ್ತಿವೆ. ಮತ್ತೆ ಯಾರನ್ನೋ ನೋಡಿ ಹಲ್ಲು ಕಿಸಿಯುತ್ತಿದ್ದಾನೆ. ಅಂದು ನನ್ನ ಮೇಲೇ ನನಗೆ ಕೋಪ ಬಂತು. ಇಂಥಾ ಮೂರ್ಖನಿಗೆ ಆ ಯತಿಗಳ ಬಗ್ಗೆ ಅದೆಷ್ಟು ಭಯಭಕ್ತಿಯಿಂದ ಮಾತಾಡಿ, ಸಮಯ ಮತ್ತು ನನ್ನ ಎನರ್ಜಿ ಹಾಳುಮಾಡಿಕೊಂಡೆ ಅಂತ!! ಇಂದು ತಾನು ಅದೇ ಯತಿಗಳ ಮಾನಸಪುತ್ರನೆಂದು ಹೇಳಿಕೊಂಡು ತಿರುಗುತ್ತಿದ್ದಾನೆ. ಜನ ಮರುಳೋ ಜಾತ್ರೆ ಮರುಳೋ! ಮುಗ್ಧಜನರ ತಿಳಿಭಕ್ತಿಯೇ ಇಂಥವರ ಬಂಡವಾಳ. ಈಗ ಈತ ಕೋಟ್ಯಧಿಪತಿ. ಸಂಗೀತ ಸಾಮ್ರಾಟ್!! ಈತನ



ಸಂಗೀತ ಕಚೇರಿಯ ವೈಖರಿಯನ್ನು ಒಮ್ಮೆ ನನ್ನ ಪಕ್ಕ ಕುಳಿತ ವ್ಯಂಗ್ಯಚಿತ್ರಕಾರ ಸಣ್ಣದಾಗಿ ಚಿತ್ರದಲ್ಲಿ ಬಿಡಿಸಿ ತೋರಿಸಿದ್ದನ್ನು ನಾನಿಲ್ಲಿ ದಾಖಲಿಸಲೇಬೇಕು. ಕಚೇರಿಯ ಪ್ರಾರಂಭ ಯಕ್ಷಗಾನದ ರಾವಣ, ದೊಡ್ಡಾಟದ ದುರ್ಯೋಧನ ಒಟ್ಟಿಗೇ ಸ್ವರ ತೆಗೆದ ಹಾಗೆ ತೋರುತ್ತದಂತೆ. ಒಂದೆರಡು ಕೃತಿಗಳು ಆದಂತೆ ಸಂಗೀತದ ಅಬ್ಬರ ಇಳಿದು ಬರೀ ವೇಗ ಉಳಿಯುವುದಂತೆ. ಆಗ ಹಿಂದೆ ಚಿಕ್ಕಬಳ್ಳಾಪುರಕ್ಕೆ ಹೋಗುತ್ತಿದ್ದ ನ್ಯಾರೋ ಗೇಜ್ ರೈಲು ಇಳಿಜಾರಿನಲ್ಲಿ 'ಐ ಥಿಂಕ್ ಐ ಕೆನ್ ಐ ಥಿಂಕ್ ಐ ಕೆನ್' ಎಂದು ವೇಗವಾಗಿ ಇಳಿಯುತ್ತಿದ್ದಾಗ ಬರುತ್ತಿದ್ದ ಶಬ್ದದಂತೆ ಬರೀ ಗೋಜಲು! ಕಚೇರಿಯ ಕೊನೆಕೊನೆಗೆ ಅದೇ ನ್ಯಾರೋ ಗೇಜ್ ರೈಲು ಬೆಟ್ಟಹತ್ತಲು ಪಡಿ ಪಾಟಲು ಪಡುತ್ತಾ 'ಐ ಥಾಟ್... ಐ ಕುಡ್... ಐ ಥಾಟ್...ಐ ಕುಡ್' ಎನ್ನುವಂತೆ, ಚಿಕ್ಕ ಮಕ್ಕಳು ಶಾಲೆಯಿಂದ ಸುಸ್ತಾಗಿ ಬರುವಾಗ ಬೆನ್ನ ಮೇಲಿನ ಬ್ಯಾಗನ್ನು ನೆಲದ ಮೇಲೆ ಎಳೆದುಕೊಂಡು ಬರುವಂತೆ, ಈತನ ಸುಸ್ತಾದ ಕಂಠದಿಂದ ಸಪ್ತಸ್ವರಗಳು ಬಿಕ್ಕಳಿಸಿ ಬಿಕ್ಕಳಿಸಿ ಕೊಂಡು ಹೊರಬರುವುವಂತೆ!! ಇದು ಚಿತ್ರಕಾರನ ಕಲ್ಪನೆ! ಏನಾದರೂ ಕನ್ನಡ ಜನಗಳ ಸಹನೆಗೆ ಪೆದ್ದುತನಕ್ಕೆ ಬಹುಮಾನ ಕೊಡಬೇಕು. ಇಂಥಾ ಯಮಕಿಂಕರ ಸಂಗೀತ ಸಾಮ್ರಾಟನಿಗೆ ಸನ್ಮಾನಗಳ ಜಾತ್ರೆ ನಡೆಸಿದ್ದಾರೆ.

ನನಗೊಂದು ಅನುಮಾನ. ಸನ್ಮಾನಗಳನ್ನು ನಿಜಕ್ಕೂ ರಸಿಕರು ಮಾಡುತ್ತಾರೋ ಅಥವಾ ಹಣಕ್ಕೆ ಪ್ರಭಾವಕ್ಕೆ ಮಾರಿಕೊಳ್ಳುತ್ತಾರೋ ?

(೩) ಈ ಕಲಾವಿದೆಯ ಹೆಸರು ಜಗದ್ವಿಖ್ಯಾತವಾಗಿಲ್ಲ. ಆದರೂ ಒಬ್ಬ ಪರಿಪೂರ್ಣ ಕಲಾವಿದೆಯೆಂದರೆ ನನ್ನ ದೃಷ್ಟಿಯಲ್ಲಿ ಈಕೆಯೇ.

ಇಂಥಾ ತೋಡಿ ರಾಗವನ್ನು ಕೇಳಿ ಶತಮಾನವೇ ಆಗಿತ್ತೇನೋ !! ಆಲಾಪನೆಯನ್ನು ಕೇಳುತ್ತಾ ಕೇಳುತ್ತಾ ನನಗೆ ಆಕಾಶಕ್ಕೇ ಹಾರಿದ ಅನುಭವವಾಗುತ್ತಿದೆ. ನೀಲಿಯಾದ ಆಕಾಶ ! ಕೆಳಗೆ ನೀಲಿ ಸಮುದ್ರ, ನಡುವಿನ ಜಾಗವನ್ನೆಲ್ಲಾ ಈಕೆಯ ಕಂಠಸಿರಿ ಆಕ್ರಮಿಸಿಕೊಂಡಿದೆ !! ಹೌದು, ರಾಗವನ್ನು ಅನುಭವಿಸಿ ಹಾಡುವುದು ಎಂದರೆ ಇದೇನೆ. ರಾಗವನ್ನು, ಅದರ ಭಾವವನ್ನು, ಅದರೊಳಗಿನ ಅಂತರಂಗವನ್ನು ಮೈತುಂಬಿಸಿಕೊಳ್ಳುವುದು ಅಂದರೆ ಇದೇನೆ !! ಹಿಂದೆ ಚೌಡಯ್ಯನವರು ನುಡಿಸುತ್ತಾ ನುಡಿಸುತ್ತಾ ಹೀಗೇ ರಾಗದಲ್ಲಿ ಲೀನವಾಗಿಹೋಗುತ್ತಿದ್ದರು !! ಮನುಷ್ಯ ಬೇರೆಯಲ್ಲ ಆತನಿಂದ ಹೊರಹೊಮ್ಮುತ್ತಿರುವ ರಾಗ ಬೇರೆಯಲ್ಲ ಎನ್ನುವಷ್ಟು ತಾದಾತ್ಮ್ಯವಿತ್ತು ಆತನಿಗೆ ! ಹೌದು ಈಕೆಯದೂ ಅಂಥದೇ ತಾದಾತ್ಮ್ಯ ! ಹಿಂದೆ ಪುಟ್ಟ ಹುಡುಗನ ಕೊಳಲು ಕೇಳಿದಾಗ ಆದಂಥಾ ಅಪೂರ್ವ ಅನುಭವ ನನಗೆ ಇಂದೂ ಈಕೆಯ ಸಂಗೀತದಿಂದ ಲಭಿಸಿತು. ಈ ನನ್ನ ಎಂಬತ್ತು ವರ್ಷಗಳ ಜೀವಿತಾವಧಿಯಲ್ಲಿ ಇಂಥಾ ಅಪೂರ್ವ ರೋಮಾಂಚನಗಳು ಸಂಗೀತದಿಂದ ಲಭಿಸಿದ್ದು ಬೆರಳೆಣಿಕೆಯಷ್ಟು ಸಲ ಮಾತ್ರ. ಆ ದಿನ ನನ್ನ 'ಬೇಲೂರ' ಅನುಭವವನ್ನು ಮನಃಶಾಸ್ತ್ರಜ್ಞರ ಹತ್ತಿರ ಪ್ರಸ್ತಾಪಿಸಿದ್ದೆ. ಆತ ಹೇಳಿದರು 'ಹೌದು ಅತ್ಯುನ್ನತವಾಗಿ ಕಲೆಯನ್ನು ಅನುಭವಿಸುವ ಮನಸ್ಸಿಗೆ ಇಂಥಾ ಶಕ್ತಿಗಳು ಇರುತ್ತವೆ' ಎಂದು !! ಇಂದೂ ಹೀಗೆಯೇ ಆಯಿತು. ಅದೊಂದು ಅತಿ ದೊಡ್ಡ ಹಾಲ್ !! ನೂರಾರು ಜನರು ಈಕೆಯ ಸಂಗೀತಕ್ಕೆ ಸೇರಿದ್ದಾರೆ. ಈಕೆಯ ಶುದ್ಧ ಸಂಗೀತದ ಬಗ್ಗೆ ಸಂಗೀತ ಜಗತ್ತಿನಲ್ಲಿ ಬಹಳ ಗೌರವವಿದೆ. ಈಕೆಯ ಶಿಷ್ಯೆಯರಾಗಲು ಹುಡುಗಿಯರೂ ಹುಡುಗರೂ ಸಹ ವರ್ಷಗಟ್ಟಲೇ ಸರದಿಯಲ್ಲಿ ಕಾಯುತ್ತಾರಂತೆ !! ಇಂದು ಈಕೆಯ ಕಂಠದಲ್ಲಿ ಅದೇನು ಜೇನು ತುಂಬಿತ್ತೋ ಏನೋ ಪ್ರಾರಂಭದ ವರ್ಣದಿಂದಲೇ ಜನ ಶಿಲೆಯಂತೆ ಏಕಾಗ್ರತೆಯನ್ನು ಸಾಧಿಸಿಕೊಂಡರು !! ನಾನು ಅಲ್ಲೇ ಕುಳಿತಿದ್ದೆ. ಕಣ್ಣುಗಳು ಆಕೆಯನ್ನೇ ದಿಟ್ಟಿಸುತ್ತಿದ್ದವು. ಆದರೆ ನನ್ನ ಮನಸ್ಸಿನಲ್ಲಿ ಇದ್ದಕ್ಕಿದ್ದಂತೇ ನೀಲಾಕಾಶ ಹರಡಿಕೊಂಡಿತು. ಯಾವಾಗಲೋ ಬಾಲ್ಯದಲ್ಲಿ ಗೋವಾದಲ್ಲಿ ಜಪಾನಿನ ನಾಲ್ಕು ಅಂತಸ್ತಿನ ದೊಡ್ಡ ಹಡಗೊಂದನ್ನು ನೋಡಿದ್ದೆ. ಶಾಲೆಯಿಂದ ನಮ್ಮನ್ನು ಆ ಹಡಗು ನೋಡಲೆಂದೇ ವಿಶೇಷ ಪಾಸ್ ತರಿಸಿ ಕರೆದುಕೊಂಡುಹೋಗಿದ್ದರು. ಅಂದು ನೋಡಿದ ಆ ಹಡಗಿನ ದಿವ್ಯ ಭವ್ಯತೆಗಳು ನನ್ನ ಕನಸಿನಲ್ಲೂ ಮನಸಿನಲ್ಲೂ ಮತ್ತೆ ಮತ್ತೆ ಮರುಕಳಿಸುತ್ತಾ ಸುಖವನ್ನ ಕೊಡುತ್ತಿದ್ದವು. ಮುಂದೆ ಬೆಳೆದಂತೆ ನಾ ಆ ಹಡಗ ಮರತೇಬಿಟ್ಟೆ ಎಂದುಕೊಂಡಿದ್ದೆ. ಪವಾಶ್ಚರ್ಯ ಇಂದು ಅಯಾಚಿತವಾಗಿ ಈ ರಾಗಸಿರಿಯನ್ನು ಕೇಳುತ್ತಲೆ ನಾನು ಆ ಹಡಗಿನ ಮೇಲೆ ನಿಂತಿದ್ದೇನೆ !! ಸುತ್ತ ನೀಲ ನೀರು !! ಮೇಲೆ ನೀಲಿ ಆಕಾಶ !! ಸ್ವಚ್ಛ ತಣ್ಣನೆಯ ಗಾಳಿ !! ಎಲ್ಲೆಡೆ ಈಕೆಯ ಸ್ವರ ಮಾಧುರ್ಯ !! ಆ ನೀಲಿ, ಆ ತಂಪು, ಆ ಇಂಪು, ನನ್ನ ಅದೃಷ್ಟವೆ ಅದೃಷ್ಟ !! ಇಂಥ ಅನುಭೂತಿ ಪಡೆದ ನಾನು ಈ ಗಾಂಧರ್ವ ಕಲೆಯಾದ ಸಂಗೀತದ ದಾಸರ ದಾಸ ! ಇಂಥಾ ಸುಖ ದಕ್ಕುವುದು ಈ ಕಲೆಯಲ್ಲಿ ಮಾತ್ರ ! ಈಕೆ ನೂರ್ಕಾಲ ಬಾಳಲಿ. ಇದು ನನ್ನ ಮನದಾಳದ ಹಾರೈಕೆ.

(೪) ಈ ದಿನ ನಿಜಕ್ಕೂ ಈ ಮನುಷ್ಯನ ಸಂಗೀತ ಕಛೇರಿಗೆ ಬರಲು ಮನಸ್ಸಿಲ್ಲ. ಆದರೂ ಈತನ ಒಳ್ಳೆಯತನಕ್ಕೆ ಕಟ್ಟುಬಿದ್ದು ಬಂದಿದ್ದೇನೆ. ಈತ ಸ್ವಭಾವತಃ ತುಂಬಾ ಒಳ್ಳೆಯವನು. ಆದರೇನು ಮಾಡಲಿ, ಈತನಿಗೆ "ಅಯ್ಯಾ ನಿನ್ನ ಸಂಗೀತ ಶಾಸ್ತ್ರೀಯವೇ ಅಲ್ಲ. ನೀನು ಅದೇನು ಹಾಡುತ್ತೀಯೋ ಅದರಲ್ಲಿ ರಾಗದ ಶುದ್ಧತೆಯೇ ಇಲ್ಲ. ನೀನು ತಾಳಕ್ಕೂ ಬದ್ಧನಾಗಿಲ್ಲ. ನಿನ್ನಿಂದ ಜನ ಸಂತೋಷಗೊಳ್ಳುವುದು ಕೇವಲ ನಿನ್ನ ಸಾಹಿತ್ಯದ ಶುದ್ಧತೆಗೆ" ಎಂದು ಯಾರಾದರೂ ಹೇಳಬೇಕು ಅನಿಸುತ್ತದೆ. ಆದರೆ


With Best Compliments From




C.Jayantilal & Co.



Manufacturers :
PAPER BAGS, PLASTIC BAGS
IN MULTICOLOUR PRINTING
59/11, S. S. I. Area
5th Block, Rajajinagar
Bangalore - 560 010
✆ : 23153614



Arihant
Paper Packs

Manufacturers & Dealers : Flexo Graphic Printed Polythene & Paper Bags, Plastic Bags Carton Boxes for Cakes & Sweets, Paper Plate Napkins & Cups, Foil, Plastic, Thermocol Disposable Containers, Fancy Straws, Hotel & Housekeeping Items, Etc.

432, Avenue Road, Bangalore - 560 002
✆ : 41243738, 22872580

ಎಲ್ಲರಿಗೂ ಈ ಮಾತನ್ನು ಆತನ ಮುಖದ ಮುಂದೆ ಹೇಳಲು ಆತನ ವಿನಯ ಹಾಗೂ ಒಳ್ಳೆಯ ಹಸುಗೂಸಿನಂಥಾ ಸ್ವಭಾವ ಅಡ್ಡಬರುತ್ತವೆ. ಈ ಬದುಕೇ ಬೇಡ, ಭಗವಂತನೇ ಸರ್ವಸ್ವ ಎಂದು ಬದುಕಿಗೆ ಬೆನ್ನುಹಾಕಿದವನು ಅದೇಕೋ ಸಂಗೀತಕ್ಕೆ ಒಲಿದಿದ್ದಾನೆ. ಆದರೆ ದುರದೃಷ್ಟ, ಸಂಗೀತ ಇವನಿಗೆ ಒಲಿದಿಲ್ಲವಲ್ಲ! ಒಮ್ಮೊಮ್ಮೆ ನನಗನಿಸುತ್ತದೆ: ಈತ ಜನಪದ ಗೀತೆಗಳನ್ನೋ, ಸುಗಮ ಸಂಗೀತವನ್ನೋ ಹಾಡಿಕೊಂಡಿದ್ದರೆ ನಿಜಕ್ಕೂ ಚೆನ್ನಾಗಿರುತ್ತೇನೋ. ಇನ್ನೂ ಅಚ್ಚರಿಯ ಸಂಗತಿಯೆಂದರೆ ಜನ ಈತನ ಸಂಗೀತಕ್ಕೆ ಮರುಳಾಗುವುದು. ಈತನ ಕ್ಯಾಸೆಟ್ಟುಗಳು ಸಿಡಿಗಳೂ ರಾಶಿರಾಶಿಯ ಸಂಖ್ಯೆಯಲ್ಲಿವೆ. ಬಹುಶಃ ಈ ಸಂಖ್ಯೆ ಮತ್ತು ಈತ ಗಿನ್ನಿಸ್ ಪುಸ್ತಕಕ್ಕೆ ದಾಖಲಾಗ ಬಹುದೇ ? ಜನ ಮರುಳೋ ಜಾತ್ರೆ ಮರುಳೋ!!

(೫) ನರಾಧಮ ಇವನು. 'ನಾನು ಶಾಸ್ತ್ರೀಯ ಸಂಗೀತವನ್ನೇ ಕಲಿತಿಲ್ಲ' ಎಂದು ಬೀಗುತ್ತಾನೆ. ಆದರೂ 'ಈ ಈ ಇಂಥವರಿಂದ ದೇವರನಾಮಗಳ ಗಾಯನ ಕಚೇರಿ' ಎಂದು ಮುದ್ರಿಸಿದ ಕರಪತ್ರಗಳನ್ನು ಹಂಚುತ್ತಾನೆ. 'ಕಚೇರಿ' ಎನ್ನುವ ಪದ ಶಾಸ್ತ್ರೀಯ ಸಂಗೀತಕ್ಕೆ ತಾನೆ ಒಪ್ಪುವುದು? ನಮ್ಮ ಕನ್ನಡದ ಪೆದ್ದುಜನಕ್ಕೆ ಏನು ಹೇಳಲಿ? ವರ್ಷಾನುಗಟ್ಟಲೆ ಸಾಧನೆ ಮಾಡಿದವರಿಗೆ ಮನ್ನಣೆಯಿಲ್ಲ, ರಾತ್ರೋರಾತ್ರಿ ಹತ್ತು ದೇವರನಾಮಗಳನ್ನು ಕಿರುಚಿದವರು ರಾತ್ರಿ ಕಳೆದು ಬೆಳಗಾಗುವುದರ ಒಳಗೆ 'ಪ್ರಖ್ಯಾತ' ನಾಮರಾಗಿಬಿಟ್ಟಿರುತ್ತಾರೆ. ಶುದ್ಧ ಮೂರ್ಖ! ರಾಗದ ಶುದ್ಧತೆಯಿಲ್ಲ, ಸಾಹಿತ್ಯದ ಶುದ್ಧತೆಯಿಲ್ಲ, ಶ್ರುತಿಯ ಶುದ್ಧತೆಯಿಲ್ಲ, ಭಾವದ ಶುದ್ಧತೆಯಿಲ್ಲ, ಮತ್ತೇನಿದೆ ಇವನಲ್ಲಿ? ಜನರೇಕೆ ಸಾಗರೋಪಾದಿಯಲ್ಲಿ ಸೇರುತ್ತಾರೆ ಇವನ ಸಂಗೀತಕ್ಕೆ? ನನಗೆ ಗೊತ್ತಿಲ್ಲ, ನನಗೆ ಅನೇಕ ಸಲ ಇಂಥಾ ಪ್ರಶ್ನೆಗಳು ಹುಟ್ಟುತ್ತವೆ. ಉತ್ತರ ಕಾಣದೇ ತೊಳಲಾಡುತ್ತವೆ. ಸಾಧನೆ ಮಾಡಿದ ಸೃಜನಶೀಲ ಸಂಗೀತ ಬಹುಜನಗ್ರಾಹಿಯಾಗುವುದೇ ಇಲ್ಲ, ನಾಲ್ಕು ಕ್ಯಾಸೆಟ್ ಕೇಳಿ ಕೇವಲ ಕಂಠದ ಬಲದಿಂದ ಒರಲುವ ಈ ಎರವಲು ಸಂಗೀತಕ್ಕೆ ಸಂತೆಯಂತೆ ಜನಸಂದಣಿ!!

ನಾನು ಈ ಬರವಣಿಗೆಯನ್ನು ಮುಗಿಸುವ ಮೊದಲು ಇಂದಿನ ರೋಗಗ್ರಸ್ತ ಮನಸ್ಸಿನ ಯುವಪೀಳಿಗೆ, ವಿಮರ್ಶೆಯ ವಿಷಯದಲ್ಲಿ ಒಂದು ಪುಟ್ಟ ಪತ್ರಿಕೆಯ ಮೇಲೆ ವಾಗ್ದಾಳಿ ಮಾಡಿದ್ದನ್ನು ಇಲ್ಲಿ ದಾಖಲಿಸಲೇಬೇಕು. ಇದನ್ನು ಓದಿದ ಯಾರಿಗಾದರೂ ನನ್ನಂಥವರು ಯಾಕೆ ವಿಮರ್ಶೆಯ ಸಹವಾಸವನ್ನು ಬಿಟ್ಟೆವು ಮತ್ತು ಶುದ್ಧ ವಾತಾವರಣ ನಿರ್ಮಾಣಕ್ಕೆ ತಿಲಾಂಜಲಿಯನ್ನಿತ್ತೆವು ಎನ್ನುವುದು ಗೊತ್ತಾಗುತ್ತದೆ. ಒಂದು ಪುಟ್ಟ ಪತ್ರಿಕೆ ಇದೆ. ಈಗಲೂ ಸಂಗೀತ ಜಗತ್ತಿನ ಧ್ರುವತಾರೆ ಅದು! ಆ ಪತ್ರಿಕೆಯ ಒಡೆಯ ಸಂಗೀತಗಾರ ಅಲ್ಲ, ಅದಕ್ಕೇ ಅದು ಶುದ್ಧವಾಗಿದೆ. ಉತ್ಸಾಹಭರಿತವಾಗಿದೆ. ಒಮ್ಮೆ ಅದರಲ್ಲಿ ಉತ್ಸಾಹೀ ವಿಮರ್ಶಕರೊಬ್ಬರು ಒಬ್ಬ ಯುವತಿಯ ಸಂಗೀತದ ಬಗ್ಗೆ ವಿಮರ್ಶೆಯನ್ನು ಬರೆದರು. ಅವರು ಬರೆದದ್ದು ಸರಿಯಾಗಿಯೇ ಇತ್ತು. ಏಕೆಂದರೆ ಆ ಕಲಾವಿದೆಯಲ್ಲಿ



ಹೇ... ಮಹಾಪ್ರಭು... ಇವರೇನು ಮಾಡುತ್ತಿದ್ದಾರೆಂದು ಅರಿಯರು... ನನ್ನ ಸರ್ಕಾರ ವಜಾ ಆಗದಂಗೆ ಕಾಪಾಡು ಮಹಾಪ್ರಭು...

ಸ್ವಂತಿಕೆಗಿಂತಾ ಪಕ್ಕದ ನಾಡಿನ ಪ್ರಸಿದ್ಧ ಕಲಾವಿದೆಯ ಅನುಕರಣೆಯೇ ಹೆಚ್ಚಾಗಿತ್ತು, ಕಂಠವೇನೋ ಇಂಪಾಗಿತ್ತು, ಆದರೆ ಬರೀ ಇಂಪಾದ ಕಂಠದಿಂದ ಬಂದದ್ದೆಲ್ಲವೂ ಶಾಸ್ತ್ರೀಯ ಸಂಗೀತವಾಗುವುದಿಲ್ಲವಲ್ಲ! ಆ ಕಂಠವನ್ನು ಸಂಸ್ಕರಿಸಬೇಕು, ರಾಗದ ಒಳ ಆಶಯಗಳಿಗೆ ತಕ್ಕಂತೆ ಪರಿಷ್ಕರಿಸಬೇಕು, ಎಲ್ಲಕ್ಕಿಂತ ಹೆಚ್ಚಾಗಿ ರಾಗದ ಸಂಚಾರೀ ಮತ್ತು ಸ್ಥಾಯೀ ಭಾವಗಳ ಸ್ವರಸ್ಥಾನಗಳನ್ನು ಸರಿಯಾಗಿ ಗ್ರಹಿಸಬೇಕು ಮತ್ತು ಅಭಿವ್ಯಕ್ತಿಸಬೇಕು. ಸಂಗೀತವೆಂದರೆ ಮಕ್ಕಳಾಟವೇ? ಆ ಕಲಾವಿದೆಗೆ ಈ ಎಲ್ಲದರ ಬಗ್ಗೆ ಮುತುವರ್ಜಿಯಿಲ್ಲ. ಆಕೆಗೇನು, ಇಂದಿನ ಅನೇಕ ಯುವ ಕಲಾವಿದರಿಗೆ ಈ ಗಾಂಭೀರ್ಯಗಳೇನೂ ಬೇಕಿಲ್ಲ. ಆ ವಿಮರ್ಶಕರು ಈ ಎಲ್ಲ ಅಂಶಗಳನ್ನೂ ಬಹು ಸ್ಪಷ್ಟವಾಗಿ ಸ್ವಲ್ಪ ಉಗ್ರ ಭಾಷೆಯಲ್ಲೇ ಬರೆದಿದ್ದರು. ''ಬಯ್ದು ಹೇಳುವವರು ಬದುಕಲು ಹೇಳುತ್ತಾರೆ'' ಎನ್ನುವ ಸತ್ಯ ಗೊತ್ತಿಲ್ಲದ ಒಂದಿಷ್ಟು ಯುವ ಕಲಾವಿದರು ಸೇರಿ ಆ ಪುಟ್ಟ ಪತ್ರಿಕೆಯ ಒಡೆಯನೊಂದಿಗೆ ವಾಗ್ವಾದವನ್ನೇ ಪ್ರಾರಂಭಿಸಿದರು. ಮರುಸಂಚಿಕೆಯಲ್ಲೇ ಉದ್ದುದ್ದ ಕಾಗದಗಳನ್ನು ಬರೆದರು. ವಿಮರ್ಶೆ ಬರೆದವರನ್ನು ಹೀನಾಮಾನ ಹೀಯಾಳಿಸಿದರು. ಒಂದಿಷ್ಟು ದಿನ ಎಲ್ಲ ವೇದಿಕೆಗಳಲ್ಲೂ ಅವಕಾಶ ಗಿಟ್ಟಿಸಿಕೊಂಡು ಈ ಯುವ ಪೀಳಿಗೆ 'ಗುರ್ ಗುರ್' ಎಂದು ತಮ್ಮ ಅಲ್ಪಮತಿಯ ಪ್ರದರ್ಶನವನ್ನು ನಡೆಸಿದರು. ಎಲ್ಲಕ್ಕೂ ಆ ವಿಮರ್ಶಕರ ಮೌನವೇ ಉತ್ತರವಾಯಿತು. 'ಅವರಿಗೆ ಮಾತಾಡಲು ಮುಖವಿಲ್ಲ' ಎಂದು ಈ ಗುಂಪು ಗಹಗಹಿಸಿಕೊಂಡು ತಿರುಗಾಡಿತು. ಆ ಪುಟ್ಟ ಪತ್ರಿಕೆಯಲ್ಲಿ ಒಳ್ಳೆಯ ವಿಮರ್ಶೆ ಬರುವುದು ನಿಂತುಹೋಯಿತು. ಅಶಿಸ್ತಿನ ಅಶುದ್ಧ ಸಂಗೀತಕ್ಕೆ ವಾತಾವರಣ ಅಬಾಧಿತವಾಗಿ ನಿರ್ಮಾಣವಾಯಿತು. ಹಾಗೆ ಹಾರಾಡಿದ ಯುವ ಕಲಾವಿದರಲ್ಲಿ ಅನೇಕರು ಇಂದು ವೇದಿಕೆಗೇ ಇಲ್ಲ!! ಇರುವವರೂ ಸಂಗೀತದಲ್ಲಿ ಯಾವ ಉನ್ನತ ಸಾಧನೆಯನ್ನೂ ಮಾಡಿಲ್ಲ. ಇಂದಂತೂ 'ರೂಪದರ್ಶಿಗಳಿಗೆ ಯೌವನವಿರುವವರೆಗೆ ವೇದಿಕೆ' ಎನ್ನುವ ನಂಬಿಕೆಯಂತೆ ಈ ಕಲಾವಿದೆಯರೂ ತಮ್ಮ 'ಒನಪು ವೈಯಾರ, ಪ್ರಸಿದ್ಧರ ಅನುಕರಣೆ' ಇರುವವರೆಗೆ ಮಾತ್ರ ಕಲಾವಿದರಾಗಿ ಉಳಿದಿರುತ್ತಾರೆ. ನಮ್ಮಂಥಾ ಸಂಗೀತ ಪ್ರೇಮಿಗಳಿಗೆ ಒಟ್ಟಿನಲ್ಲಿ ಉಸಿರು ಕಟ್ಟಿಸುವ ವಾತಾವರಣವಿದು!

ನಾನು ತುಂಬಾ ಸೋತುಹೋಗಿದ್ದೇನೆ. ಬಹುಶಃ ನನ್ನಂಥಾ ಶುದ್ಧಸಂಗೀತ ಆರಾಧಕರು ಈ ಕಾಲಕ್ಕೆ ಯೋಗ್ಯರಲ್ಲ. ನನ್ನ ಮಾತುಗಳೂ ವಿಮರ್ಶೆಗಳೂ ಈ ಕಾಲದ ಥಳಕು ಬಳುಕಿನ ಕಲಾವಿದರಿಗೆ ಅಗತ್ಯವಿಲ್ಲ. ವಿಮರ್ಶೆಯ ಹೆಸರಲ್ಲಿ ರೋಲ್‌ಕಾಲ್ ಮಾಡುವವರಿಗೆ ಸಮೃದ್ಧಕಾಲ!! ರಾಗಗಳೆಂದರೆ ನನ್ನ ದೃಷ್ಟಿಯಲ್ಲಿ ಒಂದು ಪುಟ್ಟ ಹಸುಗೂಸಿನಂತೆ. ಕಲಾವಿದರಾದವರು ಆ ಕ್ಷಣಕ್ಕೆ ಆ ರಾಗದ 'ತಾಯಿ'ಯಾಗಬೇಕು. ಆ ಹಸುಗೂಸನ್ನು ಎತ್ತಿ ತೊಡೆಯ ಮೇಲೆ ಇಟ್ಟುಕೊಳ್ಳಬೇಕು. ಅವರ ಸಂಗೀತ ಸಾಧನೆ ಆ ರಾಗದ ಉಸಿರು!! ಅದಕ್ಕೆ ತಮ್ಮ ಕಂಠಸಿರಿಯೆನ್ನುವ ವಸ್ತ್ರಗಳಿಂದ ಶೃಂಗರಿಸಬೇಕು. ಸೃಜನಶೀಲ ಸಪ್ತ ಸ್ವರಪುಂಜಗಳು ಒಂದೊಂದೇ ಆಭರಣವಾಗುತ್ತಾ ಹೋಗಬೇಕು. ಆ 'ರಾಗಮಗು' ಶೃಂಗಾರವಾಗುವುದಷ್ಟೇ ಅಲ್ಲ, ಆ ತಾಯಿ ಆ ಕ್ಷಣಕ್ಕೆ ಆ ಮಗುವಿನಲ್ಲಿ ನೆಮ್ಮದಿಯ ನಗು ಉಕ್ಕಿಸಬೇಕು. ತಾನೂ ಆ ನೆಮ್ಮದಿಯನ್ನು ತೊಡಬೇಕು. ರಸಿಕವೃಂದಕ್ಕೂ ಆ ನೆಮ್ಮದಿಯನ್ನು ಹಂಚಬೇಕು. ಇದಲ್ಲವೇ ಸಂಗೀತ ಕಲಾವಿದರ ಪ್ರಮುಖ ಹೊಣೆ? ಇಂದು ಯಾವ ಯಾವ ಕಲಾವಿದರಲ್ಲಿ ಈ 'ರಾಗಮಗು' ನಕ್ಕು ನಲಿಯುತ್ತಿದೆ? ಯಾವ ಕಲಾವಿದ ರಾಗದ ಉಸಿರನ್ನು ಉಳಿಸಿಕೊಂಡಿದ್ದಾನೆ? ಬರೀ ಅನುಕರಣೆ ಮತ್ತು ಆದಷ್ಟು ವೇಗವಾಗಿ ಪ್ರಸಿದ್ಧಿಯ ಕಡೆಗೆ ಓಟ!! ಹಣದ ವ್ಯವಹಾರಕ್ಕೆ ಮಗುವಿನ ಸ್ವರಾಭರಣಗಳು ಮಾರಿಕೊಂಡು ಹೋಗುತ್ತಿವೆ. ಯಾಕೆ ಬೇಕು? ಯಾರಿಗೆ ಬೇಕು ಇಂಥಾ ಸಂಗೀತ??? ಸಿನಿಮಾ ಸಂಗೀತಕ್ಕೆ, ಪಾಶ್ಚಾತ್ಯ ಸಂಗೀತಕ್ಕೆ ಮಾರುಹೋಗುತ್ತಿರುವ ಕೋಟಿ ಕೋಟಿ ಜನರನ್ನು ನಮ್ಮ ಶಾಸ್ತ್ರೀಯ ಸಂಗೀತದ ಕಡೆ ಎಳೆದು ತರುವ ಬದ್ಧತೆ, ಕರ್ತವ್ಯಗಳು ನಮ್ಮ ಯುವ ಕಲಾವಿದರಿಗೆ ಇರಬೇಡವೇ? ಇನ್ನು ಐವತ್ತು ವರ್ಷಗಳಿಗೆ ನಮ್ಮ ಕರ್ನಾಟಕ ಸಂಗೀತ ಎಲ್ಲಿರುತ್ತದೆ? ಈ ಪ್ರಶ್ನೆ ನಮ್ಮ ನಿಮ್ಮೆಲ್ಲರನ್ನೂ ಕಾಡಬೇಡವೇ?...

ಆ ಪುಟ್ಟ ಕೆಂಪು ಡೈರಿ ನನ್ನ ತೊಡೆಯ ಮೇಲಿತ್ತು. ಭಗವಂತನನ್ನು ಸಾಕ್ಷಾತ್ ಕಂಡ ಸಾಧಕನೊಡನೆ ಸಂಭಾಷಣೆಯನ್ನು ನಡೆಸಿದ ತೃಪ್ತಿ ನನ್ನ ಮನದಲ್ಲಿ ಲಾಸ್ಯವಾಡುತ್ತಿತ್ತು. ಇದೋ ಇದನ್ನು ನಿಮ್ಮೊಂದಿಗೂ ಹಂಚಿಕೊಂಡಿದ್ದೇನೆ. 'ಅಹುದಾದರೆ ಅಹುದೆನ್ನಿ, ಇಲ್ಲವಾದರೆ ಇಲ್ಲವೆನ್ನಿ' ಎನ್ನುವ ಭಾವದೊಂದಿಗೆ!

**ಶಾಂತಾ ನಾಗರಾಜ್**
ನಂ ೬೦, ಜಿ-೧ ಮೀರಾ ಮಾನ್ಶನ್
೧೭ನೇ ಅಡ್ಡರಸ್ತೆ, ಮಲ್ಲೇಶ್ವರಂ
ಬೆಂಗಳೂರು -೫೬೦೦೫೫

# ಉತ್ತಮ ಮಟ್ಟದ ಶೈಕ್ಷಣಿಕ ಅಗತ್ಯತೆಗಳಿಗಾಗಿ ಅಲ್-ಅಮೀನ್‌ಗೆ ಭೇಟಿ ನೀಡಿ




## ಅಲ್–ಅಮೀನ್ ಶಿಕ್ಷಣ ಸಂಸ್ಥೆ

ಹೊಸೂರು ರಸ್ತೆ (ಲಾಲ್‌ಬಾಗ್ ಮುಖ್ಯದ್ವಾರದ ಎದುರು), ಬೆಂಗಳೂರು - 560 027

○ ಶಿಕ್ಷಣ ಕ್ಷೇತ್ರದಲ್ಲಿ 40 ವರ್ಷಗಳಿಂದಲೂ ಅದ್ವಿತೀಯ ಸೇವೆ ಸಲ್ಲಿಸುತ್ತಿರುವ ಅಲ್ - ಅಮೀನ್ ಸಂಸ್ಥೆಯು ಭಾರತದ ಪ್ರಮುಖ ಶೈಕ್ಷಣಿಕ ಸಂಸ್ಥೆಗಳಲ್ಲಿ ಒಂದಾಗಿದೆ ○ ಅನುಭವೀ ಅಧ್ಯಾಪಕ ವರ್ಗ ○ ಸುಸಜ್ಜಿತ ಗ್ರಂಥಾಲಯಗಳು ○ ಹವಾನಿಯಂತ್ರಿತ ವಿಚಾರಗೋಷ್ಠಿ ಸಭಾಂಗಣಗಳು ○ ಅತ್ಯಾಧುನಿಕ ಪ್ರಯೋಗಶಾಲೆಗಳು ○ 24 ಗಂಟೆಗಳ ಕಾಲ ಅಂತರ್ಜಾಲ (ಇಂಟರ್ನೆಟ್) ಸೌಲಭ್ಯ ○ ಓದಿನ ನಂತರ ಉದ್ಯೋಗಾವಕಾಶಗಳಿಗಾಗಿ ಆಡಳಿತ ಮಂಡಳಿಯವರ ಸಂಘಟಿತ ಸಲಹಾ ಕೇಂದ್ರಗಳ ನೆರವು

ಸಮಾಜದ ಎಲ್ಲ ಜನ ವಿಭಾಗದವರಿಗೂ ಮುಕ್ತ ಅವಕಾಶವಿದೆ. ಅಲ್-ಅಮೀನ್‌ನ ಎಲ್ಲ ಸಂಸ್ಥೆಗಳಲ್ಲೂ ಬಾಲಕರು ಹಾಗೂ ಬಾಲಕಿಯರೂ ಶಿಕ್ಷಣ ಕೈಗೊಳ್ಳಬಹುದಾಗಿದೆ.

**1. ಅಲ್-ಅಮೀನ್ ಕಲೆ, ವಿಜ್ಞಾನ ಮತ್ತು ವಾಣಿಜ್ಯ ಕಾಲೇಜು**

ಅಂತರ್ಜಾಲ ತಂತ್ರಜ್ಞಾನ, ಬಯೋ-ಇನ್‌ಫರ್ಮಾಟಿಕ್ಸ್, ಎಲೆಕ್ಟ್ರಾನಿಕ್ಸ್, ಟ್ಯಾಲಿ (ವಾಣಿಜ್ಯ ವಿದ್ಯಾರ್ಥಿಗಳಿಗೆ)
ಬಿ.ಎ. - ಹೆಚ್.ಇ.ಎಸ್., ಎಚ್.ಇ.ಯು, ಎಚ್.ಇ.ಪಿ, ಜೆ.ಪಿ.ಎಸ್.
ಬಿ.ಎಸ್ಸಿ.- ಸಿ.ಬಿ.ಝಡ್., ಸಿ.ಎಮ್.ಝಡ್., ಬಿ.ಬಿ.ಬಿ., ಪಿ.ಸಿ.ಎಮ್., ಪಿ.ಎಮ್.ಸಿ., ಪಿ.ಎಮ್.ಇ., ಎಮ್.ಇ.ಸಿ.
ಬಿ.ಕಾಂ. (ಬೆಂಗಳೂರು ವಿಶ್ವವಿದ್ಯಾಲಯ ನಿಗದಿಪಡಿಸಿರುವ ಎಲ್ಲ ಕಡ್ಡಾಯ ಪಠ್ಯ ವಿಷಯಗಳು ಲಭ್ಯವಿವೆ)
ಎಂ.ಎಸ್ಸಿ - ಮೈಕ್ರೊಬಯಾಲಜಿ, ಬಯೋಟೆಕ್ನಾಲಜಿ
ಕನ್ನಡ ಸರ್ಟಿಫಿಕೇಟ್ ಕೋರ್ಸ್ (ಬೆಂಗಳೂರು ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)

**2. ಅಲ್-ಅಮೀನ್ ಮಾಹಿತಿ ಅಧ್ಯಯನ ಸಂಸ್ಥೆ**

ಬಿ.ಸಿ.ಎ. (ಕರ್ನಾಟಕ ಸರ್ಕಾರ ಮತ್ತು ಬೆಂಗಳೂರು ವಿ.ವಿ.ದ ಮಾನ್ಯತೆ ಪಡೆದಿದೆ)
ಎಂ.ಸಿ.ಎ. (ಎ.ಐ.ಸಿ.ಟಿ.ಇ. ಮತ್ತು ಬೆಂಗಳೂರು ವಿ.ವಿ.ದ ಮಾನ್ಯತೆ ಪಡೆದಿದೆ)

**3. ಅಲ್-ಅಮೀನ್ ಫಾರ್ಮಸಿ ಕಾಲೇಜು**

ಡಿ.ಫಾರ್ಮ (ಡಿಪ್ಲೋಮ ಇನ್ ಫಾರ್ಮಸಿ - 2 ವರ್ಷ), ಬಿ.ಫಾರ್ಮ (ಬ್ಯಾಚಲರ್ ಇನ್ ಫಾರ್ಮಸಿ -4 ವರ್ಷ)
ಎಮ್.ಫಾರ್ಮ (ಮಾಸ್ಟರ್ ಇನ್ ಫಾರ್ಮಸಿ - 2 ವರ್ಷ)
(ಅ) ಫಾರ್ಮಸ್ಯೂಟಿಕ್ಸ್, (ಆ) ಫಾರ್ಮಕೆಮಿಸ್ಟ್ರಿ, (ಇ) ಫಾರ್ಮಕಾಲಜಿ, (ಈ) ಫಾರ್ಮಕಾಗ್ನೊಸಿ, (ಉ) ಕ್ವಾಲಿಟಿ ಅಸ್ಯೂರೆನ್ಸ್, (ಊ) ಫಾರ್ಮಸ್ಯೂಟಿಕಲ್ ಮಾರ್ಕೆಟಿಂಗ್ ಮತ್ತು ಮ್ಯಾನೇಜ್‌ಮೆಂಟ್. (ಋ) ಫಾರ್ಮಸಿ ಪ್ರಾಕ್ಟೀಸ್ ಪಿಎಚ್.ಡಿ.

**4. ಅಲ್-ಅಮೀನ್ ಶಿಕ್ಷಣ ಕಾಲೇಜು**

ಬಿ.ಎಡ್., ಬ್ಯಾಚುಲರ್ ಆಫ್ ಎಜ್ಯುಕೇಷನ್

**5. ಅಲ್-ಅಮೀನ್ ಕಾನೂನು ಕಾಲೇಜು**

ಎಲ್‌ಎಲ್.ಬಿ. (3 ವರ್ಷ); ಎಲ್‌ಎಲ್.ಬಿ. (5 ವರ್ಷ)

**6. ಅಲ್-ಅಮೀನ್ ಮ್ಯಾನೇಜ್‌ಮೆಂಟ್ ಅಧ್ಯಯನ ಸಂಸ್ಥೆ**

(ಅ) ಬಿ.ಬಿ.ಎಂ. - ಬ್ಯಾಚುಲರ್ ಆಫ್ ಬ್ಯುಸಿನೆಸ್ ಮ್ಯಾನೇಜ್‌ಮೆಂಟ್ (ಸ್ಪೆಷಲೈಸೇಷನ್ಸ್ -ಮಾರ್ಕೆಟಿಂಗ್/ಫೈನಾನ್ಸ್/ಅಂತರರಾಷ್ಟ್ರೀಯ ವ್ಯವಹಾರ)
(ಆ) ಎಂ.ಬಿ.ಎ. - ಮಾಸ್ಟರ್ ಆಫ್ ಬ್ಯುಸಿನೆಸ್ ಅಡ್ಮಿನಿಸ್ಟ್ರೇಷನ್ಸ್ (ಸ್ಪೆಷಲೈಸೇಷನ್ಸ್ - ಮಾರ್ಕೆಟಿಂಗ್/ಎಚ್.ಆರ್.ಎಂ./ಫೈನಾನ್ಸ್/ಸಿಸ್ಟಮ್ಸ್/ಪ್ರೊಡಕ್ಷನ್)
ಕಮ್ಯುನಿಕೇಷನ್ ಸ್ಕಿಲ್ ಮತ್ತು ಪರ್ಸನಾಲಿಟಿ ಡೆವಲಪ್‌ಮೆಂಟ್, ಆ್ಯಟಿಟ್ಯೂಡ್, ಕೌನ್ಸೆಲಿಂಗ್ ಇತ್ಯಾದಿ.

**7. ಅಲ್-ಅಮೀನ್ ಪದವಿಪೂರ್ವ ಕಾಲೇಜು**

ವಿಜ್ಞಾನ - ಪಿ.ಸಿ.ಎಂ.ಬಿ., ಪಿ.ಸಿ.ಎಂ.ಸಿ. ಮತ್ತು ಪಿ.ಸಿ.ಎಂ.ಇ;
ವಾಣಿಜ್ಯ - ಎಚ್.ಇ.ಬಿ.ಎ., ಬಿ.ಎ.ಎಂ.ಎಸ್., ಬಿ.ಎ.ಎಸ್.ಇ.; ಕಲೆ - ಎಚ್.ಇ.ಪಿ.ಎಸ್.

**8. ಅಲ್-ಅಮೀನ್ ಪ್ರಾಥಮಿಕ ಮತ್ತು ಪ್ರೌಢಶಾಲೆ**

ನಂ. 69. ಅಲ್-ಅಮೀನ್ ಟವರ್ ಹಿಂಭಾಗ, ಹೊಸೂರು ರಸ್ತೆ, ಬೆಂಗಳೂರು - 560 027.
ಎಲ್.ಕೆ.ಜಿ.ಯಿಂದ 10ನೇ ತರಗತಿಯವರೆಗೆ (ರಾಜ್ಯ ಸರ್ಕಾರ ನಿಗದಿಪಡಿಸಿದ ಪಠ್ಯಕ್ರಮ. ಶಿಕ್ಷಣ ಮಾಧ್ಯಮ : ಇಂಗ್ಲಿಷ್)

| | ವಿವರಗಳಿಗೆ ಸಂಪರ್ಕಿಸಿ/ಪ್ರಾಂಶುಪಾಲರು |
|---|---|
| 1 | ದೂರವಾಣಿ : 080 - 22222402<br>*Extn* : 713/720<br>ಟೆಲಿ ಫ್ಯಾಕ್ಸ್ : 080 - 22246565<br>www.alameen.edu/asc<br>*e-mail :*<br>alameenasc@gmail.com |
| 2 | ದೂರವಾಣಿ : 080 - 22222402<br>*Extn* : 713/720<br>ಟೆಲಿ ಫ್ಯಾಕ್ಸ್ : 080 - 22246565<br>www.alameen.edu/asc |
| 3 | ದೂರವಾಣಿ : 080 - 22234619<br>ಟೆಲಿ ಫ್ಯಾಕ್ಸ್ : 080 - 22225834<br>*e-mail :*<br>info@alameenpharmacy.edu<br>*Homepage:*<br>www.alameenpharmacy.edu |
| 4 | ದೂರವಾಣಿ : 080 - 22222402<br>22235626/22278468<br>22123430. *Extn:* 715/743<br>*e-mail :*<br>alameenbed@rediffmail.com<br>*Website :*<br>www.AlAmeen.edu/B.ed |
| 5 | ದೂರವಾಣಿ : 22222402/22235626<br>22278468/22123430<br>*Extn* : 743 (O), 716 (P)<br>ಟೆಲಿ ಫ್ಯಾಕ್ಸ್ : 080 - 22246565<br>www.alameen.edu/asc |
| 6 | ದೂರವಾಣಿ : 22235626, 22222402<br>22123431, 32404819<br>*Extn* : 718, 717<br>ಟೆಲಿ ಫ್ಯಾಕ್ಸ್ : 080 - 22279235<br>*e-mail :*<br>MBA : mba@alameen.co.in<br>BBM : bbm@alameen.co.in<br>*website* : www.alameen.co.in |
| 7 | ದೂರವಾಣಿ : 22109479<br>*website:*<br>www.alameen.edu/asc. |
| 8 | ದೂರವಾಣಿ : 22234860 |

# ಜಾಗತಿಕ ಆರ್ಥಿಕ ಮುಗ್ಗಟ್ಟು



ಎಲ್ಲಾ ದೇಶಗಳೂ ಮೊದಲಿನ ಸ್ಥಿತಿಗೆ ಬರಬೇಕಾದರೆ ಮೊದಲು ಅಮೆರಿಕಾದ ಆರ್ಥಿಕ ಪರಿಸ್ಥಿತಿ ಬದಲಾಗಬೇಕು. ಈಗ ತಾನೇ ಮುಗಿದಿರುವ ಅಧ್ಯಕ್ಷರು ಮತ್ತು ಕಾಂಗ್ರೆಸ್‌ಗೆ ಚುನಾಯಿತರಾಗಿರುವವರು ೨೦೦೯ರ ಜನವರಿಯಲ್ಲಿ ಅಧಿಕಾರ ವಹಿಸಿಕೊಳ್ಳುವವರೆಗೆ ಖಚಿತವಾದ ಕಾರ್ಯಕ್ರಮಗಳು ಅನುಸರಣೆಗೆ ಬರಲಾರವು. ಪ್ರಸಕ್ತ ಆಡಳಿತದವರು ಕೈಗೊಂಡಿರುವ ಕಾರ್ಯಗಳು ತೊಂದರೆಯಲ್ಲಿರುವ ಹಣಕಾಸು ಸಂಸ್ಥೆಗಳಿಗೆ ಮಾತ್ರ ಪ್ರಯೋಜನವಾಗಬಹುದು. ತೊಂದರೆಗೆ ಒಳಗಾಗಿರುವ ಇತರ ವರ್ಗಗಳು ಸುಧಾರಿಸಿಕೊಳ್ಳಬೇಕಾದರೆ ನಿರುದ್ಯೋಗ ನಿವಾರಣೆ, ಉತ್ಪನ್ನದಲ್ಲಿ ಹೆಚ್ಚು ಹೂಡಿಕೆ, ಮೂಲಭೂತ ಸೌಕರ್ಯಗಳ ಹೆಚ್ಚಳಕ್ಕೆ ಬೇಕಾಗುವ ಸಾರ್ವಜನಿಕ ವೆಚ್ಚ, ವಿದ್ಯಾಭ್ಯಾಸ ಮತ್ತು ಆರೋಗ್ಯ ಸೌಲಭ್ಯಗಳ ವಿಸ್ತರಣೆ ಮೊದಲಾದ ಕಾರ್ಯಕ್ರಮಗಳು ಜಾರಿಗೆ ಬರಬೇಕು.

**ಕೆ. ಎಸ್. ಕೃಷ್ಣಸ್ವಾಮಿ**

ಹಲವು ದಶಕಗಳಿಂದೀಚಿನ ಬದಲಾವಣೆಗಳಲ್ಲಿ ಕಂಡುಬರುವುದು ಅಮೆರಿಕಾದ ಆರ್ಥಿಕ ಮತ್ತು ರಾಜಕೀಯ ಪ್ರಾಮುಖ್ಯತೆ. ಅದರಲ್ಲೂ ೧೯೮೦ರ ನಂತರ ಉಂಟಾಗಿರುವ ಸೋವಿಯತ್ ರಷ್ಯಾದ ಅವನತಿಯಾದ ಮೇಲೆ, ರಾಜಕೀಯ ಪ್ರಾಬಲ್ಯದೊಡನೆ ಅಮೆರಿಕಾದ ಆರ್ಥಿಕ ನೀತಿಗಳೂ ಜಾಗತಿಕವಾಗಿವೆ. ಹದಿನೆಂಟು ಹತ್ತೊಂಬತ್ತನೆ ಶತಮಾನಗಳಿಂದ ಬೆಳೆದಿರುವ ಬಂಡವಾಳಶಾಹಿ ತತ್ವಗಳನ್ನು ಅನುಸರಿಸಲು ಎಲ್ಲಾ ದೇಶಗಳೂ ಪ್ರಾರಂಭಿಸಿವೆ. ಅದರ ಪ್ರಭಾವ ೧೯೯೧ರಿಂದ ಈಚೆಗೆ ಭಾರತದಲ್ಲೂ ಕಂಡುಬರುತ್ತಿರುವುದು ವ್ಯಾಪಾರ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ. ಅದಕ್ಕೆ ಮೊದಲೇ ಅನೇಕ ಕೈಗಾರಿಕೆಗಳು, ತೈಲ ಮತ್ತು ಅದರ ಶುದ್ಧೀಕರಣ, ಬ್ಯಾಂಕುಗಳು ಮತ್ತು ವಿಮಾ ಸಂಸ್ಥೆಗಳು ರಾಷ್ಟ್ರೀಕರಣವಾಗಿದ್ದುದರಿಂದ ಈ ವ್ಯವಹಾರಗಳಲ್ಲಿ ಖಾಸಗೀ ಸಂಸ್ಥೆಗಳ ಬೆಳವಣಿಗೆಯಾಗಿರುವುದು ಇತ್ತೀಚೆಗೆ. ಆದರೆ ಮುಖ್ಯ ಹಣಕಾಸು ಸಂಸ್ಥೆಗಳು ಸರ್ಕಾರದ ಸ್ವಾಮ್ಯದಲ್ಲಿರುವುದರಿಂದ ಆ ಕ್ಷೇತ್ರದಲ್ಲಿ ಖಾಸಗೀ ವಲಯದ ಭಾಗ ಅಷ್ಟಾಗಿಲ್ಲ. ಎಲ್ಲಾ ವಲಯಗಳಲ್ಲೂ ಮಾಹಿತಿ ತಂತ್ರಜ್ಞಾನ ಮತ್ತು ಅಂತರ್ಜಾಲದ ಕ್ರಾಂತಿಕಾರಕ ಬೆಳವಣಿಗೆಯಿಂದ ಜಾಗತಿಕ ಸಂಪರ್ಕ ಹಿಂದೆಂದೂ ಇರದಷ್ಟು ತ್ವರಿತವಾಗಿದೆ. ಸಮಾಚಾರ, ತಂತ್ರಜ್ಞಾನ, ಪ್ರಚಾರ ಇವೆಲ್ಲವೂ ಕ್ಷಣ ಮಾತ್ರದಲ್ಲಿ ಒಂದು ದೇಶದಿಂದ ಇನ್ನೊಂದೆಡೆಗೆ ತಲುಪಿ ಯಾವ ದೇಶವೂ ಜಾಗತಿಕ ಜಾಲದಿಂದ ಬೇರೆಯಾಗಲು ಸಾಧ್ಯವಿಲ್ಲದಂತಾಗಿದೆ. ಆದ್ದರಿಂದ ಜಾಗತಿಕ ಏರಿಳಿತಗಳು ಒಂದೆಡೆಯಿಂದ ಇನ್ನೊಂದೆಡೆಗೆ ಹರಡುವುದು ಸುಲಭ.

ಜಾಗತಿಕ ವ್ಯವಸ್ಥೆ ಅಂತರರಾಷ್ಟ್ರೀಯವಾಗಿರುವುದು ಇದೇ ಮೊದಲಲ್ಲ. ೧೮-೧೯ನೇ ಶತಮಾನಗಳಲ್ಲಿ ಯೂರೋಪುದೇಶಗಳು ಅನುಸರಿಸುತ್ತಿದ್ದ ಮುಕ್ತ ಮಾರುಕಟ್ಟೆ ಮತ್ತು ಬಂಡವಾಳಶಾಹಿ ನೀತಿಗಳನ್ನು ತಮ್ಮ ಅಧೀನದಲ್ಲಿದ್ದ ವಸಾಹತುಗಳಲ್ಲೂ ಜಾರಿಗೆ ತಂದಿದ್ದರು. ತಮ್ಮ ಕೈಗಾರಿಕಾ ಪದಾರ್ಥಗಳನ್ನು ಮಾರಾಟಮಾಡಿ ಬದಲಾಗಿ ಕಚ್ಚಾ ಪದಾರ್ಥ ಮತ್ತು ಆಹಾರ ಸಾಮಗ್ರಿಗಳನ್ನು ಆಮದು ಮಾಡುವಾಗ ಸುಂಕರಹಿತ ವ್ಯವಸ್ಥೆಯನ್ನು ಅನುಸರಿಸಿದ್ದರು. ಭಾರತದಂತಹ ವಸಾಹತುರಾಷ್ಟ್ರಗಳಲ್ಲಿ ಇದರಿಂದಲ್ಲದೆ ಸ್ವಾಮ್ಯದೇಶಗಳ ಹಣದ ಚಲಾವಣೆಯೂ ಇದ್ದುದರಿಂದ ಅಲ್ಲಿಯವರಿಗೆ ಅನುಕೂಲವಾಗುವಂತೆ ಆಮದು ರಫ್ತುಗಳನ್ನು ಬದಲಾಯಿಸುತ್ತಾ ಇದ್ದರು. ಇವೆಲ್ಲ ಕಾರಣಗಳಿಂದ ಆಗಲೂ ಈ ಶತಮಾನದಲ್ಲಾಗುತ್ತಿರುವಂತೆ ಆರ್ಥಿಕ ಏರಿಳಿತಗಳು ಒಂದು ದೇಶದಿಂದ ಇನ್ನೊಂದಕ್ಕೆ ಹರಡುವುದು ಸಾಮಾನ್ಯವಾಗಿತ್ತು. ವ್ಯತ್ಯಾಸವೇನೆಂದರೆ ಈಗ ಅಂತರರಾಷ್ಟ್ರೀಯ ವ್ಯಾಪಾರ, ಹೂಡಿಕೆ, ವಿದೇಶಿ ವಿನಿಮಯದ ಏರುಪೇರುಗಳು, ಮಾಹಿತಿ ಮತ್ತು ಇತರ ತಂತ್ರಜ್ಞಾನಗಳು, ಷೇರು ಮಾರುಕಟ್ಟೆಗಳ ಸಂಪರ್ಕ ಇತ್ಯಾದಿಗಳು ಎಷ್ಟೋ ಪಟ್ಟು ಜಾಸ್ತಿಯಾಗಿರುವುದರಿಂದ ಅವುಗಳ ಪರಿಣಾಮ ಹೆಚ್ಚಾಗಿರುವುದು ಆರ್ಥಿಕ ವಲಯದಲ್ಲಿ.

ಈಗಿನ ಜಾಗತಿಕ ಮುಗ್ಗಟ್ಟಿಗೆ ಮುಖ್ಯ ಕಾರಣ ಅಮೆರಿಕಾದ ಹಣಕಾಸು ವ್ಯವಸ್ಥೆಯಲ್ಲಾಗಿರುವ ಕುಸಿತ. ಕೆಲವು ದಶಕಗಳಿಂದ ಅಲ್ಲಿಯ ಹಣಕಾಸು ಮಾರುಕಟ್ಟೆಯ ರೀತಿ ನೀತಿಗಳು ಎಷ್ಟು ಮುಕ್ತವಾಗಿವೆಯೆಂದರೆ ಅಲ್ಲಿಯ ಸರ್ಕಾರಗಳಾಗಲಿ, ಪ್ರಮುಖ ರಾಷ್ಟ್ರೀಯ ಸಂಸ್ಥೆಗಳಾಗಲೀ, ಯಾವ ತರಹ ನಿರ್ಬಂಧಗಳನ್ನೂ ಜಾರಿಗೆ ತಂದಿಲ್ಲ. ಖಾಸಗೀ ವಲಯದವರೆಲ್ಲಾ ತಮ್ಮ ಲಾಭ ಗರಿಷ್ಠವಾಗುವಂತಹ ಪದ್ಧತಿಗಳನ್ನು ಅನುಸರಿಸುತ್ತಾರೆ. ಎಲ್ಲಾ ತರಹದ ಹಣಕಾಸು ಸಂಸ್ಥೆಗಳ ವ್ಯವಹಾರಗಳೂ ತಮಗಾಗಬಹುದಾದ ಲಾಭವನ್ನು ಗಣನೆಗೆ ತಂದುಕೊಳ್ಳುತ್ತವೆಯೇ ಹೊರತು ಸಮಾಜದ ಮೇಲೆ ಅದರ ಪರಿಣಾಮವೇನಿರಬಹುದೆಂದು ಯೋಚಿಸುವುದು ಅಪರೂಪ.

ಈ ವ್ಯವಸ್ಥೆಯಲ್ಲಿ ಕೆಲವಾರು ವರ್ಷಗಳ ಹಿಂದೆ ಜನರ ಆದಾಯವೃದ್ಧಿಯಾದಂತೆ ಮನೆಗಳನ್ನು ಕೊಂಡುಕೊಳ್ಳುವುದು, ಅದಕ್ಕೆ ಅನುಕೂಲವಾಗುವಂತಹ ಸಾಲಗಳ ಸರಬರಾಜು, ಬೆಳೆಯಿತು. ಮನೆಗಳ ಖರೀದಿ ಹೆಚ್ಚಿದಂತೆ ಅದರ ಬೆಲೆಯೂ ಏರಿ ಅದರೊಡನೆ ಬಡ್ಡಿದರಗಳೂ ಏರಿದವು. ಈ ವ್ಯಾಪಾರಕ್ಕನುಕೂಲವಾಗುವಂತೆ

ಮಾರುಕಟ್ಟೆಯಲ್ಲಿದ್ದ ಹಣದ ಚಲಾವಣೆ ಬೆಳೆಯುವುದಲ್ಲದೆ ಅಲ್ಲಿನ ಫೆಡರಲ್ ರಿಸರ್ವ್ ವ್ಯವಸ್ಥೆಯು ಬಡ್ಡಿದರಗಳನ್ನು ಕಡಿಮೆ ಮಾಡುತ್ತಾ ಬಂದಿತು. ಮನೆಗಳ ಆಧಾರದ ಮೇಲಿನ ಸಾಲದ ಪ್ರಮಾಣ ಹೆಚ್ಚಿದಂತೆ ಸಾಲ ಕೊಡುತ್ತಿದ್ದ ಸಂಸ್ಥೆಗಳ ಹಣದ ಬೇಡಿಕೆಯೂ ಹೆಚ್ಚಿತು. ಲಕ್ಷಾಂತರ ಮನೆಗಳು ನಿರ್ಮಿತವಾದಂತೆ ಅಲ್ಲಿಯ ಲಾಭದಿಂದ ಆಕರ್ಷಿತರಾದ ದೊಡ್ಡ ದೊಡ್ಡ ಹಣಕಾಸು ಸಂಸ್ಥೆಗಳೂ ಹಣ ಒದಗಿಸಲು ಮುಂದೆ ಬಂದುವು. ಕೆಲವು ಸಾಮಾನ್ಯ ಬ್ಯಾಂಕುಗಳಲ್ಲದೆ ಹೂಡಿಕೆಗೆ ಸೀಮಿತವಾದ (investment banks) ಸಂಸ್ಥೆಗಳು ಈ ಸಂದರ್ಭದಲ್ಲಿ ತಮ್ಮದೇ ಆದ ಹೊಸ ತಂತ್ರಗಳನ್ನು ಅನುಸರಿಸಿದವು. ಮನೆ ಸಾಲಗಳನ್ನೆಲ್ಲಾ ಒಟ್ಟುಗೂಡಿಸಿ ಅವುಗಳ ಆಧಾರದ ಮೇಲೆ ತಮ್ಮದೇ ಆದ ಭದ್ರತಾಪತ್ರಗಳನ್ನು ತಯಾರಿಸಿ ಮಾರಾಟಕ್ಕಿಟ್ಟರು. ವಾಸದ ಮನೆಗಳ ಬೆಲೆ ಹೆಚ್ಚಿದಂತೆ ಈ ಪತ್ರಗಳ (securities) ಬೆಲೆಯೂ ಏರಿ ಅನೇಕ ಪ್ರಮುಖ ಬ್ಯಾಂಕುಗಳು ಅವನ್ನು ಕೊಂಡು ಹೂಡಿಕೆ ಸಂಸ್ಥೆಗಳಿಗೆ ಹಣ ಒದಗಿಸಿದವು. ಬ್ಯಾಂಕ್ ಆಫ್ ಅಮೆರಿಕಾ, ಸಿಟಿ ಕಾರ್ಪೊರೇಷನ್ ಅಂತಹ ಅಮೆರಿಕಾ ಸಂಸ್ಥೆಗಳಲ್ಲದೆ ಯೂರೋಪು, ಜಪಾನ್, ಫಿನ್‌ಲ್ಯಾಂಡ್, ಆಸ್ಟ್ರೇಲಿಯಾ ದೇಶದ ಬ್ಯಾಂಕುಗಳು ಈ ವಿಧದ ಆಧಾರ ಪತ್ರಗಳನ್ನು ಕೊಳ್ಳಲು ಮುಂದೆಬಂದರು. ಭದ್ರತಾ ಪತ್ರಗಳಿಗಿರುವ ಆಧಾರವೇನೆಂದು ಯಾರೂ ತಲೆಕೆಡಿಸಿಕೊಳ್ಳಲಿಲ್ಲ. ತಮಗೆ ದೊರಕಬಹುದಾದ ಲಾಭಕ್ಕೆ ಮಾತ್ರ ಗಮನಕೊಟ್ಟರು. ಫೆಡೆರಲ್ ರಿಸರ್ವ್ ವ್ಯವಸ್ಥೆಯವರು ಆ ಸಮಯದಲ್ಲಿ 'ಸುಲಭ ಹಣದ ನೀತಿ' (easy money policy)ಯನ್ನು ಅನುಸರಿಸದಿದ್ದರೆ ಪರಿಸ್ಥಿತಿ ಬೇರೆ ಇರುತ್ತಿತ್ತೇನೋ. ಆಗ ಮುಖ್ಯಸ್ಥರಾಗಿದ್ದ ಆಲೆನ್ ಗ್ರೀನ್‌ಸ್ಪಾನ್‌ರವರು ಈ ನೀತಿಯಿಂದ ರಾಷ್ಟ್ರೀಯ ಉತ್ಪನ್ನಕ್ಕೆ ಅನುಕೂಲವಾಗುವಂತೆ ಹಣದ ಚಲಾವಣೆ ಯನ್ನು ಹೆಚ್ಚಿಸಿದ್ದರೂ ಇರಬಹುದು. ಅದೇ ಸಮಯದಲ್ಲಿ ಅಧ್ಯಕ್ಷ ಬುಷ್‌ರವರು ಇರಾಕ್ ಮತ್ತು ಆಫ್ಘಾನಿಸ್ತಾನಗಳ ಯುದ್ಧಕ್ಕೆಂದು ರಾಷ್ಟ್ರ ಬಜೆಟ್ಟಿನಲ್ಲಿ ಖೋತಾ ಬೆಳೆಸಿಕೊಂಡು ಬಂದರು. ಒಟ್ಟಾರೆ ಹಣದ ಚಲಾವಣೆ ಜಾಸ್ತಿಯಾದಂತೆ ಪದಾರ್ಥಗಳ ಬೆಲೆಯೂ ಜಾಸ್ತಿಯಾಯಿತು. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಅಮೆರಿಕಾ ಡಾಲರ್‌ನ ಸರಬರಾಜು ಹೆಚ್ಚಿದಂತೆ ಅದರ ಬೆಲೆ ಸಾಕಷ್ಟು ಇಳಿದು ತೈಲ, ಆಹಾರ ಪದಾರ್ಥಗಳು, ಲೋಹಗಳ ಬೆಲೆ ಹೆಚ್ಚಲು ಕಾರಣವಾಯಿತಲ್ಲದೆ ಅದರಿಂದ ಇತರ ದೇಶಗಳಲ್ಲೂ ಪದಾರ್ಥಗಳ ಬೆಲೆ ಏರಿತು. ಈ ಹಿನ್ನೆಲೆಯಲ್ಲಿ ಷೇರುಗಳ ಬೆಲೆಗಳು ಹೆಚ್ಚಿ ಮುಂದೆ ಆಗಬಹುದಾದ ವ್ಯತ್ಯಾಸಗಳನ್ನಾಧರಿಸಿ ಎಲ್ಲಾ ದೇಶಗಳ ಷೇರುಮಾರುಕಟ್ಟೆಗಳಲ್ಲಿ ಪಣವನ್ನು ಇಡುವುದು (speculation on derivatives) ಅಗಾಧವಾಗಿ ಮುಂದುವರೆಯಿತು. ಹೀಗೆ ಒಂದರ ಮೇಲೊಂದರಂತೆ ಹಣಕಾಸು ಸಂಸ್ಥೆಗಳ ವ್ಯವಹಾರ ಬೆಳೆದು ಏನಾದರೂ ತಡೆ ಬಂದರೆ ಅವೆಲ್ಲಾ ಕುಸಿದುಕೊಳ್ಳುವ ಸ್ಥಿತಿಗೆ ಬಂದಿರುವುದನ್ನು ಯಾರೂ ಗಮನಿಸಲಿಲ್ಲ. ನಡೆಯುತ್ತಿದ್ದ ವಹಿವಾಟುಗಳಲ್ಲಿ ಬಹುಭಾಗ ಆಧಾರರಹಿತ ಪತ್ರಗಳನ್ನು ಅವಲಂಬಿಸಿ ಇರುವುದು ಗಣನೆಗೆ ಬರಲಿಲ್ಲ.

ಹೀಗಿರುವಾಗ ಕೆಲವು ತಿಂಗಳ ಹಿಂದೆ ಬೇರ್ ಸ್ಟರ್ನ್ಸ್ ಎಂಬ ಹೂಡಿಕೆ ಸಂಸ್ಥೆ ದಿವಾಳಿ ಯಾಗುವ ಸೂಚನೆ ಕಂಡುಬಂದು ಎಲ್ಲರೂ ಎಚ್ಚೆತ್ತು ಕೊಂಡರು. ಆ ಸಂಸ್ಥೆಗೆ ಸಹಾಯ ಮಾಡಲು ಹೊರಟ ರಾಷ್ಟ್ರೀಯ ಸರ್ಕಾರ ಮತ್ತು ರಾಷ್ಟ್ರೀಯ ಸಂಸ್ಥೆಗಳಲ್ಲಿ ಕೆಲವು ಉಳಿದ ಹಣಕಾಸು ಸಂಸ್ಥೆಗಳು ಎಷ್ಟು ಸುಭದ್ರವೆಂದು ತಿಳಿಯಲು ಯತ್ನಿಸಿದರು. ಹೀಗಿದ್ದಾಗ ಹೂಡಿಕೆ ಸಂಸ್ಥೆಗಳಲ್ಲಿ ಪ್ರಮುಖವಾಗಿದ್ದ ಲೆಹಮನ್ ಬ್ರದರ್ಸ್ ಮತ್ತು ಮೆರಿಲ್ ಲಿಂಚ್ ಎಂಬುವು ದಿವಾಳಿಯ ಸ್ಥಿತಿಗೆ ಬಂದುವು. ಅವೆರಡೂ ಮನೆಗಳ ಮೇಲಿದ್ದ ಸಾಲಗಳ ಆಧಾರದ ಮೇಲೆ ತಮ್ಮದೇ ಪತ್ರಗಳನ್ನು (securities) ವಿಪರೀತವಾಗಿ ಮಾರಾಟಮಾಡಿದ್ದರು. ಮನೆಗಳ ಬೆಲೆ ಕಡಿಮೆಯಾದಂತೆ ಈ ಪತ್ರಗಳ ಬೆಲೆಯೂ ಕಡಿಮೆಯಾಗಿ ಅವುಗಳನ್ನು ಕೊಂಡಿದ್ದ ಇತರ ಸಂಸ್ಥೆಗಳು ತಮ್ಮ ಹೂಡಿಕೆಯನ್ನು ವಾಪಸು ಪಡೆಯಲು ಪ್ರಾರಂಭಿಸಿದರು. ಆದರೆ ಅವನ್ನು ಕೊಳ್ಳುವವರಿಗಿಂತ ಮಾರಾಟ ಮಾಡುವವರು ಹೆಚ್ಚಾಗಿ ಆ ಪತ್ರಗಳ ಬೆಲೆ ಹಠಾತ್ತನೆ ಕುಸಿಯಿತು. ಮಾರುಕಟ್ಟೆಯಲ್ಲಿ ಹಣದ ಅಭಾವ ವಿಪರೀತವಾಗಿ ತುರ್ತು ಕಾರ್ಯಕ್ರಮಗಳನ್ನು ಎಲ್ಲೆಲ್ಲೂ ಜಾರಿಗೆ ತರುವಂತಾಯಿತು.


With Best Compliments From











Precision Holding Technology to the world




Otto Bilz (India) Pvt. Ltd.
5B/6A, KIADB Industrial Area, Doddaballapur
Bangalore - 561 203, Dist, Karnataka
Ph : 080-22638700 Fax : 080-22638702
e-mail : obi@bilzindia.com, Website : www.bilzindia.com



ಮಾರುಕಟ್ಟೆಯಲ್ಲಿ ಕುಸಿತವಾದಂತೆ ಜನರ ನಂಬಿಕೆ, ಭರವಸೆಗಳು ಕುಸಿಯುತ್ತಿರುವುದು ಎಲ್ಲಾ ದೇಶಗಳಲ್ಲೂ ಕಂಡುಬಂದಿತು.

ಈ ವರ್ಷದ ಅಕ್ಟೋಬರ್ ಪ್ರಾರಂಭದಲ್ಲಿ ಹೂಡಿಕೆ ಸಂಸ್ಥೆಗಳು ದಿವಾಳಿಯಾಗುತ್ತಿದ್ದಂತೆ ಸರ್ಕಾರದ ಸ್ವಾಮ್ಯ ದಲ್ಲಿದ್ದ ಮತ್ತೆರಡು ಸಂಸ್ಥೆಗಳು ತೊಂದರೆಗೀಡಾದವು. ನಿವೃತ್ತ ಸೈನಿಕರು ತಮ್ಮ ಮನೆಗಳಿಗೋಸ್ಕರ ಸಾಲ ಮಾಡುತ್ತಿದ್ದ ಫ್ಯಾನಿ ಮೆ ಮತ್ತು ಫ್ರೆಡ್ಡಿ ಮ್ಯಾಕ್ ಎಂಬ ಸಂಸ್ಥೆಗಳು ಮತ್ತು ಖಾಸಗೀ ವಲಯದಲ್ಲಿದ್ದ ಅಸೋಸಿಯೇಟೆಡ್ ಇನ್‌ವೆಸ್ಟ್‌ಮೆಂಟ್ ಗ್ರೂಪ್ (AIG) ಎಂಬ ಬಹುದೊಡ್ಡ ವಿಮಾ ಕಂಪನಿಗಳು ದಿವಾಳಿಯಾಗುವಂತಾದವು. ಅವುಗಳನ್ನು ರಕ್ಷಿಸಲು ಸರ್ಕಾರದ ವಿತ್ತಮಂತ್ರಿ ಹೆನ್ರಿ ಪಾಲ್‌ಸನ್‌ರವರು ಕಾಂಗ್ರೆಸ್‌ನಿಂದ ೭೦೦ ಶತಕೋಟಿ ಡಾಲರ್‌ಗಳನ್ನು ಒದಗಿಸಲು ಅಪ್ಪಣೆ ಕೇಳಿದರು. ಅದೇ ಉದ್ದೇಶದಿಂದ ಫೆಡರಲ್ ರಿಸರ್ವ್‌ನ ಹೊಸ ಮುಖ್ಯಸ್ಥರಾಗಿದ್ದ ಬೆನ್ ಬರ್ನಾಂಕೆರವರು ತಾವು ಕೊಡುತ್ತಿದ್ದ ಸಾಲದ ದರವನ್ನು ಇಳಿಸಿದುದಲ್ಲದೇ ಸುಮಾರು ೧೫ ಶತಕೋಟಿ ಡಾಲರನ್ನು ತೊಡಗಿಸಿ ಪ್ರಮುಖ ಬ್ಯಾಂಕ್‌ಗಳ ಬಂಡವಾಳವನ್ನು ಬಲಪಡಿಸಲು ಪ್ರಯತ್ನಿಸಿದರು. ಆ ವೇಳೆಗೆ ಸಂಸ್ಥೆಗಳು ಹೂಡಿಕೆ ಮಾಡಿದ್ದ ಆಧಾರ ಪತ್ರಗಳು ಬೆಲೆಬಾಳದಂತೆ ಆಗಿ ಅವುಗಳ ಪ್ರಮಾಣಕ್ಕೂ ಬ್ಯಾಂಕುಗಳ ಬಂಡವಾಳಗಳಿಗೂ ವಿಪರೀತ ವ್ಯತ್ಯಾಸ ವಾಗಿತ್ತು. ವಿತ್ತ ಮಂತ್ರಿಗಳು ಕೇಳಿದಂತೆ ೭೦೦ ಶತಕೋಟಿ ಡಾಲರ್‌ಗಳು ಬಿಡುಗಡೆಯಾಗಿದ್ದರೂ ಆ ಮೊತ್ತವನ್ನು ಹೇಗೆ ಉಪಯೋಗಿಸಬಹುದೆಂಬ ನಿರ್ಧಾರವಾಗಿಲ್ಲ. ಈ ಮಧ್ಯೆ ಅಮೆರಿಕಾ ಹೊಸ ಅಧ್ಯಕ್ಷರನ್ನು ಚುನಾಯಿಸಿರುವುದರಿಂದ ಅವರು ಅಧಿಕಾರ ವಹಿಸಿಕೊಳ್ಳುವವರೆಗೆ ಯಾವ ತೀರ್ಮಾನವೂ ಆಗಲಾರದು. ಅಲ್ಲಿಯ ತನಕ ಜನತೆಯ ನಂಬಿಕೆಗಳಲ್ಲಿ ಬದಲಾವಣೆಯಾಗುವ ಸಂಭವವಿಲ್ಲ.

ಹಣದ ಅಭಾವದಿಂದ ಉತ್ಪನ್ನಶೀಲ ಕಂಪನಿಗಳಲ್ಲದೆ ಗ್ರಾಹಕರೂ ತೊಂದರೆಗೀಡಾಗುತ್ತಿದ್ದಾರೆ. ಉತ್ಪನ್ನ ಮಾರಾಟಗಳು ಕಡಿಮೆಯಾದಂತೆ ನಿರುದ್ಯೋಗ ವುಂಟಾಗಿ ಜನರ ಆದಾಯ-ಖರ್ಚುಗಳು ಕುಸಿಯುತ್ತಿವೆ. ಕಡಿಮೆ ಉತ್ಪನ್ನ, ನಿರುದ್ಯೋಗ, ಆದಾಯದ ಅಭಾವ, ಗ್ರಾಹಕರಿಂದ ಕಡಿಮೆ ಖರ್ಚು, ಇದರಿಂದ ಪುನಃ ಉತ್ಪನ್ನದ ಇಳಿಕೆ ಈ ವಿಧದ ವಿಷವರ್ತುಲ ಪ್ರಾರಂಭವಾಗಿದೆ. ಅಮೆರಿಕದಿಂದ ವ್ಯಾಪಾರದ ಇಳಿಕೆ ಇತರ ದೇಶಗಳಿಗೂ ಹರಡಿ ಅವೆಲ್ಲಾ ತುರ್ತು ಕಾರ್ಯಕ್ರಮಗಳನ್ನು ಆಚರಣೆಗೆ ತಂದಿವೆ. ಬ್ರಿಟನ್‌ನಲ್ಲಿ ಬ್ಯಾಂಕ್ ಆಫ್ ಇಂಗ್ಲೆಂಡಿನಿಂದ ಸುಮಾರು ೭೦ ಶತಕೋಟಿ ಪೌಂಡುಗಳು ಮೂರು ಮುಖ್ಯ ಬ್ಯಾಂಕುಗಳ ಬಂಡವಾಳ ಹೆಚ್ಚಿಸಲು ದೊರೆತಿದೆ. ಇದೇ ರೀತಿ ಫ್ರಾನ್ಸ್, ಜರ್ಮನಿ, ಬೆಲ್ಜಿಯಂ, ಸ್ವಿಟ್ಜರ್‌ಲೆಂಡ್‌ನ ಕೇಂದ್ರ ಬ್ಯಾಂಕುಗಳು ತಮ್ಮ ಸಂಸ್ಥೆಗಳಿಗೆ ಸಹಾಯ ಮಾಡುತ್ತಿವೆ. ಭಾರತದಲ್ಲೂ ರಿಸರ್ವ್ ಬ್ಯಾಂಕ್ ಹಣಕಾಸು ಸಂಸ್ಥೆಗಳು ಇಡಬೇಕಾದ ಠೇವಣಿಯನ್ನು ಕಡಿಮೆಮಾಡುವ ಮೂಲಕ ಸುಮಾರು ಒಂದು ಲಕ್ಷ ಕೋಟಿಯಷ್ಟು ಬಿಡುಗಡೆ ಮಾಡಿರುವುದಲ್ಲದೆ ತಮ್ಮ ಬಡ್ಡಿದರವನ್ನು ಕಡಿಮೆಮಾಡಿದೆ. ಇತ್ತೀಚೆಗೆ ಚೀನಾ ದೇಶ ಕೂಡ ಈ ರೀತಿ ಸಹಾಯ ಮತ್ತು ಮೂಲಭೂತ ಸೌಕರ್ಯಗಳ ವಿಸ್ತರಣೆಗೆ ಖರ್ಚುಮಾಡಲು ೫೮೬ ಶತಕೋಟಿ ಡಾಲರ್‌ಗಳನ್ನು ಬಿಡುಗಡೆ ಮಾಡಿದೆ.

> **ಅವಾಂತರ !**
>
> ಮತವೇ ಬೇಕಿಲ್ಲದ
> ಈ ಕಾಲದಲ್ಲಿ
> ಏತಕ್ಕೆ ಬೇಕು ಮತಾಂತರ
> ಬಾಣಲೆಯಿಂದ ಬೆಂಕಿಗೆ
> ಬೀಳುವ ಅವಾಂತರ
>
> – ಸಿ.ಪಿ.ಕೆ.

ಎಲ್ಲಾ ದೇಶಗಳೂ ಮೊದಲಿನ ಸ್ಥಿತಿಗೆ ಬರ ಬೇಕಾದರೆ ಮೊದಲು ಅಮೆರಿಕಾದ ಆರ್ಥಿಕ ಪರಿಸ್ಥಿತಿ ಬದಲಾಗಬೇಕು. ಈಗ ತಾನೇ ಮುಗಿದಿರುವ ಅಧ್ಯಕ್ಷರು ಮತ್ತು ಕಾಂಗ್ರೆಸ್‌ಗೆ ಚುನಾಯಿತರಾಗಿರುವವರು ೨೦೦೯ರ ಜನವರಿಯಲ್ಲಿ ಅಧಿಕಾರ ವಹಿಸಿಕೊಳ್ಳುವ ವರೆಗೆ ಖಚಿತವಾದ ಕಾರ್ಯಕ್ರಮಗಳು ಅನುಸರಣೆಗೆ ಬರಲಾರವು. ಪ್ರಸಕ್ತ ಆಡಳಿತದವರು ಕೈಗೊಂಡಿರುವ ಕಾರ್ಯಗಳು ತೊಂದರೆಯಲ್ಲಿರುವ ಹಣಕಾಸು ಸಂಸ್ಥೆಗಳಿಗೆ ಮಾತ್ರ ಪ್ರಯೋಜನವಾಗಬಹುದು. ತೊಂದರೆಗೆ ಒಳಗಾಗಿರುವ ಇತರ ವರ್ಗಗಳು ಸುಧಾರಿಸಿಕೊಳ್ಳಬೇಕಾದರೆ ನಿರುದ್ಯೋಗ ನಿವಾರಣೆ, ಉತ್ಪನ್ನದಲ್ಲಿ ಹೆಚ್ಚು ಹೂಡಿಕೆ, ಮೂಲಭೂತ ಸೌಕರ್ಯಗಳ ಹೆಚ್ಚಳಕ್ಕೆ ಬೇಕಾಗುವ ಸಾರ್ವಜನಿಕ ವೆಚ್ಚ, ವಿದ್ಯಾಭ್ಯಾಸ ಮತ್ತು ಆರೋಗ್ಯ ಸೌಲಭ್ಯಗಳ ವಿಸ್ತರಣೆ ಮೊದಲಾದ ಕಾರ್ಯಕ್ರಮಗಳು ಜಾರಿಗೆ ಬರಬೇಕು. ಹೊಸ ಅಧ್ಯಕ್ಷರಾಗುವ ಬರಾಕ್ ಒಬಾಮಾರವರು ಮತ್ತು ಹೊಸದಾಗಿ ಚುನಾಯಿತವಾಗಿರುವ ಡೆಮೋಕ್ರೆಟಿಕ್ ಪಕ್ಷದ ಕಾಂಗ್ರೆಸ್ ಸದಸ್ಯರು ಮಾಡುವ ನಿರ್ಧಾರಗಳು ಜನಸಾಮಾನ್ಯರ ಪರವಾಗಿರುವುವೆಂದು ಎಲ್ಲರ ನಿರೀಕ್ಷೆ. ಅಮೆರಿಕಾ ಸರ್ಕಾರ ಖರ್ಚು ಮಾಡ ಬೇಕೆಂದಿರುವ ೭೦೦ ಶತಕೋಟಿ ಡಾಲರ್‌ಗಳ ಪ್ರಯೋಜನ ಹಣಕಾಸು ಸಂಸ್ಥೆಗಳಿಗೆ ಮೀಸಲಾಗ ಬಾರದು. ಅದರಿಂದ ಕಷ್ಟದಲ್ಲಿರುವ ಎಲ್ಲರಿಗೂ ಉಪಯೋಗವಾಗಬೇಕೆಂದು ಒಬಾಮಾರವರು ತಿಳಿಸಿದ್ದಾರೆ. ಸಾಲದ ಹೊರೆಯಿಂದ ಮನೆ ಕಳೆದು ಕೊಳ್ಳುವ ಸ್ಥಿತಿಗೆ ಬಂದಿರುವವರ ಸಂಖ್ಯೆ ೪೫ ಲಕ್ಷಕ್ಕೂ ಮೀರಿದೆ. ಅವರಿಗೆ ಪರಿಹಾರ ದೊರಕುವಂತಾಗ ಬೇಕು. ಅಲ್ಲದೇ ಆರೋಗ್ಯ ಸೌಲಭ್ಯಗಳು, ವಿಮಾ ಸೌಕರ್ಯ, ವಿದ್ಯಾಭ್ಯಾಸದ ಅನುಕೂಲಗಳು, ಸಣ್ಣ ಪುಟ್ಟ ಕೈಗಾರಿಕೆಗಳ ಪ್ರಗತಿ, ನಿರುದ್ಯೋಗದಲ್ಲಿ ಇಳಿಕೆ – ಇವೆಲ್ಲಾ ಸಾಧ್ಯವಾಗಬೇಕಾದರೆ ೧೯೩೦ರ ದಶಕದಲ್ಲಿ ಅಮೆರಿಕಾದ ಅಧ್ಯಕ್ಷರಾಗಿದ್ದ ಫ್ರಾಂಕ್ಲಿನ್ ರೂಸ್‌ವೆಲ್ಟ್‌ರವರಂತೆ ಒಬಾಮಾರವರು ಹೊಸ ನೀತಿಗಳನ್ನು ಆದಷ್ಟು ಬೇಗ ಜಾರಿಗೆ ತರಬೇಕು. ಇದಾಗ ಬೇಕಾದರೆ ಆ ದೇಶದ ಶಾಸಕಾಂಗ, ನ್ಯಾಯಾಂಗಗಳ ಸಹಕಾರ ಅಧ್ಯಕ್ಷರಿಗೆ ಇರಬೇಕು. ಆರ್ಥಿಕ ಮುಗ್ಗಟ್ಟು ಬದಲಾಗಲು ಎಲ್ಲಕ್ಕಿಂತ ಹೆಚ್ಚಾಗಿ ಜನಸಾಮಾನ್ಯರಲ್ಲಿ ಮತ್ತು ಉತ್ಪನ್ನ ಕಾರ್ಯದಲ್ಲಿ ಇರುವವರ ಮನೋಭಾವಗಳು ಬದಲಾಗಬೇಕು. ಇದು ಕ್ಷಿಪ್ರವಾಗಿ ಆಗುವುದು ಅಸಂಭವ. ಆರ್ಥಿಕ ಪ್ರಗತಿಯ ಸೂಚನೆಗಳು ಕಂಡು ಬರುವವರೆಗೆ ಜನರ ಮನೊಭಾವಗಳು ಬದಲಾಗುವುದಿಲ್ಲ. ಮುಂದಿನ ವರ್ಷದಲ್ಲಿ ಅಧ್ಯಕ್ಷರು ಜಾರಿಗೆ ತರುವ ಕಾರ್ಯಕ್ರಮ ಗಳಿಂದ ಎಲ್ಲರಿಗೂ ಉಪಯೋಗವಾಗುವುದೆಂಬ ಭರವಸೆ ಜನರಿಗೆ, ಹೂಡಿಕೆದಾರರಿಗೆ, ವ್ಯಾಪಾರಿಗಳಿಗೆ, ಆರ್ಥಿಕ ಸಂಸ್ಥೆಗಳಾದಿಯಾಗಿ ಸರ್ವರಿಗೂ ನಂಬಿಕೆ ಬರುವಂತೆ ಆಗಬೇಕು.

ಅಮೆರಿಕಾದಲ್ಲಿ ವೃತ್ತ ಪತ್ರಿಕೆಗಳು, ರೇಡಿಯೋ, ದೂರದರ್ಶನ, ಅಂತರ್ಜಾಲ ಮೊದಲಾದ ಮಾಧ್ಯಮಗಳ ಪ್ರಭಾವ ವಿಪರೀತ. ದೊಡ್ಡ ದೊಡ್ಡ ಮಾಧ್ಯಮ ಸಂಸ್ಥೆಗಳು ಮುಕ್ತ ಮಾರುಕಟ್ಟೆ ನೀತಿಗಳಿಂದ ಸಾಕಷ್ಟು ಲಾಭ ಪಡೆದಿವೆ. ಅವುಗಳ ಸಹಕಾರ ಒಬಾಮಾರವರಿಗೆ ದೊರಕಿದರೆ ಅನುಸರಿಸುವ ಕಾರ್ಯಕ್ರಮಗಳು ಫಲಪ್ರದವಾಗುತ್ತವೆ. ಈಗಿನ ಪರಿಸ್ಥಿತಿಯಲ್ಲಿ ಮಾಧ್ಯಮಗಳ ಆದಾಯದ ಹೆಚ್ಚು ಭಾಗ ಅವರಿಗೆ ದೊರಕುವುದು ಕಂಪನಿ ಜಾಹೀರಾತುಗಳಿಂದ, ಮತ್ತು ಮಾರುಕಟ್ಟೆಗಳಲ್ಲಿ ಗ್ರಾಹಕರುಕೊಳ್ಳುವುದನ್ನು ಪ್ರೋತ್ಸಾಹಿಸುವುದರಿಂದ. ಮಾರುಕಟ್ಟೆಗಳ ಮುಕ್ತ ಬೆಳವಣಿಗೆಗೆ ಸರ್ಕಾರವೇನಾದರೂ ಅಡ್ಡಿ ಬಂದರೆ ಮಾಧ್ಯಮಗಳಿಗೆ ಹಿಡಿಸುವುದಿಲ್ಲ. ಹಾಗಾಗಿ ಒಬಾಮಾ ರವರು ಅನುಸರಿಸಬಹುದಾದ ಕಾರ್ಯಕ್ರಮಗಳಿಗೆ ಮಾಧ್ಯಮದವರ ಬೆಂಬಲ ಏನಿರುತ್ತೆಂದು ಕಾದು ನೋಡಬೇಕಾಗಬಹುದು. ಆರ್ಥಿಕ ಸ್ಥಿತಿ ಹದ ಗೆಡುತ್ತಿರುವಾಗ ಸಮಾಜದ 'ನಾಲ್ಕನೆಯ ಅಂಗ' ವೆಂದಾಗಿರುವ (Fourth Estate) ಮಾಧ್ಯಮಗಳ ಸಹಕಾರ ಸರ್ಕಾರದ ಹೊಸನೀತಿಗಳಿಗೆ ದೊರಕುವುದೆಂಬ ಆಸೆ ಒಬಾಮಾರವರಿಗಿರಬಹುದು. ಹೇಗಾಗುವುದೋ ಕಾದು ನೋಡಬೇಕು. ಅಮೆರಿಕವಲ್ಲದೆ ಇತರ ದೇಶಗಳೂ ಮುಕ್ತ ಮಾರುಕಟ್ಟೆ ನೀತಿಗಳನ್ನು ಅನುಸರಿಸುತ್ತಿರುವು ದರಿಂದ ಅದರ ಹರಹು ಈಗ ಜಾಗತಿಕವಾಗಿದೆ. ಇದನ್ನು ಸುಧಾರಿಸುವುದು ಸುಲಭವಲ್ಲ.

ಆದರೆ ಒಬಾಮಾರವರು ಈಗಾಗಲೇ ಆರ್ಥಿಕ ಸುಧಾರಣೆಗಳು ಕೆಲವನ್ನು ಜಾರಿಗೆ ತರಲು ತಯಾರಾಗಿದ್ದಾರೆ. ಮುಖ್ಯವಾಗಿ ಮನೆ ಕಳೆದುಕೊಳ್ಳುವ ಸ್ಥಿತಿಯಲ್ಲಿರುವವರಿಗೆ ಸಹಾಯ, ನಿರುದ್ಯೋಗಿಗಳಿಗೆ ಕೆಲಸ, ಆರೋಗ್ಯ ನೀತಿಯನ್ನು ಸರ್ವರಿಗೂ ಉಪಯೋಗವಾಗುವಂತೆ ಬದಲಾಯಿಸುವುದು, ಬಡವರ್ಗದವರ ವಿದ್ಯಾಭ್ಯಾಸಕ್ಕೆ ಹೆಚ್ಚು ಅವಕಾಶ, ಸಣ್ಣ ಉದ್ಯಮಗಳಿಗೆ ಪ್ರೋತ್ಸಾಹ ಮೊದಲಾದವುಗಳಿಗೆ ಸರ್ಕಾರ ನಿಯೋಜಿಸಿರುವ ೭೦೦ ಶತಕೋಟಿ ಡಾಲರುಗಳಲ್ಲಿ ಹಣ ಒದಗಿಸುವುದಲ್ಲದೆ ತಮ್ಮ ಮುಂದಿನ ಬಜೆಟ್‌ನಲ್ಲಿ ಅವಕಾಶ ಕಲ್ಪಿಸುವುದಾಗಿ ಹೇಳಿದ್ದಾರೆ. ಇದಕ್ಕೆ ಸಹಾಯವಾಗುವಂತೆ ಇರಾಕ್ ದೇಶದಿಂದ ಮುಂದಿನ ೧೬ ತಿಂಗಳುಗಳಲ್ಲಿ ಸೇನೆಯನ್ನು

ವಾಪಸು ತಂದು ಅದಕ್ಕಾಗುತ್ತಿದ್ದ ವೆಚ್ಚವನ್ನು ಇಳಿಸುವುದಾಗಿ ತಿಳಿಸಿದ್ದಾರೆ. ರೂಸ್‌ವೆಲ್ಟರು ಮಾಡಿದಂತೆ ಒಬಾಮಾರವರೂ ತಮ್ಮ ಆಡಳಿತದ ಮೊದಲ ನೂರು ದಿನಗಳಲ್ಲಿ ಅವಶ್ಯಕ ಸುಧಾರಣೆಗಳನ್ನು ಹಮ್ಮಿಕೊಳ್ಳುವ ಆಶಯ ವಿಶ್ವವ್ಯಾಪಿಯಾಗಿದೆ. ತ್ವರಿತವಾಗಿ ಆರ್ಥಿಕಸ್ಥಿತಿಯನ್ನು ಹತೋಟಿಗೆ ತರಬೇಕಾದರೆ ಅನೇಕ ಹೊಸ ಯೋಜನೆಗಳನ್ನು ಸಾರ್ವಜನಿಕವಾಗಿ ಕೈಗೊಂಡು, ಅದರ ಪರಿಣಾಮ ದಿಂದುಂಟಾಗಬಹುದಾದ ಬಜೆಟ್ಟಿನ ಖೋತಾಕ್ಕೆ ಹೆದರದೆ ಮುಂದುವರೆಯಬೇಕೆಂದು ಅರ್ಥಿಕ ತಜ್ಞರನೇಕರು ಹೇಳುತ್ತಿದ್ದಾರೆ. ಕೇಂದ್ರ ಬ್ಯಾಂಕುಗಳು ನೀಡುವ ಸಾಲದ ಮೊತ್ತ ಅಥವಾ ಬಡ್ಡಿ ದರಗಳ ಇಳಿಕೆಯಿಂದ ಈಗಿರುವ ಸ್ಥಿತಿಯಲ್ಲಿ ದೀರ್ಘಾವಧಿ ಪ್ರಯೋಜನಗಳಾಗುವಂತೆ ಕಾಣುವುದಿಲ್ಲ. ಉತ್ಪನ್ನ ಬೆಳೆಯಬೇಕಾದರೆ ಗ್ರಾಹಕರ ಕೊಳ್ಳುವಿಕೆಯು ಹೆಚ್ಚಬೇಕು. ಇದಾಗಬೇಕಾದರೆ ಜನರ ಉದ್ಯೋಗ ಹೆಚ್ಚಿ, ಅವರ ಆದಾಯಗಳು ಬೆಳೆಯಬೇಕು. ಹೀಗಾಗಬೇಕಾದರೆ ಸಾರ್ವಜನಿಕ ವೆಚ್ಚದ (public expenditure) ಹೂಡಿಕೆ ಅಥವಾ ಇತರ ಖರ್ಚುಗಳಿಂದ ಜನರಿಗೆ ನೇರವಾಗಿ ತಲುಪುವಂತೆ ಆದಾಯಗಳು ಬೆಳೆಯಬೇಕು. ಇಂತಹ ಸಂದರ್ಭದಲ್ಲಿ ಬಜೆಟ್ಟಿನ ಖೋತಾ, ಮಾರುಕಟ್ಟೆಗಳ ಮುಕ್ತತೆಯಲ್ಲಿ ಕಡಿತ, ಮೂಲಭೂತ ಸೌಕರ್ಯಗಳ ವಿಸ್ತರಣೆ- ಇವುಗಳನ್ನೆಲ್ಲಾ ಅಳವಡಿಸಿಕೊಳ್ಳಲು ಸರ್ಕಾರಗಳು ತಯಾರಿರಬೇಕು. ತಮ್ಮ ಚುನಾವಣೆ ಸಮಯದಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ''ಬದಲಾವಣೆ''ಗೆ ಒತ್ತುಕೊಟ್ಟಿರುವ ಒಬಾಮಾರವರು ಈ ವಿಧದ ಸಾಂಪ್ರದಾಯಿಕವಲ್ಲದ ಕಾರ್ಯನೀತಿಗಳನ್ನನುಸರಿಸಲು ಸಿದ್ಧರಾಗಬೇಕು.

ಜಾಗತಿಕ ಬಿಕ್ಕಟ್ಟಿನಿಂದ ಭಾರತದಂತಹ ದೇಶಗಳಿಗೆ ಎರಡು ತರಹ ಪ್ರಭಾವ ಗಳಾಗಿವೆ. ಮೊದಲನೆಯದಾಗಿ ಅಮೆರಿಕಾ ಮತ್ತು ಯೂರೋಪಿನ ರಾಷ್ಟ್ರಗಳ ಆಮದು ಕಡಿಮೆಯಾಗಿ ಅದರಿಂದ ಇಲ್ಲಿಯ ಕೆಲವು ಉದ್ಯಮಗಳಿಗೆ ನಷ್ಟವುಂಟಾಗುತ್ತಿದೆ. ಇವುಗಳಲ್ಲಿ ಮಾಹಿತಿ ತಂತ್ರಜ್ಞಾನ, ಅದಿರು ಮತ್ತು ಲೋಹಗಳು, ಮೋಟಾರು ವಾಹನಗಳ ಬಿಡಿಭಾಗಗಳು, ಒಡವೆಗಳು, ತಯಾರಾದ ಉಡುಪುಗಳು ಮುಖ್ಯವಾದವು. ಅವುಗಳ ಮುಂದಿನ ಪ್ರಗತಿ ಬೇರೆ ವಿದೇಶಗಳಲ್ಲಿ ಮತ್ತು ಅಂತರ್ದೇಶೀಯ ಮಾರುಕಟ್ಟೆಗಳನ್ನು ಅವಲಂಬಿಸಿರುತ್ತದೆ. ಎರಡನೆಯದಾಗಿ ಹೊರದೇಶದ ಸಂಸ್ಥೆಗಳು ಭಾರತೀಯ ಕಂಪನಿಗಳಲ್ಲಿ ಹೂಡುತ್ತಿದ್ದ ಮೊತ್ತದಲ್ಲಿ ಭಾರಿ ಇಳಿಕೆಯಾಗಿ ಷೇರುಮಾರುಕಟ್ಟೆಗಳಲ್ಲಿ ವಿಪರೀತ ಕುಸಿತವಾಗಿದೆ. ಕಂಪನಿಗ ಬಂಡವಾಳ ಹೂಡಿಕೆಗೆ ಇದುವರೆಗೆ ಪರದೇಶದಿಂದ ಬರುತ್ತಿದ್ದ ಹ ಕಡಿಮೆಯಾಗಿರುವುದಲ್ಲದೆ ಷೇರು ಮಾರುಕಟ್ಟೆಯ ಕುಸಿತದಿಂದ ದೇಶದಲ್ಲಿ ಹೊಸದಾಗಿ ಬಂಡವಾಳ ಕೂಡಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಮುಂದಿನ ವರ್ಷದ (೨೦೦೯-೨೦೧೦) ಕೈಗಾರಿಕಾ ಕ್ಷೇತ್ರದಲ್ಲಿ ಈ ಕಾರಣಗಳಿಂದ ಉತ್ಪಾ ಕಡಿಮೆಯಾಗುವುದಲ್ಲದೆ ನಿರುದ್ಯೋಗ ಹೆಚ್ಚಬಹುದು. ಆರ್ಥಿ ಹಿಂಜರಿಕೆಯಾಗಿರುವಾಗ ಹೊರದೇಶದವರಾಗಲಿ, ಲಾಭದ ದೃಷ್ಟಿಯಿಂದ ಹೂಡಿ ಮಾಡುವ ದೇಶೀಯರಾಗಲಿ ಹಣ ಒದಗಿಸುವುದು ಅನುಮಾನ. ಇಂತಹ ಸ್ಥಿತಿಯ ನಮ್ಮ ಸರ್ಕಾರಗಳೂ ಬಜೆಟ್ ಖೋತಾಗಳಿಗೆ ಹೆದರದೆ ಮೂಲಭೂ ಸೌಕರ್ಯಗಳಿಗೆಲ್ಲಾ ಆದ್ಯತೆ ಕೊಟ್ಟು ತಾವು ಹೂಡುವುದನ್ನು ಧೈರ್ಯವಾ ಕೈಗೆತ್ತಿಕೊಳ್ಳಬೇಕು. ಇದರಿಂದ ಹಣದುಬ್ಬರ ಹೆಚ್ಚಬಹುದು; ಆದರೆ ಬೆಲೆಗ ಸೂಚ್ಯಂಕಗಳಲ್ಲಿ ಇಳಿಕೆ ಕಂಡುಬಂದಿದೆಯಲ್ಲದೆ ಮುಂದಿನ ಎರಡು ತಿಂಗಳ ವ್ಯವಸಾಯದ ಹೊಸ ಫಸಲುಗಳು ಮಾರುಕಟ್ಟೆಗಳಿಗೆ ಬರುವುದರಿಂದ ಅಷ್ಟೇನೂ ಜನರಿಗೆ ತೊಂದರೆಯಾಗದಿರಬಹುದು. ಹಾಗೇನಾದರೂ ಕಂಡುಬಂದರೆ ಅದರ ನಿವಾರಣೆಗೂ ಸೂಕ್ತ ಕ್ರಮಗಳನ್ನು ಉಪಯೋಗಿಸಿಕೊಳ್ಳಲು ಕೇಂದ್ರ ಸರ್ಕಾರವಾಗಲಿ, ರಾಜ್ಯ ಸರ್ಕಾರಗಳಾಗಲಿ ಹಿಂಜರಿಯಬಾರದು. ಉಂಟಾಗಿರುವ ಬಿಕ್ಕಟ್ಟಿನಲ್ಲಿ ನಡೆಸಬೇಕಾಗಿರುವ ಕಾರ್ಯಕ್ರಮಗಳನ್ನು ಧೈರ್ಯವಾಗಿ ಕೈಗೊಳ್ಳಲು ತಯಾರಿರುವುದು ಸೂಕ್ತ. ಏನಾದರೂ ತಮ್ಮ ರಾಜಕೀಯ ಭವಿಷ್ಯಕ್ಕೆ ತೊಂದರೆಯಾದೀತೆಂದು ಹೆದರಿ ದೇಶವನ್ನು ದೇವರು ಕಾಪಾಡುವನೆಂದು ಕೈಕಟ್ಟಿ ಕೂಡುವುದು ಒಂದು ವಿಧದಲ್ಲಿ ದೇಶದ್ರೋಹವಾಗಬಹುದು. ನಮ್ಮ ರಾಜ್ಯ ಅಥವಾ ರಾಜ್ಯಗಳ ಮುಖಂಡರು ಅಂತಹ ಕೀಳು ಸ್ಥಿತಿಗೆ ಇಳಿಯುವುದಿಲ್ಲವೆಂದು ನಂಬಬಹುದೆ ?

ಕೆ. ಎಸ್. ಕೃಷ್ಣಸ್ವಾಮಿ
ಭಾರತೀಯ ರಿಸರ್ವ್ ಬ್ಯಾಂಕ್‌ನ ಮಾಜಿ ಡೆಪ್ಯುಟಿ ಗವರ್ನರ್
ಸಿ-೬೦೧, ಆದರ್ಶ ಗಾರ್ಡನ್, ೪೭ನೇ ಅಡ್ಡರಸ್ತೆ, ಜಯನಗರ ೮ನೇ ಬ್ಲಾಕ್, ಬೆಂಗಳೂರು - ೫೬೦ ೦೮೨

With best compliments from



RAGHU BOOK STALL

Distributors for Navneet Children's Books & Cello Pens,
Text Books, School Books & Stationeries

Door No. 198, Ashoka Road, Mysore - 570 001
Phone Nos: 2565417, 2436096, 9448056542

ಶ್ರೀನಿವಾಸ ವೈದ್ಯ

ತನ್ನ ಕಾಲಕ್ಕೆ ವಿಶ್ವದ ಶ್ರೇಷ್ಠ ಚಿಂತಕರನ್ನು ವ್ಯಾಪಕ ಚಿಂತನೆಯಲ್ಲಿ ತೊಡಗಿಸಿದ್ದ ಗಾಂಧಿ ವಿರಚಿತ 'ಹಿಂದ್ ಸ್ವರಾಜ್' ಕೃತಿ ಈ ವರುಷ ತನ್ನ ಶತಮಾನವನ್ನು ಆಚರಿಸಿಕೊಂಡು ಅಥವಾ ಅಂತಹ ಯಾವದೇ ಆಚರಣೆಯಿಲ್ಲದೇ, ಸದ್ದಿಲ್ಲದೇ ತೆರೆಮರೆಗೆ ಸರಿಯುತ್ತಿದೆ.

ಅಪವಾದವೇನೋ ಎಂಬಂತೆ ಹೆಗ್ಗೋಡಿನ 'ನೀನಾಸಂ' ಸಂಸ್ಥೆ ತನ್ನ ವಾರ್ಷಿಕ ಸಂಸ್ಕೃತಿ ಶಿಬಿರದಲ್ಲಿ, 'ಮನೋಭೂಮಿಕೆಯಲ್ಲಿ ಸ್ವರಾಜ್ಯ' ಎಂಬ ವಿಷಯದ ಬಗ್ಗೆ ವಿಚಾರ ಸಂಕಿರಣವನ್ನೇರ್ಪಡಿಸಿ 'ಹಿಂದ್ ಸ್ವರಾಜ್ಯಕ್ಕೆ' ತನ್ನ ಸ್ಮೃತಿ ನಮನ ಸಲ್ಲಿಸಿದೆ.

'ಇಂಡಿಯನ್ ಒಪಿನಿಯನ್' ನಲ್ಲಿ ೧೯೦೯ರ ಡಿಸೆಂಬರ್ ೧೧ ರಿಂದ ೧೮ರವರೆಗೆ ಒಂದು ವಾರಕಾಲ ಗುಜರಾತಿ ಭಾಷೆಯಲ್ಲಿ ಬರೆದ ಅಂಕಣಗಳ ಸಂಗ್ರಹ 'ಹಿಂದ್ ಸ್ವರಾಜ್' ಕೃತಿ. ಪುಸ್ತಕ ರೂಪದಲ್ಲಿ ಇದು ಮೊದಲು ಪ್ರಕಟವಾದ್ದು ೧೯೩೮ರಲ್ಲಿ. ವಿಶೇಷವೆಂದರೆ ಇದು ಒಬ್ಬ ಪತ್ರಿಕಾ ಸಂಪಾದಕ ಮತ್ತು ಆ ಪತ್ರಿಕೆಯ ಒಬ್ಬ ಓದುಗ ಇವರ ನಡುವಿನ ಸಂವಾದ – ಹೆಚ್ಚಾಗಿ ಪ್ರಶ್ನೋತ್ತರಗಳ ರೂಪದಲ್ಲಿದೆ.

ಕಲಿಯುಗದವರಿಗೆ ದ್ವಾಪರ ಕಂಡ ಸತ್ಯ ಅಪ್ರಸ್ತುತವೆನಿಸುವಂತೆ, ೨೦೦೮ರ ಈ ದಿನಗಳಲ್ಲಿ ನಮಗೆ ೧೯೦೯ರಲ್ಲಿ ಗಾಂಧಿ ಕಂಡ ಸತ್ಯ ಬರೀ ಅಪ್ರಸ್ತುತವಷ್ಟೇ ಅಲ್ಲ, ಅವ್ಯಾವಹಾರಿಕವೆನಿಸುತ್ತದೆ. ಅಲ್ಲಲ್ಲಿ ಸಾಕಷ್ಟು ಸ್ವವಿರೋಧೀ ಹೇಳಿಕೆಗಳಿಂದ ಕೂಡಿದ್ದಂದೆನಿಸಿದರೂ ಆಶ್ಚರ್ಯವಿಲ್ಲ.

ಇಂತಹ ಆಪಾದನೆಗಳ ಅರಿವಿದ್ದವರಂತೆ ಗಾಂಧೀಜಿ ''ತಮ್ಮ ಈ ಬರಹಗಳಲ್ಲಿ ಸ್ಥಿರತೆ, ಏಕನಿಷ್ಠತೆ ಇಲ್ಲದಿದ್ದರೆ ಅದಕ್ಕೆ ಸತ್ಯಶೋಧನೆಯ ತಮ್ಮ ಯಾತ್ರೆಯಲ್ಲಿ ಹೊಸ ಹೊಸ ಮಜಲುಗಳ ಆವಿಷ್ಕಾರವಾಗುತ್ತಿದ್ದಂತೆ, ಕೆಲ ಹಳೆಯ ನಂಬಿಕೆಗಳನ್ನು ಬಿಡಬೇಕಾಗಿ ಬಂದ ಅನಿವಾರ್ಯತೆಯೇ ಕಾರಣ'' ಎನ್ನುತ್ತಾರೆ.

'ಹಿಂದ್ ಸ್ವರಾಜ್' ಸಂವಾದ ನಡೆದ ಕಾಲಕ್ಕೆ ಗಾಂಧೀಜಿಗೆ ಅದೇ ನಲವತ್ತರ ಹರೆಯ. ಹಾಗಾಗಿ ಸ್ವಾಭಾವಿಕವಾಗಿಯೇ

# ಗಾಂಧಿ ಎಂಬ ಗುಂಭ



ಇಲ್ಲಿನ ವಿಚಾರಗಳು ಸಾಕಷ್ಟು ತೀಕ್ಷ್ಣವಾಗಿವೆ. ಬಳಸಿದ ಭಾಷೆ ತುಸು ಹರಿತವಾಗಿಯೇ ಇದೆ.

ಇಂಗ್ಲೆಂಡಿನ ರಾಜ್ಯ ವ್ಯವಸ್ಥೆಯನ್ನು ನಾವು ಅನುಕರಣ ಮಾಡುವ ಅಗತ್ಯವಿಲ್ಲವೆಂದು ಪ್ರತಿಪಾದಿಸುತ್ತ ಗಾಂಧೀಜಿ ''ಯಾವದನ್ನು ನಾವು ಪಾರ್ಲಿಮೆಂಟುಗಳ ತಾಯಿ ಎಂದು ಭಾವಿಸುತ್ತೇವೆಯೋ ವಾಸ್ತವದಲ್ಲಿ ಅದೊಂದು ಬಂಜೆ ಬೆಲೆವೆಣ್ಣು... ಈ ಎರಡೂ ಕಠಿಣ ಶಬ್ದಗಳಾದರೂ ಯೋಗ್ಯಶಬ್ದಗಳಾಗಿವೆ... ಸಂಸತ್ತು ಇಂದಿನವರೆಗೆ ತಾನೇ ತಾನಾಗಿ ಒಂದೂ ಒಳ್ಳೆಯ ಕೆಲಸ ಮಾಡಿಲ್ಲ... ಹೊರಗಿನ ಒತ್ತಡವಿಲ್ಲದೇ ಅದು ಏನನ್ನೂ ಮಾಡಲಾರದು... ಕಾಲಕಾಲಕ್ಕೆ ಬದಲಾಗುವ ಮಂತ್ರಿಗಳ ಇಚ್ಛೆಗೆ ಒಳಪಡುವ ಬೆಲೆವೆಣ್ಣು... ಇವತ್ತು ಮಿ|| ಆ್ಯಸ್ಕ್ವಿಥ್ ಆದರೆ ನಾಳೆ ಮಿ|| ಬಾಲ್‌ಫರ್ ಆಗಬಹುದು...''

ಆದರೆ ಚುನಾಯಿತ ಪ್ರತಿನಿಧಿಗಳ ಮೂಲಕ ಸಾರ್ವಜನಿಕ ಒತ್ತಡಕ್ಕೆ ಮಣಿದೇ ಯಾವದೇ ಸಂಸತ್ತು ಕೆಲಸಮಾಡಬೇಕಾಗುತ್ತದೆ. ಅಂದ ಮಾತ್ರಕ್ಕೆ ಅದನ್ನು ವೇಶ್ಯೆಗೆ ಹೋಲಿಸುವುದು ಎಷ್ಟರ ಮಟ್ಟಿಗೆ ಸರಿ? ಈ ಪ್ರಶ್ನೆಗೆ ಉತ್ತರಿಸುತ್ತ ಗಾಂಧೀಜಿ ''ವ್ಯವಸ್ಥಿತವಾಗಿ ಯೋಗ್ಯರೀತಿಯಿಂದ ಚುನಾಯಿಸಲ್ಪಟ್ಟ ಒಂದು ಆದರ್ಶ ಸಂಸತ್ತಿಗೆ ಒತ್ತಡ ಯಾಕೆ ಬೇಕು?... ಮನವಿಗಳೂ ಮನ ಒಲಿಕೆಗಳೂ ಯಾಕೆ ಬೇಕು?... ನಿಜ ಸ್ಥಿತಿ ಹೇಗಿದೆಯೆಂದರೆ, ಸಂಸದರು ಆಷಾಢಭೂತಿಗಳೂ ಸ್ವಾರ್ಥಿಗಳೂ ತೀರ ಸಂಕುಚಿತ ಸ್ವಾರ್ಥದಲ್ಲಿ ತೊಡಗಿದವರೂ ಆಗಿರುತ್ತಾರೆ...'' ಈ ರೀತಿ ತಮ್ಮ ವಾಗ್ಝರಿಯನ್ನು ಹರಿಬಿಟ್ಟ ಗಾಂಧೀಜಿ, ಮುಂದುವರೆಯುತ್ತ ''ಇಂಗ್ಲಿಷ್ ಮತದಾರರಿಗೆ ಅವರ ದಿನ ಪತ್ರಿಕೆಗಳೇ ಬೈಬಲ್‌ಗಳಾಗಿವೆ. ಈ ಅಪ್ರಾಮಾಣಿಕ ವೃತ್ತ ಪತ್ರಿಕೆಗಳಿಂದಲೇ ಇಂಗ್ಲೆಂಡಿನ ಜನ ತಮ್ಮ ಅಭಿಪ್ರಾಯ ರೂಪಿಸಿಕೊಳ್ಳುತ್ತಾರೆ. ಒಂದೇ ಘಟನೆಯನ್ನು ಬೇರೆ ಬೇರೆ ಪತ್ರಿಕೆಗಳು–ತಮ್ಮ ಪಕ್ಷದ ಧೋರಣೆಯಂತೆ–ಬೇರೆ ಬೇರೆಯಾಗಿ ಚಿತ್ರಿಸುತ್ತವೆ... ಪಾರ್ಲಿಮೆಂಟುಗಳು ದಾಸ್ಯದ ಲಾಂಛನಗಳಾಗಿವೆ'' ಎಂದೆಲ್ಲ ಜರಿಯುತ್ತಾರೆ.

ಆಧುನಿಕ ನಾಗರಿಕತೆಯನ್ನಂತೂ ಗಾಂಧೀಜಿ ಒಂದು ರೋಗವೆಂದೇ ಭಾವಿಸುತ್ತಾರೆ. ''ಈ ನಾಗರಿಕತೆಯಲ್ಲಿ ಸಂಭ್ರಾಂತನಾದ ಮನುಷ್ಯನನ್ನು, ನಿದ್ದೆಯಲ್ಲಿ ಕನಸುಕಾಣುತ್ತ ಕನಸೇ ನಿಜವೆಂದು ಭಾವಿಸುವ'' ಅವಸ್ಥೆಗೆ ಹೋಲಿಸುತ್ತಾರೆ. ''ದೈಹಿಕ ಸುಖಾಕಾಂಕ್ಷೆಗಳನ್ನು ಮಾತ್ರ ಸಮರ್ಥಿಸುತ್ತಿರುವ ಒಂದು ಅಧಾರ್ಮಿಕ ದುರವಸ್ಥೆ'' ಎಂದು ಹಳಿಯುತ್ತಾರೆ. ''ಎಲೆಯುಡಿಗೆ ತೊಟ್ಟು ಈಟಿ ಭಲ್ಲೆಗಳಿಂದ ಬೇಟೆ ಯಾಡುತ್ತಿದ್ದವ ಈಗ ಆಧುನಿಕ ಉಡುಪುಧರಿಸಿ ರಿವಾಲ್ವರ್ ಇಟ್ಟುಕೊಳ್ಳುವುದು ನಾಗರಿಕತೆಯೇ?... ಹೀಗಾಗಿ ಭೌತಿಕ ಐಷಾರಾಮಗಳಿಗೆ ಮಾತ್ರ ಒತ್ತುಕೊಟ್ಟ ಇಂದಿನ ನಾಗರಿಕತೆ ಅಲ್ಲಿಯೂ ವಿಫಲವಾದಂತೆಯೇ ಅಲ್ಲವೇ?'' ಎನ್ನುತ್ತಾರೆ. ''ಮನೆಯ ಒಡತಿಯರಾಗಬೇಕಾಗಿದ್ದ ಮಹಿಳೆಯರು ಬೀದಿ ಬೀದಿ ಅಲೆಯುತ್ತ ಫ್ಯಾಕ್ಟರಿಗಳಲ್ಲಿ ಕೆಲಸಕ್ಕೆ ಹೋಗಬೇಕಾದ ನಾಗರಿಕತೆ''ಯನ್ನು ಖಂಡಿಸುತ್ತಾರೆ.

ಇಂದಿನ ದಿನಕ್ಕೆ ತೀರ ಹಾಸ್ಯಾಸ್ಪದವೇನೋ ಎನ್ನಿಸುವಂತೆ ಮಹಿಳೆಯರ ಮತಾಧಿಕಾರವನ್ನೂ ಗಾಂಧಿ ಅಷ್ಟಾಗಿ ಪ್ರೋತ್ಸಾಹಿಸುವಂತೆ ಕಾಣುವುದಿಲ್ಲ. ಇವರ ದೃಷ್ಟಿಯಲ್ಲಿ ಯಂತ್ರ ಯಂತ್ರೋಪಕರಣಗಳಂತೂ ಘೋರ ಪಾಪದ ಸಂಕೇತಗಳು. ಗಾಂಧಿ ವಿಚಾರಧಾರೆಯನ್ನು ಮೆಚ್ಚಿಕೊಂಡ ಎಷ್ಟೋ ಪಾಶ್ಚಿಮಾತ್ಯ ಚಿಂತಕರಿಗೆ ಕೂಡ ಇವರ ಈ ಅತಿಯಾದ ಯಂತ್ರದ್ವೇಷವನ್ನು ಅರಗಿಸಿಕೊಳ್ಳಲಿಕ್ಕೆ ಕಷ್ಟವಾಗಿದೆ. ನೂಲುವ ತಕಲಿ, ಚರಕ, ಹೊಲಿಗೆಯ ಮೆಷಿನ್, ಹಲ್ಲುಜ್ಜುವ ಬ್ರಶ್, ಕನ್ನಡಕ ಇವುಗಳೂ ಯಂತ್ರಗಳೇ, ಇವುಗಳನ್ನೂ ವಿರೋಧಿಸುತ್ತೀರಾ? ಎಂದರೆ ಗಾಂಧಿ, ''ನಾನು ಅತಿಯಾದ ಯಂತ್ರ ವ್ಯಾಮೋಹವನ್ನು, ಇದರಿಂದುದ್ಭವಿಸುವ ದುರಾಶೆಯನ್ನು, ಶೋಷಣೆಯನ್ನು ವಿರೋಧಿಸುತ್ತೇನೆಯೇ ಹೊರತು ಯಂತ್ರಗಳನ್ನಲ್ಲ'' ಎನ್ನುತ್ತಾರೆ. ನನ್ನ ಚಿಂತನೆಯಲ್ಲಿ ಮಾನವನಿಗೆ ಅಗ್ರಸ್ಥಾನ ಎನ್ನುತ್ತಾರೆ.

ನ್ಯಾಯವಾದಿಗಳ ಅಪ್ರಾಮಾಣಿಕತೆ, ಇಂತಹ ನ್ಯಾಯವಾದಿಗಳನ್ನೊಳಗೊಂಡ ನ್ಯಾಯ ವ್ಯವಸ್ಥೆ; ವೈದ್ಯರು, ವೈದ್ಯ ವಿಜ್ಞಾನದ ವ್ಯಾಪಾರೀಕರಣ; ಸಂಪರ್ಕಕ್ರಾಂತಿಯ ಹೆಸರಿನಲ್ಲಿ ಒಳ್ಳೆಯದಕ್ಕಿಂತ ಕೆಟ್ಟದ್ದನ್ನೇ ಹರಡುವ ರೈಲ್ವೇ ಜಾಲ, ಎಲ್ಲವನ್ನೂ



# ಕೃಷ್ಣಮೂರ್ತಿ ಫೌಂಡೇಷನ್ ಇಂಡಿಯಾ
## ಬೆಂಗಳೂರು ಶಿಕ್ಷಣ ಕೇಂದ್ರ

ಬೆಂಗಳೂರಿನ ಕೃಷ್ಣಮೂರ್ತಿ ಶಿಕ್ಷಣ ಕೇಂದ್ರವು ಜೆ. ಕೆ. ಯವರ ಪುಸ್ತಕಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಹೊಸ ವಿನ್ಯಾಸದೊಂದಿಗೆ ಸುಂದರವಾಗಿ ಪ್ರಕಟಿಸಲು ಆರಂಭಿಸಿದೆ. ಈಗಾಗಲೇ ಬಿಡುಗಡೆಯಾದ ಪುಸ್ತಕಗಳ ಮಾಹಿತಿ ಕೆಳಕಂಡಂತಿದೆ.

1. ಧ್ಯಾನ ಚಿಂತನ
   ಅನುವಾದ : ಡಾ|| ನಿ. ಮುರಾರಿ ಬಲ್ಲಾಳ — ರೂ. 65/-
2. ಹಿಂಸೆಯನ್ನು ಮೀರಿ
   ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ — ರೂ. 120/-
3. ಕ್ರಿಯೆ ಮತ್ತು ಸಂಬಂಧ
   ಅನುವಾದ : ಜಿ. ಎ. ಸನದಿ — ರೂ. 15/-
4. ಮೊದಲ ಹಾಗೂ ಕೊನೆಯ ಬಿಡುಗಡೆ*
   ಅನುವಾದ : ಶ್ರೀಮತಿ ರುಕ್ಮಿಣಿ ಕೃಷ್ಣಮೂರ್ತಿ — ರೂ. 150/-
5. ಕಾಲ ಮತ್ತು ಕಾಲರಹಿತ*
   ಅನುವಾದ : ಶ್ರೀಮತಿ ವನಮಾಲಾ ರಂಗನಾಥ ರಾವ್ — ರೂ. 10/-
6. ಸಂಸ್ಕೃತಿ ಸಂಗತಿ
   ಅನುವಾದ : ಪ್ರೊ|| ಎಚ್. ಎಸ್. ರಾಘವೇಂದ್ರ ರಾವ್ — ರೂ. 150/-
7. ಧಾರ್ಮಿಕ ಜೀವನ ಮತ್ತು ಬದುಕಿನ ಕಲೆ*
   ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ — ರೂ. 15/-
8. ಅನುದಿನ ಚಿಂತನ
   ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ — ರೂ. 160/-
9. ಬಾಳಿಗೊಂದು ಭಾಷ್ಯ - ಸಂಪುಟ 1
   ಅನುವಾದ : ಡಾ|| ಮಹಾಬಲೇಶ್ವರರಾವ್ — ರೂ. 130/-
10. ಬಾಳಿಗೊಂದು ಭಾಷ್ಯ - ಸಂಪುಟ 2
   ಡಾ|| ಮಹಾಬಲೇಶ್ವರ ರಾವ್ — ರೂ. 150/-
11. ಬಾಳಿಗೊಂದು ಭಾಷ್ಯ - ಸಂಪುಟ 3
   ಡಾ|| ಮಹಾಬಲೇಶ್ವರ ರಾವ್ — ರೂ. 185/-
12. ಭಯ, ಸ್ವಾತಂತ್ರ್ಯ ಮತ್ತು ಶಿಕ್ಷಣ
   ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ — ರೂ. 20/-
13. ಶಿಕ್ಷಣ ಮತ್ತು ಜೀವನ
   ಅನುವಾದ : ಡಾ|| ಎಚ್. ಎಸ್. ರಾಘವೇಂದ್ರ ರಾವ್ — ರೂ. 65/-
14. ಭಯದಾಚೆಯ ಬದುಕು
   ಅನುವಾದ : ಪ್ರೊ||ಓ. ಎಲ್. ನಾಗಭೂಷಣ ಸ್ವಾಮಿ — ರೂ. 20/-
15. ದುಃಖಕ್ಕೆ ವಿದಾಯ
   ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ — ರೂ. 25/-
16. ಸಂಘರ್ಷವಿರದ ಬದುಕಿಗಾಗಿ
   ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ — ರೂ. 25/-
17. ಸಂಬಂಧವೆಂದರೇನು ?
   ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ — ರೂ. 25/-
18. ಜೆ. ಕೆ. ಜೀವನ ದರ್ಶನ
   ಲೇಖಕರು : ಡಾ|| ನಿ. ಮುರಾರಿ ಬಲ್ಲಾಳ — ರೂ. 130/-
19. ಜೆ. ಕೃಷ್ಣಮೂರ್ತಿ - ಶಿಕ್ಷಣ
   (ದ್ವಿತೀಯ ಆವೃತ್ತಿ) ಎಸ್. ಡಿ. ಕಾಶೀಕರ — ರೂ. 90/-
20. ತಿಳಿದುದೆಲ್ಲವ ಬಿಟ್ಟು...
   ಪ್ರೊ|| ಜಿ. ವೆಂಕಟಸುಬ್ಬಯ್ಯ — ರೂ. 90/-
21. ಪ್ರೀತಿ ಎಂದರೇನು ?
   ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ — ರೂ. 25/-
22. ಅಸೂಯೆ
   ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ — ರೂ. 30/-

* ಪ್ರತಿಗಳು ಮುಗಿದಿವೆ

*For More Information Contact*

**The Study Bangalore**

Krishnamurthy Foundation India, Thatguni Post, Bangalore-62
Ph : 080-28435243, e-mail : KFistudy@gmail.com

ತಿರಸ್ಕರಿಸುವ ಗಾಂಧಿ, ಪ್ರಪಾತಕ್ಕೆಳೆಯುತ್ತಿರುವ ಆಧುನಿಕ ನಾಗರಿಕತೆಯ ಬಗ್ಗೆ ನಮ್ಮನ್ನು ಎಚ್ಚರಿಸುತ್ತಾರೆ.

ಗಾಂಧಿ ದೃಷ್ಟಿಯಲ್ಲಿ ನಾಗರಿಕತೆ ಮತ್ತು ನೈತಿಕತೆ ಎರಡೂ ಒಂದೇ ನಾಣ್ಯದ ಮುಖಗಳು. ಯಾವುದೇ ರಾಜಿ ಅಥವಾ ಒಪ್ಪಂದಗಳಿಗೆ ಮಣಿಯದೇ ತನ್ನ ಅಂತರಾತ್ಮದ ಕರೆಯಂತೆ ಸತ್ಕರ್ಮಗಳಲ್ಲಿ ತೊಡಗಿಕೊಳ್ಳುವುದೇ ನಾಗರಿಕತೆ !

ಕೆಲವು ಸಲ ತರ್ಕಕ್ಕೆ ನಿಲುಕದ ಇಂತಹ ಏಕಮುಖೀ ವಿಚಾರಸರಣಿ ಪೂರ್ತಿ ನಕಾರಾತ್ಮಕವಾಗಿದೆಯೇ? ಎಲ್ಲದರಲ್ಲೂ ಹುಳುಕು ಹುಡುಕುವುದೇ ಇದರ ಗುರಿಯೇ? ಎನ್ನಿಸಿದರೂ 'ಹಿಂದ್ ಸ್ವರಾಜ್' ದ ಒಟ್ಟು ಆಶಯ ಸತ್ಯ, ಅಹಿಂಸೆ, ಲೋಭ ರಹಿತ ಸರಳ ಜೀವನ ಮುಂತಾದ ನಿತ್ಯ ನಿರಂತರವಾದ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವುದೇ ಆಗಿದೆ.

''ಪ್ಯಾಸಿವ್ ರೆಸಿಸ್ಟೆನ್ಸ್'' ಎಂಬ ಪ್ರಕರಣದಲ್ಲಿ, ದಾಖಲಿತ ಚರಿತ್ರೆಯ ವಿರೋಧಾಭಾಸಗಳೆಡೆಗೆ ನಮ್ಮ ಗಮನ ಸೆಳೆಯುತ್ತಾ... ''ಚರಿತ್ರೆ ರಾಜರು ಮಹಾರಾಜರುಗಳ ಕತೆ... ಇವರು ಕಾದಾಡಿದ ಯುದ್ಧಗಳ ಕತೆಯೇ ಆಗಿದೆ... ಈ ನಿರಂತರ ಯುದ್ಧಗಳ, ಹಿಂಸೆಯ ಕತೆಯನ್ನೇ ಮಾನವನ ಇತಿಹಾಸ ಎಂದು ಬಿಂಬಿಸಲಾಗುತ್ತಿದೆ. ಇದು ಇಷ್ಟೇ ಆಗಿದ್ದರೆ ಮನುಕುಲ ಎಂದೋ ನಾಶವಾಗಿ ಹೋಗಬಹುದಾಗಿತ್ತು... ಮಾನವ ಇನ್ನೂ ಬದುಕಿದ್ದಾನೆ... ನಿರಾತಂಕವಾಗಿ ಬದುಕು ಸಾಗಿಸುತ್ತಿದ್ದಾನೆ ಎಂದರೆ ಅದಕ್ಕೆ ಅವನ ಶಾಂತಿಪ್ರಿಯತೆ, ಮಾನವೀಯತೆ, ಆತ್ಮಬಲಗಳೇ ಕಾರಣ... ಆದರೆ ಚರಿತ್ರೆ ಅವ್ಯಾಹತವಾಗಿ ಹರಿದುಬರುತ್ತಿರುವ ಇಂತಹ ಒಂದು ಮಾನವ ಪ್ರೇಮವನ್ನು ದಾಖಲಿಸಲು ವಿಫಲವಾಗಿದೆ... ಚರಿತ್ರೆ ದಾಖಲಿಸುವುದು ಇಂತಹ ಅವಿಚ್ಛಿನ್ನ ಮಾನವ ಪ್ರೇಮವನ್ನು... ಆಗೀಗ ಭಂಗಗೊಳಿಸುವ ಯುದ್ಧದ ಕತೆಗಳನ್ನು ಮಾತ್ರ... ಚರಿತ್ರೆ ಈ ದಾರಿತಪ್ಪಿಸುವ ಅಪ್ರಗತಿಗಳನ್ನು ಮಾತ್ರ ವೈಭವೀಕರಿಸುತ್ತದೆ. ಸಹಜ ಪ್ರೇಮ, ಆತ್ಮಬಲ ಇತ್ಯಾದಿ ಮಾನವ ಸಹಜ ಅಭಿಜಾತ ಗುಣಗಳನ್ನು ನಮ್ಮ ಚರಿತ್ರೆ ದಾಖಲಿಸುವುದೇ ಇಲ್ಲ'' ಎಂದು ಗಾಂಧಿ ವಿಷಾದಿಸುತ್ತಾರೆ.

'ಹಿಂದ್ ಸ್ವರಾಜ್' ಅಥವಾ 'ಇಂಡಿಯನ್ ಹೋಮ್ ರೂಲ್' ಮೊದಲ ಬಾರಿಗೆ ಪ್ರಕಟವಾದಾಗ, ಎರಡನೇ ಮಹಾಯುದ್ಧದ ಕಾರ್ಮೋಡಗಳು ದಟ್ಟಡರಿಸುತ್ತಿದ್ದ ಕಾಲ, ಯಂತ್ರಯುಗ ಇನ್ನೂ ಯುವಾವಸ್ಥೆಯಲ್ಲಿದ್ದ ಕಾಲ, ವಿಶ್ವದ ಮಹಾನ್ ಚಿಂತಕರು 'ನಾಗರಿಕತೆ'ಯ ಬಗ್ಗೆ ಇನ್ನೂ ಅಷ್ಟಿಷ್ಟು ತಲೆ ಕೆಡಿಸಿಕೊಳ್ಳುತ್ತಿದ್ದ ಕಾಲ. ಅಂತಹ ದಿನಗಳಲ್ಲಿ ಈ ಕೃತಿ 'ಹಿಂದ್ ಸ್ವರಾಜ್' ಜಿ.ಡಿ.ಎಚ್. ಕೋಲ್, ಸಿ.ಡಿ. ಬನ್ಸರ್, ಜೆರಾಲ್ಡ ಹರ್ಡ, ಪ್ರೊ. ಶಾಡಿ, ಶ್ರೀಮತಿ ಸೋಫಿಯಾ ವಾಡಿಯಾರಂತಹ ಶ್ರೇಷ್ಠ ಚಿಂತಕರ ಚಿಂತನೆಗೆ ಸಾಕಷ್ಟು ಗ್ರಾಸ ಒದಗಿಸಿದ್ದರೆ ಅದು ಈ ಕೃತಿಯ ಸಕಾರಾತ್ಮಕ ಗುಣದಿಂದಲೇ ಎನ್ನಬಹುದು.

ಈಗ ಒಂದು ಶತಮಾನದ ನಂತರ, ಜಾಗತೀಕರಣದ ಮಾಯಾ ಬಜಾರದ ಭ್ರಾಂತಿಯಲ್ಲಿ, ನಶೆಯಲ್ಲಿ 'ಹಿಂದ್ ಸ್ವರಾಜ್'ದ ಪ್ರಸ್ತುತತೆಯನ್ನೇ ನಾವು ಪ್ರಶ್ನಿಸುತ್ತಿದ್ದಾಗ, ಪ್ರಪಂಚ ಇದ್ದಕ್ಕಿದ್ದಂತೆ ದಿಢೀರನೇ ಭಯಾನಕ ಆರ್ಥಿಕ ಮುಗ್ಗಟ್ಟನ್ನು ಎದುರಿಸುತ್ತಿದೆ. ಈಗ ಮತ್ತೆ ಅಲ್ಲೊಬ್ಬರು ಇಲ್ಲೊಬ್ಬರು, ಗಾಂಧಿವಾದದಲ್ಲಿ ಏನಾದರೂ ಅರ್ಥವಿದೆಯೇ, ಜಗತ್ತು ಗಾಂಧಿ ತೋರಿದ ಮಾರ್ಗದಲ್ಲಿ ನಡೆದಿದ್ದರೆ ಈ ಇಂದಿನ ಅನರ್ಥಗಳನ್ನು ತಪ್ಪಿಸಬಹುದಿತ್ತೇ ಎಂದು ಸೋಜಿಗಪಡುತ್ತಿದ್ದಾರೆ.

ಪ್ರಕೃತಿಯ ಒಂದು ಅವಿಭಾಜ್ಯ ಅಂಗವಾಗಿ, ಸರಳ ಸುಂದರ ಹಿಂಸಾರಹಿತ ಬದುಕನ್ನು ಸಾಗಿಸಬಹುದಾಗಿದ್ದ ಮನುಷ್ಯನಿಗೆ ಪ್ರಕೃತಿಯನ್ನೇ ಸುಲಿದು ತಿನ್ನುವ ಅನಿವಾರ್ಯತೆ (?) ಮಾನವ ಚರಿತ್ರೆಯ ಯಾವ ಕಾಲಘಟ್ಟದಲ್ಲಿ ಮತ್ತು ಯಾಕೆ ಉಂಟಾಗಿರಬಹುದು ?! ಒಂದು ವೇಳೆ ಇಂತಹ ಅನಿವಾರ್ಯತೆ ಸಮರ್ಥನೀಯವೇ ಆಗಿದ್ದರೂ, ಈ ಅನಿವಾರ್ಯತೆ ದುರಾಶೆಗೆ, ಕ್ರೌರ್ಯಕ್ಕೆ ಯಾವಾಗ ಎಡೆಮಾಡಿಕೊಟ್ಟಿರಬಹುದು ! ಈ ದುರಾಶೆಗೆ, ಹಿಂಸೆಗೆ ಕೊನೆಯಲ್ಲಿ? ಸತ್ಯಕ್ಕೆ ವಿಮುಖರಾಗಿ ನಿಂತು ಕಾಲಕ್ರಮೇಣ ಸತ್ಯವೇ ಅಪ್ರಸ್ತುತವೆನ್ನಿಸುವ ಮಟ್ಟಕ್ಕೆ ತಲುಪಿದ ಈ ಆಧುನಿಕ ನಾಗರಿಕತೆಗೆ ಭವಿಷ್ಯವುಂಟೆ ? ಇದ್ದರೆ ಅದು ಎಂತಹದಿದ್ದೀತು ಎಂದೆಲ್ಲ ಚಿಂತನೆಗೆ ನಮ್ಮನ್ನು ತೆರೆದುಕೊಳ್ಳುವಂತೆ ಮಾಡುತ್ತದೆ ಶತಮಾನದ ಹಿಂದಿನ ಈ ಗಾಂಧಿ ಕೃತಿ 'ಹಿಂದ್ ಸ್ವರಾಜ್.'

''ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷ:
ಅವಿಚ್ಛಿನ್ನಿವ ವಾರ್ಷ್ಣೇಯ ಬಲಾದಿವ ನಿಯೋಜಿತ:॥

ಶ್ರೀನಿವಾಸ ವೈದ್ಯ
೧೩೬, ೪೩ನೇ ಕ್ರಾಸ್, ೩ನೇ ಮುಖ್ಯ ರಸ್ತೆ
ಜಯನಗರ ೮ನೇ ಬಡಾವಣೆ, ಬೆಂಗಳೂರು -೫೬೦ ೦೮೨

# ‘ಅಮೆರಿಕನ್ ಪ್ರಮಿಥ್ಯೂಸ್’

ಸಾಮಾನ್ಯ ಓದುಗರ ವಲಯದಲ್ಲಿ ಹೆಚ್ಚಾಗಿ ವಿಜ್ಞಾನಿಗಳ ಖಾಸಗಿ ಜೀವನ ಕುರಿತು ಪ್ರಸ್ತಾಪಿಸುವುದು ವಿರಳ. ಹಾಗೆ ಅವರ ಬಗ್ಗೆ ವಿಚಾರ ಮಾಡುವಾಗಲೂ ಓದುಗರಿಗೆ ವಿಜ್ಞಾನಿಗಳ ವಿಶಿಷ್ಟ ತಾಂತ್ರಿಕ ಸಾಧನೆಗಳಲ್ಲಿ ಮಾತ್ರ ಆಸಕ್ತಿ ಇರುವುದನ್ನು ನೋಡಿದ್ದೇವೆ. ಆದರೆ ಅಸಾಧಾರಣ ಚಿತ್ರವೃತ್ತಿಯ, ವಿಚಿತ್ರ ಸ್ವಭಾವದ ವಿಜ್ಞಾನಿಗಳ ವ್ಯಕ್ತಿ ಜೀವನದ ಸ್ವರೂಪವೆಂಥದೆಂಬ ಬಗ್ಗೆ ಜನಸಾಮಾನ್ಯರಲ್ಲಿ ಆಸಕ್ತಿ ಹುಟ್ಟಿಸುವಂತಹ ಹಲ ಕೆಲವು ಒಳ್ಳೆಯ ಪುಸ್ತಕಗಳು ಇತ್ತೀಚೆಗೆ ಪ್ರಕಟವಾಗುತ್ತಿರುವುದು ಆಶಾದಾಯಕ ಸಂಗತಿ. ಈ ವಿಷಯವಾಗಿ, ಸುಮಾರು ೭೦-೮೦ ವರ್ಷಗಳ ಹಿಂದೆ ಪ್ರಕಟವಾದ – ಅಂದಿಗೆ ಅದೊಂದು ‘ಆಚಾರ್ಯಕೃತಿ’ ಎನಿಸಿಕೊಂಡ – ಸುಮಾರು ೯೦ಕ್ಕೂ ಹೆಚ್ಚು ಸಲ ಮುದ್ರಣಗೊಂಡ Microbe Hunters (by Paul de Kruif) ಎಂಬ (ಸೂಕ್ಷ್ಮಾಣುಜೀವಿಗಳ ಬಗ್ಗೆ ಸಂಶೋಧನೆ ನಡೆಸಿ ಕೀರ್ತಿಶೇಷರಾದ)ತನ್ನ ಹೀರೋಗಳ ಬಗ್ಗೆ ಗ್ರಂಥ ಲೇಖಕ ಕೊನೆಯಲ್ಲಿ ಹೀಗೆನ್ನುತ್ತಾನೆ :

‘‘ನನಗೆ ಈ ವ್ಯಕ್ತಿಗಳು ತುಂಬಾ ಪ್ರಿಯವಾಗಿದ್ದಾರೆ... ಇದಕ್ಕೆ ಕಾರಣ, ಅವರು ಸಾಧಿಸಿದ ಆವಿಷ್ಕಾರಗಳಲ್ಲ, ಅವರು ಮಾನವ ಕೋಟಿಗೆ ಕೊಟ್ಟ ವರ ಪ್ರಸಾದಗಳು ಮಾತ್ರವಲ್ಲ, ಅವರು ಎಂಥ ವಿಶಿಷ್ಟ ವ್ಯಕ್ತಿಗಳಾಗಿದ್ದರು ಎಂಬ ಅಂಶ. ಅದರಲ್ಲಿ ಪ್ರತಿಯೊಬ್ಬರೂ ನನ್ನ ಸ್ಮರಣೆಯಲ್ಲಿ ಅಚ್ಚಳಿಯದೆ ಬದುಕಿ ಉಳಿದಿದ್ದಾರೆ, ನನ್ನ ಜೀವವಿರುವ ತನಕ ನಾನು ಅವರನ್ನು ನೆನಪಿಸಿಕೊಳ್ಳುತ್ತಿರುತ್ತೇನೆ.’’ ಬರ್ಟೋಲ್ಟ್ ಬ್ರೆಕ್ಟ್ 'Life of Galileo' ಬರೆಯುವಾಗಲೂ ಇಂಥ ಭಾವನೆಗಳಿಂದಲೇ ಪ್ರೇರಿತನಾಗಿದ್ದನೆಂಬುದನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು.’’

American Prometheus ಎಂಬ ಈ ಅತ್ಯಂತ ಮಹತ್ವಪೂರ್ಣ ಜೀವನ ಚರಿತ್ರೆಯನ್ನು ಓದುವಾಗ ನನಗೆ Paul de Kruifರ ಮಾತುಗಳು ನೆನಪಾಗುತ್ತವೆ. ನಿಜವಾಗಿ, ಇದೊಂದು ಯುಗಪ್ರವರ್ತಕ ಗ್ರಂಥ. ಅಣು ಬಾಂಬಿನ ‘ನಿರ್ಮಾತೃ’ವೆಂದು ಲೋಕವಿಖ್ಯಾತನಾದ ಅಮೆರಿಕದ ಜೆ.ರಾಬರ್ಟ್ ಓಪನ್‌ಹೈಮರ್‌ನ ಅಸದೃಶ್ಯ ಸಾಧನೆಯ, ಅನನ್ಯ ಬದುಕಿನ ದುರಂತ ಕಥೆ ಇದು. ೨೦೦೬ರಲ್ಲಿ ರ್‍ಯಾಂಡಮ್ ಹೌಸ್, ನ್ಯೂಯಾರ್ಕ್, ಪ್ರಕಟಿಸಿರುವ ೬೦೦ಕ್ಕೂ ಮಿಕ್ಕ ಪುಟಗಳ ಈ ಸುದೀರ್ಘ ಚರಿತ್ರೆಯಲ್ಲಿ ರಾಬರ್ಟ್ ಓಪನ್‌ಹೈಮರ್‌ನ ೬೩ ವರ್ಷಗಳ ಜೀವಿತ ಅವಧಿಯಲ್ಲಿ ಅವನು ಅನುಭವಿಸಿದ ಏಳುಬೀಳುಗಳು, ಪಟ್ಟ ಪಾಡು, ಅಮೆರಿಕದ ಸಂಕೀರ್ಣ ರಾಜಕೀಯ ಘಟನೆಗಳು, ಅಲ್ಲಿನ ರಾಜಕಾರಣಿಗಳಿಂದಾಗಿ ಅವನು ಎದುರಿಸಬೇಕಾಗಿ ಬಂದ ಘೋರ ಸಮಸ್ಯೆಗಳು, ಇವುಗಳ ಇತಿಹಾಸದ ನಿರೂಪಣೆ ಇದೆ. ಜತೆಗೆ ಇದು ಅಮೆರಿಕ ಮತ್ತಿತರ ಐರೋಪ್ಯ ದೇಶಗಳ ಕೀರ್ತಿವಂತ ಅಣು ವಿಜ್ಞಾನಿಗಳ ಸಾಧನೆಗಳ ಕುರಿತ ವಿವರಗಳನ್ನು ಒಳಗೊಂಡಿದೆ. ಎಲ್ಲಕ್ಕಿಂತ ಮಿಗಿಲಾಗಿ ಅಣುಬಾಂಬಿನಂಥ ಭೀಕರ ಶಸ್ತ್ರಾಸ್ತ್ರಗಳ ನಿರ್ಮಾಣ ಕಾರ್ಯ ಹೇಗೆ ರಾಜಕೀಯ ನಾಯಕರ ಕೈವಶವಾಗಿ, ಹಾಗೂ ಅದು ಅಧಿಕಾರದ ದೊಂಬರಾಟ ಸಾಧನವಾಗಿ, ಜಗತ್ತನ್ನು ತಲ್ಲಣಗೊಳಿಸುವ ರೀತಿಯಲ್ಲಿ ಮಾನವ ಕೋಟಿಯನ್ನು ಸರ್ವನಾಶದ ಅಂಚಿಗೆ ತಂದು ನಿಲ್ಲಿಸಿದೆ ಎಂಬ ಹೃದಯ ವಿದ್ರಾವಕ ಸಾಮಾಜಿಕ ಚರಿತ್ರೆಯೂ ಇಲ್ಲಿದೆ.

ಈ ಬಗ್ಗೆ ಈಗಾಗಲೆ ಹತ್ತಾರು ವಿದ್ವತ್ಪೂರ್ಣ ಹಾಗೂ ಜನಪ್ರಿಯ ಪುಸ್ತಕಗಳು ಪ್ರಕಟವಾಗಿದ್ದು ಅವು ಬಹುಜನರ ಗಮನ ಸೆಳೆದಿವೆ. ಅವುಗಳಲ್ಲಿ ರಾಬರ್ಟ್ ಯೂಂಕ್‌ನ Brighter than a thousand suns (1956), ನಾರ್ಮನ್ ಮಾಸ್‌ರ Men who play God - the story of the Hydrogen Bomb, ಪೋಲೆಂಡಿನ ಭೌತವಿಜ್ಞಾನಿ Leopold Infeld ವಿರಚಿತ Quest ಮುಂತಾದವನ್ನು ಹೆಸರಿಸಬಹುದು. ಆದರೆ ಈ ಅನೇಕ ಪುಸ್ತಕಗಳು ವ್ಯಕ್ತಿಚಿತ್ರಣಗಳ ಸಂಗ್ರಹವಾಗಿದ್ದು ಬಹುಶಃ ವಿಜ್ಞಾನಿಯೊಬ್ಬನನ್ನು ಕುರಿತ ದೀರ್ಘ ಜೀವನ ಚರಿತ್ರೆಗಳು ತೀರಾ ವಿರಳ.

American Prometheus ಎಂಬ ಪ್ರಸ್ತುತ ಜೀವನ ಚರಿತ್ರೆ ಈ ಕೊರತೆಯನ್ನು ತುಂಬಿಕೊಡುವಂತಿದೆ. ಮೇಲೆ ಹೇಳಿದ ಜನಪ್ರಿಯ ಪುಸ್ತಕಗಳಲ್ಲಿ ಸೂಚ್ಯವಾಗಿ, ಸಂಕ್ಷಿಪ್ತವಾಗಿ ಉಲ್ಲೇಖವಾಗಿರುವ ನೂರಾರು ಘಟನೆಗಳ, ವ್ಯಕ್ತಿಗಳ, ಸಂದಿಗ್ಧಗಳ, ಜಿಜ್ಞಾಸೆಗಳ, ಸಂಪೂರ್ಣ ವಿವರಗಳು ವ್ಯಾಖ್ಯಾನಗಳೂ ಸೇರಿಕೊಂಡು ಇದು ಒಂದು ಸಮಗ್ರ ಮನ್ವಂತರದ ನ್ಯಾಯಾನ್ಯಾಯಗಳ, ಧರ್ಮಾಧರ್ಮಗಳ ವಿಚಾರ ಪರಿಪುಷ್ಟ ಚರಿತ್ರೆಯಾಗಿ ಪರಿಣಮಿಸಿದೆ. ಒಂದು ವಿಶೇಷವೆಂದರೆ ವಿಜ್ಞಾನದ ಇತಿಹಾಸ ತಿಳಿಯದವರೂ ಸಹ ಸಲೀಸಾಗಿ ಓದಬಹುದಾದ ಒಂದು ‘ಕ್ಲಾಸಿಕ್’ ಇದು.

ಪ್ರಧಾನವಾಗಿ ಇದು ಜೆ. ಓಪನ್‌ಹೈಮರ್‌ನ ಜೀವನ ಕಥೆ. ಆದರೆ ಅನಗತ್ಯ ವಿವರಗಳನ್ನು ತಂದು ತುಂಬಿದ ನೀರಸ ಚರಿತ್ರೆಯಲ್ಲ - ಇದನ್ನು ಬರೆದ Kai Bird ಮತ್ತು Martin H. Sherwin ಇವರ ಅವಿಶ್ರಾಂತ ದುಡಿಮೆಯ ಫಲವಾಗಿ ಸಂಗ್ರಹಿತ




೧೯೫೦ರ ಸುಮಾರಿನಲ್ಲಿ ಓಪನ್‌ಹೈಮರ್ ಎದುರಿಸಬೇಕಾಗಿ ಬಂದ ಹಲವು ಕಷ್ಟನಿಷ್ಠುರಗಳನ್ನು ‘ಮೆಕಾರ್ಥಿ ವಿಷಮಯುಗ’ದಲ್ಲಿ ಅವನಂಥ ಬುದ್ಧಿಶಾಲಿಗಳು ಯಾರೂ ತಪ್ಪಿಸಿಕೊಳ್ಳುವಂತಿರಲಿಲ್ಲ. ಆದರೆ ತನ್ನ ವಿರುದ್ಧ ಎದ್ದುನಿಂತ ದುಷ್ಟ ವ್ಯವಸ್ಥೆಯ ಅನಿಷ್ಟ ಶಕ್ತಿಗಳನ್ನು ಅವನು ಧೀರೋದಾತ್ತನಂತೆ ಎದುರಿಸಿದ. ನಿಜವಾಗಿ ಅವನು ಅಮೆರಿಕದ ‘ಪ್ರಮಿಥ್ಯೂಸ್’ ; ಗ್ರೀಕ್ ಪುರಾಣದಲ್ಲಿ ಪ್ರಮಿಥ್ಯೂಸ್ ದೇವತೆ ಮಹಾದೇವ ಝ್ಯೂಸ್‌ನ ಮಗ. ತಂದೆಯ ಆಜ್ಞೆಗೆ ವಿರುದ್ಧವಾಗಿ ಸ್ವರ್ಗದಿಂದ ಅಗ್ನಿಯನ್ನು ಕದ್ದು ತಂದು ಮಾನವಲೋಕಕ್ಕೆ ಅರ್ಪಿಸಿದ.

**ಎಚ್. ಕೆ. ರಾಮಚಂದ್ರಮೂರ್ತಿ**

ವಾಗಿರುವ ಐತಿಹಾಸಿಕ ದಾಖಲೆಗಳು, ಉಲ್ಲೇಖಗಳು ಓಪನ್‌ಹೈಮರ್‌ನ ಬಹುಮುಖಿ ಪ್ರತಿಭೆಯ, ಅವನ ವಿಚಿತ್ರ ಚಿತ್ತ ವೃತ್ತಿಯ ಸೂಕ್ಷ್ಮಾತಿ ಸೂಕ್ಷ್ಮ ಎಳೆಗಳೊಂದಿಗೆ ಹೆಣೆದುಕೊಂಡು ಅವನ ವಿರೋಧಾಭಾಸದ, ಸಮಸ್ಯಾತ್ಮಕ ವ್ಯಕ್ತಿತ್ವವನ್ನು ಅತ್ಯಂತ ರೋಚಕವಾಗಿ ರೂಪಿಸಿವೆ.

ಓಪನ್‌ಹೈಮರ್ ಹುಟ್ಟಿದ್ದು ೧೯೦೪ರಲ್ಲಿ, ನ್ಯೂಯಾರ್ಕ್‌ನಲ್ಲಿ. ಅದು ಅಮೆರಿಕದಲ್ಲಿ ಎರಡನೆಯ ಕ್ರಾಂತಿ ಪ್ರಾರಂಭವಾದ ಕಾಲ. ಬಹುತೇಕ ಜನ ಕುದುರೆ ಸವಾರರಾಗಿದ್ದ ಅಮೆರಿಕ ದೇಶ ಅಂತರ್ದಹನ ಎಂಜಿನ್, 'ಮಾನವ ಚಾಲಿತ ಬಾಹ್ಯಾಕಾಶ ಪ್ರಯಾಣ' ಎಂದು ಮುಂತಾದ ನೂರಾರು ತಾಂತ್ರಿಕ ಆವಿಷ್ಕಾರಗಳ ಸಾಧನೆಯ ಮೂಲಕ ಕ್ರಾಂತಿಕಾರಕವಾಗಿ ಮಾರ್ಪಾಡಾಗುತ್ತಿದ್ದ ಕಾಲ ಅದು.

ಭೌತವಿಜ್ಞಾನದ ಮೂಲ ಪರಿಕಲ್ಪನೆಗಳೇ ಮಾರ್ಪಾಡಾಗುತ್ತಿದ್ದು, ಹೆನ್ರಿ ಬ್ಯಾಕರೆಲ್, ಮಾಕ್ಸ್ ಪ್ಲಾಂಕ್, ಮೇರಿ ಮತ್ತು ಪಿಯರಿ ಕ್ಯೂರಿ ಮತ್ತಿತರರು ಪರಮಾಣುವಿನ ಅಗಾಧ ಅನೂಹ್ಯ ವಿಶ್ವರೂಪವನ್ನು ಹುಡುಕಿ ತೆಗೆದು ಜಗತ್ತನ್ನು ದಂಗುಬಡಿಸಲು ಉಪಕ್ರಮಿಸಿದ್ದ ಕಾಲ - ಕ್ವಾಂಟಮ್ ಭೌತವಿಜ್ಞಾನ ಹುಟ್ಟಿದ ಯುಗ.

ಓಪನ್‌ಹೈಮರ್ ಹುಟ್ಟಿದ ಜಗತ್ತು ಈ ಪರಿ ಕ್ರಾಂತಿಕಾರಕವಾಗಿ ರೂಪಾಂತರಗೊಳ್ಳುತ್ತಿತ್ತು. ಈ ಹಿಂದೆ ಜರ್ಮನಿಯಿಂದ ಅಮೆರಿಕೆಗೆ ವಲಸೆ ಬಂದ ಎರಡನೆಯ ಪೀಳಿಗೆಯ ಶ್ರೀಮಂತ ಯೆಹೂದ್ಯ ಕುಟುಂಬದಲ್ಲಿ ಹುಟ್ಟಿದ ಅವನಿಗೆ ಅತ್ಯುಚ್ಚ ಶಿಕ್ಷಣ ಹಾಗೂ ಸುಸಂಸ್ಕೃತ ಸಂಸಾರದ ಸುಖ ಸೌಲಭ್ಯಗಳೆಲ್ಲವೂ ದೊರೆತವು. ಹುಟ್ಟಾ ಅತಿಮೇಧಾವಿ, ಪ್ರತಿಭಾವಂತನೆಂದು ಹೆಸರಾಂತ ಅವನಿಗೆ ಗಟಿಂಗನ್ ವಿಶ್ವವಿದ್ಯಾನಿಲಯದಲ್ಲಿ ಮ್ಯಾಕ್ಸ್ ಬಾರ್ನ್‌ರಂಥ ಉಜ್ವಲ ವಿದ್ವಾಂಸ ಪ್ರಾಧ್ಯಾಪಕನ ಮಾರ್ಗದರ್ಶನ ದೊರೆತು ಬಹುದೊಡ್ಡ ಸಂಶೋಧಕ ಪರಿಣತನೆಂಬ ಕೀರ್ತಿಗೆ ಓಪನ್‌ಹೈಮರ್ ಭಾಜನನಾದ. ಆಗಿನ್ನೂ ಅವನು, ಜೀವ ಕಳೆ ತುಂಬಿತುಳುಕುತ್ತಿದ್ದ ಯುವ ಚಿಂತಕ. ಕ್ಯಾಲಿಫೋರ್ನಿಯ ವಿಶ್ವವಿದ್ಯಾನಿಲಯ ಹಾಗೂ ಕ್ಯಾಲ್ಟೆಕ್ (ಕ್ಯಾಲಿಫೋರ್ನಿಯ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ) ಎರಡೂ ಕಡೆ ಪ್ರಾಧ್ಯಾಪಕನಾಗಿ ಕೆಲಸ ಮಾಡುವ ಹೆಮ್ಮೆಯ ಗೌರವಕ್ಕೆ ಪಾತ್ರನಾದ. ಬಹು ಬೇಗ ಅಲ್ಲಿನ ಪ್ರತಿಭಾವಂತ ವಿದ್ಯಾರ್ಥಿ ಸಮುದಾಯದಲ್ಲಿ ಅವನೊಬ್ಬ ಪುರಾಣ ಪ್ರಸಿದ್ಧ ಶಿಕ್ಷಕನಾದ. ಅಲ್ಲಿಂದ ಮುಂದೆ ಅವನು ನ್ಯೂ ಮೆಕ್ಸಿಕೊದಲ್ಲಿ ಸ್ಥಾಪಿತಗೊಂಡ ಲಾಸ್ ಆಲಮಾಸ್ ಅಣುವಿಜ್ಞಾನ ಸಂಶೋಧನ (ನ್ಯೂಕ್ಲಿಯರ್ ಬಾಂಬನ್ನು ತಯಾರಿಸುವ ಮುಖ್ಯ ಉದ್ದೇಶವುಳ್ಳ) ಕೇಂದ್ರದ ಮುಖ್ಯ ನಿರ್ದೇಶಕನಾಗಿ ಅತ್ಯುನ್ನತ ಸ್ಥಾನಕ್ಕೇರಿದುದು ಒಂದು ಚಾರಿತ್ರಿಕ ಸಂಘಟನೆ.

ಹೀಗೆ ನ್ಯೂಯಾರ್ಕ್‌ನಿಂದ (ನ್ಯೂ ಮೆಕ್ಸಿಕೋ ರಾಜ್ಯದ) ಲಾಸ್ ಆಲಮಾಸ್‌ಗೆ ಅವನು ಕ್ರಮಿಸಿದ ದಾರಿ - ದುರ್ಗಮವೂ ಸುತ್ತು ಬಳಸುವ ಚಕ್ರವ್ಯೂಹದ ಮಾರ್ಗವೂ ಆಗಿತ್ತು. ಅದು ಅಜ್ಞಾತ ವಿಜ್ಞಾನಿಯೊಬ್ಬನ... ಜಗದ್ವಿಖ್ಯಾತನ ಪಟ್ಟಕ್ಕೆ ಕೊಂಡೊಯ್ದಿತ್ತು. ಈ ಮಹ... ಘಟನೆಯನ್ನು ಈ ಚರಿತ್ರಕಾರರು ಹೀಗೆ ಸಂಗ್ರಹಿಸುತ್ತಾ...

''ಮುಂದಿನ ಹಲವಾರು ತಿಂಗಳುಗಳ, ವರ್ಷಗ... ಕಾಲ - ಓಪನ್‌ಹೈಮರ್ ಸರ್ಕಾರದ ಹುದ್ದೆಯಲ್ಲಿದ್ದಾ... ಕಾಲವೂ ಅವನನ್ನು ಲೆಕ್ಕವಿಲ್ಲದಷ್ಟು ಕುತಂತ್ರಗಳಿಗ... ಪಿತೂರಿಗಳಿಗೆ ಗುರಿಮಾಡಿ ಪೀಡಿಸಲಾಯಿತು... ಆಲಮಾಸ್‌ನಲ್ಲಿ ಅವನ ನೆರವಿಗೆಂದು ನೇಮಿಸಿದ... ಸಿಬ್ಬಂದಿ, ವಾಸ್ತವವಾಗಿ, ವಿಶಿಷ್ಟ ತರಬೇತು ಪಡೆದ... ಗೂಢಚರ್ಯೆಯ ಏಜಂಟರುಗಳಾಗಿದ್ದರು! - ಮೇಲ... ನೋಟಕ್ಕೆ ಅವನ ಅಂಗರಕ್ಷಕರೆನಿಸಿಕೊಂಡ ... ಅಧಿಕಾರಿಗಳು ಪ್ರಚ್ಛನ್ನ ಗುಪ್ತಚಾರಿಗಳಾಗಿದ್ದರು. ಅವನ... ಸ್ವಂತದ ಕಾಗದ ಪತ್ರಗಳನ್ನು ರಹಸ್ಯವಾಗಿ ಕಾನೂನು... ಬಾಹಿರವಾಗಿ, ತಡೆದು ತಪಾಸಣೆ ಮಾಡಲಾಗುತ್ತಿತ್ತು... ಅವನ ಟೆಲಿಫೋನ್‌ಅನ್ನು ಕದ್ದಾಲಿಸುತ್ತಿದ್ದರು... ಯುದ್ಧಾ ನಂತರವೂ ಅವನ ಕಛೇರಿ ಕೋಣೆಯಲ... ರಹಸ್ಯ ಎಲೆಕ್ಟ್ರಾನಿಕ್ ಉಪಕರಣಗಳನ್ನು ಅಳವಡಿಸಿ... ಕಣ್ಗಾವಲಿಡಲಾಯಿತು. ಅವನ ಪೂರ್ವಾಪರ... ರಾಜಕೀಯ ಸಿದ್ಧಾಂತ-ನಂಬಿಕೆಗಳನ್ನು ಮತ್ತೆ ಮತ... 'ಎತ್ತಿ ಆಡಿ'ಗೋಳಾಡಿಸಿದರು. ಅಮೆರಿಕದ ಕಾಂಗ್ರೆಸ್... ಸಮಿತಿ ಹಾಗೂ ಎಫ್‌ಬಿಐನವರು 'ಅವನೊಬ್ಬ... ಸಂಶಯಾಸ್ಪದ ವ್ಯಕ್ತಿ', 'ವ್ಯವಸ್ಥೆಯ ಶತ್ರು', 'ಕಮ್ಯುನಿಸ್... ಪಕ್ಷದ ಸದಸ್ಯ' ಎಂದು ಪ್ರತ್ಯಕ್ಷ, ಪರೋಕ್ಷ... ಸೂಚನೆಗಳಿತ್ತು ಅವನ ಅಧಿಕಾರ ಜೀವನವನ್ನು...


Some of Our bestsellers......

Hana's Suitcase

Still Life




Paper Aeroplanes

Picture Reading

Fun with papers

Festivals of India

SNAKES OF MAHARASHTRA GOA & KARNATAKA

SKETCHING & DRAWING



OUR SCHOOL

JYOTSNA PRAKASHAN
Mohan Bldg. 162-B J.S.S. Road, Girgaon, **Mumbai** 400 004 ☎ 23877019
Dhawalgiri, 430/31 Shaniwar Peth **Pune** 411 030 ☎ 24451453
Email: jyotsnaprakashan@vsnl.com / www.jyotsnaprakashan.com

ಘೋರ ಸಂಕಟಕ್ಕೆ ಒಳಪಡಿಸಿದರು...'' (ಪುಟ ೨೩೫)

ಇಂಥ ಓಪನ್‌ಹೈಮರ್ ಜೀವನದ ಲಾಸ್ ಆಲಮಾಸ್ ಅವಧಿ ಹೀಗೆ ಉತ್ಕಟ ಸಂಘರ್ಷಮಯವಾಗಿತ್ತು. ವಿಜ್ಞಾನ ಲೋಕದ ಉಗ್ರ ಹೋರಾಟಗಳು, ಇಪ್ಪತ್ತನೆಯ ಶತಮಾನದ ಎರಡನೆಯ ಮಹಾಯುದ್ಧ, ಅಮೆರಿಕ-ಸೋವಿಯೆತ್ ರಷ್ಯ ನಡುವಣ 'ಶೀತಲ ಸಮರ', ಅಮೆರಿಕದ ರಾಜಕಾರಣ ವ್ಯವಸ್ಥೆ ಹೀಗೆ ನ್ಯೂಕ್ಲಿಯರ್ ಬಾಂಬಿನ ತಾಂತ್ರಿಕ ಪರಿಣತಿಯನ್ನು ಅಧಿಕಾರದ ಕುಟಿಲ ತಂತ್ರಗಳಿಗೆ ಬಳಸಿಕೊಂಡಿತೆಂಬ ವಿವರಗಳು, ಇವುಗಳ ನಡುವೆ ಮಾನವ ಕೋಟಿ ವಿನಾಶಕ್ಕೀಡಾಗಬಹುದಾದ ಪರಿಸ್ಥಿತಿ ಸೃಷ್ಟಿಸಿದ ಅಣು ಬಾಂಬಿನ ನಿರ್ಮಾತೃವೇ ಜಗತ್ತಿನ ಶಾಂತಿಗಾಗಿ, ಮಾನವವರ್ಗದ ಉಳಿವಿಗಾಗಿ ನ್ಯೂಕ್ಲಿಯರ್ ಬಾಂಬಿನ ವಿರುದ್ಧ ಪ್ರಚಾರ ಮಾಡುವಂತಾಗಿ ಅಧಃ ಪತನಕ್ಕೀಡಾಗಬೇಕಾಗಿ ಬಂದ ವಿಪರ್ಯಾಸ, ಈ ಚರಿತ್ರೆಯಲ್ಲಿ ಚಲಚ್ಚಿತ್ರದ 'ಸರಣಿ ಚಿತ್ರಣ'ಗಳಂತೆ ಅನಾವರಣಗೊಂಡಿವೆ.

ಒಂದು ದೃಷ್ಟಿಯಲ್ಲಿ ಓಪನ್‌ಹೈಮರ್ ತುಂಬಾ ಅದೃಷ್ಟಶಾಲಿ. ಅವನ ಅಸಾಧಾರಣ ಬೌದ್ಧಿಕ ಶಕ್ತಿಯ ಜತೆಗೆ ಅವನ ಮೇಲೆ ಅವನ ಸುಸಂಸ್ಕೃತ ತಂದೆ ತಾಯಿಗಳು, Ethical Culture Schoolನ ಶಿಕ್ಷಕರು ಶ್ರೇಷ್ಠ ಪ್ರಭಾವ ಬೀರಿದ್ದರು. ಹೀಗಾಗಿ ಅವನು ೧೯೨೦ರ ದಶಕದ ಹೊತ್ತಿಗೆ 'ವಿಜ್ಞಾನಿ ಓಪನ್ ಹೈಮರ್' ಎಂದು ಲೋಕ ವಿಖ್ಯಾತನಾದ, ನಿಜ. ಆದರೆ ಕ್ಯಾಲಿಫೋರ್ನಿಯಾದಲ್ಲಿ ಅವನು ಪ್ರಾಧ್ಯಾಪಕನಾಗಿದ್ದ ಅವಧಿಯಲ್ಲೆ ಅಮೆರಿಕದಲ್ಲಿ ಆರ್ಥಿಕ ಮುಗ್ಗಟ್ಟು ಇನ್ನೂ ಪ್ರಬಲವಾಗಿತ್ತು – ಯುರೋಪಿನಲ್ಲಿ ಫ್ಯಾಸಿಸ್ಟ್ ನಾಯಕರು ತಲೆ ಎತ್ತುತ್ತಿದ್ದರು. ಇಂಥ ಪರಿಸ್ಥಿತಿಯಲ್ಲಿ ಜನ್ಮತಃ ಸೂಕ್ಷ್ಮ ಹೃದಯಿ ಹಾಗೂ ಸಂವೇದನಾ ಶೀಲನಾದ ಓಪನ್‌ಹೈಮರ್ ಸಾಮ್ಯವಾದ (ಕಮ್ಯುನಿಸಂ)ದ ಉನ್ನತ ಆದರ್ಶಗಳಿಂದ ಆಕರ್ಷಿತನಾದುದು ತುಂಬಾ ಸಹಜವಾಗಿತ್ತು. ಆದರೆ ಯಾವ ಪ್ರಜಾತಂತ್ರ ವ್ಯವಸ್ಥೆ ಅಮೆರಿಕದಲ್ಲಿ ಅವನಿಗೆ ಅತ್ಯಗತ್ಯವಾಗಿದ್ದ ವಿಚಾರ ಸ್ವಾತಂತ್ರ್ಯವನ್ನೂ ಸಾಮಾಜಿಕ ಪ್ರಜ್ಞೆಯನ್ನೂ ಒದಗಿಸಿತ್ತೋ ಅದೇ ವ್ಯವಸ್ಥೆ ಅವನ ವಿಚಾರ ಸ್ವಾತಂತ್ರ್ಯ, ಸಾಮಾಜಿಕ ಕಾಳಜಿಗಳನ್ನು ಹತ್ತಿಕ್ಕಿ ಅವನ ಮೇಲೆ ರಷ್ಯನ್ ಗೂಢಚಾರಿ ಎಂಬಿತ್ಯಾದಿ ಇಲ್ಲಸಲ್ಲದ ಆಪಾದನೆಗಳನ್ನು ಹೇರಿ ಅವನನ್ನು ಅಪರಾಧಿಯ ಸ್ಥಾನದಲ್ಲಿ ನಿಲ್ಲಿಸುವಂತಾದುದು ಅಮೆರಿಕದ ಪ್ರಜಾತಂತ್ರ ವ್ಯವಸ್ಥೆಯ ಕರಾಳ ಮುಖವನ್ನು ಜಗತ್ತಿಗೆ ತೆರೆದು ತೋರಿಸುವಂತಾಯಿತು.

೧೯೫೪ರ ಸುಮಾರಿನಲ್ಲಿ ಓಪನ್‌ಹೈಮರ್ ಎದುರಿಸಬೇಕಾಗಿ ಬಂದ ಹಲವು ಕಷ್ಟನಿಷ್ಠುರಗಳನ್ನು 'ಮೆಕಾರ್ಥಿ ವಿಷಮಯುಗ'ದಲ್ಲಿ ಅವನಂಥ ಬುದ್ಧಿಶಾಲಿಗಳು ಯಾರೂ ತಪ್ಪಿಸಿಕೊಳ್ಳುವಂತಿರಲಿಲ್ಲ. ಆದರೆ ತನ್ನ ವಿರುದ್ಧ ಎದ್ದುನಿಂತ ದುಷ್ಟ ವ್ಯವಸ್ಥೆಯ ಅನಿಷ್ಟ ಶಕ್ತಿಗಳನ್ನು ಅವನು ಧೀರೋದಾತ್ತನಂತೆ ಎದುರಿಸಿದ. ನಿಜವಾಗಿ ಅವನು ಅಮೆರಿಕದ 'ಪ್ರಮಿಥ್ಯೂಸ್'. ಗ್ರೀಕ್ ಪುರಾಣದಲ್ಲಿ ಪ್ರಮಿಥ್ಯೂಸ್ ದೇವತೆ ಮಹಾದೇವ ಝ್ಯೂಸ್‌ನ ಮಗ. ತಂದೆಯ ಆಜ್ಞೆಗೆ ವಿರುದ್ಧವಾಗಿ ಸ್ವರ್ಗದಿಂದ ಅಗ್ನಿಯನ್ನು ಕದ್ದು ತಂದು ಮಾನವಲೋಕಕ್ಕೆ ಅರ್ಪಿಸಿದ. ತಂದೆಯ ಉಗ್ರ ಕೋಪಕ್ಕೆ ಬಲಿಯಾಗಿ ದೀರ್ಘಕಾಲದ ಶಿಕ್ಷೆಗೆ ಗುರಿಯಾದ – ಅದೇ ರೀತಿ, ದುಷ್ಟ ಫ್ಯಾಸಿಸ್ಟ್ ಶಕ್ತಿಯಾದ ಹಿಟ್ಲರನನ್ನು ನಾಶಮಾಡಲು ಓಪನ್‌ಹೈಮರ್ ಅಣುಬಾಂಬನ್ನು ನಿರ್ಮಿಸಿದನಾದರೂ ಅದನ್ನು ಮಾನವ ಕೋಟಿಯ ಮೇಲೆ ಪ್ರಯೋಗಿಸಬಾರದೆಂಬ ಸದಸದ್ವಿವೇಕ ಅವನಿಗೆ ಬಹುಬೇಗ ಮನವರಿಕೆಯಾಯಿತು. ಅದೇ ಅವನ ಪತನಕ್ಕೆ ನಾಂದಿಯಾಯಿತು.

## ಅಣು ಒಪ್ಪಂದ



ನಮಗೆ 'ದೊಡ್ಡಣ್ಣ' ಅಮೆರಿಕದ ಸಂಬಂಧ ಚೆನ್ನಾಗಿದೆ! ನಿನಗೆ ಇನ್ನು ಯಾವ ಚಿಂತೆಯೂ ಬೇಡ!

೧೯೪೦ರ ಕೊನೆಯ ಹೊತ್ತಿಗೆ ಅಮೆರಿಕ ಸೋವಿಯತ್ ರಷ್ಯ ಸಂಬಂಧಗಳು ಮತ್ತಷ್ಟು ಹದಗೆಟ್ಟಿದ್ದವು. ನ್ಯೂಕ್ಲಿಯರ್ ಬಾಂಬ್‌ಅನ್ನು ಖಂಡಿಸಲು ಪ್ರಾರಂಭಿಸಿದ್ದ ಓಪನ್‌ಹೈಮರ್ ತನ್ನ ದೇಶದ ವ್ಯವಸ್ಥೆಯ ದ್ವೇಷಾಸೂಯೆಗಳಿಗೆ ಗುರಿಯಾದ. ಅಮೆರಿಕದಲ್ಲಿ ೧೯೫೩ರಲ್ಲಿ ರಿಪಬ್ಲಿಕನ್ ಪಕ್ಷ ಅಧಿಕಾರಕ್ಕೆ ಬಂದು ಎರಡು ಮಹಾಬಣಗಳ ನಡುವಣ ನ್ಯೂಕ್ಲಿಯರ್ ಪೈಪೋಟಿ ಘೋರ ಪ್ರಮಾಣಕ್ಕೇರಿತು – ಲೂಯಿಸ್ ಸ್ಟ್ರಾಸ್‌ರಂಥ ಅತಿ ದುಷ್ಟ, ಪ್ರತೀಕಾರ ಮನೋಭಾವದ, ಪ್ರಗತಿವಿರೋಧಿ ಕದನ ಪ್ರಿಯರು ಅಧಿಕಾರಕ್ಕೇರಿದಾಗ ಓಪನ್‌ಹೈಮರ್‌ನ ರಾಜಕೀಯ - ಸಾಮಾಜಿಕ ನಿಶ್ಚಿತಾಭಿಪ್ರಾಯಗಳು, ಗಾಢನಂಬಿಕೆಗಳು ಅಪಾಯವನ್ನೆದುರಿಸುವಂತಾದವು. ಆಗ ಅವನ ಶತ್ರುಗಳಿಗೆ ಅವನ ಸ್ವಭಾವದ ಲೋಪದೋಷಗಳನ್ನು, ಅವನ ಮಹತ್ವಾಕಾಂಕ್ಷೆಗಳನ್ನು, ಅವನ ಉಜ್ವಲ ದೇಶ ಪ್ರೇಮ, ಬೌದ್ಧಿಕ ಶಕ್ತಿಗಳನ್ನು, ಅವನ ಶೋಚನೀಯ ಅಮಾಯಕತೆ - ಬೋಳಾಯಿತನ (naivete)ಗಳನ್ನು ಅವನ ದೃಢನಿಶ್ಚಲತೆಯನ್ನು, ಒಳಗೆಲ್ಲೋ ಅವನನ್ನು ಕಾಡುತ್ತಿದ್ದ ಅವನ ಮುಜುಗರ ಹಾಗೂ ಅಪರಾಧ ಪ್ರಜ್ಞೆಯನ್ನು ದುರುಪಯೋಗಪಡಿಸಿಕೊಂಡು ಅವನ ಚಾರಿತ್ರ್ಯವಧೆ ಮಾಡುವುದು ಸುಲಭವಾಯಿತು – ಅವನನ್ನು ವಿಚಾರಣೆಗೊಳಪಡಿಸಿ ಅವನ security clearance ರದ್ದುಗೊಳಿಸುವಂಥ ಅವಮಾನಕರ ಶಿಕ್ಷೆಗೆ ಅವನನ್ನು ಗುರಿಪಡಿಸಿ AEC ಸಮಿತಿಯ Personnel Security Hearing Board ನವರು ಸಂಗ್ರಹಿಸಿದ ಒಂದು ಸಾವಿರ ಪುಟಗಳ ವರದಿ 'ಜೆ. ಓಪನ್‌ಹೈಮರ್ ಪ್ರಸಂಗ'ದಲ್ಲಿ ಅವನ ಈ ಎಲ್ಲ ದುರಂತ ಲೋಪ ದೋಷಗಳು, ಸಜ್ಜನಿಕೆ, ಸದ್ವರ್ತನೆ, ಉಜ್ವಲ ರಾಷ್ಟ್ರಪ್ರೇಮ – ಇವು ಎದ್ದು ತೋರುವಂತಿವೆ. ಇಷ್ಟಾದರೂ ಸಮಿತಿಯ ಸದಸ್ಯರಿಗೆ ಅವನ ನಿಗೂಢ ವ್ಯಕ್ತಿತ್ವದ ವಿಕ್ಷಿಪ್ತ ಅಂತರಂಗವನ್ನು ಭೇದಿಸುವುದು ಸಾಧ್ಯವಾಯಿತೇ ಎಂಬುದು ಅನುಮಾನಾಸ್ಪದ. ಸಮಿತಿಯ ಸದಸ್ಯರಲ್ಲೊಬ್ಬನಾದ, ಸಮಿತಿಯ ತೀರ್ಪಿನ ವಿರುದ್ಧ ಅಸಮ್ಮತಿ - ಸೂಚನೆ ದಾಖಲಿಸಿದ, ವಾರ್ಡ್ ಇವಾನ್ಸ್ ಹೇಳಿದ ಮಾತುಗಳು ಅರ್ಥಪೂರ್ಣವಾಗಿವೆ: 'ಈ ತೀರ್ಮಾನ ನಮ್ಮ ರಾಷ್ಟ್ರದ ಘನತೆ ಗೌರವಗಳಿಗೆ ಘೋರ ಕಳಂಕ ತಂದಿದೆ.'

American Prometheus ಆ ದೇಶದ ಜಟಿಲ, ವಿರೋಧಾಭಾಸದ ರಾಜಕೀಯವನ್ನೂ, ಓಪನ್‌ಹೈಮರ್‌ನ ಅಪಾರದರ್ಶಕ, ಸಂಕೀರ್ಣ ವ್ಯಕ್ತಿತ್ವವನ್ನೂ ಅತ್ಯಂತ ಸೂಕ್ಷ್ಮವಾಗಿ ಅನ್ವೇಷಿಸುವ ಒಂದು ಗಾಢ ಪ್ರಯತ್ನವಾಗಿದೆ. ಇದೊಂದು ಅತ್ಯಂತ ಆಪ್ತರೀತಿಯಲ್ಲಿ ನಮ್ಮ ಮನಸ್ಸನ್ನು ಮುಟ್ಟುವ ವೈಯಕ್ತಿಕ, ಜೀವನ ಚರಿತ್ರೆ, ಸುಮಾರು ೨೫ ವರ್ಷಗಳ ನಿರಂತರ ಸಾಹಸಮಯ ಸಂಶೋಧನೆಯ ಫಲವಾಗಿ, ಗಂಭೀರ ಚಿಂತನೆಯಿಂದ ಸ್ನಿಗ್ಧಗೊಂಡು ರೂಪಿತವಾದ ಆರುನೂರು ಪುಟಗಳ ಈ ಗ್ರಂಥ ಓದಿ ಮುಗಿಸಿದ ನಂತರ ನನಗೆ Robert Junk ತನ್ನ ಖ್ಯಾತ ಗ್ರಂಥದ ಪೀಠಿಕೆಯಲ್ಲಿ ಹೇಳಿದ ಮಾತುಗಳು ಪ್ರಸ್ತುತವೆನಿಸುತ್ತವೆ:

''ನಮ್ಮ ಈ ಯುಗದಲ್ಲಿ, ಹಿಂದಿನ ಕಾಲದ ರಾಜ ಮಹಾರಾಜರುಗಳಂತೆ ದುರಂತದ ತೇಜೋಮಂಡಲದಡಿ ನಿಲ್ಲುತ್ತಾರೆ, ನಮ್ಮ ವಿಜ್ಞಾನಿಗಳು – ಷೇಕ್ಸ್‌ಪಿಯರ್ ಏನಾದರೂ ನಮ್ಮ ತಲೆಮಾರಿನ ಈ ಕಾಲದಲ್ಲಿ ''ಹ್ಯಾಮ್ಲೆಟ್'' ನಾಟಕ ಬರೆದಿದ್ದರೆ, ಅವನು ಹ್ಯಾಮ್ಲೆಟ್‌ನನ್ನು ಒಬ್ಬ ರಾಜಕುಮಾರನನ್ನಾಗಿ ಚಿತ್ರಿಸುತ್ತಿರಲಿಲ್ಲ – ಅವನನ್ನೊಬ್ಬ ನ್ಯೂಕ್ಲಿಯರ್ ವಿಜ್ಞಾನಿಯನ್ನಾಗಿ ಪ್ರಸ್ತುತ ಪಡಿಸುತ್ತಿದ್ದ.''

ಎಚ್. ಕೆ. ರಾಮಚಂದ್ರಮೂರ್ತಿ
೧೦೨, ಶ್ರವಂತಿ ಪ್ಯಾಲೇಸ್, ೩ನೇ ಅಡ್ಡರಸ್ತೆ, ಸಿ.ಆರ್. ಲೇಔಟ್,
ಜೆ.ಪಿ.ನಗರ, ೧ನೇ ಹಂತ, ಬೆಂಗಳೂರು -೭೮

## ಮಧ್ಯವರ್ತಿ

ರೈತ ಬೆವರು ಹರಿಸಿ ಬೆಳೆಯುತ್ತಾನೆ.
ಗ್ರಾಹಕ ಹಣ ಕೊಟ್ಟು ಕೊಳ್ಳುತ್ತಾನೆ.
ಮಧ್ಯದವನು
ಬೆವರುವುದಿಲ್ಲ
ಬೆಳೆಯುವುದಿಲ್ಲ
ಕೊಳ್ಳುವುದಿಲ್ಲ
ಸುಮ್ಮನೆ ಆಟವಾಡಿಕೊಂಡು ಬದುಕುತ್ತಾನೆ.

■ ಕು. ಸ. ಮಧುಸೂದನ
ವಿಜಯಾ ಬ್ಯಾಂಕ್ ಮಹಡಿ
ರಂಗೇನಹಳ್ಳಿ - ೫೭೭ ೧೪೪, ಚಿಕ್ಕಮಗಳೂರು ಜಿಲ್ಲೆ




■ ಎಂ.ಎಸ್. ವೇದಾ

**ಯಿ**ದ್ದಕ್ಕಿದ್ದಂತೆಯೇ ಆ ಬಸ್ಸು ರುದ್ರಮೌನವನ್ನು ಆವಾಹಿಸಿಕೊಂಡು ಓಡತೊಡಗಿತ್ತು. ಅಲ್ಲಿಯಗ್ಗಂಟಾ ಆ ಬಸ್ಸಿನಾಗೆ ಎಂತೆಂಥ ದನಿಗಳು, ಎಂತೆಂಥ ಮಾತುಗಳು, ಎಂತೆಂಥ ನಗುಗಳು, ಎಂತೆಂಥ ಹಾಡುಗಳು... ಬಸ್ಸು ವೋಡಿಸುತ್ತಿದ್ದ ಡ್ರೈವರು ನಾಗಣ್ಣಂಗೆ ಆ ಬಸ್ಸು, ಆ ಬಸ್ಸಿನಾಗಿನ ಪಯಣಿಗರು, ಅವರ ಸಾವಾಸ ಯೆಲ್ಲವೂ ಭೋ ಖುಸಿಯನ್ನೇ ಕೊಟ್ಟಿದ್ದವು. ಅರ್ಧರಾತ್ರಿಯ ಪಯಣವಾದರೂ ನಾಗಣ್ಣ ಇಂಕರವೂ ತೂಕಡಿಸದಂಥ ಜೀವಂತಿಕೆ ಬಸ್ಸಿನಾಗೆ ತುಂಬುಗಂಡಿತ್ತು. ಅವನೂ ಕಳೆದ ಇಪ್ಪತ್ತೈದು ವರ್ಸಗಳಿಂದಲೂ ಈ ಕೆಲಸದಾಗೆ ತನ್ನನ್ನು ತೊಡಗಿಸಿಕಂಡಿದ್ದಾನೆ. ಮೈಸೂರಿನ ಮನೆಯಾಗೆ ಎರಡು ದಿನವಿದ್ದರೆ ಇಪ್ಪತ್ತು ದಿನ ಅವನು ಬಸ್ಸಿನಾಗೇ ಇರುತ್ತಾನೆ. ಭಾರತದಾಗಿನ ಯಾವ ಮೂಲೆಯಾದರೂ ಸೈ. ಟ್ರಾವೆಲ್ ಏಜೆನ್ಸಿಯ ಒಡೆಯರು ಯೆತ್ತ ವೋಗೆನ್ನುತ್ತಾರೆ ಅತ್ತ ವೊರಟುಬಿಡುವುದು. ಕನ್ನಡಿಗರಿರಲಿ, ತಮಿಳೀನೋರಾಗಲಿ, ಹಿಂದಿಯೋರಿರಲಿ, ಇಂಗ್ಲೀಷಿನೋರಾಗಲಿ ಅವುರವರ ಭಾಷೇನಾಗೆ ಮಾತನಾಡುತ್ತಾ, ಅವುರ ಭಾವನೆಗಳಿಗೆ ಸ್ಪಂದಿಸುತ್ತಾ, ಅವರುಗಳಿಗೆ ಯೆಲ್ಲೂ ಹೇಗೂ ಇಂಕರವೂ ನೋವಾಗದಂಗೆ ನಡಕೊಂಡು, ನಡಸಿಕಂಡು ಪ್ರವಾಸವ ಸಾಂಗೋಪಸಾಂಗವಾಗಿ ಮುಗಿಸಿ ಕೈ ಮುಗುದು ಮನೆಯತ್ತ ಹೊಂಟಾಗ ಅವನೂ ತಮ್ಮೊಳಗೆ ಒಬ್ಬನೆಂಬ ಭಾವನೆಗೆ ಒಳಗಾಗಿ ಬುಟ್ಟಿರುತ್ತಿದ್ದ ಪ್ರವಾಸಿಗರು ಮುಗಿದ ಕೈಯ ಬಿಡಿಸಿ ತಮ್ಮ ಕೈಗಳೊಳಗೆ ಯಿಟ್ಟುಕ್ಕಂಡು ತಮಗೆ ಖುಷಿ ಕಂಡಷ್ಟು ನೋಟುಗಳಿಂದ ಅವುನ ಕೈಯ್ಯ ತುಂಬುಸಿ ಬೆನ್ನು ತಟ್ಟಿ ಕಳುಸಿಕೊಡುತ್ತಿದ್ದರು. ವಂದಷ್ಟು ಕಾಲ ಫೋನ್ನುಗೀನೂ ಮಾಡಿ ಮರೆತರೂ ಮತ್ತೆ ಪ್ರವಾಸಕ್ಕೆ ಹೊಂಟಾಗ ಟ್ರಾವಲ್ ಏಜೆನ್ಸಿಯ ಒಡೆಯರ ಬಳಿ ನಾಗಣ್ಣನೇ ಈ ಬಾರಿಯೂ ತಮ್ಮನ್ನು ಕರೆದೊಯ್ಯಲು ಬರ್‌ಬೇಕೆಂದು ಕೇಳಿಕೊಳ್ಳುತ್ತಿದ್ದರು. ಒಂದೊಮ್ಮೆ ನಾಗಣ್ಣ ಸಿಗದಿದ್ದರೆ ಪ್ರವಾಸವನ್ನು ಮುಂದೂಡಿದರೂ ಮುಂದೂಡಿದರೇ!

ಅಂಥ ನಾಗಣ್ಣ ಈ ಬಾರಿ ಉತ್ತರ ಭಾರತ ಪ್ರವಾಸಕ್ಕೆ ವಂದು ಬಸ್ಸಿನ ತುಂಬಾ ಮುಳ್ಳಳ್ಳಿಯ ಜನಗೋಳ ತುಂಬು... ಗಂಡು ಹೊಂಟಾಗ ಬಹಳವೇ ಖು... ಪಟ್ಟುಗೊಂಡಿದ್ದ. ಯೆಗಲ ಮೇಲಿ... ತವೆಲ್ಲುಗಳ ಹಿರಿಯೋರ, ಪ್ಯಾಂಟು... ಹ್ಯಾಟುಗಳ ಕಿರಿಯೋರ ತಲೆ ಮ್ಯಾಲಿ... ಸೆರಗು ವಾಲೆ ಬುಗುಡಿಗಳ ಹಿರಿಯವ... ಗಳ, ಲಂಗ, ಚೂಡೀದಾರುಗ... ಕಿರಿಯಮ್ಮಗಳ ಹೀಗೆ ಯೆಲ್ಲರೂ ಬಸ್ಸು... ತುಂಬಿ ಕೊಂಡಿದ್ದರು. ಅವುರೆಲ್ಲ... ವಂದುಗೂಡಿಸಿ ಆ ಪ್ರವಾಸದ ನೇತೃತ್ವ... ವನ್ನು ಜ್ಯೋತ್ಯಪ್ಪ ವಹಿಸಿಕೊಂಡಿದ್ದ... ಜ್ಯೋತ್ಯಪ್ಪ, ಬಸ್ಸು ಹತ್ತುವಾಗಲೆ ಒಬ್ಬೊಬ್ಬರ ಯೆಸರ ಹೇಳಿ, ಅವುರ... ಇತ್ಯೋಪರಿಗಳನ್ನೂ ತಿಳಿಸಿ ನಾಗಣ್ಣನಿಗೆ ಪರಿಚಯ ಮಾಡಿದ್ದ. ''ಇವ್ರು ನೋಡು... ನಾಗಣ್ಣ ನಮ್ಮೂರ್ ಗೌಡ್ರು. ಗಿರಿಜಾಮೀಸೆ... ನೋಡುದ್ರೆ ಸಾಕಲ್ವ ಯಾರಂತ ಹೇಳಿ... ಬುಡಬೋದು. ಜೆಡಿಎಸ್‌ಗೆ ದ್ಯಾವೇಗೌಡ್ರಿದ್ದಂಗೆ ಇವ್ರು ನಮ್ಮೂರ್‌ಗೆ ಕಣಪ್ಪಾ.'' ಅವನು ಪರಿಚಯ ಮಾಡುತ್ತಿದ್ದ ರೀತಿಯ ಮಾದರಿಯಿದು. ಜ್ಯೋತ್ಯಪ್ಪನ ಪರಿಚಯದಲ್ಲಿ ಕೆಲವರು ಕಾಂಗ್ರೆಸ್ ನಾಯಕರು, ಕೆಲವರು ಬಿ.ಜೆ.ಪಿ.ಯೋರು, ಹಲವರು ಚಿತ್ರನಟರು, ಹತ್ತಾರು ನಾಯಕಿಯರು – ಹೀಗೆ ಯಾರಾರೋ ಹೇಗ್ಹೇಗೋ... ಬಂದು ಹೋಗಿಬುಟ್ಟಿದ್ದರು. ನಾಗಣ್ಣ ವಟ್ಟೆ ಹಿಡುದುಕೊಂಡು ನಕ್ಕೂ ನಕ್ಕೂ ಸಾಕಾಗಿ ''ಜೋತ್ಯಣ್ಣ ಸಾಕ್ ಬುಡಪ್ಪಾ ನಂಗಿನ್ನಾ ನಗಾಕೆ ಶಕ್ತಿ ಇಲ್ಲ'' ಎಂದು ಸ್ಟೀರಿಂಗ್ ಮ್ಯಾಲೆ ತಲೆಯಿಟ್ಟು ವರಗಿಬಿಟ್ಟಿದ್ದ.

''ಇಷ್ಟುಕ್ಕೆ ಹಿಂಗಂದ್ ಬುಟ್ರೆ ಹೆಂಗೆ ಅಂತೀನಿ. ನಮ್ ಜೋತ್ಯಣ್ಣ ವೂರ್ಗೆ ನಗೆಜ್ಯೋತಿ ಅಚ್ಚೋನು. ಅವ್ನು ಬತ್ತನೆ ಅಂತನೇ ಇರಾಬರಾ ಕೆಲ್ಸ ಬುಟ್ಟು ಟೂರ್ ವಂಟೀವಿ. ಯಾನಪ್ಪ... ಇಷ್ಟ್ ದಿನ ಅದೂ ಇದೂ ಅಂತ ಇಲ್ಲೇ ಹತ್ರ ಹತ್ರದಾಗೇ ಕರಕಂಡು ಹ್ವಾಗಾನು. ಈ ದಪ ದೇಸಾನೇ ಸುತ್‌ಸ್‌ತೀನಿ ಅಂತ ಹೊಂಟೋನೆ. ನಾವು ದುಡ್ಡ್ ಕೊಡಾದು ಯೆಚ್ಚ್ಲಲ್ಲ. ವಂದೂ ವೂನಾ ಆಗದಂಗೆ ಕರ್ಕೊಂಡ್ ಹ್ವಾಗಿ ಕರ್ಕಂಡ್ ಬತ್ತಾನೆ. ಹೊಲ, ಗದ್ದೆ, ದುಡಿತ ಯೆಲ್ಲ ಇದ್ದದ್ದೇಯಾ. ಕಷ್ಟಗೋಳೋ ಬೆನ್ಗೆ ಅಂಟ್ಕಂಡ್‌ವೆ. ಹಂಗಂತ್ ಹಂಗೆ ಕುಂತಿರಕಾದಾತಾ. ಕೈಗೆ ವಂದಷ್ಟ್ ದುಡ್ಡ್ ಸೇರಿಸ್ಕಂಡು ಅಲ್ಲಿ ಇಲ್ಲಿ ಸುತ್ತಾಡಬೇಕು. ದೇಸ ಸುತ್ತು ಕೋಸ ವೋದು ಅಂತ ಕೇಳಿಲ್ವಾ. ಅಂತೇಳಿ ತಿಂಗಾ ತಿಂಗಾ ಅಂತ ವಂದಷ್ಟು ದುಡ್ಡ ಕಂತ್‌ನಾಗೆ ಕಟ್ಟೈಸ್ಕಂಡು ಕರ್ಕ ವೋಯ್ತಾ ಅವ್ನೆ, ದೇಸಾ ನೋಡಾಕೆ. ಈ ವಯಸ್ನಾಗೆ ಕೋಸಾ ವಾದಾ ಘಟುವಾ ಇದು. ದೇಸಾನಾರ ನೋಡಾಣ ಅಂತ ವಂಟೀವಿ. ಇಗಾ ಇವ್ಳು ನನ್ನ ಹೆಡ್ತಿ'' ನಾಗಣ್ಣನ ಹಿಂದೆಯೇ ಕೂರುತ್ತಾ ಗೌಡ್ರು ಹಿರಿದಾಗಿಯೇ ಪ್ರವರ ವಪ್ಪಿಸಿದ್ದರು. ಹಣೆ ತುಂಬ ಕುಂಕುಮ, ಕೈತುಂಬಾ ಕೆಂಪು ಹಸಿರು ಬಳೆಗಳ ತೊಟ್ಟ ಅವರ ಹೆಂಡ್ರು ಗಂಗವ್ವ ''ಇದ್ಯಾನು ನೀವೂ ಜ್ಯೋತ್ಯಣ್ಣಂಗೇ ನಗ್ಯಾರ ಮಾಡ್ದರಿ'' ಎಂದು ಅರೆಮುನಿಸು ತೋರುತ್ತಾ ಪಕ್ಕದಲ್ಲಿ ಕುಂತುಗ್‌ಂಡಿದ್ದರು. ''ಬುಡಿ ತಾಯಿ. ನಗೆ ಅನ್ನಾದು ಅಂಟುರೋಗ ಇದ್ದಂಗೆ. ಇರಾ ನಾಕ್ ದಿನದಾಗೆ ಎಷ್ಟು ತಾನೇ ನಕ್ಕಾವು ನಾವೂ. ನಾವಿಂಗೆ ನಗಲಿಲ್ಲ ಅಂದ್ರೆ ನಗೇನೇ ಮರ್ತುರ್ ಬದುಕ್ ಬುಡ್ತೀವಿ.'' ನಾಗಣ್ಣ ಹೇಳಿದ್ದ. ''ತಾಯೋರ್ಗೆ ವಂಥರಾ ಆಗ್‌ಬುಟ್ಟದೆ ಕಣಪ್ಪ. 'ಲಗ್ನ ಆದಾಗಿಂದ ಯೆಲ್ಲೂ ಕರ್ಕಂಡು ಹ್ವಾಗನಿಲ್ವೋ. ಕ್ವಾಣೆ ಕಾಸಿ ನಡ್ಮನೆ ನಂಜಲಗೂಡು ಆಗೋಗದೆ' ಅಂತ ನನ್ನ ಸ್ವಾಡ ತಿವಿಯೋಳು. ಈಗ ಕಾಸಿ ವಂದೇ ಯಾಕೆ ಡೆಲ್ಲಿ ದೀಪಾಳಿ ಯೆಲ್ಲ ತೋರ್ಸಾಕೆ ಕರ್ಕಂಡು ವಾಯ್ತಾ ಇವ್ನಿ. ಅಯೋಮಯ ಆಗಿಬುಟ್ಟೋಳೆ.''

ನಾಗಣ್ಣನಿಗೆ ಆ ಬಸ್ಸಿನಲ್ಲಿರೋರೆಲ್ಲ ಅದೇ ಅಯೋಮಯ ಸ್ಥಿತಿನಾಗೆ ಇದ್ದಾರೆ ಎನ್ನಿಸಿತ್ತು. ಹಗಲೂ ರಾತ್ರಿ ಮುಗಿಯದ ಮಾತುಗಳು. ಮಾಡದ ನಿದ್ದೆ. ನಿಲ್ಲದ ನಗು. ಯಾಕೋ ಸಿಟಿಯೋರ ಜೊತೆ ಪ್ರವಾಸ ಹೊರಡೋದಕ್ಕಿಂತ ಮುಳ್ಳಳ್ಳಿ ಜನಗೋಳ ಜ್ವತೆ ಹೊಂಟ ಪ್ರವಾಸ ನಾಗಣ್ಣನಿಗೆ ಬಹಳವೇ ಮುದ ತಂದುಕೊಟ್ಟಿತ್ತು. ದಿಲ್ಲಿಯ ಕೆಂಪು ಕೋಟೆಯ ಮುಂದೆ ನಿಂತರೂ 'ಆಹಹಾऽ ಓಹೋಹೊऽ'ಗಳೇ! ರಾಷ್ಟ್ರಪತಿ ಭವನದ ಮುಂದೆ

ಂದರೂ 'ಆಹಹಾಽ ಓಹೋಹೊಽ'ಗಳೇ! ಮೈಮರೆತು ನಿಂತುಗಂಡು ಅವುಗಳ ಟ್ಯೋಕೆ ಆದ ವೆಚ್ಚದಿಂದ ಹಿಡಕ್ಕಂಡು ಅದರ ಕಸ ಗುಡಿಸಿ ಸಾರಿಸೋ ತನಕ ಚರ್ಚೆ ಮಾಡಿಕ್ಕಂಡು ನಿಂತು ಬುಡಿತ್ತಿದ್ದವರ ಜೋತ್ಯಣ್ಣನೇ ''ಹಾ ಹಿಂಗೇ ನಿಂತ್ಕಂಡಿರಿ. ನಾವು ಇನ್ನೂ ನಾಕೂರು ನೋಡ್ಕಂಡು ವಾಪ್ಸು ಹೋಗುವಾಗ ನಿಮ್ಮ ಹತ್ತಿಸ್ಕಂಡು ಹೋಯ್ತಿವಿ'' ಎಂದು ಬಹಳ ಸೀರಿಯಸ್ಸು ನಟಿಸುತ್ತಾ ನುಡಿದರೆ ಮಾತ್ರ ಅಲ್ಲಿಂದ ಅವುರುಗಳು ದಲುತ್ತಿದ್ದುದು. ಹಿಂದಿ, ಇಂಗ್ಲಿಸೂ ತಿಳಿಯದ ಮುಳ್ಳಳ್ಳಿಯ ಜನಕ್ಕೆ ನಾಗಣ್ಣ ಇದ್ದಕ್ಕಿದ್ದಂತೆಯೇ ಗೈಡೂ ಆಗಿ ಡಬ್ಬಲ್‌ರೋಲ್ ಮಾಡಲು ಆರಂಭಿಸಿಬಿಟ್ಟಿದ್ದ.

''ನಾಗಣ್ಣೋ ಇದ್ಯಾನ ಇದು... ಅದ್ಯಾರ ಅದು...'' ಅವರ ಪ್ರಶ್ನೆಗಳಿಗೆ ನಾಗಣ್ಣ ನನಗೆ ತಿಳಿದದ್ದಷ್ಟನ್ನು ವಂಚನೆ ಮಾಡದೆ ವಿವರಿಸಿ ಹೇಳುತ್ತಿದ್ದ.

''ಪಾರ್ಲಿಮೆಂಟಂತೆ ಕಲಾ. ನಮ್ ಗ್ರಾಮುಕ್ಕೆ ಪಂಚಾಯ್ತಿ ಆಪೀಸ್ ಯೆಂಗೋ ಹಂಗೆ ನಮ್ ದೇಸುಕ್ಕೆ ಇದು. ಬುಟ್ಟಾರಾ ಕಾಣೆ ಒಳುಕ್ಕೆ ಕೇಳ್ ನೋಡು ಜೋತ್ಯಣ್ಣ.'' ಪಟೇಲರು ನುಡಿದಿದ್ದರು.

''ಬಾ ಮಾಳಾದ್ದೆ. ಅದ್ರು ಮುಂದ ನಿಂತಿರಾ ಗನ್ ಹಿಡ್ಕಂಡಿದಾರಾ ನೋಡುದ್ರೆ ಳ್ಳೇ ಬಾಯಿಗೆ ಬಂದಂಗೆ ಆಯ್ತದೆ. ವಳಗ್ ಬ್ಯಾರೆ ವಾದಾನಂತೆ ಬುಟ್ವ್ ಬುಟ್ವಾರಾ ನ್ನ.'' ಮಾಡಿಹಟ್ಟಿ ದ್ಯಾವಣ್ಣ ಪ್ರಶ್ನಿಸಿದ್ದರು.

''ಬುಡದೇ ಯಾನ್ ಮಾಡ್ತಾರು. ನಾವ್ ವೋಟ್ ಹಾಕಾಕಿಲ್ವಾ. ನಾವ್ ಈ ದೇಸುದ್ ಪ್ರಜೆಗೋಳಲ್ವಾ. ನಿಂದೊಳ್ಳೆ ಕಣಣ್ಣ. ನಾವ್ ವೋಟ್ ವೊತ್ತಿ ಗೆಲ್ಸಿ ಳ್ಸಿಕೊಟ್ಟೋರೆ ಇಲ್ಲಿರಾದು.'' ರುದ್ರಣ್ಣ ಪಾಯಿಂಟು ಹಾಕಿದ್ದರು.

''ಯೆಲ್ಲ ಸರೀಯೇ ಕಂಡ್ರಪ್ಪಾ. ಆದ್ರೆ ಯಾವಾಗ್ ಯೆಲ್ಲಿ ಯಾರ್ ತಲೆ ಮ್ಯಾಲೆ ಬಾಂಬ್ ಬಿದ್ದಾತೋ ಯಾರುಗ್ಗ್ ಗ್ವತ್ತು ಅಂತೀನಿ. ಅದ್ಕೆ ಯಿಷ್ಟೆಲ್ಲಾ ಯವಸ್ಥೆ' ಗೌಡರು ನುಡಿದಿದ್ದರು.

''ಅದ್ಯಾಕ್ ಗೌಡ್ರೆ ನಾವೇನ್ ಬಾಂಬ್ ಹಾಕೋರಂಗೆ ಇದ್ದೀವಾ. ಕಾಮಾಲ ಕಣ್ಣೋರ್ಗೆ ಯಿಡ್ಯಿ ಜಗುತ್ತೆ ಅಳ್ದಿಯಂಗೆ ಕಂಡಾತಂತೆ. ಹಂಗಾಯ್ತು'' ರುದ್ರಣ್ಣ ಪಟ್ಟು ಬುಟ್ಟಿರಲಿಲ್ಲ.

''ಇದ್ಯಾಕೋ ಅತಿಯಾಗ್ಹೋಯ್ತು ಅಂತನಿ. ನಮ್ ದೇಸದಾಗೇ ನಾವೇ ಹೊರಗ್‌ನೋರಾ. ಇಲ್ಲ ಕೇಡಿಗೋಳಾ. ಯಿಟ್ಟು ಬೂದಿ ಯೆಲ್ಲ ವಂದೆ ಮಾಡದಾ. ನಮ್ ಪಾಲ್ಟಿ ಅದಿಕಾರದಾಗೆ ಇದ್ದಾಗ ಹಿಂಗಿರನಿಲ್ಲ ಕಣ್ರಪ್ಪಾ.'' ರುದ್ರಣ್ಣನ ಮಾತುಗೋಳು ಇದ್ದಕ್ಕಿದ್ದಂತೆಯೇ ಪಾಲ್ಟಿ ರಾಜಕೀಯಕ್ಕೆ ಇಳುದುಬುಟ್ಟಿತ್ತು.

''ಹಿಂಗಿಲ್ದೆ ಇದ್ದುದ್ದಕ್ಕೆ ಕ ರುದ್ರಪ್ಪೋರೆ ನಾಕ್ ದಿಕ್ಕಿಂದ್ಲೂ ಅವ್ರು ಇವ್ರು ಯೆಲ್ಲ ಬಂದು ದೇಸದೊಳಕ್ಕೆ ಸೇರ್ಕಂಡು ನಮ್ಮುನ್ನಾ ಅಗ್ದು ತಿನ್ನಬ್ಯಾಡಿ ನಿಗ್ರಿ ವಾಡಾಡಬ್ಯಾಡಿ ಅನ್ನಂಗೆ ಮಾಡಿಟ್ಟಾರಾದು.'' ರುದ್ರಣ್ಣೋರ ಪಾಲ್ಟಿ ರಾಜಕೀಯವ ಅದಾಗಲೇ ಅರಗಿಸಿಕೊಂಡು ಬುಟ್ಟಿದ್ದ ನಾರಾಯಣಯ್ಯ ಚಾಲಾಕಿತನದಿಂದ ಕಣ್ಣು ವಡೆದು ಕುಟುಕಿದ್ದರು.

''ಕೆಟ್ಬುದ್ನ ಮಾಡಾಕೆ ವರಗಿನಿಂದಾನೇ ಜನ ಬರ್ಬೇಕಾ. ಇಲ್ಲಿರೋರೆಲ್ಲಾ ಭೋ ಸಭ್ಯಸ್ಥರಾ ಸ್ವಾಮಿ.''

''ಸಭ್ಯಸ್ಥರಲ್ದೆ ಯಿನ್ನೇನಾ ಅಂತೀನಿ. ನಮ್ ಪಾಲ್ಟಿನಾಗಂತೂ ಅದೇ ನಂಬ್ಕ ಅದೆ. ನಿಮ್ ಪಾಲ್ಟಿ ಜನಗೋಳ್ ರೀತಿನೇ ಬ್ಯಾರೆ. ಮನೆಗ್ ಮಾರಿ ಪರೋರಿಗೆ ವುಪಕಾರಿ ಅನ್ನಾ ಜನಾ ನೀವು. ಯಾವತ್ತಾರಾ ನಮ್ ಜನ್ನುನ್ನಾ ನೀವು ಸರಿ ಅಂದಿದ್ದರ್ಯಾ'' ಮಾತುಕತೆಗಳು ಜೋರಾಗೇ ಸಾಗಿ ಅತ್ತಿತ್ತ ಚದುರಿದ್ದವರು ವಂದುಗೂಡಿದ್ದರು. ''ಯಾನಾಯ್ತು ಇದ್ಯಾಕ್ ಹಿಂಗ್ ಕೂಗ್ದಂಗೆ ಮಾತಾಡ್ತ ಇದ್ದರಿ'' ಕೇಳಿದ್ದರು. ಕೇಳಿದವರಿಗೆ ಫಿರ್ಯಾದು ಮಾಡಿ ತಮ್ಮ ತಮ್ಮ ವಾದಗಳ ಮಂಡಿಸುವ ಭರಾಟೆಯೂ ನಡೆದಿತ್ತು. ನಾಗಣ್ಣ ಎಲ್ಲಕ್ಕೂ ತನ್ನಿಂತಾನೇ ಮೂಕ ಪ್ರೇಕ್ಷಕನಂತಿದ್ದೇನೆ ಎಂದುಕೊಂಡರೂ ಆ ಜನ ಅವನನ್ನು ಕೆಲವೊಮ್ಮೆ ಅಂಪೈರಂತೆ, ಕೆಲವೊಮ್ಮೆ ರೆಫರಿಯಂತೆ, ಕೆಲವೊಮ್ಮೆ ಗೈಡಂತೆ - ತಮ್ಮ ಅನೂಕೂಲಕ್ಕೆ ತಕ್ಕಂತೆ ಪರಿವರ್ತಿಸಿಕ್ಕಂಡು ಮಾತನಾಡುತ್ತಿರುವಂತೆ ಅನ್ನಿಸುತ್ತಿತ್ತು. ಅಷ್ಟರಲ್ಲಿ ಜೋತ್ಯಣ್ಣ ವಾಪ್ಸು ಬಂದಿದ್ದ.

''ಸೆಷನ್ ನಡೀತಾ ಅದಂತೆ ನಾಗಣ್ಣ. ವಳಕ್ಕೆ ಬುಡಲ್ವಂತೆ. ರಾಜ್‌ಘಾಟ್ ನೋಡಾಕೆ ಹೊರಟು ಬುಡಾಣ ನಡರಿ.''

ಜೋತ್ಯಣ್ಣನ ಆಗಮನದೊಂದಿಗೆ ಗದ್ದಲ ಗಪ್‌ಚುಪ್ಪಾಗಿತ್ತು. ''ಇದ್ಯಾಕ್ರಪ್ಪ ಹಿಂಗ್ ನಿಂತುಬುಟ್ರಿ. ಹೊರಡಿ ಹೊರಡಿ'' ಎನ್ನುವಾಗ ನಾಗಣ್ಣ ನಗುತ್ತಾ ''ಪಾರ್ಟಿ ರಾಜಕೀಯ ಮಾತಾಡ್ತಾ ಇದ್ರು ಸಾ. ಬಹಳವೇ ಇಂಟರೆಸ್ಟಿಂಗ್ ಆಗಿತ್ತು'' ಅಂದಿದ್ದ. ''ನಮ್ ಜನುಕ್ಕೆ ಕಲಿಯದೇ ಕಲಿಸದೇ ಬರಾ ವಿದ್ಯೆ ರಾಜಕೀಯ ವಂದೇ ಅಲ್ವಾ ನಾಗಣ್ಣ. ನಂಗೊತ್ತಿಲ್ವಾ ನಮ್ಮಳ್ಳಿ ರಾಜಕೀಯ. ಪಾರ್ಲಿಮೆಂಟಿನಾಗೆ ಇರೋರಾ ಇವ್ರು ಮುಂದೆ ನಿವಾಳಿಸಿ ಯೆಸೀಬೇಕು. ಹಂಗೆ ರಾಜಕೀಯ ಮಾಡ್ತಾರೆ. ಮಾತನಾಡ್ತಾರೆ. ಆದ್ರೆ ಅದ್ರಿಂದ ಏನೂ, ಯಾವುದೂ ಬಗೆಹರಿಯಲ್ಲ ಅನ್ನಾದ್ನ ಮಾತ್ರ ಒಪ್ಕಳ್ಳಾಕೆ ಇವ್ರು ಸಿದ್ಧರಿಲ್ಲ.''

ಬಸ್ಸು ರಾಜಘಾಟ್ ಕಡೆ ಹೊರಟಿತ್ತು. ಜ್ಯೋತ್ಯಣ್ಣನೇ ''ನೋಡ್ರಪ್ಪಾ ಈಗ ಗಾಂಧೀಜಿಯೋರಾ ಸಮಾದಿ ಯಿರಾ ತಾವ್ಕೆ ಹೋಯ್ತಾ ಇದ್ದೇವಿ. ಸ್ವಲ್ಪ ಮೌನವಾಗಿರೋದ, ಮಾನವಾಗಿರೋದ ಅಭ್ಯಾಸ ಮಾಡಿಕಳಿ'' ಅಂದಾಗ 'ಹೋಽ' ಎಂದು ನಕ್ಕು ಬಸ್ಸು ಮೌನವಾಂತಿತ್ತು. ''ಆದ್ರೂ ಗಾಂಧಿಯಂತೋರು ಮತ್ತೊಂದ್ಸಲ ವುಟ್ಟ್ ಬರಾಕಾದಾತಾ ಅಂತೀನಿ. ಇಂಥ ಕುಲಗೆಟ್ಟಾ ಟೇಮ್ನಾಗೆ ಗಾಂಧಿಯಂಥ ಲೀಡ್ರು

# ವಿಕಾಸವ್ವೋ ?
# ವಿನಾಶವ್ವೋ ?



ಎಲೆ ಕಟ್ಟಿತು ಸೂರ್ಯನಿಗೆ ಸೇತುವೆ
ಬೇರು ಊರಿತು ಪಾತಾಳಕ್ಕೆ ಕಾಲುವೆ.
ಅನಿಲ - ಅನಿಲಗಳ ನಡುವೆ ಅದರದರದೇ ಬೆಸುಗೆ
ಇಡೀ ಸಸ್ಯಲೋಕ ಪ್ರಾಣಿಲೋಕಕೆ ಒಸಗೆ

ಅಣು-ಅಣುಗಳ ಅವಿನಾಭಾವ ಅನುಬಂಧ
ರಸ-ಕಸಗಳ ಸಂಬಂಧ
ಅದೇ ಅಂಗ (ಜೀವ),
ಭಂಗ (ನಿರ್ಜೀವ)ಗಳ
ಋಣಾನುಬಂಧ.
ಜಗ ಬರೆಯುತಿದೆ ಚಲುವಿನ ಚಿತ್ತಾರ
ನೀ ಅಳಿಸುವಿಯೇಕೋ ಭಸ್ಮಾಸುರ.

ಪ್ರಕೃತಿಗೇ ಸವಾಲೆಸೆದು ನೀ ಆಗ
ಹೊರಟರೆ
ಅಂಬಾನಿ, ಟಾಟಾ, ಬಿರ್ಲಾ,
ಮುನಿಸಿ ನುಡಿವಳು ಆಕೆ,
ಅಂಥ ನೀ, ಬೈ ಬೈ, ನಾನೇ ಬಲ್ಲಾ



ಡಾ|| ಎನ್. ಎಸ್. ಲೀಲಾ
ಸಂಖ್ಯೆ ೧೦೫, ವೆಸ್ಟ್ ಪಾರ್ಕ್ ಅಪಾರ್ಟಮೆಂಟ್ಸ್
೧೪-ಎ, ಅಡ್ಡರಸ್ತೆ, ಮಲ್ಲೇಶ್ವರಂ
ಬೆಂಗಳೂರು -೫೬೦ ೦೦೩

ಇರಬೇಕಿತ್ತು ಜೋತ್ಯಪ್ಪ.'' ಗೌಡ್ರು ಕನವರಿಸಿಕೊಂಡಿದ್ದರು.

''ಯಾಕ್ ಗೌಡ್ರೆ ಇನ್ನೊಂದ್ ನಾಕ್‌ಸಲ ಗುಂಡಿಟ್ಟು ಕೊಲ್ಲಾಕ'' ಜೋತ್ಯಣ್ಣ ಸೀರಿಯಸ್ಸಾಗಿ ವುತ್ತರಿಸಿದ್ದ. ''ಆದ್ರೂ ಏನ್ ಸಾ ಇಡೀ ದೇಸಕ್ಕೆ ದೇಸಾನೇ ತಮ್ಮಿಂದೆ ಕರ್ಕೊಂಡು ಹೋಯ್ತಿದ್ದರಲ್ಲ.'' ನಾಗಣ್ಣ ಅಚ್ಚರಿ ಹಂಚಿಕೊಂಡಿದ್ದ. ''ಇವೊತ್ತು ನಮ್ಮ ಲೀಡರ್‌ಗಳ ಹಿಂದೆ ಅವ್ರ ಹೆಂಡ್ತಿ ಮಕ್ಳು ಸಾ ಇರಲ್ಲ ನೋಡಿ. ವೋಟ್ ಹಾಕಾ ದಿನ ಜ್ವತೇಲಿ ಹೋಗಿ ಜ್ವತೇಲಿ ನಿಂತ್ಕಂಡೇ ವೋಟ್ ಹಾಕಿ ಬತ್ತರೆ. ಯಾಕಂದ್ರೆ ಹೆಂಡ್ತಿ ತನ್ನೋಟ ಬ್ಯಾರೆ ಯಾರಿಗಾದ್ರೂ ಹಾಕ್ ಬುಟ್ಟಾಳು ಅಂತ, ಹೆದ್ರಿಕೆ ಅವ್ರುಗಳಿಗೆ.'' ಜೋತ್ಯಣ್ಣನ ಮಾತಿಗೆ ಬಸ್ಸು ಮತ್ತೆ 'ಹೋಽ' ಎಂದು ನಕ್ಕಿತ್ತು.

ಹರೇದ ಹೆಮ್ಮಕ್ಕಳು, ಹೈಕುಳಗಳ ರೂಟೇ ಮತ್ತೊಂದು ರೀತಿಯಲ್ಲಿತ್ತು. ಆದಷ್ಟು ಅವ್ವ, ಅಪ್ಪಂದಿರ ಕಣ್ಣಿಗೆ ಬೀಳದಂಗೆ ಕುಂತವು ವಾರೆಗಣ್ಣಿನಾಗೆ ತಮತಮಗೆ ಬ್ಯಾಕಾದೋರ ನೋಡಿ, ಮುಸಿನಕ್ಕು, ರೋಮಾಂಚನಗೊಳ್ಳುತ್ತಾ ಕುಂತು, ನೋಡಿದ್ದನ್ನೆಲ್ಲಾ ಯಾವ ಪಿಚ್ಚರಿನಾಗೆ ಯಾವ ಯಿಽರೋ ಅದರ ಮುಂದೆ ನಿಂತು ಯಾವ ಹಾಡ ಯೇಳಿದ್ದ ಎಂಬುದ ಚರ್ಚೆ ಮಾಡಿಕೊಳ್ಳುತ್ತಿದ್ದವು. ನಾಗಣ್ಣ ಆಗಾಗ ಅವುರುಗಳು ಬೇಕೆಂದ ಹಾಡುಗಳ ಕ್ಯಾಸೆಟ್ಟಿನಲ್ಲಿ ಕೇಳಿಸುತ್ತಾ ಖುಷಿ ಕೊಡುತ್ತಿದ್ದ. ಅವರೊಂದಿಗಿನ ಜೋತ್ಯಣ್ಣನ ಮಾತುಗಳಂತೂ ಸುಮ್ಮನೆ ಕುಂತು ಕೇಳುವಂತಿರಲಿಲ್ಲ. ಸಿನಿಮಾ ಕುರಿತ ಮಾತುಗಳು ಕೊನೆಗೆ ಜೋತ್ಯಣ್ಣ ವಂದು ಪಿಚ್ಚರ್ ತೆಗೆಯುವ ತನಕಾ ಬಂದು ನಿಂತಿದ್ದವು. ಚಿತ್ರ ವಿಚಿತ್ರವಾದ ಪಿಚ್ಚರುಗಳ ಹೆಸರ ಹೇಳುತ್ತಾ ಜೋತ್ಯಣ್ಣ 'ಪಟ್ರೆ ಲವ್ಸ್ ಪದ್ಮ' ಎಂಬೊಂದು ಹೆಸರ ಹೇಳುತ್ತಿದ್ದಂತೆಯೇ ಪೂರಾ ಹಿಂದಿನ ಸೀಟಿನಾಗಿಂದ ಮುಸಿಮುಸಿ ಅಳು ತೇಲಿಕೊಂಡು ಬಂದಿತ್ತು. ಶಾನುಭೋಗರ ಮಗಳು ಪದ್ಮ ಅಳುತ್ತಿದ್ದವಳು ! ಅವಳ ಕಿವಿಗೆ ಜೋತ್ಯಣ್ಣನ ಮಾತು 'ಪಟೇಲ್ರು ಲವ್ಸ್ ಪದ್ಮ' ಎಂದು ಕೇಳಿ ಬಿಟ್ಟಿತ್ತಾದ್ದರಿಂದ ಅವಳು ಅಳುತ್ತಿದ್ದಳು. ಅವಳ ಗೆಳತಿ ಅಮ್ಮು ಅದಕ್ಕೆ ತಿದ್ದುಪಡಿ ತಂದಿದ್ದಳು. ''ಪಟೇಲ್ರುನ್ನಲ್ಲ ಪಟೇಲ್ರ ಮಗುನ್ನಾ ಕಣ್ ಜೋತ್ಯಣ್ಣ ಪದ್ದಿ ಲವ್ ಮಾಡ್ತಿರಾದು.''

ಇಡೀಽ ಬಸ್ಸು ಬಾಂಬ್ ಬಿದ್ದಂಗೆ ಸ್ಫೋಟಗೊಂಡಿತ್ತು. ಪಟೇಲರು, ಸಾನುಭೋಗರ ನಡುವೆ ಜಟಾಪಟಿ ಹತ್ತಿಕೊಂಡಿತ್ತು. ಇಬ್ಬರನ್ನೂ ಹಿಡಿಯಲು ಮುಳ್ಳಳ್ಳಿಯ ಜನ ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಪಟೇಲರು, ಪುಳಿಚಾರು ಸಾನುಭೋಗನ ಮಗಳನ್ನ ತನ್ನ ಭೀಮಕಾಯದ ಮಗನಿಗೆ ಸತ್ತರೂ ತಂದುಕೊಳ್ಳೆನೆಂತಲೂ, ಸಾನುಭೋಗರು, ಮಾಂಸಮಡ್ಡಿ ತಿನ್ನುವ ಪಟೇಲನಟ್ಟಿಗೆ ತನ್ನ ಮಗಳನ್ನು ಕೊಡೆನೆಂದೂ ಭೀಷ್ಮ ಪ್ರತಿಜ್ಞೆಯ ಮಾಡಿಕೊಂಡಂಥವರಾಗಿ ಕುಳಿತ ಮೇಲೆ ತಮ್ಮ ಮಾನಗಳ ತಾವೇ ಇಷ್ಟು ಸಲೀಸಾಗಿ ಕಳಕೊಂಡ ಅವಿವೇಕವ ಹಳಿದುಕೊಳ್ಳುತ್ತಾ ಅಮ್ಮುವನ್ನು ಶಪಿಸುತ್ತಾ ಮೌನವಾಂತರು. ಪಟೇಲರ ಮನಸ್ಸು ಆದಾಗಲೇ ಮುಳ್ಳಳ್ಳಿಗೆ ಓಡಿ ಮಗನನ್ನು ಹೀನಾಮಾನ ಬೈದು ಛೀಮಾರಿ ಹಾಕತೊಡಗಿತ್ತು.

''ಪ್ರೀತಿ ಅನ್ನೋದರ ವಿರೋಧಿಗಳೇ ಈ ಬಸ್ಸಿನ ತುಂಬಾ ತುಂಬಕಂಡಿರೋ ಕಾರಣವಾಗಿ ನಾಗಣ್ಣೋರೆ, ನಾವು ಆಗ್ರಾ ಬೇಟಿಯನ್ನು ರದ್ದುಗೊಳಿಸಲು ಇಚ್ಛಿಸುವಂಥವರಾಗಿದ್ದೇವೆ.'' ಜೋತ್ಯಣ್ಣ ತಾನೇ ಕಲಕಿದ ನೀರ ತಿಳಿಗೊಳಿಸುವಂತೆ ಅನೌನ್ಸು ಮಾಡಲಾಗಿ ಬಸ್ಸ ಜನ 'ಹೋಽ' ಎಂದರಚಿ ತಮ್ಮ ಅಸಮ್ಮತಿಯ ಸೂಚಿಸುತ್ತಾ ಪದ್ಮಳ ಲವ್ವಿನ ವಿಚಾರವ ಹಿಂದಿಕ್ಕಿದವರಾಗಿದ್ದರು. ತಾಜ್‌ಮಹಲಿನ ಮುಂದೆ ನಿಂತ ಪದ್ಮ ತನ್ನ ತುಂಬಿಕೊಂಡ ಕಣ್ಣುಗಳೆರಡರಲ್ಲಿಯೂ ಅದನ್ನು ಹೊಳೆಸುತ್ತಾ ನಿಂತಿದ್ದನ್ನು ನಾಗಣ್ಣನಿಗೆ ಮರೆಯಲಾಗಿರಲಿಲ್ಲ.

''ಪ್ರೀತಿ ಸಂಕೇತ ಅಂತ ತಾಜ್‌ಮಹಲನ್ನು ನೋಡಾಕೆ ಬತ್ತಾರೆ, ಫಿಲಂನಾಗಿನ ಪ್ರೀತಿ ಪ್ರೇಮಾನಾ ಬುಟ್ಟ್ ಕಣ್ಣು ಬುಟ್ಟಂಗೇ ನೋಡ್ತಾರೆ. ನಿಜ ಜೀವನದಾಗೆ ಪ್ರೀತಿನ್ಯಾಕೆ ಬ್ಯಾಡಾಂತರೆ ಸಾರ್ ?'' ಜೋತ್ಯಣ್ಣನ ಬಳಿ ಕೋಟಿ ರೂಪಾಯಿಯ ಪ್ರಶ್ನೆ ಇಟ್ಟಿದ್ದ ನಾಗಣ್ಣ.

''ಯಾವ ಸೀಮೆ ಪ್ರೀತಿ ಸಂಕೇತ ನಾಗಣ್ಣ. ಆ ಗೈಡ್ ಹೇಳ್ತಾ ಇದ್ದದ್ದನ್ನಾ ಕೇಳಿಸ್‌ಕಂಡ್ರಾ. ಆಪಾಟಿ ಮಕ್ಳು ಮಾಡಿ, ಹೆಡ್ತಿನಾ ಹರೋಹರ ಅನ್ನಿಸ್‌ಬುಟ್ಟು ಈ ತಾಜ್‌ಮಹಲ್ ಕಟ್ಟೋದ್ನಾ ಪ್ರೀತಿ ಅಂತಾರ. ತಾಜ್‌ಮಹಲ್ ಕಟ್ಟಿದೋರ ಕೈಗಳ್ನ ಕಡಿದ್ ಹಾಕುದ್ನಂತಲ್ಲ ಆ ರಾಜ! ಹುಚ್ಚು... ಜನುಕ್ಕೆ ಹುಚ್ಚು.'' ಜೋತ್ಯಣ್ಣ ಇದ್ದಕ್ಕಿದ್ದ ಹಾಗೇ ಭೋ ಗಂಭೀರನಾಗಿಬುಟ್ಟಿದ್ದ.

ಬಸ್ಸ ಹತ್ತೂ ಇಳಿದೂ ಮಾಡುವಾಗ – ಜೋತ್ಯಣ್ಣ ಉದ್ದೇಶಪೂರಕವಾಗಿಯೇ ಬ್ಯಾರೆ ಬ್ಯಾರೆ ಇಟ್ಟಿದ್ದ – ಲಿಂಗಣ್ಣಯ್ಯ ಮತ್ತು ಪುಟ್ಟಣ್ಣ ಅದು ಹೇಗೋ ಅತ್ತಿತ್ತ ಸೀಟುಗಳಲ್ಲಿ ಕುಂತು ಮುಖ ಮುಖ ನೋಡುವ ಸ್ಥಿತಿ ಏರ್ಪಟ್ಟಿ ಬುಟ್ಟಿತ್ತು. ನಾಲೆಯ ನೀರ ಹಂಚಿಕೊಳ್ಳುವಲ್ಲಿನ ಅವುರಿಬ್ಬರ ಹತ್ತಿದ್ದು ಹರಿಯದ ಜಗಳ ಅದು ಹೇಗೋ


With Best Compliments from



**INTACT BOOK HOUSE PVT. LTD.**

240, Ground Floor, 13th Main, BSK 1st Stage, Bangalore - 560 050
Phone : 26611963 Telefax : 26611448
e-mail : idb@satyam.net.in website : www.inbooks.net

ಬಸ್ಸಿನಾಗೂ ಅಂಟಿಕೊಂಡು ಬುಟ್ಟಿತ್ತು. ಲಿಂಗಣ್ಣಯ್ಯ 'ಹಾವಿನ ದ್ವೇಸ ಅನ್ನೆರಡು ವರ್ಸ' ಅನ್ನುವ ಮೂಡಿನಲ್ಲಿದ್ದರೆ ಪುಟ್ಟಣ್ಣಯ್ಯ 'ಹಾವಿಗೆ ಮುಂಗುಸಿ ಉಂಟು' ಅನ್ನುವುದ ನೆನಪಿಸುವಂತೆ ಮುಸಮುಸ ಎನ್ನುತ್ತಿದ್ದ. ''ನಿಮ್ಮನ್ಯಾರಪ್ಪ ಅಣ್ಣಗೋಳ ಅಕ್ಕಪಕ್ಕದಾಗೆ ಇರಿಸಿದೋರು. ಯೆಲ್ಲ ಮರ್ತು ವಂದ್ಹತ್ ದಿನ ಆಯಾಗಿರೀ ಅಣ್ಣಂದಿರಾಂತ ಇಲ್ಲಿಗ್ ಕರ್ಕಂಬಂದ್ರೆ ಮುಳ್ಳಳ್ಳಿ ಮಾತ್ನೇ ಇಲ್ಲೂ ಮುಂದುವರಿಸ್ಕಂಡು ಕುಂತೀರಲ್ಲಾ. ಒಡ್ಡಾ ಇರಾ ಬಸ್ಸು, ಎದುರಾ ಬದುರಾ ಕುಂತೀರಿ. ಖೂನಿ ಗೀನಿ ಮಾಡ್ಕಂಡು ಬುಟ್ಟೀರಿ. ಲಿಂಗಣ್ಣ ನೀ ಮುಂದುಕ್ ಬಾರಪ್ಪಾ, ಪುಟ್ಟಣ್ಣ ನೀ ಇನ್ನೂ ವಸಿ ಹಿಂದುಕ್ಕೋದ್ರೆ ಕ್ಷೇಮ ನೋಡು.'' ಜೋತ್ಯಣ್ಣ ನಿಂತು ಮತ್ತೆ ಪುನರ್‌ವ್ಯವಸ್ಥೆ ಮಾಡಿದ್ದ.



ದೇವರು, ದೇವುಸ್ಥಾನ ಇತ್ಯಾದಿಗಳೆಲ್ಲವಾ ನೆನಸುತ್ತಾ ವಂದೂ ಕಾಣದೆ ಬರಗೆಟ್ಟಂಗೆ ಕುಂತಿದ್ದ ಹೆಂಗಳೆಯರು ಜಯಪುರದಲ್ಲಿ ವಂದಷ್ಟು ಖುಷಿಗೊಂಡಿದ್ದರು. ಗಾಜಿನ ಪೆಟ್ಟಿಗೆಯಾಗೆ ಇಟ್ಟಿದ್ದ ಮುತ್ತು ರತ್ನಗಳ ನೇಯ್ದಿದ್ದ ಭಾರೀ ಗಾತ್ರದ ಸೀರೆಗಳು, ರತ್ನಗಂಬಳಿಗಳು, ಯಾವನೋ ರಾಜ ಪಾರಿನ್ನಿಗೆ ಹೋದಾಗ ಗಂಗಾಜಲನ ಕೊಂಡೊಯ್ದಿದ್ದ ರಾಕ್ಷಸಗಾತ್ರದ ಲಕಲಕ ಹೊಳೆವ ಬೆಳ್ಳಿ ಚೊಂಬಿನಾಕೃತಿಯ ಕಡಾಯಿಗಳು, ಮಣ್ಣಿನ ಬಳೆಗಳು, ಕನ್ನಡಿಯ ಬಟ್ಟೆಗಳು ಇಡೀ ನಗರಕ್ಕೆ ನಗರವೇ ಗುಲಾಬಿಯ ಬಣ್ಣವನಾಂತು ನಿಂತ ರೀತಿ! ಹಾಲುಗಲ್ಲಿನಲ್ಲಿಯೇ ಮಾಡಿದ್ದ ಕೃಷ್ಣನ ದೇವಾಲಯದಾಗೆ ಕುಂತು ತಮ್ಮ ತಮ್ಮ ಮನೆ ದ್ಯಾವುರಗಳ ಧ್ಯಾನಿಸುತ್ತಾ ಎಲ್ಲ ಮರೆತಂಥವರಾಗಿ ಬುಟ್ಟಿದ್ದರು.

''ಗಂಗಿ ಕೃಷ್ಣಯ್ಯನ ಹೆಂಡ್ರುನಾ ಕಂಡ್ಯಾ ?'' ಗೌಡರು ಗಂಗವ್ವನ ಬಳಿ ಬಂದು ಬಹಳ ಸಣ್ಣದನಿಯಾಗೆ ಕೇಳಿದ್ದರು. ಪಟಕ್ಕನೆ ಕಣ್ಣುಬುಟ್ಟ ಗಂಗವ್ವ ಗಂಡನನ್ನು ಮಿಕಮಿಕ ನೋಡಿದ್ದರು. ''ತ್ವಾಟದ್ ಮನೆ ರಂಗಪ್ಪೂ ಕಾಣಿಸ್ತಾ ಇಲ್ಲ'' ಮುಂದಿನ ಕ್ಷಣಗಳಲ್ಲಿ ಎಲ್ಲರೂ ಬಸ್ಸೊಳಗೆ ಬಂದು ಮಹಾಮೌನವನಾಂತು ಕುಂತುಬುಟ್ಟಿದ್ದರು. ತಾರವ್ವ, ರಂಗಪ್ಪನ ನಡುವಿನ ವ್ಯವಾರ ಊರಲ್ಲಿ ಕಂಡೂ ಕಾಣದಂಗೆ ನಡೆಯುತ್ತಿತ್ತು. ಆದರೆ ಅದು ದೇಸ, ಭಾಸೆ, ದಿಕ್ಕು, ದೆಸೆ ಕಾಣದಂಥ ಜಾಗದಾಗೆ ಅವುರಿಬ್ಬರೂ ಒಟ್ಟಿಗೇ ಇಲ್ಲವಾಗಿಬುಡುವ ಹಂತವನ್ನು ಮುಟ್ಟುತ್ತದೆ ಎಂದು ಯಾರೂ ಊಹಿಸಿರಲಿಲ್ಲವಾಗಿ ಯಾರಿಗೂ ಏನು ಮಾತನಾಡಲೂ ತೋಚಿರನಿಲ್ಲ. ಆದರೆ ಹರೆಯದ ಹುಡುಗ, ಹುಡುಗಿಯರು ಮಾತ್ರ ಮಾತೂ ಮೀರಿದ ಅರ್ಥಗಳನ್ನಿಟ್ಟು ಕೊಂಡು ಕಣ್ಣನಾಗೆ ಮುಸಮುಸ ನಕ್ಕುಗಂಡು ಕುಂತಂತೆ ಅನ್ನಿಸುತ್ತಿತ್ತು.

''ಇನ್ನಾವ್ ದೇಸಾನೂ ಬ್ಯಾಡಾ ಕೋಸಾನೂ ಬ್ಯಾಡಾ ಮುಳ್ಳಳ್ಳಿ ಕಡೆ ಬಸ್ಸು ತಿರುಗ್ಸು ಜೋತ್ಯಣ್ಣ'' ಗೌಡ್ರು ಫರ್ಮಾನು ವರಡಿಸಿದ್ದರು. ''ನಮ್ ಮುಳ್ಳಳ್ಳಿಂದ್ ನಾವು ಎಷ್ಟು ದೂರ ಇದ್ದಾಂವು ಗೊತ್ತಿದ್ದಾ ಗೌಡ್ರೆ. ಹಂಗೇ ವಂಟುಬುಟ್ರೆ ಯೆಷ್ಟ ದುಡ್ಡ್ ಯೇಷ್ಟಾಯ್ತದೆ ಎನ್ನಕ್ಥೆ...'' ಜೋತ್ಯಣ್ಣ ಹಣೆಯಲ್ಲಿ ನೆರಿಗೆಗಳ ಮೂಡಿಸುತ್ತಾ ಅಸಹಾಯಕನಾಗಿ ನುಡಿಕೊಟ್ಟಿದ್ದ. ''ನೀವೂ ಸರಿ ಕಣೇಳಿ. ಸ್ಯಾಟ್‌ಕ್ ಅಂಜಕ್ಕಂಡು ಯಾವಳೋ ಸ್ಯಾಲೆ ಬಿಚ್ಚಿ ಎಸೆದಳಂತೆ. ಹಂಗಾಡ್ತ ಇದ್ದರಿ. ಸಾವ್ರಾ ರೂಪಾಯಿ ಸುರ್ದು ಟೂರ್‌ಅನ್ಕಂಡ್ ಬಂದೀವಿ.



ಯಾರೋ ಎಲ್ಲೋ ಹ್ವಾದ್ರು ಅಂತ ಇಷ್ಟ ಜನಗೋಳ ಆಸೆಯಾ ನಿರಾಸೆ ಮಾಡಕಾದಾತ. ದೇಸ ಗೊತ್ತಿಲ್ಲ ಭಾಸೆ ಗೊತ್ತಿಲ್ಲ ಎಲ್ಲಿಗ್ ಹ್ವಾದಾರು. ಈ ಪೂರ್ ಬುಡದ್ರಾಗೆ ಅವುರಿಬ್ರೂ ಬರ್ಲಿಲ್ಲಾಂದ್ರೆ ಕ್ಯೋಳ'' ಗಂಗವ್ವ ಗೌಡರ ವಿರೋಧಿಸಿ ನುಡುದದ್ದೇ ತಡ ಗೌಡ್ರ ಗಿರಿಜಾಮೀಸೆಗಳು ಕುಣಿಯಲಾರಂಭಿಸಿದ್ದುವು. ಹೊಸದಾಗಿ ಆರಂಭಗೊಂಡ ಲಟಾಪಟಿಯ ಸುಧಾರಿಸಲೋಸುಗ ಜೋತ್ಯಣ್ಣ 'ರಂಗಪ್ಪ ಹೆಂಡ್ರು ಅಲ್ಲಾ ಅವ್ಳೆ. ಹೋಗಿ ವಸಿ ಸಾಂತ್ವನ ಹೇಳ್ಹೋಗಿ ಗಂಗಕ್ಕಯ್ಯ' ಹಿಂದಕ್ಕೆ ಸಾಗ ಹಾಕಿದ್ದ. ಕೃಷ್ಣಯ್ಯ ಎದ್ದು ಬಂದು ಗೌಡ್ರ ಬಳಿ ಕುಂತಿದ್ದ.

ಹೆಂಡಿರ ಮ್ಯಾಲಿನ ಕೋಪ ಇನ್ನೂ ಆರದಿದ್ದ ಗೌಡ್ರು ''ನೀ ಯಾಕ್ಲಾ ಕೃಷ್ಣಪ್ಪ ತಲೆ ತಗ್ಗಿಸ್‌ಕ್ಕಂಡು ಕುಂತಗತಿ. ಹೆಂಡ್ರು ಹೋದ್ರೆ ನಿಂದೇನ್ ತಪ್ಪಿದ್ದದು. ಈ ಹೆಂಡ್ತೀರಾ ಎಲ್ ಇರುಸ್ಬೇಕೋ ಅಲ್ಲೇ ಇರುಸ್ಬೇಕು. ತಲೆಮ್ಯಾಲೆ ಇಟ್ಕಂಡ್ರೆ ಇದೇ ಗತಿ ಆಗಾದು ನ್ವಾಡು.'' ಹಿಂದೆ ನೋಡುತ್ತಾ ಜೋರಾಗಿಯೇ ನುಡಿದಿದ್ದರು. ''ಯೆಲ್ಲ ತಪ್ಪೂ ಹೆಂಗುಸ್ರು ಮ್ಯಾಲೇ ಆಕಿ. ಗಂಡ್ಸು ಅನ್ನಿಸ್ಕೊಂಡೋನು ಸರಿಯಾಗಿದ್ರೆ ಹೆಂಗ್ಸು ಯಾಕೆ ಬ್ಯಾರೆ ಕಡೆ ನೋಡ್ತಾಳು. ಶಿವುನೇ ತಲೆಮ್ಯಾಲೆ ಹೆಂಡ್ರ ಇರುಸ್ಕಂಡ ಮ್ಯಾಕೆ ನಿಮ್ಮಂಥ ನರಮನುಸರ್ ಯಾವ ಲೆಕ್ಕ ತಗಳಿ.'' ಗಂಗಕ್ಕನ ಕಡೆಯಿಂದ ರಿವರ್ಸು ಜೋರಾಗಿಯೇ ಬಂದಿತ್ತು. 'ಗೌಡ್ರ ಗದ್ದ ಗಂಗಕ್ಕನ ಬದ್ದಾ' ಎಂಬೊಂದು ಪಿಚ್ಚರ್ರು ರೂಪುಗೊಳ್ಳುವ ಯೆಲ್ಲ ಸೂಚನೆಗಳೂ ಅವುರಿಬ್ಬರಲ್ಲಿ ಕಂಡವಾಗಿ ಜೋತ್ಯಣ್ಣ 'ಹರೋಹರಾ'ಅನ್ನುವ ಸ್ಥಿತಿಗೆ ಬಂದುಬುಟ್ಟಿದ್ದ. ನಾಗಣ್ಣ ಗಕ್ಕನೆ ಹಾಕಿದ ಬ್ರೇಕು ಯೆಲ್ಲರ ಮಾತುಗಳಿಗೂ ಬ್ರೇಕು ಹಾಕಿತ್ತು. ''ಜೋತ್ಯಣ್ಣ...'' ನಾಗಣ್ಣ ಮೆಲ್ಲನೆ ನುಡಿದು ಕಣ್ಣುಸನ್ನೆ ಮಾಡಿದ್ದ ಅನುಸರಿಸಿ ಜೋತ್ಯಣ್ಣ ಕಣ್ಣು ಹಾಯಿಸಿದರೆ ವಂಟಿ ಮ್ಯಾಲೆ ಕುಂತು ಹೋಗುತ್ತಿದ್ದ ಕೃಷ್ಣಪ್ಪನ ಹೆಂಡಿರೂ, ರಂಗಪ್ಪ ಇಬ್ಬರೂ ಕಂಡುಬಂದಿದ್ದರು...

ಅವರಿಬ್ಬರನ್ನೂ ಮತ್ತೆ ಹತ್ತಿಸಿಕೊಂಡು ಹೊರಟ ಬಸ್ಸಿನ ಪಯಣ ನೂರಾರು ಮೈಲಿಗಳ ದಾಟಿಯೂ ಅದೊಂದು ರೀತಿಯ ಬಿಗುವನ್ನು ಮೈಯಲ್ಲಾಂತುಕೊಂಡು ಸಾಗಿತು. ಜೋತ್ಯಣ್ಣ ಎಲ್ಲರಲ್ಲಿಯೂ ಅವುರಿಬ್ಬರನ್ನೂ ಯಾರೂ ಏನೊಂದೂ ಪ್ರಶ್ನಿಸಬಾರದೆಂದು ತಾಕೀತು ಮಾಡಿದ್ದ. ಆದರೆ ಅವುರು ಬಸ್ಸು ಹತ್ತಿಕಂಡ ಕ್ಷಣದಿಂದ ನಾಗಣ್ಣ, ಜೋತ್ಯಣ್ಣರ ಕಣ್ಣಿಗೆ ಬಸ್ಸಿನಾಗೆ ನಾಕಾರು ಗುಂಪುಗಳಾಗಿಬುಟ್ಟದ್ದು ಕಂಡು ಬಂದಿತ್ತು. ಗಂಗಕ್ಕಯ್ಯನ ನೇತೃತ್ವದಾಗಿನ ವಂದು ಗುಂಪು ಕೃಷ್ಣಪ್ಪನ ಹೆಂಡಿರನ್ನು ಮದ್ಯದಾಗೆ ಯಿಟ್ಟುಕ್ಕಂಡು ಅವುಳನ್ನು ಕಾಯುವಂತೆ ಕಂಡರೆ, ಅದುಕ್ಕೆ ಯಿರುದ್ಧದ ಸ್ಥಿತಿ ಗೌಡರ ಬಳಿಯಾಗೆ ಕಂಡಂತಾಗಿತ್ತು. ಪದ್ಮಳ ಸುತ್ತ ಹರೆದ ಹುಡುಗೇರು ಸುತ್ತು ಕೊಂಡ ಹಾಂಗೆ ಇತ್ತು. ''ಅವ್ರ ಯಿಸ್ಯ ಯಾರೂ ಮಾತಾಡಬ್ಯಾಡವಂತೆ. ನಮ್ ಯಿಸ್ಯ ಮಾತ್ರ ಎಲ್ರೂ ಮಾತಾಡಬೋದು ಕಣೆ ಅಮ್ಮು. ಈ ಹಿರೇರದು ಯೆಂಥ ನ್ಯಾಯವೆ ?'' ಅಮ್ಮು ಗೆಳತಿಯಲ್ಲಿ ಅಲವತ್ತು ಕೊಂಡಿದ್ದಳು. ''ಅವುರದೆಲ್ಲಾ ಅಂಥಾ ನ್ಯಾಯವೇ ತಾನೆ. ತಮ್ಗೊಂದು, ನಮ್ಗೊಂದು ಅನ್ನಾ ನ್ಯಾಯ.'' ಅಮ್ಮು ಹೇಳಿದ್ದಳು. ''ಅದ್ಕೆ ನಮ್ ಹಿರಿಯೋರ್‍ನ ಕಂಡ್ರೆ ನಂಗಾಗಲ್ಲ ನೋಡು.'' ಪದ್ಮಳ ಮಾತೇ ಅವುರೆಲ್ಲರ ಮಾತೂ ಸಹ ಆದಂಗೇ ಕಾಣುತ್ತಿತ್ತು.

ಹೆಮ್ಮಕ್ಕಳ ಮಾತುಗೋಳ ಕಿವಿ ಮ್ಯಾಲೆ ಆಕಿಕೊಂಡ ಗಂಡೈಕಳುಗಳಿಗೆ ವೊಮ್ಮೆ ತಮ್ಮದೂ ಅದೇ ನಿಲುವು ಅಂತನ್ನಿಸಿದರೆ ಕೃಷ್ಣಪ್ಪುನಾ ಮೂಗ ತುದಿ ನೋಡುತ್ತಿದ್ದಂಗೆಯೇ ಆ ಹೆಮ್ಮಕ್ಕಳ ವಿರುದ್ಧದಾ ನಿಲುವು ಮನದಾಗೆ ತುಂಬುಗಂಡು ಬುಡುತ್ತಿತ್ತು. ಇಲ್ಲಿರನಾರೆ ಆ ಕಡೆ ಹೋಗನಾರ ಎಂಬಂತೆ ಗಡಿಯಾರದ ಲೋಲಕದಂಗೆ ಅತ್ತಿತ್ತ ವಾಲಾಡುತ್ತಲೇ ಕುಂತವರಾಗಿ ಕಂಡು ಬಂದರು.

ಇದಾವ ಬಾವ, ಇದಾವ ನೋಟ, ಇದಾವ ನಿಲುವು ಯಾರೂ ಅರ್ಥ ಮಾಡಿಕಳ್ಳುವ ಹಾಗಿರಲಿಲ್ಲ ಬಸ್ಸಿನಾಗಿನ ಸ್ಥಿತಿಗತಿ. ನಾಗಣ್ಣನಿಗೆ ಇದ್ದಕ್ಕಿದ್ದಂಗೆಯೇ ಇನ್ನಿಲ್ಲದ ಬೇಜಾರು ಬಂದು ಅಮರಿಕೊಂಡಿತ್ತು. ಅಷ್ಟು ದಿನಗಳ ಬಸ್ಸೊಳಗಿನ ಜೀವಂತಿಕೆಗೂ ಈಗ ಮುದುರಿ ಮುದ್ದೆಯಾಗಿ ಒಂದೊಂದು ಮೂಲೆಯಾಗೂ ಒಂದೊಂದು ಮನಸುಗಳ ಮುದುರಿಕುಂತಾಗಿನ ಸ್ಥಿತಿಗತಿಗೂ ತಾಳೆಯೇ ಇರನಿಲ್ಲ. ಮನಸು ಮನಸುಗಳ ನಡುವೆ ಗ್ವಾಡೆ ಎದ್ದುಬುಡಲು ಅದೆಷ್ಟು ಸಣ್ಣವಿಷ್ಯ ಸಣ್ಣ ಸಮಯಗಳು ಸಾಕು!

''ಈಗ ಎತ್ತಲಾಗಿ ಹೋಯ್ತಾ ಇರಾದು ನಾಗಣ್ಣ'' ಮಾತೇ ಮನಸ್ಸನಾಗಿದ್ದ ಜೋತ್ಯಣ್ಣ ಸುಮನಿರಲಾಗದೆ ನಾಗಣ್ಣನೊಂದಿಗೆ ಮಾತು ಆರಂಭಿಸಿದ್ದ ''ವಾಗಾ ಬಾಡ್ರುಗೆ ಕಣಣ್ಣ'' ನಾಗಣ್ಣ ಹೇಳಿದ್ದ ಕೇಳಿ ಜೋತ್ಯಣ್ಣನ ಕಣ್ಣು ಕಿರಿದಾಗಿ, ಕಿವಿಗಳು ಮುಂದಾಗಿದ್ದವು. ''ಅದೇನಾ ? ವೂರ ಯೆಸರಾ ನಾಗಣ್ಣ?'' ಅವನ ಪ್ರಶ್ನೆಗೆ ನಾಗಣ್ಣ ತಲೆಯಾಡಿಸಿದ್ದ ''ಪಾಕಿಸ್ತಾನ, ಭಾರತುದ್

ನಡುನಾಗಿರಾ ಬಾಡ್ತು ಜೋತ್ಯಣ್ಣ ವಾಗಾ... ವಾಗಾ... ಬಾಡ್ರು.''

ಜೋತ್ಯಣ್ಣನಿಗೀಗ ಅರ್ಥವಾಗಿತ್ತು. ಟಿ. ವಿ. ನಾಗೆ, ಪತ್ರಿಕೆಗಳಾಗೆ ಆಗಾಗ ಓದುತ್ತಿದ್ದ ವಾಗ ಬಾಡ್ರಿನಲ್ಲಿ ಗುಂಡಿನ ಚಕಮಕಿ ತಲೆಬರಹದ ರೀಲುಗಳು ಅವುನ ತಲೆಯಾಗೆ ಬಿಚ್ಚಕೊಳ್ಳತೊಡಗಿತ್ತು.

* * *

ಬಹಳ ದೂರದಾಗಿಯೇ ಬಸ್ಸು ನಿಂತು ಮುಳ್ಳಳ್ಳಿಯ ಜನ ತಮತಮಗೆ ಇದ್ದ ಮುನಿಸುಗಳ ಮೊಕದ ಮ್ಯಾಲೆ ಮರೆಸುತ್ತಲೇ ವಾಗಾ ಬಾಡ್ರಿನತ್ತ ಯೆಜ್ಜೆ ಹಾಕುತ್ತಿದ್ದರು. ಬ್ಯಾರೆ ಬ್ಯಾರೆ ಕಾರುಗಳು, ಬಸ್ಸುಗಳು, ಸ್ಕೂಟರುಗಳಿಂದ ಬಂದ ವಿವಿಧ ಬಣ್ಣದ, ವಿವಿಧ ದಿರಿಸುಗಳ ಯೆಲ್ಲ ಜನವೂ ವಾಗಾ ಬಾಡ್ರಿನತ್ತ ನಡೆಯುತ್ತಿದ್ದವು. ಜೋತ್ಯಣ್ಣನಿಗೆ ಭಾರತದಾಗಿನ ಯೆಲ್ಲ ಜನವೂ ಅಲ್ಲಿಯೇ ವೋಗುತ್ತಿದೆ ಎಂಬ ಅನುಭವ! ನಿರ್ದಿಷ್ಟ ಜಾಗವ ಮುಟ್ಟುತ್ತಿದ್ದಂತೆಯೇ ಅವುನಿಗೆ ಅದೊಂದು ಬಗೆಯ ರೋಮಾಂಚನ, ಗಾಬರಿ, ಉನ್ಮಾದ, ಆತಂಕ, ಆವೇಶ, ಅಭಿಮಾನ, ವಿಷಾದ – ಹೀಗೆ ಯೆನ್ನೆಲ್ಲಾ ಭಾವನೆಗಳು ವಟ್ಟಿಗೇ ಆವುರಿಸಿಕೊಳ್ಳಲಾರಂಭಿಸಿದ್ದುವು. ಯೆಲ್ಡು ದೇಸಗಳು, ಮೊದಲಿಗೆ ವಂದೇ ಆಗಿದ್ದವು! ಇತಿಹಾಸ ಎಂಬೋದು ಅವುಗಳ ಬ್ಯಾರೆ ಮಾಡಿಬುಟ್ಟವು. ಬಾಡ್ರಿನಾಗೆ ಹಾಕಿರುವ ಮುಳ್ಳುಗಳ ಬೇಲಿ ಮೈ, ಮನ, ಮಾತುಗಳೆಲ್ಲವನ್ನೂ ಸುತ್ತುವರಿದುಕೊಂಡು ಕುಂತವೆ. ಅತ್ತಲವರು ಯಿತ್ತ ಬರಬಾರದಂಗೆ ಕಟ್ಟೆಚ್ಚರ, ಯಿತ್ತಲವರು ಅತ್ತ ಬರಬಾರದಂಗ ಕಟ್ಟೆಚ್ಚರ. ಯೆರಡೂ ಕಡೆಯಾಗೂ ಕಣ್ಣಿಗೆ ಯೆಣ್ಣೆ ಬುಟ್ಟುಕೊಂಡು ಕಾಯುತ್ತಿರುವ ಸಿಪಾಯಿಗಳು. ಒಬ್ಬರ ಮ್ಯಾಲೆ ಒಬ್ಬರಿಗೆ ನಂಬ್ಕೆ, ಪ್ರೀತಿ ಯಿಶ್ವಾಸಗಳು ಇಲ್ಲದ್ದಕ್ಕೆ... ಅಪನಂಬ್ಕೆ, ದ್ವೇಸ, ಅಯಿಶ್ವಾಸಗಳು ತುಂಬಿಕಂಡಿರುವುದಕ್ಕೆ ಹೀಗೆಲ್ಲ... ಇಷ್ಟೆಲ್ಲಾ...

ಮೆಟ್ಟಿಲ ಮ್ಯಾಲೆ ಕುಂತಿದ್ದ ಜೋತ್ಯಣ್ಣನಿಗೆ 'ಜೈ ಹಿಂದ್' ಎಂಬ ದೊಡ್ಡ ದನಿ ಕೇಳಿದಾಗ ಯೆಚ್ಚರಾಗಿತ್ತು. ಬಾಡ್ರಿನಾಗೆ ಹಾರಿಸಿದ್ದ ರಾಷ್ಟ್ರಧ್ವಜವಾ ಸಿಪಾಯಿಗಳು ಬಹಳ ಸಿಸ್ತಿನಿಂದ ಇಳುಸಿ ಮೇಲಧಿಕಾರಿಗೊಳಿಗೆ ವಪ್ಪಿಸುತ್ತಿದ್ದರು. ಸುತ್ತುವರಿದಿದ್ದ ಜನಸಾಗರ ಆ ಕ್ಷಣುವೇ ದೇಶಕ್ಕಾಗಿ ಜೀವವ ಬುಟ್ಟುಬುಡುವ ಆವೇಸದಾಗೆ 'ಭಾರತ್ ಮಾತಾ ಕೀ ಜೈ' ಎಂದು ಕೂಗುತ್ತಲೇ ಇತ್ತು. ದೊಡ್ಡ ದೊಡ್ಡ ಗಾಯಕರುಗಳು ಹಾಡಿರುವ ದೇಸಭಕ್ತಿ ಗೀತೆಗಳು ನಿರಂತರವಾಗಿ ಕಿವಿಗೆ ಬೀಳುತ್ತಲೇ ಇತ್ತು. ಯೆಂಥವರ ನರನಾಡಿಯೂ ದೇಶಭಕ್ತಿಯಿಂದ ಹುರಿಗೊಂಡು ವಂದಾಗುವ, ವಂದೇ ಆಗಿ ಇರುವ ಮನಸಾ ಯಿಡಿಸ... ವಾತಾವರಣ ಇಡಿಯಾಗಿ, ನಿರಂತುರವಾಗಿ ಕೊಡುತ್ತಲೇ ಇತ್ತು.

ಇಂಥದ್ದೇ ಆಚರಣೆ ಬಾಡ್ರಿನಾಚೆಗಿನ ಜಾಗದಾಗೂ ಅದೇ ಕಾಲಕ್ಕೆ ನಡೆಯುತ್ತಿತ್ತು. ಅತ್ತಲಿಂದಲೂ, ದೇಸಭಕ್ತಿ ಗೀತೆಗಳು ಅಲೆಅಲೆಯಾಗಿ ತೇಲಿಕ್ಕಂಡು ಇತ್ತ ಹಾಯುತ್ತಿದ್ದವು. ಜೋತ್ಯಣ್ಣನ ಮನಸಾಗೆ ನಗು ಬಂದಿತ್ತು; ಗಾಳಿಗ್ಯಾವ ಬಾಡ್ರೂ ಯಿಲ್ಲವಲ್ಲ! ಕೊಂಬ ಸಡಿಲವಾದ ಜೋತ್ಯಣ್ಣ ನಾಗಣ್ಣನತ್ತ ತಿರುಗಿದ್ದ. ಮುಳ್ಳಳ್ಳಿಯ ಜನಗೋಳ ಬಿಗುತನವನು ಅನುಭೋಸಿ ಸಾಕಾಗಿದ್ದಂತೆ ನಾಗಣ್ಣ ಬಿಮ್ಮಗೇ ಕುಂತಿದ್ದ. ಜೋತ್ಯಣ್ಣ ಯೆಲ್ಲರ ಕಡೆಗೂ ವಂದು ದಿಟ್ಟಿ ಹಾಯಿಸಿದ್ದ. ಅವವೇ ಗುಂಪುಗಳು, ಅವವೇ ಬಿಗುದುಕೊಂಡ ಮೊಕಗಳು – ವುತ್ತರ ದಿಕ್ಕುಗೊಂದು, ದಕ್ಷಿಣ ದಿಕ್ಕುಗೊಂದು! ವಾಗಾಬಾಡ್ರುನಾ ಬಗೆಗೆ ತಂಗೆ ಗೊತ್ತಿದ್ದಷ್ಟು ಜನಗಳ ಮುಂದೆ ಯೇಳಬೇಕು ಎಂದು ಅಂದುಕಳ್ಳುತ್ತಿದ್ದ ಜೋತ್ಯಣ್ಣನ ನಿರ್ಧಾರ ಅಲ್ಲಿಯೇ ಇಂಗಿ ವೋಗಿತ್ತು. ಅಲ್ಲಿಯಗಂಟಾ ಗೈಡ್ ಆಗಿದ್ದ ನಾಗಣ್ಣೋರ ಮೊಕವೂ ಯಾಕೆ ಬಿಮ್ಮಗ್ ಬಿಗುದುಕ್ಕಂಡು, ಮಾತಿಗವರು ಯೆಳ್ಳು, ನೀರು ಬುಟ್ಟುಬುಟ್ಟವರೆ ಎಂಬುದೂ ಅರ್ಥವಾಗಿತ್ತು.

ಮುಳ್ಳಳ್ಳಿಯ ಜನ ಮಬ್ಬುಗತ್ತಲಿನಾಗೆ ನಡಕೊಂಡು ಬಸ್ಸಿನತ್ತಾ ನಡೆದಿದ್ದರು. ಮಬ್ಬುಗತ್ತಲಿನಲ್ಲಿಯೂ ಗುಂಪು, ಗುಂಪುಗಳ ಮಂದಿ ಅಪ್ಪಿತಪ್ಪಿಯೂ ವ್ಯತ್ಯಾಸ ಹೊಂದಿರನಿಲ್ಲ. ಜೋತ್ಯಣ್ಣನಿಗೆ ಯೆಂದಿಗೆ ಈ ಪ್ರವಾಸ ಮುಗದು, ವೂರು ತಲುಪಿ, ಇವುರೆಲ್ಲರ ಅವುರವುರ ಹಟ್ಟಿಗೆ ಸೇರಿಸಿಬುಟ್ಟೇನು ? ಎಂಬೊಂದು ಪ್ರಶ್ನೆ ತೀವ್ರ ಗತಿಯಲ್ಲಿ ವುಟ್ಟಿಕಂಡಿತ್ತು. ಅದೇ ಆತುರ ಆತಂಕಗಳಿಂದ ಅವುನು ನಾಗಣ್ಣನ ಕೇಳಿದ್ದ.

''ನಾಳ ಯಾವ ವೂರ ಕಡೆ ವೋಗಾದು ನಾಗಣ್ಣ ?''

ನಾಗಣ್ಣ ನೀರಸವಾಗಿ ನುಡುದಿದ್ದ;

''ಮಹಾಭಾರತದಾಗೆ ಬತ್ತದ್ದಲ್ಲ ಜೋತ್ಯಣ್ಣ... ಕುರುಕ್ಷೇತ್ರ... ಆ ವೂರ್ಗೆ.''

---


ಎಂ.ಎಸ್. ವೇದಾ

'ಅಲಂಪು', ಮನೆ ಸಂ. ೧೨೫೭, ಪಡುವಣ ರಸ್ತೆ ೪ನೇ ಕ್ರಾಸ್, ೪ನೇ ಹಂತ

ಕುವೆಂಪು ನಗರ, ಟಿ.ಕೆ. ಬಡಾವಣೆ, ಮೈಸೂರು - ೨೩.



ಕಾಮಧೇನು ಪುಸ್ತಕ ಭವನ

ಶಾಸಕರ ಭವನದ ಆವರಣ, ಬೆಂಗಳೂರು - 560 001

ನಮ್ಮ ಹೊಸ ಪ್ರಕಟಣೆ ಇದೀಗ ಸಿದ್ಧವಾಗಿದೆ

ಕುಮಾರವ್ಯಾಸ ಭಾರತ - ತಾತ್ಪರ್ಯ ಸಹಿತ - ಸಚಿತ್ರ

ಈ ಕೃತಿಯ ವಿಶೇಷಗಳು

- ಘನವಿದ್ವಾಂಸರಾದ ಶ್ರೀ ಅ.ರಾ.ಸೇ. ರವರು ಸಂಪಾದಿಸಿ ಪ್ರತಿ ಪದ್ಯಕ್ಕೂ ಸರಳ ಗದ್ಯಾನುವಾದ ನೀಡಿದ್ದಾರೆ.
- ಪ್ರಸಿದ್ಧ ಕಲಾವಿದರಾದ ಶ್ರೀ ಗಂಜೀಫಾ ರಘುಪತಿಭಟ್ಟರು ಬರೆದಿರುವ 300ಕ್ಕೂ ಹೆಚ್ಚು ರೇಖಾಚಿತ್ರಗಳು, 15 ವರ್ಣಚಿತ್ರಗಳು ಕೃತಿಯಾದ್ಯಂತವೂ ಸಾಂದರ್ಭಿಕವಾಗಿ ಮೂಡಿಬಂದಿದೆ.
- 1/4 ಡೆಮಿ ಆಕಾರದಲ್ಲಿ 1300 ಪುಟಗಳಿಗೂ ಮಿಕ್ಕ ಈ ಕೃತಿ ಉತ್ತಮ ಕಾಗದ, ಉತ್ತಮ ಮುದ್ರಣ, ಉತ್ತಮ ವಿನ್ಯಾಸ ಹಾಗೂ ಆಕರ್ಷಕ ರಕ್ಷಾಕವಚದೊಂದಿಗೆ ಸರ್ವಾಂಗ ಸುಂದರವಾಗಿ ಮೂಡಿಬಂದಿದೆ. ಬೆಲೆ. ರೂ. 1800/-
- ಆಸಕ್ತರು ಸಂಪರ್ಕಿಸಬಹುದು. ಜಂಗಮವಾಣಿ : 94494 46328

# ಜೀವನ ಕ್ರಮವಾಗಿ ನಡಿಗೆ ಒಂದು ಪರ್ಯಾಯ

ಎಂ. ಬಿ. ಲಾಲ್

**ಮ**ಹಾತ್ಮ ಗಾಂಧಿಯವರು ಗುಜರಾತಿನ ಸಬರಮತಿಯಿಂದ ದಂಡಿಗೆ ದೀರ್ಘ ಕಾಲ್ನಡಿಗೆ ಕೈಗೊಂಡದ್ದು ೧೯೩೦ರಲ್ಲಿ. ಅವರೊಂದಿಗೆ ಹಲವು ಅನುಯಾಯಿಗಳೂ ಇದ್ದರು. ಇದೊಂದು ಚಾರಿತ್ರಿಕ ಕಾಲ್ನಡಿಗೆ. ಸುಮಾರು ೨೦೦ ಮೈಲುಗಳ ದೂರ (೩೨೦ ಕಿ. ಮೀ). ಗಾಂಧೀಜಿಯಂತೂ ನಡೆಯಲು ತೀರ್ಮಾನಿಸಿದ್ದರು, ಆದರೆ ಅವರ ಅನುಯಾಯಿಗಳು ನಿರ್ವಾಹವಿಲ್ಲದೆ ತಾವೂ ನಡೆಯಬೇಕಾಯಿತು. ಅದೆಷ್ಟು ಕೆಸರಿನ ರಸ್ತೆ! ಎತ್ತಿನ ಗಾಡಿಯಾಗಿದ್ದರೆ ಹೂತುಹೋಗುತ್ತಿತ್ತು. ರಸ್ತೆ ಅಷ್ಟು ಚೆಂದ. ಮೊದಲೇ ಜೌಗು ಪ್ರದೇಶ. ಜೊತೆಗೆ ಎಲ್ಲೋ ಹಳ್ಳಿಗಾಡಿನ ರಸ್ತೆ. ಅದಾದ ಸುಮಾರು ೨೦ ವರ್ಷಗಳ ನಂತರ ಇನ್ನೊಂದು ಕಾಲ್ನಡಿಗೆ ಪ್ರಸಿದ್ಧಿ ಪಡೆಯಿತು. ದೇಶದುದ್ದಗಲಕ್ಕೂ ಭೂದಾನ ಚಳುವಳಿ ನಡೆಸುತ್ತಾ ವಿನೋಬ ಭಾವೆ ನಡೆದಾಡಿದ್ದು ಅದು. ಅವರೊಡನೆಯೂ ಅನುಯಾಯಿಗಳಿದ್ದರು. ನಡಿಗೆಯನ್ನೇ ಏಕೆ ಆಯ್ದುಕೊಂಡಿದ್ದು? ಅಭಿವೃದ್ಧಿಯ ಹೆಸರನ್ನೇ ಕೇಳಿರದ ಹಳ್ಳಿಗಳನ್ನು ಮುಟ್ಟಲು ಬೇರಾವ ವಿಧಾನವೂ ಇರಲಿಲ್ಲ. ಒಂದು ಕಡೆ ಇಕ್ಕಟ್ಟಾದ ಕಮರಿಗಳು, ಇನ್ನೊಂದೆಡೆ ಬೆಟ್ಟಗುಡ್ಡಗಳು. ಕೃಷಿಯೋಗ್ಯವಾಗಿರದ ತುಂಡು ನೆಲ. ಅವುಗಳ ಮಾಲಿಕರನ್ನು ಕೇಳಿಕೊಂಡು ಆ ಭೂಮಿಯನ್ನು ಭೂರಹಿತ ಬಡವರಿಗೆ ಕೊಡಿಸಬಹುದೆಂಬ ಚಿಂತೆ ವಿನೋಬ ಅವರದು. ಗಾಂಧಿ – ವಿನೋಬರಂತಹ ದೊಡ್ಡವರು ನಡಿಗೆಯನ್ನು ಆಯ್ಕೆ ಮಾಡಿಕೊಂಡದ್ದು ಹಲವರಿಗೆ ವಿಶೇಷವೆನಿಸಿರಲಿಲ್ಲ. ಆದರೆ ಒಂದು ವಿಶೇಷವಿದ್ದಿತು. ಮೊದಲನೆಯದಾಗಿ, ಅವರಿಗೆ ಒಂದು ಗಾಢ ಆಕಾಂಕ್ಷೆ ಇತ್ತು; ಎರಡನೆಯದಾಗಿ, ನಡಿಗೆಯು ಅತ್ಯಂತ ಪ್ರಾಚೀನ ಕಾಲದಿಂದ ಬಂದುಬಂದಿರುವ ಒಂದು ಪದ್ಧತಿ. ನಡಿಗೆಯು ಮಾನವನ ಜೀವನಕ್ರಮ. ಆಫ್ರಿಕಾದ ಕಾಡುಗಳಿಂದ ವಿಶ್ವದೆಲ್ಲೆಡೆಗೆ ಸಾಗಿಹೋಗಿ ನೆಲೆಯೂರಲು ಮಾನವ ಅನುಸರಿಸಿದ ಹಾದಿ ನಡಿಗೆಯದು; ಐವತ್ತು ಸಾವಿರ ವರ್ಷಗಳ ಹಿಂದಿನ ಸಂಗತಿ ಅದು. ಅಲೆಕ್ಸಾಂಡರ್-ಚೆಂಗಿಜ್ ಖಾನ್‌ರಂತಹ ಆಕ್ರಮಣಕಾರರ ಸೈನ್ಯಗಳು ಸಹ ನಡೆದವವೇ. ಬೌದ್ಧ, ಕ್ರೈಸ್ತ ಮತ್ತು ಹಿಂದು ಸನ್ಯಾಸಿಗಳ ಕ್ರಮವೂ ಅದೇ. ಆದಿ ಶಂಕರಾಚಾರ್ಯರು ವ್ಯಾಪಕವಾಗಿ ಸಂಚರಿಸಿದ್ದು ನಡಿಗೆಯಲ್ಲಿ. ಅವರಿಗೆ ಅದೆಷ್ಟು ಸುಲಭ! ಆಧುನಿಕ ನಾಗರಿಕ ವಿಮಾನದಲ್ಲಿ ಹಾರುವಷ್ಟೇ ಸಲೀಸಾಗಿ ಇವರೆಲ್ಲಾ ನಡೆದಾಡಿಬಿಟ್ಟಿದ್ದರು.

ಐವತ್ತು ಸಾವಿರ ವರ್ಷಗಳ ಚರಿತ್ರೆಯಿರುವ ನಡಿಗೆಯ ಕ್ರಮವು ಕಳೆದ ಐವತ್ತು ವರ್ಷಗಳಲ್ಲಿ ಅದೃಶ್ಯವಾಗಿಹೋಯಿತು. ಹಾಗೆಯೇ ಬೇರೆ ಇನ್ನೆಷ್ಟೋ ಸಂಗತಿಗಳೂ ಇಲ್ಲವಾಗಿಹೋದವು. ಮಾನವನ ಇತಿಹಾಸ ಮತ್ತು ಸಂಸ್ಕೃತಿ ಒಂದೇ ಏಟಿಗೆ ಬೇರೆ ದಾರಿ ಹಿಡಿದವು. ಹಾಗೆ ನೋಡಿದರೆ, ನಮ್ಮ ಅನೇಕ ಆಧುನಿಕ ನಗರಗಳಲ್ಲಿ ನಡೆದಾಡುವುದು ಎಂಬುದೇ ಕಷ್ಟವಾಗಿದೆ. ಭಾರತದಲ್ಲಿ ಪ್ರತಿದಿನ ಒಂದೂವರೆ ಕೋಟಿ ಜನ ರೈಲುಗಳಲ್ಲಿ ಸಂಚರಿಸುತ್ತಾರೆ. ಅವರಲ್ಲಿ ಅರ್ಧದಷ್ಟು ಮಂದಿ ಮುಂಬೈನ ಉಪನಗರಗಳಲ್ಲಿ ಸ್ಥಳೀಯ ರೈಲುಗಳಲ್ಲಿ ಸಂಚರಿಸುವವರು. ಬೇರೆ ನಗರಗಳಲ್ಲಿ ಅಷ್ಟೊಂದು ರೈಲ್ವೆ ಸೌಲಭ್ಯಗಳಿಲ್ಲ. ಆದ್ದರಿಂದ ಅಲ್ಲಿ ಜನಜಂಗುಳಿಯು ಸಂಚಾರಕ್ಕೆ ಬಸ್ಸುಗಳನ್ನು ಬಳಸಬೇಕಾಗಿದೆ. ಎಷ್ಟು ರಸ್ತೆಗಳಾದರೂ ಸಾಲದು, ಎಷ್ಟು ಬಸ್ಸುಗಳಾದರೂ ಸಾಲದು. ಈ ಒತ್ತಡವನ್ನು ಎದುರಿಸಲು ಬಗೆಬಗೆಯ ಸಂಚಾರಿ ವಾಹನಗಳು ರಸ್ತೆಗಳಲ್ಲಿ ಹರಿದಾಡುವಾಗ ಅಗಲವಾದ ರಸ್ತೆಗಳು ಇಕ್ಕಟ್ಟಾಗಿರುವಂತೆ ತೋರುತ್ತವೆ. ಅಲ್ಲೆಲ್ಲಾ ಯಾರಾದರೂ ನಡೆದಾಡಲು ಹೋದರೆ ಯಾವುದೋ ಬಂಡಿಯ ಕೆಳಗೆ ಸಿಕ್ಕು ಅಪ್ಪಚ್ಚಿಯಾಗಬೇಕು. ಅವರ ಜೀವಕ್ಕೆ ಅವರು ಮಾತ್ರವೇ ಹೊಣೆಗಾರರು!

''ದ ಇಕಾನಮಿಸ್ಟ್'' ಎಂಬ ಬ್ರಿಟನ್ನಿನ ಖ್ಯಾತ ವಾರಪತ್ರಿಕೆಯು ಇತ್ತೀಚಿನ ಒಂದು ಸಂಚಿಕೆಯಲ್ಲಿ ತಿಳಿಸಿರುವಂತೆ ಅಮೆರಿಕಾದ ಲಾಸೆಂಜಲಿಸ್ ನಗರದ ರಸ್ತೆಗಳಲ್ಲಿ ನಡೆದಾಡುವುದು ನಿಷಿದ್ಧ. ಅದು ಕಾನೂನುಬಾಹಿರವಂತೆ. ಅಷ್ಟೊಂದು ಕಾರುಗಳ ಸಂಚಾರವಿರುವಾಗ ಎರಡು ಕಾಲಿನವರಿಗೆ ಇನ್ನೆಲ್ಲಿಯ ಜಾಗ! ಜೆಫ್ ನಿಕಾಲ್ಸನ್‌ನ ಒಂದು ಪುಸ್ತಕ ''ಮರೆತುಹೋದ ನಡಿಗೆಯ ಕಲೆ'' ಎಂಬುದು. ಅದನ್ನು ಪರಿಚಯಿಸುತ್ತಾ ಈ ಪತ್ರಿಕೆ ಹೇಳುತ್ತದೆ : ''ನಿಕಾಲ್ಸನ್ ವಾಸಿಸುವುದು ಲಾಸೆಂಜಲಿಸ್‌ನಲ್ಲಿ. ಆ ಊರಿನಲ್ಲಿ ನಡೆದಾಡುವುದು ಹುಚ್ಚುತನ; ಅಲ್ಲದೆ ನಿಮ್ಮನ್ನು ದಸ್ತಗಿರಿ ಮಾಡಬಹುದು.'' ಅವನು ವಿವರಿಸುವಂತೆ ಇದೊಂದು ಮೋಜಿನ ಪ್ರಸಂಗ. ಆ ಊರಿನಲ್ಲಿ ಕಾರುಗಳು ರಸ್ತೆಗಳನ್ನು ಉಸಿರುಕಟ್ಟಿಸುವುದರ ಬಗ್ಗೆ ತಿಳಿಯದ ಓದುಗರು ನ್ಯೂಯಾರ್ಕ್ ಮತ್ತು ಲಂಡನ್ ಬಗೆಗಿನ ಅಧ್ಯಾಯಗಳನ್ನು ಓದಿಕೊಳ್ಳಬಹುದು. ಪೆಡಂಭೂತದಂತಿರುವ ಲಂಡನ್ನಿನ ಆಕ್ಸ್‌ಫರ್ಡ್ ರಸ್ತೆಯಲ್ಲಿ ಲೇಖಕ ಒಂದು ದಿನದಲ್ಲಿ ತುದಿಯಿಂದ ತುದಿಗೆ ಆರು ಬಾರಿ ಓಡಾಡಿದ್ದಾನೆ. ಅದು ಬಹಳ ಹರ್ಷದಾಯಕ ಅನುಭವವೆಂಬಂತೆ ಬರೆದಿದ್ದಾನೆ.



೨೦೦೮ರ ಡಿಸೆಂಬರ್ ೮ರ ಅಮೆರಿಕಾದ ''ಟೈಂ'' ವಾರಪತ್ರಿಕೆ ಸಹ ಇದೇ ವಿಷಯವನ್ನು ಕುರಿತ ಸಚಿತ್ರ ಲೇಖನ ಪ್ರಕಟಿಸಿದೆ. ನಡಿಗೆಗೆ ಹೊಸ ಆಯಾಮ ನೀಡಿರುವ ಈ ಲೇಖನದಲ್ಲಿ, ಮನೆಯಲ್ಲಿ ಅಥವಾ ಕೆಲಸದ ಜಾಗದಲ್ಲಿ ಟ್ರೆಡ್‌ಮಿಲ್ ಮೇಲೆ ನಡೆಯುವುದರ ಲಾಭದ ಪ್ರಸ್ತಾಪವಿದೆ. ದಿನಗಳು ಹೀಗೆ ಬೆಳೆದರೆ ''ನಾಗರಿಕ'' ವಿಶ್ವದಲ್ಲಿ ಎಲ್ಲೂ ನಡೆದಾಡಕೂಡದೆಂಬ ನಿಯಮವು ಜಾರಿಗೆ ಬರಬಹುದು. ಅದೇನಿದ್ದರೂ ಇತಿಹಾಸಪೂರ್ವದ ಬುಡಕಟ್ಟು ಜನರಿಗೆ ಮೀಸಲು!!

ನಡಿಗೆಯನ್ನು ರದ್ದುಗೊಳಿಸಲು ಬೈಸಿಕಲ್ ಒಂದು ಸಾಧನ. ಅದೂ ಒಂದು ರೀತಿಯ ನಡಿಗೆಯೇ; ಏಕೆಂದರೆ ಅದರಲ್ಲೂ ಕಾಲಿನ ಶಕ್ತಿಯನ್ನು ಬಳಸಲಾಗುತ್ತದೆ. ಇವೆರಡನ್ನುಳಿದು ಬೇರೆ ಸಾಧನಗಳನ್ನು ಅವಲಂಬಿಸಿದಾಗ ನಮಗೆ ಯೋಚನೆ ಬರುವುದು ವಿರಳ. ಸ್ವಲ್ಪ ಸಾವಧಾನವಾಗಿ ಯೋಚಿಸಿದರೆ ಒಂದು ಪ್ರಶ್ನೆ ಏಳುತ್ತದೆ: ಸಂಚಾರ ಸಾಧನಗಳಲ್ಲಿ ಉಂಟಾಗಿರುವ ಈ ಬದಲಾವಣೆಯು ಆಧುನಿಕ ಮಾನವನನ್ನು ಮೊದಲಿಗಿಂತಲೂ ಹೆಚ್ಚಿನ ಸಂತೃಪ್ತಿಗೆ ಕೊಂಡುಹೋಗಿದೆಯೆ? 'ಮೊದಲಿಗಿಂತಲೂ' ಅಂದರೆ ಐವತ್ತು ವರ್ಷಗಳ ಹಿಂದಿನ ಕಾಲದಿಂದ, ಎಂದಷ್ಟೇ ಅರ್ಥ.

ಹೀಗೆ ಉಂಟಾಗಿರುವ ಬದಲಾವಣೆಗೆ ಪ್ರಮುಖವಾಗಿ ಎರಡು ಪ್ರೇರಣೆಗಳಿವೆ : ಮಾನವನ ಚಾಕರಿಯನ್ನು ಕಡಿಮೆ ಮಾಡುವುದು ಮತ್ತು ಹೆಚ್ಚಿನ ವಿರಾಮವನ್ನು ದೊರಕಿಸಿಕೊಡುವುದು. ಇವೆರಡಕ್ಕೆ ಸಂಬಂಧಿಸಿದಂತೆ ಸ್ವಲ್ಪಮಟ್ಟಿಗಾದರೂ ನಾವು ಯಶಸ್ಸು ಪಡೆದಿದ್ದೇವೆಯೆ ಎಂಬ ಪ್ರಶ್ನೆ ಹಾಕಿಕೊಳ್ಳಲು ಸಮಯ ಸನ್ನಿಹಿತವಾಗಿದೆ. ಅಥವಾ, ಎರಡೂ ಆಶಯಗಳಲ್ಲಿ ಹಿಂದಿನವರಿಗಿಂತಲೂ ನಾವು ಹಿಂದೆ ಹೋಗಿದ್ದೇವೆಯೆ? ಖಾಯಿಲೆಯನ್ನು ಹೋಗಲಾಡಿಸಲು ಮದ್ದು ಕೊಟ್ಟಿದ್ದು ಖಾಯಿಲೆಯನ್ನು ಉಲ್ಬಣಗೊಳಿಸಿದೆಯೆ?

ನಮ್ಮ ಆಧುನಿಕ ಮಾನವನ ಖಾಯಿಲೆಯು ಒಂದು ತೆರನಾದ ಪಾರ್ಕಿನ್‌ಸನ್ ನಿಯಮದಡಿ ಸಿಲುಕಿಕೊಂಡಿದೆಯೇನೋ ಎನಿಸುತ್ತದೆ. ಅದಾರೋ ಮ್ಯಾನೇಜ್‌ಮೆಂಟ್ ಗುರು ಒಂದು ನಿಯಮವನ್ನು ಪ್ರಸಿದ್ಧಗೊಳಿಸಿದ್ದಾನಂತೆ. ಅದರ ಪ್ರಕಾರ ''ಸಮಯ ಹೆಚ್ಚು ದೊರಕಿದಷ್ಟೂ ಕೆಲಸದಲ್ಲಿ ಹೆಚ್ಚಳ ಉಂಟಾಗುತ್ತಿರುತ್ತದೆ.'' ಅಲ್ಪ ಸ್ವಲ್ಪ ಬದಲಾವಣೆ ಮಾಡಿದರೆ ಈ ಸೂತ್ರವು ನಮ್ಮ ಸನ್ನಿವೇಶಕ್ಕೆ ಅನ್ವಯವಾಗುತ್ತದೆ. ಅದನ್ನು ಹೀಗೆ ಪ್ರತಿಪಾದಿಸಬಹುದು: ''ಯಾವ ಸಂಚಾರ ಸಾಧನವು ಲಭ್ಯವಾಗುತ್ತದೆಯೋ ಅದಕ್ಕನುಗುಣವಾಗಿ ಮಾನವನ ಪ್ರಯಾಣದ ಸರಾಸರಿ ದೂರ ಹಿಗ್ಗುತ್ತಿರುತ್ತದೆ.'' (ಈ 'ದೂರ'ದಲ್ಲಿ ಎಲ್ಲ ಅಗತ್ಯಗಳ ಪೂರೈಕೆಗಾಗಿ ವಿನಿಯೋಗಿಸುವ ಸಂಚಾರಗಳೆಲ್ಲ ಅಡಕವಾಗಿವೆ). ಒಂದು ಉದಾಹರಣೆ ನೋಡಿ: ಪುಣೆಯಿಂದ ಮುಂಬೈಗೆ ತಮ್ಮತಮ್ಮ ಉದ್ಯೋಗಗಳಿಗಾಗಿ ಹೋಗಿಬರುವವರ ಸಂಖ್ಯೆಯನ್ನು ಹತ್ತಾರು ತುಂಬಿದ ರೈಲುಗಳಿಂದ ಅಳೆಯಬೇಕು. ಅಂತೆಯೇ, ಮುಂಬೈಯಿಂದ ಪುಣೆಗೆ ಬಂದು ಹೋಗುವವರೂ ಇದ್ದಾರೆ. ಪ್ರತಿಯೊಬ್ಬರೂ ಪ್ರತಿದಿನ ರೈಲಿನಲ್ಲಿ ಕನಿಷ್ಠ ಎಂಟು ಗಂಟೆ ಕಳೆಯುತ್ತಾರೆ ಎಂದಾಯಿತು. ಮುಂಬೈಯಲ್ಲೇ ವಾಸಿಸುವವರು ದಿನಕ್ಕೆ ಎರಡರಿಂದ ನಾಲ್ಕು ಗಂಟೆಗಳಷ್ಟು ಕಾಲವನ್ನು ರೈಲಿನಲ್ಲಿ ಕಳೆಯುತ್ತಾರೆ. ಇವರೆಲ್ಲಾ ರಜೆಗಾ... ಸ್ವ–ಸ್ಥಳಕ್ಕೆ ಇಲ್ಲವೇ ವಿಶ್ರಾಮ ಧಾಮಗಳಿಗೆ ಹೋಗಿಬರಲು ನೂರಾರು ಮೈಲಿಗಳನ್ನು ಕ್ರಮಿಸುತ್ತಾರೆ. ಇಂದಿನ ''ಪ್ರತಿಷ್ಠಿತ'' ನಾಗರಿಕನು ಬೆಲೆಬಾಳುವ ಸರಕುಗಳನ್ನು ಕೊಳ್ಳಲು ತನ್ನ ನಗರದಿಂದ ಸಿಂಗಪುರಕ್ಕೋ ದುಬೈಗೋ ತೆರಳುತ್ತಾನೆ. ಇವರಿಗಿಂತಲೂ ಮೇಲಿನ ಸ್ಥಾನದಲ್ಲಿರುವ ಶ್ರೀಮಂತರಿಗಾದರೋ ಈ ಊರುಗಳೂ ತುಚ್ಛವಾಗಿ ಕಾಣುತ್ತವೆ. ಅವರೇನಿದ್ದರೂ ನೇರವಾಗಿ ಪ್ಯಾರಿಸ್, ಲಂಡನ್ ಮತ್ತು ನ್ಯೂಯಾರ್ಕಿಗೇ ಹಾ... ಹೋಗಬೇಕು. ಅತ್ಯಾಧುನಿಕ ವೈಯಾರಗಳಿಗೆ ಬೇಕಾದ ಸಾಮಗ್ರಿಗಳು ದೊರೆಯುವುದು ಅಲ್ಲಿ, ಅಲ್ಲವೆ? ''ಡಿಸೈನ್'' ಮಾಡಲ್ಪಟ್ಟ ಉಡುಪು (ಅದರಲ್ಲಿ ಬಟ್ಟೆ ಕಡಿಮೆ, ವಿನ್ಯಾಸ ಜಾಸ್ತಿ) ಮತ್ತು ಭೋಗವಸ್ತು ಸಿಗುವುದೇ ಅಲ್ಲಿ!

ಒಂದಷ್ಟು ಹಣ ಜೇಬಿನಲ್ಲಿ ತುಂಬಿದ್ದರೆ ನವ ದಂಪತಿಗಳು ತಮ್ಮ ಸುಖಾನ್ವೇಷಣೆಗಾ... ದೂರದ ಜಾಗಗಳಿಗೆ ಹೋಗಬೇಕು. ನೈನಿಟಾಲ್, ಶಿಮ್ಲಾ, ಮಸ್ಸೂರಿ, ಊಟಿ, ಇವೆಲ್ಲಾ ಹಳಸು ಜಾಗಗಳು. ಹವಾಯ್, ಐಸ್‌ಲೆಂಡ್, ಅರ್ಜೆಂಟೈನಾ, ಇವೆಲ್ಲಾ ಅವರಿ... ಮೋಹಕ ಪ್ರದೇಶಗಳು. ಬರುವ ದಿನಗಳಲ್ಲಿ 'ಮಧುಚಂದ್ರ'ಕ್ಕಾಗಿ ಚಂದ್ರನಲ್ಲಿಗೋ ಮಂಗಳನಲ್ಲಿಗೋ ಹೋಗುವ ವೈಭವ ಕಾದಿರಬಹುದು. ಮಧುಚಂದ್ರಕ್ಕಲ್ಲದಿದ್ದ... ಸಾಹಸ ಕ್ರೀಡೆಗಳಿಗಾಗಿ ಅತಿದೂರದ ಜಾಗಗಳಿಗೆ ಹಾರಬಹುದು.

ವಾತ್ಸ್ಯಾಯನ
ಕಾಮಸೂತ್ರ

ವಾತ್ಸ್ಯಾಯನ ಮಹರ್ಷಿಯಿಂದ ರಚಿತವಾಗಿರುವ
ಕಾಮಸೂತ್ರ
ಹಿಂದೂ ಪ್ರೇಮಕಲೆಯ ಜಗತ್‌ಪ್ರಸಿದ್ಧ ಪ್ರಾಚೀನ ಗ್ರಂಥ.
ವಾತ್ಸ್ಯಾಯನ ಸುಖದ ಅನೇಕ ಮಗ್ಗುಲುಗಳನ್ನು
ಮಜಲುಗಳನ್ನು, ಮುಖ್ಯವಾಗಿ ಆರೋಗ್ಯಕರವಾಗಿ
ಸುಖವನ್ನು ಹೇಗೆ ಅನುಭವಿಸಬಹುದು
ಎಂಬುದನ್ನು ಬೋಧಿಸುತ್ತಾನೆ.
ಇದೊಂದು ಅನುಭವಪೂರ್ಣ ಶಾಸ್ತ್ರೀಯ ಗ್ರಂಥ
ಭಾಗ್ಯಲಕ್ಷ್ಮೀ ಪ್ರಕಾಶನ
87, 3ನೇ ಕ್ರಾಸ್, 4ನೇ ಬ್ಲಾಕ್, ಬನಶಂಕರಿ 3ನೇ ಹಂತ,
3ನೇ ಫೇಸ್, ಬೆಂಗಳೂರು - 560 085
ದೂರವಾಣಿ : 26695715 ಮೊಬೈಲ್ : 94480 47735

ನಡಿಗೆಯನ್ನು ರದ್ದುಗೊಳಿಸಲು ಬೈಸಿಕಲ್ ಒಂದು ಸಾಧನ. ಅದೂ ಒಂದು ರೀತಿಯ ನಡಿಗೆಯೇ ; ಏಕೆಂದರೆ ಅದರಲ್ಲೂ ಕಾಲಿನ ಶಕ್ತಿಯನ್ನು ಬಳಸಲಾಗುತ್ತದೆ. ಇವೆರಡನ್ನುಳಿದು ಬೇರೆ ಸಾಧನಗಳನ್ನು ಅವಲಂಬಿಸಿದಾಗ ನಮಗೆ ಯೋಚನೆ ಬರುವುದು ವಿರಳ. ಸ್ವಲ್ಪ ಸಾವಧಾನವಾಗಿ ಯೋಚಿಸಿದರೆ ಒಂದು ಪ್ರಶ್ನೆ ಏಳುತ್ತದೆ: ಸಂಚಾರ ಸಾಧನಗಳಲ್ಲಿ ಉಂಟಾಗಿರುವ ಈ ಬದಲಾವಣೆಯು ಆಧುನಿಕ ಮಾನವನನ್ನು ಮೊದಲಿಗಿಂತಲೂ ಹೆಚ್ಚಿನ ಸಂತೃಪ್ತಿಗೆ ಕೊಂಡುಹೋಗಿದೆಯೆ ? 'ಮೊದಲಿಗಿಂತಲೂ' ಅಂದರೆ ಐವತ್ತು ವರ್ಷಗಳ ಹಿಂದಿನ ಕಾಲದಿಂದ, ಎಂದಷ್ಟೇ ಅರ್ಥ.

ಜೀವನದ ಇನ್ನುಳಿದ ವಿಭಾಗಗಳಲ್ಲಿ ಕೂಡ ಇಂಥವೇ ಸನ್ನಿವೇಶಗಳು. ನಮ್ಮ ಹಿಂದಿನ ತಲೆಮಾರುಗಳವರು ಕೇಳರಿಯದಿದ್ದ ಎಷ್ಟೋ ಪದಾರ್ಥಗಳಿಗೆ ಈಗ ಎಲ್ಲಿಲ್ಲದ ಬೇಡಿಕೆ. ಇದನ್ನು 'ಬೇಡಿಕೆಗಳ ಸ್ಫೋಟ' ಎನ್ನುತ್ತಾರೆ. ಇಂದಿದ್ದುದು ನಾಳೆ ಇಲ್ಲ, ಅದಕ್ಕಿಂತಲೂ ಹೊಚ್ಚಹೊಸತನದ ಇನ್ನೊಂದು ಸರಕು ಸಿದ್ಧವಾಗಿರುತ್ತದೆ, ಕಣ್ಣು ಕೋರೈಸುತ್ತದೆ. ಮಾರುಕಟ್ಟೆಯಲ್ಲಿ ಝಗಝಗಿಸುವ ಆ ಸರಕುಗಳನ್ನು ನೋಡಿ ನೋಡಿ ಅವೆಲ್ಲಾ ಅತ್ಯವಶ್ಯಕವಾದ ಸಾಮಗ್ರಿಗಳೆಂಬ ಭಾವನೆ ತುಂಬಿಕೊಳ್ಳುತ್ತದೆ. ''ನಿನ್ನೆ ಅದು ನನ್ನಲ್ಲಿರಲಿಲ್ಲ, ಆದರೂ ಸುಖವಾಗಿಯೇ ಇದ್ದೆ'' ಎಂಬ ತಿಳುವಳಿಕೆ ಬರುವುದಿಲ್ಲ. ಮೊಬೈಲ್ ಫೋನ್, ಟಿವಿ, ಮೋಟಾರ್‌ಬೈಕ್, ಕಾರು ಮತ್ತು ಅಂತಹ ನೂರಾರು ವಸ್ತುಗಳು ಬೇಕು. ಅವಿಲ್ಲದೆ ಜೀವನ ದುಸ್ಸಾಧ್ಯವೆಂಬ ನಂಬಿಕೆ. ಅವನ್ನೂ ಬಿಸಾಡಿ ಇನ್ನೂ ನೂತನವಾದುವನ್ನು ಕೊಳ್ಳುತ್ತಿರಬೇಕು, ಮನೆ ತುಂಬಿ ಕೊಳ್ಳುತ್ತಿರಬೇಕು. ಶಿಕ್ಷಣದ ಸಂದರ್ಭ ನೋಡಿ, ಹೇಗಿದೆ! ಅದು ವ್ಯಾಪಾರಕ್ಕಿಟ್ಟಿರುವ ಸರಕು. ಅದನ್ನು ಕೊಳ್ಳಲಾಗದಿದ್ದವರು ಶಿಕ್ಷಣದಿಂದ ಹೊರಗುಳಿದರೆ ಏನೂ ಬಾಧಕವಿಲ್ಲವೆಂಬ ಅಸಡ್ಡೆ, ಅಹಂಕಾರ, ಮೂರ್ಖತನ.

ಇಲ್ಲೇ ವ್ಯಂಗ್ಯವಿರುವುದು: ಆಧುನಿಕತೆಯು ನಮ್ಮ ನಡುವೆ ರೋಮಾಂಚನಕಾರಿ ಸ್ವರೂಪ ಧರಿಸಿ ಉಜ್ವಲವಾಗಿ ನಿಂತಿದೆ; ಆದರೆ 'ನಾಗರಿಕ ಸಮಾಜ' ಎಂದು ಯಾವುದನ್ನು ಕರೆಯುತ್ತಾರೋ ಅದನ್ನು ನಮ್ಮದಾಗಿಸಿಕೊಳ್ಳಲು ಇನ್ನೂ ಬಹುದೂರ ಕ್ರಮಿಸಬೇಕಾಗಿದೆ ! ವಿಶ್ವದ ಶೇಕಡ ೧೬ ರಷ್ಟು ಜನಸಂಖ್ಯೆ ನಮ್ಮ ದೇಶದ್ದು; ಆದರೆ ಭೋಗವಸ್ತುಗಳ ಖರೀದಿಯಲ್ಲಿ ನಮ್ಮ ಪಾಲು ಕೇವಲ ಶೇಕಡ ೫ ರಷ್ಟು ಮಾತ್ರವೆಂಬ ಕೊರಗು ಕೆಲವರಿಗೆ ಬಾಧೆಯುಂಟುಮಾಡುತ್ತಿದೆ.

ವಿಶ್ವದಲ್ಲಿ ಇಷ್ಟೊಂದು ಸಮೃದ್ಧಿ ತಾಂಡವವಾಡಲು ಸಾಧ್ಯವಾದದ್ದು ಹೇಗೆ ? ಸಮೃದ್ಧಿಯು ವಿಶ್ವದ ಹಲವೆಡೆ ಪಸರಿಸಿರುವುದಂತೂ ನಿಜ. ಬಹಳ ಮುಖ್ಯವಾಗಿ ಇದೆಲ್ಲಾ ಕಾರ್ಯಸಾಧ್ಯವಾಗಿರುವುದು ಭೂಮಿತಾಯಿಯ ಮಡಿಲಲ್ಲಿ ಶೇಖರವಾಗಿರುವ ಶಕ್ತಿಮೂಲಗಳನ್ನು ರೂಢಿಸಿಕೊಂಡಿರುವುದರಿಂದ. ಈ ಶಕ್ತಿಮೂಲಗಳು ಲಕ್ಷಗಟ್ಟಲೆ ವರ್ಷಗಳಿಂದ ಭೂಮಿಯಡಿಯಲ್ಲಿ ಸ್ವಸ್ಥವಾಗಿದ್ದವು, ಅವನ್ನೆಲ್ಲಾ ಈಗ ಹೊರ ತೆಗೆಯಲಾಗುತ್ತಿದೆ. ಜೊತೆಗೆ, ಎಣೆಯಿಲ್ಲದ ವೈಜ್ಞಾನಿಕ ಮತ್ತು ತಂತ್ರಜ್ಞಾನಾಧಾರಿತ ಆವಿಷ್ಕಾರಗಳು. ಅವಿಲ್ಲದೆ ಭೂಮಿಯಡಿ ಇರುವ ಶಕ್ತಿಸಂಪತ್ತನ್ನು ರೂಢಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಈ ಇಡೀ ಅನುಭವವು ಮೈನವಿರೇಳಿಸುವಂಥದು. ಅದೇ ವೇಳೆ, ಅದು ಘಾಸಿಯುಂಟುಮಾಡುವಂಥದು ಕೂಡ ಆಗಿದೆ. ವಿದ್ಯುಚ್ಛಕ್ತಿಯನ್ನು ಬಳಸಿ ತಿರುಗಿಸಲಾಗುವ ದೈತ್ಯ ಚಕ್ರಗಳಲ್ಲಿ ಮಕ್ಕಳು ಹಾಗೂ ಮುದುಕರು ಬಹಳ ಎತ್ತರಕ್ಕೆ ಹೋಗಿ ತಲೆ ತಿರುಗುವುದನ್ನು ಅನುಭವಿಸುವುದಿಲ್ಲವೇ, ಹಾಗೆ. ತಲೆ ತಿರುಗುವಂತಾದರೂ ಅದು ಮತ್ತೆ ಮತ್ತೆ ಬೇಕೆಂಬ ಲಾಲಸೆ.

ನಮ್ಮ ಮುಂದಿನ ದೊಡ್ಡ ಪ್ರಶ್ನೆ ಇದೇ : ಜೀವನದೊಡನೆ ಹೀಗೆ ಸರಸ ವಾಡುತ್ತಿದ್ದೇವಲ್ಲಾ, ಇದೆಲ್ಲಾ ನಮ್ಮನ್ನೆಲ್ಲಿಗೆ ಒಯ್ಯುತ್ತದೆ ? ಮೊಟ್ಟಮೊದಲ ಪ್ರತಿಭಟನೆ ಪ್ರಕೃತಿಯಿಂದ ಬಂದಿದೆ. ೨೦ನೆಯ ಶತಮಾನದ ಉತ್ತರಾರ್ಧದಲ್ಲಿ ನಮ್ಮ ಗ್ರಹದ ಮೇಲೆ ಮಾನವ ಉಂಟುಮಾಡಿರುವ ನಾಶ ಎಷ್ಟು ಅಗಾಧವಾಗಿದೆಯೆಂದರೆ ಡಿನಸೋರ್‌ಗಳೇನಾದರೂ ಅಳಿಯದೆ ಉಳಿದಿದ್ದರೆ ಅವುಗಳಿಗೆ ಅಷ್ಟು ವಿನಾಶ ಮಾಡಲು ಸಾವಿರಾರು ವರ್ಷಗಳೇ ಹಿಡಿಯುತ್ತಿದ್ದುವು. ಡಿನಸೋರ್‌ಗಳು ಸ್ವತಃ ವಿನಾಶವಾದದ್ದು ಹೇಗೆ ? ಭೂಮಿತಾಯಿಯು ಉಣಿಸಲಾರದಷ್ಟು ಹಸಿವೆ ಅವಕ್ಕೆ ; ಆದರಿಂದ ಭೂಮಿಯು ಹಾಳಾಯಿತು, ಡಿನಸೋರ್‌ಗಳೂ ಹಾಳಾದವು. ಆದರೆ ಭೂಮಿ ಉಳಿದು ಮತ್ತೆ ವಸುಂಧರೆಯಾದಳು; ಅಂತಹ ಭಾಗ್ಯ ಡಿನಸೋರ್‌ಗಳಿಗೆ ಇರಲಿಲ್ಲ. ಇಂದಿನ ಅಮೆರಿಕಾ ಅಥವಾ ಜಪಾನಿನ ಒಬ್ಬ ಸಾಮಾನ್ಯ ಮನುಷ್ಯನ ಸರಾಸರಿ ಹಸಿವು ಯಾವ ಮಟ್ಟದ್ದೆಂದರೆ ಪ್ರಕೃತಿಯ ಸಂಪನ್ಮೂಲಗಳು ಬಹುಬೇಗನೆ ಖಾಲಿಯಾಗುತ್ತಿವೆ. ಡಿನಸೋರ್ ಅಪೇಕ್ಷಿಸುತ್ತಿದ್ದುದಕ್ಕಿಂತ ಹತ್ತು ಪಟ್ಟು ಜಾಸ್ತಿ ಅವರು ಧ್ವಂಸ ಮಾಡುತ್ತಿದ್ದಾರೆ. ನೀರಿನ ಸೆಲೆ, ಫಲವತ್ತಾದ ಭೂಮಿ, ಅರಣ್ಯ, ಸಮುದ್ರದ ಜೀವಿಗಳು, ಎಲ್ಲಾ ಅತಿ ವೇಗವಾಗಿ ಖಾಲಿಯಾಗುತ್ತಿವೆ. ಭೂಮಿ ಮತ್ತು ಅದರ ಮೇಲಿನ ಜೀವಜಾತಿಗಳ ನಡುವಣ ಪರಸ್ಪರ ಅವಲಂಬನದಿಂದಾಗಿ ಪ್ರಕೃತಿಯಲ್ಲಿ ಸಮತೋಲನೆ ಇದ್ದಿತು. ಅದೀಗ ತಿರುಗುಮುರುಗಾಗಿ ಹೋಗಿದೆ. ಸಹಸ್ರಾರು ಬಗೆಯ ದೊಡ್ಡ ಹಾಗೂ ಸಣ್ಣ ಜೀವಿಗಳು ನಿರ್ನಾಮವಾಗಿ ಹೋಗಿವೆ. ಭೂಮಿಯ ಮೇಲೆ ಜೀವಿಗಳು ಉಳಿಯಬೇಕಾದರೆ ನಶಿಸಿ ಹೋಗಿರುವ ಜೀವಿಗಳ ಅವಶ್ಯಕತೆ ಇದೆ. ಹುಲಿ, ಆನೆ, ಮುಂತಾದವುಗಳ ಸಂತತಿ ಎಷ್ಟು ಕಾಲ ಉಳಿಯಬಹುದೆಂಬ ಆತಂಕ ಹೆಚ್ಚುತ್ತಿದೆ. ಸಮುದ್ರಜೀವಿಗಳಾದ ತಿಮಿಂಗಲ ಮುಂತಾದವುಗಳ ಕತೆ ಹೇಳುವುದೇ ಬೇಡ. ಪ್ರಕೃತಿಮಾತೆ ಸ್ಪಷ್ಟವಾದ ಎಚ್ಚರಿಕೆ ನೀಡುತ್ತಿದ್ದಾಳೆ: ''ಇಲ್ಲಿಯವರೆಗೆ ಆದದ್ದಾಯಿತು, ಇನ್ನು ಮುಂದಕ್ಕೆ ಕ್ರಮಿಸಬೇಡ'' ಎಂದು.

ಗಾಂಧೀಜಿ ಒಮ್ಮೆ ಹೇಳಿದ್ದರು: ''ಪ್ರತಿಯೊಬ್ಬರ ಅವಶ್ಯಕತೆಗಳನ್ನು ಪೂರೈಸಲು ಪ್ರಕೃತಿ ಸಮರ್ಥವಾಗಿದೆ, ಆದರೆ ಎಲ್ಲರ ದುರಾಸೆಗಳನ್ನು ಪೂರೈಸಲು ಸಮರ್ಥವಾಗಿಲ್ಲ'' ಎಂದು. ೧೯ನೆಯ ಶತಮಾನದ ಮತ್ತು ಆ ಮುಂಚಿನ ಅರ್ಥಶಾಸ್ತ್ರಜ್ಞರು, ತತ್ತ್ವಶಾಸ್ತ್ರವೇತ್ತರು ಹಾಗೂ ಮುಂದಾಲೋಚನೆ ಮಾಡಲು ಶಕ್ತರಾಗಿದ್ದ ಎಲ್ಲರೂ ಸಹ, ಕಾರ್ಲ್ ಮಾರ್ಕ್ಸ್ ಸೇರಿದಂತೆ, ಒಂದು ಪ್ರಮುಖ ಸಮಸ್ಯೆಯನ್ನು ಬಗೆಹರಿಸುವ ಬಗೆಗೆ ಆಸಕ್ತರಾಗಿದ್ದರು. ಯಾವುದದು ? ವಿಶ್ವದ ಸೀಮಿತ ಪ್ರಾಕೃತಿಕ ಸಂಪತ್ತಿನಿಂದ ಜನರೆಲ್ಲರ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವುದೆಂತು ? ಪ್ರಕೃತಿಯನ್ನು ಸೂರೆ ಮಾಡುವುದರಿಂದ ಅದು ಸಾಧ್ಯವಾಗದೆಂದು ಅವರೆಲ್ಲರೂ ತಿಳಿದಿದ್ದರು. ಆದರೆ ೨೦ನೆಯ ಶತಮಾನದ ವಿದ್ಯಮಾನ ಹೇಗಿದೆ ? ಭೂಮಿಯ ಹೊಟ್ಟೆಯನ್ನು ಬಗೆದು ಅದೆಷ್ಟು ಸಂಪತ್ತನ್ನು ಹೊರತೆಗೆದಿದ್ದೇವೆಂಬುದರ ಲೆಕ್ಕವಿಲ್ಲ. ಅದಕ್ಕಾಗಿ ವಿಜ್ಞಾನ-ತಂತ್ರಜ್ಞಾನಗಳ ಆಸರೆಯೂ ಉಂಟು. ೧೯ನೆಯ ಶತಮಾನದವರು ತಮ್ಮ ಕನಸು ಮನಸಿನಲ್ಲೂ ಇಂತಹ ಸಾಧ್ಯತೆಯನ್ನು ನಿರೀಕ್ಷಿಸಿರಲಿಲ್ಲ. ಹೋಗಲಿ, ಆ ಸಂಪತ್ತನ್ನೆಲ್ಲಾ ಏನು ಮಾಡಿದ್ದೇವೆ ? ಒಂದಷ್ಟು ಜನ ಶ್ರೀಮಂತರು ಮತ್ತು ಬಲಿಷ್ಠ ರಾಷ್ಟ್ರಗಳು ಹಾಗೂ ಅವರ ಕಿಂಕರರು ಇದ್ದ ಸಂಪತ್ತನ್ನೆಲ್ಲಾ ದೋಚಿ ಕೊಂಡಿದ್ದಾರೆ. ಬಡ ರಾಷ್ಟ್ರಗಳಲ್ಲಿ ಈ ಕಿರಾತಕರಿಗೆ ಏಜೆಂಟ್‌ಗಳಾಗಿ ಕೆಲಸ ಮಾಡುವವರಿದ್ದಾರೆ: ತಮ್ಮದೇ ರಾಷ್ಟ್ರದ ಸಂಪತ್ತನ್ನು, ನೂತನ ದೊರೆಗಳಿಗೆ ಸಮರ್ಪಿಸಲು ಅವರು ಎಳ್ಳಷ್ಟೂ ಹೇಸುವುದಿಲ್ಲ.

ಆಧುನಿಕ ಮಾನವ ಒಂದು ದಿನದ ಮಟ್ಟಿಗೆ ಯಾವ ಅಂಕುಶವೂ ಇಲ್ಲದೆ ಮೆರೆಯಬಹುದಾದ ಚಕ್ರವರ್ತಿಯಂತಾಗಿಹೋಗಿದ್ದಾನೆ; ಅಥವಾ ರಾಜನ ತಿಜೋರಿಯನ್ನು ಒಂದೇ ದಿನದಲ್ಲಿ ಸಂಪೂರ್ಣವಾಗಿ ದೋಚಿಬಿಡುವ ಕಳ್ಳನಂತಿದ್ದಾನೆ ಎಂದೂ ಹೇಳಬಹುದು. ಎಲ್ಲ ಸಂಪತ್ತನ್ನು ಒಮ್ಮೆಗೇ ದೋಚಿ ಸುಟ್ಟುಹಾಕಿಬಿಡುವ ಧೂರ್ತತನ ಇದು. ಈ ಕಳ್ಳನ ಆಡಂಬರಕ್ಕೆ ಎಣೆಯಿಲ್ಲ. ಇಂತಹ ಹಿನ್ನೆಲೆಯಲ್ಲಿ, ಶಕ್ತಿಮೂಲಗಳನ್ನು ವೃದ್ಧಿಗೊಳಿಸಿ ಎಷ್ಟು ಪರ್ಯಾಯಗಳನ್ನು ಕಂಡುಕೊಂಡರೂ ಮಾನವನ ದುರಾಸೆಯನ್ನು ಹಿಂಗಿಸಲು ಸಾಧ್ಯವಾಗುವುದಿಲ್ಲ, ಎಷ್ಟು ಶಕ್ತಿಯ ಉತ್ಪಾದನೆಯಾದರೂ ಸಾಲುವುದಿಲ್ಲ. ಎಗ್ಗಿಲ್ಲದ ಅತ್ಯಾಸೆಯು ಮನುಷ್ಯರನ್ನು, ದೇಶಗಳನ್ನು ಮತ್ತು ಜನಾಂಗಗಳನ್ನು ಎದುರುಬದುರು ನಿಲ್ಲಿಸಿ ಪರಸ್ಪರರಲ್ಲಿ ಕಚ್ಚಾಟ ಉಂಟಾಗುವಂತೆ ಮಾಡಿದೆ. ಬೃಹತ್ ರಾಷ್ಟ್ರಗಳು ಅಶಕ್ತ ರಾಷ್ಟ್ರಗಳ ಸಂಪನ್ಮೂಲಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಹವಣಿಸುತ್ತಿವೆ. ಜಾಗತೀಕರಣ

ವೇಣು ಮೋಸದ ಮೋಡಿಯಿಂದ ಇದನ್ನು ಸಾಧಿಸಿ ಕೊಳ್ಳಲಾಗದಿದ್ದರೆ ಆಗ ಬಲಾತ್ಕಾರವನ್ನು ಹೇರಲು ಈ ದೊಡ್ಡ ದೇಶಗಳು ಹಿಂಜರಿಯುವುದಿಲ್ಲ. ಆ ದೊಡ್ಡ ದೇಶಗಳು ಪರಸ್ಪರವಾಗಿ ಇನ್ನೊಂದು ಸ್ಪರ್ಧೆಯಲ್ಲಿ ತೊಡಗಿವೆ: ಶಸ್ತ್ರಾಸ್ತ್ರಗಳನ್ನು ಉತ್ಪಾದಿಸಿ ಮಾರುವುದರಲ್ಲಿ ಪೈಪೋಟಿಯು ಎಲ್ಲೆ ಮೀರಿದ ಪ್ರತಿಸ್ಪರ್ಧೆಯಾಗಿದೆ. ಎಲ್ಲ ದೇಶಗಳೂ ಇಡೀ ಪ್ರಪಂಚದ ಮೇಲೆ ತಮ್ಮ ಆಧಿಪತ್ಯ ಸ್ಥಾಪಿಸಿಕೊಳ್ಳಲು ಮುಂದಾಗುತ್ತಿವೆ. ಆರ್ಕ್‌ಟಿಕ್ ಮತ್ತು ಅಂಟಾರ್ಕ್‌ಟಿಕ್ ಪ್ರದೇಶಗಳು ಮಂಜುಗಡ್ಡೆಗಳಿಂದ ತುಂಬಿಹೋಗಿದ್ದರೂ ತಮ್ಮ ಹಾನಿಕಾರಕ ಚಟುವಟಿಕೆಗಳನ್ನು ಅಲ್ಲಿಗೂ ವಿಸ್ತರಿಸಿಕೊಳ್ಳುವ ಕೆಡುಕು ಈ ದೇಶಗಳದ್ದು. ಸಮಾಜದ ಬಲಹೀನ ವಿಭಾಗಗಳು ಭಯೋತ್ಪಾದನೆಯಂತಹ ಕೃತ್ಯಗಳಲ್ಲಿ ತೊಡಗಿ ತಮ್ಮ ಜೀವ ಮತ್ತು ಆಸ್ತಿಯನ್ನು ರಕ್ಷಿಸಿಕೊಳ್ಳಲು ಮುಂದಾಗುತ್ತವೆ. ಶ್ರೀಮಂತ ಬಲಶಾಲಿ ರಾಷ್ಟ್ರಗಳ ಉಪಟಳ ಅಷ್ಟು ತೀವ್ರವಾಗಿದೆ.

ಈ ಉನ್ಮಾದದ ಸ್ಪರ್ಧೆಯು ಜನಸಾಮಾನ್ಯರ ಮೇಲೆ ಉಂಟುಮಾಡುವ ಪರಿಣಾಮವು ಘೋರವಾಗಿದೆ. ವೈಯಕ್ತಿಕ ಹಾಗೂ ರಾಷ್ಟ್ರಗಳ ನೆಲೆಯಲ್ಲಿ ಪ್ರತಿ ಹಂತದಲ್ಲೂ ಇನ್ನೊಬ್ಬರನ್ನು ಹಿಂದಿಕ್ಕಿ ತಾನು ವಿಜೃಂಭಿಸ ಬೇಕೆಂಬ ಆಕಾಂಕ್ಷೆ ಬಲವಾಗಿದೆ. ಈ ರೋಗಕ್ಕೆ ಪರಿಣಾಮಕಾರಿ ಮದ್ದು ಇನ್ನೂ ದೊರೆತಿಲ್ಲ. ಸೌಂದರ್ಯಾನುಭೂತಿ ಮತ್ತು ಮಾನಸಿಕ ಸ್ವಸ್ಥತೆಯ ದೃಷ್ಟಿಯಿಂದ ನೋಡಿದರೆ ಮಾನವ ಜನಾಂಗವು ಹಿಂದಿಗಿಂತಲೂ ಈಗ ಹೆಚ್ಚು ದುಃಸ್ಥಿತಿಗೆ ಪಕ್ಕಾಗಿರುವುದು ಗೋಚರಿಸುತ್ತದೆ. ಇದರಿಂದ ಹೊರಬರಲು ಹಾದಿ ಗಳನ್ನು ಹುಡುಕುವ ಬದಲು, ತಾನೇ ಸೃಷ್ಟಿಸಿಕೊಂಡ ಗೋಜಲನ್ನು ಇನ್ನೂ ವಿಪರೀತದ ಮಟ್ಟಕ್ಕೆ ಕೊಂಡೊಯ್ಯುವ ಪ್ರಕ್ರಿಯೆ ಜಾರಿಯಲ್ಲಿದೆ. ಜೀವ ವೈವಿಧ್ಯದ ನಿರ್ನಾಮವು ಇದೆಲ್ಲದರ ಪರಿಣಾಮ.

ಮಾನವನ ಇಂದಿನ ವ್ಯವಹಾರಗಳಿಗೆ ಪರ್ಯಾಯ ವೊಂದನ್ನು ಸೂಚಿಸುವ ಕೆಲಸ ನನ್ನಿಂದಾಗದು. ನನ್ನ ಅನುಭವದ ಖನಿಯಿಂದ ಒಂದು ಪ್ರಸಂಗವನ್ನು ಉದ್ಧರಿಸುವ ಮೂಲಕ ಪರಿಹಾರದ ಹಾದಿಯನ್ನು ಸ್ಥೂಲವಾಗಿ ನಿರೂಪಿಸುತ್ತೇನೆ. ನಾನು ದಾಖಲಿಸುತ್ತಿರುವ ಪ್ರಸಂಗದಲ್ಲಿ ನನಗೊಬ್ಬ ಆಧ್ಯಾತ್ಮಿಕ ಗುರುವೇ ಸಿಕ್ಕಿದಂತಾಯಿತೆಂದು ಭಾವಿಸುತ್ತೇನೆ. ೧೯೭೭, ಅಂದರೆ ೩೧ ವರ್ಷಗಳ ಹಿಂದೆ, ಕಾಶಿಯ ರೈಲ್ವೆ ನಿಲ್ದಾಣದ ಬಳಿ ಈ ಗುರು ನನಗೆ ಸಿಕ್ಕಿದ. ಆಗ್ಗೆ ಆತ ಸೈಕಲ್ ರಿಕ್ಷಾವೊಂದನ್ನು ಓಡಿಸುತ್ತಿದ್ದ. ಕೆಲಸದ ನಿಮಿತ್ತ ನಾನು ಆ ನಗರದಲ್ಲಿ ಸಂಚರಿಸುವುದಿತ್ತು, ಅದಕ್ಕಾಗಿ ಸೈಕಲ್ ರಿಕ್ಷಾ ಹುಡುಕುತ್ತಿದ್ದೆ. ಈ ಮಹಾನುಭಾವ ನನ್ನ ಕಣ್ಣಿಗೆ ಬಿದ್ದ. ನನ್ನ ಕರೆಯನ್ನು ಮನ್ನಿಸಿ ಬಂದ. ಸನಿಹಕ್ಕೆ ಬಂದು ರಿಕ್ಷಾ ನಿಲ್ಲಿಸಿದ. ಹತ್ತಬೇಕೆಂದಿದ್ದೆ, ಆದರೆ ಆತ ಹೇಳಿದ: ''ಕ್ಷಮಿಸಿ ಸ್ವಾಮಿ, ನಾನು ನಿಮ್ಮನ್ನೆಲ್ಲಿಗೂ ಕೊಂಡೊಯ್ಯಲಾರೆ. ನಾನೀಗ ಮನೆಗೆ ತೆರಳಿ ವಿಶ್ರಮಿಸಿಕೊಳ್ಳುವುದಿದೆ.''

ನಾನು ಕೇಳಿದೆ: ''ಇಷ್ಟು ಬೇಗನೆ ನೀನೇಕೆ ಮನೆಗೆ ತೆರಳಬೇಕು ? ಇನ್ನೂ ಬೆಳಿಗ್ಗೆ ೮ ಗಂಟೆಯಲ್ಲವೆ ? ರಾತ್ರಿಯಿಡೀ ಕೆಲಸ ಮಾಡಿದ್ದೀಯೋ ಹೇಗೆ ? ''

ಅವನೆಂದ: '' ಇಲ್ಲ, ಸ್ವಾಮಿ. ನಾನು ಮನೆ ಬಿಟ್ಟು ಎರಡು ಗಂಟೆಗಳು ಕಳೆದಿವೆ, ಅಷ್ಟೆ. ದೇವರ ದಯೆ ದೊಡ್ಡದು, ನನಗಿಂದು ಬಹಳ ಒಳ್ಳೆಯ ಗಿರಾಕಿ ಸಿಕ್ಕಿದರು. ಅವರಿಗೆ ರೈಲು ಹಿಡಿಯುವ ತವಕವಿತ್ತು. ಎಂಟು ಮೈಲಿ (೧೪ ಕಿ. ಮೀ.) ದೂರದಿಂದ ಅವರನ್ನು ಕರೆದುಕೊಂಡು ಬಂದೆ. ಅದೂ ಕೇವಲ ಒಂದು ಗಂಟೆಯಲ್ಲಿ. ಅವರಿಗೆ ಸಂತೋಷ ಉಂಟಾಗಿ ನನ್ನ ಶ್ರಮಕ್ಕೆ ೨೦ರೂಪಾಯಿ ಕೊಟ್ಟುಬಿಟ್ಟರು. ಒಂದು ದಿನದಲ್ಲಿ ನಾನು ಕಮಾಯಿಸುವುದು ಸುಮಾರು ಅಷ್ಟೇ. ಇವತ್ತು ಅದಕ್ಕಿಂತಲೂ ಹೆಚ್ಚು ದುಡಿದುಕೊಳ್ಳಬೇಕೆಂಬ ಹುಚ್ಚು ಬೇಡ. ಅದಕ್ಕೇ ಹೇಳಿದ್ದು. ಮನೆಗೆ ಹೋಗಿ ವಿಶ್ರಮಿಸಿಕೊಳ್ಳುತ್ತೇನೆ ಎಂದು.''

ನಾನಾತನನ್ನು ಮತ್ತೆಲ್ಲೂ ಕಂಡಿಲ್ಲ. ಆದರೆ ನನ್ನ ಹೃದಯಾಂತರಾಳದಲ್ಲಿ ಅವನು ಗುರುವಾಗಿ ನೆಲೆಸಿದ್ದಾನೆ. ನನಗೆ ಅಥವಾ ಇತರರಿಗೆ ಹತಾಶೆಯ ಭಾವನೆ ಉಮ್ಮಳಿಸಿದಾಗೆಲ್ಲಾ ನಾನು ಅವನನ್ನು ನೆನಪಿಸಿಕೊಳ್ಳುತ್ತೇನೆ.

ಎಂ. ಬಿ. ಲಾಲ್
('ದಿ ಸ್ಟೇಟ್ಸ್‌ಮನ್' ಪತ್ರಿಕೆಯ ಮಾಜಿ ಜಂಟಿ ಸಂಪಾದಕ)
ಡಿ–೩೦, ಪ್ರೆಸ್ ಎನ್‌ಕ್ಲೇವ್, ಸಾಕೇತ್, ನವದೆಹಲಿ–೧೧೦೦೧೭

*With Best Compliments From*



**SUNANCO ENGINEERING**

309, Embassy Centre, 11, Crescent Road
Bangalore - 560 001



ವಿಜ್ಞಾನ-ವಿಸ್ಮಯ

# ತಲೆ ತುಂಡರಿಸಿದ ನಂತರವೂ ಪ್ರಾಣ ಉಳಿಯುವುದುಂಟೆ ?

ಎಲ್ಲಾದರೂ ಉಂಟೆ ? ಎಂಥ ಪ್ರಶ್ನೆ ಇದು ಎಂದು ಯಾರಿಗಾದರೂ ಅನಿಸದಿರದು. ನಿಜ, ಮನುಷ್ಯ ರಲ್ಲಾಗಲೀ ಪ್ರಾಣಿಗಳಲ್ಲಾಗಲೀ ತಲೆ ಶರೀರದ ಒಂದು ಅತಿಮುಖ್ಯ ಅಂಗ. ಅದು ಇಲ್ಲದೆ ಜೀವ ಇರಲು ಸಾಧ್ಯವೇ ಇಲ್ಲ. ಆದರೆ ಒಂದು ಪ್ರಾಣಿ ಮಾತ್ರ ಇದಕ್ಕೆ ಅಪವಾದ. ಈ ಪ್ರಾಣಿಯ ವಿಷಯದಲ್ಲಿ ಮೇಲಿನ ಮಾತು ಅಷ್ಟು ನಿಜವಲ್ಲ. ಈ ಪ್ರಾಣಿಗೆ ಸಂಬಂಧಿಸಿ ತಲೆ ಇಲ್ಲದಿದ್ದರೂ ಜೀವ ಇರಲು ಸಾಧ್ಯ ಎಂದು ಪ್ರಯೋಗ ತೋರಿಸಿಕೊಟ್ಟಿದೆ.

ಆ ಪ್ರಾಣಿಯೇ ಜಿರಲೆ.

ಈ ಪ್ರಪಂಚದಲ್ಲಿ ಜಿರಲೆ ಇಲ್ಲದ ಜಾಗವುಂಟೆ ? ರಕ್ತ ಹೆಪ್ಪುಗಟ್ಟುವಂಥ ಅತಿ ಶೀತ ಪ್ರದೇಶದಲ್ಲಾಗಲೀ, ರಕ್ತ ಕುದಿಯುವಂಥ ಅತಿ ಉಷ್ಣ ಪ್ರದೇಶದಲ್ಲಾಗಲೀ ಜಿರಲೆ ಕಂಡುಬರುತ್ತದೆ. ಅಷ್ಟೇ ಅಲ್ಲ, ಬೈಜಿಕ ಯುದ್ಧವೊಂದು ಜರುಗಿ ಮನುಷ್ಯರನ್ನೂ ಒಳಗೊಂಡಂತೆ ಜಗತ್ತಿನ ಜೀವರಾಶಿಗಳೆಲ್ಲ ನಿರ್ನಾಮವಾಗಿಹೋದರೂ ಜಿರಲೆ ಮಾತ್ರ ಜೀವದಿಂದ ಉಳಿದಿರುವುದೆಂದು ಹೇಳಲಾಗುತ್ತದೆ.

ಈ ಆಶ್ಚರ್ಯಕರ ಪ್ರಾಣಿಯ ಬಗೆಗೆ ನಾನಾ ಪ್ರಯೋಗಗಳನ್ನು ನಡೆಸುತ್ತ ಅಮೆರಿಕಾದ ಮೆಸಚುಸೆಟ್ಸ್ ವಿಶ್ವವಿದ್ಯಾನಿಲಯದ ಶರೀರಶಾಸ್ತ್ರಜ್ಞ ಹಾಗೂ ಜೀವ ರಸಾಯನ ಶಾಸ್ತ್ರಜ್ಞರೊಬ್ಬರು ಈ ಪ್ರಾಣಿಯ ಬಗೆಗೆ ಮತ್ತೊಂದು ವಿಸ್ಮಯಕರ ಸಂಗತಿ ಕಂಡುಹಿಡಿದಿದ್ದಾರೆ. ಅದೆಂದರೆ – ಈ ಪ್ರಾಣಿಯ ತಲೆಯನ್ನು ತುಂಡರಿಸಿ ಹಾಕಿದರೂ ಅದು ಜೀವಂತವಾಗಿರಬಲ್ಲುದು – ಕೊನೆಯ ಪಕ್ಷ ಹಲವು ವಾರಗಳ ಕಾಲವಾದರೂ.

ಮನುಷ್ಯರ ವಿಷಯದಲ್ಲಿ ಇದು ಏಕೆ ಸಾಧ್ಯವಿಲ್ಲ ? ಏಕೆಂದರೆ, ಮೊತ್ತಮೊದಲನೆಯದಾಗಿ, ಮನುಷ್ಯನ ತಲೆಯನ್ನು ತುಂಡರಿಸಿ ಹಾಕಿದಾಗ ಅಪಾರ ಪ್ರಮಾಣದಲ್ಲಿ ರಕ್ತಸ್ರಾವವಾಗುತ್ತದೆ; ಶರೀರದಲ್ಲಿ ರಕ್ತದ ಒತ್ತಡ ಕಡಿಮೆಯಾಗುತ್ತದೆ; ಆದರಿಂದ ಶರೀರದ ನಾನಾ ಭಾಗಗಳಿಗೆ ರಕ್ತದ ಸರಬರಾಜಿಗೂ, ಅತ್ಯಂತ ಮುಖ್ಯ ಊತಕಗಳಿಗೆ ಜೀವಾಧಾರ ಅಂಶಗಳ ಸರಬರಾಜಿಗೂ ಅಡ್ಡಿ ಉಂಟಾಗುತ್ತದೆ. ಹೀಗೆ ವ್ಯಕ್ತಿ ಭಾರಿ ರಕ್ತಸ್ರಾವಕ್ಕೆ ಈಡಾಗಿ ಸಾವನ್ನಪ್ಪುತ್ತಾನೆ.

ಅಲ್ಲದೆ ಮನುಷ್ಯರು ಬಾಯಿ ಅಥವಾ ಮೂಗಿನ ಮೂಲಕ ಉಸಿರಾಡುತ್ತಾರಷ್ಟೆ. ಈ ಅತ್ಯಂತ ಮುಖ್ಯ ಕ್ರಿಯೆಯನ್ನು ನಿಯಂತ್ರಿಸುವುದೇ ಮಿದುಳು. ಮಿದುಳು ಇರುವುದು ತಲೆಯಲ್ಲಿ. ತಲೆಯನ್ನು ತುಂಡರಿಸಿದಾಗ ಮಿದುಳಿಲ್ಲದೆ ಮನುಷ್ಯನ ಉಸಿರಾಟ ನಿಂತುಹೋಗುತ್ತದೆ.

ಅಷ್ಟೇ ಅಲ್ಲ, ತಲೆ ಇಲ್ಲದೆ ಮನುಷ್ಯನ ಶರೀರವು ಏನನ್ನೂ ತಿನ್ನಲಾರದು. ಹಾಗಾಗಿ ತಲೆಯ ನಷ್ಟದಿಂದ ಆಗುವ ಇತರ ಯಾವುದೇ ದುಷ್ಪರಿಣಾಮವನ್ನು ಸಹಿಸಲು ಸಾಧ್ಯವಾದರೂ ಮನುಷ್ಯ ಹಸಿವಿನಿಂದ ಸಾಯುವುದು ಖಂಡಿತ.

ಹಾಗಿದ್ದರೆ ಜಿರಲೆ ಹೇಗೆ ತಲೆ ಇಲ್ಲದೆ ಜೀವದಿಂದ ಉಳಿಯಬಲ್ಲುದು ? ಮನುಷ್ಯರಲ್ಲಿರುವಂಥ ರಕ್ತ ಪರಿಚಲನಾ ವ್ಯವಸ್ಥೆ ಜಿರಲೆಯಲ್ಲಿಲ್ಲದಿರುವುದೇ ಅದಕ್ಕೆ ಮುಖ್ಯ ಕಾರಣ. ಮನುಷ್ಯರಲ್ಲಾದರೆ ಶರೀರದಲ್ಲಿ ರಕ್ತನಾಳಗಳ ವಿಶಾಲ ಜಾಲಬಂಧವೇ ಇರುತ್ತದೆ. ಇದರ ಮೂಲಕ ರಕ್ತ ಹರಿಯಲು ಸಾಕಷ್ಟು ಪ್ರಮಾಣದ ಒತ್ತಡ ಅವಶ್ಯ. ಆದರೆ ಜಿರಲೆಯ ಶರೀರದಲ್ಲಿ ಈ ಜಾಲಬಂಧ ಇಷ್ಟು ವಿಸ್ತೃತವಾಗಿರುವುದಿಲ್ಲ. ಅಲ್ಲದೆ ಅವುಗಳಲ್ಲಿ ಸಣ್ಣಪುಟ್ಟ ಲೋಮರಕ್ತನಾಳಗಳಿರುವುದಿಲ್ಲ, ಹಾಗಾಗಿ ರಕ್ತದ ಹರಿವಿಗೆ ಅಂಥ ಗಮನಾರ್ಹ ಒತ್ತಡವೇನೂ ಬೇಕಾಗುವುದಿಲ್ಲ. ಜಿರಲೆಯ ತಲೆಯನ್ನು ಕತ್ತರಿಸಿ ಹಾಕಿದಾಗ ಅದರ ಕತ್ತಿನಲ್ಲಿ ರಕ್ತ ಹೆಪ್ಪುಗಟ್ಟುತ್ತದೆ. ಹಾಗಾಗಿ ಅಧಿಕ ಪ್ರಮಾಣದ ರಕ್ತನಷ್ಟವೂ ಆಗುವುದಿಲ್ಲ.

ಅಲ್ಲದೆ ಈ ಗಡಸುಕಾಯದ ಹುಳುವಿನ ಪ್ರತಿಯೊಂದು ಅಂಗಭಾಗದಲ್ಲೂ ಸಣ್ಣಪುಟ್ಟ ರಂಧ್ರ ಗಳಿದ್ದು ಹುಳುವು ಆ ರಂಧ್ರಗಳ ಮೂಲಕ ಉಸಿರಾಡುತ್ತದೆ. ಜಿರಲೆಯ ಮಿದುಳೇನೂ ಈ ಉಸಿರಾಟವನ್ನು ನಿಯಂತ್ರಿಸುವುದಿಲ್ಲ. ಅಲ್ಲದೆ ರಕ್ತವು ಜಿರಲೆಯ ಶರೀರದ ಎಲ್ಲ ಭಾಗಗಳಿಗೂ ಆಕ್ಸಿಜನ್ನನ್ನು ಏನೂ ಒಯ್ಯುವುದಿಲ್ಲ. ಬದಲು ಶ್ವಾಸದ್ವಾರಗಳು ಗಾಳಿಯನ್ನು ನೇರವಾಗಿ ಊತಕಗಳಿಗೆ ಶ್ವಾಸನಾಳ ಎಂದು ಹೇಳುವಂಥ ನಳಿಕೆಗಳ ಮೂಲಕ ಸರಬರಾಜು ಮಾಡುತ್ತವೆ.

ಇನ್ನೊಂದು ಮುಖ್ಯ ಅಂಶವೆಂದರೆ – ಜಿರಲೆಗಳು ಶೀತರಕ್ತ ಪ್ರಾಣಿಗಳು. ಅಂದರೆ ಬಿಸಿಲು ಕಾಯಿಸಿ ಕೊಂಡು ಇಲ್ಲವೇ ಬಿಲದಲ್ಲಿ ಅವಿತುಕೊಂಡು ತಮ್ಮ ಮೈ ಕಾವನ್ನು ನಿಯಂತ್ರಿಸಿಕೊಳ್ಳುತ್ತವೆ. ಹಾಗಾಗಿ ಅವು ತಮ್ಮ ಶರೀರವನ್ನು ಬೆಚ್ಚಗಿರಿಸಿಕೊಳ್ಳಲು ಹೆಚ್ಚು ಶಕ್ತಿಯನ್ನು ವ್ಯಯಮಾಡಬೇಕಾಗಿಲ್ಲ. ಇದರಿಂದಾಗಿ ಅವಕ್ಕೆ ಹೆಚ್ಚಿನ ಪ್ರಮಾಣದ ಆಹಾರದ ಅವಶ್ಯಕತೆಯೂ ಇರುವುದಿಲ್ಲ. ಒಮ್ಮೆ ಏನನ್ನಾದರೂ ತಿಂದ ನಂತರ ಅವು ಹಲವಾರು ವಾರಗಳ ಕಾಲ ಆಹಾರವಿಲ್ಲದೆಯೇ ಉಳಿದಿರಬಲ್ಲವು. ಮತ್ತೊಂದು ಬೇಟೆಗಾರ ಪ್ರಾಣಿಗೆ ಆಹಾರವಾಗದಿದ್ದರಾಯಿತು, ಅವು ನಿಶ್ಚಲವಾಗಿ ಬಿದ್ದುಕೊಂಡಿರುತ್ತವೆ.

ಅಮೆರಿಕಾದ ಪ್ರಯೋಗಶಾಲೆಯಲ್ಲಿ ಜಿರಲೆಗಳ ಶಿರಚ್ಛೇದನ ಮಾಡಿದ ನಂತರ ಏನಾಗುತ್ತದೆ ಅನ್ನುವುದರ ಅಧ್ಯಯನ ಮಾಡಲು ಸೂಕ್ಷ್ಮ ದರ್ಶಕದ ಮೂಲಕ ಜಾಗರೂಕತೆಯಿಂದ ವೀಕ್ಷಿಸಲಾಯಿತು. ಒಣಗಿಹೋಗದಂತೆ ಗಾಯಗಳಿಗೆ ದಂತಮೇಣ ಹಚ್ಚಲಾಯಿತು. ಈ ಜಿರಲೆಗಳು ಜಾಡಿಯಲ್ಲಿ ಹಲವು ವಾರಗಳ ಕಾಲ ಜೀವಂತವಾಗಿದ್ದವು.

ಜಿರಲೆಗಳಲ್ಲಿ – ಅಂತೆಯೇ ಇನ್ನು ಕೆಲವು ಕೀಟಗಳಲ್ಲಿ – ಶರೀರದ ಪ್ರತಿಯೊಂದು ಅಂಗ ಭಾಗದಲ್ಲೂ ನರತಂತು ವ್ಯೂಹಗಳಿರುತ್ತವೆ. ಇವು ಅನುವರ್ತನೆಗಳಿಗೆ (ಅಂದರೆ ಬಾಹ್ಯಪ್ರಚೋದನೆಗೆ ಪ್ರತಿಕ್ರಿಯೆಗಾಗಿ ದೇಹದಲ್ಲಿ ಅಥವಾ ಮನಸ್ಸಿನಲ್ಲಿ ಉಂಟಾಗುವ ಪರಿಣಾಮಗಳಿಗೆ) ಅವಶ್ಯವಾದ ಮೂಲ ನರಕ್ರಿಯೆಗಳನ್ನು ನಿರ್ವಹಿಸುತ್ತವೆ. ಹಾಗಾಗಿ ಅವುಗಳ ಶರೀರವು ಮಿದುಳಿಲ್ಲದೆಯೇ ಅತ್ಯಂತ ಸರಳ ಪ್ರತಿಕ್ರಿಯೆಗಳ ಮೂಲಕ ಕಾರ್ಯ ನಿರ್ವಹಿಸಬಲ್ಲುದು. ಅವು ನಿಲ್ಲಬಲ್ಲವು. ಮುಟ್ಟಿದರೆ ಮಿಡುಕಬಲ್ಲವು, ಚಲಿಸಬಲ್ಲವು.

ಇನ್ನೂ ಒಂದು ಅತ್ಯಂತ ವಿಸ್ಮಯಕರ ಅಂಶವೆಂದರೆ ಜಿರಲೆಯ ತಲೆಯನ್ನು ಕತ್ತರಿಸಿಹಾಕಿದ ಮೇಲೂ ಜಿರಲೆಯ ಒಡಲು ಜೀವಂತವಾಗಿರುವಂತೆಯೇ, ಕತ್ತರಿಸಿಹಾಕಿದ ಅದರ ತಲೆಯೂ ಹಲವಾರು ಗಂಟೆಗಳ ಕಾಲ ಕಾರ್ಯನಿರತವಾಗಿಯೇ ಇರುತ್ತದೆ. ಸ್ಪರ್ಶ ತಂತುಗಳನ್ನು ಹಿಂದಕ್ಕೂ ಮುಂದಕ್ಕೂ ಚಲಿಸುತ್ತಲೇ ಇರುತ್ತವೆ. ಸ್ವಲ್ಪ ಪೌಷ್ಟಿಕ ದ್ರವ್ಯಗಳನ್ನು ನೀಡಿ ಶೀತಯಂತ್ರದಲ್ಲಿರಿಸಿದರೆ ಈ ತಲೆ ಇನ್ನೂ ಹೆಚ್ಚುಕಾಲ ಜೀವಂತವಾಗಿರಬಲ್ಲುದು.

ಕೆ. ಎಲ್. ಗೋಪಾಲಕೃಷ್ಣ ರಾವ್

ಆದರೆ ಒಂದು ಅಂಶವನ್ನು ಗಮನದಲ್ಲಿರಿಸಬೇಕು. ಜಿರಲೆಗಳಲ್ಲಿ ಶರೀರವು ತಲೆಗೆ ಭಾರಿ ಪ್ರಮಾಣದ ಸಂವೇದನ ಸಮಾಚಾರ ಒದಗಿಸುತ್ತಿರುತ್ತದೆ. ಹಾಗಾಗಿ ಈ ಸಂವೇದನ ಸಮಾಚಾರ ಲಭ್ಯವಿಲ್ಲದೆ ತಲೆಯಲ್ಲಿ ಮಿದುಳು ಸಹಜ ಕ್ರಿಯೆ ನಿರ್ವಹಿಸಲಾರದು. ಉದಾಹರಣೆಗೆ, ಜಿರಲೆಗಳಿಗೆ ಅದ್ಭುತ ಸ್ಮರಣಶಕ್ತಿ ಇದ್ದರೂ ಅವುಗಳ ಶರೀರದ ಕೆಲವು ತುಣುಕುಗಳು ಇಲ್ಲದಿದ್ದಾಗ ಅವಕ್ಕೆ ಬೋಧನೆ ಮಾಡಲು ಯತ್ನಿಸುವುದು ನಿಷ್ಫಲವಾಗುತ್ತದೆ. ಶರೀರದ ಅಂಗಗಳೆಲ್ಲ ಸಂಪೂರ್ಣವಾಗಿ ಒಳ್ಳೆಯ ಸ್ಥಿತಿಯಲ್ಲಿದ್ದರಷ್ಟೆ ಅದು ಸಾಧ್ಯ.

ಜಿರಲೆಗಳ ಶಿರಚ್ಛೇದನ ಕ್ರೂರವಾಗಿ ಕಂಡು ಬಂದರೂ ವಿಜ್ಞಾನಿಗಳು ಅವುಗಳ ತಲೆ-ಇಲ್ಲದ ಶರೀರದೊಂದಿಗೂ, ಶರೀರರಹಿತ ತಲೆಯೊಂದಿಗೂ ಅನೇಕ ಪ್ರಯೋಗಗಳನ್ನು ನಡೆಸಿದ್ದಾರೆ. ಜಿರಲೆಗಳಲ್ಲಿ ತಲೆಗಳಲ್ಲಿರುವ ಗ್ರಂಥಿಗಳು ಶರೀರದ ಪಕ್ವನವನ್ನು ನಿಯಂತ್ರಿಸುತ್ತವೆ. ಈ ಗ್ರಂಥಿಗಳಿಂದ ಬರುವ ಹಾರ್ಮೋನ್‌ಗಳು ಲಭ್ಯವಾಗದೆ ತಲೆಯ ಕಾರ್ಯ ನಷ್ಟವಾಗುತ್ತದೆ.

ಇಂತಹ ಅಧ್ಯಯನಗಳು ವಿಜ್ಞಾನಿಗಳಿಗೆ ಕೀಟಗಳಲ್ಲಿ ರೂಪಾಂತರಣ (ಅಂದರೆ ಭ್ರೂಣ ಸ್ಥಿತಿಯನಂತರ ಹುಟ್ಟಿದ ಪ್ರಾಣಿಯಲ್ಲಿ ಬೆಳವಣಿಗೆಯ ಜೊತೆಗೆ ಆಗುವಂಥ – ಉದಾಹರಣೆಗೆ ಪೊರೆ ಹುಳುವಿನಿಂದ ಕೀಟ, ಗೊದಮೊಟ್ಟೆ ಮರಿಯಿಂದ ಕಪ್ಪೆ ಆಗುವಂಥ – ರೂಪಪರಿವರ್ತನೆ) ಮತ್ತು ಸಂತಾನೋತ್ಪತ್ತಿ ಕ್ರಿಯೆಗಳ ಕುರಿತು ಸಂಶೋಧನೆ ನಡೆಸಲು ಸಾಧ್ಯ ಮಾಡಿ ಕೊಟ್ಟಿವೆ. ಅಲ್ಲದೆ ಕೀಟಗಳಲ್ಲಿ ನರಕೋಶಗಳು ಹೇಗೆ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ಶಿರರಹಿತ ಕಾಯಗಳ ಅಧ್ಯಯನ ತಿಳಿಸಿಕೊಟ್ಟಿದೆ.

ಕೊನೆಯಲ್ಲಿ ಹೇಳುವುದಾದರೆ, ಈ ಅಧ್ಯಯನಗಳೆಲ್ಲ ಜಿರಲೆಯ ಅಪ್ರತಿಮ ಸಹಿಷ್ಣುತೆಯ ಬಗೆಗೆ ಸಾಕ್ಷ್ಯ ಒದಗಿಸಿದರೂ, ಶಿರರಹಿತ ಜಿರಲೆಯು ಅತ್ಯಂತ ಬುದ್ಧಿವಂತ ಕೀಟವೇನಲ್ಲ, ಆದರೆ ಅದು ಖಂಡಿತ ತಲೆ ಇಲ್ಲದೆಯೇ ಕೆಲಕಾಲ ಜೀವಂತವಾಗಿರಬಲ್ಲುದು ಎಂಬುದನ್ನಂತೂ ತೋರಿಸಿಕೊಟ್ಟಿವೆ.

*(ಆಧಾರ: ಚಾರ್ಲ್ಸ್ ಕ್ಯೂ ಕೋಯ್ ಬರೆದ ಒಂದು ಲೇಖನ)*

**ಕೆ. ಎಲ್. ಗೋಪಾಲಕೃಷ್ಣರಾವ್**
೨೬೧, ೨ನೇ ಅಡ್ಡರಸ್ತೆ, ಸಿ. ಟಿ. ಬೆಡ್
ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್
ತ್ಯಾಗರಾಜನಗರ
ಬೆಂಗಳೂರು - ೫೬೦ ೦೨೮

# ಬಾಗಿಲು ತೆರೆಯುವುದೇ ಅಪರೂಪ



– ೧ –

ಮಾಯಾ ಬಝಾರಿನ
ನಗರವೊಂದರ ವೃತ್ತ ಬಳಿಯಲಿ
ಎಷ್ಟು ಹುಡುಕಿದರೂ ಸಿಗದ,
ಮುಖ್ಯ ರಸ್ತೆಯ ಅಡ್ಡದಾರಿಯೊಂದರಲ್ಲಿನ
'ನೂಕ್ಲಿಯರ್' ಹೆಸರಿನ ಮನೆಯ
ಕಂಪೌಂಡ್ ದಾಟಿ,
ಬಾಗಿಲ ಬಳಿ ನಿಂತು
ಕಾಲಿಂಗ್ ಬೆಲ್ ಒತ್ತಿದರೂ...
ಕೂಡಲೇ ಬಾಗಿಲು ತೆರೆಯುವುದಿಲ್ಲ
ಆದರೆ...
ಬಾಗಿಲಿನ ಸಣ್ಣ ಕಿಂಡಿಗೆ ಕಣ್ಣು ಮೂಡುತ್ತದೆ.

– ೨ –

ಮುಚ್ಚಿದ ಬಾಗಿಲು
ಬಣ್ಣದ ಕರ್ಟನ್ನಿಂದಲಂಕೃತಗೊಂಡ ಕಿಟಕಿಗಳು,
ಮಕ್ಕಳ ಕಲರವ ಅಡಗಿಸುವ
ಟಿ.ವಿ. ಸಿ.ಡಿ ಗಳ ಅಬ್ಬರದ
ಮಂದಬೆಳಕಿನಲಿ ಮಿಂದವರು
ಬೆಲ್ ಬಾರಿಸಿದವರಾರೆಂಬ ಕುತೂಹಲದ
ಬೇಸರಿಕೆಯಿಂದ
ಬಾಗಿಲು ತೆರೆಯುತ್ತಾರೆ...
ಎದುರು ನಿಂತವರು ಗುರುತು ಹೇಳಿದರೂ...
ಹೂ ಆರ್ ಯು ?ಎಂಬ ಪ್ರಶ್ನೆಗೆ
''ನಾನು ನಿಮ್ಮಪ್ಪನ ಅಣ್ಣ,
ನಿನಗೆ ದೊಡ್ಡಪ್ಪನಾಗಬೇಕು,
ನೀನು ಸಣ್ಣವನಿರುವಾಗಲೇ ಊರು ಬಿಟ್ಟದ್ದು;
ಮತ್ತೆ ನೀನು ಊರುಕಡೆ ಬರಲೇಯಿಲ್ಲ..''
ಎಂದೆಲ್ಲಾ ಸಂಬಂಧಗಳ ಸಬೂಬು ಕೇಳಿ
ಬಾಗಿಲ ಬಳಿ ನಿಂದವರ ಮುಖವನ್ನೋದಿ
ಮತ್ತದೇ ಬೇಸರಿಕೆಯಿಂದ
''ಹೌದು, ನಿಮಗೆ ಯಾರು ಬೇಕಿತ್ತು ,
ನೀವು ಹುಡುಕುತ್ತಿರುವವರು ನಾವಲ್ಲ
ಎಕ್ಸ್‌ಕ್ಯೂಜ್ ಮಿ
ಸಾರಿ ನೀವು ತಪ್ಪು ಅಡ್ರೆಸ್ಸಿಗೆ ಬಂದಾಗಿದೆ
ಕ್ಷಮ್ಸಿ ನಮಗೆ ಪುರುಸೊತ್ತಿಲ್ಲ'' ಎಂದು
ಧಡಾರನೇ ಬಾಗಿಲು ಬಡಿದುಕೊಂಡಿತು.

– ೩ –

ಸಂಬಂಧಗಳ ಅಂಟು ತೀರಿ
ಒಳ್ಳೆಯ ಮಾತಿಗೂ ಬರ ಬಡದಿದ್ದರೂ...
ಎದೆಯ ಬಡಿತ-ಸಣ್ಣಗೆ ನೆನಪಿಸಿತು
ಅಪ್ಪ-ಅಮ್ಮ ಹೇಳಿದ ಮಾತೊಂದನ್ನು
''ಸಂಬಂಧ ಅನ್ನುವುದು ದೊಡ್ಡದು ಮಗಾ''
ಆದರೀಗದು ಸುವಿಶಾಲ ಆಲವಲ್ಲ;
ಬರೀ ಹುಲ್ಲು
ಹಚ್ಚನೇ ಹಸಿರು ಹುಲ್ಲು
ನಗರಗಳಲ್ಲೀಗ ಬರೀ ಹುಲ್ಲನ್ನೇ ಬೆಳೆಸಲಾಗುತ್ತದೆ
ಅಲಂಕಾರಕ್ಕಾಗಿ.
ನಮ್ಮ ಬದುಕು
ನಮಗಷ್ಟೇ ಎಂದು ಯೋಚಿಸುವ
ನೂಕ್ಲಿಯರ್ ಕುಟುಂಬಗಳ ಮನೆಯಲ್ಲೀಗ
ಹಳೆಯ ಗ್ರೂಪ್ ಫೋಟೋಗಳು ಮಾಯವಾಗುತ್ತಿವೆ
ಮನೆಗಳಲ್ಲಿ ನಾಯಿಗಳಿರದಿದ್ದರೂ...,
'ನಾಯಿಗಳಿವೆ ಎಚ್ಚರಿಕೆ 'ಯ ಫಲಕ
ತಗುಲಿಸಿಕೊಂಡ ಬಾಗಿಲುಗಳು
ತೆರೆಯುವುದೇ ಅಪರೂಪ !

**ಪ್ರೊ|| ಸಿ. ವಿ. ಪಾಟೀಲ್**
ಕವಿಕಾವ್ಯ, ೫ನೇ ಮುಖ್ಯರಸ್ತೆ, ೯ನೇ ತಿರುವು
ಹೈಸ್ಕೂಲ್ ಬಡಾವಣೆ, ಹರಿಹರ

# ನಮ್ಮ ಉಪಯುಕ್ತ ಪ್ರಕಟಣೆಗಳು

www.mastemindbooks.com




























5 ಶೀರ್ಷಿಕೆಗಳು




**ಪ್ರಕೃತಿ ಸಂಜೀವಿನಿ ಮಾಲೆ**

- ಇಂಗು
- ಜೇನುತುಪ್ಪ
- ನೆಲ್ಲಿಕಾಯಿ
- ತುಳಸಿ
- ಪಪ್ಪಾಯಿ
- ನಿಂಬೆಹಣ್ಣು
- ದಾಳಿಂಬೆ
- ಅರಿಶಿಣ
- ಬೇವು
- ಬೆಳ್ಳುಳ್ಳಿ

10 ಶೀರ್ಷಿಕೆಗಳು ತಲಾ ರೂ.30/-
















ಪುಸ್ತಕ + VCD ರೂ. 175/-

ನವಕರ್ನಾಟಕ ಮಳಿಗೆಗಳು, ಪ್ರದರ್ಶನ ಮತ್ತು ಎಲ್ಲ ಪುಸ್ತಕ ಮಳಿಗೆಗಳಲ್ಲಿ ನಮ್ಮ ಪ್ರಕಟಣೆಗಳು ಲಭ್ಯ.



## ವಾಸನ್ ಪಬ್ಲಿಕೇಷನ್ಸ್

ನಂ. 25, ವಾಸನ್ ಟವರ್ಸ್, ಗೂಡ್ಸ್ ಶೆಡ್ ರಸ್ತೆ, ಬೆಂಗಳೂರು - 560 053 ದೂ : 080 - 2670 5679

# Innovation Concepts for MIL-GRADE Solutions



Concept Shapers has a full fledged design & manufacturing setup for Rugged Systems and Integrated Solutions for Defense and Industry.

*Rugged solutions for Defense & Industry*



The one stop computing solution for mission critical applications. Available in single, dual and multi-display configurations. VME, CPCI or any other industrial architecture can be customised.

**cVIEW**



6.4” to 24” diagonal sizes of MIL-GRADE TFT LCD solutions with multiple Video signal input options. High resolutions and luminiscence are featured.



Small display, low-power, Fanless systems for ‘On-the-Move’ Harsh Environmental applications. Most effective rugged solutions in its category!

**cRACK**



All-Integrated VME based compact size system for multi-level processing applications. Can be offered with or without integrated displays.



® Open Mind Creative Solutions...

**CONCEPT SHAPERS**®
*& Electronics Pvt. Ltd.*
An ISO 9001 : 2000 Company

Head Office : 103, Veena Industrial Estate, Behind Monginis Factory, Off Link Road, Andheri (W), Mumbai-400 053. India.
Phone : + 91-22-2673 6545/6591/6737 Fax : + 91-22-2673 6635
Branch Office : Hyderabad & Bangalore
contactus@conshape.com • www.conceptshapers.com

# ದೇವರ ಆತ್ಮಹತ್ಯೆ



ಶ್ರೀಮನ್ನಾರಾಯಣನು ಬಿಡುವಾಗಿದ್ದನು. ದಶಾವತಾರ ಮುಗಿದಿತ್ತು. ದುಷ್ಟರನ್ನು ನಿಗ್ರಹಿಸಿದ್ದನು. ಶಿಷ್ಟರನ್ನು ಅನುಗ್ರಹಿಸಿದ್ದನು. ಇಡೀ ಭೂಮಂಡಲ ಶಿಷ್ಟರ ಬೀಡಾಗಿತ್ತು. ಅಲ್ಲಲ್ಲಿ ಒಂದೊಂದು ರಾಕ್ಷಸ ಕುಡಿಗಳು ಚಿಗುರಲು ಪ್ರಯತ್ನಿಸಿದರೂ ಭಕ್ತರು ಪರಿಣಾಮಕಾರಿಯಾಗಿ ಅವರನ್ನು ನಿಗ್ರಹಿಸುತ್ತಿದ್ದರು. ಭೂಲೋಕದಲ್ಲಿ ಮತ್ತೆ ಅವತಾರ ತಾಳುವ ದಿನಗಳು ಹತ್ತಿರ ಇದ್ದಂತಿರಲಿಲ್ಲ. ಕ್ಷೀರಸಾಗರದಲ್ಲಿ ಹಾವಿನ ಹಾಸಿಗೆಯ ಮೇಲೆ ಮಲಗಿ ವಿರಾಮದ ಸುಖ ಅನುಭವಿಸುತ್ತಿದ್ದನು. ಲಕ್ಷ್ಮಿಯು ಸತಿಧರ್ಮಕ್ಕನುಗುಣವಾಗಿ ಎರಡೂ ಕೈಗಳಿಂದ ಕಾಲುಗಳನ್ನು ಒತ್ತುತ್ತಿದ್ದುದು ಹಿತಕರವಾಗಿತ್ತು. ಆಕೆಯ ಕೈ ದೀರ್ಘವಾಗಿರಲಿಲ್ಲವೋ ಏನೋ ಪರಮಾತ್ಮನ ಕುತ್ತಿಗೆಯವರೆವಿಗೆ ಬಂದಿರಲಿಲ್ಲ. ಪತಿ ಪರಾಯಣೆಯಾದ ಮಡದಿಯತ್ತ ದಯಾಮಯನ ದೃಷ್ಟಿ ಹರಿಯಿತು. ಇದೇ ಸಮಯದಲ್ಲಿ ಮನ್ಮಥನು ತನ್ನ ಆಯುಧಗಳು ಸುಸ್ಥಿತಿಯಲ್ಲಿವೆಯೇ ಎಂಬುದನ್ನು ಪರೀಕ್ಷಿಸುತ್ತಿದ್ದನು. ಹೀಗಿರುವಾಗ ಒಂದು ಹೂವಿನ ಬಾಣವು ಆಕಸ್ಮಿಕವಾಗಿ ಹಾರಿತು. ಪರಮಾತ್ಮನ ಎದೆಯನ್ನು ಸೇರಿತು !

ವಾಚಕ ಮಹಾಶಯರು ಈ ಮಾತುಗಳಲ್ಲಿ ಶಂಕೆ ವ್ಯಕ್ತಪಡಿಸಬಾರದೆಂದು ಕೋರುತ್ತೇವೆ. ಭವ್ಯ ಭಾರತದಲ್ಲಿ ನಡೆದ ಇಂತಹದ್ದೇ ಘಟನೆಯನ್ನು ಪರಾಮರ್ಶಿಸಬೇಕು. ಒಂದು ದಿನ ಸರಿರಾತ್ರಿ. ಮೂವರು ಸಭ್ಯ ಯುವಕರು ಒಂದು ಮೋಟಾರ್ ಸೈಕಲ್ಲಿನಲ್ಲಿ ಹೋಗುತ್ತಿದ್ದರು. ಇವರು ಭಯೋತ್ಪಾದಕರಿರಬಹುದು ಎಂಬ ಅನುಮಾನವು ಪೊಲೀಸಿನವರನ್ನು ಕಾಡಿತು. ಸಜೀವವಾಗಿಯೇ ಹಿಡಿಯಬೇಕೆಂದು ಬೈಕಿನಲ್ಲಿ ಅವರ ಬೆನ್ನಟ್ಟಿದರು. ಆದರೆ ದೈವನಿಯಮವೇ ಬೇರೆ ಇತ್ತು. ಅವರಲ್ಲಿ ಒಬ್ಬನಾದರೂ ಗುಂಡಿಗೆ ಬಲಿಯಾಗಬೇಕೆಂದು ವಿಧಿ ನಿರ್ಧರಿಸಿತ್ತು. ಭಾರತದ ರಸ್ತೆಗಳ ಸ್ಥಿತಿ ತಮಗೆ ತಿಳಿದದ್ದೆ. ಕುದುಕಲು ರಸ್ತೆಯಲ್ಲಿ ಪೊಲೀಸರು ಹೋಗುತ್ತಿದ್ದಾಗ ಕುಲುಕಾಟದಿಂದ ಬಂದೂಕಿನಿಂದ ಒಂದು ಗುಂಡು ಆಕಸ್ಮಿಕವಾಗಿ ಹಾರಿತು. ಓರ್ವ ಯುವಕನ ಪ್ರಾಣಪಕ್ಷಿ ಹಾರಿತು. 'ಇದು ನಕಲಿ ಎನ್‌ಕೌಂಟರ್' ಎಂದು ಸಭ್ಯ ಪೊಲೀಸರ ಕಾರ್ಯ ವೈಖರಿಯನ್ನು ಪ್ರಶ್ನಿಸುವ ಪಾಖಂಡಿಗಳೂ ಇರಬಹುದು. ಮನ್ಮಥ ವಿಷಯದಲ್ಲಿ ಧರ್ಮಭೀರುಗಳಾದ ತಾವು ಆ ರೀತಿ ವರ್ತಿಸುವುದಿಲ್ಲವೆಂದು ದೃಢವಾಗಿ ನಂಬಿದ್ದೇವೆ. ವೈಕುಂಠದ ರಸ್ತೆಗಳೂ ಕುದುಕಲು ರಸ್ತೆಗಳೇ ? ಮನ್ಮಥ ಯಾವ ರಥದ ಮೇಲೆ ಹೋಗುತ್ತಿದ್ದ ಮುಂತಾದ ಪ್ರಶ್ನೆಗಳನ್ನು ವಾಚಕ ಮಹಾಶಯರು ಎತ್ತುವುದಿಲ್ಲವೆಂಬುದನ್ನು ಅರಿತಿರುವೆವು. ಪೊಲೀಸರ ಬಂದೂಕಿನಿಂದ ಆಕಸ್ಮಿಕವಾಗಿ ಗುಂಡು ಹಾರಿದಂತೆಯೇ ಮನ್ಮಥನ ಬಿಲ್ಲಿನಿಂದಲೂ ಬಾಣ ಹಾರಿತೆಂಬುದಷ್ಟೇ ಸತ್ಯ ಎಂಬುದನ್ನು ಅರಿಕೆ ಮಾಡುತ್ತೇವೆ.

ಮನ್ಮಥನ ಬಾಣ ತಾಕಿದಾಗ ಮಹಾವಿಷ್ಣುವು ಮನೋವಿಕಾರಕ್ಕೆ ಗುರಿಯಾದನು. ದೇವಾನುದೇವತೆಗಳಿಗೆ ಇಂತಹ ಸ್ಥಿತಿಯಲ್ಲೇ ಮನೆ ಮಠ ನೆನಪಾಗುವುದು. ವಿಷ್ಣುವಿಗೆ ತನ್ನ ದಾಂಪತ್ಯ ಕರ್ತವ್ಯ ನೆನಪಾಯಿತು. ಇದರಲ್ಲಿ ನಿರತನಾಗಿರಬೇಕೆಂದಿರುವಾಗ, ಅಕಟಕಟ ದುರ್ವಿಧಿಯನೇನೆಂಬೆನು, 'ಶ್ರೀರಾಮನ ಮೇಲೆ ಆಣೆ' ಎಂಬ ಸವಾಲಿನ ಮಾತು ಪರಮಾತ್ಮನ ಕೀಲಿಗಳನ್ನು ಅಪ್ಪಳಿಸಿತು.

ತನ್ನೆಲ್ಲ ಅವತಾರಗಳಿಗಿಂತ ಭಾರತೀಯರಿಗೆ 'ರಾಮಾವತಾರ'ದ ಬಗ್ಗೆಯೆ ಒಲವು ಹೆಚ್ಚು. ತಾನು ಹುಟ್ಟಿದ ಸ್ಥಳ, ಅಂಬೆಗಾಲಿಟ್ಟ ಜಾಗ, ಓಡಾಡಿದ ಸ್ಥಳ, ನಿರ್ಮಿಸಿದ ಸೇತುವೆ ಇಂತಹವುಗಳೆಲ್ಲ ಅವರಿಗೆ ಪರಮಪವಿತ್ರ. ಆಗಾಗ್ಗೆ ಇದನ್ನು ನೆನಪಿಸುತ್ತಿದ್ದ ಘಟನೆಗಳು ಸಂಭವಿಸುತ್ತಿದ್ದವು. ಈಗ ಈ ಪವಿತ್ರ ಕದನಕ್ಕೆ ನಾಂದಿ ಹಾಡಿದ್ದು ತನ್ನ ಯಾವ ಕಾರ್ಯ ಎಂದು ಕುತೂಹಲ ಕಾಡಿತು. ಅವೇಳೆಯಲ್ಲಿ ಬಂದ ನಾದ ಬೇಸರ ತರಿಸಿದರೂ ಅದನ್ನು ಬದಿಗೊತ್ತಿ ಕುತೂಹಲದಿಂದ ಆಲಿಸಿದರು. ವಿಷಯ ಸಂಪೂರ್ಣ ಅವರ ಪ್ರಜ್ಞೆಗೆ ಬಂದಿತು.

ಮಹಿಷಾಸುರ ನಾಡಿನಲ್ಲಿ ವಿಧಾನ ಪರಿಷತ್ತು ಎಂಬುದು ಇದೆಯಷ್ಟೆ. ಅದರ ಮೂರು ಸ್ಥಾನಗಳಿಗೆ ಚುನಾವಣೆ ನಡೆಯಿತು. ಸಂಪ್ರದಾಯದಂತೆ ಆಡಳಿತ ಪಕ್ಷವೇ ಎಲ್ಲ ಸ್ಥಾನಗಳನ್ನೂ ಕಬಳಿಸಿತು. ಇದು ಕದನಕ್ಕೆ ಮೂಲದ್ರವ್ಯ ಆಯಿತು.

''ಹಣ, ಅಧಿಕಾರದ ಗೆಲುವು ಇದು'' ವಿಪಕ್ಷಗಳ ಆರೋಪ.

''ಇಂತಹ ವೃಥಾ ಆರೋಪ ಚುನಾಯಿತ ಪ್ರತಿನಿಧಿಗಳಿಗೆ ಮಾಡಿದ ಅವಮಾನ. ಹೀಗೇ ಆರೋಪ ಮಾಡುತ್ತಿದ್ದರೆ ಚುನಾಯಿತ ಪ್ರತಿನಿಧಿಗಳೇ ಬೀದಿಯಲ್ಲಿ ನಿಮ್ಮನ್ನು ವಿಚಾರಿಸಿಕೊಳ್ಳುತ್ತಾರೆ'' ಆಡಳಿತ ಪಕ್ಷದ ನಾಯಕರ ಕಿಡಿ.

ಮುಖ್ಯಮಂತ್ರಿಗಳ ಸೂಚನೆಯನ್ನು ಸಮರ್ಪಕವಾಗಿ ಗ್ರಹಿಸುವಷ್ಟು ಬುದ್ಧಿ ಚುನಾಯಿತ ಪ್ರತಿನಿಧಿಗಳಿಗೆ ಇರಲಿಲ್ಲ. ವಿರೋಧ ಪಕ್ಷದ ನಾಯಕರನ್ನು ಸದೆ ಬಡಿಯಿರಿ ಎಂದು ಪರೋಕ್ಷವಾಗಿ ಹೇಳಿದರೂ ಅದು ಕಾರ್ಯಗತ ಆಗಲಿಲ್ಲ. ವಿಪಕ್ಷಗಳ ಆರೋಪಕ್ಕೆ ತೆರೆ ಬೀಳಲಿಲ್ಲ.

''ಭ್ರಷ್ಟಾಚಾರ ಎಸಗಿಲ್ಲ ತಾನೆ, ಶ್ರೀರಾಮನ ಮೇಲೆ ಆಣೆ ಇಡಿ'' ವಿಪಕ್ಷಗಳ ಸವಾಲು.

ಪ್ರತಿಪಕ್ಷದವರ ಸವಾಲು. ಸುಮ್ಮನಿರುವಂತಿಲ್ಲ. ಪ್ರತಿಕ್ರಿಯಿಸಲೇ ಬೇಕು. ಸತ್ಯ ವಾಕ್ಯಕೆ ತಪ್ಪಿ ನಡೆದರೆ ಮೆಚ್ಚನಾ ಪರಮಾತ್ಮನ ನೆನಪಾಯಿತು.

''ನಾನು ಸಿದ್ಧ'' ಎಂದರು.

ರಣರಂಗ ಸಿದ್ಧವಾಯಿತು.

ಶ್ರೀಮನ್ನಾರಾಯಣನಿಗೆ ಕುತೂಹಲ.

ಶ್ರೀರಾಮನ ವಿಗ್ರಹವೊಂದು ಆಡಳಿತ ಪಕ್ಷದ ನಾಯಕನ ಕೈ ಸೇರಿತು.

''ಈ ಶ್ರೀರಾಮನ ಮೇಲೆ ಆಣೆ.''

ಶ್ರೀಮನ್ನಾರಾಯಣನ ಮೈಯೆಲ್ಲ ಕಿವಿಯಾಯಿತು. ''ಪಕ್ಷದ ತತ್ವ ಸಿದ್ಧಾಂತಗಳ ಮೇಲಿನ ನಂಬಿಕೆಯಿಂದ, ಆಡಳಿತ ವೈಖರಿ ನೋಡಿ...''

''ನೋಡಿ'' ಏನು ಮುಂದಕ್ಕೆ ?

''ಮತ ನೀಡಿದ್ದಾರೆ.''

ಶ್ರೀಮನ್ನಾರಾಯಣ ಬಿಳಿಚಿಕೊಂಡ.

''ಚುನಾವಣೆಯಲ್ಲಿ ಭ್ರಷ್ಟಾಚಾರ ನಡೆದಿಲ್ಲ.''

ಆ ಪರಮಾತ್ಮನಿಗೆ ಸಿಡಿಲು ಬಡಿದಂತಾಯಿತು.

ತನ್ನ ಪರಮ ಭಕ್ತರು ಸದಾ ನನ್ನ ನಾಮ ಜಪಿಸುವವರು, ಚುನಾವಣೆಯಲ್ಲಿ ಭ್ರಷ್ಟಾಚಾರ ನಡೆದಿಲ್ಲ ಎನ್ನುತ್ತಿದ್ದಾರೆ. ತಾನು ನಿರುಪಯುಕ್ತ ಅನ್ನಿಸಿತು ಭಗವಂತನಿಗೆ. ಆತ್ಮಹತ್ಯೆಗೆ ಶರಣಾದ !

ಇನ್ನೂ ಜೀವ ಉಳಿದಿರಬಹುದೆ ಎಂಬುದನ್ನು ಪರೀಕ್ಷಿಸಲು ಧನ್ವಂತರಿ ಓಡಿಬಂದ.

ಎಚ್. ಎಲ್. ಕೇಶವಮೂರ್ತಿ
ಪ್ರಾಧ್ಯಾಪಕರು. ೨೦೪೪, ೧೨ನೆಯ ಅಡ್ಡರಸ್ತೆ, ಕಲ್ಲಹಳ್ಳಿ ಬಡಾವಣೆ, ಮಂಡ್ಯ - ೫೭೧ ೪೦೧

# ನ್ಯಾಯಾಂಗದಲ್ಲಿ ಭ್ರಷ್ಟಾಚಾರ

**ಕೋ. ಚೆನ್ನಬಸಪ್ಪ**

ಸೆಪ್ಟೆಂಬರ್ ೮, ೨೦೦೮ರಂದು ಭಾರತೀಯ ನ್ಯಾಯಾಂಗದ ಇತಿಹಾಸದಲ್ಲೊಂದು ಅಬ್ಬರದ ಬರಸಿಡಿಲಿನ ಸದ್ದಾಯಿತು. ಪಂಜಾಬ್ ಮತ್ತು ಹರ್‍ಯಾಣ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಶ್ರೀಮತಿ ನಿರ್ಮಲ್‌ಜಿತ್ ಕೌರ್ ಅವರ ಮನೆಗೆ ೧೫ಲಕ್ಷ ರೂಪಾಯಿಗಳು ತುಂಬಿದ ಲಂಚದ ಚೀಲವೊಂದು ತಲುಪಿತು! ಅದನ್ನು ಕಂಡ ಕೂಡಲೇ ನ್ಯಾಯಮೂರ್ತಿ ಕೌರ್ ಪೊಲೀಸರಿಗೆ ಸುದ್ದಿ ತಿಳಿಸಿ: 'ಇದನ್ನು ಯಾರು ಕಳಿಸಿದರು ? ಯಾರಿಗೆ ಕಳಿಸಿದರು ? ಯಾತಕ್ಕಾಗಿ ಕಳಿಸಿದರು ?' ಎಂಬುದನ್ನು ವಿಚಾರಿಸಬೇಕೆಂದು ಸೂಚಿಸಿದರು!

ಈ ಸುದ್ದಿ ಕೇಳಿದ ಪೊಲೀಸರು ಕಕ್ಕಾಬಿಕ್ಕಿ ಆದರು! ದಂಡನೀಯ ಅಪರಾಧ – ಸರ್ಕಾರಿ ನೌಕರ ಲಂಚ ತಿಂದಿದ್ದಾನೆ, ಲಂಚ ಪಡೆಯಲಿದ್ದಾನೆ ಎಂದು ಯಾರಾದರೂ ಸುದ್ದಿ ಕೊಟ್ಟರೆ ಪೊಲೀಸರು ಪ್ರಥಮ ವರ್ತಮಾನ ದಾಖಲಿಸಿಕೊಂಡು ವಿಚಾರಣೆ ಕೈಗೆತ್ತಿಕೊಳ್ಳಬೇಕು. ಆದರೆ ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಹಾಡು ಹಗಲು ನೂರು ಜನರ ಸಮ್ಮುಖದಲ್ಲಿಯೇ ಮುಚ್ಚು ಮರೆ ಇಲ್ಲದೆ ಲಂಚ ಹೊಡೆದರೂ ಯಾವ ಪೊಲೀಸರೂ ಕೇಸು ದಾಖಲು ಮಾಡುವಂತಿಲ್ಲ; ವಿಚಾರಣೆ ಕೈಗೆತ್ತಿಕೊಳ್ಳುವಂತಿಲ್ಲ!! ಯಾಕೆಂದರೆ ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳ ವಿರುದ್ಧ ಸರ್ವೋಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಮೂರ್ತಿಗಳ ಅನುಮತಿಯಿಲ್ಲದೆ ಪೊಲೀಸರು ಪ್ರಥಮ ಮಾಹಿತಿಯನ್ನು ದಾಖಲುಮಾಡುವಂತಿಲ್ಲ! ಹಾಗೆಂದು ೧೯೯೧ರಲ್ಲಿ ಸರ್ವೋಚ್ಚ ನ್ಯಾಯಾಲಯ ನ್ಯಾಯಮೂರ್ತಿ ವೀರಸ್ವಾಮಿ ಕೇಸಿನಲ್ಲಿ ತೀರ್ಪುನೀಡಿದೆ. [ನೋಡಿ: ೧೯೯೧(೩) SCC ೬೫೫]

> ನ್ಯಾಯಾಂಗವು ಭ್ರಷ್ಟಾಚಾರದ ಪಿಡುಗಿನಿಂದ, ರೋಗದಿಂದ ಪಾರಾಗಲು ಏನಾದರೂ ಉಪಾಯ ಇದೆಯೆ ? ಈಗಿನ ಪರಿಸ್ಥಿತಿಯನ್ನು ನೋಡಿದರೆ ಇದು ಕ್ಯಾನ್ಸರ್‌ನಂತೆ ಗುಣವಾಗದ ವ್ಯಾಧಿಯಂತೆ ಕಾಣುತ್ತದೆ. ಇದನ್ನು ತಡೆಯಲು, ನಿರ್ಮೂಲನೆ ಮಾಡಲು ಸಂವಿಧಾನದಲ್ಲಿ ಪರಿಣಾಮಕಾರಿಯಾದ ಮಾರ್ಗ ಇಲ್ಲವೇ ಇಲ್ಲ. ಇಂಪೀಚ್ ಮಾಡಿ ಭ್ರಷ್ಟರನ್ನು ಕೆಳಗಿಳಿಸುವ ಅಧಿಕಾರ ಸಂಸತ್ತಿಗೆ ಮಾತ್ರ ಇದೆ.



ಇದೆಂಥ ನ್ಯಾಯ ಎಂದು ನಾವು ನೀವು ನಿಬ್ಬೆರಗಾಗಿಹೋಗುತ್ತೇವೆ. ಹೌದು, ಅದು ಹಾಗೆಯೆ. ನ್ಯಾಯಮೂರ್ತಿಗಳು ನಮ್ಮ ನಿಮ್ಮಂಥ ಸಾಧಾರಣ ಪ್ರಜೆಗಳಲ್ಲ! ಅವರು ಅಸಾಮಾನ್ಯರು!! ಅದು ಹೇಗೆ ? ಹೇಗೆಂದರೆ ಅವರು ಏನೇ ಮಾಡಿದರೂ ಯಾರೂ ಅವರನ್ನು ಕೇಳಲಾಗದು, ಎಂದು ನಮ್ಮ ಸಂವಿಧಾನದಲ್ಲಿ ಠರಾಯಿಸಲಾಗಿದೆ! ಯಾಕೆಂದರೆ ನ್ಯಾಯಮೂರ್ತಿಗಳು ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಅನಿರ್ಬಂಧ ಸ್ವತಂತ್ರರು. ಹಾಗೆ ಅವರಿಗೆ ಅಂಥ ಅನಿರ್ಬಂಧ ಸ್ವಾತಂತ್ರ್ಯ ಇಲ್ಲದೆ ಹೋದರೆ ಅವರು ನಿರ್ಭಯವಾಗಿ, ಹಂಗು ಹೆದರಿಕೆ ಇಲ್ಲದೆ ನ್ಯಾಯ ಪರಿಪಾಲನೆ ಮಾಡಲಾರರು. ಇಲ್ಲದೆ ಹೋದರೆ ಅವರನ್ನು ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿಪಡಿಸಿ, ನ್ಯಾಯಾಂಗದ ಮುಖಕ್ಕೆ ಮಸಿ ಬಳಿದು, ಜನರಿಗೆ ನ್ಯಾಯಾಂಗದಲ್ಲಿ ವಿಶ್ವಾಸವೇ ಕುಸಿದುಹೋಗಿ ಪ್ರಜಾಸತ್ತೆಯ ಬುನಾದಿಯೇ ಅಲ್ಲಾಡಿ ಹೋಗುತ್ತದೆ ಎಂಬುದು ನ್ಯಾಯಾಂಗದ ಸ್ವಾತಂತ್ರ್ಯದ ಪ್ರತಿಪಾದಕರ ವಾದ.

ಹಾಗಾದರೆ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳು ಲಂಚ ತಿಂದರೆ, ಮಾಡಬಾರದ ಕೃತ್ಯ ಮಾಡಿದರೆ ಅವರನ್ನು ವಿಚಾರಣೆಗೆ ಗುರಿಪಡಿಸುವಂತೆಯೆ ಇಲ್ಲವೆ ? ವಿಚಾರಣೆಗೆ ಗುರಿಪಡಿಸಬಹುದು. ಸರ್ವೋಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಮೂರ್ತಿಗಳು, ಅಪರಾಧ ಮಾಡಿದ ಭ್ರಷ್ಟ ನ್ಯಾಯಮೂರ್ತಿಗಳ ಮೇಲೆ ಕೇಸು ದಾಖಲು ಮಾಡಲು ಅನುಮತಿ ಕೊಟ್ಟರೆ ಮಾತ್ರ ಪೊಲೀಸರು ವಿಚಾರಣೆ, ತಪಾಸಣೆ ಮಾಡಬಹುದು. ಇಲ್ಲದಿದ್ದರೆ ಪೊಲೀಸರು ಏನೂ ಮಾಡುವಂತಿಲ್ಲ. ನ್ಯಾಯಮೂರ್ತಿ ಕೌರ್ ಅವರು ಸುದ್ದಿ ಕೊಟ್ಟ ಕೂಡಲೆ ಪೊಲೀಸರು ಸರ್ವೋಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಮೂರ್ತಿಗಳ ಅಪ್ಪಣೆ ಕೇಳಿದರು. ಶ್ರೇಷ್ಠ ನ್ಯಾಯಮೂರ್ತಿ ಕೆ.ಜಿ. ಬಾಲಕೃಷ್ಣನ್ ಹಿಂದೆ ಯಾವ ಶ್ರೇಷ್ಠ ನ್ಯಾಯಮೂರ್ತಿಯೂ ಮಾಡದಿದ್ದ ಕೆಲಸ ಮಾಡಿದರು. ಚಂಡೀಗಢದ ಪೊಲೀಸರು ಈ ಸುದ್ದಿಯನ್ನು ದಾಖಲಿಸಿಕೊಂಡು ತಪಾಸಣೆ ಮಾಡಲು ಅಪ್ಪಣೆ ಕೊಟ್ಟರು. ಇದು ಭಾರತೀಯ ನ್ಯಾಯಾಂಗದ ಇತಿಹಾಸದಲ್ಲಿ ಮೊಟ್ಟ ಮೊದಲನೆಯದು.

ಈ ಹಿಂದೆ ಘನಪೆತ್ತ ಗೌರವಾನ್ವಿತ ಉಚ್ಚ ನ್ಯಾಯಾಲಯದ ಪ್ರಭುಗಳು ಈಗ ಜರುಗಿದ ಭ್ರಷ್ಟಾಚಾರಕ್ಕಿಂತಲು ಹೇಯ ಭ್ರಷ್ಟಾಚಾರದಲ್ಲಿ ತೊಡಗಿದ ಸಂದರ್ಭಗಳಲ್ಲಿ ಸರ್ವೋಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಮೂರ್ತಿಗಳು ಆ ಭ್ರಷ್ಟ ನ್ಯಾಯಮೂರ್ತಿಗಳ ಮೇಲೆ ಪೊಲೀಸರು ಕ್ರಮ ತೆಗೆದುಕೊಳ್ಳಲು ಅಪ್ಪಣೆ ಕೊಟ್ಟರಲಿಲ್ಲ. ರಾಷ್ಟ್ರಪತಿ ಅಬ್ದುಲ್ ಕಲಾಂ ನಿವೃತ್ತರಾಗುವ ನಿಕಟ ಪೂರ್ವದಲ್ಲಿ, ನ್ಯಾಯಮೂರ್ತಿ ಜಗದೀಶ್ ಭಲ್ಲ ಎನ್ನುವವರು ಉತ್ತರ ಪ್ರದೇಶದಲ್ಲಿ ೭೨೦೦ ಚದರ ಮೀಟರ್ ಭೂಮಿಯನ್ನು ಕೇವಲ ೫ ಲಕ್ಷ ರೂಪಾಯಿಗಳಿಗೆ ಕೊಂಡಿದ್ದರು. ನೊಯಿಡಾ ಬಡಾವಣೆಯಲ್ಲಿದ್ದ ಆ ಭೂಮಿಯ ಬೆಲೆ ಏಳು ಕೋಟಿ. ಈ ಭ್ರಷ್ಟಾಚಾರವನ್ನು ಕುರಿತು ವಿಚಾರಣೆ ಮಾಡಲು ಅನುಮತಿ ಕೇಳಿದಾಗ ಅಂದಿನ ಶ್ರೇಷ್ಠ ನ್ಯಾಯಮೂರ್ತಿ ಅನುಮತಿ ಕೊಡಲಿಲ್ಲ. ಆ ನ್ಯಾಯಮೂರ್ತಿಯನ್ನು ರಕ್ಷಿಸಿದರು. ಇಂಥ ಗಂಭೀರ ಆರೋಪವಿದ್ದರೂ ಅವರಿಗೆ ಶ್ರೇಷ್ಠ ನ್ಯಾಯಮೂರ್ತಿಯಾಗಿ ಭಡ್ತಿ ನೀಡಿ ರಾಷ್ಟ್ರಪತಿಗೆ ಶಿಫಾರಸು ಮಾಡಿದರು. ರಾಷ್ಟ್ರಪತಿ ಕಲಾಂ ಅದಕ್ಕೆ ಒಪ್ಪಲಿಲ್ಲ. ಆಗ ಸರ್ವೋಚ್ಚ ನ್ಯಾಯಾಲಯ ಏನು ಮಾಡಿತು ಗೊತ್ತೆ? ರಾಷ್ಟ್ರಪತಿ ಕಲಾಂ ನಿವೃತ್ತರಾಗುವವರೆಗೆ ಸುಮ್ಮನಿದ್ದು ತರುವಾಯ ಅದೇ ಭ್ರಷ್ಟ ನ್ಯಾಯಮೂರ್ತಿ ಭಲ್ಲರಿಗೆ ಭಡ್ತಿ ನೀಡಲು ಮತ್ತೆ ಶಿಫಾರಸು

ಮಾಡಿ ರಾಷ್ಟ್ರಪತಿಗೆ ಕಳಿಸಿದರು. ಅವರೀಗ ಒಂದು ಉಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಮೂರ್ತಿಗಳಾಗಿ ಗೌರವಾನ್ವಿತ ಪ್ರಭುಗಳಾಗಿದ್ದಾರೆ !! ಆ ಕರ್ಮಕಾಂಡದ ಕತೆಯನ್ನು ಮನೋಜ್ ಮಿಟ್ಟಾ ಎನ್ನುವವರು ಬರೆದಿದ್ದಾರೆ. ಆಸಕ್ತಿ ಉಳ್ಳವರು ೧೪-೯-೨೦೦೮ರ 'ಸಂಡೆ ಟೈಮ್ಸ್' ಪತ್ರಿಕೆ ಓದಬಹುದು.

ಇಂಥ ಹೇಯ ಹಗರಣಗಳು ಹಿಂದೆ ಎಷ್ಟೋ ನಡೆದಿದ್ದವು. ಅವುಗಳಲ್ಲಿ ಪ್ರಸಿದ್ಧವಾದವುಗಳ ಯಾದಿಯನ್ನು ಒಂದು ಪ್ರಸಿದ್ಧ ಪತ್ರಿಕೆ ಪ್ರಕಟಿಸಿತ್ತು. ಮದ್ರಾಸ್ ಉಚ್ಚ ನ್ಯಾಯಾಲಯದ ಶ್ರೀ ಕೆ. ವೀರಾಸ್ವಾಮಿ, ಅವರ ಖಾಸಾ ಅಳಿಯ ಪಂಜಾಬ್-ಹರ್ಯಾಣ ಉಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಮೂರ್ತಿ ಟಿ.ರಾಮಸ್ವಾಮಿ ಅವರು ಭ್ರಷ್ಟಾಚಾರ ನಿಯಂತ್ರಣ ಕಾಯಿದೆಯ ಕೆಳಗೆ ಅಪರಾಧ ಎಸಗಿದ್ದಾರೆಂದು ದಸ್ತಾವೇಜು ಸಹಿತ ಸಾಕ್ಷ್ಯ ಒದಗಿಸಿದ್ದರು. ರಾಮಸ್ವಾಮಿಯವರನ್ನು ಹುದ್ದೆಯಿಂದ ವಜಾ ಮಾಡಬೇಕೆಂದು ಸಂಸತ್ತಿನಲ್ಲಿ ಗೊತ್ತುವಳಿ ಮಂಡಿಸಲಾಗಿತ್ತು. ಆಗ ಅವರನ್ನು ಉಳಿಸಲು ಸಂಸತ್ತಿನ ಕಾಂಗ್ರೆಸ್ ಸದಸ್ಯರು ಗೈರು ಹಾಜರಾಗಿ ಗೊತ್ತುವಳಿ ಬಿದ್ದುಹೋಗುವಂತೆ ಉಪಾಯ ಮಾಡಿದರು ! ಅವರ ಹಾಲಿನಂಥ ಧವಳ ಕೀರ್ತಿಯನ್ನು ಕಾಪಾಡಿದರು !!

ಆದರೆ ಶ್ರೇಷ್ಠ ನ್ಯಾಯಮೂರ್ತಿ ಬಾಲಕೃಷ್ಣನ್ ಇತ್ತೀಚೆಗೆ ಕಲ್ಕತ್ತಾ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಸೌಮಿತ್ರ ಸೇನ್ ಅವರನ್ನು ಇಂಪೀಚ್ (ಹಳಿಯುವುದು) ಮಾಡಿ ಹುದ್ದೆಯಿಂದ ವಜಾಮಾಡುವಂತೆ ಶಿಫಾರಸ್ಸು ಮಾಡಿದ್ದಾರೆ. ನ್ಯಾಯಮೂರ್ತಿ ಸೇನ್ ವಕೀಲರಾಗಿದ್ದಾಗ ಒಂದು ಕಂಪನಿಯ ರಿಸೀವರ್ ಆಗಿ ನೇಮಕ ಆಗಿದ್ದರು. ಆ ಕಾಲಾವಧಿಯಲ್ಲಿ ಆ ಕಂಪನಿಯ ಮೂವತ್ತು ನಾಲ್ಕು ಲಕ್ಷ ರೂಪಾಯಿಗಳನ್ನು ತಮ್ಮ ಸ್ವಂತ ಖಾತೆಯಲ್ಲಿ ಬ್ಯಾಂಕಿನಲ್ಲಿಟ್ಟುಕೊಂಡು ಸ್ವಂತಕ್ಕೆ ಬಳಸಿದರೆಂಬುದು ಅವರ ಮೇಲಿನ ಆರೋಪ. ಇದನ್ನು ಪೊಲೀಸರಿಂದ ತಪಾಸಣೆ ಮಾಡಿಸದೆಯೆ ಅವರನ್ನು ವಜಾ ಮಾಡುವ ಇಂಪೀಚ್‌ಮೆಂಟ್ ಗೊತ್ತುವಳಿ ತರಲು ಶ್ರೇಷ್ಠ ನ್ಯಾಯಮೂರ್ತಿ ಬಾಲಕೃಷ್ಣನ್ ಶಿಫಾರಸ್ಸು ಮಾಡಿದ್ದಾರೆ, ಇದು ಅವರ ಹಿರಿಮೆ! ಅಂತೇ ಯಾರೂ ಮಾಡದಿದ್ದ ಧೈರ್ಯ ಮಾಡಿದ್ದಾರೆ- ನ್ಯಾಯಾಂಗದ ಶುಭ್ರ ಧವಳ ಕೀರ್ತಿಯನ್ನು ಕಾಪಾಡಲು.

**ಒಮ್ಮೆ ನ್ಯಾಯಮೂರ್ತಿಗಳಾಗಿ ಗದ್ದುಗೆಯ ಮೇಲೆ ಆಸೀನರಾದರೆ ಅವರನ್ನು ಕೆಳಗಿಳಿಸುವ ಯಾವ ಉಪಾಯವೂ ಇಲ್ಲ ಎಂಬಂತಾಗಿದೆ. ಈ ವಾಸಿಯಾಗದ ರೋಗದ ನಿವಾರಣೆಯ ಪ್ರಯತ್ನ ಆಗಾಗ ನಡೆಯುತ್ತಲೇ ಇದೆ. ಸರ್ವೋಚ್ಚ ನ್ಯಾಯಾಲಯ ಹನ್ನೆರಡು ಸೂತ್ರಗಳ ಒಂದು ನೀತಿ ಸಂಹಿತೆಯನ್ನು ರೂಪಿಸಿದೆ. ಅವುಗಳಲ್ಲಿ ಭ್ರಷ್ಟಾಚಾರಕ್ಕೆ ನೇರವಾಗಿ ಸಂಬಂಧಿಸಿದ ಒಂದಾನೊಂದು ಸೂತ್ರವೂ ಇಲ್ಲ.**

ಭ್ರಷ್ಟಾಚಾರ ಎಂತೆಂಥ ರೂಪದಲ್ಲಿ ತಾಂಡವ ಆಡುತ್ತದೆ ಎಂಬುದನ್ನು ಯಾವ ಮಹಾ ಕಲ್ಪನಾ ಪ್ರತಿಭೆಯ ಮಹಾಕವಿಗಳೂ ವರ್ಣಿಸಲಾರರು. ಉತ್ತರ ಪ್ರದೇಶದ ಘಾಜಿಯಾಬಾದ್ ಜಿಲ್ಲೆಯ ನ್ಯಾಯಾಂಗ ಇಲಾಖೆಯ 'ಡಿ' ವರ್ಗದ ಉದ್ಯೋಗಿಗಳ ೨೩ ಕೋಟಿ ರೂಪಾಯಿಗಳ ಪ್ರಾವಿಡೆಂಟ್ ಫಂಡ್ ಮೊತ್ತವನ್ನು ೩೪ ಜನ ನ್ಯಾಯಮೂರ್ತಿಗಳು ದುರುಪಯೋಗ ಮಾಡಿದ್ದಾರೆಂಬುದು ಬಯಲಿಗೆ ಬಂದಿದೆ! ಆ ೩೪ ಜನರಲ್ಲಿ ಹಾಲಿ ಸರ್ವೋಚ್ಚ ನ್ಯಾಯಾಲಯದ ಒಬ್ಬ ನ್ಯಾಯಮೂರ್ತಿಗಳು, ಅಲಹಾಬಾದ್, ಉತ್ತರಾಖಂಡ್, ಕಲ್ಕತ್ತಾ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳೂ ಭಾಗಿಯಾಗಿದ್ದಾರೆಂದು ಸಿ.ಬಿ.ಐ. ಮಾಹಿತಿ ಸಂಗ್ರಹಿಸಿದೆ. ಅವರ ಮೇಲೆ ಕ್ರಮ ತೆಗೆದುಕೊಳ್ಳಬೇಕೆಂದು ಶ್ರೇಷ್ಠ ನ್ಯಾಯಮೂರ್ತಿ ಬಾಲಕೃಷ್ಣನ್ ಅನುಮತಿ ನೀಡಿದ್ದಾರೆ. ಇದೂ ಭಾರತೀಯ ನ್ಯಾಯಾಂಗದ ಇತಿಹಾಸದಲ್ಲಿ ಒಂದು ಮೈಲಿಗಲ್ಲು!

ಭ್ರಷ್ಟಾಚಾರ ಯಾವ ಯಾವ ಸ್ವರೂಪ ತಾಳುತ್ತದೆ ಎಂಬುದನ್ನು ನರಮಾನವರು ಊಹಿಸಲಾರರು. ಅದರಲ್ಲೂ ಉಚ್ಚ ನ್ಯಾಯಾಲಯದ ಬುದ್ಧಿವಂತ ಗೌರವಾನ್ವಿತ ಪ್ರಭುಗಳು ಯಾವ ಯಾವ ರೂಪದಲ್ಲಿ ಭ್ರಷ್ಟಾಚಾರದಲ್ಲಿ ತೊಡಗುತ್ತಾರೆಂಬುದು ಸುಲಭವಾಗಿ ಬಯಲಿಗೆ ಬರುವುದಿಲ್ಲ. ನ್ಯಾಯಮೂರ್ತಿ ನಿರ್ಮಲ್‌ಜಿತ್ ಕೌರ್ ಮನೆಬಾಗಿಲಿಗೆ ಬಂದ ಕರೆನ್ಸಿ ನೋಟುಗಳ ಕಟ್ಟುಗಳನ್ನು ಪಡೆಯುವುದು ಎಲ್ಲರಿಗೂ ತಿಳಿಯುವಂಥ ಭ್ರಷ್ಟಾಚಾರ. ಆ ಹಣ ನ್ಯಾಯಮೂರ್ತಿ ಕೌರ್ ಅವರಿಗಾಗಿ ಅಲ್ಲ, ನ್ಯಾಯಮೂರ್ತಿ ನಿರ್ಮಲ್ ಯಾದವ ಎಂಬ ಇನ್ನೊಬ್ಬ ನ್ಯಾಯಮೂರ್ತಿಗಳಿಗಾಗಿ ಕಳಿಸಿದ್ದು, ಎಂದು ತಂದುಕೊಟ್ಟ ವ್ಯಕ್ತಿಯೆ ಹೇಳಿಕೆ ಕೊಟ್ಟಿದ್ದಾನೆ. ನಗದು ರೂಪದಲ್ಲಿ ಅಲ್ಲದ ನ್ಯಾಯಮೂರ್ತಿ ಭಲ್ಲ ಪಡೆದಂಥ ಭೂಮಿ ಖರೀದಿಯೂ ಭ್ರಷ್ಟಾಚಾರದ


*With Best Compliments From :*

**KODAVA SAMAJA BANGALORE ®**

No. 7, 1st Main Road, Vasanthanagar, Bangalore - 560 052. Ph. : 22260188, 22351088.
e-mail : kodavasamajablr@vsnl.net www.kodavasamajabangalore.com

| President | Hon. Secretary | Treasurer |
|---|---|---|
| Berera M Aiyanna | Mandeda A Ravi Uthappa | Nuchimaniyanda P Poonacha |
| **Vice President** | **Jt. Secretary** | **Jt. Treasurer** |
| Iychodiyanda M Devappa | Karthachira B Ganesh | Malachira B Aiyappa |

-: ALLIED UNITS :-

KODAVA SAMAJA EDUCATION COUNCIL, PHONE : 25250894
KODAVA SAMAJA SPORTS AND RECREATION CLUB, PHONE : 22258848
KODAVA SAMAJA EDUCATION FUND, PHONE : 22354547
KODAVA SAMAJA MEDICAL WELFARE FUND, PHONE : 22260188
SREE KAVERI PLACEMENT SERVICE, PHONE : 22354547
KODAVA SAMAJA WOMEN'S COUNCIL, PHONE : 22350188
KODAVA SAMAJA YOUTH COUNCIL, PHONE : 22260188

ನ್ನೊಂದು ಸಾಮಾನ್ಯ ರೂಪ. ಇವುಗಳಲ್ಲದೆ ೧೯೫೭ರಲ್ಲಿ ುಂಬಯಿ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಎಂ. ಭಟ್ಟಾಚಾರ್ಜಿ ಎಪ್ಪತ್ತು ಲಕ್ಷ ರೂಪಾಯಿಗಳನ್ನು ುಹಮ್ಮಡನ್ ಲಾ' ಎಂಬ ಪುಸ್ತಕ ಬರೆಯಲು ಸಂಭಾವನೆ ನ್ನು ಗ್ರಂಥ ರಚನೆಗೆ ಮುಂಚೆಯೆ ಪಡೆದಿದ್ದರು! ುಂಬಯಿ ಉಚ್ಚ ನ್ಯಾಯಾಲಯದ ವಕೀಲರು ಇದನ್ನು ಯಲಿಗೆಳೆದು ಅವರನ್ನು ಗಬ್ಬೆಬ್ಬಿಸಿ ರಾಜೀನಾಮೆ ಡುವಂತೆ ಮಾಡಿದರು!

ಭ್ರಷ್ಟಾಚಾರದ ಅನಂತ ಮುಖಗಳನ್ನು ಲೆಕ್ಕ ಹಾಕುವುದು ಾಧ್ಯ. ಕಲ್ಕತ್ತಾ ಉಚ್ಚ ನ್ಯಾಯಾಲಯದ ಅಜಿತ್ ನ್‌ಗುಪ್ತ ಎಂಬ ನ್ಯಾಯಮೂರ್ತಿ ಕಳ್ಳ ಸಾಗಾಣಿಕೆ ಾಡುವವರಿಗೆ ನಿರೀಕ್ಷಣಾ ಜಾಮೀನು ಆಜ್ಞೆಗಳನ್ನು ಯಪಾಲಿಸಿ ಹಿಂಬಾಗಿಲಿನಿಂದ ಅಕ್ರಮ ಸಂಭಾವನೆ ಡೆಯುತ್ತಿದ್ದರು! ಪಂಜಾಬ್-ಹರ್‍ಯಾಣ ಉಚ್ಚ ್ಯಾಯಾಲಯದ ಮೂವರು ಘನವೆತ್ತ ಗೌರವಾನ್ವಿತ ಲಾರ್ಡ್ಸ್ ಂಜಾಬ್ ಲೋಕಸೇವಾ ಆಯೋಗದ ಅಧ್ಯಕ್ಷ ಸಿಧು ಎಂಬ ಹನೀಯರಿಂದ ತಮ್ಮ ಮಕ್ಕಳಿಗೆ, ಸಂಬಂಧಿಕರಿಗೆ ರೀಕ್ಷೆಯಲ್ಲಿ ರ್‍ಯಾಂಕ್ ಬರುವಷ್ಟು ಅಧಿಕ ಅಂಕಗಳನ್ನು ಡುವಂತೆ ಏರ್ಪಾಟು ಮಾಡಿದ್ದರು. ಪ್ರತಿ ಫಲವಾಗಿ ಸಿಧು ಅವರ ಪರವಾಗಿ ರ್ಪುಗಳನ್ನು ಕೊಟ್ಟು ಋಣ ತೀರಿಸಿದರು. ಮಕ್ಕಳಿಗೆ ಸಿಕ್ಕ ನೌಕರಿ ತಮಗೆ ದೊರೆತ ತಿಫಲ!! ಇದು ಕಣ್ಣಿಗೆ ಕಾಣದ, ಕಂಡು ಹಿಡಿಯಲು ಕಷ್ಟದಾಯಕ ಭ್ರಷ್ಟಾಚಾರ!!




ಈ ಹೇಸಿಗೆಯ ಚೌಕಾಸಿಯ ಕತೆಯನ್ನು ಕೇಳಿ, ಓದಿ ಬೇಸರವಾಗಬಹುದು; ಕರಿಕೆಯಾಗಬಹುದು, ಇದಕ್ಕಿಂತಲೂ ಹೇಯ ಭ್ರಷ್ಟಾಚಾರದ ಮಾದರಿಯನ್ನೊಂದು ಖಲಿಸಿ ಮುಗಿಸುತ್ತೇನೆ. ಅದು ಬಾಯಿಂದ ಆಡಲು ಕೈಯಿಂದ ಬರೆಯಲೂ ಬಾರದ ಚಾತಿ ನೀಚ ಭ್ರಷ್ಟಾಚಾರ. ನವೆಂಬರ್ ೨೦೦೨ರಲ್ಲಿ, ರಾಜಾಸ್ತಾನದ ಉಚ್ಚ ್ಯಾಯಾಲಯದ ನ್ಯಾಯಮೂರ್ತಿ ಅರುಣ್ ಚುದನ್ ಎಂಬಾತ ಡಾ|| ಸುನೀತ ಾಳವೀಯ ಎಂಬ ಪಕ್ಷಗಾರರ ಕೇಸಿನಲ್ಲಿ ತಮ್ಮಂತೆ ತೀರ್ಪು ಕೊಡಲು, ಚೆಲುವೆ ೊಬ್ಬಳ ಶಯ್ಯಾಸುಖ ಕೊಡಲು ವ್ಯವಸ್ಥೆ ಮಾಡಲು ಏರ್ಪಾಟು ಮಾಡಿದ್ದರಂತೆ. ದ ವರ್ಷ (೨೦೦೮) ದೆಹಲಿ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿ ಸುಮಿತ ಖರ್ಜಿ, ದೆಹಲಿ ಅಭಿವೃದ್ಧಿ ಪ್ರಾಧಿಕಾರದ ಭೂವಿವಾದಕ್ಕೆ ಸಂಬಂಧಪಟ್ಟಂತೆ ಕ್ಷಗಾರರಿಗೆ ಅನುಕೂಲವಾದ ತೀರ್ಪು ಕೊಡಲು ಹೆಣ್ಣಿನ ಸಂಗ ಸುಖವನ್ನು ಯಸಿದ್ದನ್ನು ಸಿ.ಬಿ.ಐ. ತನಿಖಾ ದಳ ಟೇಪ್ ರೆಕಾರ್ಡ್ ಮಾಡಿಕೊಂಡಿತ್ತು. ಅದನ್ನು ದ್ದಕ್ಕಿದ್ದಂತೆ ಪತ್ರಿಕೆಗಳು ಪ್ರಕಟಿಸಿದ್ದವು. ಆ ಘನವೆತ್ತ ಗೌರವಾನ್ವಿತ ಲಾರ್ಡ್ ವಾಗಿಯೆ ರಾಜೀನಾಮೆ ನೀಡಿ ನ್ಯಾಯಾಂಗದ ಮರ್ಯಾದೆಯನ್ನು ಉಳಿಸಿದರು!

ಇವು ನ್ಯಾಯಾಂಗದಲ್ಲಿರುವ ಭ್ರಷ್ಟಾಚಾರದ ವೈವಿಧ್ಯಮಯ ಮುಖಗಳು. ವುಗಳಲ್ಲದೆ ಇನ್ನು ಕೆಲವು ಮುಖಗಳನ್ನು ದೇಶವೆಲ್ಲ ಗೌರವಿಸುವ ನ್ಯಾಯಾಂಗದ ಷಿವರೇಣ್ಯರೆಂದೇ ಭಾವಿಸಿರುವ ನ್ಯಾಯಮೂರ್ತಿ ವಿ. ಆರ್. ಕೃಷ್ಣ ಅಯ್ಯರ್ ಮ್ಮದೊಂದು ಪುಸ್ತಕದಲ್ಲಿ ದಾಖಲಿಸಿದ್ದಾರೆ. ನ್ಯಾಯಮೂರ್ತಿಗಳು ತಮ್ಮ ಮಕ್ಕಳನ್ನು ಯವಾದಿ ವೃತ್ತಿಯಲ್ಲಿ ಅಪಾರ ಧನಾರ್ಜನೆ ಮಾಡಲು ತಮ್ಮ ಸ್ಥಾನ ಬಲವನ್ನು ರುಪಯೋಗಪಡಿಸಿಕೊಳ್ಳುವ ಪ್ರವೃತ್ತಿ, ನ್ಯಾಯಮೂರ್ತಿಗಳ ಮಕ್ಕಳು 'ಮುಂದಕ್ಕೆ ರಲು' – ಸ್ಪಷ್ಟ ಮಾತಿನಲ್ಲಿ ವಾಮಮಾರ್ಗದಿಂದ ಸಂಪಾದನೆ ಮಾಡಲು ತಮ್ಮ ೀದರ ನ್ಯಾಯಮೂರ್ತಿಗಳ ಸಹಾಯವನ್ನು ಯಾವ ಸಂಕೋಚ ಮುಚ್ಚು ರೆಯಿಲ್ಲದೆ ಕೇಳುವುದನ್ನು ನ್ಯಾಯಮೂರ್ತಿ ಅಯ್ಯರ್ ಬಿಚ್ಚು ಮಾತಿನಲ್ಲಿ ರೆದಿದ್ದಾರೆ. ಅವರ ಮಾತನ್ನು ಸಮರ್ಥಿಸಿ ಸರ್ವೋಚ್ಚ ನ್ಯಾಯಾಲಯದ ಇನ್ನೊಬ್ಬ ವೃತ್ತ ನ್ಯಾಯಮೂರ್ತಿ ಆರ್. ಎಂ. ಸಹಾಯ್ ದಾಖಲಿಸಿದ್ದಾರೆ!!

ಈ ತರದ ನ್ಯಾಯಮೂರ್ತಿಗಳ ಸಂಖ್ಯೆ ಅಷ್ಟೇನೂ ಅಧಿಕವಾಗಿಲ್ಲ ಎಂದು ರ್ಥಿಸುವವರೂ ಇದ್ದಾರೆ. ಅವರು ಬೆರಳೆಣಿಕೆಯಷ್ಟರಲಿ, ಬೆಟ್ಟದಷ್ಟಿರಲಿ ಯಾಂಗದಲ್ಲಿ ಅಂಥವರು ಇದ್ದರೆ ಇಡೀ ವ್ಯವಸ್ಥೆಯೇ ಭ್ರಷ್ಟವಾಗುವ ಸಂಭವವಿದೆ. ಘವಾಂಕ ಕವಿವಾಣಿಯಲ್ಲಿ 'ಕೊಡವಾಲ ಕೆಡಿಸಲೆನಿತಾಮ್ರವಾಗಬೇಕು?' ಒಂದೇ ಹುಳಿ ಒಂದು ಕೊಡ ಹಾಲನ್ನು ಕೆಡಿಸಲು ಸಾಕು. ಒಳ್ಳೆಯ ಮಹಾನ್ ಯಮೂರ್ತಿಗಳು ಅಲ್ಲಲ್ಲಿ ಒಬ್ಬಿಬ್ಬರು ಈಗಲೂ ಇದ್ದಾರೆ. ಅವರಿಂದಲೇ ಇನ್ನೂ ನ್ಯಾಯಾಂಗ ಬದುಕಿದೆ! ಅಂಥವರಿಗೆ ಸಹಸ್ರ ನಮಸ್ಕಾರ! ಭ್ರಷ್ಟರಿಗೆ ಕೋಟಿ ಧಿಕ್ಕಾರ!!

ನ್ಯಾಯಾಂಗವು ಈ ಭ್ರಷ್ಟಾಚಾರದ ಪಿಡುಗಿನಿಂದ, ರೋಗದಿಂದ ಪಾರಾಗಲು ಏನಾದರೂ ಉಪಾಯ ಇದೆಯೆ? ಈಗಿನ ಪರಿಸ್ಥಿತಿಯನ್ನು ನೋಡಿದರೆ ಇದು ಕ್ಯಾನ್ಸರ್‌ನಂತೆ ಗುಣವಾಗದ ವ್ಯಾಧಿಯಂತೆ ಕಾಣುತ್ತದೆ. ಇದನ್ನು ತಡೆಯಲು, ನಿರ್ಮೂಲನೆ ಮಾಡಲು ಸಂವಿಧಾನದಲ್ಲಿ ಪರಿಣಾಮಕಾರಿಯಾದ ಮಾರ್ಗ ಇಲ್ಲವೇ ಇಲ್ಲ. ಇಂಪೀಚ್ ಮಾಡಿ ಭ್ರಷ್ಟರನ್ನು ಕೆಳಗಿಳಿಸುವ ಅಧಿಕಾರ ಸಂಸತ್ತಿಗೆ ಮಾತ್ರ ಇದೆ. ಕಳೆದ ೫೮ ವರ್ಷಗಳಲ್ಲಿ ಇಂಪೀಚ್ ಮಾಡಿದ್ದು ರಾಮಸ್ವಾಮಿಯದು ಒಂದೇ ಒಂದು. ಅದೂ ರಾಜಕೀಯ ಭ್ರಷ್ಟಾಚಾರದಿಂದ ವಿಫಲವಾಯಿತು. ಇದರ ಪರಿಣಾಮ, ಒಮ್ಮೆ ನ್ಯಾಯಮೂರ್ತಿಗಳಾಗಿ ಗದ್ದುಗೆಯ ಮೇಲೆ ಆಸೀನರಾದರೆ ಅವರನ್ನು ಕೆಳಗಿಳಿಸುವ ಯಾವ ಉಪಾಯವೂ ಇಲ್ಲ ಎಂಬಂತಾಗಿದೆ. ಈ ವಾಸಿಯಾಗದ ರೋಗದ ನಿವಾರಣೆಯ ಪ್ರಯತ್ನ ಆಗಾಗ ನಡೆಯುತ್ತಲೆ ಇದೆ. ಸರ್ವೋಚ್ಚ ನ್ಯಾಯಾಲಯ ಹನ್ನೆರಡು ಸೂತ್ರಗಳ ಒಂದು ನೀತಿ ಸಂಹಿತೆಯನ್ನು ರೂಪಿಸಿದೆ. ಅವುಗಳಲ್ಲಿ ಭ್ರಷ್ಟಾಚಾರಕ್ಕೆ ನೇರವಾಗಿ ಸಂಬಂಧಿಸಿದ ಒಂದಾನೊಂದು ಸೂತ್ರವೂ ಇಲ್ಲ. 'ನ್ಯಾಯಮೂರ್ತಿಗಳ ಸಂಬಂಧಿಗಳು ತಮ್ಮ ಮುಂದೆ ವಕಾಲತ್ತು ಮಾಡಬಾರದು' ಎಂಬುದೊಂದು ಸೂತ್ರವಿದೆ. ಆದರೆ ಅದರಿಂದ ಹೆಚ್ಚು ಪ್ರಯೋಜನವಾಗಿಲ್ಲ. ಆದ್ದರಿಂದ ಸರ್ವೋಚ್ಚ ನ್ಯಾಯಾಲಯ ಒಂದು ನೀತಿಯನ್ನು ಅಂಗೀಕರಿಸಿದೆ. ಅದನ್ನು 'ಇನ್ ಹೌಸ್ ಕಮಿಟಿ ಪ್ರಕ್ರಿಯೆ' ಎನ್ನುತ್ತಾರೆ. ಸರ್ವೋಚ್ಚ ನ್ಯಾಯಾಲಯದ ಶ್ರೇಷ್ಠ ನ್ಯಾಯಮೂರ್ತಿ ಮತ್ತು ಮೂವರು ಸೀನಿಯರ್ ನ್ಯಾಯಮೂರ್ತಿಗಳಿಂದ ಕೂಡಿದ ಸಮಿತಿ, ಭ್ರಷ್ಟಾಚಾರದ ದೂರುಗಳು ಬಂದಾಗ ಈ 'ಅಂತರ್‌ಗೃಹ' ಸಮಿತಿ ಸಮಾಲೋಚನೆಮಾಡಿ, ಆ ಆಪಾದನೆಗಳಲ್ಲಿ ಹುರುಳಿದೆ ಎಂದು ಕಂಡುಬಂದರೆ ಸಂಬಂಧಪಟ್ಟ ನ್ಯಾಯಮೂರ್ತಿಗಳು ರಾಜೀನಾಮೆ ಕೊಡುವಂತೆ ಸೂಚನೆ ಕೊಡಬಹುದು. ಆ ಸೂಚನೆಯನ್ನು ಅಂಗೀಕರಿಸದಿದ್ದರೆ, ಮುಂದಿನ ಕ್ರಮ ಕೈಗೊಳ್ಳಬಹುದು. ಈ ವ್ಯವಸ್ಥೆಯೂ ಹೆಚ್ಚು ಪ್ರಯೋಜನವಾಗಿಲ್ಲ. ಹಾಗಾದರೆ ಏನು ಮಾಡಬೇಕು?

ಇದಕ್ಕೆ ಉತ್ತರವಾಗಿ ಮಾಜಿ ಶ್ರೇಷ್ಠ ನ್ಯಾಯಮೂರ್ತಿ ಜೆ. ಎಸ್. ವರ್ಮಾ ಹೇಳುತ್ತಾರೆ: ''ನ್ಯಾಯಾಂಗದಲ್ಲಿ ಭ್ರಷ್ಟಾಚಾರ ಇಲ್ಲವೆಂದು ಯಾರೂ ಹೇಳುವುದಿಲ್ಲ. ಹೇಳಿದರೂ ಅದನ್ನು ಯಾರೂ ಒಪ್ಪುವುದಿಲ್ಲ. ಅದನ್ನು ಚಾಪೆಯ ಕೆಳಗೆ ತಳ್ಳುವುದೂ ಸಲ್ಲದು. ತಳ್ಳಿದರೂ ಅದು ತಲೆ ಎತ್ತುತ್ತದೆ. ಆದ್ದರಿಂದ ನ್ಯಾಯಮೂರ್ತಿಗಳು ಪ್ರಶ್ನಾತೀತರಲ್ಲ. ಅವರನ್ನು ವಿಚಾರಿಸಿಕೊಳ್ಳುವ, ಅವರೂ ತಮ್ಮ ಕೃತ್ಯಗಳಿಗೆ ಹೊಣೆಗಾರರು ಎಂಬ ಶಾಸನ ರೂಪಿಸುವ ಕಾಲ ಬಂದಿದೆ. ನೈತಿಕ ಒತ್ತಡ, ಶಿಕ್ಷಣ, ಕೆಲಸ ಮಾಡದಿದ್ದಾಗ ಶಾಸನದ ಶಿಕ್ಷೆಯ ಅಗತ್ಯ ಇದೆ.'' ಇದೇ ಮಾರ್ಗವೆಂದು ಕಾಣುತ್ತದೆ. ಸಂವಿಧಾನದ ಆರ್ಟಿಕಲ್ ೧೨೪ ಅನ್ನು ತಿದ್ದುಪಡಿ ಮಾಡಿ ಇಂಪೀಚ್‌ಮೆಂಟ್ ಪದ್ಧತಿಯನ್ನು ಬಿಟ್ಟು, ನ್ಯಾಯಮೂರ್ತಿಗಳಿಗೂ ಸಹ ಎಲ್ಲರಿಗೂ ಅನ್ವಯಿಸುವ ದಂಡ ಸಂಹಿತೆ ಅವರಿಗೂ ಅನ್ವಯಿಸಬೇಕು. ನ್ಯಾಯಾಂಗದ ಸ್ವಾತಂತ್ರ್ಯ ಅನಿರ್ಬಂಧವಾಗಬಾರದು. ಆರ್ಟಿಕಲ್ ೧೯ರಲ್ಲಿ ಇರುವ ಮೂಲಭೂತ ಹಕ್ಕುಗಳೂ ಅನಿರ್ಬಂಧವಲ್ಲ. ಅವುಗಳು ಕೆಲವು ಸಂದರ್ಭಗಳಲ್ಲಿ ಆರ್ಟಿಕಲ್ ೧೯ (೨), (೩), (೪).... ಗಳಿಗೆ ಒಳಪಟ್ಟಿವೆ. ಹಾಗೆಯೇ ನ್ಯಾಯಾಂಗ ಸ್ವತಂತ್ರವಾಗಿದ್ದರೂ, ಆ ಸ್ವಾತಂತ್ರ್ಯ ಅಪ್ರಾಮಾಣಿಕ, ಭ್ರಷ್ಟ ನ್ಯಾಯಮೂರ್ತಿಗೆ ಇರಕೂಡದು.

ಉನ್ನತ ನ್ಯಾಯಾಂಗದಲ್ಲಿ ನುಸುಳಿಕೊಂಡಿರುವ ಈ ಭ್ರಷ್ಟಾಚಾರ ಈಗ ಬೃಹದಾಕಾರವಾಗಿ ಬೆಳೆಯಲು ನ್ಯಾಯಮೂರ್ತಿಗಳ ನೇಮಕ ಪ್ರಕ್ರಿಯೆಯಲ್ಲಿಯ ಪದ್ಧತಿ ಬೀಜರೂಪದಲ್ಲಿದೆ. ಈಗ ಈ ಗೌರವಾನ್ವಿತ ಪ್ರಭುಗಳ ನೇಮಕ ಬಹು ಗುಟ್ಟಾಗಿ ನಡೆಯುತ್ತಿದೆ. ಈ ರಹಸ್ಯ ಏಕೆ ಬೇಕೋ ತಿಳಿಯದು. ಕಲ್ಕತ್ತಾ ನ್ಯಾಯಮೂರ್ತಿ ಸೌಮಿತ್ರ ಸೇನ್ ನ್ಯಾಯವಾದಿಯಾಗಿದ್ದಾಗ ರಿಸೀವರ್ ಆಗಿ ಕಂಪನಿಯ ಹಣವನ್ನು ಸ್ವಂತ ಖಾತೆಗೆ ಜಮಾ ಮಾಡಿಕೊಂಡದ್ದು ಈಗ ಗೊತ್ತಾಯಿತೇ? ಅವರ ಚಾರಿತ್ರ್ಯ ಗೊತ್ತಿದ್ದವರು ಇದ್ದರು. ಅವರನ್ನು ನ್ಯಾಯಮೂರ್ತಿಗಳಾಗಿ ನೇಮಕ ಮಾಡುತ್ತಾರೆಂದು ಜನರಿಗೆ ಗೊತ್ತಿದ್ದರೆ ಯಾರಾದರೂ ಆ ಸಂಗತಿಯನ್ನು ಬಹಿರಂಗಪಡಿಸುತ್ತಿದ್ದರು. ಆಗ ಅವರ ನೇಮಕಾತಿ

ಆಗುತ್ತಿರಲಿಲ್ಲ. ಅಮೆರಿಕೆಯಲ್ಲಿ ನ್ಯಾಯಮೂರ್ತಿಗಳ ನೇಮಕವನ್ನು ಜಗಜ್ಜಾಹೀರು ಮಾಡಿ, ಆ ವ್ಯಕ್ತಿಯನ್ನು ಸೆನೆಟ್ ಸಭೆಯಲ್ಲಿ ಪ್ರಶ್ನಿಸಿ, ಪರೀಕ್ಷೆಮಾಡಿ ತರುವಾಯ ನೇಮಕ ಮಾಡುತ್ತಾರೆ. ಅಂಥ ಪದ್ಧತಿ ಇಲ್ಲಿಯೂ ಬರಬೇಕು. ನ್ಯಾಯಮೂರ್ತಿಗಳ ನೇಮಕಾತಿ ಪ್ರಕ್ರಿಯೆಯಲ್ಲಿ ಬದಲಾವಣೆ ಆಗಬೇಕೆಂದು ನ್ಯಾಯಮೂರ್ತಿ ಎಂ. ಎನ್. ವೆಂಕಟಾಚಲಯ್ಯ ಉನ್ನತ ಸಮಿತಿಯೂ ತನ್ನ ವರದಿಯಲ್ಲಿ ಸೂಚಿಸಿದೆ. ರಾಷ್ಟ್ರೀಯ ನ್ಯಾಯನೀತಿ ಆಯೋಗ ಕಾಯಿದೆಯನ್ನು ತರಬೇಕೆಂದು ಸೂಚಿಸಿತ್ತು. ಅದನ್ನು ಒಪ್ಪಿಕೊಂಡ ಸರ್ಕಾರ ಅದರ ರಚನೆಗೆ ಅನುವುಮಾಡಿಕೊಡುವಂಥ ಶಾಸನವನ್ನು ಸಂಸತ್ತಿನಲ್ಲಿ ಮಂಡಿಸಿದೆ. ಅದೂ ಸಂಪೂರ್ಣ ತೃಪ್ತಿದಾಯಕವಾಗಿಲ್ಲ. ಆದರೂ ಸುಧಾರಣೆಯ ದಿಕ್ಕಿನಲ್ಲಿ ಒಂದು ಹೆಜ್ಜೆ ಮುಂದಿಟ್ಟಿರುವುದು ಒಳ್ಳೆಯದು.

ನ್ಯಾಯಾಂಗದಲ್ಲಿ ಹಬ್ಬಿರುವ, ಇನ್ನೂ ಹಬ್ಬುತ್ತಿರುವ, ಈ 'ಭ್ರಷ್ಟಾಚಾರದ ಕರ್ಮಕಾಂಡವನ್ನು ಕುರಿತು ಯೋಚಿಸುವಾಗ, ಅದರ ಬಗ್ಗೆ ಆಕ್ರೋಶಕ್ಕಿಂತಲೂ ಹೆಚ್ಚಾಗಿ ಈ ದುರ್ಗತಿಗಾಗಿ ಅತೀವ ಸಂಕಟವಾಗುತ್ತದೆ. ನ್ಯಾಯಾಂಗಕ್ಕೆ ಈ ಭ್ರಷ್ಟಾಚಾರ ಯಾಕೆ ಕಾಲಿಟ್ಟಿತು, ಎಂದು ಪರಿತಪಿಸುತ್ತೇನೆ. ಬ್ರಿಟಿಷರಿದ್ದಾಗಲೆ ವಕೀಲ ವೃತ್ತಿಯನ್ನು ಪ್ರಾರಂಭಿಸಿದೆ. ಆಗ ಒಬ್ಬ ಸಬ್-ಮ್ಯಾಜಿಸ್ಟ್ರೇಟ್, ಒಬ್ಬ ಮುನಸಿಫ್‌ರಲ್ಲಿದ್ದ ಪ್ರಾಮಾಣಿಕತೆ ಈಗ ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯದ 'ಗೌರವಾನ್ವಿತ' ನ್ಯಾಯಮೂರ್ತಿಗಳಲ್ಲಿ ಇಲ್ಲದಿರುವ ಅವನತಿ, ದುರಂತವನ್ನು ಕಣ್ಣಾರೆ ಕಂಡು ಕಣ್ಣೀರಿಡುವ ದುರದೃಷ್ಟ ಪ್ರಾಪ್ತವಾಗಿದೆ. ಆಗ ತಿಂಗಳಿಗೆ ಕೇವಲ ೨೫೦ ರೂ. ಸಂಬಳ ಪಡೆಯುತ್ತಿದ್ದ ಮುನಿಸಿಫರಲ್ಲಿದ್ದ ಪ್ರಾಮಾಣಿಕತೆ ಈಗ ತಿಂಗಳಿಗೆ ಒಂದು ಲಕ್ಷ ರೂ. ಸಂಬಳ ಪಡೆಯುವವರಿಗೆ ಇಲ್ಲವಲ್ಲ! ಹಳ್ಳಿಗಳಲ್ಲಿ, ನಗರಗಳಲ್ಲಿ ಹಣ್ಣು ಹಾಲು ಹೂವು... ಮಾರುವ ಬಡ ಹೆಣ್ಣು ಮಕ್ಕಳಲ್ಲಿರುವ ಪ್ರಾಮಾಣಿಕತೆ ಓದು ಕಲಿತು ನ್ಯಾಯ ಶಾಸ್ತ್ರ ಕಲಿತು ನ್ಯಾಯ ಪರಿಶೀಲಿಸಿ ನ್ಯಾಯದಾನ ಮಾಡಬೇಕಾದ ಧರ್ಮ ಪ್ರಭುಗಳಲ್ಲಿ ಇಲ್ಲವಾದರೆ, ಅವರೇ ಅನ್ಯಾಯಕ್ಕೆ ಬಿದ್ದರೆ, ತಾಯಿಯ ಎದೆಹಾಲು ವಿಷವಾದರೆ, ಪ್ರಜೆಗಳಿಗೆ ಪ್ರಾಣದಾನ ಮಾಡುವವರು ಯಾರು ?

ಈಗ ಹೀಗೆ ನ್ಯಾಯಾಂಗದ ಉನ್ನತ ಹಂತದಲ್ಲಿ ನಡೆಯುತ್ತಿರುವ ಪ್ರಚ್ಛನ್ನ ಭ್ರಷ್ಟಾಚಾರದ ಪರಿಣಾಮ ಅಧೀನ ನ್ಯಾಯಾಧೀಶರ ಮೇಲೆ, ನ್ಯಾಯಾಂಗ ವ್ಯವಸ್ಥೆಯ ಮೇಲೆ, ಜನತೆಯ ಮೇಲೆ, ಒಟ್ಟು ಪ್ರಜಾಪ್ರಭುತ್ವದ ವ್ಯವಸ್ಥೆಯ ಮೇಲೆ ಎ... ದುಷ್ಪರಿಣಾಮವನ್ನು ಉಂಟುಮಾಡಬಹುದು ಎಂಬುದನ್ನು ಊಹಿಸಲಿಕ್ಕೂ ಆಗದ... ಹಿಂದೆ ಕದ್ದು ಮುಚ್ಚಿ ಕದದ ಹಿಂದೆ ಕತ್ತಲೆಯ ಮರೆಯಲ್ಲಿ ಲಂಚ ಹೊಡೆಯುತ್ತಿದ್ದ ಕೆ... ಭ್ರಷ್ಟ ಅಧೀನ ನ್ಯಾಯಾಧೀಶರು, ಸಿಬ್ಬಂದಿ ವರ್ಗದವರು, ಈಗ ಯಾವ ಮು... ಮರೆಯಿಲ್ಲದೆ, ಅಂಜಿಕೆ ನಾಚಿಕೆಯಿಲ್ಲದೆ ರಾಜಾರೋಷ, ಹಾಡು ಹಗಲು ಅದು ತಮ್ಮ ಹಕ್ಕ... ಎಂಬಂತೆ ಲಂಚ ಹೊಡೆಯುತ್ತಿದ್ದಾರೆ. ಅವರನ್ನು ಪ್ರಶ್ನಿಸಿದರೆ ಮೇಲಿನವರ ಕಡೆ ಬೆರ... ತೋರಿಸುತ್ತಾರೆ. 'ತಿಮಿಂಗಲಗಳನ್ನು ಬಿಟ್ಟು ಶಿಗಡಿ ಮೀನುಗಳಿಗೆ ಬಲೆ ಬೀಸುತ್ತೀರಾ ?!' ಎಂದು ಕೇಳುತ್ತಾರೆ ! ಅವರಿಗೀಗ ಧೈರ್ಯ ಬಂದಿದೆ !! ಇದರ ಪರಿಣಾಮವಾ... ಸಿಬ್ಬಂದಿ ವರ್ಗದಲ್ಲೂ ಭ್ರಷ್ಟಾಚಾರ ತಾಂಡವ ಆಡುತ್ತಿದೆ. ಇದನ್ನು ಪ್ರಶ್ನಿಸುವ ನೈತಿಕ ಹಕ್ಕು ಉನ್ನತ ನ್ಯಾಯಾಂಗಕ್ಕೆ ಇಲ್ಲವಾಗಿದೆ. ಪ್ರಜೆಗಳು ಈ ಭ್ರಷ್ಟಾಚಾರದ ಚಕ್ರತೀರ್ಥದ... ಸಿಕ್ಕು ನೀರುಪಾಲಾಗುತ್ತಿದ್ದಾರೆ. ನ್ಯಾಯಾಂಗದಲ್ಲಿ ಜನರಿಗೆ ವಿಶ್ವಾಸ ಕುಸಿದುಹೋಗಿದ... ಅಂದ ಮೇಲೆ ಸಂವಿಧಾನವೇ ಕುಸಿದುಹೋಗುತ್ತಿದೆ. ಪ್ರಜಾಪ್ರಭುತ್ವ ಎಲ್ಲಿದೆ ? ಇದರಿಂ... ಪಾರಾಗುವ ಸಾಧ್ಯತೆ ಇಲ್ಲ ಎಂಬ ಸ್ಥಿತಿಗೆ ತಲುಪಿದ್ದೇವೆ.

ಇದಕ್ಕೇನು ಪರಿಹಾರ ? ಜನರಲ್ಲಿ – ಅದರಲ್ಲೂ ವಿದ್ಯಾವಂತರಾದ ಜಾಣರಲ್ಲಿ... ಪ್ರಾಮಾಣಿಕತೆ ಬೆಳೆಯಬೇಕು. ಹೃದಯ ವೈಶಾಲ್ಯ ವೃದ್ಧಿಯಾಗಬೇಕು. ಅಂಥ ಸತ್ಯಸಂ... ಪ್ರಜೆಗಳು ಬೆಳೆಯಬೇಕು. ಅಂಥ ಸದ್ಬುದ್ಧಿ, ಸದಾಚಾರ, ಅನುಕಂಪ, ಮಾನವೀಯ... ಇದ್ದಂಥ ದೈವಸಂಭೂತಿಗಳಾದ ವ್ಯಕ್ತಿಗಳು ನ್ಯಾಯಾಂಗಕ್ಕೆ ಆಯ್ಕೆ ಆಗಬೇಕು. ನ್ಯಾಯಾಧೀ... ಎಂದರೆ ಕಡಿಕಫಣಿಯ ಸಂನ್ಯಾಸಿ ಎಂಬಂತಿರಬೇಕು. ಅವನಿಗೆ ಕಾಮಿನಿ ಕಾಂಚನ... ಮೋಹ ಇರಬಾರದು. ಅರಿಷಡ್ವರ್ಗಗಳಿಗೆ ಅತೀತವಾಗಿರಬೇಕು. ಉರಿ ಬರಲಿ, ಸಿ... ಬರಲಿ ಸಮಾನದೃಷ್ಟಿಯಿಂದ ಸ್ವೀಕರಿಸುವ ಸ್ಥಿತಪ್ರಜ್ಞನಾಗಿರಬೇಕು. ಆಗ ಅವನ... ನ್ಯಾಯದೇವತೆಯ ಉಪಕರಣವಾಗಿ ಆಕೆ ತನ್ನ ಕೈಗಿತ್ತ ನ್ಯಾಯತಕ್ಕಡಿಯನ್ನು ತೂಗಬೇಕು... ಅಂಥ ಒಳ್ಳೆಯ ಕಾಲ ಹಿಂದೆ ಇತ್ತು, ಮುಂದೆ ಅಂಥಾದ್ದೇ ಬರಲಿ ಎಂದು ಹಾರೈಸೋಣ...


ಕೋ. ಚೆನ್ನಬಸಪ್ಪ

ಸಂಖ್ಯೆ ೧೨೨, ರಾಜಾಜಿನಗರ, ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು -೫೬೦ ೦೮೬





# ರಮಣಶ್ರೀ ಪ್ರಕಾಶನ

16, ರಾಜಾ ರಾಮ್‌ಮೋಹನ್ ರಾಯ್ ರಸ್ತೆ, ಬೆಂಗಳೂರು – 560 025

ಫೋನ್ : 41350050, ಫ್ಯಾಕ್ಸ್ : 41350007




ರೂ. 75

ವಿಜಯ ಕರ್ನಾಟಕದಲ್ಲಿ ಎಸ್. ಷಡಕ್ಷರಿ ಅವರ 'ಕ್ಷಣ ಹೊತ್ತು ಆಣಿಮುತ್ತು' ಅಂಕಣ ಬಹಳ ಜನಪ್ರಿಯ..................

ಷಡಕ್ಷರಿಯವರ ಅಂಕಣದಿಂದ ಅನೇಕರಿಗೆ ಸ್ಫೂರ್ತಿ ಸಿಕ್ಕಿದೆ. ವ್ಯವಹಾರದಲ್ಲಿ ಸೋತು ಎಲ್ಲ ಮುಗಿದೇ ಹೋಯಿತು ಎಂದು ಕೈಹೊತ್ತು ಕುಳಿತವರು ಈ ಬರಹ ಓದಿ ಎದ್ದು ನಿಂತಿದ್ದಾರೆ. ಆತ್ಮಹತ್ಯೆಗೆ ಪ್ರಯತ್ನಿಸಿದವರು ಹೊಸ ಭರವಸೆ ಪಡೆದಿದ್ದಾರೆ. ಪರೀಕ್ಷೆಯಲ್ಲಿ ಫೇಲಾದವರು, ಜೀವನದಲ್ಲಿ ಅವಮಾನ, ಹಿಂಸೆ ಅನುಭವಿಸಿ ಕುಗ್ಗಿದವರು, ಪದೇ ಪದೇ ಸೋಲನ್ನುಂಡವರು, ಬದುಕಲು ಸಾಧ್ಯವೇ ಇಲ್ಲವೆಂದು ನಿರ್ಧರಿಸಿದ ಹತಭಾಗ್ಯರು.. ಷಡಕ್ಷರಿಯವರ ಬರಹ ಓದಿ ಆಶಾಕಿರಣ ಕಂಡವರಂತೆ, ಪುನಃ ನೆಮ್ಮದಿಯ ಬದುಕಿನತ್ತ ಹೆಜ್ಜೆ ಹಾಕುತ್ತಿದ್ದಾರೆ. ಅವರ ಬರಹ ಇಂಥ ಅನೇಕರಿಗೆ ಸಂಜೀವಿನಿಯಾಗಿದೆ.

– ವಿಶ್ವೇಶ್ವರ ಭಟ್

ಪ್ರಧಾನ ಸಂಪಾದಕರು, ವಿಜಯ ಕರ್ನಾಟಕ




ರೂ. 95

# ಆಧುನಿಕ ಅಮೆರಿಕಾದಲ್ಲಿ ದಾಸ್ಯ ಪದ್ಧತಿ

ಪ್ರೊ॥ ಬಿ. ವಿ. ವೀರಭದ್ರಪ್ಪ



ಆಧುನಿಕ ಅಮೆರಿಕಾದ ಆರ್ಥಿಕ ವಲಯದಲ್ಲಿ ಪುರಾತನ ದಾಸ್ಯ ಪದ್ಧತಿ ಬೇರು ಬಿಡುತ್ತಿರುವುದು ಆಗಿಂದಾಗ್ಗೆ ಮಾಧ್ಯಮಗಳಲ್ಲಿ ಮಿಂಚಿ ಮಾಯವಾಗುತ್ತಿದೆ. ಒಕ್ಲಹಾಮದ ತುಲ್ಸಾದಲ್ಲಿ ಜಾನ್ ಪಿಕಲ್ ಂಪನಿಯು ಪಕ್ಕಾ ದಾಸ್ಯ ಪದ್ಧತಿಯನ್ನು ಅನುಸರಿಸು ದ್ದುದು ಏಳು ವರ್ಷಗಳ ಹಿಂದೆ ದೊಡ್ಡ ಸುದ್ದಿಯನ್ನು ಾಡಿತ್ತು. ನ್ಯಾಯಾಲಯದಲ್ಲಿ ಫ್ಯಾಕ್ಟರಿ ಮಾಲೀಕರ ರುದ್ಧ ಒಂದು ಬಹಿರಂಗ ಹೋರಾಟದ ನಂತರ ಅಲ್ಲಿನ ಲಸಗಾರರಿಗೆ ಅಧಿಕೃತ ಕೆಲಸಗಾರರೆಂದು ಲಿಖಿತ ದಾಖಲೆ ಳನ್ನು ನೀಡಲಾಯಿತು. ಅಲ್ಲಿ ೫೨ ಜನ ಭಾರತೀಯ ಂದು ಮತ್ತು ಕ್ರಿಶ್ಚಿಯನ್ ಕೆಲಸಗಾರರು ದಾರುಣ ಾಸ್ಯದಲ್ಲಿ ಸಿಕ್ಕು ತೊಳಲಾಡುತ್ತಿದ್ದರು. ಅವರ ನೆರವಿಗೆ ಂದು ಸ್ಥಳೀಯ ಚರ್ಚು ಬಂದಿತೆಂದು ವರದಿಯಾಗಿದೆ.




ದಾಸ್ಯದ ಕಥೆಗಳು ಆಗಾಗ ವರದಿಯಾಗುತ್ತಲೇ ವೆ. ಇತ್ತೀಚೆಗೆ ಮಿಸ್ಸಿಸ್ಸಿಪ್ಪಿಯಲ್ಲಿ ಸಿಗ್ನಲ್ ಕಂಪನಿಯು ಂತರರಾಷ್ಟ್ರೀಯ ಕೆಲಸಗಾರರನ್ನು ಅತ್ಯಂತ ಹೀನ ಟ್ಟದಲ್ಲಿ ದುಡಿಮೆಗೆ ಒಳಪಡಿಸಿತ್ತು. ಅದು ರಾಷ್ಟ್ರೀಯ ಟ್ಟದ ನಾಗರಿಕ ಹಕ್ಕುಗಳ ಚಳುವಳಿಗಾರರ ಗಮನ ದು ಅವರು ಈಗ ಕೆಲಸಗಾರರಿಗೆ ನ್ಯಾಯ ೂರಕಿಸಲು ವ್ಯಾಪಕ ಸಮರದಲ್ಲಿ ತೊಡಗಿದ್ದಾರೆ. ರತೀಯ ಕೆಲಸಗಾರರು ಆಧುನಿಕ ದಾಸ್ಯ ಪದ್ಧತಿಯ ುದ್ಧ ಎದ್ದುನಿಂತು ಇಂತಹ ಹೋರಾಟದಲ್ಲಿ ೊಡಗುತ್ತಾರೆ ಎಂದು ಬಹುಶಃ ಯಾರೂ ನಿರೀಕ್ಷಿಸಿರಲಿಲ್ಲ ದು ಒಬ್ಬ ಪ್ರಸಿದ್ಧ ಪತ್ರಿಕೋದ್ಯಮಿ ಜಾನ್ ಬುವೆ ತಿಕ್ರಿಯಿಸಿದ್ದಾರೆ. ಅವರು ೨೦೦೭ರಲ್ಲಿ "Nobodies; odern American Slave Labour" ಎಂಬ ಸ್ತಕವನ್ನು ರಚಿಸಿ ಹೆಸರು ಮಾಡಿದ್ದಾರೆ.

ಅದರ ಪ್ರತಿಯನ್ನು ಪಡೆಯಲು ಆಗ ಲಾಸ್ ಏಂಜಲೀಸ್‌ನಲ್ಲಿದ್ದ ನಾನು ಪ್ರಯತ್ನಿಸಿದಾಗ ಪ್ರತಿಗಳು ಮುಗಿದಿವೆ ಒಂದೆರಡು ವಾರಗಳಲ್ಲಿ ಮರುಮುದ್ರಣದ ಪ್ರತಿಗಳು ಮಾರುಕಟ್ಟೆಗೆ ಬಿಡುಗಡೆಯಾಗುತ್ತವೆ ಎಂದು ತಿಳಿದುಬಂತು. ಬಿಡುಗಡೆಯಾದಕೂಡಲೇ ಅದನ್ನು ಇ-ಮೇಲ್ ಮೂಲಕ ಆರ್ಡರ್ ಮಾಡಿ ತರಿಸಿಕೊಂಡೆ.

'ಪಿಕಲ್' ಕೆಲಸಗಾರರು ಮತ್ತು 'ಸಿಗ್ನಲ್' ಕೆಲಸಗಾರರ ಹೋರಾಟದಲ್ಲಿ ಅನೇಕ ಸಾಮ್ಯತೆಗಳಿವೆ. ಜಾನ್ ಪಿಕಲ್ ಕೆಲಸಗಾರರಲ್ಲಿ ಹೆಚ್ಚಾಗಿ ಎಲೆಕ್ಟ್ರಿಶಿಯನ್ನರು, ವೆಲ್ಡರ್‌ಗಳು ಇತ್ಯಾದಿ ತಾಂತ್ರಿಕ ಕೆಲಸಗಾರರಾಗಿದ್ದರು. ಅವರಲ್ಲಿ ಕೆಲವರ ಹೆಸರುಗಳು ಹೀಗಿವೆ: ಜಗದೀಶ ಪ್ರಜಾಪತಿ, ಉದಯ ದತ್ತಾತ್ರೇಯ ಲುಡ್ಬೆ, ಯು ಪಟೇಲ್, ಕೃಷ್ಣನ್ ಕುಟ್ಟಿ, ಕುಂಜಿ ಪಿಳ್ಳೈ ಮತ್ತು ಮಾರ್ಷಲ್ ಸೌರಸ್.

ಉದಯ ದತ್ತಾತ್ರೇಯ ಲುಡ್ಬೆ ಮಹಾರಾಷ್ಟ್ರದ ಮೂಲ ನಿವಾಸಿ. ಅವನು ಒಬ್ಬ ಶ್ರೀಮಂತನೂ ಅಲ್ಲದ ಬಡವನೂ ಅಲ್ಲದ ಮಧ್ಯಮ ವರ್ಗಕ್ಕೆ ಸೇರಿದವನಾಗಿದ್ದ. ಅವನ ತಂದೆ ಒಬ್ಬ ಶಿಕ್ಷಕನಾಗಿದ್ದ. ಮಕ್ಕಳಿಗೆ ಶಿಕ್ಷಣವೇ ಮುಖ್ಯವೆಂದು ಭಾವಿಸಿ ಲುಡ್ಬೆ ಕುಟುಂಬವು ಸಣ್ಣ ಪಟ್ಟಣದಿಂದ ಮುಂಬೈಗೆ ಸ್ಥಳಾಂತರಗೊಂಡಿತ್ತು. ಉದಯನು ಅಲ್ಲಿ ಇಂಜಿನಿಯರಿಂಗ್ ಪಾಲಿಟೆಕ್ನಿಕ್ ಸೇರಿದ. ಅವನ ತಂದೆ ಕಾಯಿಲೆಯಿಂದ ತನ್ನ ಕೆಲಸವನ್ನು ಕಳೆದುಕೊಂಡ ನಂತರ ಹಿರಿಯ ಪುತ್ರನಾದ ಉದಯ ತನ್ನ ಇಬ್ಬರು ಸೋದರರು ಮತ್ತು ಸೋದರಿಯ ಶಿಕ್ಷಣಕ್ಕಾಗಿ ತನ್ನ ವಿದ್ಯಾಭ್ಯಾಸವನ್ನು ಮೊಟಕುಗೊಳಿಸಿ ವೆಲ್ಡರ್ ಆಗಿ ಕೆಲಸಕ್ಕೆ ಸೇರಿದ. ಅವನ ಚಿಕ್ಕಪ್ಪನ ಉಸ್ತುವಾರಿಯಲ್ಲಿ ಅವನು ಒಬ್ಬಳು ಸೂಕ್ತ ವಧುವನ್ನು ವರಿಸಿ ಮದುವೆಯಾದ.

ಆ ಸಮಯದಲ್ಲಿ ಒಂದು ಅಮೆರಿಕನ್ ಕಂಪನಿಯು ವಿದೇಶಗಳಲ್ಲಿ ಕೆಲಸಮಾಡಲು ಅರ್ಹರಾದ ವೆಲ್ಡರ್‌ಗಳಿಗಾಗಿ ಒಂದು ಜಾಹಿರಾತನ್ನು ಪ್ರಕಟಿಸಿರುವುದು ಉದಯ ಲುಡ್ಬೆಯ ಗಮನಕ್ಕೆ ಬಂತು. ಅವನ ಒಬ್ಬ ಸ್ನೇಹಿತ ಲುಡ್ಬೆಗೆ ಈ ಅವಕಾಶವನ್ನು ಕಳೆದುಕೊಳ್ಳಬೇಡ ಎಂದು ಸಲಹೆ ಮಾಡಿದ. ವಿದೇಶಗಳಲ್ಲಿ ಕೆಲಸ ಮಾಡುವ ಭಾರತೀಯ ಕೆಲಸಗಾರರು ತಮ್ಮ ಸಂಬಳದ ಹಣವನ್ನು ಸ್ವದೇಶಕ್ಕೆ ಕಳಿಸಲು ಅವಕಾಶಗಳಿದ್ದುವು. ಆದರಿಂದ ತನ್ನ ಕುಟುಂಬವನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ಯಬಹುದು ಎಂದು ಲುಡ್ಬೆ ನಂಬಿದ. ಅವನು ತನ್ನ ಹೆಂಡತಿಯೊಡನೆ ಈ ವಿಚಾರವನ್ನು ಚರ್ಚಿಸಿ, ಅವಳ ಒಪ್ಪಿಗೆಯನ್ನು ಪಡೆದ ನಂತರ ಪ್ರಯಾಣಕ್ಕೆ ಸಿದ್ಧತೆ ಮಾಡತೊಡಗಿದ. ಆಯ್ಕೆಗೆ ಅವಶ್ಯಕವಾದ ಎಲ್ಲ ಪ್ರಮಾಣ ಪತ್ರಗಳನ್ನು ಮತ್ತು ಇದುವರೆಗೆ ಕೆಲಸ ಮಾಡಿದ ಅನುಭವ ಪತ್ರಗಳನ್ನು ಒಟ್ಟುಗೂಡಿಸಿದ. ಅವನಿಗೆ ವೆಲ್ಡಿಂಗ್, ಫಿಟ್ಟಿಂಗ್, ಪೈಪಿಂಗ್ ಮತ್ತು ವೆಸಲ್ ಫ್ಯಾಬ್ರಿಕೇಶನ್ ಇತ್ಯಾದಿ ಎಲ್ಲಾ ತಾಂತ್ರಿಕ ಕೆಲಸಗಳಲ್ಲಿ ಅನುಭವವಿತ್ತು. ಅವನ ಸರ್ಟಿಫಿಕೇಟ್‌ಗಳನ್ನು ಗಮನಿಸಿದ ಆಯ್ಕೆ ಸಮಿತಿಯು ತೃಪ್ತಿಯಿಂದ ಮರುದಿನ ತನ್ನ ಪಾಸ್‌ಪೋರ್ಟಿನೊಡನೆ ಲಿಖಿತ ಟೆಸ್ಟ್‌ಗೆ ಹಾಜರಾಗಲು ಸೂಚಿಸಿತು.

ಆಯ್ಕೆ ಸಮಿತಿ ಅಂತಿಮವಾಗಿ ಲುಡ್ಬೆಯನ್ನು ಆಯ್ಕೆ ಮಾಡಲಾಗಿದೆ ಎಂದು ತಿಳಿಸಿ ಅವನು ಒಂದು ಲಕ್ಷ ರೂಪಾಯಿ ಅಥವಾ ೨೨೦೦ ಡಾಲರುಗಳ ಫೀಜನ್ನು ಜಮಾ ಮಾಡಬೇಕೆಂದು ಸೂಚಿಸಿತು. ಫೀಜಿನಂತಹ

ದಾಸ್ಯದ ಕಥೆಗಳು ಆಗಾಗ ವರದಿಯಾಗುತ್ತಲೇ ಇವೆ. ಇತ್ತೀಚೆಗೆ ಮಿಸಿಸಿಪ್ಪಿಯಲ್ಲಿ ಸಿಗ್ನಲ್ ಕಂಪನಿಯು ಅಂತರರಾಷ್ಟ್ರೀಯ ಕೆಲಸಗಾರರನ್ನು ಅತ್ಯಂತ ಹೀನ ಮಟ್ಟದಲ್ಲಿ ದುಡಿಮೆಗೆ ಒಳಪಡಿಸಿತ್ತು. ಅದು ರಾಷ್ಟ್ರೀಯ ಮಟ್ಟದ ನಾಗರಿಕ ಹಕ್ಕುಗಳ ಚಳುವಳಿಗಾರರ ಗಮನ ಸೆಳೆದು ಅವರು ಈಗ ಕೆಲಸಗಾರರಿಗೆ ನ್ಯಾಯ ದೊರಕಿಸಲು ವ್ಯಾಪಕ ಸಮರದಲ್ಲಿ ತೊಡಗಿದ್ದಾರೆ. ಭಾರತೀಯ ಕೆಲಸಗಾರರು ಆಧುನಿಕ ದಾಸ್ಯಪದ್ಧತಿಯ ವಿರುದ್ಧ ಎದ್ದುನಿಂತು ಇಂತಹ ಹೋರಾಟದಲ್ಲಿ ತೊಡಗುತ್ತಾರೆ ಎಂದು ಬಹುಶಃ ಯಾರೂ ನಿರೀಕ್ಷಿಸಿರಲಿಲ್ಲ ಎಂದು ಒಬ್ಬ ಪ್ರಸಿದ್ಧ ಪತ್ರಿಕೋದ್ಯಮಿ ಜಾನ್ ಬುವೆ ಪ್ರತಿಕ್ರಿಯಿಸಿದ್ದಾರೆ. ಅವರು ೨೦೦೭ರಲ್ಲಿ "Nobodies; Modern American Slave Labour" ಎಂಬ ಪುಸ್ತಕವನ್ನು ರಚಿಸಿ ಹೆಸರು ಮಾಡಿದ್ದಾರೆ.

ವಿಷಯ ಉದಯನಿಗೆ ಹೊಸದೇನೂ ಆಗಿರಲಿಲ್ಲ. ಭಾರತದಲ್ಲಿ ಅಂತಹ ವಿಷಯಗಳನ್ನು ಅವನು ಕೇಳಿದ್ದ. ಆದರೆ ಅದರ ಅಗಾಧ ಮೊತ್ತ ಅವನಿಗೆ ಗಾಬರಿ ಹುಟ್ಟಿಸಿತ್ತು. ವಿದೇಶಿ ಕಂಪನಿಗಳಿಗೆ ಆಯ್ಕೆಮಾಡಿ ಕಳಿಸುವ ಈ ಗುತ್ತಿಗೆದಾರರ ಮಾತುಗಳನ್ನು ಹೇಗೆ ನಂಬುವುದು ಎಂಬ ಪ್ರಶ್ನೆಯೂ ಉದಯನನ್ನು ಕಾಡಿತು. ಗುತ್ತಿಗೆ ಕಂಪನಿಯ ಗುಮಾಸ್ತ ಮತ್ತು ಮೇನೆಜರ್ ಇಬ್ಬರೂ ಅಮೆರಿಕಾ ಕೆಲಸ ದೀರ್ಘಾವಧಿಯದಾಗಿರುತ್ತದೆ, ಸಂಬಳ ತಿಂಗಳಿಗೆ ೮೮೦ ಡಾಲರುಗಳು, ಆರು ತಿಂಗಳ ನಂತರ ೧೦೦ ಡಾಲರು ಹೆಚ್ಚಾಗುತ್ತದೆ ಎಂದು ಉದಯ ಲುಡ್ಬೆಗೆ ಭರವಸೆ ನೀಡಿದರು.

ಅವನು ತನ್ನ ಬೀಗರಿಂದ ಒಂದು ಲಕ್ಷ ರೂಪಾಯಿ ಸಂಗ್ರಹಿಸಿ ಅಮೆರಿಕಾದ ಓಕ್ಲಹಾಮ ರಾಜ್ಯದ ತುಲ್ಸಾದಲ್ಲಿ ಇರುವ 'ಜಾನ್ ಪಿಕಲ್ ಪ್ಲಾಂಟ್'ಗೆ ಬರಲು ಸಿದ್ಧನಾದ. ಅವನ ಜೊತೆಗೆ ಇನ್ನೂ ೫೨ ಜನ ಭಾರತೀಯರು ಆಯ್ಕೆಯಾಗಿದ್ದರು. ಅವರು ಗುಜರಾತ್, ಕೇರಳ, ಆಂಧ್ರ ಪ್ರದೇಶ ಮತ್ತು ಬಿಹಾರ ರಾಜ್ಯಗಳಿಗೆ ಸೇರಿದವರಾಗಿದ್ದರು. ಅವರು ಭಾರತದ ವೈವಿಧ್ಯವನ್ನು ಪ್ರತಿನಿಧಿಸಿದ್ದರಲ್ಲದೆ ಭಾರತೀಯ ಉತ್ಪಾದನಾಕ್ಷೇತ್ರದ ಕೆನೆಹಾಲಾಗಿದ್ದರು.

ಅಂತಿಮ ಆಯ್ಕೆ ಸಮಯದಲ್ಲಿ ಜಾನ್ ಪಿಕಲ್ ಮುಂಬೈಗೆ ಆಗಮಿಸಿ ಪ್ರತಿಯೊಬ್ಬ ಅಭ್ಯರ್ಥಿಯನ್ನು ಮುಂದೆ ಕೂರಿಸಿಕೊಂಡು ಅವನ ವಯಸ್ಸು, ಅನುಭವ, ಕುಟುಂಬ ಹಿನ್ನಲೆ ಇತ್ಯಾದಿ ವಿವರಗಳನ್ನು ಕೇಳುತ್ತಾ ಕೊನೆಗೆ ಅವರ ಹಸ್ತ ಲಾಘವವನ್ನು ಸುದೀರ್ಘವಾಗಿ ಮಾಡುತ್ತಿದ್ದ. ಅದರ ರಹಸ್ಯವೇನೆಂದರೆ ಅವರ ಧ್ವನಿ ಭಾಷೆಗಳನ್ನು ತಿಳಿದುಕೊಳ್ಳುವುದರ ಜೊತೆಗೆ ಅವರ ಅಂಗೈಗಳು ತಮ್ಮ ಕಠಿಣ ಕೆಲಸದಿಂದ ಎಷ್ಟು ಒರಟಾಗಿವೆ ಎಂಬುದನ್ನು ತಿಳಿಯುವುದಾಗಿತ್ತು.

ಅಕ್ಟೋಬರ್ ೯, ೨೦೦೩ರಂದು ಉದಯ ಲುಡ್ಬೆ ತನ್ನ ಲಗೇಜಿನೊಡನೆ ಆಲ್-ಸಮಿಟ್ ಎಂಬ ತನ್ನ ಗುತ್ತಿಗೆದಾರರ ಆಫೀಸಿಗೆ ಹೋದಾಗ ಅವನು ಭಯ ಕಂಪಿತನಾಗಿದ್ದ. ಅವನು ತನ್ನ ಮನೆಯನ್ನು ಬಿಡುವುದಲ್ಲದೆ ತನ್ನ ಕೊನೆ ಕಂತಿನ ನೇಮಕ ಫೀಜು ೫೦೦ ಡಾಲರುಗಳನ್ನು ಜಮಾ ಮಾಡಬೇಕಾಗಿತ್ತು. ಏನಾದರೂ ಅಚಾತುರ್ಯವಾದರೆ ತನ್ನ ಬೀಗರು ಬಂಧುಗಳನ್ನು ದಿವಾಳಿಗೆ ತುತ್ತು ಮಾಡಬೇಕಾಗಿತ್ತು. ಅವನು ಮತ್ತು ಅವನ ಬಂಧು ಬಾಂಧವರು ಅಲ್ಲಿಗೆ ದುರಂತದಲ್ಲಿ ಕೊನೆಗಾಣಬೇಕಾಗಿತ್ತು. ಮುಂಜಾನೆ ೨ಕ್ಕೆ ವಿಮಾನ ನಿರ್ಗಮಿಸುವುದಿತ್ತು. ರಾತ್ರಿ ಮುಗಿಯುತ್ತಾ ಬಂದಂತೆ ಲುಡ್ಬೆ ಮತ್ತು ಉಳಿದ ೫೨ ಮಂದಿಗೆ ಅವರ ವೀಸಾ ಮತ್ತು ಪಾಸ್‌ಪೋರ್ಟ್‌ಗಳು ತಲುಪಿದ್ದವು. ಆದರೆ ಅವರ ಗುತ್ತಿಗೆ ಪತ್ರಗಳನ್ನೇ ಅವರು ಇನ್ನೂ ಪಡೆದಿರಲಿಲ್ಲ. ಎಷ್ಟು ವಿಚಿತ್ರ !

ಆಗ ಅವರ ಮುಂದೆ ಒಂದೊಂದು ತುಣುಕು ಪೇಪರುಗಳನ್ನು ನೀಡಲಾಯಿತು. ಅದರಲ್ಲಿ ಆಲ್-ಸಮಿಟ್ ಗುತ್ತಿಗೆದಾರರು ತಮ್ಮನ್ನು ಏನೂ ಕೇಳಿಲ್ಲ ಮತ್ತು ತಮ್ಮಿಂದ ಹಣವನ್ನು ಪಡೆದಿಲ್ಲ ಎಂದು ಬರೆ
ಕೊಡಬೇಕಾಗಿತ್ತು. ಅಂತಿಮವಾಗಿ ಅವರಿಗೆ 'ಕಛೇ
ಪತ್ರ' ಎಂಬ ಶೀರ್ಷಿಕೆಯಲ್ಲಿ ತಾವು ಹಿಂದೆ ಕೇಳಿರ
ಕರಾರು ವಾಕ್ಯಗಳಿದ್ದವು. ಅವರಿಗೆ ೮೮೦ ಡಾಲರುಗ
ಎಂದು ಭರವಸೆ ನೀಡಿದ್ದುದು ೫೫೦ ಡಾಲರುಗಳ
ಇಳಿದಿತ್ತು. ಎರಡು ವರ್ಷಗಳ ಉದ್ಯೋಗವ
ತರಬೇತಿಯ ಅವಧಿ ಎಂದು ಕರೆಯಲಾಗಿತ್ತು. ಇದೇ
ವಿಚಿತ್ರ ಎಂದು ಪ್ರಶ್ನಿಸಿದರೆ ಅದು ಕೇವಲ ಔಪಚಾರ
ಎಂಬ ಉತ್ತರ ಬಂತು. ಉದಯ ಲುಡ್ಬೆಯ ಅಂತರಂ
ದಲ್ಲಿ ಕೋಲಾಹಲವಾಗಿ ಕೊನೆಗೆ ಜಾನ್ ಪಿಕಲ್ ಒ
ದೊಡ್ಡ ಕೈಗಾರಿಕೋದ್ಯಮಿ, ಅವನಂತಹ ಹಿರಿ
ಅಮೆರಿಕನ್ ನಾಗರಿಕನಲ್ಲಿ ಸಂಶಯ ತಾಳುವುದು ಸರಿಯ
ಎಂಬ ತೀರ್ಮಾನಕ್ಕೆ ಬಂದ. ಉಳಿದ ೫೨ ಮಂ
ಭಾರತೀಯರೂ ಅಂತಹುದೇ ತೀರ್ಮಾನಕ್ಕೆ ಬಂದರು

ಅಕ್ಟೋಬರ್ ೧೦ ರಂದು ಭಾರತೀಯರು ತುಲ
ವಿಮಾನ ನಿಲ್ದಾಣವನ್ನು ತಲುಪಿದರು. ಒಂದು ಬ
ಅವರನ್ನು ತುಂಬಿಕೊಂಡು ಜಾನ್ ಪಿಕಲ್ ಕಂಪನಿ
ತಲುಪಿಸಿತು. ಆ ಬಸ್ ಸಾಕಷ್ಟು ಐಷಾರಾಮ
ವಾಗಿದ್ದರಿಂದ ಮುಂದೆ ಎಲ್ಲವೂ ಹಾಗೇ ಇರುತ್ತ
ಎಂದು ಭಾರತೀಯ ನೌಕರರು ಭಾವಿಸಿದರು. ಆದ
ಆ ತಂಡ ತಮ್ಮ ದಾಖಲೆ ಪತ್ರಗಳನ್ನು ಕಂಪನಿಯವ
ಒಪ್ಪಿಸಿದ್ದರು. ಮುಂದೆ ಅವರು ತಮ್ಮ ವಸತಿಗಳನ
ನೋಡಿ ಆಘಾತಗೊಂಡರು. ಫ್ಯಾಕ್ಟರಿ ಗೋಡೆಗ











Rs. : 250.00 Rs. : 150.00 Rs. : 150.00 Rs. : 495.00 Rs. : 350.00



ADARSH BOOKS

ADARSH ENTERPRISES (NEW DELHI)
4393/4, Tulsidas Street, Ansari Road, New Delhi–110 002
Phone : 91-11-23246131, Fax : 91-11-23246130
email : adarshbooks@vsnl.com. Web : www.adarshbooks.com


ROBIN
BOOKS












Rs : 75.00 Each

ನಡುವೆ ಇಕ್ಕಟ್ಟಾದ ಸಾಮೂಹಿಕ ಮಲಗುತಾಣಗಳನ್ನು ಕಂಡು ದಿಗ್ಭ್ರಾಂತರಾದರು. ಉಕ್ಕಿನ ಭದ್ರವಾದ ಬಾಗಿಲು ಸೆರೆಮನೆಯ ಬಾಗಿಲನ್ನು ನೆನಪಿಗೆ ತರುವಂತಿತ್ತು. ಎಲ್ಲ ಕಟ್ಟಡಕ್ಕೆ ಒಂದೇ ಒಂದು ವಿದ್ಯುತ್ ದೀಪವಿತ್ತು. ೫೨ ಜನರ ತಂಡದಲ್ಲಿ ಈಗಾಗಲೇ ವಿದೇಶಗಳಲ್ಲಿ ಕೆಲಸಮಾಡಿ ಅನುಭವಿಸಿದ್ದ ಕೆಲವರಿಗೆ ತಾವೇನೋ ಮಹಾ ವಿಪತ್ತಿಗೆ ಒಳಗಾಗಿದ್ದೇವೆ ಅನಿಸಿತು.

ರೂಮುಗಳು ಇಕ್ಕಟ್ಟಾದ ಹಾಸಿಗೆಗಳಿಂದ ತುಂಬಿದ್ದವು. ನೆಲದಿಂದ ಚಾವಣಿವರೆಗೆ ಎರಡೂವರೆ ಅಡಿ ಅಂತರದಲ್ಲಿ ಒಂದರ ಮೇಲೊಂದು ಹಾಸಿಗೆ ಅಳವಡಿಸಲಾಗಿತ್ತು. ಅಲ್ಲಿ ಏಕಾಂತಕ್ಕೆ ಅವಕಾಶವೇ ಇರಲಿಲ್ಲ. ೫೨ ಮಂದಿಗೆ ನಾಲ್ಕು ಸ್ನಾನದ ಕೋಣೆಗಳು, ಎರಡು ಮೂತ್ರ ವಿಸರ್ಜನಾ ಸ್ಥಳಗಳು, ಎರಡು ಕಕ್ಕಸುಗಳು ಮಾತ್ರ ಇದ್ದವು. ಮೂರು ವಾರಗಳ ನಂತರ ಮೂರು ವಾಷ್ ಬೇಸಿನ್‌ಗಳು ಸಿದ್ಧವಾದವು. ಆ ವಸತಿತಾಣದಲ್ಲಿ ಒಂದು ವಾಷಿಂಗ್ ಮಿಷಿನ್ ಮತ್ತು ಒಂದು ಡ್ರೈಯರ್ ಮಾತ್ರ ಇದ್ದುವು. ಪ್ರಾರಂಭದಲ್ಲಿ ಕುಳಿತು ಊಟ ಮಾಡಲು ಒಂದು ಮೇಜು ಸಹ ಇರಲಿಲ್ಲ. ಒಂದು ವಾರದ ನಂತರ ಎಂಟು ಜನರಿಗೆ ಒಂದರಂತೆ ಸಣ್ಣ ಮೇಜುಗಳನ್ನು ಜೋಡಿಸಲಾಯಿತು. ಎಲ್ಲವನ್ನು ನೋಡಿದ ಮೇಲೆ ಆ ಕೆಲಸಗಾರರಲ್ಲಿ ಒಬ್ಬನಾದ ಕೃಷ್ಣಮೂರ್ತಿ ಕುಂಚಿ ಪಿಳ್ಳೈ 'ನಾವು ವಂಚನೆಗೆ ಬಲಿಯಾದೆವು' ಎಂದು ಉದ್ಗಾರ ತೆಗೆದ.

ಬಂದ ಎರಡೇ ದಿನಗಳಲ್ಲಿ ಭಾರತೀಯರನ್ನು ಅವರ ಕೋಣೆಗಳಿಗೆ ಪ್ಲಾಸ್ಟರ್ ಹಚ್ಚುವುದು, ಮೊಳೆ ಹೊಡೆಯುವುದು, ಬಣ್ಣ ಬಳಿಯುವುದು ಇತ್ಯಾದಿ ಕೆಲಸಗಳಿಗೆ ಹಚ್ಚಲಾಯಿತು. ಕೊನೆಗೆ ಅವರು ಪಿಕಲ್ ಮಾಲೀಕರ ಮನೆಗಳಿಗೆ ಹೋಗಿ ಲಾನ್ ಕೆಲಸವನ್ನು ಸಹ ಮಾಡಬೇಕಾಯಿತು. ವೆಲ್ಡಿಂಗ್ ಕೆಲಸಕ್ಕೆ ನೇಮಕ ಗೊಂಡವರನ್ನು ಹೀಗೆ ಸಾಮಾನ್ಯ ದಿನಗೂಲಿಗಳನ್ನಾಗಿ ಬಳಸಿಕೊಳ್ಳುವುದರಿಂದ ಅವರಿಗೆ ಅಘಾತವಾಯಿತು.

ಮೊದಲು ಇದ್ದ ಹಳೇ ಗೋಡೌನ್‌ಗಳಿಂದ ಹೊಸ ಕಟ್ಟಡಕ್ಕೆ ಕರೆತಂದಿದ್ದರಾದರೂ ಅಲ್ಲೂ ಇಕ್ಕಟ್ಟಾದ ಕೋಣೆಗಳು, ಇಕ್ಕಟ್ಟಾದ ಹಾಸಿಗೆಗಳು, ಬಾತ್‌ರೂಮುಗಳು, ಬಿಸಿ ನೀರಿನ ಕೊರತೆ, ಕೈ ತೊಳೆಯಲು ಸಹ ದೂರದ ಹಳೆಯ ಬ್ಯಾರಕ್‌ಗಳಿಗೆ ಓಡಾಡಬೇಕಾಗಿತ್ತು. ಮಧ್ಯಾಹ್ನ ಅರ್ಧಘಂಟೆ ಲಂಚ್‌ಬ್ರೇಕ್ ಸಮಯದಲ್ಲಿ ಅವರು ಊಟಕ್ಕೆ ಹಳೇ ಬ್ಯಾರಕ್‌ಗಳಿಗೇ ಓಡೋಡಿ ಹೋಗ ಬೇಕಾಗಿತ್ತು. ಅಲ್ಲಿ ಅವರಿಗೆ ಊಟಮಾಡಲು ಸಾಕಷ್ಟು ತಟ್ಟೆಗಳೂ ಸಹ ಇರಲಿಲ್ಲ. ಹಿಂದೆ ಬಂದವರು ಮೊದಲಿ ನವರ ಊಟ ಮುಗಿಯುವವರೆಗೆ ಕಾಯಬೇಕಾಗಿತ್ತು ಎಂಬುದು ಅವರ ಅತೀವ ಸಂಕಟಕ್ಕೆ ಕಾರಣವಾಗಿತ್ತು.

ಅಡಿಗೆ ಮಾಡುವ ಇಬ್ಬರನ್ನು ಇಂಡಿಯಾದಿಂದ ಕರೆಸಿಕೊಂಡಿದ್ದರೂ ದಿನವೂ ಅದೇ ಅನ್ನ, ಮಾಂಸದ ಸಾರು, ತರಕಾರಿ ಇತ್ಯಾದಿಗಳನ್ನು ಬಡಿಸಲಾಗುತ್ತಿತ್ತು. ಅವರಲ್ಲಿ ಅನೇಕರು ಅಡಿಗೆಗೆ ಬಳಸಲಾದ ಆಹಾರ ವಸ್ತುಗಳ ಪೌಷ್ಟಿಕ ಕೊರತೆ, ರುಚಿಹೀನತೆ ಮತ್ತು ಅದು ಹೊಟ್ಟೆಯುರಿತಕ್ಕೆ ಕಾರಣವಾಗಿದೆ ಎಂದು ದೂರು ಸಲ್ಲಿಸುತ್ತಿದ್ದರು. ಸೇಬಿನ ಹಣ್ಣಿನ ನಾಲ್ಕನೆ ಒಂದು ಭಾಗವನ್ನು ಊಟದ ಜೊತೆಗೆ ಸೇರಿಸಲಾಗಿರುತ್ತಿತ್ತು.



....ರಾಜಕೀಯ ಪಕ್ಷದ ಪ್ರಚಾರ ಅಲ್ರೀ... ಹಿರಿಯರು ಹೇಳ್ದಂಗೆ 'ಕನ್ನಡಕ್ಕಾಗಿ ಕೈ ಎತ್ತು'... ಅಂತ ಹೊರಟಿದ್ದಾರೆ...!!

ಕೆಲಸಗಾರರು ಅವರ ತಂಗುದಾಣಗಳನ್ನು ಬಿಟ್ಟು ಹೊರಗೆ ಹೋಗುವಂತಿರಲಿಲ್ಲ. ಆಗೊಮ್ಮೆ ಈಗೊಮ್ಮೆ ಅಲ್ಲಿಯ ಕಾವಲುಗಾರರ ಮೇಲ್ವಿಚಾರಣೆಯಲ್ಲಿ ಮಾರ್ಕೆಟ್‌ಗೆ ಕರೆದುಕೊಂಡು ಹೋಗಿ ಬರಲಾಗುತ್ತಿತ್ತು.

ಫ್ಯಾಕ್ಟರಿ ಕೆಲಸಗಾರರ ಸ್ಥಿತಿಗತಿಗಳು ಈ ರೀತಿ ಇದ್ದರೆ ಫ್ಲಾರಿಡಾದ ತೋಟಗಾರಿಕೆ ಕೆಲಸಗಾರರ ಸ್ಥಿತಿ ಇನ್ನೂ ಭಯಾನಕವಾಗಿದೆ. ಅಲ್ಲಿ ಒಟ್ಟು ಇಷ್ಟು ಜನ ಕೆಲಸಗಾರರಿದ್ದಾರೆ ಎಂಬ ಅಧಿಕೃತ ದಾಖಲೆಗಳೇ ಲಭ್ಯವಿಲ್ಲ. ವಿಶ್ವಾಸಾರ್ಹವಾದ ಒಂದು ಲೆಕ್ಕಾಚಾರದ ಪ್ರಕಾರ ಸುಮಾರು ಮೂರು ಲಕ್ಷ ಎಂದು ಅಂದಾಜು ಮಾಡಲಾಗಿದೆ. ಅವರಲ್ಲಿ ಶೇ. ೮೦ರಷ್ಟು ಕೆಲಸಗಾರರಿಗೆ ಕೆಲಸದ ದಾಖಲೆಪತ್ರಗಳೇ ಇಲ್ಲ. ೧೯೯೮ರಲ್ಲಿ ಅವರ ಸರಾಸರಿ ವಾರ್ಷಿಕ ಆದಾಯ ೬೫೭೪ ಡಾಲರುಗಳು ಎಂದು ಅಂದಾಜು ಮಾಡಲಾಗಿತ್ತು. ಅನಂತರ ಕಾಲದ ಹಣದುಬ್ಬರದಿಂದ ಶೇ. ೬೦ರಷ್ಟು ಇಳಿದಿದೆ.

ಫ್ಲಾರಿಡಾದ ಟೊಮೆಟೊ ಕಮಿಟಿಯ ಪ್ರಕಾರ ೨೦೦೫-೦೬ರ ಸುಗ್ಗಿಯ ಕಾಲದಲ್ಲಿ ಹಣ್ಣು ಕೀಳುವ ಫ್ಲಾರಿಡಾ ಕೆಲಸಗಾರರಿಗೆ ೨೫ ಪೌಂಡಿನ ಟೊಮೆಟೊ ಬಕೆಟ್ ಒಂದಕ್ಕೆ ೧೦.೨೭ ಡಾಲರ್ ನಿಗದಿಪಡಿಸ ಲಾಗಿದೆ. ಆದರೆ ಟೊಮೆಟೊ ಕೀಳಲೆಂದು ಮೆಕ್ಸಿಕೋ ದಿಂದ ವಲಸೆ ಬಂದ ಕೆಲಸಗಾರರಿಗಾದರೆ ಒಂದು ಬಕೆಟ್‌ಗೆ ಕೇವಲ ೪೫ ಸೆಂಟುಗಳನ್ನು ಮಾತ್ರ ಕೊಡ ಲಾಗುತ್ತಿತ್ತು. ಆ ದರವು ಕಳೆದ ೩೦ ವರ್ಷಗಳಿಂದ ಯಾವ ಬದಲಾವಣೆಯನ್ನೂ ಕಾಣದೆ ಸ್ಥಿರವಾಗಿದೆ.

ಒಂದು ದಿನಕ್ಕೆ ೫೦ ಡಾಲರು ದುಡಿಯಬೇಕಾದರೆ ತೋಟದ ಕೆಲಸಗಾರರು ಎರಡು ಟನ್‌ಗಳಷ್ಟು ಟೊಮೆಟೊಗಳನ್ನು ಬಿಡಿಸಿ ಗಾಡಿಗೆ ತುಂಬಬೇಕು. ಒಂದು ಬಕೆಟ್ ಟೊಮೆಟೊ ಸುಮಾರು ೩೨ ಪೌಂಡು ತೂಗುತ್ತದೆ. ಕೆಲಸಗಾರನು ಅದನ್ನು ತುಂಬುವಷ್ಟು ಟೊಮೆಟೊಗಳನ್ನು ಗಿಡಗಳಿಂದ ಕಿತ್ತು ಬಕೆಟ್ಟಲ್ಲಿ ತುಂಬಿ ಹೆಗಲ ಮೇಲೆ ಹೊತ್ತು ಮತ್ತನೆಯ ನೆಲದ ಮೇಲೆ ನಡೆದು ಟೊಮೆಟೊಗಳು ಮಾಗಿವೆಯೋ ಇಲ್ಲವೋ ಎಂಬ ಪರೀಕ್ಷೆಗೆ ಒಳಪಡಿಸಿ ಮಧ್ಯದ ಕಣದಲ್ಲಿ ಸುರಿದು ಪುನಃ ಟೊಮೆಟೊ ತೋಟದ ಕಡೆಗೆ ಓಡಬೇಕಾಗಿತ್ತು.

ಕಿತ್ತಳೆ ಮತ್ತು ದ್ರಾಕ್ಷಿ ಹಣ್ಣುಗಳನ್ನು ಕೀಳುವುದಕ್ಕೆ ಸ್ವಲ್ಪ ಹೆಚ್ಚಿನ ಕೂಲಿ ದೊರೆಯುತ್ತಿತ್ತು. ಆದರೆ ಅಲ್ಲಿ ಹೆಚ್ಚು ಘಂಟೆ ಕೆಲಸ ಮಾಡಬೇಕಾಗಿತ್ತು. ಆ ಹಣ್ಣುಗಳನ್ನು ಕೀಳುವವರು ಏಣಿಗಳ ಮೇಲೆ ೧೨ರಿಂದ ೧೮ ಅಡಿ ಗಳಷ್ಟು ಎತ್ತರಕ್ಕೆ ಹತ್ತಿ ಇಳಿಯಬೇಕಾಗಿತ್ತು. ಬೆನ್ನ ಮೇಲಿನ ಚೀಲ ಸುಮಾರು ನೂರು ಪೌಂಡು ತೂಗುತ್ತಿದ್ದವು. ಅಂತಹ ಹತ್ತು ಚೀಲಗಳಲ್ಲಿ ಸುಮಾರು ೨೦೦೦ ಕಿತ್ತಳೆ ಹಣ್ಣುಗಳನ್ನು ರಾಶಿ ಹಾಕಿದರೆ ಕೆಲಸಗಾರನಿಗೆ ಒಂದು ಟೋಕನ್ ದೊರೆಯುತ್ತಿತ್ತು. ಅದರ ಬೆಲೆ ಏಳು ಡಾಲರುಗಳು. ಒಬ್ಬ ಸಾಮಾನ್ಯ ಕೆಲಸಗಾರ ಒಂದು ಸಾಧಾರಣ ಹಣ್ಣಿನ ತೋಟದಲ್ಲಿ ಒಂದು ದಿನಕ್ಕೆ ಆರರಿಂದ ಎಂಟು ರಾಶಿ ಹಣ್ಣುಗಳನ್ನು ಕೀಳಬಹುದಾಗಿತ್ತು. ಮಳೆಯ ನಂತರ ಹಳೆಯ ತೋಟದಲ್ಲಿ ಅಥವಾ ಮುದಿ ಮರಗಳ ಹೊಲದಲ್ಲಿ ಅದೇ ಕೆಲಸಗಾರ ಕೇವಲ ೩-೪ ರಾಶಿಗಳಷ್ಟು ಹಣ್ಣುಗಳನ್ನು ಮಾತ್ರ ಕೀಳುತ್ತಿದ್ದ.

ಅಕ್ರಮವಾಗಿ ಅಮೆರಿಕಾದೊಳಗೆ ಪ್ರವೇಶಿಸು ವವರಿಗೆ ಅತ್ಯಂತ ಅಪಾಯವಿದೆ ಎಂದು ಎಲ್ಲರೂ ಬಲ್ಲರು. ಪ್ರಾರಂಭದಲ್ಲಿ ಗಡಿಯೊಳಗೆ ನುಸುಳುವುದೇ ಅಪಾಯ. ಒಳಗೆ ಪ್ರವೇಶಿಸಿದ ಮೇಲೆ ಅಲ್ಲಿ ನೀರು ಮತ್ತು ಆಹಾರಗಳ ಕೊರತೆಯಿಂದ ಫ್ಲೋರಿಡಾದ ಬೆಂಗಾಡಿನ ಉಷ್ಣದಿಂದ ಸಾಯಬೇಕಾದುದು ಸರ್ವೇಸಾಮಾನ್ಯ. ೧೯೯೫ರಿಂದ ೨೦೦೪ರವರೆಗೆ ೩೦೦೦ಕ್ಕಿಂತ ಹೆಚ್ಚಿನ ಮೆಕ್ಸಿಕನ್ನರು ಸಂಯುಕ್ತ ರಾಜ್ಯಗಳೊಳಗೆ ಪ್ರವೇಶಿಸುವಾಗ ಸತ್ತಿರುತ್ತಾರೆ. ಯುನೈಟೆಡ್ ಸ್ಟೇಟ್ಸ್ ಬಾರ್ಡರ್ ಪೆಟ್ರೋಲ್ ಪ್ರಕಾರ ಸಾವಿನ ಪ್ರಮಾಣ ಅಧಿಕವಾಗುತ್ತಿದೆ. ಇತ್ತೀಚಿನ ಹನ್ನೆರಡು ತಿಂಗಳ ಅವಧಿಯೊಳಗೆ ೪೬೦ ವಲಸೆಗಾರರು ಗಡಿ ದಾಟುವಾಗ ಸಾವಿಗೀಡಾಗಿದ್ದಾರೆ.

ದಕ್ಷಿಣ ಫ್ಲೋರಿಡಾದಲ್ಲಿ ವಲಸೆ ಬಂದ ರೈತರ ಶೋಷಣೆ ಅಗಾಧವಾಗಿ ನಡೆದಿದೆ. ಅವರು ತಮ್ಮ ಕಷ್ಟಗಳನ್ನು ಯಾರೊಡನೆಯೂ ಹೇಳಿಕೊಳ್ಳುವಂತಿಲ್ಲ. ದೂರದ ಕಾಲನಿಗಳಲ್ಲಿ ಬಂದಿಗಳಾಗಿರುವ ಅವರನ್ನು ಮುಂಜಾನೆ ೪-೩೦ ರಿಂದ ೫ ಘಂಟೆಯೊಳಗೆ ಒಂದು ನಿಗದಿತ ಸ್ಥಳದಿಂದ ಬಸ್ಸುಗಳಲ್ಲಿ ಕೊಂಡೊಯ್ದು ಮಧ್ಯಾಹ್ನನಂತರ ಅದೇ ಸ್ಥಳಗಳಲ್ಲಿ ಇಳಿಸಲಾಗುತ್ತಿತ್ತು. ಸಂಜೆ ವೇಳೆಗೆ ತಮ್ಮ ವಸತಿ ತಾಣಗಳಲ್ಲಿ ಬಟ್ಟೆ ತೊಳೆಯುವುದು, ಅಡಿಗೆ ಮಾಡಿಕೊಳ್ಳುವುದು, ಸಮಯ ಉಳಿದರೆ ಸಾರ್ವಜನಿಕ ದೂರವಾಣಿ ಕೇಂದ್ರಗಳಲ್ಲಿ ಸಾಲಾಗಿ ನಿಂತು ಬಾಡಿಗೆ ತೆತ್ತು ತಮ್ಮ ದೂರದ ಕುಟುಂಬ ದವರೊಡನೆ ಮಾತನಾಡುವುದು ಇತ್ಯಾದಿ ಕೆಲಸಗಳಲ್ಲಿ ತೊಡಗುತ್ತಿದ್ದರು. ಅವರು ತಮ್ಮ ಕಾಲನಿಗಳನ್ನು ಬಿಟ್ಟು ಹೊರಗೆ ಹೋದರೆ ತೀವ್ರ ಶಿಕ್ಷೆಗೆ ಒಳಗಾಗುತ್ತಿದ್ದರು.

ಕೆಲಸಗಾರರ ಚಲನವಲನಗಳ ಬಗ್ಗೆ ಕ್ರೂರ ಕಟ್ಟುಪಾಡು ದಬ್ಬಾಳಿಕೆಗಳ ವಿರುದ್ಧ ಹಿಂದೆ ವಿವರಿಸಲಾದ ಭಾರತೀಯ ಕೆಲಸಗಾರರು ಮೊಟ್ಟಮೊದಲು ಹೋರಾಟ ಪ್ರಾರಂಭಿಸಿದರು. ರಾಷ್ಟ್ರಮಟ್ಟದಲ್ಲಿ ಅಂತಹ ಬಂಡಾಯ

# Cambridge Advanced Learner's Dictionary

**Third Edition**

This brand new edition of the *Cambridge Advanced Learner's Dictionary* and CD-ROM is now more **user-friendly** than ever. The **clear definitions** and **prominent guidewords** help you to find the meaning that you want quickly and easily, and even more **pictures and illustrations** help highlight variations in meaning that are essential for the advanced student's progression. Hundreds of new words (e.g. *drill down, food miles, life coach*) ensure that your English is natural-sounding and right up to date, and the most frequently used words are highlighted. **'Word partner' boxes** also show you how to use words in the most natural and fluent way.




The accompanying **CD-ROM** has a fresh new design, and is now even easier to use. You can **listen to every word** in British and American English and even record you own pronunciation and play it back.

**The best bits of the dictionary...**

NEW! 'Extra help' section includes full-page illustrations and photos, maps and the innovative 'Let's Talk' section, focussing on conversation, and **how people really speak** in day-to-day situations.

NEW! Even more 'Common Mistakes' boxes taken from the Cambridge Learner Corpus – based on real student errors from Cambridge ESOL papers –help you to **avoid typical errors.**

NEW! Thesaurus panels provide **alternatives to over-used words,** helping you to widen your vocabulary and help make your English sound more natural.

**The best bits of the CD-ROM...**

**Interactive exercises** including exam practice and real past papers for IELTS, FCE, CAE, and BEC.

Extra **collocation information** and thousands of example sentences.

UNIQUE! Cambridge **SMART thesaurus** turns the dictionary into a thesaurus at the click of a button.

QUICKfind, a mini pop-up version of the dictionary, gives you **instant definitions** when surfing the web or reading on screen.

| | | |
|---|---|---|
| PB | ISBN: 9780521759359 | Rs.450.00 |
| PB+CD-ROM | ISBN: 9780521732123 | Rs. 530.00 |
| HB+CD-ROM | ISBN: 9780521732130 | Rs. 630.00 |



CAMBRIDGE
UNIVERSITY PRESS
India Private Limited
www.cambridgeindia.org

C-22, Brigade M.M., K.R. Road, Jayanagar, Bangalore-560070
Tel.: 65593388, 26764817, 26762764 Fax: 26761322
Email: cupbang@cambridge.org

**Delhi • Bangalore • Mumbai •Kolkata • Chennai • Hyderabad • Pune**

ಹಿಂದೆಂದೂ ವರದಿಯಾಗಿರಲಿಲ್ಲ. ಅಲ್ಲಿಯ ಕೆಲಸಗಾರರಿಗೆ ಎರಡು ಆಯ್ಕೆಗಳು ಮಾತ್ರ ಇದ್ದುವು: ಒಂದು ಅಮಾನವೀಯ ರೀತಿ-ನೀತಿಗಳನ್ನು ಒಪ್ಪಿಕೊಳ್ಳುವುದು. ಇಲ್ಲವೆ, ಎದ್ದುನಿಂತು ಹೋರಾಡುವುದು. ತಜ್ಞ ವಕೀಲರಿಗೆ ಕೊಡಲು ಅವರಲ್ಲಿ ಹಣವಿರಲಿಲ್ಲ. ಆದರೂ ಕೆಂಟ ಫೆಲ್ಪಿ ಎಂಬ ತಜ್ಞ ನ್ಯಾಯವಾದಿ ಅವರಿಂದ ಹಣವನ್ನು ನಿರೀಕ್ಷಿಸದೆ ನಾಗರಿಕ ಹಕ್ಕುಗಳ ಪರವಾಗಿ ಹೋರಾಡಲು ಸ್ವಸಂಕಲ್ಪದಿಂದ ಮುಂದೆಬಂದರು. ಕಂಪನಿಗೆ ಕೆಲಸಗಾರರನ್ನು ಒದಗಿಸುವ ಭಾರತೀಯ ದಳ್ಳಾಳಿಗಳು ಕೆಲಸ ಮಾಡುವವರ ಮಡದಿಯರನ್ನು ಸಂಪರ್ಕಿಸಿ ನಿಮ್ಮ ಗಂಡಂದಿರು ಪಿಕಲ್ ಕಂಪನಿಯ ಹದ್ದುಬಸ್ತಿನಾಚೆ ಹೆಜ್ಜೆಯನ್ನಿಟ್ಟರೆ ಅವರ ಗತಿ ಚೆನ್ನಾಗಿರುವುದಿಲ್ಲ ಎಂದು ಹೆದರಿಸುತ್ತಿದ್ದರು. ಒಂದು ಸಾರಿ ಜಗದೀಶ ಪ್ರಜಾಪತಿ ಎಂಬ ಕೆಲಸಗಾರ ಭಾರತದಲ್ಲಿ ನೆಲಸಿದ್ದ ತನ್ನ ಹೆಂಡತಿಗೆ ದೂರವಾಣಿ ಕರೆ ಮಾಡಿದಾಗ ಈ ವಿಷಯ ತಿಳಿದು ಬಂದಿತು ಎಂದು ಹೇಳಿದ್ದಾನೆ.

ಜಾನ್ ಬುವೆ ತನ್ನ 'Nobodies' (ಅಸ್ತಿತ್ವ ಇಲ್ಲದವರು) ಎಂಬ ಪುಸ್ತಕದಲ್ಲಿ ವಿಸ್ತಾರವಾದ ಅಂಕಿ ಅಂಶಗಳನ್ನು ಒದಗಿಸಿದ್ದಾರೆ. ಪ್ರಜೆಗಳಿಗೆ ನಾಗರಿಕ ಹಕ್ಕುಗಳು, ಅಬ್ರಹಾಂ ಲಿಂಕನ್‌ರವರ ಉದಾತ್ತ ಹೋರಾಟದಿಂದ ಅಧಿಕೃತವಾಗಿ ದೊರೆತ ೧೪೫ ವರ್ಷಗಳ ನಂತರವೂ ಪ್ರತಿವರ್ಷ ಅಮೆರಿಕಾಕ್ಕೆ ಅನ್ಯದೇಶಗಳಿಂದ ೧೪,೫೦೦ರಿಂದ ೧೭೦೦೦ ಕೆಲಸಗಾರರನ್ನು ಕದ್ದು ತರಲಾಗುತ್ತಿದೆ ಮತ್ತು ಅವರಿಗೆ ಕೆಲಸ ಮಾಡಲು ಇಷ್ಟವಿರದಿದ್ದರೂ ಅವರನ್ನು ಹೆದರಿಸಿ ಅವರಿಂದ ಅಂತಹ ಕೆಲಸ ಮಾಡಿಸಿಕೊಳ್ಳಲಾಗುತ್ತಿದೆ ಎಂಬುದು ಅಮೆರಿಕನ್ನರಿಗೇ ಗಾಬರಿಯನ್ನು ಹುಟ್ಟಿಸುತ್ತಿದೆ. ವಿವಿಧ ವರ್ಗದ ನಾಗರಿಕರನ್ನು ಸಂಪರ್ಕಿಸಿದ ಲೇಖಕರು ದಾಸ್ಯ ಪದ್ಧತಿ ಅಮೆರಿಕದ ನೆಲದ ಮೇಲೆ ಪುನರವತರಿಸಲು ಯಾರು ಕಾರಣರು, ಎಂಬ ಪ್ರಶ್ನೆಯನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ವಿವೇಚಿಸಿದ್ದಾರೆ. ಅಮೆರಿಕಾದ ಪ್ರಮುಖ ಕಂಪನಿಗಳು ಕಾರ್ಖಾನೆಗಳು ಒಂದಲ್ಲ ಒಂದು ಹಂತದಲ್ಲಿ ದಾಸ್ಯ ಸೇವೆಯನ್ನು ಅವಲಂಬಿಸಿರುತ್ತವೆ. ಕೆಲಸಗಾರರಿಗೆ ಉತ್ತಮ ವೇತನ ಮತ್ತು ಉತ್ತಮ ಸೇವಾ ನಿಯಮಗಳನ್ನು ಒದಗಸಲು ಅನೇಕ ಸಂಘಟನೆಗಳು ನೈತಿಕ ಬೆಂಬಲವನ್ನು ನೀಡುತ್ತಿವೆ. ಕಂಪನಿಗಳು ತಾವು ಕೆಲಸಗಾರರ ಶೋಷಣೆಯಿಂದ ಗಳಿಸಿದ ಮಿಲಿಯನ್‌ಗಳು ಮುಂದೆ ತಮ್ಮ ಹಾಳಾದ ಹೆಸರನ್ನು ಸರಿಪಡಿಸಿಕೊಳ್ಳಲು ಮಾಡುವ ವೆಚ್ಚಕ್ಕೆ ಸಾಲದೆ ಬರುತ್ತದೆ ಎಂಬುದನ್ನು ಲೇಖಕರು ಮನವರಿಕೆ ಮಾಡುತ್ತಾರೆ.

ಕೆಲಸಗಾರರ ಸಂಘಟನೆಗಳು ನ್ಯಾಯಾಲಯದಲ್ಲಿ ಜಾನ್ ಪಿಕಲ್ ಕಂಪನಿಯ ವಿರುದ್ಧ ಹೋರಾಡಿದುದರ ಪರಿಣಾಮವಾಗಿ ಕಂಪನಿಯ ವಿರುದ್ಧ ನ್ಯಾಯಾಲಯ ಉಗ್ರ ತೀರ್ಪು ನೀಡಿ ಕೆಲಸಗಾರರಿಗೆ ನ್ಯಾಯ ದೊರಕಿಸಿ ಕೊಟ್ಟಿತು. ಜಾನ್ ಪಿಕಲ್ ಕಂಪನಿಯ ಮಾಲೀಕರಾಗಲು ಇಂದು ಯಾರೂ ಇಷ್ಟಪಡುತ್ತಿಲ್ಲ. ಕೆಲಸಗಾರರಿಗೆ ಇನ್ನೂ ದೊರೆಯಬೇಕಾದ ಪರಿಹಾರ ೧.೨೫ ಮಿಲಿಯನ್ ಡಾಲರುಗಳನ್ನು ನೀಡಲು ಸಹ ಅದು ಸಮರ್ಥವಾಗಿಲ್ಲ. ಅದರ ಮೌಲ್ಯ ೩೦ ಮಿಲಿಯನ್ ಡಾಲರುಗಳು ಎಂದು ಅಂದಾಜು ಮಾಡಲಾಗಿದೆಯಾದರೂ ಅದನ್ನು ಕೊಳ್ಳಲು ಯಾರೂ ಮುಂದೆ ಬರದೆ ಇದ್ದಾಗ ಕುಟುಂಬದ ಒಬ್ಬ ಸದಸ್ಯರಿಗೆ ಅದನ್ನು ಕೇವಲ ಒಂದು ಮಿಲಿಯನ್ ಡಾಲರುಗಳಿಗೆ ಮಾರಲಾಯಿತಂತೆ.

ಈ ಮಧ್ಯೆ ಆ ವಿವಾದದಿಂದ ಕೆಲಸಗಾರರಿಗೆ ತಮ್ಮ ಶಕ್ತಿ ಸಾಮರ್ಥ್ಯಗಳೇನು ಎಂದು ತಿಳಿಯಲು ಸಹಾಯವಾಗಿದೆ. ಅವರಲ್ಲಿ ಅನೇಕರು ಒಂದು ಘಂಟೆಗೆ ೪೦ ಡಾಲರು ಗಳಿಸಲು ಆರಂಭಿಸಿ ಭಾರತದಲ್ಲಿದ್ದ ಅವರ ಮಡದಿಯರನ್ನು ಅಮೆರಿಕಾಕ್ಕೆ ಕರೆಸಿಕೊಂಡಿದ್ದಾರೆ.

ಅಮೆರಿಕಾದ ವಾಣಿಜ್ಯೋದ್ಯಮದಲ್ಲಿ ರೂಢಿಯಲ್ಲಿ ಇರುವ ದಾಸ್ಯ ಪದ್ಧತಿಯನ್ನು ಆಳವಾಗಿ ಅಭ್ಯಾಸ ಮಾಡಿರುವ ಜಾನ್ ಬುವೆಯನ್ನು 'ಇಂಡಿಯಾ ಅಬ್ರಾಡ್' ಪತ್ರಿಕೆಯ ವರದಿಗಾರ ಆರ್ಥರ್ ಜೆ. ಪಾಯಿಸ್ ಸಂದರ್ಶಿಸಿ ಕೆಲವು ಸ್ವಾರಸ್ಯಕರ ಸಂಗತಿಗಳನ್ನು ಬಹಿರಂಗಗೊಳಿಸಿದ್ದಾರೆ. ಪ್ರಾಚೀನ ಕಾಲದಲ್ಲಿ ಗುಲಾಮರನ್ನು ಸರಪಣಿಗಳಲ್ಲಿ ಬಂಧಿಸಿ ಇಡುತ್ತಿದ್ದರು. ಆದರೆ ಇಂದು ಸರಪಣಿಗೆ ಬದಲು ಗಡಿಪಾರು ಮಾಡುವ ಬೆದರಿಕೆ, ದೈಹಿಕ ಹಲ್ಲೆ, ಮೂಲದೇಶದಲ್ಲಿರುವ ಕುಟುಂಬದವರಿಗೆ ತೊಂದರೆ, ಹೀಗೆ ಪ್ರಾಣಹಾನಿಯವರೆಗೂ ಅದು ವ್ಯಾಪಿಸಿದೆ. ಬುವೆ ರಚಿಸಿರುವ ಪುಸ್ತಕದಲ್ಲಿ ಭಾರತೀಯ ಮೂಲದ ಕೆಲಸಗಾರರಷ್ಟೇ ಅಲ್ಲದೆ ಮೆಕ್ಸಿಕೋ ಮೂಲದ ಕೆಲಸಗಾರರು ಫ್ಲೋರಿಡಾದ ಕಿತ್ತಳೆ ತೋಟಗಳಲ್ಲಿ ದಾರುಣವಾಗಿ ದುಡಿಯುತ್ತಿರುವುದು ಮತ್ತು ಅಮೆರಿಕಾ ಅಂಚಿನಲ್ಲಿರುವ ಸಾಯಿತನ್ ಪ್ರದೇಶದ ಕೆಲಸಗಾರರನ್ನು ಬಟ್ಟೆ ಕಾರ್ಖಾನೆಗಳಲ್ಲಿ ಬೆವರಿಳಿಯುವಂತೆ ದುಡಿಸಿಕೊಳ್ಳುವುದು ಸಹ ಸೇರಿದೆ. ಅದರಲ್ಲಿ ಒಕ್ಲಹಾಮಾದ ಉಕ್ಕು ಕತ್ತರಿಸುವ ಒಂದು ಕಾರ್ಖಾನೆಯ ಮಾಲೀಕ ಭಾರತ ಮೂಲದ ಒಬ್ಬ ಗುತ್ತಿಗೆದಾರನ ಮೂಲಕ ಭಾರತೀಯ ಕೆಲಸಗಾರರನ್ನು ಕೆಲಸಕ್ಕೆ ಸೇರಿಸಿಕೊಂಡು ಅವರಿಗೆ ಕಡಿಮೆ ವೇತನ ನೀಡಿ ಹೆಚ್ಚು ಕೆಲಸ ಮಾಡಿಸಿಕೊಳ್ಳುವುದು ಮತ್ತು ಇಕ್ಕಟ್ಟಾದ ವಸತಿಗಳಲ್ಲಿ ಕೂಡಿ ಹಾಕುವುದು, ಅವರೇನಾದರೂ ಪ್ರತಿಭಟಿಸಿದರೆ ಹಿಂದಕ್ಕೆ ಕಳಿಸುವ ಬೆದರಿಕೆ ಒಡ್ಡುವುದು ಸಹ ಮಾಡುತ್ತಿದ್ದ.

ಕೆಲಸಗಾರರ ಪರವಾಗಿ ಕೆಲಸ ಮಾಡುವ ಕೆಲವು ಸಂಘಟನೆಗಳ ಕಾರ್ಯವಿಧಾನ ಇತ್ಯಾದಿ ವಿವರಗಳು ಸಹ ಪುಸ್ತಕದಲ್ಲಿ ದೊರೆಯುತ್ತವೆ. ಅಷ್ಟೇ ದೊಡ್ಡ ಕಾರ್ಪೋರೇಷನ್ನುಗಳು ಸಹ ತಮಗೆ ಒಳ್ಳೆಯ ಹೆಸರು ದೊರೆಯಬೇಕೆಂಬ ಉದ್ದೇಶದಿಂದ ಮಿಲಿಯನ್ ಗಟ್ಟಲೆ ಹಣ ಖರ್ಚು ಮಾಡುತ್ತವೆ. ಕೆಲವು ಸಾರಿ ಅವು ಕೆಲಸಗಾರರ ಪರವಾಗಿರುವ ಸಂಘಟನೆಗಳು ನಿರೀಕ್ಷಿಸುವುದಕ್ಕಿಂತ ಹೆಚ್ಚು ಫಲ ನೀಡಿವೆ. ಕೆಲವು ಕಂಪನಿಗಳು ದಾಸ್ಯಪದ್ಧತಿಯನ್ನು ಸಂಪೂರ್ಣವಾಗಿ ತ್ಯಜಿಸಿ ಅಮಾನವೀಯ ವ್ಯವಹಾರವನ್ನು ಕೈಬಿಟ್ಟಿವೆ.

ಈ ಪುಸ್ತಕ ರಚನೆಗೆ ಮೂಲ ಪ್ರೇರಣೆ ಮೆಕ್ಸಿಕನ್ ರೈತ ಕೆಲಸಗಾರರಾಗಿದ್ದಾರೆ ಎಂದು ಲೇಖಕರೇ ಹೇಳುತ್ತಾರೆ. ಜಾಗತೀಕರಣದ ಇಂದಿನ ದಿನಮಾನಗಳ ನಡುವಿನ ದೂರ ಕಡಿಮೆಯಾಗುತ್ತಿದೆ; ಒಂದೇ ಹಳ್ಳಿಯ ಒಂದು ಕೇರಿ ಇನ್ನೊಂದು ಕೇರಿಯೊಡನೆ ಸಂಬಂಧ ಇಟ್ಟುಕೊಂಡಂತೆ. ಭಾರತದಲ್ಲಿ ಮೇಲು ಜಾತಿಯ ಕೇರಿಯವರು ಕೆಳಜಾತಿಯ ಕೇರಿಯವರಿಂದ ಬಿಟ್ಟಿ ದುಡಿಸಿಕೊಳ್ಳುತ್ತಿದ್ದರು. ಇಂದು ಜಾಗತಿಕ ಮಟ್ಟದಲ್ಲಿ ಶ್ರೀಮಂತ ದೇಶಗಳ ಶ್ರೀಮಂತರು ಬಡ ದೇಶಗಳ ಬಡವರನ್ನು ಹಾಗೆ ದುಡಿಸಿಕೊಳ್ಳುತ್ತಿದ್ದಾರೆ. ಪರಿಣಾಮವಾಗಿ ಶ್ರೀಮಂತರು ಇನ್ನೂ ಹೆಚ್ಚು ಶ್ರೀಮಂತರಾಗುತ್ತಿದ್ದಾರೆ ಮತ್ತು ಬಡವರು ಇನ್ನೂ ಹೆಚ್ಚು ಬಡವರಾಗುತ್ತಿದ್ದಾರೆ.

ಶ್ರೀಮಂತರು ದೊಡ್ಡ ಪ್ರಮಾಣದಲ್ಲಿನ ದಾಸ್ಯ ವ್ಯವಹಾರದಲ್ಲಿ ತೊಡಗಿದ್ದರೆ ಮಧ್ಯಮ ವರ್ಗದವರೂ ತಮ್ಮ ಶಕ್ತ್ಯಾನುಸಾರ ಅದರಲ್ಲಿ ಭಾಗವಹಿಸುತ್ತಿರುವುದನ್ನು ನಾವು ನೋಡಬಹುದು. ಲೇಖಕರು ಒಂದು ದೃಷ್ಟಾಂತವನ್ನು ದಾಖಲಿಸಿದ್ದಾರೆ. ಅಮೆರಿಕಾ ಸ್ಯಾನ್‌ಯೋಸೇಯಲ್ಲಿ ಲಕಿರೆಡ್ಡಿ ಬಾಲಿರೆಡ್ಡಿ ಎಂಬಾತ ಹದಿಹರೆಯದ ಹುಡುಗಿಯರನ್ನು ಲೈಂಗಿಕ ಬಳಕೆಗಾಗಿ ಒದಗಿಸುವ ಉದ್ಯಮದಲ್ಲಿ ತೊಡಗಿದ್ದ ಎಂದು ಪತ್ತೆಯಾಗಿ ಆತನನ್ನು ಶಿಕ್ಷೆಗೆ ಒಳಪಡಿಸಲಾಗಿದೆ. ಇನ್ನೊಂದು ಪ್ರಕರಣದ ಪ್ರಕಾರ ನ್ಯೂಯಾರ್ಕಿನಲ್ಲಿ ಭಾರತೀಯ ದಂಪತಿಗಳು ದಾಸ್ಯ ಪದ್ಧತಿಯ ವ್ಯವಹಾರದಲ್ಲಿ ತೊಡಗಿದ್ದರು ಎಂಬ ಕಾರಣಕ್ಕಾಗಿ ಶಿಕ್ಷೆಗೆ ಒಳಗಾಗಿದ್ದಾರೆ.

ಜಾನ್ ಬುವೆಯ 'Nobodies' ಪುಸ್ತಕ ಶ್ರೀಮಂತರಿಗಾಗಿ ದುಡಿಯುವ ಬಡ ಕೆಲಸಗಾರರ ದಾರುಣ ಸ್ಥಿತಿಯನ್ನು ವಿವರಿಸುವ ಜೊತೆಗೆ ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಸಮಾನತೆ ಎಂಬ ಆದರ್ಶಗಳ ಬೇರುಗಳನ್ನು ಶೋಧಿಸುತ್ತಾ ಹೋಗುತ್ತದೆ.

ಪ್ರೊ|| ಬಿ. ಎ. ವೀರಭದ್ರಪ್ಪ
ಬಿ-೧೮ ವಿದ್ಯಾನಗರ, ದಾವಣಗೆರೆ - ೫೭೭ ೦೦೫

## ಮಳೆಗೆ ಮುನ್ನ

ಗುಡುಗು ಸಿಡಿಲು
ಬಿರುಗಾಳಿಗೆ
ಭಯಗೊಂಡಿದ್ದ
'ಭೂಮಿ'
ಕ್ಷಣದಲ್ಲಿ ಸುರಿದ
ಮಳೆಗೆ ನಾಚಿ
ನೀರಾದಳು.

ಚಂದ್ರಶೇಖರ ಚನ್ನೇಗೌಡ್ರ
ಶಿರಗೋಡ - ೫೮೧ ೧೦೪
ಹಾನಗಲ್ಲ ತಾಲ್ಲೂಕು, ಹಾವೇರಿ ಜಿಲ್ಲೆ



### ಆ ಗಣರಾಜ್ಯ – ಈ ಕರ್ನಾಟಕ

*ಸಂ. : ಡಿ. ಎಸ್. ನಾಗಭೂಷಣ*

**ಪುಟ : viii + ೧೨೪** **ಬೆಲೆ : ರೂ. ೬೦**

**ಲೋಹಿಯಾ ಪ್ರಕಾಶನ,** 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿ ನಗರ, ಬಳ್ಳಾರಿ - ೫೮೩ ೧೦೩

'ಸುವರ್ಣ ಕರ್ನಾಟಕ' ಸಂದರ್ಭದ ಹಿನ್ನೆಲೆಯಲ್ಲಿ 'ವಿಕ್ರಾಂತ ಕರ್ನಾಟಕ' ವಾರಪತ್ರಿಕೆಗಾಗಿ ಡಿ. ಎಸ್. ನಾಗಭೂಷಣ ರವರು ಆಯೋಜಿಸಿದ ವಿಶೇಷ ಲೇಖನ ಮಾಲೆಯ ಸಂಗ್ರಹವಿದು. ಇದರಲ್ಲಿ, ಸುವರ್ಣ ಕರ್ನಾಟಕದ ಸುವರ್ಣ ಪುಟಗಳಲ್ಲಿ ಹೆಸರಿಸಲೇಬೇಕಾದ ಸಾಹಿತ್ಯದ ವಿವಿಧ ವಲಯಗಳ ಹತ್ತು ಅತ್ಯುತ್ತಮ ಫಲವಂತಿಕೆಗಳನ್ನು, ಅಂದರೆ, ಹತ್ತು ಭಾವಗೀತೆಗಳು, ಕಾವ್ಯ, ಕತೆ, ಕಾದಂಬರಿ, ವಿಮರ್ಶೆ, ಸಂಶೋಧಕರು, ಕ್ರೀಡಾಪಟುಗಳು, ರಾಜಕಾರಣಿಗಳು – ಹೀಗೆ ತಾರ್ಕಿಕ ವಿಶ್ಲೇಷಣೆ ಯನ್ನೊಳಗೊಂಡ ಹದಿನಾಲ್ಕು ಲೇಖನಗಳನ್ನು ಆಯಾ ಕ್ಷೇತ್ರಗಳ ಪರಿಣತರಿಂದ ಬರೆಸಿ ದಾಖಲಿಸಲಾಗಿದೆ. 'ಆ ಗಣರಾಜ್ಯ – ಈ ಕರ್ನಾಟಕ' ಮತ್ತು 'ಸುವರ್ಣ ಕರ್ನಾಟಕದ ಸುವರ್ಣ ಪುಟಗಳು : ಒಂದು ಮುನ್ನೋಟ' – ಎಂಬ ಲೇಖನಗಳು 'ಕರ್ನಾಟಕತ್ವ' ಕುರಿತ ಪ್ರಗತಿಪರವಾದ ಸೂಕ್ಷ್ಮ ವಿಚಾರಗಳಿಂದ ಕೂಡಿವೆ. ಕನ್ನಡದ ಶ್ರೇಷ್ಠ ಪ್ರತಿಭೆಗಳನ್ನು ಒಂದೆಡೆ ದಾಖಲಿಸುವಲ್ಲಿ ಈ ಕೃತಿಯ ಪ್ರಯತ್ನ ಶ್ಲಾಘನೀಯವಾದದ್ದು.

### ಕದಡು (ಸಾಹಿತ್ಯ-ಸಂಸ್ಕೃತಿ-ವಿಮರ್ಶೆ)

*ಡಾ॥ ಬಿ. ಎಂ. ಪುಟ್ಟಯ್ಯ*

**ಪುಟ : xii + ೧೭೬** **ಬೆಲೆ : ರೂ. ೧೨೦**

**ಸಿದ್ಧಾರ್ಥ ಪ್ರಕಾಶನ,** ಶಂಕರ ಕಾಲೋನಿ, ಎಂ. ಪಿ. ಪ್ರಕಾಶ್ ನಗರ, ಹೊಸಪೇಟೆ - ೫೮೩ ೨೦೧



ಕನ್ನಡದ ಮುಖ್ಯ ಸಾಹಿತ್ಯಕ, ಸಾಂಸ್ಕೃತಿಕ ಚಿಂತಕರಾದ ಬಿ. ಎಂ. ಪುಟ್ಟಯ್ಯನವರ ಸಾಹಿತ್ಯ, ಸಂಸ್ಕೃತಿ, ವಿಮರ್ಶಾ ಲೇಖನಗಳ ಸಂಗ್ರಹವಿದು. ಹಲವು ವಸ್ತು ವಿಷಯ ವಿಸ್ತಾರವುಳ್ಳ ಹನ್ನೊಂದು ಲೇಖನಗಳ ಈ ಸಂಕಲನದಲ್ಲಿ ಲೇಖಕರ ಸಾಮಾಜಿಕ ಕಳಕಳಿ ಮತ್ತು ಮನುಷ್ಯ ಕೇಂದ್ರಿತವಾದ ತಾತ್ವಿಕತೆಯು ಸ್ಥಾಯಿಯಾಗಿದೆ. ಅಂಚಿನ ನೆಲೆಯಿಂದ, ಕಡೆಗಣಿಸಲ್ಪಟ್ಟ ವಸ್ತು-ವಿಶೇಷಗಳ ಕಡೆಯಿಂದ, ಸಾಹಿತ್ಯ ಮತ್ತು ಸಂಸ್ಕೃತಿಯನ್ನು ವಿಮರ್ಶಿಸುವ ಇಲ್ಲಿನ ಬರಹಗಳು ಸಮಾಜವಾದಿ ದೃಷ್ಟಿಕೋನದ ಹೊಸ ವ್ಯಾಖ್ಯಾನಗಳಂತಿವೆ. ಎಲ್ಲಾ ಲೇಖನಗಳು ಸಾಹಿತ್ಯ, ಸಂಸ್ಕೃತಿಯನ್ನು ಹೊಸ ತಿಳುವಳಿಕೆಯೊಡನೆ ಮರುವ್ಯಾಖ್ಯಾನಕ್ಕೆ ಒಳಪಡಿಸಿವೆ. ಕನ್ನಡ ಅಧ್ಯಯನದ ಸಂದರ್ಭದಲ್ಲಿ ಹೊಸ ತಿರುವನ್ನು ಹುಟ್ಟುಹಾಕುವ ಬರಹಗಳಿವು.



### ಮೀನಿನ ಹೊಳಪನ್ನು ನೀರಿಗೇ ಬಿಟ್ಟು (ಕವನ ಸಂಕಲನ)

*ವಸಂತ ಬನ್ನಾಡಿ*

**ಪುಟ : ೨೪ + ೧೨೦** **ಬೆಲೆ : ರೂ. ೮೦**

**ತಿಂಗಳ ಬೆಳಕು ಪ್ರಕಾಶನ,** ವಿಠ್ಠಲವಾಡಿ, ವಡೇರಹೋಬಳಿ, ಕುಂದಾಪುರ - ೫೭೬ ೨೦೧

ಇದು ವಸಂತ ಬನ್ನಾಡಿಯವರ ನಾಲ್ಕನೇ ಕವನ ಸಂಕಲನ. ಇವರ ಕಾವ್ಯ ಆಧುನಿಕ ಕನ್ನಡ ಕಾವ್ಯ ಪ್ರಯೋಗಗಳಲ್ಲಿ ವಿಶಿಷ್ಟವಾದದ್ದು. ಇಲ್ಲಿ ವೈವಿಧ್ಯಮಯ ವಸ್ತುಭಾವದ ಅರವತ್ತೊಂದು ಕವನಗಳಿವೆ. ಬಹುಪಾಲು ಕವನಗಳ ಆಳದಲ್ಲಿ ಸ್ಥಾಯಿಯಾಗಿ ವಿಷಾದ ಭಾವವಿದೆ. ಬುದ್ಧಿ-ಭಾವ ಮಿಲನದ ಇಲ್ಲಿನ ಕವಿತೆಗಳು ನಮ್ಮನ್ನು ಚಿಂತನೆಗೆ ಹಚ್ಚುವಂಥವು. 'ಮೌನ ಒಂದು ಮಹಾಪಾಪ', 'ಕಣ್ಣು ಸಂಜ್ಞೆಗೆ ಮಾರಿಕೊಂಡು', 'ಹಿಂಬಾಲಿಸುವ ಗರಿಗಳು', 'ಜೊತೆಗೂಡಲಾರೆ' ಮುಂತಾದ ಕವನಗಳು ಕೋಮು ವಿದ್ವೇಷದ ಕೃತ್ಯಗಳನ್ನು ಸೂಕ್ಷ್ಮ ನೆಲೆಯಲ್ಲಿ ನೋಡುವಂಥವು. ಇಲ್ಲಿನ ಕವಿತೆಗಳು ಬದುಕಿಗೆ ಸ್ಪಂದಿಸಿದ ವಾಸ್ತವದ ಭಾಗವೇ ಆಗಿ ಮೂಡಿರುವುದರಿಂದ ಕವಿತೆಗಳು ಧ್ವನಿಪೂರ್ಣವಾಗಿದ್ದು ತುಂಡು ತುಂಡಾಗಿಯೇ ಮಿಡಿಯುತ್ತಾ ಓದುಗರನ್ನು ಸೆಳೆಯುತ್ತವೆ. ಸಮಕಾಲೀನ ಸಂದರ್ಭದ ಜೀವಂತ ಹಿಂಸೆ, ಪ್ರವೃತ್ತಿ, ಶೂನ್ಯತೆಯನ್ನು 'ಮೌನ ಒಂದು ಮಹಾಪಾಪ'ವೆಂದು ಹಿಡಿದಿಡುವ ಜೀವಂತ ಕವಿತೆಗಳು ಈ ಸಂಕಲನದಲ್ಲಿವೆ.

### ಭಂಡಾರ ಭೋಗ



*ಮರಾಠಿ ಮೂಲ : ರಾಜನ್ ಗವಸ*

*ಅನು : ಚಂದ್ರಕಾಂತ ಪೋಕಳೆ*

**ಪುಟ : ೧೨೮** **ಬೆಲೆ : ರೂ. ೮೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೧

ರಾಜನ್ ಗವಸರು ಮರಾಠಿ ಕಾದಂಬರಿ ಲೋಕದ ಕ್ರಿಯಾತ್ಮಕ ಬರಹಗಾರರು. ಮನುಷ್ಯನನ್ನು ಕೇಂದ್ರದಲ್ಲಿರಿಸಿಕೊಂಡು ಸಾಮಾಜಿಕ ಸಂಗತಿಗಳನ್ನು ಸಶಕ್ತವಾಗಿ ಸೂಕ್ಷ್ಮವಾಗಿ ಬರೆಯುವವರು. ತಮ್ಮ ಬರವಣಿಗೆ ಮೂಲಕ ಸಮಾಜದಲ್ಲಿ ರೂಢಿಯ ಹೆಸರಿನಲ್ಲಿ ನಡೆಯುವ ಅಮಾನುಷ ಕ್ರೌರ್ಯ, ಸ್ವಾರ್ಥ ಸಾಧನೆಯನ್ನು ಬಯಲುಮಾಡುತ್ತಾ ಬಂದಿದ್ದಾರೆ. ಈ ಕಾದಂಬರಿಯಲ್ಲಿ ರೂಢಿ-ಪರಂಪರೆಯ ಹೆಸರಿನಲ್ಲಿ ದೇವರಿಗೆ ಬಿಟ್ಟ ಜೋಗಪ್ಪನ ನರಕಸದೃಶ ಜೀವನದ ಚಿತ್ರಣವನ್ನು ಮನಮಿಡಿಯುವಂತೆ ಚಿತ್ರಿಸಿದ್ದಾರೆ. 'ತಾಯಪ್ಪ'ನ ಪಾತ್ರದ ಸುತ್ತ ನಡೆಯುವ ಘಟನೆಗಳ ಮೂಲಕ ನಿರ್ದಿಷ್ಟ ಜನಾಂಗ ವೊಂದರ ಸಾಂಸ್ಕೃತಿಕ, ಧಾರ್ಮಿಕ ರೂಢಿವ್ಯವಸ್ಥೆಯ ಅಂಧಶ್ರದ್ಧೆಯನ್ನು ಪರಿಚಯಿಸುತ್ತಾ, ಚಿಂತನೆಗೆ ಹಚ್ಚುತ್ತಾರೆ. ಈಗಾಗಲೇ ಹಲವು ಮರಾಠಿ ಕೃತಿಗಳನ್ನು ಕನ್ನಡದಲ್ಲಿ ಸಮರ್ಥವಾಗಿ ನೀಡಿರುವ ಚಂದ್ರಕಾಂತ ಪೋಕಳೆಯವರು ಅನುವಾದ ಮಾಡಿದ್ದಾರೆ.

### ಕನ್ನಡ ವ್ಯಾಕರಣ ಮತ್ತು ಭಾಷೆ

*ಡಾ॥ ವ್ಹಿ. ಜಿ. ಪೂಜಾರ*

**ಪುಟ : viii + ೨೦೨** **ಬೆಲೆ : ರೂ. ೧೦೦**

**ಚೇತನ ಪ್ರಕಾಶನ,** ಸರಸ್ವತೀಪುರ, ಕುಸನೂರ ರಸ್ತೆ, ಗುಲಬರ್ಗಾ - ೫೮೫ ೧೦೬

ಈ ಕೃತಿಯಲ್ಲಿ ಕನ್ನಡ ವ್ಯಾಕರಣ ಮತ್ತು ಕನ್ನಡ ಭಾಷೆಯ ವಿಚಾರವನ್ನು ಮೊದಲಿಗೆ ಒಟ್ಟಿಗೆ ನೀಡಲಾಗಿದೆ. ಮುಖ್ಯವಾಗಿ ವಿದ್ಯಾರ್ಥಿಗಳನ್ನು ಗಮನದಲ್ಲಿಟ್ಟುಕೊಂಡು ಸುಲಭದಲ್ಲಿ, ಸರಳವಾಗಿ ತಿಳಿಯುವಂತೆ ಸಂಕ್ಷಿಪ್ತವಾಗಿ ವ್ಯಾಕರಣ ಮತ್ತು ಭಾಷಾ ವಿಜ್ಞಾನದಂತಹ ಶಾಸ್ತ್ರಗಳನ್ನು ವಿವರಿಸಲಾಗಿದೆ. 'ವ್ಯಾಕರಣದ ಉದ್ದೇಶವು ಒಂದು ಭಾಷೆಯ ಸಾಧು-ಅಸಾಧು, ದುಷ್ಟ-ಶಿಷ್ಟ ಪ್ರಯೋಗಗಳನ್ನು ನಿರ್ಣಯಿಸಿ, ನಿಯಮಿಸುವುದಾಗಿದೆ' ಎಂಬುದರ ಬದಲಾಗಿ, ನಿಯಮಿಸಿದ್ದನ್ನು ಮುರಿಯುತ್ತಲೇ ಹೊಸ ಬಗೆಯ ಪದರಚನೆ, ವಾಕ್ಯರಚನೆಯ ಪ್ರಯೋಗಗಳು ಮೂಡುತ್ತಿವೆ. ಭಾಷೆ ಮತ್ತು ವ್ಯಾಕರಣ ಕುರಿತ ಸಮರ್ಥವಾದ ವಿಚಾರಗಳನ್ನು ಆಸಕ್ತರೆಲ್ಲರಿಗೂ ತಿಳಿಯುವಂತೆ ಇಲ್ಲಿ ವಿವರಿಸಲಾಗಿದೆ.

### ಸೊಂಡೂರು ಭೂ ಹೋರಾಟ

*ಅರುಣ್ ಜೋಳದಕೂಡ್ಲಿಗಿ*

**ಪುಟ : xviii + ೧೭೪** **ಬೆಲೆ : ರೂ. ೮೦**

**ನಿರ್ದೇಶಕರು, ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ - ೫೮೩ ೨೭೬



ಸೊಂಡೂರಿನಲ್ಲಿ ರೈತರು ಭೂಮಿಗಾಗಿ ನಡೆಸಿದ ಹೋರಾಟ ವನ್ನು ಅದರೆಲ್ಲಾ ಮುಖಗಳೊಂದಿಗೆ ಮುಖಾಮುಖಿಯಾಗಿ ಕಟ್ಟಲಾದ ಸಂಶೋಧನೆಯ ಸಾಂಸ್ಕೃತಿಕ ಕಥನವಿದು. ನಾನಾ ಮೂಲಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ತಾತ್ವಿಕ ವಿಶ್ಲೇಷಣೆಗೆ ಒಳಪಡಿಸಿ, ರಾಜಕೀಯ ಚರಿತ್ರೆಯ ಕಥನವಾಗಿ ಲೇಖಕರು ಕಟ್ಟಿಕೊಟ್ಟಿದ್ದಾರೆ. ಚರಿತ್ರೆಯ ಸೊಂಡೂರು, ಚಳುವಳಿಯಲ್ಲಿ ತೊಡಗಿದ ಸೊಂಡೂರು, ಹಾಗೂ ಈಗಿನ ಗಣಿಗಾರಿಕೆಯ ಹಗರಣಕ್ಕೆ ಕಾರಣವಾದ ಸೊಂಡೂರು – ಹೀಗೆ ಸೊಂಡೂರಿನ ಈ ಮೂರೂ ಅವಸ್ಥೆಗಳನ್ನು ಹಿಡಿದು, ಅದನ್ನು ವರ್ತಮಾನದ ಪರಿಣಾಮಗಳ ಮೂಲಕ ನೋಡುವ, ಒಂದು ಕಾಲಘಟ್ಟದ ಸಾಂಸ್ಕೃತಿಕ ಕಥನ ವನ್ನಾಗಿಸುವ ಪ್ರಯತ್ನ ಇಲ್ಲಿದೆ. ಲೇಖಕರ ಪ್ರಗತಿಪರ ವೈಚಾರಿಕ ಆಲೋಚನಾ ವಿಧಾನದಿಂದ ಚರಿತ್ರೆ, ರಾಜಕೀಯ ಹಾಗೂ ಸಾಂಸ್ಕೃತಿಕ ವಿಷಯಗಳ ಬಗ್ಗೆ ಹಲವಾರು ಒಳನೋಟಗಳು ಇಲ್ಲಿ ಗೋಚರಿಸುತ್ತವೆ.

– ಡಾ॥ ಸುಜಾತ ಲಕ್ಷ್ಮೀಪುರ
ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೫೯

# ಝೀನೋನ ಸಮಸ್ಯೆ, ಫಿಬೆನಾಕ್ಕಿ ಸಂಖ್ಯೆಗಳು, ಪ್ರಾಕೃತಿಕ ರಚನೆಗಳು

ಮೊಲ ಮತ್ತು ಆಮೆಯ ಪಂದ್ಯದಾಟ ಗೊತ್ತಿಲ್ಲದವರಿಲ್ಲ. ಮೊಲ ನಿಧಾನವಾಗಿ, ದರೆ ಎಡಬಿಡದೆ ಗುರಿಯತ್ತ ಸಾಗುತ್ತಿರುವಾಗ, ಅಗತ್ಯಕ್ಕಿಂತ ಹೆಚ್ಚಿನ ಆತ್ಮವಿಶ್ವಾಸ ೂಂದಿದ್ದ ಮೊಲ, ನಿದ್ದೆ ಮಾಡಿ ಎದ್ದು ಓಡೋಣವೆಂದು ಮಲಗಿಕೊಳ್ಳುತ್ತದೆ. ಅದಕ್ಕೆ ಚ್ಚರವಾಗುವುದರೊಳಗೆ ಆಮೆ ಗಡಿ ತಲುಪಿರುತ್ತದೆ. ಆದರೆ ಈ ಪಂದ್ಯದ ಕತೆಯನ್ನೇ ಸ್ತಪೂರ್ವದಲ್ಲಿ ಗ್ರೀಕ್ ಚಿಂತಕ ಝೀನೋ ಸ್ವಲ್ಪ ತಿರುಚಿ ಒಂದು ಸಮಸ್ಯೆಯನ್ನು ಒಡ್ಡಿದ. ಸಮಸ್ಯೆ ಝೀನೋನ ಸಮಸ್ಯೆ ಎಂದೇ ಪ್ರಸಿದ್ಧವಾಗಿದೆ. ಇಲ್ಲಿಯೂ ಮೊಲ, ಆಮೆಗಳ ಂದ್ಯ ನಡೆಯುತ್ತದೆ. ಆದರೆ, ಮೊಲ ನಿದ್ದೆಮಾಡಿ ಆಮೆಯನ್ನು ಗೆಲ್ಲಲು ಬಿಡುವಷ್ಟು ದ್ದಲ್ಲ. ಅದಕ್ಕೆ ಆತ್ಮವಿಶ್ವಾಸವೇನೋ ಬಹಳ ಜಾಸ್ತಿ. ತಾನು ಮೊಲಕ್ಕಿಂತ ಅನೇಕ ಪಟ್ಟು ರುಕಾಗಿ ಓಡಬಲ್ಲೆನೆಂದು ಅದಕ್ಕೆ ತಿಳಿದಿದೆ. ಆದ್ದರಿಂದ ಓಡುವಾಗ ಅದು ಒಂದು ಟವಾಡುತ್ತದೆ. ಪಂದ್ಯ ಮುಗಿಸಬೇಕಾದರೆ ೧೦ ಮೈಲಿ ಓಡಬೇಕು ಎಂದು ಭಾವಿಸಿ. ಮೆ ಅರ್ಧ ದೂರ ಓಡುವವರೆಗೂ, ಎಂದರೆ ೫ ಮೈಲು ದೂರ ಓಡುವ ವರೆಗೂ, ೂಲ ಅಲ್ಲೇ ಮೇಯುತ್ತಾ ಆಡಿಕೊಂಡಿರುತ್ತದೆ. ಆಮೆ ಅರ್ಧ ದೂರ ತಲುಪುತ್ತಿದ್ದಂತೆ ಡಲು ತೊಡಗುತ್ತದೆ. ಮೊಲಕ್ಕೆ ಓಡುವಾಗ ಕಣ್ಣುಗಳನ್ನು ಮುಚ್ಚಿಕೊಂಡು ಓಡುವ ಭ್ಯಾಸ. ಆದ್ದರಿಂದ ಅದು ಕಣ್ಣುಮುಚ್ಚಿ ಸರಿಯಾಗಿ ೫ ಮೈಲಿಗಳನ್ನು, ತಾನು ರಾಮವಾಗಿ, ಕಣ್ಣು ತೆರೆದು ಆಡಿಕೊಂಡಿದ್ದಾಗ ಆಮೆ ಕ್ರಮಿಸಿದ್ದಷ್ಟು ದೂರವನ್ನು, ಡುತ್ತದೆ. ಕಣ್ಣುಮುಚ್ಚಿ ಓಡುತ್ತಿದ್ದರೂ, ೫ ಮೈಲಿ ಓಡಿ ಮುಗಿಸಿದ್ದನ್ನು ತಿಳಿಯುವ ಶಕ್ತಿ ೂಲಕ್ಕಿದೆ. ಆದ್ದರಿಂದ, ಅರ್ಧ ದೂರ ಬರುತ್ತಿದ್ದಂತೆ, ಮೊಲ ಕಣ್ಣು ತೆಗೆದು ೋಡುತ್ತದೆ. ಆಗ, ಆಮೆ ಇನ್ನೂ ಮುಂದೆ ಹೋಗಿ ಟ್ಟಿರುತ್ತದೆ. ಮತ್ತೆ ಕಣ್ಣು ಮುಚ್ಚಿ, ಆಮೆ ಎಲ್ಲಿ ಣಿಸಿತ್ತೋ ಅಲ್ಲಿಯವರೆಗೆ ಓಡುತ್ತದೆ. ಆ ಂದುವಿನಲ್ಲಿ ಕಣ್ಣು ತೆರೆದು ನೋಡುತ್ತದೆ, ಆಮೆ ಇನ್ನೂ ುಂದೆ ಹೋಗಿರುವುದು ಕಾಣುತ್ತದೆ. ಪುನಃ ಕಣ್ಣು ಮುಚ್ಚಿ ಮೆ ಕಾಣಿಸಿದ ಬಿಂದುವಿನವರೆಗೆ ಓಡುವುದು ಮೊಲದ ಸ. ಆದರೆ ಅಲ್ಲಿ ತಲುಪಿದಾಗ, ಆಮೆ ಇನ್ನೂ ಮುಂದೆ ೋಗಿರುವುದು ತಿಳಿಯುತ್ತದೆ. ಹೀಗೆಯೇ, ಕೋಟ್ಯಂತರ ರಿ ಕಣ್ಣು ತೆರೆದು ನೋಡಿದರೂ, ಆಮೆ ಮೊಲಕ್ಕಿಂತ ುಂದೆಯೇ ಇರುತ್ತದೆ. ಆದ್ದರಿಂದ ಮೊಲ ಆಮೆಯನ್ನು ಟಲಾರದು. ಇದು ಝೀನೋನ ತರ್ಕ. ಮೊಲ ಆಮೆ ರಡರ ವೇಗವನ್ನೂ ಬಲ್ಲ ನಮ್ಮ ಲೆಕ್ಕದ ಪ್ರಕಾರ ಮೊಲ ಮೆಯನ್ನು ದಾಟಬೇಕು. ಈ ವಿರೋಧಾಭಾಸಕ್ಕೆ ಹಾರವೇನು ? ಇದೇ ಝೀನೋನ ಸಮಸ್ಯೆ.

ಈ ಸಮಸ್ಯೆಯ ಪರಿಹಾರ ಕಂಡುಕೊಳ್ಳುವ ದಲು, ಇದೇ ಮಾದರಿಯ ಇನ್ನೊಂದು, ಆದರೆ ನ್ನೂ ಸರಳವಾದ ಒಂದು ಸಮಸ್ಯೆಯನ್ನು ಪರಿಶೀಲಿಸ ುದು. ನಾನು ಸಾಕಿರುವ ಮಂಗವೊಂದಿದೆ ದು ಭಾವಿಸಿ. ಅದಕ್ಕೆ, ಎಲ್ಲ ಮಂಗಗಳಿಗಿರುವಂತೆ, ಳೇಹಣ್ಣನ್ನು ಕಂಡರೆ ಬಲು ಪ್ರೀತಿ. ಬಾಳೇಹಣ್ಣನ್ನು ಕೊಟ್ಟಾಗ, ಅದಕ್ಕೆ ಪೂರ್ತಿ ಹಣ್ಣನ್ನು ಒಮ್ಮೆಗೇ ನುಂಗಿ ಮುಗಿಸಿಬಿಡುವ ಮನಸ್ಸಿಲ್ಲ. ಆದ್ದರಿಂದ, ಅದು ಬಾಳೇಹಣ್ಣನ್ನು ಸರಿಯಾಗಿ ಎರಡು ತುಂಡು ಮಾಡುತ್ತದೆ. ಒಂದು ತುಂಡನ್ನು ಕಡೆಗೆ ತಿನ್ನೋಣ ಎಂದು ಯೋಚಿಸಿ, ಒಂದು ತುಂಡನ್ನು ಮಾತ್ರ ತಿಂದು, ಅರ್ಧ ಹಣ್ಣನ್ನು ಉಳಿಸಿಕೊಳ್ಳುತ್ತದೆ. ಒಂದು ನಿಮಿಷದ ನಂತರ ಮತ್ತೆ ತಿನ್ನುವ ಬಯಕೆಯಾಗುತ್ತದೆ, ಆದರೆ ಪೂರ್ತಿ ಮುಗಿಸಿಬಿಡುವ ಮನಸ್ಸಿಲ್ಲ. ಆದ್ದರಿಂದ, ಉಳಿದಿದ್ದ ಅರ್ಧ ಹಣ್ಣನ್ನೇ ಪುನಃ ಅರ್ಧ ಮಾಡಿ, ಒಂದು ಭಾಗವನ್ನು ಮಾತ್ರ ತಿನ್ನುತ್ತದೆ, ಕಾಲು ಹಣ್ಣನ್ನು ಉಳಿಸಿಕೊಳ್ಳುತ್ತದೆ. ನಿಮಿಷದ ನಂತರ ಮತ್ತೆ ತಿನ್ನುವ ಬಯಕೆ, ಪೂರ್ತಿ ತಿನ್ನುವ ಮನಸ್ಸಿಲ್ಲ. ಆದ್ದರಿಂದ ಮತ್ತೆ ಉಳಿದಿದ್ದ ಹಣ್ಣಿನ ಅರ್ಧ ಮಾತ್ರ ತಿಂದು, ಉಳಿದರ್ಧ, ಎಂದರೆ ಎಂಟನೇ ಒಂದು ಭಾಗ ಉಳಿಸಿಕೊಳ್ಳುತ್ತದೆ. ಹೀಗೆಯೇ ಪ್ರತಿ ನಿಮಿಷ ಗಳಿಗೊಮ್ಮೆ, ಉಳಿದ ಹಣ್ಣಿನ ಅರ್ಧ ತಿಂದು, ಇನ್ನರ್ಧ ಉಳಿಸಿಕೊಳ್ಳುತ್ತಾ ಹೋಗುತ್ತದೆ. ಹಾಗಾದರೆ, ಮಂಗನಿಗೆ ಪೂರ್ತಿ ಹಣ್ಣು ತಿನ್ನಲು ಎಷ್ಟು ಸಮಯ ಬೇಕಾಗುತ್ತದೆ ? ಅದು ಎಂದಾದರೂ ಪೂರ್ತಿ ಹಣ್ಣನ್ನು ತಿಂದು ಮುಗಿಸೀತೆ ? ಈ ಪ್ರಶ್ನೆಗೆ ಉತ್ತರ ದೊರಕಿದರೆ, ಝೀನೋನ ಸಮಸ್ಯೆಗೂ ಉತ್ತರ ದೊರಕುತ್ತದೆ.

ಇದೇ ಸಮಸ್ಯೆಯ ಪರಿಶೀಲನೆ ಗಣಿತದಲ್ಲೂ ಇದೆ. ಅರ್ಧಕ್ಕೆ ಅದರರ್ಧ (ಎಂದರೆ ಕಾಲು) ಸೇರಿಸಿ. ಬಂದ ಮೊತ್ತಕ್ಕೆ, ಕಾಲುಭಾಗದ ಅರ್ಧ (ಎಂದರೆ ಎಂಟನೇ ಒಂದು ಭಾಗ) ಸೇರಿಸಿ. ಬಂದ ಮೊತ್ತಕ್ಕೆ ಎಂಟನೇ ಒಂದು ಭಾಗದ ಅರ್ಧ (ಎಂದರೆ ಹದಿನಾರನೇ ಒಂದು ಭಾಗ) ಸೇರಿಸಿ. ಹೀಗೆ ಸೇರಿಸುತ್ತಾ ಹೋಗಿ. ಒಟ್ಟು ಮೊತ್ತ ಎಷ್ಟಾಗುತ್ತದೆ? ಇದನ್ನೇ ಸಮೀಕರಣದಲ್ಲಿ ಸೂಚಿಸಿದರೆ,

ಮೊತ್ತ S = ೧/೨ + ೧/೪ + ೧/೮ + ೧/೧೬ + ೧/೩೨ + ೧/೬೪ + ೧/೧೨೮ + ........

ಈ ಸಂಕಲನವನ್ನು ಮಾಡುತ್ತಲೇ ಇರಬಹುದು. ಮಾಡಿ ಮುಗಿಯುವುದೇ ಇಲ್ಲ. ಪ್ರತಿ ಸಲ ಕೂಡಿದಾಗಲೂ ಹಿಂದೆ ಇದ್ದುದಕ್ಕಿಂತ ಹೆಚ್ಚಿನ ಮೊತ್ತ ದೊರೆಯುತ್ತದೆ. ಕೂಡುತ್ತಾ ಹೋದರೆ S ನ ಬೆಲೆ ಎಷ್ಟಾಗಬಹುದು ? S ನ ಬೆಲೆ ನಿರ್ಧರಿಸಲು ಗಣಿತದಲ್ಲಿ ಸರಳ ಮಾರ್ಗಗಳಿವೆ. ಎಷ್ಟು ಬಾರಿ ಕೂಡಿದರೂ ಮೊತ್ತ ಒಂದನ್ನು

ಪ್ರೊ॥ ಎಂ. ಆರ್. ಎಸ್. ಮೂರ್ತಿ



ತಲುಪುವುದೇ ಇಲ್ಲ ಎಂಬ ತೀರ್ಮಾನಕ್ಕೆ ಗಣಿತ ಬರುತ್ತದೆ. ಮಂಗ ತಿನ್ನುತ್ತಿರುವ ಬಾಳೇಹಣ್ಣು ಎಷ್ಟು ಸಲ ತಿಂದರೂ ಒಂದು ಪೂರ್ಣ ಹಣ್ಣಾಗದ ಹಾಗೇ. ಒಂದು ಪೂರ್ಣ ಹಣ್ಣಿನಲ್ಲಿ ಸ್ವಲ್ಪ ಭಾಗವಾದರೂ ತಿನ್ನಿಸಿಕೊಳ್ಳದೇ ಉಳಿದುಕೊಂಡಿರುತ್ತದೆ. ಹೀಗೆ ಉಳಿಯುವ ಹಣ್ಣು ಎಷ್ಟು ಸಣ್ಣದಾಗಬಹುದು? ನಮ್ಮ ಊಹೆಗೆ ಸುಲಭವಾಗಿ ನಿಲುಕುವ ಸಂಗತಿ ಎಂದರೆ, ಉಳಿದಿರುವ ಹಣ್ಣು ನಮ್ಮ ಮನಸ್ಸಿಗೆ ಬಂದಷ್ಟು ಸಣ್ಣದಾಗಬಹುದು. ಇನ್ನೂ ಸಣ್ಣ ಭಾಗ ಆಗಬೇಕೆಂದರೆ ಇನ್ನೂ ಹೆಚ್ಚು ಸಲ ಅರ್ಧ ಭಾಗಗಳನ್ನು ತಿಂದರಾಯಿತು. ಮಂಗ, ಪ್ರತಿಸಲವೂ ಉಳಿದ ಹಣ್ಣಿನಲ್ಲಿ ಅರ್ಧ ಹಣ್ಣನ್ನು ಗುಳುಂ ಮಾಡುತ್ತಾ, ೧೦ ಬಾರಿ ತಿಂದರೆ, ಸಾವಿರದ ಒಂದು ಭಾಗಕ್ಕಿಂತಲೂ ಕಡಿಮೆ ಹಣ್ಣು ಉಳಿದಿರುತ್ತದೆ. ಹೀಗೆಯೇ ಇಪ್ಪತ್ತು ಬಾರಿ ತಿಂದರೆ, ದಶಲಕ್ಷದ ಒಂದು ಭಾಗಕ್ಕಿಂತಲೂ ಕಡಿಮೆ ಹಣ್ಣು ಉಳಿದಿರುತ್ತದೆ. ಮೂವತ್ತು ಬಾರಿ ತಿಂದರೆ, ನೂರು ಕೋಟಿಯ ಒಂದು ಭಾಗಕ್ಕಿಂತಲೂ ಕಡಿಮೆ ಹಣ್ಣು ಉಳಿದಿರುತ್ತದೆ. ಹೀಗೆಯೇ ಉಳಿಯುವ ಹಣ್ಣನ್ನು ನಮ್ಮ ಮನಸ್ಸಿಗೆ ಖಯಾಲಿ ಬಂದಷ್ಟೂ ಕಡಿಮೆ ಮಾಡಿಬಿಡಬಹುದು. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ, ಮಂಗ ತಿಂದ ಹಣ್ಣಿನ ಭಾಗ ಒಂದು ಇಡೀ ಹಣ್ಣಿನಷ್ಟು ಎಂದೂ ಆಗದಿದ್ದರೂ, ಒಂದು ಹಣ್ಣಿಗೂ, ಮಂಗ ತಿಂದ ಭಾಗಕ್ಕೂ ವ್ಯತ್ಯಾಸ ಕಡಿಮೆಯಾಗುತ್ತಾ ಹೋಗುತ್ತದೆ. ಈ ವ್ಯತ್ಯಾಸವನ್ನು ನಮ್ಮ ಮನಸೋ ಇಚ್ಛೆ ಕಡಿಮೆ ಮಾಡಬಹುದು. ಆದ್ದರಿಂದಲೇ ಒಂದು ಇಡೀ ಹಣ್ಣನ್ನು, ಮಂಗ ತಿನ್ನುವ ಹಣ್ಣಿನ ಮಿತಿ ಎಂದು ಕರೆಯುತ್ತೇವೆ. ಮಿತಿ = ೧ ಎಂದಾಗ, ಒಂದು ಹಣ್ಣಿಗೆ ಎಷ್ಟೆಂದರಷ್ಟು ಸಮೀಪದ ಹಣ್ಣಿನ ಭಾಗ ಮಂಗ ತಿನ್ನಬಹುದು ಎಂದು ಅರ್ಥ. ಇದೇ ಅರ್ಥದಲ್ಲಿ, ಮೇಲಿನ ಮೊತ್ತದ ಮಿತಿ ಒಂದು.

ಜ಼ೇನೋನ ಸಮಸ್ಯೆಯ ಪರಿಹಾರವೂ ಇಷ್ಟೇ ಸರಳ. ಮೊಲ ಆಮೆಯನ್ನು ದಾಟಲು ಒಂದು ಮೊತ್ತದ ಸಮಯವನ್ನು ತೆಗೆದುಕೊಳ್ಳುತ್ತದಷ್ಟೆ? ಈ ಸಮಯದ ಒಂದು ಭಾಗ ಮಾತ್ರ ಸಂದಾಗ ಜ಼ೇನೋ ಮೊಲದ ಕಣ್ಣು ಬಿಡಿಸುತ್ತಾನೆ. ಇಷ್ಟರಲ್ಲಿ ಮೊಲ ಆಮೆಯನ್ನು ದಾಟಿರುವುದಿಲ್ಲ. ದಾಟಲು ಇನ್ನೂ ಸ್ವಲ್ಪ ಸಮಯ ಬೇಕಾಗಿರುತ್ತದೆ. ದಾಟಲು ಉಳಿದಿರುವ ಕಾಲದ ಒಂದು ಭಾಗ ಮಾತ್ರ ಸಂದಾಗ ಜ಼ೇನೋ ಮತ್ತೆ ಮೊಲದ ಕಣ್ಣು ಬಿಡಿಸುತ್ತಾನೆ. ಆಗಲೂ ಸಹಜವಾಗಿಯೇ ಆಮೆ ಮೊಲವನ್ನು ದಾಟಿರುವುದಿಲ್ಲ. ಪುನಃ ದಾಟಲು ಉಳಿದ ಸಮಯದ ಒಂದು ಭಾಗ ಮಾತ್ರ ಮುಗಿದಾಗ ಮತ್ತೆ ಮೊಲ ಕಣ್ಣು ತೆರೆಯುತ್ತದೆ. ಆಗಲೂ ದಾಟಿರುವುದಿಲ್ಲ. ಹೀಗೆ ದಾಟಲು ಬೇಕಾದ ಸಮಯಕ್ಕಿಂತ ಕಡಿಮೆ ಅವಧಿಯಲ್ಲಿ ಎಷ್ಟು ಸಲ ಮೊಲ ಕಣ್ಣು ತೆರೆದರೂ ಅದು ಆಮೆಯನ್ನು ದಾಟಿರುವುದಿಲ್ಲ. ಜ಼ೇನೋ ಬುದ್ಧಿವಂತಿಕೆಯಿಂದ ಎರಡು ಅನುಕ್ರಮ ಕಣ್ಣು ತೆರೆಯುವ ಕಾಲಗಳ ನಡುವಿನ ಅಂತರವನ್ನು ಕಡಿಮೆಮಾಡುತ್ತಾ ಬರುತ್ತಾನೆ. ಇಂತಹ ಎಷ್ಟೇ ಚಿಕ್ಕ ಚಿಕ್ಕ ಸಮಯಗಳನ್ನು ಕೂಡಿದರೂ ಕಾಲದ ಒಟ್ಟು ಮೊತ್ತ ಮೊಲಕ್ಕೆ ಆಮೆಯನ್ನು ದಾಟಲು ಬೇಕಾದ ಸಮಯಕ್ಕಿಂತ ಕಡಿಮೆಯೇ ಇರುತ್ತದೆ. ಆದ್ದರಿಂದಲೇ ಮೊಲ ಈ ಕಾಲಾವಧಿಯಲ್ಲಿ ಆಮೆಯನ್ನು ದಾಟುವುದಿಲ್ಲ. ಇನ್ನೂ ಹೆಚ್ಚು ಸಮಯ ಸಂದಾಗ ಅದು ಆಮೆಯನ್ನು ದಾಟುತ್ತದೆ! ಆದ್ದರಿಂದ ಜ಼ೇನೋನ ಸಮಸ್ಯೆ ನಿಜವಾದ ಸಮಸ್ಯೆಯೇ ಅಲ್ಲ. ಜ಼ೇನೋ ಮಾಡಿದ ಸಣ್ಣ ಉಪಾಯ ನಮಗೆ ಹೊಳೆಯದಿದ್ದಾಗ ಮಾತ್ರ ಅದು ದೊಡ್ಡ ಸಮಸ್ಯೆಯಾಗಿ ತೋರುತ್ತದೆ.

ಈಗ ಇನ್ನೊಂದು ಅನುಕ್ರಮ ಸಂಖ್ಯೆಗಳನ್ನು ಪರಿಶೀಲಿಸೋಣ.

S = ೧/೨ + ೧/೩ + ೧/೪ + ೧/೫ + ೧/೬ + ೧/೭ + ೧/೮ + ........

ಈ ಅನುಕ್ರಮ ಸಂಖ್ಯೆಗಳೂ ಕಿರಿದಾಗುತ್ತಾ ಹೋಗುತ್ತವೆ. ಪ್ರತಿ ಸಂಖ್ಯೆಯೂ ಅದರ ಹಿಂದಿನ ಸಂಖ್ಯೆಗಿಂತ ಸಣ್ಣದು. ಆದರೆ ಹಿಂದಿನ ಭಾಗದಲ್ಲಿ ನಾವು ಪರಿಶೀಲಿಸಿದ ಸಂಖ್ಯೆಗಳಷ್ಟು (೧/೨, ೧/೪, ೧/೮, ೧/೧೬... ಇತ್ಯಾದಿ ಸಂಖ್ಯೆಗಳಷ್ಟು) ತೀವ್ರಗತಿಯಲ್ಲಿ ಕಡಿಮೆಯಾಗುವುದಿಲ್ಲ. ಈ ಅನುಕ್ರಮ ಸಂಖ್ಯೆಗಳ ಮೊತ್ತ ಎಷ್ಟಾಗಬಹುದು? ಇದನ್ನು ಗಣಿತರೀತ್ಯಾ ಕೂಡುವುದು ಕಷ್ಟವಲ್ಲ. ಲಭಿಸುವ ತೀರ್ಮಾನವನ್ನು ಇಲ್ಲಿ ಗಮನಿಸಿದರೆ ಸಾಕು. ಮೊತ್ತಕ್ಕೆ ಮಿತಿಯೇ ಇಲ್ಲ! ಅದು ದೊಡ್ಡದಾಗುತ್ತಾ ಹೋಗುತ್ತದೆ. ಮೊತ್ತ ಸಾವಿರ, ಲಕ್ಷ, ಕೋಟಿ, ಬಿಲಿಯನ್, ಟ್ರಿಲಿಯನ್, ಹೀಗೆ ಮಿತಿಯಿಲ್ಲದೇ ಹೆಚ್ಚಾಗುತ್ತಾ ಹೋಗುತ್ತದೆ!




ರೂ. 10/-

## ನಮ್ಮ ಪ್ರಕಟಣೆಗಳು

| | | |
|---|---|---|
| ಜೀವ ಸಂಜೀವಿನಿ ರೇಕಿ | ಶಿವಯೋಗಿ ಜಿ. ಮದನಭಾವಿ | ರೂ. 10/- |
| ವಾಸ್ತು ಹಾಗೂ ಆರೋಗ್ಯಕ್ಕಾಗಿ ಪಿರಮಿಡ್ | ಆನಂದ ಅಣ್ಣಿಗೇರಿ | ರೂ. 35/- |
| Thank you - Reiki for Begginers | *Shivayogi G. Madanabhavi* | Rs. 150/- |
| Spoken English for Everyone (with CD) | *Vinnay S. Nayak* | Rs. 151/- |
| Yoga Mudras | *Shivayogi G. Madanabhavi* | Rs.35/- |



ರೂ. 30/-


ರೂ. 10/-

ಶಿವಯೋಗಿ ಜಿ. ಮದನಭಾವಿಯವರ ಎಲ್ಲಾ ಪುಸ್ತಕಗಳು ನವಕರ್ನಾಟಕದ ಎಲ್ಲಾ ಪುಸ್ತಕ ಮಳಿಗೆಗಳಲ್ಲಿ ದೊರೆಯುತ್ತವೆ.

ಪ್ರಕಾಶಕರು
ಆನಂದ -ಚೇತನ
ಪ್ರ ಕಾ ಶ ನ

ಲೈಬ್ರರಿ ಕಂಪೌಂಡ್, ಕೃಷ್ಣ ಭವನ ಎದುರಿಗೆ
ಲ್ಯಾಮಿಂಗ್ಟನ್ ರಸ್ತೆ, ಹುಬ್ಬಳ್ಳಿ - 580 020
ದೂರವಾಣಿ : 0836-2354973
ಮೊಬೈಲ್ : 9448301721



ರೂ. 20/-

ಸುಮಾರು ೮೦೦ ವರ್ಷಗಳ ಹಿಂದೆ ಫಿಬೊನಾಕ್ಕಿ ಎಂಬ ಸರಿನ ಗಣಿತಜ್ಞ ಬದುಕಿದ್ದ. ಭಾರತೀಯ ದಶಮಾಂಶ ದ್ಧತಿಯನ್ನು ಯೂರೋಪಿನಲ್ಲಿ ಬಳಕೆಗೆ ತಂದವರಲ್ಲಿ ತ ಅಗ್ರಗಣ್ಯ. ಈತನ ಹೆಸರಿನಲ್ಲಿ ಒಂದು ಅನುಕ್ರಮ ಖ್ಯೆಗಳ ಪಟ್ಟಿ ಪ್ರಸಿದ್ಧಿಗೆ ಬಂದಿತು. ಕಾಲ್ಪನಿಕ ಸಮಸ್ಯೆ ೂಂದನ್ನು ಪರಿಶೀಲಿಸುತ್ತಿದ್ದಾಗ ಫಿಬೊನಾಕ್ಕಿಗೆ ಈ ಖ್ಯೆಗಳು ಲಭಿಸಿದವು. ವಿಶೇಷ ಗುಣ ಹೊಂದಿದ ೂಲಗಳ ಸಂತಾನ ಬೆಳೆಯುವ ಸಮಸ್ಯೆಯೊಂದು ಬೆನಾಕ್ಕಿಯನ್ನು ಕಾಡುತ್ತಿತ್ತು. ಫಿಬೊನಾಕ್ಕಿಯ ಮನಸ್ಸಿನಲ್ಲಿ ನಿಸಿದ ಈ ಮೊಲಗಳು ಸಾಯುವುದೇ ಇಲ್ಲ. ಹುಟ್ಟಿದ ಂತರ ಒಂದು ತಿಂಗಳು ಬೆಳೆದು ಪ್ರಬುದ್ಧಾವಸ್ಥೆಗೆ ರುತ್ತವೆ. ಗಂಡು, ಹೆಣ್ಣು ಯಾವಾಗಲೂ ಒಟ್ಟಿಗೇ ದುಕುತ್ತವೆ. ಆಗ ಪ್ರಬುದ್ಧಾವಸ್ಥೆ ತಲುಪಿದ ಗಂಡು ಣ್ಣುಗಳ ಕೂಡಿಕೆಯಿಂದ ಸರಿಯಾಗಿ ಒಂದು ತಿಂಗಳ ಂತರ ಹೆಣ್ಣು ಮೊಲ ಒಂದು ಜೊತೆ ಮರಿಗಳಿಗೆ ನ್ಮವೀಯುತ್ತದೆ. ಈ ಮರಿಗಳಲ್ಲಿ ಯಾವಾಗಲೂ ಂದು ಗಂಡು ಮತ್ತು ಒಂದು ಹೆಣ್ಣು ಇರುತ್ತವೆ. ಬೆನಾಕ್ಕಿ ಆಗ ತಾನೇ ಜನಿಸಿದ ಎರಡು ಮೊಲಗಳನ್ನು - ಂದು ಗಂಡು, ಒಂದು ಹೆಣ್ಣು - ತಂದು ಸಾಕಿಕೊಳ್ಳುತ್ತಾನೆ. ವುಗಳ ಸಂತಾನ ಹೇಗೆ ಬೆಳೆಯುತ್ತದೆಂದು ರಿಶೀಲಿಸೋಣ. ಫಿಬೊನಾಕ್ಕಿ ಮೊಲಗಳ ಜೋಡಿಯನ್ನು ೂರಕಿಸಿಕೊಂಡ ಮೊದಲ ತಿಂಗಳಲ್ಲಿ ಒಂದು ಜೋಡಿ ರುತ್ತದೆ. ನಂತರ ಸರಿಯಾಗಿ ಒಂದು ತಿಂಗಳು ಬೆಳೆದು ಜೋಡಿ ಪ್ರಬುದ್ಧಾವಸ್ಥೆ ತಲುಪುತ್ತದೆ. ಆದ್ದರಿಂದ ರಡನೇ ತಿಂಗಳಿನಲ್ಲಿಯೂ ಒಂದು ಜೋಡಿ ಮಾತ್ರ ರುತ್ತದೆ. ಪ್ರಬುದ್ಧಾವಸ್ಥೆ ತಲುಪಿದ ನಂತರ ಸರಿಯಾಗಿ ಂದು ತಿಂಗಳಿಗೆ ಎರಡು ಮರಿಗಳು ಹುಟ್ಟುತ್ತವೆ - ಂದು ಗಂಡು, ಒಂದು ಹೆಣ್ಣು. ಆದ್ದರಿಂದ ೂರನೆಯ ತಿಂಗಳಲ್ಲಿ ಎರಡು ಜೊತೆ ಇರುತ್ತದೆ. ಲ್ಕು ತಿಂಗಳ ನಂತರ ಮತ್ತೆ ಮೊದಲ ಜೊತೆ ಮರಿ ಕುತ್ತದೆ. ಇನ್ನೊಂದು ಜೊತೆ ಮರಿ ಹಾಕುವುದಿಲ್ಲ, ದರೆ ಪ್ರಬುದ್ಧಾವಸ್ಥೆ ತಲುಪುತ್ತದೆ. ಆದ್ದರಿಂದ ಒಟ್ಟು ೂರು ಜೊತೆ ಮರಿಗಳಿರುತ್ತವೆ. ಐದನೇ ತಿಂಗಳಲ್ಲಿ, ೂದಲ ಜೊತೆ ಹಾಗೂ ಎರಡನೆಯ ತಿಂಗಳಲ್ಲಿ ಜನಿಸಿದ ೂತೆ (ಈಗ ಈ ಜೋಡಿಗೆ ೨ ತಿಂಗಳು, ಪ್ರಬುದ್ಧಾವಸ್ಥೆ ಲುಪಿ ತಿಂಗಳು ಕಳೆದಿರುತ್ತದೆ) ಮರಿ ಹಾಕುತ್ತವೆ. ೂರನೆಯ ತಿಂಗಳಲ್ಲಿ ಜನಿಸಿದ ಮರಿಗಳು ಬುದ್ಧಾವಸ್ಥೆ ತಲುಪುತ್ತವೆ, ಆದರೆ ಮರಿ ಹಾಕುವುದಿಲ್ಲ. ದ್ದರಿಂದ ಒಟ್ಟು ೫ ಜೊತೆ ಮರಿಗಳಿರುತ್ತವೆ. ಆರನೇ ಂಗಳು, ವಯಸ್ಸಿಗೆ ಬಂದ ಮೂರು ಜೊತೆ ಮೊಲ ಳು ಮರಿ ಹಾಕುತ್ತವೆ. (ಆರು ಜೊತೆಯಾಯಿತು). ರಡು ಜೊತೆ ಮರಿ ಹಾಕುವುದಿಲ್ಲ. ಆದ್ದರಿಂದ ಒಟ್ಟು ಜೊತೆಯಾಗುತ್ತವೆ. ಏಳನೆಯ ತಿಂಗಳು, ಅದರ ಂದಿನ ತಿಂಗಳಿನಲ್ಲಿ ಜನಿಸಿದ ಮೂರು ಜೊತೆ ಬುದ್ಧಾವಸ್ಥೆ ತಲುಪುತ್ತವೆ ಆದರೆ ಮರಿ ಹಾಕುವುದಿಲ್ಲ. ಳಿದ ಐದು ಜೊತೆ ಮರಿ ಹಾಕಿ ಹತ್ತು ಜೊತೆಯಾಗು ದೆ. ಎಲ್ಲ ಸೇರಿ ಒಟ್ಟು ಹದಿಮೂರು ಜೊತೆಯಾಯಿತು. ಸಂಖ್ಯೆಗಳನ್ನೇ ಸಾಲಾಗಿ ಬರೆದರೆ ಕೆಳಗಿರುವ ಅನುಕ್ರಮ ಖ್ಯೆಗಳು ದೊರಕುತ್ತವೆ. ಇವೇ ಫಿಬೊನಾಕ್ಕಿ ಸಂಖ್ಯೆಗಳು.

೧, ೧, ೨, ೩, ೫, ೮, ೧೩, ೨೧, ೩೪, ೫೫, ....

## ಅಕ್ಕ - ಪಕ್ಕ

ಕುಟ್ಟುವವರು  
ಕುಟ್ಟುತ್ತಲೇ ಇರುವವರು  
ಕಲ್ಲುಗಳ !

ಕಟ್ಟುವವರು  
ಕಟ್ಟುತ್ತಲೇ ಇರುವವರು  
ಮಹಲುಗಳ !

ಮಹಡಿಗಳ ಕಟ್ಟಿದವರು  
ನೆಮ್ಮದಿಯಲಿ ಜೋಪಡಿಗಳಲಿ  
ನಿದ್ದೆ ಹೋದರು.

ಜೋಪಡಿಗಳ ಕೆಡವಿದವರು  
ಮಹಡಿಗಳಲಿ ಮಲಗಿದವರು  
ನಿದ್ದೆ ಬಾರದೆ ಹೊರಳಿದರು.

ಕು. ಸ. ಮಧುಸೂದನ  
ವಿಜಯಾ ಬ್ಯಾಂಕ್ ಮಹಡಿ  
ರಂಗೇನಹಳ್ಳಿ - ೫೭೭ ೧೪೪

ಈ ಕ್ರಮವನ್ನು ಗೊತ್ತುಪಡಿಸುವ ಒಂದು ಸರಳ ನಿಯಮವಿದೆ. ಪ್ರತಿ ಸಂಖ್ಯೆಯೂ (ಮೊದಲ ಎರಡು ಸಂಖ್ಯೆಗಳನ್ನು ಹೊರತುಪಡಿಸಿ), ಅದರ ಹಿಂದಿನ ಎರಡು ಸಂಖ್ಯೆಗಳ ಮೊತ್ತಕ್ಕೆ ಸಮ. ಸಹಜವಾಗಿಯೇ, ಸಂಖ್ಯೆಗಳ ಬೆಲೆ ಮಿತಿಯಿಲ್ಲದೇ ಹೆಚ್ಚುತ್ತಾ ಹೋಗುತ್ತದೆ. ಮೊದಮೊದಲು ಈ ಹೆಚ್ಚಳಿಕೆ ಸಣ್ಣ ಪ್ರಮಾಣದ್ದು. ಮೊದಲನೆಯ ಮತ್ತು ಎರಡನೆಯ ಸಂಖ್ಯೆಗಳ ವ್ಯತ್ಯಾಸ ೦. ಎರಡು ಮತ್ತು ಮೂರನೇ ಸಂಖ್ಯೆಗಳ ವ್ಯತ್ಯಾಸ ೧. ಮೂರು ಮತ್ತು ನಾಲ್ಕನೇ ಸಂಖ್ಯೆಗಳ ನಡುವಿನ ವ್ಯತ್ಯಾಸ ೨. ಎಲ್ಲ ವ್ಯತ್ಯಾಸಗಳು, ಅವುಗಳ ಹಿಂದಿನ ವ್ಯತ್ಯಾಸಗಳಿಗಿಂತ ದೊಡ್ಡವು. ಮುಂದೆ ಹೋದಂತೆ, ಸಂಖ್ಯೆಗಳ ಬೆಲೆ, ಹನುಮಂತನ ಸೀಮೋಲ್ಲಂಘನೆಯಂತೆ ಜಿಗಿಯುತ್ತಾ ಹೆಚ್ಚತೊಡಗುತ್ತವೆ. ಈ ವ್ಯತ್ಯಾಸಗಳನ್ನೇ ಅನುಕ್ರಮವಾಗಿ ಬರೆದರೆ ಮತ್ತೆ ಫಿಬೊನಾಕ್ಕಿ ಸಂಖ್ಯೆಗಳೇ ದೊರಕುತ್ತವೆ.

ಅನೇಕ ಅನಿರೀಕ್ಷಿತ ಸಂದರ್ಭಗಳಲ್ಲಿ ನಾವು ಸಹಜವಾಗಿಯೇ ಫಿಬೊನಾಕ್ಕಿ ಸಂಖ್ಯೆಗಳನ್ನು ಎದುರುಗೊಳ್ಳುತ್ತೇವೆ. ಈ ಸಂಖ್ಯೆಗಳ ಪ್ರಸಿದ್ಧಿಗೆ ಇದೇ ಕಾರಣ. ಅನೇಕ ಹೂವುಗಳ ಎಸಳುಗಳು ಒಂದಲ್ಲ ಒಂದು ಫಿಬೊನಾಕ್ಕಿ ಸಂಖ್ಯೆಗೆ ಸಮವಾಗಿರುತ್ತವೆ. ೩, ೫, ೮, ೧೩, ೨೧ ಇವೆಲ್ಲಾ ಫಿಬೊನಾಕ್ಕಿ ಸಂಖ್ಯೆಗಳು. ಈ ಸಂಖ್ಯೆಯ ಎಸಳುಗಳನ್ನುಳ್ಳ ಹೂವುಗಳೂ ಅನೇಕ. ಆದರೆ ಎಲ್ಲ ಹೂವುಗಳೂ ಫಿಬೊನಾಕ್ಕಿ ಸಂಖ್ಯೆಗಳಿಗೆ ಸಮನಾದ ಎಸಳುಗಳನ್ನು ಹೊಂದಿರುವುದಿಲ್ಲ. ಉದಾಹರಣೆಗೆ ನಾಲ್ಕು ಎಸಳುಗಳ ಹೂವುಗಳು ಅನೇಕವಿವೆ. ನಾಲ್ಕು ಫಿಬೊನಾಕ್ಕಿ ಸಂಖ್ಯೆಯಲ್ಲ.

ಜೇನುಹುಳಗಳಲ್ಲಿ ಅನೇಕ ಪ್ರಭೇದಗಳಿವೆ. ಗೂಡನ್ನು ಕಟ್ಟಿಕೊಂಡು ಜೇನು ಸಂಗ್ರಹಿಸುವ ಜೇನು ಹುಳಗಳ ಸಾಮಾಜಿಕ ಬದುಕು ಬಹಳ ರೋಚಕವಾದದ್ದು. ಜೇನುಗೂಡಲ್ಲಿ ಒಂದೇ ಒಂದು ರಾಣಿಜೇನಿರುತ್ತದೆ. ಅನೇಕ ಗಂಡು ಜೇನುಗಳಿರುತ್ತವೆ. ಗಂಡು ಜೇನುಗಳು ಜೇನನ್ನು ಅರಸುತ್ತ ಹೊರಗೆ ಹೋಗುವುದಿಲ್ಲ. ನಮ್ಮ ಗಂಡಸರಂತೆ ಸೋಮಾರಿಗಳು. ಜೇನು ಸಂಗ್ರಹಿಸುವ ಕೆಲಸವೆಲ್ಲಾ ರಾಣಿ ಪಟ್ಟವಿಲ್ಲದೆ ಇತರ ಹೆಣ್ಣು ಜೇನುಗಳಿಗೆ ಸೇರಿದ್ದು. ಇವು ಜೇನು ಸಂಗ್ರಹಿಸಿ ಗೂಡನ್ನು ನೋಡಿಕೊಳ್ಳುತ್ತವೆ. ಆದರೆ ಈ ಹೆಣ್ಣು ಜೇನುಗಳು ಮೊಟ್ಟೆ ಇಡುವುದಿಲ್ಲ, ಸಂತಾನ ಪಡೆಯುವುದಿಲ್ಲ. ಸಂತಾನವೆಲ್ಲ ರಾಣಿ ಜೇನಿನದೇ. ರಾಣಿ ಜೇನು ಗಂಡು ಜೇನೊಡನೆ ಕೂಡಿದ ನಂತರ ಮೊಟ್ಟೆಯಿಟ್ಟಾಗ ಹುಟ್ಟುವ ಮರಿಗಳೆಲ್ಲ ಹೆಣ್ಣು ಜೇನುಗಳಾಗಿರುತ್ತವೆ. ಗಂಡೊಡನೆ ಸೇರದೆ ಮೊಟ್ಟೆಯಿಟ್ಟಾಗ, ಹುಟ್ಟುವ ಮರಿಗಳೆಲ್ಲ ಗಂಡುಗಳು. ಗಂಡು ಜೇನುಗಳಿಗೆ ತಂದೆ ಇರುವುದಿಲ್ಲ. ಹೀಗಾಗಿ ಗಂಡು ಜೇನುಗಳಿಗೆ ಹಿಂದಿನ ಪೀಳಿಗೆಯಲ್ಲಿ ಒಬ್ಬ ತಾಯಿ ಮಾತ್ರ ಇರುತ್ತಾಳೆ. ಹೆಣ್ಣು ಜೇನುಗಳಿಗೆ ತಾಯಿ, ತಂದೆ - ಇಬ್ಬರು ಹಿಂದಿನ ಸಂತತಿಯವರಿರುತ್ತಾರೆ. ಪ್ರತಿ ಹಿಂದಿನ ತಲೆಮಾರಿನಲ್ಲೂ, ಒಂದು ಹೆಣ್ಣು ಜೇನಿನ ಜನನಕ್ಕೆ ಕಾರಣವಾದ ಎಷ್ಟು ಜೇನು ಹುಳಗಳು ಇರುತ್ತವೆ ? ಈ ಸಮಸ್ಯೆಯನ್ನು ಪರಿಶೀಲಿಸೋಣ. ಈಗಾಗಲೇ ಗಮನಿಸಿರುವಂತೆ, ಒಂದು ತಲೆಮಾರಿನ ಹಿಂದೆ, ತಾಯಿ, ತಂದೆ ಎನ್ನಿಸಿಕೊಳ್ಳುವ ಎರಡು ಜೇನುಗಳಿರುತ್ತವೆ. ಈಗ ಎರಡು ತಲೆ ಹಿಂದೆ ಹೋಗೋಣ. ಹೆಣ್ಣು ಜೇನಿನ ತಾಯಿಗೆ ತಂದೆ, ತಾಯಿ ಎರಡೂ ಇರುತ್ತವೆ. ಆದರೆ ಅದರ (ಹೆಣ್ಣು ಜೇನಿನ) ತಂದೆಗೆ, ಬರಿಯ ತಾಯಿ ಜೇನಿರುತ್ತದೆ. ಆದ್ದರಿಂದ ಹಿಂದಿನ ಎರಡನೇ ತಲೆಯಲ್ಲಿ ಮೂವರು ಪಿತೃಗಳು ಇರುತ್ತವೆ (ಎರಡು ಹೆಣ್ಣು, ಒಂದು ಗಂಡು). ಈಗ ಹಿಂದಿನ ಮೂರನೆಯ ತಲೆಯನ್ನು ಪರಿಶೀಲಿಸೋಣ. ಇದರಲ್ಲಿ ಇಬ್ಬರು ತಾಯಂದಿರ ನಾಲ್ವರು ತಾಯಿ, ತಂದೆ ಜೇನುಗಳು, ಮೂರನೆಯ ಗಂಡಿನ ತಾಯಿ ಜೇನು ಮಾತ್ರ, ಒಟ್ಟು ಐದು ದುಂಬಿಗಳು ಇರುತ್ತವೆ. ಇದೇ ರೀತಿ ಹಿಂದಿನ ಲೆಕ್ಕಾಚಾರ ಮಾಡುತ್ತಾಹೋದರೆ, ಫಿಬೊನಾಕ್ಕಿ ಸಂಖ್ಯೆಗಳು ದೊರೆಯುತ್ತವೆ.

ದುಂಬಿಗಳ ಹಿಂದಿನ ತಲೆ ಎಣಿಸುವುದಕ್ಕಿಂತ ಮನುಷ್ಯರ ಹಿಂದಿನ ತಲೆ ಎಣಿಸುವುದು ಸುಲಭ. ನಮಗೆ ತಂದೆ, ತಾಯಿಯರಿಬ್ಬರೂ ಇರುವುದರಿಂದ, ಹಿಂದಿನ ತಲೆಮಾರಿನಲ್ಲಿ ನಮ್ಮ ಪೂರ್ವಿಕರು ಇಬ್ಬರು ಇದ್ದಾರೆ. ಇವರಿಬ್ಬರಿಗೂ, ತಂದೆ ತಾಯಿಗಳು ಇದ್ದುದರಿಂದ, ಪ್ರತಿ ವ್ಯಕ್ತಿಗೂ ಹಿಂದಿನ ಎರಡನೇ ತಲೆಯಲ್ಲಿ ನಾಲ್ಕು ಜನ ಪಿತೃಗಳು ಇರುತ್ತಾರೆ. ಈ ನಾಲ್ವರಿಗೂ ತಂದೆ ತಾಯಿಗಳಿರುವುದರಿಂದ, ಹಿಂದಿನ ಮೂರನೆ ತಲೆಯಲ್ಲಿ ಎಂಟು ಜನ ನಮ್ಮ ಇರುವಿಕೆಗೆ ಕಾರಣರಾಗಿರುತ್ತಾರೆ. ಹೀಗೆಯೇ ಎಣಿಸುತ್ತಾಹೋದರೆ, ಹಿಂದಿನ ತಲೆಗಳಲ್ಲಿ ಬದುಕಿದ್ದ ಹಿರಿಯರ ಸಂಖ್ಯೆ ಅನುಕ್ರಮವಾಗಿ, ೮, ೧೬, ೩೨, ೬೪ ಇತ್ಯಾದಿ ಸಂಖ್ಯೆಗಳಂತೆ ಹೆಚ್ಚುತ್ತಾ ಹೋಗುತ್ತದೆ. ಪ್ರತಿ ಹಿಂದಿನ ತಲೆಯಲ್ಲೂ ಅದರ ಮುಂದಿನ ತಲೆಯ ಎರಡು ಪಟ್ಟು ಪೂರ್ವಿಕರಿರುತ್ತಾರೆ. ಇದೇ ಲೆಕ್ಕವನ್ನು ಹತ್ತು ತಲೆ



ಚಿತ್ರ ೧

ಹಿಂದೆ ಕೊಂಡೊಯ್ದರೆ, ನಮಗೆ ೧೦೨೪ ಪಿತೃಗಳು ಇರುತ್ತಾರೆ, ೨೦ ತಲೆ ಹಿಂದೆ ಹೋದರೆ, ದಶ ಲಕ್ಷ ಮೀರಿದ ಪಿತೃಗಳಿರುತ್ತಾರೆ. ೩೦ ತಲೆ ಹಿಂದೆ ಹೋದರೆ, ಪಿತೃಗಳ ಸಂಖ್ಯೆ ೧೦೦ ಕೋಟಿ ಮೀರುತ್ತದೆ. ಆದರ ನಮ್ಮ ಭೂಮಿಯಲ್ಲಿ ಇವತ್ತಿಗೂ ಬರಿಯ ೬೦೦ ಕೋಟಿ ಜನರಿದ್ದಾರಲ್ಲ! ೩೦ ತಲೆ ಹಿಂದೆ ಭೂಮಿಯ ಜನಸಂಖ್ಯೆ ೧೦೦ ಕೋಟಿಗಿಂತಲೂ ಬಹಳ ಕಡಿಮೆ ಇದ್ದಿತು. ಆದ್ದರಿಂದ ನಮ್ಮ ಪೂರ್ವಿಕರ ಸಂಖ್ಯೆ ೧೦೦ ಕೋಟಿಯನ್ನು ಮೀರಲು ಸಾಧ್ಯವಿಲ್ಲ. ಹಾಗಾದರೆ ನಮ್ಮ ಲೆಕ್ಕ ಎಲ್ಲಿ ತಪ್ಪಿತು ? ಈ ಲೆಕ್ಕದಲ್ಲಿ ನಮ್ಮ ಹಿಂದಿನ ತಲೆಯವರೆಲ್ಲ ಬೇರೆ ಬೇರೆಯವರು ಎಂದು ಎಣಿಸಿದ್ದೇವೆ. ಆದರೆ ಯಾವಾಗಲೂ ಹೀಗಿರುವುದಿಲ್ಲ, ಅದು ಸಾಧ್ಯವೂ ಅಲ್ಲ. ಉದಾಹರಣೆಗೆ, ಅಣ್ಣ, ತಂಗಿಯರ ಮಕ್ಕಳು ಮದುವೆಯಾದರೆ, ಅವರಿಗೆ ಆರು ಜನ ಮಾತ್ರ ಅಜ್ಜ, ಅಜ್ಜಿಯರಿರುತ್ತಾರೆ. ಎಂಟು ಜನ ಇರುವುದಿಲ್ಲ. ಇಂತಹ ಸಂಬಂಧಗಳು ಅನೇಕ ಆಗಿರುವುದರಿಂದ, ಅದನ್ನು ಗಮನಕ್ಕೆ ತೆಗೆದುಕೊಳ್ಳದಿದ್ದರೆ ನಮ್ಮ ಎಣಿಕೆ ಬಹಳ ತಪ್ಪಾಗುತ್ತದೆ.

ಅಕ್ಕಪಕ್ಕದ ಫಿಬೆನಾಕ್ಕಿ ಸಂಖ್ಯೆಗಳಲ್ಲಿ ದೊಡ್ಡ ಸಂಖ್ಯೆಯನ್ನು, ಸಣ್ಣದರಿಂದ ಭಾಗಿಸಿದರೆ, ಒಂದು ಸ್ವಾರಸ್ಯಕರ ಸಂಗತಿ ತಿಳಿಯುತ್ತದೆ. ಮೊದಮೊದಲಿಗೆ ಭಾಜ್ಯ ೧ ಮತ್ತು ೨ರ ನಡುವೆ ಅಡ್ಡಾದಿಡ್ಡಿ ಬದಲಾಗುತ್ತಿರುವಂತೆ ಕಂಡರೂ, ದೊ… ಸಂಖ್ಯೆಗಳಿಗೆ ಹೋದಾಗ (ಎಂದರೆ ಸರಣಿಯಲ್ಲಿ ೨೦, ೩೦ ಸ್ಥಾನಗಳನ್ನು ದಾಟಿದಾಗ… ಲಭಿಸುವ ಭಾಜ್ಯ ಯಾವಾಗಲೂ ಒಂದೇ ಸಂಖ್ಯೆಗೆ ಹತ್ತಿರವಾಗಿರುತ್ತದೆ. ಈ ಸಂಖ್ಯೆಯ… ಬೆಲೆ ೧.೬೧೮೦೩೪ಕ್ಕೆ ಸಮೀಪದಲ್ಲಿದೆ. ಈ ಸಂಖ್ಯೆಯನ್ನು ಗ್ರೀಕರು ಚಿನ್ನದ ಸಂ… ಎಂದು ಕರೆದರು. ಚಿನ್ನಕ್ಕಿರುವ ಬೆಲೆಯನ್ನು ಈ ಸಂಖ್ಯೆಗೆ ಕೊಟ್ಟರು. ಈ ಸಂಖ್ಯೆ… ತುಂಬಾ ಸ್ವಾರಸ್ಯಕರ ಗುಣಗಳಿವೆ. ಈ ಸಂಖ್ಯೆಯ ನಿಖರ ಬೆಲೆಯನ್ನು ಒಂದು… ಸಮೀಕರಣದಿಂದ ಪಡೆಯಬಹುದು.



ಚಿತ್ರ ೨

ಗ್ರೀಕರ ಚಿನ್ನದ ಸಂಖ್ಯೆ = (೧ + ೫ ರ ವರ್ಗಮೂಲ) / ೨

ನಮ್ಮ ರಾಜ್ಯದ ಹೆಮ್ಮೆಯಾದ ಮಲ್ಲಿಗೆಗೆ ೫ ದಳಗಳಿವೆ. ಒಂದು ಬಿಂದುವಿನಲ್ಲಿ ಇರುವ ಒಟ್ಟು ಕೋಣ ೩೬೦ ಡಿಗ್ರಿಗಳಾದುದರಿಂದ, ಅಕ್ಕಪಕ್ಕದ ಎಸಳುಗಳ ನಡುವೆ ೭೨ ಡಿಗ್ರಿ ಕೋಣವಿದೆ. ೭೨ ಡಿಗ್ರಿಗೂ ಚಿನ್ನದ ಸಂಖ್ಯೆಗೂ ನಿಕಟ ಸಂಬಂಧವಿದೆ. ಇದೇ ಪುಟದ ಚಿತ್ರದಲ್ಲಿ (ಚಿತ್ರ ೧) ಪಂಚಬಾಹು ಆಕೃತಿಯನ್ನು ನೋಡಬಹುದು. ಈ ಪಂಚಬಾಹುವಿನ ಕೇಂದ್ರ O ಬಿಂದುವಿನಿಂದ ಆಕೃತಿಯ ಮೂಲೆ A… ಬಿಂದುವಿದೆ. OA ರೇಖೆಯನ್ನು ಎಳೆಯಿರಿ. AB ಮತ್ತು OA ರೇಖೆಗಳ ಉದ್ದಗಳ… ಅನುಪಾತಕ್ಕೆ ಚಿನ್ನದ ಸಂಖ್ಯೆಯ ಸಂಬಂಧವಿದೆ. ಹೀಗೆಯೇ ಚಿನ್ನದ ಸಂಖ್ಯೆಗೂ… ವಿಂಶತ ಮುಖಿಗೂ (icosahedron) ನಿಕಟ ಸಂಬಂಧವಿದೆ.

ಇನ್ನೊಂದು ಉದಾಹರಣೆಯೊಂದಿಗೆ ಈ ಲೇಖನವನ್ನು ಮುಕ್ತಾಯ… ಗೊಳಿಸೋಣ. ಒಂದರಪಕ್ಕ ಇನ್ನೊಂದು ಚೌಕವನ್ನು ಕೆಳಗೆ ತೋರಿಸಿರುವಂತೆ… ನಿರ್ಮಿಸಿ. ಈ ಎರಡೂ ಚೌಕಗಳ ಉದ್ದದಷ್ಟು ಬಾಹುಗಳಿರುವ ಇನ್ನೊಂದು… ಚೌಕವನ್ನು ಕೆಳಕ್ಕೆ ತೋರಿಸಿರುವಂತೆ ನಿರ್ಮಿಸಿ. ದೊರಕುವ ಆಕೃತಿಯ ಉದ್ದಕ್ಕೆ… ಸಮನಾದ ಚೌಕವನ್ನು ಕೆಳಗಿರುವಂತೆ ನಿರ್ಮಿಸಿ. ಇದೇ ರೀತಿ ಹೊಸ ಚೌಕಗಳನ್ನು… ನಿರ್ಮಿಸುತ್ತಾ ಹೋಗಿ. ಹೀಗೆ ಅನೇಕ ಸಲ ಚೌಕಗಳನ್ನು ನಿರ್ಮಿಸಿದ ಮೇಲೆ… ದೊರೆಯುವ ಆಕೃತಿಯ ಉದ್ದ ಅಗಲಗಳ ಅನುಪಾತ (ಉದ್ದದಿಂದ ಅಗಲವನ್ನು… ಭಾಜಿಸಿದರೆ ದೊರೆಯುವ ಭಾಜ್ಯ) ಚಿನ್ನದ ಸಂಖ್ಯೆಗೆ ಸಮನಾಗುತ್ತದೆ! ಈ… ಚೌಕಗಳನ್ನು ಸೇರಿಸಿ ಮೇಲಿನ ಚಿತ್ರದಲ್ಲಿರುವಂತೆ ಒಂದು ವಕ್ರರೇಖೆಯನ್ನು ಎಳೆಯಿರಿ. ರೇಖೆಗಳು ಸುತ್ತಿಕೊಳ್ಳುತ್ತಾ, ದೊಡ್ಡದಾಗುತ್ತಾ ಹೋಗುತ್ತಿರುವಂತೆ ಕಾಣುತ್ತವೆ. ನಮಗೆ ಲಭಿಸುವುದು, ಅನೇಕ ಸಾಗರ ಜೀವಿಗಳ (ಬಸವನ ಹುಳು) ಕವಚಗಳ… ರಚನೆಯ ಹಿನ್ನೆಲೆ. ಇಂತಹ ಕವಚ ಒಂದನ್ನು ಚಿತ್ರದಲ್ಲಿ (ಚಿತ್ರ ೨) ತೋರಿಸಿದೆ.

ಫಿಬೆನಾಕ್ಕಿ ಪ್ರತಿಪಾದಿಸಿದ ಸಂಖ್ಯೆಗಳು ಗಣಿತದ ಒಂದು ಸಮಸ್ಯೆಯಿಂದ… ಪ್ರಾರಂಭವಾಗಿದ್ದರೂ, ಅವುಗಳು ಅನೇಕ ಪ್ರಕೃತಿನಿರ್ಮಿತ ಸುಂದರ ರಚನೆಗಳಲ್ಲಿ… ಹುದುಗಿರುವುದು ಕಂಡುಬಂದಿದೆ. ಇಂತಹ ನೂರಾರು ರಚನೆಗಳಲ್ಲಿ ಒಂದೆರಡರ… ಪರಿಚಯ ಮಾತ್ರ ಇಲ್ಲಿ ಸಾಧ್ಯವಾಗಿದೆ.

ಪ್ರೊ॥ ಎಂ. ಆರ್. ಎನ್. ಮೂರ್ತಿ
ಮೊಲಿಕ್ಯೂಲರ್ ಬಯೋಫಿಸಿಕ್ಸ್ ಯೂನಿಟ್
ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು - ೫೬೦೦೧೨

WITH BEST COMPLIMENTS FROM




Kamadhenu
Sales Corporation

Dealers in : TECHNOVA P. S. PLATE CHEMICALS
SAKATA INKS, OFFSET MACHINE SPARES AND
CONSUMABLES, SCREEN, OFFSET
ALL PRINTING REQUIREMENTS

No. 9, 1st Cross, K. G. Road, Hotel Vasanth Building
(Next to Menaka Talkies) Bangalore - 560 009
Ph. : 22204195, 22204196. Telefax : 080-22252192
Mobile : 9844135216
E-mail : kamdhenu@bgl.vsnl.net.in




Rs. 90.00




Rs. 90.00




Rs. 90.00




Rs. 90.00




Rs. 90.00




Rs. 90.00




Rs. 90.00




Rs. 90.00




Rs. 90.00




Rs. 90.00




Rs. 90.00




Rs. 90.00




Rs. 90.00




Rs. 90.00




Rs. 90.00




Rs. 395.00

Distributors of All Kinds of Children's Books, Fiction, Non-fiction, Cooking, Fashion, Furniture, Dictionaries and all other General Books



# THE BOOK PARADISE

(Publishers, Distributors, Importers)

13/11, Subhash Nagar, Near D.S.D. College, Gurgaon (Haryana)
Ph. : 4062330, 4067543 e-mail : bookparadise@hotmail.com

# ಉದ್ಯೋಗ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ

'ಪ್ರಕೃತಿ ಮಹಿಳೆಯರಿಗೆ ಅಗಾಧ ಅಧಿಕಾರವನ್ನು ಕೊಟ್ಟಿದೆ. ಆದರೆ ಕಾನೂನು ಅವರಿಗೆ ಕೊಟ್ಟಿರುವ ಅಧಿಕಾರ ಅತ್ಯಲ್ಪ.' ಇದು ಅಮೆರಿಕಾದ ರಾಜಕೀಯ ಸಲಹೆಗಾರ ಹಾಗೂ ಅಂಕಣಕಾರರಾದ ವಿಲ್ ಹೆನ್ರಿ ಹೇಳಿರುವ ಮಾತುಗಳು. ಈ ಮಾತುಗಳು ಮಹಿಳೆಯರ ಸ್ಥಾನಮಾನವನ್ನು ಪ್ರತಿಬಿಂಬಿಸುತ್ತವೆ. ಪ್ರಪಂಚದ ಯಾವುದೇ ಮೂಲೆಯಲ್ಲಿರುವ ಮಹಿಳೆಗೂ ಸಮಾಜದಲ್ಲಿ ಬೇರೂರಿರುವ ಈ ಮಾತು ಅನ್ವಯಿಸುತ್ತದೆ. ಪುರುಷ ಪ್ರಾಧಾನ್ಯತೆ ಮಹಿಳೆಯ ವಿರುದ್ಧ ನಡೆಸುವ ಅಪರಾಧಗಳ ರೂಪದಲ್ಲಿ ಅಭಿವ್ಯಕ್ತಿ ಪಡೆಯುತ್ತದೆ. ಲೈಂಗಿಕ ಹಿಂಸೆ, ಕೌಟುಂಬಿಕ ಹಿಂಸೆ, ಹೆಣ್ಣು ಭ್ರೂಣ ಹತ್ಯೆ ಮುಂತಾದವು ಮಹಿಳೆಯ ಮೇಲೆ ನಡೆಸಲಾಗುವ ಅಪರಾಧಗಳ ವಿವಿಧ ಬಗೆಗಳು. ಮಹಿಳೆಯರ ಶೋಷಣೆಗೆ ಹಾಗೂ ಅವಳ ಅಧೀನ ಸ್ಥಾನಮಾನಕ್ಕೆ ಸಾಮಾನ್ಯವಾಗಿ ಕೊಡುವ ಕಾರಣವೆಂದರೆ ಅವಳ ಆರ್ಥಿಕ ಅವಲಂಬನೆ. ಸ್ತ್ರೀ ಆರ್ಥಿಕವಾಗಿ ಸ್ವಾವಲಂಬಿಯಾದ ಹೊರತು ತನ್ನ ಮೇಲೆ ನಡೆಯುವ ದೌರ್ಜನ್ಯವನ್ನು ವಿರೋಧಿಸುವ ಧೈರ್ಯ ಹಾಗೂ ಸಾಮರ್ಥ್ಯ ಗಳಿಸಿಕೊಳ್ಳುವುದಿಲ್ಲ ಎಂಬುದು ಬಹಳಷ್ಟು ಮಟ್ಟಿಗೆ ನಿಜ. ಆದೆ ಆರ್ಥಿಕವಾಗಿ ಸ್ವತಂತ್ರಳಾಗುವ ಅವಳ ಪ್ರಯತ್ನ ಉದ್ಯೋಗ ಸ್ಥಳದಲ್ಲಿ ಲೈಂಗಿಕ ಕಿರುಕುಳದಂಥ ಹೊಸ ರೀತಿಯ ದೌರ್ಜನ್ಯಕ್ಕೆ ಎಡೆಮಾಡಿಕೊಟ್ಟಿದೆ. ಆರ್ಥಿಕವಾಗಿ ಸ್ವತಂತ್ರರಾಗುವತ್ತ ಹೆಜ್ಜೆಯಿಟ್ಟಿರುವ ಮಹಿಳೆಯರ ಈ ಪ್ರಯತ್ನಕ್ಕೆ ಇಂಥ ದೌರ್ಜನ್ಯಗಳಿಂದಾಗಿ ಹಿನ್ನಡೆಯುಂಟಾಗುವ ಸಾಧ್ಯತೆಗಳು ಇಲ್ಲದಿಲ್ಲ.

ಇತ್ತೀಚೆಗೆ ವರದಿಯಾಗಿರುವ ನೋಕಿಯಾ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದ ಸೋನಿ ಎಂಬ ಮಹಿಳೆಯ ಆತ್ಮಹತ್ಯೆಯ ಪ್ರಕರಣ ಈ ಅಪರಾಧ ಎಂಥ ಗಂಭೀರ ಪರಿಣಾಮಗಳನ್ನುಂಟುಮಾಡುತ್ತದೆ ಎಂಬುದನ್ನು ಮನದಟ್ಟು ಮಾಡಿಸುತ್ತದೆ.

ಹಾಗಾಗಿ, ಹೆಚ್ಚು ಹೆಚ್ಚು ಮಹಿಳೆಯರು ಉದ್ಯೋಗ ಕ್ಷೇತ್ರವನ್ನು ಪ್ರವೇಶಿಸುತ್ತಿರುವ ಹಿನ್ನೆಲೆಯಲ್ಲಿ ಅವರ ಸುರಕ್ಷೆಗೆ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು ರಾಷ್ಟ್ರದ ಜವಾಬ್ದಾರಿಯಾಗುತ್ತದೆ. ಉದ್ಯೋಗ ಸ್ಥಳಗಳಲ್ಲಿ ಮಹಿಳೆಯರು ಒಳಗಾಗುವ ಲೈಂಗಿಕ ಕಿರುಕುಳದಿಂದಾಗಿ ಅವರು ಅನುಭವಿಸುತ್ತಿರುವ ಮಾನಸಿಕ ಒತ್ತಡ, ಅಭದ್ರತೆಯ ಭಾವ, ಕೀಳರಿಮೆ ಮುಂತಾದವು ಉದ್ಯೋಗದಲ್ಲಿ ಅವರ ದಕ್ಷತೆಯನ್ನು ಕಡಿಮೆ ಮಾಡುತ್ತದೆ. ಇದರಿಂದಾಗಿ ನಿಯೋಜಕನಿಗೂ ನಷ್ಟ ಉಂಟಾಗುತ್ತದೆ. ಉದ್ಯೋಗ ಸ್ಥಳಗಳಲ್ಲಿ ಲೈಂಗಿಕ ಕಿರುಕುಳದ ವಿರುದ್ಧ ರಕ್ಷಣೆಗೆ ಅವರಿಗಿರುವ ಹಕ್ಕು ಮಹಿಳೆಯರ ಮಾನವ ಹಕ್ಕು ಆಗಿದೆ. ಮಹಿಳೆಯರಿಗಿರುವ ಈ ಮಾನವ ಹಕ್ಕಿನ ರಕ್ಷಣೆ ಅವಳ ಸ್ವಾತಂತ್ರ್ಯದ, ಸಮಾನತೆಯ ಹಾಗೂ ಘನತೆಯಿಂದ ಕೆಲಸ ಮಾಡಲು ಇರುವ ಹಕ್ಕುಗಳ ರಕ್ಷಣೆಯೂ ಆಗಿದೆ.

ಕಳೆದ ೩೦ ವರ್ಷಗಳಲ್ಲಿ ಅನೇಕ ಅಂತರ ರಾಷ್ಟ್ರೀಯ ಮಹಿಳಾ ಸಂಘಟನೆಗಳು ಮಹಿಳೆಯರ ಮೇಲೆ ನಡೆಸಲಾಗುವ ಹಿಂಸಾತ್ಮಕ ಕೃತ್ಯಗಳ ವಿರುದ್ಧ ದನಿಯೆತ್ತುತ್ತಲೇ ಬಂದಿವೆ. ೧೯೭೯ರಲ್ಲಿ ವಿಶ್ವ ಸಂಸ್ಥೆಯು ಅಳವಡಿಸಿಕೊಂಡ 'ಮಹಿಳೆಯರ ವಿರುದ್ಧ ಎಲ್ಲ ಬಗೆಯ ತಾರತಮ್ಯ ನಿವಾರಣೆ ಒಡಂಬಡಿಕೆ' ಮಹಿಳೆಯರ ವಿರುದ್ಧ ತೋರುವ ತಾರತಮ್ಯ ಮತ್ತು ಮಹಿಳೆಯರ ಘನತೆಗೆ ಕುಂದುಂಟುಮಾಡುವ ಯಾವುದೇ ಕೃತ್ಯ ಸಮಾನತೆಯ ಹಕ್ಕನ್ನು ಉಲ್ಲಂಘಿಸುತ್ತದಾದ್ದರಿಂದ ಅದು ಮಾನವ ಹಕ್ಕುಗಳ ಉಲ್ಲಂಘನೆಯೂ ಆಗುತ್ತದೆ ಎನ್ನುತ್ತದೆ.

ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ ಒಂದು ಜಾಗತಿಕ ಸಮಸ್ಯೆ. ಭಾರತ ಹಾಗೂ ಇತರೆಡೆಗಳಲ್ಲಿ ಉದ್ಯೋಗದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ ವ್ಯಾಪಕವಾಗಿದೆ. ಭಾರತದ ಸಂವಿಧಾನದ ೧೯(೧)(ಜಿ) ಅನುಚ್ಛೇದದ ಅಡಿಯಲ್ಲಿ ಯಾವುದೇ ವೃತ್ತಿಯನ್ನು ಮಾಡುವ ಅಥವಾ ಯಾವುದೇ ಉದ್ಯೋಗ ಅಥವಾ ವ್ಯಾಪಾರವನ್ನು ಕೈಗೊಳ್ಳುವ ಸ್ವಾತಂತ್ರ್ಯ ಒಂದು ಮೂಲಭೂತ ಹಕ್ಕು. ಹಾಗಾಗಿ ಉದ್ಯೋಗದ ಸ್ಥಳದಲ್ಲಿ ಅವಳಿಗೆ ನೀಡುವ ಯಾವುದೇ ಲೈಂಗಿಕ ಕಿರುಕುಳ ಅವಳ ಈ ಮೂಲಭೂತ ಹಕ್ಕಿನ ಉಲ್ಲಂಘನೆಯಾಗುತ್ತದೆ. ಇಂಥ ಕಿರುಕುಳದ ಪ್ರಕರಣಗಳು ಹೆಚ್ಚಾಗುತ್ತಿದ್ದಂತೆಯೇ ಈ ಸಮಸ್ಯೆಯೂ ಗಂಭೀರ ಸ್ವರೂಪವನ್ನು ಪಡೆಯುತ್ತಿದೆ. ಬಹುಪಾಲು ಪ್ರಕರಣಗಳಲ್ಲಿ ಮಹಿಳೆಯರು ಇದನ್ನು ವರದಿ ಮಾಡುವ ಪ್ರಯತ್ನವನ್ನೇ ಮಾಡುವುದಿಲ್ಲ.

ಆದರೆ ಭಾಂವ್ರಿದೇವಿ ಎಂಬಾಕೆಯ ಮೇಲೆ ನಡೆದ ಅತ್ಯಾಚಾರದ ಪ್ರಕರಣ ಉದ್ಯೋಗ ಸ್ಥಳಗಳಲ್ಲಿ ಲೈಂಗಿಕ ಕಿರುಕುಳದ ಬಗ್ಗೆ ಸರ್ವೋಚ್ಚ ನ್ಯಾಯಾಲಯ ಮಹತ್ವದ ತೀರ್ಪು ನೀಡಲು ಕಾರಣವಾಯಿತು.

ಭಾಂವ್ರಿದೇವಿ ರಾಜಸ್ಥಾನ ಸರ್ಕಾರದ ಮಹಿಳಾ ಅಭಿವೃದ್ಧಿ ಯೋಜನೆಯಡಿಯಲ್ಲಿ 'ಸಾಥಿನ್' ಆಗಿ ದುಡಿಯುತ್ತಿದ್ದ ಮಹಿಳೆ. ಬಾಲ್ಯ ವಿವಾಹಗಳನ್ನು ತಡೆಗಟ್ಟುವುದು ಈಕೆಯ ಮುಖ್ಯ ಕೆಲಸವಾಗಿತ್ತು.

ಡಾ|| ಗೀತಾ ಕೃಷ್ಣಮೂರ್ತಿ

ಒಂದು ವರ್ಷದ ಮಗುವಿನ ಬಾಲ್ಯ ವಿವಾಹವನ್ನು ಈಕೆ ತಡೆದು ನಿಲ್ಲಿಸಿದಳು ಎಂಬ ಕಾರಣಕ್ಕೆ ಆಕೆಯ ಗಂಡನ ಎದುರಿನಲ್ಲೇ ನಾಲ್ಕು ಮಂದಿ ಆಕೆಯ ಮೇಲೆ ಅತ್ಯಾಚಾರ ನಡೆಸಿದರು. ಈ ಪ್ರಕರಣವನ್ನು ದಾಖಲು ಮಾಡದಂತೆ ನೋಡಿಕೊಳ್ಳುವ ಪ್ರಯತ್ನ ಎಲ್ಲ ಹಂತಗಳಲ್ಲಿಯೂ ನಡೆಯಿತು. ಈ ಹಿಂದೆಯೂ ಆಕೆ ತಾನು ಒಳಗಾಗುತ್ತಿದ್ದ ಲೈಂಗಿಕ ಕಿರುಕುಳದ ಬಗ್ಗೆ ಎಲ್ಲ ಅಧಿಕಾರಿಗಳಿಗೆ ದೂರು ನೀಡಿದ್ದಳು. ಆದರೆ ಈ ಬಗ್ಗೆ ಯಾವುದೇ ಕ್ರಮ ಕೈಗೊಂಡಿರಲಿಲ್ಲ. ಆದರೆ ಆಕೆ ಇದರಿಂದ ಧೃತಿಗೆಡಲಿಲ್ಲ.

ಭಾಂವ್ರಿದೇವಿ ಒಳಗಾದ ದೈಹಿಕ ಹಾಗೂ ಮಾನಸಿಕ ಆಘಾತಗಳಿಗೆ ಆಕೆ ತೋರಿದ ಆತ್ಮಸ್ಥೈರ್ಯದ ಪ್ರತಿಕ್ರಿಯೆ ಇಂದು ಕಾನೂನಿನಲ್ಲಿ ಒಂದು ಮೈಲಿಗಲ್ಲನ್ನು ಸೃಷ್ಟಿಸಿದೆ. ಇದಕ್ಕೆ ಶ್ಲಾಘನೆ ಸಲ್ಲಬೇಕಾದದ್ದು ಅವಳಿಗಾದ ಅನ್ಯಾಯಕ್ಕಾಗಿ ಹೋರಾಡಿದ ಮಹಿಳಾ ಸಂಘಟನೆಗಳಿಗೆ. ಲೈಂಗಿಕ ಕಿರುಕುಳವನ್ನು ಒಂದು ಅಪರಾಧವೆಂದೇ ಕಾನೂನಿನಲ್ಲಿ ಗುರುತಿಸಲಾಗಿರಲಿಲ್ಲ. ಆದರೆ, ಈ ಪ್ರಯತ್ನದತ್ತ ಕೊಂಡೊಯ್ದಿರುವುದು ಈ ಪ್ರಕರಣ.

ಪೊಲೀಸರು, ವೈದ್ಯರು ಮತ್ತು ಮ್ಯಾಜಿಸ್ಟ್ರೇಟರು – ಹೀಗೆ ಎಲ್ಲರಿಂದ, ಎಲ್ಲ ಹಂತಗಳಲ್ಲಿಯೂ ಭಾಂವ್ರಿದೇವಿಯ ದೂರು ದಾಖಲಾಗದಂತೆ, ಸಾಕ್ಷ್ಯಗಳು ದೊರೆಯದಂತೆ ಮಾಡುವ ಎಲ್ಲ ಪ್ರಯತ್ನಗಳೂ ನಡೆದವು. ಈ ಹಿನ್ನೆಲೆಯಲ್ಲಿ ಕೆಲವು ಮಹಿಳಾ ಸಂಘಟನೆಗಳು, ಸಾಮಾಜಿಕ ಕಾರ್ಯಕರ್ತರು, ಒಂದಾಗಿ ಸೇರಿ ಸರ್ವೋಚ್ಚ ನ್ಯಾಯಾಲಯದಲ್ಲಿ ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಸಲ್ಲಿಸುವ ಮೂಲಕ ಭಾರತದ ಸಂವಿಧಾನದ ೧೪, ೧೯ ಮತ್ತು ೨೧ನೆಯ ಅನುಚ್ಛೇದಗಳ ಅಡಿಯಲ್ಲಿ ಮಹಿಳೆಯರಿಗಿರುವ ಮೂಲಭೂತ ಹಕ್ಕುಗಳನ್ನು ಜಾರಿಗೊಳಿಸಬೇಕೆಂದು ಕೋರಿದರು. ತನ್ನ ಉದ್ಯೋಗಿಗಳನ್ನು ಲೈಂಗಿಕ ಶೋಷಣೆಯಿಂದ ರಕ್ಷಿಸುವ ಹೊಣೆಗಾರಿಕೆ ರಾಜ್ಯದ್ದು. ಮಹಿಳೆಯರ ಮೇಲೆ ನಡೆಯುವ ಇಂಥ ಕೃತ್ಯಗಳು ಅವರ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸುತ್ತವೆಯಾದ್ದರಿಂದ ಅಂಥ ಉಲ್ಲಂಘನೆಯಾಗದಂತೆ ತಡೆದು, ಅವರಿಗೆ ರಕ್ಷಣೆ ನೀಡುವುದು ರಾಜ್ಯದ ಕರ್ತವ್ಯ ಎಂಬುದು ಇವರ ವಾದವಾಗಿತ್ತು. ಸರ್ವೋಚ್ಚ ನ್ಯಾಯಾಲಯ ೧೯೯೭ರ ಆಗಸ್ಟ್ ೧೩ರಂದು ಈ ಪ್ರಕರಣದಲ್ಲಿ ತೀರ್ಪು ನೀಡಿತು. 'ವಿಶಾಖಾ' ಎಂಬ ಮಹಿಳಾ ಸಂಘಟನೆ ಅರ್ಜಿ ಸಲ್ಲಿಸಿದ್ದ ಕಾರಣ ಇದು 'ವಿಶಾಖಾ ತೀರ್ಪು' ಎಂದೇ ಹೆಸರಾಯಿತು. ಮೊತ್ತಮೊದಲ ಬಾರಿಗೆ ಲೈಂಗಿಕ ಕಿರುಕುಳವನ್ನು ಅಂತಾರಾಷ್ಟ್ರೀಯ ಒಪ್ಪಂದಗಳ ಹಿನ್ನೆಲೆಯಲ್ಲಿ ಮಾನವ ಹಕ್ಕುಗಳ ಉಲ್ಲಂಘನೆ ಎಂಬುದಾಗಿ ಗುರುತಿಸಲಾಯಿತು. ಉದ್ಯೋಗ ಸ್ಥಳಗಳಲ್ಲಿ ಮಹಿಳೆಯ ಮೇಲೆ ನಡೆಯುವ ಲೈಂಗಿಕ ಕಿರುಕುಳವನ್ನು ತಡೆಗಟ್ಟಲು ವ್ಯವಸ್ಥೆಯಲ್ಲಿ ಬದಲಾವಣೆಗಳು ಆಗಬೇಕು ಎಂಬ ಅಂಶಗಳಿಗೆ ಮೊದಲ ಬಾರಿಗೆ ನ್ಯಾಯಿಕಮನ್ನಣೆಯೂ ದೊರೆಯಿತು.

ಭಾಂವ್ರಿದೇವಿಯ ಪ್ರಕರಣದಲ್ಲಿ ತೀರ್ಪು ನೀಡುತ್ತಾ ಸರ್ವೋಚ್ಚ ನ್ಯಾಯಾಲಯ ಲೈಂಗಿಕ ಕಿರುಕುಳದ ಬಗ್ಗೆ ವಿಸ್ತೃತವಾದ ಮಾರ್ಗದರ್ಶಿ ಸೂತ್ರಗಳನ್ನು ಹಾಕಿಕೊಟ್ಟಿದೆ.

ಸರ್ವೋಚ್ಚ ನ್ಯಾಯಾಲಯ ಇದಕ್ಕಾಗಿ ಅವಲಂಬಿಸಿದುದು ಮಹಿಳೆಯರ ವಿರುದ್ಧದ ಎಲ್ಲ ಬಗೆಯ ತಾರತಮ್ಯ ನಿರ್ಮೂಲನಕ್ಕೆ ಸಂಬಂಧಪಟ್ಟ ಅಂತಾರಾಷ್ಟ್ರೀಯ ಒಪ್ಪಂದವನ್ನು. ಈ ಒಪ್ಪಂದಕ್ಕೆ ಭಾರತವೂ ಸಹಿ ಹಾಕಿ ಅನುಮೋದಿಸಿದೆ. ಈ ಒಪ್ಪಂದ ಉದ್ಯೋಗ ಸ್ಥಳಗಳಲ್ಲಿ ಮಹಿಳೆಯರು ಎದುರಿಸುವ ಲೈಂಗಿಕ ಕಿರುಕುಳದ ಸಮಸ್ಯೆಗೆ ಪರಿಹಾರ ಕ್ರಮಗಳನ್ನು ಸೂಚಿಸುತ್ತದೆ. ಆದರೆ ಅವು ನಮ್ಮ ಕಾನೂನಿನ ಭಾಗವಾಗಿ ಜಾರಿಯಲ್ಲಿ ಬರುವುದು ಅದಕ್ಕೊಂದು ಕಾನೂನಿನ ಸ್ವರೂಪ ನೀಡಿ, ಸಂಸತ್ತು ಅಂಗೀಕರಿಸಿದ ನಂತರ ಮಾತ್ರ. ಇದಾಗದ ಹೊರತು ಯಾವುದೇ ಅಂತಾರಾಷ್ಟ್ರೀಯ ಒಪ್ಪಂದವೂ ರಾಷ್ಟ್ರಮಟ್ಟದಲ್ಲಿ ಪರಿಣಾಮಕಾರಿಯಾಗುವುದಿಲ್ಲ. ಈ ಒಪ್ಪಂದದಲ್ಲಿ ಅಳವಡಿಸಿಕೊಂಡಂತೆ, ಲೈಂಗಿಕ ಕಿರುಕುಳದ ಬಗೆಗೆ ಯಾವುದೇ ಕಾನೂನು ರಚನೆಯಾಗಿಲ್ಲ.

''ಸ್ತ್ರೀ-ಪುರುಷ ಸಮಾನತೆ ಎಂಬುದರಲ್ಲಿ ಲೈಂಗಿಕ ಕಿರುಕುಳದಿಂದ ರಕ್ಷಣೆ ಹಾಗೂ ಗೌರವಯುತವಾಗಿ ಕೆಲಸ ಮಾಡುವ ವಾತಾವರಣವನ್ನು ಹೊಂದಿರುವ ಹಕ್ಕೂ ಸೇರುತ್ತದೆ. ಇದು ಸಾರ್ವತ್ರಿಕವಾಗಿ ಮಾನ್ಯತೆ ಪಡೆದಿರುವ ಮೂಲಭೂತ ಮಾನವ ಹಕ್ಕು. ಈ ಹಕ್ಕನ್ನು ಚಲಾಯಿಸಲು ಅಗತ್ಯವಾದ ಸಮಾನ ಕನಿಷ್ಠ ಅಗತ್ಯತೆಗೆ ಜಾಗತಿಕ ಸಮ್ಮತಿ ದೊರೆತಿದೆ. ಆದ್ದರಿಂದ ಈ ಉದ್ದೇಶವನ್ನು ಸಾಧಿಸಲು ಮಾರ್ಗದರ್ಶಿ


ಶುಭಾಶಯಗಳೊಡನೆ



ಡಿ. ವಿ. ಕೆ. ಮೂರ್ತಿ

ಪ್ರಕಾಶಕರು

ಕೃಷ್ಣಮೂರ್ತಿಪುರಂ, ಮೈಸೂರು - 570 004

ದೂರವಾಣಿ : 2331484

ಸೂತ್ರಗಳ ರಚನೆಯಲ್ಲಿ ಅಂತಾರಾಷ್ಟ್ರೀಯ ಒಡಂಬಡಿಕೆ ಹಾಗೂ ಸೂತ್ರಗಳು ಅತ್ಯಂತ ಪ್ರಮುಖ ಪಾತ್ರ ವಹಿಸುತ್ತವೆ'' ಎಂದು ತೀರ್ಪಿನಲ್ಲಿ ಹೇಳಲಾಗಿದೆ. ಈ ಬಗ್ಗೆ ಸಮಗ್ರ ಶಾಸನವನ್ನು ಶೀಘ್ರವಾಗಿ ರಚಿಸಬೇಕೆಂದು ಸಹ ತೀರ್ಪಿನಲ್ಲಿ ತಿಳಿಸಲಾಗಿದೆ. ಆದರೆ ಇದುವರೆಗೂ ಈ ಬಗ್ಗೆ ಸಮಗ್ರ ಶಾಸನದ ರಚನೆಯಾಗಿಲ್ಲ, ರಚಿಸುವ ಪ್ರಯತ್ನಗಳು ಕೊನೆಯ ಹಂತದಲ್ಲಿವೆ.

ಸರ್ವೋಚ್ಚ ನ್ಯಾಯಾಲಯದ ಮಾರ್ಗದರ್ಶಿ ಸೂತ್ರಗಳ ಪ್ರಕಾರ, 'ಲೈಂಗಿಕ ಕಿರುಕುಳ ಎಂದರೆ ಈ ಮುಂದಿನ ವರ್ತನೆಗಳು –

* ದೈಹಿಕ ಸ್ಪರ್ಶ ಮತ್ತು ಲೈಂಗಿಕವೆನಿಸುವಂಥ ಆಂಗಿಕ ಅಭಿನಯ ಅಥವಾ ಮಾತು.

* ಲೈಂಗಿಕವಾಗಿ ತೃಪ್ತಗೊಳಿಸುವಂತೆ ಒತ್ತಾಯ ಅಥವಾ ಮನವಿ.

* ಲೈಂಗಿಕವೆನಿಸಬಹುದಾದಂಥ ಅಭಿಪ್ರಾಯಗಳ ಅಭಿವ್ಯಕ್ತಿ.

* ಅಶ್ಲೀಲ ಸಾಹಿತ್ಯ ಅಥವಾ ಪತ್ರಗಳನ್ನು ತೋರಿಸುವುದು.

* ಲೈಂಗಿಕ ಸ್ವರೂಪದ ಇತರ ಯಾವುದೇ ಅನುಚಿತವಾದ ಆಂಗಿಕ, ಶಾಬ್ದಿಕ ಅಥವಾ ಶಾಬ್ದಿಕವಲ್ಲದ ನಡವಳಿಕೆ.''

ನಿಯೋಜಕ ಅಥವಾ ಉದ್ಯೋಗ ನೀಡಿದಾತನ ಮತ್ತು ಸಂಸ್ಥೆಯ ಮಾಲೀಕನ ಜವಾಬ್ದಾರಿಗಳನ್ನು ಸಹ ಸರ್ವೋಚ್ಚ ನ್ಯಾಯಾಲಯ ವಿಧಿಸಿದೆ.



ಈ ಮಾರ್ಗದರ್ಶಿ ಸೂತ್ರಗಳು ನಿಯತ ವೇತನ ಪಡೆಯುವವರಿಗೆ, ಗೌರವ ಧನ ಪಡೆಯುವವರಿಗೆ, ಸರ್ಕಾರಿ/ಖಾಸಗಿ ಮತ್ತು ಅಸಂಘಟಿತ ವಲಯಗಳಲ್ಲಿ ಕೆಲಸ ಮಾಡುವವರಿಗೆ, ಸ್ವಯಂ ಸೇವಾ ಸಂಸ್ಥೆಗಳಿಗೆ ಅನ್ವಯಿಸುತ್ತವೆ.

ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳವನ್ನು ನಿಷೇಧಿಸಲಾಗಿದೆ ಎಂಬುದನ್ನು ಪ್ರಕಟಣೆಯ ಮೂಲಕವಾಗಲೀ ಸುತ್ತೋಲೆಯ ಮೂಲಕವಾಗಲೀ ತಿಳಿಸಬೇಕು. ಸರಕಾರಿ ಹಾಗೂ ಖಾಸಗಿ ಸಂಸ್ಥೆಗಳ ನಿಯಮಗಳಲ್ಲಿ ಲೈಂಗಿಕ ಕಿರುಕುಳವನ್ನು ನಿಷೇಧಿಸುವ ಮತ್ತು ಅಂಥ ಅಪರಾಧಕ್ಕೆ ಸೂಕ್ತ ದಂಡ ವಿಧಿಸುವ ನಿಯಮಗಳನ್ನು ಸೇರಿಸಬೇಕು. ಮಹಿಳಾ ಉದ್ಯೋಗಿಗಳಿಗೆ ಕೆಲಸದ ಸ್ಥಳದಲ್ಲಿ ಸುರಕ್ಷಿತವಾದ ಆರೋಗ್ಯಕರ, ಸ್ವಚ್ಛ ಹಾಗೂ ಮುಕ್ತ ವಾತಾವರಣವನ್ನು ಕಲ್ಪಿಸಬೇಕು. ಲೈಂಗಿಕ ಕಿರುಕುಳದ ಬಗ್ಗೆ ವಿಚಾರಣೆ ನಡೆಸುವಾಗ ದೂರು ನೀಡಿದವರಿಗೆ ಹಾಗೂ ಸಾಕ್ಷಿಗಳಿಗೆ ತೊಂದರೆ ಕೊಡದಂತೆ ಹಾಗೂ ತಾರತಮ್ಯವಾಗದಂತೆ ನೋಡಿಕೊಳ್ಳಬೇಕು. ಸಂಸ್ಥೆಯ ಹೊರಗಿನ ವ್ಯಕ್ತಿಗಳಿಂದಾಗುವ ಇಂಥ ಕಿರುಕುಳದಿಂದಲೂ ಮಹಿಳಾ ಉದ್ಯೋಗಿಗಳಿಗೆ ರಕ್ಷಣೆ ಕೊಡಬೇಕು.

ಲೈಂಗಿಕ ಕಿರುಕುಳದ ಅಪರಾಧವನ್ನು ರುಜುವಾತುಪಡಿಸಲು ವಾಸ್ತವವಾಗಿ ಪೀಡಿಸಲಾಯಿತೆಂಬುದನ್ನು ರುಜುವಾತುಪಡಿಸುವುದು ಅಗತ್ಯವೇ? ಈ ಪ್ರಶ್ನೆಗೆ ಸರ್ವೋಚ್ಚ ನ್ಯಾಯಾಲಯ ಅಪೆರಲ್ ಎಕ್ಸ್‌ಪೋರ್ಟ್ ಪ್ರಮೋಷನ್ ಕೌನ್ಸಿಲ್ ವಿ ಎ. ಕೆ. ಚೋಪ್ರಾ ಪ್ರಕರಣದಲ್ಲಿ ತೀರ್ಪು ನೀಡುತ್ತಾ ''ಇಂಥ ಪ್ರಕರಣಗಳಲ್ಲಿ ಮುಖ್ಯವಲ್ಲದ ವ್ಯತ್ಯಾಸಗಳು ಅಥವಾ ಹೆಚ್ಚುಹೆಚ್ಚಾದ ತಾಂತ್ರಿಕತೆಗಳಿಗೆ ಹೆಚ್ಚಿನ ಮಹತ್ವ ನೀಡಬಾರದು ಮತ್ತು ಅಪರಾಧ ಮಾಡಿರುವ ಅಧಿಕಾರಿ ವಾಸ್ತವವಾಗಿ ಮಹಿಳೆಯ ಮೇಲೆ ಆಕ್ರಮಣ ನಡೆಸಿಲ್ಲ ಅಥವಾ ಅವಳನ್ನು ಸ್ಪರ್ಶಿಸಿಲ್ಲ ಎಂಬ ಕಾರಣಕ್ಕೆ ಅವನು ನಿರ್ದೋಷಿಯೆನಿಸಿಕೊಳ್ಳುವುದಿಲ್ಲ. ದುರ್ವರ್ತನೆಯೂ ಸಹ ಲೈಂಗಿಕ ಕಿರುಕುಳವೆನಿಸಿಕೊಳ್ಳುತ್ತದೆ'' ಎಂದು ಸ್ಪಷ್ಟ ಉತ್ತರ ನೀಡಿದೆ.

ಉದ್ಯೋಗಿಯ ವರ್ತನೆ ಯಾವುದೇ ಕಾನೂನಿನ ಅಡಿಯಲ್ಲಿ ಅಪರಾಧವೆನಿಸಿದರೆ ಅಂಥ ವ್ಯಕ್ತಿಯ ವಿರುದ್ಧ ಸಂಸ್ಥೆಯ ಮಾಲೀಕ ಕೂಡಲೇ ಪೊಲೀಸರಿಗೆ ದೂರು ನೀಡಬೇಕು. ಒಂದು ವರ್ತನೆ ಕಾನೂನಿನ ಮೇರೆಗೆ ಅಪರಾಧವಾಗಿರಲಿ ಅಥವಾ ಇಲ್ಲದಿರಲಿ, ಅಥವಾ ಸೇವಾ ನಿಯಮಗಳ ಉಲ್ಲಂಘನೆಯಾಗಿರಲಿ ಅಥವಾ ಇಲ್ಲದಿರಲಿ, ಅದಕ್ಕೆ ಗುರಿಯಾದ ವ್ಯಕ್ತಿಯ ದೂರು ಪರಿಹಾರಕ್ಕಾಗಿ ಸಂಸ್ಥೆಯಲ್ಲಿ ಸೂಕ್ತ ದೂರು ವ್ಯವಸ್ಥೆಯನ್ನು ಕಲ್ಪಿಸಬೇಕು. ಆದ್ದರಿಂದ ಪ್ರತಿಯೊಂದು ಸರ್ಕಾರಿ ಅಥವಾ ಖಾಸಗಿ ಕಚೇರಿಯಲ್ಲಿಯೂ ದೂರು ಸಮಿತಿಯ ರಚನೆ ಕಡ್ಡಾಯ.

* ಈ ದೂರು ಸಮಿತಿಗೆ ಮಹಿಳೆಯೇ ಅಧ್ಯಕ್ಷಳಾಗಿರಬೇಕು.

* ಅರ್ಧದಷ್ಟು ಸದಸ್ಯರು ಮಹಿಳೆಯರಾಗಿರಬೇಕು.

* ಈ ವಿಷಯದ ಬಗ್ಗೆ ಅರಿವಿರುವ ಸರ್ಕಾರೇತರ ಸಂಘ ಅಥವಾ ಸಂಸ್ಥೆಯ ಒಬ್ಬ ಸದಸ್ಯರು ಇರಬೇಕು.

ಇಂಥ ದೂರು ಸಮಿತಿಯ ವಿಚಾರಣೆಯ ರೀತಿ ಅನೌಪಚಾರಿಕವಾಗಿರಬೇಕು. ದೂರು ನೀಡಿದವರನ್ನು ಗೌರವದಿಂದ ನಡೆಸಿಕೊಳ್ಳಬೇಕು. ಕಿರುಕುಳದ ಬಗ್ಗೆ ಪ್ರತ್ಯಕ್ಷ ಸಾಕ್ಷಿಯನ್ನೊದಗಿಸುವಂತೆ ಒತ್ತಾಯಿಸಬಾರದು. ಯಾಕೆಂದರೆ, ಇಂಥ ಘಟನೆಗಳೆಲ್ಲ ನಡೆಯುವುದು ಯಾರೂ ಇಲ್ಲದಾಗಲೇ. ದೂರು ನೀಡಿದವರಿಗೆ ಮಾತನಾಡಲು ಮೊದಲು ಅವಕಾಶವಿರಬೇಕು. ಇಡೀ ವಿಚಾರಣೆಯ ಪ್ರಕ್ರಿಯೆ ಮಾನವೀಯತೆಯಿಂದ ಕೂಡಿರಬೇಕು. ದೂರು ಸಮಿತಿಯ ಸದಸ್ಯರು ಆರೋಪಿಯ ಅಧೀನ ಅಧಿಕಾರಿಗಳಾದರೆ, ಸದಸ್ಯರಿಗೆ ತಮ್ಮ ಜವಾಬ್ದಾರಿಗಳನ್ನು ನಿರ್ವಹಿಸುವುದು ಕಷ್ಟವಾಗುತ್ತದೆ. ಆದ್ದರಿಂದ ಸಮಿತಿಯ ಸದಸ್ಯರನ್ನು ಆಯ್ಕೆ ಮಾಡುವಾಗ ಈ ಅಂಶ ಗಮನದಲ್ಲಿರಬೇಕು.

ವಿಚಾರಣೆಗೆ ಮುಂಚೆಯೇ ಕಿರುಕುಳ ನೀಡಿದವನನ್ನು ಅಥವಾ ತನ್ನನ್ನು ವರ್ಗಾಯಿಸುವಂತೆ ಕೇಳುವ ಹಕ್ಕು ದೂರು ನೀಡಿದ ಮಹಿಳೆಗೆ ಇದೆ.

ಪ್ರತಿಯೊಂದು ಇಲಾಖೆ/ಖಾಸಗಿ ಸಂಸ್ಥೆ ತಾನು ಸ್ವೀಕರಿಸಿದ ದೂರುಗಳ ಸಂಬಂಧದಲ್ಲಿ ಕೈಗೊಂಡ ಕ್ರಮಗಳನ್ನು ತಿಳಿಸಿ ಪ್ರತಿ ವರ್ಷ ಸರ್ಕಾರಕ್ಕೆ ವರದಿ ಸಲ್ಲಿಸಬೇಕು.

ಉದ್ಯೋಗದಲ್ಲಿ ಬಡ್ತಿ ಬೇಕಾದಲ್ಲಿ ತನ್ನನ್ನು ಮೆಚ್ಚಿಸಬೇಕೆಂದು ಸೂಚನೆ ಕೊಡುವುದು, ಕೆಲಸ ಮಾಡುವಾಗ ಸೂಚನೆ ಕೊಡುವ ನೆವದಲ್ಲಿ ಬೇಕೆಂದೇ ಮೈ-ಕೈ ಸ್ಪರ್ಶಿಸುವುದು, ಮಾತನಾಡುವಾಗ ಅಸಭ್ಯ ಸಂಜ್ಞೆಗಳನ್ನು ಮಾಡುವುದು, ಅಶ್ಲೀಲ ಹಾಸ್ಯ ಚಟಾಕಿಗಳನ್ನು ಹಾರಿಸುವುದರ ಮೂಲಕ ಇತರರೆದುರಿಗೆ ಸಂಕೋಚ ಪಡುವಂತೆ ಮಾಡುವುದು, ತನ್ನ ಲೈಂಗಿಕ ಆಸೆಗಳನ್ನು ಪೂರೈಸದಿದ್ದರೆ ವರ್ಗಾವಣೆ ಮಾಡುವುದಾಗಿ ಅಥವಾ ಕೆಲಸದಿಂದ ತೆಗೆದುಹಾಕುವುದಾಗಿ ಹೆದರಿಸುವುದು, ಕೆಲಸ ಆಗಬೇಕಾದರೆ ತನ್ನನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದು ಸಲಹೆ ನೀಡುವುದು – ಈ ಮುಂತಾದವುಗಳು ಉದ್ಯೋಗ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳದ ಕೆಲವು ಸ್ವರೂಪಗಳು. ಇದಕ್ಕೆ ಮಹಿಳಾ ಉದ್ಯೋಗಿ ಆಕ್ಷೇಪ ಎತ್ತುವುದರಿಂದ ಅವಳ ಉದ್ಯೋಗಕ್ಕೆ ಅಥವಾ ಬಡ್ತಿಗೆ ಅಡ್ಡಿಯಾದೀತೆಂದು ಭಾವಿಸಲು ಅವಳಿಗೆ

ಕಾರಣಗಳಿದ್ದರೆ ಅಥವಾ ಉದ್ಯೋಗ ಸ್ಥಳದಲ್ಲಿ ಅವಳಿಗೆ ವಿರುದ್ಧವಾದ ವಾತಾವರಣ ಏರ್ಪಡುತ್ತದೆ ಎಂದು ನಂಬಲು ಅವಳಿಗೆ ಕಾರಣಗಳಿದ್ದರೆ ಅಧಿಕಾರಿಯ ಅಂಥ ವರ್ತನೆಯಿಂದ ಅವಳಿಗಿರುವ ಸಮಾನತೆಯ ಹಕ್ಕಿನ ಉಲ್ಲಂಘನೆಯಾಗಿದೆಯೆಂದೇ ಅರ್ಥ. ಅಂಥ ಸಂದರ್ಭದಲ್ಲಿ ಅವಳಿಗೆ ನಷ್ಟ ಪರಿಹಾರವನ್ನು ಕೋರಲು ಅವಕಾಶ ವಿರುವಂಥ ದೂರು ವ್ಯವಸ್ಥೆ ಹಾಗೂ ಪರಿಹಾರೋಪಾಯಗಳನ್ನು ಒದಗಿಸಬೇಕು ಎಂದು ಸರ್ವೋಚ್ಚ ನ್ಯಾಯಾಲಯ ಅಭಿಪ್ರಾಯಪಟ್ಟಿದೆ.

ಸರ್ವೋಚ್ಚ ನ್ಯಾಯಾಲಯ ೧೯೯೭ರಲ್ಲಿ ಹಾಕಿಕೊಟ್ಟಿರುವ ಈ ಮಾರ್ಗದರ್ಶನ ಸೂತ್ರಗಳ ಬಗ್ಗೆಯಾಗಲೀ ದೂರು ನಿವಾರಣಾ ಕಾರ್ಯತಂತ್ರದ ಬಗ್ಗೆಯಾಗಲೀ ಅನೇಕ ಉದ್ಯೋಗಸ್ಥ ಮಹಿಳೆಯರಿಗೆ ಅರಿವೇ ಇಲ್ಲವಾಗಿದೆ. ರಾಷ್ಟ್ರೀಯ ಮಹಿಳಾ ಆಯೋಗದ ಅಧ್ಯಯನದಿಂದ ಇದು ಸ್ಪಷ್ಟಪಟ್ಟಿದೆ. ಶೇ. ೬೦ರಷ್ಟು ಉದ್ಯೋಗಸ್ಥ ಮಹಿಳೆಯರಿಗೆ ಈ ಬಗ್ಗೆ ಅರಿವಿಲ್ಲ ಎಂಬುದು ತಿಳಿದುಬಂದಿದೆ. ಕೆಲವೊಮ್ಮೆ ಕಿರುಕುಳ ಕೊಟ್ಟವನ ಬದಲು ದೂರು ಕೊಟ್ಟ ಮಹಿಳೆಯ ನಡತೆಯನ್ನೇ ಪ್ರಶ್ನಿಸಲಾಗುತ್ತದೆ. ಅಲ್ಲದೆ ನಿಯೋಜಕ ಹಾಗೂ ಸಹೋದ್ಯೋಗಿಗಳೇ ಅವಳನ್ನು ಒಂಟಿಯನ್ನಾಗಿಸಿ ದೂರವಿಡುವ ಪ್ರಯತ್ನವನ್ನು ಮಾಡುತ್ತಾರೆ. ಹಾಗಾಗಿ ದೂರು ನೀಡಿದ ಕಾರಣಕ್ಕೆ ಮಹಿಳೆ ಇನ್ನೂ ಹೆಚ್ಚಿನ ಕಿರುಕುಳಕ್ಕೆ ಒಳಗಾದ ಪ್ರಕರಣಗಳೂ ಇಲ್ಲದಿಲ್ಲ. ಅಲ್ಲದೆ ಇಂಥ ಪ್ರಕರಣಗಳಲ್ಲಿ ಹೆಚ್ಚಿನ ಪ್ರತಿರೋಧ ಬರುವುದೇ ನಿಯೋಜಕರಿಂದ. ಅಪರಾಧಿಯನ್ನು ರಕ್ಷಿಸಿ ದೂರು ನೀಡಿದ ಮಹಿಳೆಯನ್ನೇ ಅಪರಾಧ ವೆಸಗಿದವಳೆಂಬಂತೆ ಕಾಣಲಾಗುತ್ತದೆ. ಅಲ್ಲದೆ, ಕಿರುಕುಳ ನೀಡಿದವನ ವಿರುದ್ಧ ಕ್ರಮಕೈಗೊಳ್ಳಲು ಹಿಂಜರಿಕೆ ವ್ಯಕ್ತವಾಗುತ್ತದೆ ಮತ್ತು ದೂರನ್ನು ವಾಪಸ್ಸು ಪಡೆಯುವಂತೆ ಮಹಿಳೆಯ ಮೇಲೆ ಒತ್ತಡ ಹೇರಲಾಗುತ್ತದೆ ಅಥವಾ ಹೆದರಿಸಲಾಗುತ್ತದೆ.

ಅಮೆರಿಕಾದ 'ಸಮಾನ ಉದ್ಯೋಗಾವಕಾಶಗಳ ಆಯೋಗ' (ದಿ ಈಕ್ವಲ್ ಆಪರ್ಚ್ಯುನಿಟೀಸ್ ಕಮೀಷನ್) ಲೈಂಗಿಕ ಕಿರುಕುಳವನ್ನು 'ಉದ್ಯೋಗ ಸ್ಥಳದಲ್ಲಿ ಮಹಿಳಾ ಉದ್ಯೋಗಿಯ ಕಾರ್ಯದಕ್ಷತೆಗೆ ಅಡ್ಡ ಬರುವ ಅಥವಾ ಪ್ರತಿಕೂಲ ಅಥವಾ ಭಯದ ವಾತಾವರಣವನ್ನು ಉಂಟುಮಾಡುವಂಥ ಲೈಂಗಿಕವೆನಿಸುವ ವರ್ತನೆ' ಎಂದು ಪರಿಭಾಷಿಸುತ್ತದೆ. ಕಂಪೆನಿಯ ಉದ್ಯೋಗಿಗಳ ಇಂಥ ವರ್ತನೆಗಳು ಭಾರೀ ಮೊತ್ತದ ಹಣವನ್ನು ಪರಿಹಾರ ರೂಪದಲ್ಲಿ ಕೊಡುವುದರೊಂದಿಗೆ ಕೊನೆಗೊಂಡಿವೆ. ಅಮೆರಿಕಾದ ಮಿಟ್ಸುಬಿಷಿ ಮೋಟಾರು ತಯಾರಿಕಾ ಕಂಪೆನಿ ತನ್ನ ಹಿಂದಿನ ಹಾಗೂ ಅಂದಿನ ಉದ್ಯೋಗಿಗಳ ಬಗ್ಗೆ ಅದರ ಮಹಿಳಾ ಉದ್ಯೋಗಿಗಳು ಲೈಂಗಿಕ ಕಿರುಕುಳದ ಆಪಾದನೆ ಹೊರಿಸಿದುದರಿಂದಾಗಿ ೩೪ ದಶಲಕ್ಷ ಡಾಲರುಗಳನ್ನು ಪರಿಹಾರ ರೂಪದಲ್ಲಿ ಕೊಡಬೇಕಾಯಿತು. ಲೈಂಗಿಕ ಕಿರುಕುಳವನ್ನು ಮೌನವಾಗಿ ಸಹಿಸಬೇಕಿಲ್ಲ ಮತ್ತು ಮೌನವಾಗಿ ಸಹಿಸಲೂಬಾರದು ಎಂಬ ಅರಿವು ಮೂಡುತ್ತಿದ್ದಂತೆಲ್ಲ 'ಸಮಾನ ಉದ್ಯೋಗಾವಕಾಶಗಳ ಸಮಿತಿ'ಗೆ ಬರುವ ದೂರುಗಳ ಸಂಖ್ಯೆ ಹೆಚ್ಚುತ್ತಿದೆ.

ಹೀಗೆ ದಂಡಕ್ಕೆ ಗುರಿಯಾದ ಎಲ್ಲ ಕಂಪೆನಿಗಳಲ್ಲೂ ಲೈಂಗಿಕ ಕಿರುಕುಳ ಪುರುಷರಿಗೆ ಮಹಿಳಾ ಉದ್ಯೋಗಿಯ ಮೇಲಿರುವ ಅಧಿಕಾರದಿಂದ ಉಂಟಾದುದು. ಆ ಅಧಿಕಾರ ಲೈಂಗಿಕ, ಆರ್ಥಿಕ ಅಥವಾ ರಾಜಕೀಯ ಅಧಿಕಾರವಾಗಿರಬಹುದು. ಸಮಾಜದಲ್ಲಿ ಮಹಿಳೆಯರಿಗೆ ಸಾಂಪ್ರದಾಯಿಕವಾಗಿ ನಿಗದಿಯಾಗಿಬಿಟ್ಟಿರುವ ಪಾತ್ರಗಳನ್ನೇ ನಿರ್ವಹಿಸಬೇಕೆಂದು ಪುರುಷರ ಬಹುಮಟ್ಟಿನ ನಿರೀಕ್ಷೆಯ ಫಲ ಇಂಥ ಕಿರುಕುಳಗಳು. ಇಂಥ ಅಧಿಕ ಪ್ರಮಾಣದಲ್ಲಿ ದಂಡ ವಿಧಿಸುವುದರಿಂದ ಉದ್ಯೋಗಿಗಳಲ್ಲಿ ಮತ್ತು ಉದ್ಯೋಗಿಗಳ ವರ್ತನೆಗೆ ಜವಾಬ್ದಾರವಾಗುವ ಕಂಪೆನಿಗಳಲ್ಲಿ ಎಚ್ಚರ ಮೂಡುತ್ತದೆ ನಿಜ. ಆದರೆ ಅಷ್ಟೇ ಸಾಲದು ಎಂಬುದು ಮಾನವ ಹಕ್ಕುಗಳಿಗಾಗಿ ಹೋರಾಡುವವರ ನಿಲುವು. ಈ ಬಗ್ಗೆ ಅತ್ಯಂತ ಕಠಿಣವಾದ ಕಾನೂನನ್ನು ಅತ್ಯಂತ ಕಟ್ಟುನಿಟ್ಟಾಗಿ ಜಾರಿಗೊಳಿಸಬೇಕು ಎಂಬುದು ಅವರ ವಾದ.

ಸಮಾನ ಉದ್ಯೋಗಾವಕಾಶಗಳ ಆಯೋಗ 'ಲೈಂಗಿಕ ಕಿರುಕುಳ'ವನ್ನು ಅಮೆರಿಕಾದಲ್ಲಿ ೧೯೬೪ರ ನಾಗರಿಕ ಹಕ್ಕುಗಳ ಅಧಿನಿಯಮದ VIIನೆಯ ಅಧ್ಯಾಯದಲ್ಲಿ ವಿವರಿಸಿರುವ ಲಿಂಗ ತಾರತಮ್ಯದ ಒಂದು ರೂಪ ಎಂದು


MOST USEFUL & HIGH QUALITY
ATLASES FOR STUDENTS & GENERAL READERS

Besides maps, this provides important facts about a country, like its land and people, its position within a continent, and its economy in a nutshell, useful information on currency, per capita income and form of government along with up-to-date data on area and population has been given. Very useful to all school students.




Rs. 140




Rs. 150

A complete guide to India - its Geography, States, Roads & Tourist Places. As you go Places. As you go through its pages, you will feel like travelling across the length and breadth of the country. All the city roads, places of tourist interest, in fact, the entire landscape are shown clearly and distinctly. A traveller's companion.



DREAMLAND PUBLICATIONS

J-128, KIRTI NAGAR, NEW DELHI - 110 015 ✆ 011-25106050
Fax : 011-25438283 e-mail : dreamland@vsnl.com
Visit us at : www.dreamlandpublications.com

# ಮಾನಸಿಕ ಯಾತನೆಗೆ ಸಾಂತ್ವನ ಹೇಳಿದ ತೀರ್ಪು



ರೂಪನ್ ದೇವಲ್ ಬಜಾಜ್ ಉನ್ನತ ಶಿಕ್ಷಣ ಪಡೆದು ಪಂಜಾಬ್ ಸರಕಾರದ ವಿಶೇಷ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಐಎಎಸ್ ಅಧಿಕಾರಿ. ೧೯೮೮ರ ಜುಲೈ ೧೮ರ ಸಂಜೆ ನಡೆದ ಒಂದು ಅಧಿಕೃತ ಔತಣಕೂಟಕ್ಕೆ ಸರಕಾರದಲ್ಲಿ ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದ ಕೆ.ಪಿ.ಎಸ್. ಗಿಲ್ ಹಾಗೂ ರೂಪನ್ ಬಜಾಜ್ ಆಹ್ವಾನಿತರಾಗಿದ್ದರು. ೧೯೮೦ರ ದಶಕದ ಉತ್ತರಾರ್ಧದಲ್ಲಿ ಪಂಜಾಬ್‌ನಲ್ಲಿ ಪೊಲೀಸ್ ಮಹಾನಿರ್ದೇಶಕ ಕೆ.ಪಿ.ಎಸ್. ಗಿಲ್ ಭಯೋತ್ಪಾದಕರಿಗೆ ಸಿಂಹಸ್ವಪ್ನವಾಗಿದ್ದರು. ಅವರ ಹುಟ್ಟಡಗಿಸಿದ ಕೀರ್ತಿಶಿಖರದ ತುತ್ತತುದಿಯಲ್ಲಿದ್ದರು. ಔತಣಕೂಟದಲ್ಲಿ ಕುಡಿದು ಅಮಲೇರಿದ್ದ ಗಿಲ್ ಅವರು ರೂಪನ್ ಬಜಾಜ್ ಅವರೊಂದಿಗೆ ಅಸಭ್ಯವಾಗಿ ವರ್ತಿಸಿದರು. ಅವರ ಪೃಷ್ಠವನ್ನು ಚಿವುಟಿ ಅಸಭ್ಯವಾಗಿ ನಡೆದುಕೊಂಡರು ಮತ್ತು ಮಹಿಳೆಯ ಘನತೆಗೆ ಕುಂದುಂಟಾಗುವ ರೀತಿಯಲ್ಲಿ ನಡೆದುಕೊಂಡರು. ಅಲ್ಲಿ ನೆರೆದಿದ್ದ ಪತ್ರಕರ್ತರು ಹಾಗೂ ಇತರ ಹಿರಿಯ ಅಧಿಕಾರಿಗಳ ಮತ್ತು ಅತಿಥಿಗಳ ಎದುರಿನಲ್ಲಿ ಔತಣಕೂಟವನ್ನು ಏರ್ಪಡಿಸಿದ್ದ ಅಂದಿನ ಗೃಹ ಕಾರ್ಯದರ್ಶಿಯವರಿಗೆ ರೂಪನ್ ದೂರು ನೀಡಿದರು. ಆದರೆ ಅಂಥ ಪ್ರತಿಷ್ಠಿತ ವ್ಯಕ್ತಿಯ ಈ 'ಸಣ್ಣ' ತಪ್ಪನ್ನು ಪ್ರಶ್ನಿಸುವುದುಂಟೆ? ಇದನ್ನು ಮುಚ್ಚಿಹಾಕುವ ಪ್ರಯತ್ನ ಹಾಗೂ ಅದನ್ನು ಮುಂದುವರಿಸದಂತೆ ರೂಪನ್ ಅವರ ಮನವೊಲಿಸುವ ಪ್ರಯತ್ನ ಎಲ್ಲ ಹಂತಗಳಲ್ಲೂ ನಡೆಯಿತು. ಆದರೆ ಮಹಿಳೆಯ ಘನತೆಗೆ ಧಕ್ಕೆಯುಂಟುಮಾಡುವ ಕೃತ್ಯ ಸಣ್ಣ ತಪ್ಪು ಹೇಗಾದೀತು ?

ಸುಶಿಕ್ಷಿತೆಯಾಗಿದ್ದೂ ಸರಕಾರದ ಉನ್ನತ ಹುದ್ದೆಯಲ್ಲಿದ್ದೂ ರೂಪನ್ ಬಜಾಜ್ ಅವರ ಹೋರಾಟದ ಹಾದಿಯೇನೂ ಸುಗಮವಾಗಿರಲಿಲ್ಲ. ಅವರು ಬೆಳೆದು ಬಂದ ವಾತಾವರಣದಿಂದಾಗಿ ಅವರ ಬೆನ್ನಿಗಿದ್ದುದು ಇನ್ನಿಲ್ಲದ ಆತ್ಮಸ್ಥೈರ್ಯ, ತಂದೆಯಿಂದ ಪಡೆದ, ನ್ಯಾಯಕ್ಕಾಗಿ ಹೋರಾಡುವ ಗುಣ ಹಾಗೂ ಗಂಡನ ಬೆಂಬಲ.

ಔತಣಕೂಟದಲ್ಲಿನ ಗಿಲ್ ಅವರ ವರ್ತನೆಯನ್ನು ವಿರೋಧಿಸಿ ಜುಲೈ ೨೮ರಂದು ಚಂಡೀಗಢ ಪೊಲೀಸರಲ್ಲಿ ಎಫ್‌ಐಆರ್ ದಾಖಲಾಯಿತು. ಆದರೆ ನವೆಂಬರ್ ೨೮ರಲ್ಲಿ ಚಂಡೀಗಢ ಪೊಲೀಸರು ಆ ಬಗ್ಗೆ 'ಪತ್ತೆಯಾಗದ ಪ್ರಕರಣ' ಎಂದು ವರದಿ ಸಲ್ಲಿಸಿದರು. ಇದನ್ನು ಜ್ಯುಡಿಶಿಯಲ್ ಮ್ಯಾಜಿಸ್ಟ್ರೇಟರು ಡಿಸೆಂಬರ್ ಒಂಬತ್ತರಂದು ಅಂಗೀಕರಿಸಿದರು.

ಭಾರತ ದಂಡ ಸಂಹಿತೆಯ ೩೫೪ನೆಯ ಪ್ರಕರಣದ ಪ್ರಕಾರ ಹೆಂಗಸಿನ ಮಾನಭಂಗ ಮಾಡುವ ಉದ್ದೇಶದಿಂದ ಅವಳ ಮೇಲೆ ಹಲ್ಲೆ ಮಾಡುವುದು ಅಥವಾ ಬಲಪ್ರಯೋಗ ಮಾಡುವುದು ಅಪರಾಧ. ೫೦೯ನೆಯ ಪ್ರಕರಣದ ಪ್ರಕಾರ ಒಬ್ಬ ಮಹಿಳೆಯ ಮಾನಕ್ಕೆ ಧಕ್ಕೆ ತರುವಂಥ ಉದ್ದೇಶವಿರುವ ಶಬ್ದ, ಸಂಜ್ಞೆ ಅಥವಾ ಕೃತ್ಯ ಸಹ ಅಪರಾಧ. ಈ ಎರಡೂ ಪ್ರಕರಣಗಳ ಅಡಿಯಲ್ಲಿ ಗಿಲ್ ಅವರ ವಿರುದ್ಧ ಕ್ರಮ ಕೈಗೊಳ್ಳಬೇಕೆಂದು ಕೋರಿ ರೂಪನ್ ಅವರು ಸಲ್ಲಿಸಿದ್ದ ಎಫ್‌ಐಆರ್ ಅನ್ನು ಹರ್‍ಯಾಣ ಉಚ್ಚ ನ್ಯಾಯಾಲಯ ರದ್ದುಪಡಿಸಿತು. ಆದರೆ ಏಳು ವರ್ಷಗಳ ಅನಂತರ, ರೂಪನ್ ಅವರ ಛಲ ಬಿಡದ ಪ್ರಯತ್ನದಿಂದಾಗಿ, ೧೯೯೫ರ ಅಕ್ಟೋಬರ್ ೧೨ರಂದು ಆ ಪ್ರಕರಣಗಳ ಅಡಿಯಲ್ಲಿ ಕಾನೂನು ಕ್ರಮ ಜರುಗಿಸಬೇಕೆಂದು ಹಾಗೂ ತ್ವರಿತವಾಗಿ ವಿಚಾರಣೆಯನ್ನು ಮುಗಿಸಬೇಕೆಂದು ಚಂಡೀಗಢದ ಚೀಫ್ ಜ್ಯುಡಿಶಿಯಲ್ ಮ್ಯಾಜಿಸ್ಟ್ರೇಟರಿಗೆ ನಿರ್ದೇಶನ ನೀಡಿತು. ಇಲ್ಲಿಯವರೆಗೆ ಹೋರಾಟದ ಒಂದು ಘಟ್ಟವಾದರೆ ಮತ್ತೆ ಜ್ಯುಡಿಶಿಯಲ್ ಮ್ಯಾಜಿಸ್ಟ್ರೇಟರ ನ್ಯಾಯಾಲಯದಿಂದ ಸರ್ವೋಚ್ಚ ನ್ಯಾಯಾಲಯದವರೆಗಿನ ಓಡಾಟವು ಹೋರಾಟದ ಮತ್ತೊಂದು ಘಟ್ಟ. ಕಡೆಗೆ ಗಿಲ್ ಅವರನ್ನು ದೋಷಿ ಎಂದು ತೀರ್ಮಾನಿಸಿದ ಸರ್ವೋಚ್ಚ ನ್ಯಾಯಾಲಯದ ತೀರ್ಪು ಹೊರಬಿದ್ದದ್ದು ೨೦೦೫ರ ಜುಲೈ ೨೭ರಂದು; ಅಂದರೆ, ೧೭ ವರ್ಷಗಳ ಅನಂತರ ! ಇದಕ್ಕಾಗಿ ರೂಪನ್ ಬಜಾಜ್ ಅವರು ಅನುಭವಿಸಿದ ಮಾನಸಿಕ ಯಾತನೆಯನ್ನು ಯಾರೂ ಊಹಿಸಬಹುದು. ಪ್ರಾಮಾಣಿಕ ದುಡಿಮೆಯಿಂದ ಕೂಡಿಟ್ಟ ಹಣವೂ ಇದಕ್ಕಾಗಿ ವ್ಯಯವಾಗಿ ಆರ್ಥಿಕವಾಗಿಯೂ ಬಳಲಿದರು.

''ಹೆಣ್ಣು ಎನ್ನುವ ಕಾರಣಕ್ಕೆ ನಾನು ತಲ್ಲಣಗೊಳ್ಳಬಾರದು ಎಂಬುದನ್ನು ಮನದಲ್ಲಿಟ್ಟುಕೊಂಡು ನನ್ನ ತಂದೆ ನನ್ನನ್ನು ಬೆಳೆಸಿದ್ದರು. ಈ ತೀರ್ಪು ನೋಡಲು ನನ್ನ ತಂದೆ ಇರಬೇಕಿತ್ತು.'' ಈ ಅವಧಿಯಲ್ಲಿ ನಿಧನರಾದ ತಮ್ಮ ತಂದೆ ಸೇನಾ ಅಧಿಕಾರಿ ಲೆ॥ ಇಕ್ಬಾಲ್ ಸಿಂಗ್ ಅವರನ್ನು ತೀರ್ಪು ಹೊರಬಿದ್ದ ದಿನ ರೂಪನ್ ಬಜಾಜ್ ನೆನೆಸಿಕೊಂಡಿದ್ದಾರೆ.

ಉಚ್ಚ ನ್ಯಾಯಾಲಯ ನೀಡಿದ್ದ ತೀರ್ಪನ್ನು ಎತ್ತಿಹಿಡಿದು ಅದು ವಿಧಿಸಿದ ಎರಡು ಲಕ್ಷ ರೂ.ಗಳ ದಂಡವನ್ನು ದೃಢೀಕರಿಸಿ, ಅದನ್ನು ರೂಪನ್ ಅವರಿಗೆ ನೀಡುವಂತೆ ಆದೇಶ ನೀಡಿತು ಸರ್ವೋಚ್ಚ ನ್ಯಾಯಾಲಯ. ಆದರೆ ರೂಪನ್ ಅವರು ಪರಿಹಾರದ ಈ ಮೊತ್ತವನ್ನು ಸ್ವೀಕರಿಸಲು ನಿರಾಕರಿಸಿ ಅದನ್ನು ಯಾವುದಾದರೂ ಮಹಿಳಾ ಅಭಿವೃದ್ಧಿ ಸಂಸ್ಥೆಗೆ ನೀಡುವಂತೆ ಕೋರಿದರು.

ಹಣದ ರೂಪದ ಪರಿಹಾರವು ಕಳೆದುಕೊಂಡ ಮಾನಸಿಕ ನೆಮ್ಮದಿಯನ್ನು, ಧಕ್ಕೆಗೊಂಡ ಆತ್ಮಗೌರವವನ್ನು, ಆತಂಕದಿಂದ ಕಳೆದ ಜೀವನದ ಅಮೂಲ್ಯ ಕ್ಷಣಗಳನ್ನು ಮರಳಿ ತಂದುಕೊಡಬಲ್ಲುದೇ !?

ವ್ಯಾಖ್ಯಾನಿಸುತ್ತದೆ. ಉದ್ಯೋಗ ಸ್ಥಳಗಳಲ್ಲಿ ಮಹಿಳೆಯರು ಒಳಗಾಗುವ ಲೈಂಗಿಕ ಕಿರುಕುಳಕ್ಕೆ ಆಯಾ ಉದ್ಯೋಗಗಳ ನಿಯೋಜಕರನ್ನೇ ಅಮೆರಿಕಾದ ಸರ್ವೋಚ್ಚ ನ್ಯಾಯಾಲಯ ಹೆಚ್ಚು ಹೊಣೆಗಾರರನ್ನಾಗಿ ಮಾಡಿದೆ.

ಮಾನವ ಸಂಪನ್ಮೂಲ ನಿರ್ವಹಣಾ ಸಂಸ್ಥೆ ಮಾಡಿರುವ ವರದಿಯ ಪ್ರಕಾರ, ಶೇ. ೬೨ರಷ್ಟು ಕಂಪೆನಿಗಳು ಲೈಂಗಿಕ ಕಿರುಕುಳ ನಿವಾರಣಾ ತರಬೇತಿ ಕಾರ್ಯಕ್ರಮಗಳನ್ನು ಆಯೋಜಿಸುತ್ತವೆ. ಶೇ. ೯೭ರಷ್ಟು ಕಂಪನಿಗಳು ಲಿಖಿತ ಲೈಂಗಿಕ ಕಿರುಕುಳ ನಿವಾರಣಾ ಕಾರ್ಯ ನೀತಿಯನ್ನು ಹೊಂದಿವೆ. ಇಷ್ಟಾಗಿಯೂ ಪ್ರತಿ ವರ್ಷ ಸಮಾನ ಉದ್ಯೋಗಾವಕಾಶಗಳ ಆಯೋಗ ಸುಮಾರು ೧೫ ಸಾವಿರ ಲೈಂಗಿಕ ಕಿರುಕುಳದ ಅರ್ಜಿಗಳನ್ನು ನವೀಕರಿಸುತ್ತದೆ. ೨೦೦೪ರಲ್ಲಿ ಸ್ವೀಕರಿಸಿದ ದೂರುಗಳ ಸಂಖ್ಯೆ ೧೩ ಸಾವಿರ. ಅಧಿಕಾರಿಗಳು ಮಹಿಳೆಯಾಗಿರುವಲ್ಲಿ ಪುರುಷರೂ ಲೈಂಗಿಕ ಕಿರುಕುಳಕ್ಕೆ ಒಳಗಾಗಿದ್ದಾರೆ ಎಂಬುದು ಬ್ರಿಟನ್ನಿನ ಸಮಾನ ಉದ್ಯೋಗಾವಕಾಶಗಳ ಸಮಿತಿಯ ಮುಂದೆ ಪುರುಷರಿಂದ ಬಂದಿರುವ ಅರ್ಜಿಗಳು ದಾಖಲು ಮಾಡುತ್ತವೆ.

ಉದ್ಯೋಗ ಸ್ಥಳದಲ್ಲಿ ಮಹಿಳೆಯರ ಮೇಲೆ ನಡೆಸುವ ಯಾವುದೇ ಕೃತ್ಯವನ್ನು ನೇರವಾಗಿ ಅಪರಾಧವನ್ನಾಗಿಸುವ ಯಾವುದೇ ಸಮಗ್ರ ಶಾಸನ ನಮ್ಮಲ್ಲಿ ರಚನೆಯಾಗಿಲ್ಲ. ೧೯೯೭ರಲ್ಲಿ 'ವಿಶಾಖಾ' ಪ್ರಕರಣದಲ್ಲಿ ನೀಡಿದ ತೀರ್ಪಿನಲ್ಲೇ ಇಂಥದೊಂದು ಕಾನೂನಿನ ಅಗತ್ಯವಿದೆಯೆಂದು ಹೇಳಲಾಗಿತ್ತು. ಆದರೆ, ಕಾನೂನು ರಚನೆಯಿರಲಿ, ಆ ತೀರ್ಪಿನಲ್ಲಿ ಹಾಕಿಕೊಟ್ಟ ಮಾರ್ಗದರ್ಶಿ ಸೂತ್ರಗಳನ್ನು ಸಹ ಕಟ್ಟುನಿಟ್ಟಾಗಿ ಪಾಲಿಸುವಂತೆ ನೋಡಿಕೊಳ್ಳುವ ವ್ಯವಸ್ಥೆಯೂ ೨೦೦೪ರವರೆಗೆ ರೂಪುಗೊಂಡಿರಲಿಲ್ಲ. ಆದರೆ ಬರೋಡ ವಿಶ್ವವಿದ್ಯಾಲಯದಲ್ಲಿ ನಡೆದ ಮತ್ತೊಂದು ಲೈಂಗಿಕ ಕಿರುಕುಳದ ಪ್ರಕರಣವು ಇದಕ್ಕೆ ಚಾಲನೆ ನೀಡಿತು. ಈ ಪ್ರಕರಣದಲ್ಲಿ ವಿಶ್ವವಿದ್ಯಾಲಯದ ಪ್ರಾಧ್ಯಾಪಕರೊಬ್ಬರಿಂದ ವಿದ್ಯಾರ್ಥಿನಿ ಲೈಂಗಿಕ ಕಿರುಕುಳಕ್ಕೆ ಒಳಗಾದಳು. ಈ ಬಗ್ಗೆ ಅವಳು ವಿರೋಧ ವ್ಯಕ್ತಪಡಿಸಿದ ಕಾರಣ ಇನ್ನಷ್ಟು ಕಿರುಕುಳಕ್ಕೆ ಅವಳು ಒಳಗಾಗಬೇಕಾಯಿತು. ಇದನ್ನು ವಿರೋಧಿಸಿ 'ಆಲೋಚನಾ' ಎಂಬ ಮಹಿಳಾ ಸಂಘಟನೆಯ ಡಾ|| ಮೇಧಾ ಕೊತ್ವಾಲ್ ಹಾಗೂ ಇತರ ಮಹಿಳಾ ಸಂಘಟನೆಗಳು ಭಾರತದ ಮುಖ್ಯ ನ್ಯಾಯಾಧೀಶರಿಗೆ ಪತ್ರ ಬರೆದರು. ಈ ಪತ್ರವನ್ನೇ ರಿಟ್ ಅರ್ಜಿಯನ್ನಾಗಿ ಪರಿವರ್ತಿಸಿ, ವಿಶಾಖಾ ಪ್ರಕರಣದಲ್ಲಿ ಹಾಕಿಕೊಟ್ಟ ಮಾರ್ಗದರ್ಶಿ ಸೂತ್ರಗಳು ಎಷ್ಟರಮಟ್ಟಿಗೆ ಅನುಷ್ಠಾನಗೊಂಡಿವೆ ಎಂಬ ಬಗ್ಗೆ ನ್ಯಾಯಾಲಯವು ಸಮೀಕ್ಷೆಗೆ ತೊಡಗಿತು. ಕೇಂದ್ರ ಸರ್ಕಾರ, ಎಲ್ಲ ರಾಜ್ಯ ಸರ್ಕಾರಗಳು, ಕೇಂದ್ರಾಡಳಿತವಿರುವ ರಾಜ್ಯಗಳು ಈ ಸೂತ್ರಗಳ ಪಾಲನೆಯಲ್ಲಿ ಕೈಗೊಂಡ ಕ್ರಮಗಳ ಬಗ್ಗೆ ಅಫಿದಾವಿತ್‌ನ್ನು ಸಲ್ಲಿಸುವಂತೆ ಅವುಗಳಿಗೆ ಸೂಚನೆ ನೀಡಿತು. ಇದರ ಪರಿಣಾಮವಾಗಿ ಕೇಂದ್ರ ಸರಕಾರ ಹಾಗೂ ರಾಜ್ಯ ಸರಕಾರಗಳು ಚುರುಕುಗೊಂಡವು. ಕೇಂದ್ರ ಸರಕಾರ ಈ ಬಗ್ಗೆ, ಸಮಗ್ರ ಕಾನೂನು ರಚಿಸುವ ಬಗ್ಗೆ ಅತ್ಯಂತ ಗಂಭೀರ ಪ್ರಯತ್ನಗಳನ್ನು ನಡೆಸಿದೆ ಎಂಬ ಹೇಳಿಕೆ ನೀಡಿತು. ಈ ಪ್ರಕರಣ 'ಮೇಧಾ ಕೊತ್ವಾಲ್' ಪ್ರಕರಣ ಎಂದೇ ಪ್ರಚಲಿತವಾಯಿತು.

ಈ ಹಂತದಲ್ಲಿ ರಾಷ್ಟ್ರೀಯ ಮಹಿಳಾ ಆಯೋಗ ಈ ಬಗ್ಗೆ ಕರಡು ಶಾಸನವನ್ನು ರಚಿಸಿ ಮಾನವ ಸಂಪನ್ಮೂಲ ಮಂತ್ರಾಲಯದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಸಲ್ಲಿಸಿತು. ಈ ಇಲಾಖೆ ಇದರಲ್ಲಿ ಕೆಲವೊಂದು ತಿದ್ದುಪಡಿಗಳನ್ನು ಮಾಡಿ ಸಾರ್ವಜನಿಕರ ಅಭಿಪ್ರಾಯವನ್ನು ಆಹ್ವಾನಿಸಿತು. ಈ ಸಂದರ್ಭದಲ್ಲಿ ಅನೇಕ ಸರ್ಕಾರೇತರ ಮಹಿಳಾ ಸಂಘಟನೆಗಳು ೨೦೦೪ರ ನವೆಂಬರ್‌ನಲ್ಲಿ ಮುಂಬಯಿಯಲ್ಲಿ ಸಮಾವೇಶಗೊಂಡು, ಚರ್ಚೆ ನಡೆಸಿ ಸರಕಾರ ಸಿದ್ಧಪಡಿಸಿದ ಕರಡು ಶಾಸನಕ್ಕೆ ಅನೇಕ ಬದಲಾವಣೆಗಳನ್ನು ಸೂಚಿಸಿದವು. ಇದೀಗ ಈ ಬದಲಾವಣೆಗಳನ್ನೊಳಗೊಂಡ ಕರಡು ಶಾಸನವನ್ನು ಸಿದ್ಧಪಡಿಸಿ ಮತ್ತೊಮ್ಮೆ ಮಹಿಳಾ ಸಂಘಟನೆಗಳು ಹಾಗೂ ಸರಕಾರೇತರ ಸಂಸ್ಥೆಗಳು ಮತ್ತು ಸಾರ್ವಜನಿಕರು ತಮ್ಮ ಸಲಹೆ, ಸೂಚನೆಗಳನ್ನು ಕೊಡಬೇಕೆಂದು ಕೋರಿದೆ.

ಸುಮಾರು ೪೦೦ ಮಹಿಳಾ ಸಂಘಟನೆಗಳು ಒಗ್ಗೂಡಿ ಕೆಲವೊಂದು ಬದಲಾವಣೆಗಳನ್ನು ಸೂಚಿಸಿವೆ. ಈ ಎಲ್ಲ ಬದಲಾವಣೆಗಳನ್ನೊಳಗೊಂಡ ಶಾಸನ ಜಾರಿಗೆ ಬಂದಲ್ಲಿ ಮತ್ತು ಪರಿಣಾಮಕಾರಿಯಾಗಿ ಜಾರಿಗೊಂಡಲ್ಲಿ ಲಿಂಗಾಧಾರಿತ ತಾರತಮ್ಯವಿಲ್ಲದ, ಲೈಂಗಿಕ ಕಿರುಕುಳದಿಂದ ಮುಕ್ತವಾದ ಕೆಲಸದ ಸ್ಥಳಗಳು


ಹೊಸ ವರ್ಷದ ಶುಭಾಶಯಗಳೊಂದಿಗೆ



ಭಾರತಿ ಪ್ರಕಾಶನ

ಸರಸ್ವತಿಪುರಂ, ಮೈಸೂರು – 570 009

ದೂರವಾಣಿ : 2543941

ಮೊಬೈಲ್ : 9448413188



*With Best Compliments from*

**SREE SIDDAGANGA EDUCATION SOCIETY (REGD.)**

SREE SIDDAGANGA MATH

TUMKUR - 572 104

Phone : 2282411, 2282211, Fax : 2282511

*SREE SIDDAGANGA EDUCATION SOCIETY (REGD.,) SREE SIDDAGANGA MATH WAS ESTABLISHED ON 17TH JULY 1963 WITH AN OBJECT PROMOTE EDUCATION AND CULTURE BY ESTABLISHING COLLEGES, SCHOOLS, INSTITUTIONS, TRAINING CENTRES, HOSTELS ETC.,*

Sree Siddaganga Education Society is running about 122 institutions as on date right from Nursery to Engineering course spreading over the State of Karnataka and also FREE BOARDING AND LODGING HOME for 8000 students at Sree Siddaganga Math.

It is being run under the blessing and able guidance of Dr. Sree Sree Sivakumara Swamigalu the Hon'ble President of Sree Siddaganga Education Society, Sree Siddaganga Math.

Place : Sree Siddaganga Math
Date : 15.12.2008

Sd/-
T. K. Nanjundappa
Secretary

## ಲೈಂಗಿಕ ಕಿರುಕುಳ – ಬಳಸಬಹುದಾದ ಕಾನೂನುಗಳು

**ಭಾರತ ದಂಡ ಸಂಹಿತೆ**

* ೨೯೪ನೆಯ ಪ್ರಕರಣ: ಸಾರ್ವಜನಿಕ ಸ್ಥಳದಲ್ಲಿ ಅಶ್ಲೀಲ ಕೃತ್ಯವನ್ನೆಸಗುವುದು ಅಥವಾ ಅಶ್ಲೀಲ ಹಾಡುಗಳನ್ನು ಅಥವಾ ಪದಗಳನ್ನು ಹಾಡುವುದು ಶಿಕ್ಷಾರ್ಹ ಅಪರಾಧ.

* ೩೫೪ನೆಯ ಪ್ರಕರಣ: ಮಹಿಳೆಯ ಮಾನಭಂಗ ಮಾಡುವ ಉದ್ದೇಶದಿಂದ ಮಹಿಳೆಯ ಮೇಲೆ ಹಲ್ಲೆ ಮಾಡುವುದು ಅಥವಾ ಬಲಪ್ರಯೋಗ ಮಾಡುವುದು ಶಿಕ್ಷಾರ್ಹ ಅಪರಾಧ.

* ೫೦೯ನೆಯ ಪ್ರಕರಣ: ಮಹಿಳೆಯ ಮಾನಕ್ಕೆ/ಘನತೆಗೆ ಕುಂದುಂಟುಮಾಡುವ ಉದ್ದೇಶದಿಂದ ಯಾವುದೇ ಪದವನ್ನು ಉಚ್ಚರಿಸುವುದು, ಸಂಜ್ಞೆ ಮಾಡುವುದು ಅಥವಾ ವಸ್ತುವನ್ನು ತೋರಿಸುವುದು ಶಿಕ್ಷಾರ್ಹ ಅಪರಾಧ.

**ಕೈಗಾರಿಕಾ ವಿವಾದಗಳ ಅಧಿನಿಯಮ**

ಅಧಿಕಾರಿ ಅಥವಾ ಸಹೋದ್ಯೋಗಿಯು ಮುಂದಿಡಬಹುದಾದ, ಲೈಂಗಿಕವಾಗಿ ತೃಪ್ತಿಗೊಳಿಸಬೇಕೆಂಬ ಬೇಡಿಕೆಯನ್ನು ಮಹಿಳಾ ಉದ್ಯೋಗಿ ನಿರಾಕರಿಸಿದಳು ಎಂಬ ಕಾರಣದಿಂದ ಅವಳನ್ನು ಕೆಲಸದಿಂದ ವಜಾ ಮಾಡುವುದು ಅಥವಾ ಉದ್ಯೋಗದ ಸೌಲಭ್ಯಗಳನ್ನು ನೀಡದಿರುವುದು ಶಿಕ್ಷಾರ್ಹ ಅಪರಾಧ.

ಲೈಂಗಿಕ ಕಿರುಕುಳದಿಂದಾಗಿ ಉಂಟಾದ ಮಾನಸಿಕ ಆಘಾತ, ದೈಹಿಕ ಕಿರುಕುಳ, ಆದಾಯ ಅಥವಾ ಕೆಲಸದಲ್ಲಾದ ನಷ್ಟಗಳಿಗಾಗಿ ನಷ್ಟ ಪರಿಹಾರ ಕೋರಿ ಸಿವಿಲ್ ದಾವೆಯನ್ನೂ ಹೂಡಬಹುದು.

ಮಹಿಳೆಯರಿಗೆ ಮರೀಚಿಕೆಯಾಗಿ ಉಳಿಯಲಾರವು.

**ಸರಕಾರ ಸಿದ್ಧಪಡಿಸಿದ ಕರಡು ಶಾಸನದ ಮುಖ್ಯಾಂಶಗಳು**

ಉದ್ಯೋಗ ಸ್ಥಳವನ್ನು ಲೈಂಗಿಕ ಕಿರುಕುಳದಿಂದ ಮುಕ್ತವಾಗಿ ಮಹಿಳೆಯರಿಗೆ ಸುರಕ್ಷಿತವಾಗಿರುವಂತೆ ನೋಡಿಕೊಳ್ಳುವುದು ನಿಯೋಜಕರ ಜವಾಬ್ದಾರಿ.

ಪ್ರತಿಯೊಂದು ಸರಕಾರಿ ಕಚೇರಿ, ಖಾಸಗಿ ಕಚೇರಿಗಳಲ್ಲಿ, ಆಡಳಿತ ಘಟಕಗಳಲ್ಲಿ ಆಂತರಿಕ ದೂರು ಸಮಿತಿಗಳನ್ನು ರಚಿಸಬೇಕು.

ಈ ದೂರು ಸಮಿತಿಯಲ್ಲಿ ಉನ್ನತ ಹುದ್ದೆಯಲ್ಲಿ ಇರುವ ಮಹಿಳಾ ಅಧಿಕಾರಿ ಅಧ್ಯಕ್ಷರಾಗಿರುತ್ತಾರೆ. ಉನ್ನತ ಹುದ್ದೆಯ ಮಹಿಳಾ ಅಧಿಕಾರಿ ಇಲ್ಲದಿದ್ದರೆ ಆ ಕಚೇರಿಗೆ ಸಂಬಂಧಪಡುವ ಇತರ ಕಚೇರಿಯ ಅಥವಾ ಸರಕಾರೇತರ ಸಂಸ್ಥೆಯಿಂದ ಒಬ್ಬ ಮಹಿಳೆಯನ್ನು ಅಧ್ಯಕ್ಷರನ್ನಾಗಿ ಆಯ್ಕೆ ಮಾಡಬಹುದು. ಸಮಿತಿಯಲ್ಲಿ ಅರ್ಧದಷ್ಟಾದರೂ ಮಹಿಳೆಯರು ಸದಸ್ಯರಾಗಿರಬೇಕು.

ಈ ಶಾಸನದ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ಪ್ರತಿಯೊಂದು ಜಿಲ್ಲೆಗೆ ಜಿಲ್ಲಾ ಅಧಿಕಾರಿಯನ್ನು ನೇಮಿಸಬೇಕು.

ದೂರು ಸಮಿತಿಯ ರಚನೆ ಸಾಧ್ಯವಾಗದಿರುವಂಥ ಅಸಂಘಟಿತ ವಲಯದಲ್ಲಿ ಮತ್ತು ಕಚೇರಿಯ ಮುಖ್ಯಸ್ಥನ ವಿರುದ್ಧ ದೂರು ದಾಖಲು ಮಾಡಬೇಕಾದ ಸಂದರ್ಭಗಳಲ್ಲಿ ಜಿಲ್ಲಾ ಅಧಿಕಾರಿ ಸ್ಥಳೀಯ ದೂರು ಸಮಿತಿಯನ್ನು ರಚಿಸಬೇಕು.

ದೂರು ನೀಡಿದ ಮಹಿಳೆ ವಿಚಾರಣೆಗೆ ಮುನ್ನ ಸಂಧಾನದ ಮೂಲಕ ಸಮಸ್ಯೆಯನ್ನು ಪರಿಹರಿಸಬೇಕೆಂದು ಕೋರಿದರೆ ಹಾಗೆ ಪರಿಹರಿಸಲು ಸಮಿತಿ ಕ್ರಮ ಕೈಗೊಳ್ಳಬೇಕು. ಅದು ವಿಫಲವಾದರೆ ವಿಚಾರಣೆಯನ್ನು ಪ್ರಾರಂಭಿಸಬಹುದು.

೯೦ ದಿನಗಳೊಳಗೆ ವಿಚಾರಣೆಯನ್ನು ಪೂರ್ಣಗೊಳಿಸಬೇಕು.

ವಿಚಾರಣೆ ನಡೆಯುತ್ತಿರುವಾಗ ದೂರು ನೀಡಿದ ಮಹಿಳೆ ತನ್ನನ್ನು ಅಥವಾ ಆರೋಪಿಯನ್ನು ವರ್ಗಾಯಿಸುವಂತೆ, ತನಗೆ ರಜೆ ಮಂಜೂರು ಮಾಡುವಂತೆ ಅಥವಾ ಇನ್ನಾವುದೇ ರೀತಿಯ ಪರಿಹಾರ ನೀಡುವಂತೆ ಕೋರಬಹುದು.

ವಿಚಾರಣೆಯ ನಂತರ ಆರೋಪ ಸಾಬೀತಾದರೆ ಅವನ ಮೇಲೆ ಕ್ರಮ ಕೈಗೊಳ್ಳಬಹುದು ಅಥವಾ ಪರಿಹಾರ ಧನವನ್ನು ಅವನ ಸಂಬಳದಿಂದ ಕಳೆದುಕೊಳ್ಳಬಹುದು.

ಸುಳ್ಳು ದೂರು ಕೊಟ್ಟ ಮಹಿಳೆಯ ಮೇಲೆ ಮತ್ತು ಸುಳ್ಳು ಸಾಕ್ಷ್ಯ ನೀಡಿದ ವ್ಯಕ್ತಿಯ ಬಗ್ಗೆ ಕ್ರಮ ಕೈಗೊಳ್ಳಬಹುದು.

ಲೈಂಗಿಕ ಕಿರುಕುಳದಿಂದಾಗಿ ಮಹಿಳೆಗೆ ಉಂಟಾದ ಮಾನಸಿಕ ಯಾತನೆ, ಖಿನ್ನತೆ, ಉದ್ಯೋಗದಲ್ಲಿ ಕಳೆದುಕೊಂಡ ಅವಕಾಶಗಳು, ವೈದ್ಯಕೀಯ ವೆಚ್ಚಗಳು, ಇವುಗಳನ್ನು ಪರಿಗಣಿಸಿ ಪರಿಹಾರ ಧನದ ಮೊತ್ತವನ್ನು ನಿಗದಿಪಡಿಸಬೇಕು.

* ದೂರು ನೀಡಿದ ಮಹಿಳೆ, ಆರೋಪಿ ಮತ್ತು ಸಾಕ್ಷಿಗಳ ಹೆಸರು ಮತ್ತು ವಿಳಾಸಗಳನ್ನು, ಸಂಧಾನ ಅಥವಾ ವಿಚಾರಣೆ ವಿವರಗಳನ್ನು, ಸಮಿತಿಯ ಶಿಫಾರಸುಗಳನ್ನು ಹಾಗೂ ಈ ಕಾನೂನಿನ ಅಡಿಯಲ್ಲಿ ನಿಯೋಜಕನು ಕೈಗೊಂಡ ಕ್ರಮಗಳನ್ನು ಬಹಿರಂಗಪಡಿಸುವಂತಿಲ್ಲ. ಮಾಹಿತಿ ಹಕ್ಕು ಅಧಿನಿಯಮದ ಅಡಿಯಲ್ಲಿಯೂ ಇವುಗಳ ವಿವರಗಳನ್ನು ನೀಡುವಂತಿಲ್ಲ
* ಉದ್ಯೋಗಿಗಳಿಗೆ ಈ ಬಗ್ಗೆ ತಿಳಿವಳಿಕೆ ನೀಡುವ ಶಿಬಿರಗಳನ್ನು ಹಾಗೂ ಕಾರ್ಯಾಗಾರವನ್ನು ಏರ್ಪಡಿಸುವುದು ನಿಯೋಜಕನ ಕರ್ತವ್ಯವಾಗಿರುತ್ತದೆ.
* ಒಂದು ಉದ್ಯೋಗಸ್ಥಳದಲ್ಲಿನ ಮಹಿಳಾ ಉದ್ಯೋಗಿಗಳ ಹಿತದೃಷ್ಟಿಯಿಂದ ಅಥವಾ ಸಾರ್ವಜನಿಕ ಹಿತಾಸಕ್ತಿಯಿಂದ ಯಾವುದೇ ಕಚೇರಿಯ ಅಥವಾ ಯಾವುದೇ ಉದ್ಯೋಗದ ಮಹಿಳಾ ಉದ್ಯೋಗಿಯ ಲೈಂಗಿಕ ಕಿರುಕುಳಕ್ಕೆ ಸಂಬಂಧಿಸಿದ ದಾಖಲೆಗಳನ್ನು ತರಿಸಿಕೊಳ್ಳಲು ಅಥವಾ ಉದ್ಯೋಗಸ್ಥಳವನ್ನು ತಪಾಸಣೆ ಮಾಡಲು ಸರಕಾರ ಅಧಿಕಾರ ಹೊಂದಿರುತ್ತದೆ.

ನಿಯೋಜಕ ಅಥವಾ ಜಿಲ್ಲಾ ಅಧಿಕಾರಿ, ದೂರು ಸಮಿತಿಯನ್ನು ರಚಿಸಲು ತಪ್ಪಿದರೆ, ದೂರು ಸಮಿತಿಯ ಶಿಫಾರಸುಗಳಂತೆ ಕ್ರಮ ಕೈಗೊಳ್ಳಲು ತಪ್ಪಿದರೆ, ಸುಳ್ಳು ದೂರು ಅಥವಾ ಸುಳ್ಳು ಸಾಕ್ಷ್ಯವನ್ನು ಕೊಟ್ಟಿರುವುದು ಸಾಬೀತಾಗಿ, ಅದಕ್ಕಾಗಿ ಹಾಗೆ ಸುಳ್ಳು ದೂರು ಅಥವಾ ಸುಳ್ಳು ಸಾಕ್ಷ್ಯ ಕೊಟ್ಟಿರುವವರ ಬಗ್ಗೆ ಸಮಿತಿಯ ಶಿಫಾರಸಿನ ಮೇರೆಗೆ ಕ್ರಮ ಕೈಗೊಳ್ಳಲು ತಪ್ಪಿದರೆ ಅಥವಾ ದೂರುಗಳ ಬಗ್ಗೆ ಮತ್ತು ಕೈಗೊಂಡ ನಿರ್ಧಾರಗಳ ಬಗ್ಗೆ ವಾರ್ಷಿಕ ವರದಿಯಲ್ಲಿ ಉಲ್ಲೇಖಿಸದಿದ್ದರೆ ನಿಯೋಜಕ ಅಥವಾ ಜಿಲ್ಲಾ ಅಧಿಕಾರಿಯ ವಿರುದ್ಧ ೧೦ ಸಾವಿರ ರೂ.ಗಳವರೆಗೆ ವಿಸ್ತರಿಸಬಹುದಾದ ದಂಡವನ್ನು ವಿಧಿಸಬಹುದು.

ಇಂಥದೊಂದು ಶಾಸನ ಜಾರಿಯಾದ ನಂತರ ಅದರ ಆಶಯ ಈಡೇರುವ ರೀತಿಯಲ್ಲಿ ಇದನ್ನು ಅನುಷ್ಠಾನಗೊಳಿಸುವುದು ಮುಖ್ಯವಾಗುತ್ತದೆ. ಲೈಂಗಿಕ ಕಿರುಕುಳಕ್ಕೆ ಒಳಗಾಗುವ ಮಹಿಳೆಯರಿಗೆ ತಮ್ಮ ಹಕ್ಕುಗಳನ್ನು ಚಲಾಯಿಸಬೇಕಾದರೆ ಮತ್ತು ಸುರಕ್ಷಿತ ಉದ್ಯೋಗ ವಾತಾವರಣವನ್ನು ಕಲ್ಪಿಸುವುದು ಕಡ್ಡಾಯವಾಗಿರುವ ನಿಯೋಜಕರಿಗೆ ಈ ಮಾರ್ಗದರ್ಶಿ ಸೂತ್ರಗಳ ಅರಿವು ಇರಬೇಕಾದುದು ಅತ್ಯಗತ್ಯ.

**ಡಾ|| ಗೀತಾ ಕೃಷ್ಣಮೂರ್ತಿ**

೧೫೬, 'ಅಭಿಲಾಷಾ', ೪ನೇ ಮುಖ್ಯರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

ವಿಲಿಯಮ್ ಸಫೈರನ ವ್ಯಾಕರಣ ವಿಷಯಗಳನ್ನು ಓದುತ್ತಿದ್ದಾಗ ನನಗೆ ಹೊಸಗನ್ನಡದ ವ್ಯಾಕರಣವನ್ನು ುರ್-ಸೂಕ್ತ ನಿದರ್ಶನಗಳ ಮೂಲಕ ವಿವರಿಸುವ ಮನಸ್ಸಾಯಿತು. ವ್ಯಾಕರಣ ಪರಿಭಾಷೆಯಲ್ಲೇ ಹಲವರು ೇಳುತ್ತಾರೆ. ಬೀchi ಯವರ ದೃಷ್ಟಿಯಲ್ಲಿ ಬಾಳು ಎಂಬುದು ಪ್ರಾರಂಭದಲ್ಲಿ ಕಾವ್ಯ, ಮಧ್ಯದಲ್ಲಿ ಗದ್ಯ, ಕಟ್ಟಕಡೆಗೆ ್ಯಾಕರಣವಂತೆ. ಪ್ರತಿಯೊಬ್ಬ ಸಾಧುವಿಗೂ ಒಂದು ಭೂತವಿದ್ದರೆ ಪ್ರತಿಯೊಬ್ಬ ಪಾಪಿಗೂ ಒಂದು ಭವಿಷ್ಯವಿದೆ ಂಬ ಚಿಂತನವೂ ವ್ಯಾಕರಣ ಪರಿಭಾಷೆಯದೇ.

An imperfect past will

make your future **tense** ಎಂಬ ಮಾತಿನ ವ್ಯಾಕರಣಜಾಣತನ ತಿಳಿಯಬೇಕಾದರೆ Tence, Tense ಗಳ ಡುವಣ ವ್ಯತ್ಯಾಸ ತಿಳಿದಿರಬೇಕಲ್ಲವೆ. ತುಕ್ಕೋಜಿಯ ದಾಂಪತ್ಯ ಜೀವನದ ಛಂದಸ್ಸು ಕೆಟ್ಟಿತ್ತು ಎಂದು ತೇಜಸ್ವಿ ಛಂದಸ್ಸಿನ ಪರಿಭಾಷೆ ಬಳಸಿ ಹೇಳುತ್ತಾರೆ. ನನಗೂ ಜನರಿಂದ ದೂರವಾಗಿರುವ ವ್ಯಾಕರಣದ ಮೇಲೆ ಅಪಾರ ೋಹ. ಆದ್ದರಿಂದ ಇಲ್ಲಿ ವ್ಯಾಕರಣವನ್ನು ಜನಪ್ರಿಯಗೊಳಿಸುವ ಏಕಮಾತ್ರ ಉದ್ದೇಶದಿಂದ ನಾನು ಮಾಡಿರುವ ್ರಯೋಗಗಳು ಜನತೆಗೆ 'ಅರ್ಪಿಸಲ್ಪಡುತ್ತಿವೆ' ಎಂದು ಕನ್ನಡಕ್ಕೆ ಹೊಂದದ ಕರ್ಮಣೀ ಪ್ರಯೋಗ ನನ್ನಿಂದ ಾಡಲ್ಪಟ್ಟಿದೆ. ಬೇಜಾರಾದಾಗ ಶಬ್ದಗಳೂ ಆಽಽಽಕಳಿಸುತ್ತವಲ್ಲವೆ ?

**ಸ್ವರ** : ಹೊರಗೆ ಆರ್ಭಟಿಸುವ ಗಂಡನಿಗೆ ಮನೆಯಲ್ಲಿ ಮಾತ್ರ 'ಸ್ವರ'ವೇ ಇರುವುದಿಲ್ಲ.

**ವ್ಯಂಜನ** : ಏರುತ್ತಿರುವ ತರಕಾರಿಯ ಬೆಲೆಗಳನ್ನು ನೋಡಿದರೆ ಸಂಸಾರದ ವ್ಯಾಕರಣದಲ್ಲಿ ವ್ಯಂಜನಗಳನ್ನು ಲ್ಲಿಂದ ತರೋಣ ಎಂದು ಮುಜುಗರವಾಗುತ್ತದೆ.

**ಶ್ಲೇಷೆ** : ೧. ''ಮನುಷ್ಯ ಬರಿಯ ರೊಟ್ಟಿಗಾಗಿ ಬದುಕುವುದಿಲ್ಲ'' – ಹೌದು ಅದರ ಜೊತೆಗೆ ಬೆಣ್ಣೆಯೂ ಇರಬೇಕು

ಅ. ರಾ. ಮಿತ್ರ

# ಹೊಸ ವ್ಯಾಕರಣ ಪಾಠ




೨. ಅಧ್ಯಾಪಕರು ಒಳ್ಳೆಯ ಜನ. (ಒಳ್ಳೆ = ನೀರು ಹಾವು, ಸಾಧು...)

**ಪ್ರಾಸ, ಯಮಕ ಇತ್ಯಾದಿ** : ೧. ತಾಲೂಕಾ ಮಳೆ ಮಳೆ

೨. ಗ್ರಹಗಳ ಮಂದೆಯಲ್ಲಿ ಮಂದಗ್ರಹವು ಮಂದಹಾಸದಿಂದ ಮಂದಾರದಲ್ಲಿ (ಮೇಘಾವರಣ ದಲ್ಲಿ) ಚಲಿಸುತ್ತದೆ.

**ಗುಣವಚನ** : ಕೆಂಪು ಸಮುದ್ರದ ಬಳಿ ಕರಿಯ ಕಾರಂಜಿಯಿದೆಯಂತೆ !

**ಅನುವಾದ** : ೧. ಅವಳು ವಾದ ಮಾಡಿದಾಗೆಲ್ಲ ಅವನು ಅನುವಾದಿಸಲು ಅನುವಾಗುತ್ತಿದ್ದ.

೨. ಶಿಲುಬೆಯಿಂದ ಕ್ರೈಸ್ತ ಹೇಳಿದ ಮಾತು:

Flesh is weak. But the Spirit is fine.

ಈ ಮಾತಿಗೆ ಒಬ್ಬನ ಅನುವಾದ 'ಮಾಂಸ ಹಳಸಿದೆ ಆದರೆ ಮದ್ಯ ಮಜವಾಗಿದೆ'.

**ಬಹುವಚನ** : ಸಭೆ ಸಮಾರಂಭಗಳಲ್ಲಿ ಮಂತ್ರಿಗಳು ಜನರಿಗೆ ಬಹುವಚನ ಕೊಟ್ಟು ಮುಂದೆ ತೊಂದರೆಗೆ ಸಿಕ್ಕಿಕೊಳ್ಳುತ್ತಾರೆ.

**ಉಚ್ಚಾರಣೆ, ಕಾಗುಣಿತ** : ಉಚ್ಚ ನ್ಯಾಯಾಲಯ ಎಂಬುದು ಸರಿಯಾದ ಉಚ್ಚಾರ. 'ಉಚ್ಛ ನ್ಯಾಯಾಲಯ' ಎಂಬುದು ಹೈಕೋರ್ಟಿನ ಫಲಕದ ಉಚ್ಚಾರ.

**ಉತ್ಪ್ರೇಕ್ಷೆ** : (ತಂದೆ, ಮಗನಿಗೆ) ಉತ್ಪ್ರೇಕ್ಷೆ ಮಾಡಿ ಹೇಳಬೇಡ ಅಂತ ನಿನಗೆ ಸಾವಿರಸಲ ಎಚ್ಚರಿಕೆ ಕೊಟ್ಟರೂ ನೀನು, ಅರ್ಥಮಾಡಿಕೊಂಡಿಲ್ಲ.

**ನಿಷೇಧ** : ಎರಡೆರಡು ನಿಷೇಧಗಳನ್ನು ಅನಾದರಿಸ ಬಾರದು.

**ಕ್ರಿಯಾಪದ** : ಕ್ರಿಯಾಪದಗಳು ಕರ್ತೃಪದ ಗಳೊಂದಿಗೆ ಹೊಂದಿಕೊಳ್ಳುತ್ತವೆ.

**ಕರಡು (ಪ್ರೂಫ್)** : ಕರಡು ತಿದ್ದುವಾಗ ಯಾವು ದಾದರೂ ಅಕ್ಷರ ಬಿಟ್ಟುಹೋಗಿದೆಯೇ ಎಂದು ನೋಡಿ ಕೊಳ್ಳಬೇಕು.

**ಅಪಶಬ್ದ** : (ಒಬ್ಬ ಮಾತುಗಾರ) ೧. ನನಗೆ ಜಲಬಾಧೆ. ಯಾರಾದರೂ ನೀರು ತಂದುಕೊಡಿ.

೨. ಬರೆಯುವಾಗ ಅಪಶಬ್ದ ಉಸುಳೀತು ಜೋಕೆ.

**ಪುನರುಕ್ತಿ** : ಪುನರುಕ್ತಿಗಳನ್ನು ಮತ್ತೆ ಮತ್ತೆ ಬಳಸಿ ಬಳಸಿ ಕಂಗೆಡಬೇಡಿ.

**ಉದ್ಧರಣ ಚಿಹ್ನೆ** : ''ಹೆಚ್ಚು ಸಂಖ್ಯೆಯಲ್ಲಿ 'ಉದ್ಧರಣ ಚಿಹ್ನೆ'ಗಳನ್ನು ತರಬಾರದು.''

**ಕ್ರಿಯಾವಿಶೇಷಣ** : ಸೊಂಪಾಗಿ ನಿದ್ರಿಸುವುದು ಕ್ರಿಯಾವಿಶೇಷಣಕ್ಕೆ ನಿದರ್ಶನ.

**ಸರ್ವನಾಮ** : ನಾಮಪದಕ್ಕೆ ಬದಲಾಗಿ ಬಳಸುವ ಶಬ್ದವನ್ನು ಸರ್ವನಾಮ ಎನ್ನುತ್ತಾರೆ. ಸರ್ವನಾಮವು ಶಬ್ದಶಾಖೆಗಳಲ್ಲಿ ಒಂದಾಗಿದೆ. ಸರ್ವನಾಮವು ಎಲ್ಲ ಭಾಷೆಗಳಲ್ಲೂ ಬಳಕೆಯಲ್ಲಿದೆ.

**ಕಂಸ** : ಬ್ರಾಕೆಟ್‌ನಲ್ಲಿ ಬಳಸುವ ಚಿಹ್ನೆಯನ್ನು 'ಕಂಸ' ಎನ್ನುತ್ತಾರೆ.

ಉದಾಹರಣೆಗೆ, ಹೆಂಡತಿ: ''ನನ್ನ ಮನೆಯವರು

(ಅಂದರೆ ಗಂಡ) ಸಂಜೆ ಬಂದರು. ಇಲ್ಲಿ 'ಗಂಡ' ಕಂಸ ಎಂದು ಭಾವಿಸಬೇಕು.

**ಅವ್ಯಯ** : ೧. 'ದಭದಭ ಬಾಗಿಲು ಬಡಿದರು'. ಇಲ್ಲಿ ದಭದಭ ಎಂಬುದು ಅವ್ಯಯ. ಆದರೆ ಬಾಗಿಲು ಮುರಿದರೆ ಅದು 'ವ್ಯಯ'.

೨. ಮನೆಯ ಖರ್ಚುವೆಚ್ಚಗಳ 'ವ್ಯಯ' ಹೆಚ್ಚು ತ್ತಿದ್ದರೂ ಕೆಲವರು 'ಅವ್ಯಯ'ದಂತೆ ಸುಮ್ಮನಿರುತ್ತಾರೆ.

**ಆಶ್ಚರ್ಯ ಚಿಹ್ನೆ** : ಅನಗತ್ಯ ಸಂಖ್ಯೆಯಲ್ಲಿ ಆಶ್ಚರ್ಯ ಚಿಹ್ನೆಗಳನ್ನು ಬಳಸೀರಿ, ಜೋಕೆ !!!

**ಅಡ್ಡಗೀಟು (ಹೈಫನ್)** : ಗಂಡ - ಹೆಂಡಿರು ಎನ್ನುವಾಗ ಅಡ್ಡಗೀಟು ಏಕೆ ?

**ಪ್ರಶ್ನಾರ್ಥಕ ಚಿಹ್ನೆ** : ನಿನ್ನ ಉತ್ತರಗಳೆಲ್ಲ ಪ್ರಶ್ನರೂಪದಲ್ಲೇ ಇರುತ್ತವಲ್ಲ, ಯಾಕೆ ?

ಯಾಕಿರಬಾರದು ?

**ಲೋಪ, ಆಗಮ, ಆದೇಶ ಸಂಧಿಗಳು**

ಪ್ರೇಮ ವ್ಯಾಕರಣದಲ್ಲಿ ಬುದ್ಧಿ ಲೋಪಸಂಧಿ

ಹುಚ್ಚು ಆಗಮ ಸಂಧಿ

ಆದರೆ 'ಮದುವೆಯಾಗಿ ಸುಖವಾಗಿರಿ' ಎಂದು ತಂದೆ ತಾಯಿಗಳಿಂದ ಬರುವುದೇ ಇಲ್ಲ 'ಆದೇಶ' ಸಂಧಿ.

**ಪುಲ್ಲಿಂಗ** : 'ಪುರುಷರೆ ಪುಲ್ ಲಿಂಗಂ' ಎನ್ನುತ್ತಾನೆ ಕೇಶಿರಾಜ. ಅಂದರೆ ಅವರು ಹುಲ್ಲಿಗೆ ಸಮ ಎಂದರ್ಥ. (ಪುಲ್ = ಹುಲ್ಲು)

**ಕರ್ಮಪದ** : 'ನನ್ನ ಪಾಲಿಗೆ ಬಂದುದನ್ನು ರಿಜಿಸ್ಟರ್ ಮಾಡಿಸಿಕೊಡಿ' ಎಂದು ತಂದೆಯನ್ನು ಒತ್ತಾಯಿಸುವುದು ತಂದೆಯ ಕರ್ಮಫಲ !

**ವಾಕ್ಯಗಳು**

೧. **ಸರಳ ವಾಕ್ಯ** : ''ಅವನಿಗೆ ಮದುವೆಯಾಗಿದೆ.''

**ಸಂಕೀರ್ಣವಾಕ್ಯ** : ''ಅವನಿಗೆ ಮದುವೆಯಾಗಿದ್ದರೂ ಸುಖವಾಗಿದ್ದಾನೆ.''

**ಸಂಯುಕ್ತವಾಕ್ಯ** : ಅವನಿಗೆ ಮದುವೆಯಾಗಿದ್ದೂ ಆನಂದವಾಗಿ ಬದುಕುತ್ತಿದ್ದಾನೆಂಬ ಸಂಗತಿ ಸುತ್ತಮುತ್ತಣ ವಿವಾಹಿತರಿಗೆಲ್ಲ ನುಂಗಲಾರದ ತುತ್ತಾಗಿದೆಯೆಂದು ಗೆಳೆಯನೊಬ್ಬನು ಬರೆದ ಪತ್ರವು ಅಂಚೆ ಇಲಾಖೆ ಕೃಪೆಯಿಂದ ಹದಿನೈದೇ ದಿನದಲ್ಲಿ ನನ್ನ ಕೈ ಸೇರಿದೆ.

**ನಾಮಪದ** : ರೂಢ, ಅಂಕಿತನಾಮ: ಉದಾ: ಹಾವು, ಚೇಳು, ಮಂತ್ರಿ. ಅನ್ವರ್ಥನಾಮ: ಉದಾ: ಧನದಾಸ, ಇಬ್ಬಾಯಪ್ಪ, ತೀರ್ಥಪ್ಪ , ಮೂಲೇಶ್ವರ, ಪರದೇಶಪ್ಪ ಇತ್ಯಾದಿ.

**ಸಂಖ್ಯಾ ವಾಚಕ** : ಆಳುವ ಪಕ್ಷದ್ದು ಸಂಖ್ಯಾವಾಚಕವಾಗಿರುವುದರಿಂದ ಅವಿಶ್ವಾಸ ನಿರ್ಣಯ ಸೋಲುವುದು ಖಚಿತ.

**ಕೃದಂತ** : ಕೃತಕವಾದ ಹಲ್ಲು ಕಟ್ಟಿಸಿಕೊಂಡಿರುವ ಕೃದಂತಿಗಳ ಕಾಟ ಸಹಿಸಲು ಸಾಧ್ಯವಿಲ್ಲ.

**ಅರಿಸಮಾಸ** : ಸಂಸ್ಕೃತ ಶಬ್ದಗಳಿಗೆ ಕನ್ನಡ ಶಬ್ದಗಳನ್ನು ಸೇರಿಸಿ ಸಮಾಸಿಸಿದರೆ ಅದು ಅರಿಸಮಾಸ.

ಉದಾಹರಣೆಗೆ, '**ರಾಷ್ಟ್ರ-ಮಟ್ಟದಲ್ಲಿ ವೀಣಾ** ನುಡಿತದ ಬೆರಗು ಬೀರಿದವರು ವೀಣೆ ಶೇಷಣ್ಣ' ಎಂದರೆ ಈ ವಾಕ್ಯವನ್ನು ವ್ಯಾಕರಣಕಾರರು ಒಪ್ಪುವುದಿಲ್ಲ, ಏಕೆಂದರೆ ಅದು ಅವರಿಗೆ 'ಅರಿ ಸಮಾಸ !!'

**ಪ್ಲುತ** : ಅಮ್ಮಾSSS ತಾಯಿSS, ಭಕ್ಷ್ಯSS ಹಾಕಿSS

**ವಿಭಕ್ತಿಗಳು**

೧. ಅವನ **ಹೊಟ್ಟೆಯು** ಕೆಟ್ಟಿತು.

೨. ಔಷಧಿಯನ್ನು ಕೊಂಡು ತಂದನು.

೩, ೪. ಅದರಿಂದ **ಹೊಟ್ಟೆಗೆ** ಮತ್ತಷ್ಟು ಕೆಡುಕಾಯಿತು.

೫. ಒದ್ದಾಡುತ್ತ ಆಸ್ಪತ್ರೆಯೊಳಗೆ ಸೇರಿದನು.

೬. ಅದರ **ದೆಸೆಯಿಂದ** ದುಡ್ಡು ನೀರಿನಂತೆ ಖರ್ಚಾಯಿತು.

೭. ಅಯ್ಯೋ ! ಹೊಟ್ಟೆಯೇ !

**ದ್ವಿರುಕ್ತಿ** : ದುರುಕ್ತಿಗಳನ್ನು ದ್ವಿರುಕ್ತ ಮಾಡಿ ಹೇಳುವುದು ಸಭ್ಯರ ಲಕ್ಷಣವಲ್ಲ, ಖಂಡಿತ ಲಕ್ಷಣವಲ್ಲ.

**ಸಮಾಸ** : ಉದಾಹರಣೆಗೆ, ಕೆರೆಕಟ್ಟೆಭಾವಿಗೆ ಹಾರಿ ಸಾಯುವ ಸಾಹಸ ಮಾಡಬೇಡಿ ಏಕೆಂದರೆ ಅವುಗಳಲ್ಲಿ ನೀರಿರುವುದಿಲ್ಲ.

**ಸಕರ್ಮಕ ಧಾತು** : ಸರಕಾರಿ ಕಛೇರಿಗಳಲ್ಲಿ ಸಕರ್ಮಕ ಧಾತುಗಳನ್ನು ಒದಗಿಸಿದರೆ ಕೆಲಸ ಸಲೀಸು.

ಅ. ರಾ. ಮಿತ್ರ
ಸಂಖ್ಯೆ ಬಿ-೬, ಕೆ.ಹೆಚ್.ಬಿ. ಕಾಲೋನಿ, ಪುಟ್ಟೇನಹಳ್ಳಿ, ಯಲಹಂಕ
ಬೆಂಗಳೂರು - ೫೬೦ ೦೬೪.

*With Best Compliments From*



**K. BATAVIA**

412, Embassy Centre, 11, Crescent Road
Bangalore - 560 001 Ph : 30500782
e-mail : kbatavia@gmail.com

# ರಾಜರತ್ನಂ ಪದಗಳು

## – ಒಂದು ಮರುಚಿಂತನೆ

ವಿ. ಚಂದ್ರಶೇಖರ ನಂಗಲಿ



ಹದಿನೆಂಟು ವರ್ಷಗಳ ಅಂತರದಲ್ಲಿ ಪ್ರಕಟವಾಗಿರುವ ರತ್ನನ ಪದಗಳು (೧೯೩೪) ಮತ್ತು ನಾಗನ ಪದಗಳು (೧೯೫೬) ಇವೆರಡನ್ನೂ ಸಮಗ್ರ ದೃಷ್ಟಿಯಿಂದ ನೋಡುವ ಸಲುವಾಗಿ ಇಲ್ಲಿ 'ರಾಜರತ್ನಂ ಪದಗಳು' – ಎಂಬ ಶೀರ್ಷಿಕೆಯನ್ನು ಬಳಸಲಾಗಿದೆ. ಈ ಪದಗಳ ಬಗ್ಗೆ ಲಭ್ಯವಿರುವ ಕನ್ನಡ ವಿಮರ್ಶೆಯನ್ನು ಗಮನಿಸಿದಾಗ ನನಗೆ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ಅವರ ಪ್ರತಿಕ್ರಿಯೆಯೊಂದು ಹೆಚ್ಚು ಇಷ್ಟವಾಯಿತು... ''ಕನ್ನಡದಷ್ಟೇ ಬಾಳಬಲ್ಲ ಯೆಂಡಕುಡ್ಕ ರತ್ನನನ್ನು ಕನ್ನಡದಲ್ಲಿ ಸೃಷ್ಟಿಸಿದ ರಾಜರತ್ನಂರನ್ನು ನಾನು ಕನ್ನಡ ಸಾಹಿತ್ಯದ ಬೊದಲೇರ್ ವಿ ಎಂದು ಬಗೆದಿದ್ದೇನೆ. ಫ್ರೆಂಚ್ ಸಾಹಿತ್ಯದಲ್ಲಿ ಅವನ ಕೆಡುಕಿನ ಹೂಗಳು' (ಫ್ಲವರ್ಸ್ ಆಫ್ ಈವಿಲ್) ಎಷ್ಟೋ ಕನ್ನಡದಲ್ಲಿ ಅಷ್ಟೇ ಸೊಗಸು ಇವರ ಯೆಂಡಕುಡ್ಕ ರತ್ನ ಮತ್ತು ರತ್ನನ ಪದಗಳು...''

ಗೋವಿಂದ ಪೈ ಅವರ ತೌಲನಿಕ ದೃಷ್ಟಿಯ ಮಹತ್ವವನ್ನು ಮನಗಾಣಬೇಕಾದರೆ, ಬೊದಿಲೇರ್ ಬರೆದ 'ಸದಾ ಕುಡಿದಿರು' ಎಂಬ ಗದ್ಯಕವನವನ್ನು ಮನನ ಮಾಡಿಕೊಳ್ಳಬೇಕು. ಇದರ ಅನುವಾದವನ್ನು ಪಿ. ಲಂಕೇಶ್ ಅವರ 'ಪಾಪದ ಹೂಗಳು' ಸಂಕಲನದಿಂದ ಆಯ್ದು ಇಲ್ಲಿ ಉಲ್ಲೇಖಿಸಲಾಗಿದೆ:

''ಮನುಷ್ಯ ಸದಾ ಕುಡಿದ ಸ್ಥಿತಿಯಲ್ಲಿರಬೇಕು. ಅದೊಂದೇ – ಒಂದೇ ಪರಿಹಾರ ಸಮಸ್ಯೆಗೆ; ಕಾಲನ ಅಸಹ್ಯಭಾರ ನಿನ್ನ ಭುಜಗಳನ್ನು ಮುರಿಯದಂತೆ, ನಿನ್ನ ತಲೆಯನ್ನು ತಗ್ಗಿಸದಂತೆ ನೋಡಿಕೊಳ್ಳುವುದಕ್ಕಾಗಿ, ಬಿಡದೆ ಸುಮ್ಮನೇ ಕುಡಿಯುತ್ತಿರು.

ಏನನ್ನು ಕುಡಿಯುವುದು ? ವೈನ್, ಕಾವ್ಯ, ಖುಜುತ್ವ ಯಾವುದನ್ನಾದರೂ; ಕುಡಿಯಬೇಕು ಮಾತ್ರ.

ಕುಡಿದು ಎಚ್ಚರಗೊಂಡಾಗ, ಅರಮನೆಯ ಮೆಟ್ಟಿಲ ಮೇಲೆ, ಹೊಂಡದ ಹಸಿರು ದಡದ ಮೇಲೆ, ದರಿದ್ರ ಒಬ್ಬಂಟಿತನದ ನಿನ್ನ ರೂಮಲ್ಲಿ ನಿನಗೆ ಎಚ್ಚರವಾದಾಗ ಕೇಳು – ಗಾಳಿಯನ್ನ, ಅಲೆಗಳನ್ನ, ನಕ್ಷತ್ರಗಳನ್ನ, ಹಕ್ಕಿಗಳನ್ನ, ಗಡಿಯಾರಗಳನ್ನ ಸದ್ದು ಮಾಡುವ ಕೂಗಾಡುವ, ನಡೆದಾಡುವ, ಹಾಡುವ ಎಲ್ಲದನ್ನು ಕೇಳು; ಗಾಳಿ, ಅಲೆ, ನಕ್ಷತ್ರ, ಹಕ್ಕಿ, ಗಡಿಯಾರ ಇವೆಲ್ಲ ಆಗ ಉತ್ತರಿಸುತ್ತವೆ: 'ಇದು ಕುಡಿಯುವ ವೇಳೆ, ಕಾಲಕ್ಕೆ ಅನ್ಯಾಯವಾಗಿ ಹುತಾತ್ಮನಾಗುವ ಬದಲು ಕುಡಿ, ಬಿಡದೆ ಕುಡೀ, ವೈನ್, ಕಾವ್ಯ, ಖುಜುತ್ವ, ನಿನಗೆ ಇಷ್ಟಬಂದದ್ದನ್ನು ಕುಡಿ.'''

(ಚಿಕ್ಕ ಗದ್ಯಕವನಗಳು, ಪು. ೩೩)

ಬೊದಿಲೇರ್ ತನ್ನ ಜೀವನಾನುಭವದಿಂದ ಕಡೆದು ತೆಗೆದಿರುವ ಈ ಗದ್ಯಖಂಡದಲ್ಲಿ 'ಕುಡಿತ'ವು ಬರಿಯ ಕುಡಿತವಾಗುಳಿಯದೆ ಒಂದು ಕಾವ್ಯ ಪ್ರತಿಮೆಯಾಗಿ ಸ್ಥಿತ್ಯಂತರಗೊಂಡಿರುವುದು ಸುಸ್ಪಷ್ಟವಾಗಿದೆ. ಈ ಗದ್ಯ ಖಂಡವನ್ನು ಓದಿ ತಿಳಿದ ಮೇಲೆ ಕುಡಿತವೆಂದರೆ ಕೇವಲ ಮಾದಕ ಪಾನೀಯವೆಂಬ ಅರ್ಥವನ್ನು ಯಾರೂ ಹೇಳುವುದಿಲ್ಲ.

**'ಅಭಿಧಾ'ದಿಂದ 'ವ್ಯಂಜನಾ' ಕಡೆಗೆ...**

ಬೊದಿಲೇರ್ 'ಸದಾ ಕುಡಿದಿರು' ಎಂಬ ಗದ್ಯ ಖಂಡವನ್ನು ಬರೆದು 'ಕುಡಿತ' ಎಂಬ ಶಬ್ದವನ್ನು 'ಅಭಿಧಾ' ಸೆರೆಯಿಂದ ಬಿಡಿಸಿ, 'ವ್ಯಂಜನಾ' ಕಡೆಗೆ ಹಾರಿಸಿ ಮುಕ್ತಗೊಳಿಸಿದ್ದಾನೆ. ಹಾಗೆಯೇ, ರಾಜರತ್ನಂ ಪದಗಳಲ್ಲಿ ಯೆಂಡ-ಕುಡ್ಕ-ಪಡಖಾನೆ ಎಂಬ ಶಬ್ದಗಳು 'ಅಭಿಧಾ' ಪಂಜರದಿಂದ ಬಿಡುಗಡೆ ಪಡೆದು 'ವ್ಯಂಜನಾ' ಕಕ್ಷೆಯಲ್ಲಿ ಚಲಿಸುತ್ತಿವೆ. 'ಧ್ವನ್ಯಾಲೋಕ'ದ ಪ್ರಕಾರ ಅಭಿಧಾವೃತ್ತಿಯು ನಿಘಂಟುವಿಗೆ ಬದ್ಧವಾಗಿರುವುದರಿಂದ 'ಸ್ಥಾವರ'ವಾಗಿದ್ದರೆ, ವ್ಯಂಜನಾವೃತ್ತಿಯು ಸಹೃದಯರ ಭಾವ ಸಂಬಂಧಿಯಾಗಿದ್ದು ಸದಾ 'ಜಂಗಮ'ವಾಗಿರುತ್ತದೆ. ರತ್ನನ ಪದಗಳ 'ಸಮರ್ಪಣೆ' ಹೀಗಿದೆ :

ಈ 'ಹೆಂಡದ ಮರಿ'ಯ
ಉದಯ ಅಭ್ಯುದಯಗಳಿಗೆ
ಕಾರಣರಾದ
'ಮಹಾಹೆಂಡ'ಗಳಿಗೆ.

ಈ 'ಸಮರ್ಪಣೆ'ಯಲ್ಲಿರುವ 'ಹೆಂಡದ ಮರಿ' ಮತ್ತು 'ಮಹಾಹೆಂಡಗಳಿಗೆ' – ಎಂಬುದನ್ನು ಅರ್ಥ ಮಾಡಿಕೊಂಡರೆ, ಮಾದಕ ಪಾನೀಯವೆಂಬ ನಿಘಂಟುವಿನ ಸೆಲೆ ಸಿಪ್ಪೆಯಂತೆ ಪರಿತ್ಯಾಜ್ಯವಾಗುತ್ತದೆ. ಹೀಗೆ, ಪರಿತ್ಯಾಜ್ಯಗೊಳ್ಳಬೇಕಾದ 'ಸ್ಥಾವರ' ದೃಷ್ಟಿಗೆ ಜೋತುಬಿದ್ದಿರುವುದರಿಂದ ಕನ್ನಡ ವಿಮರ್ಶೆ ಅಕ್ಷರಮಟ್ಟಿಗೆ ಹೆಳವನಾಗಿ ಬಿಟ್ಟಿದೆ. ಇದರಿಂದಾಗಿ ರಾಜರತ್ನಂ ಪದಗಳಿಗೆ ಸಲ್ಲಬೇಕಾದ ವಿಮರ್ಶಾಗೌರವ ಸಲ್ಲದೇ ಹೋಗಿದೆ. ಪ್ರಸ್ತುತ, ನನ್ನ ಲೇಖನದಲ್ಲಿ ಯೆಂಡ-ಕುಡ್ಕ-ಪಡಖಾನೆ ಎಂಬ ಶಬ್ದಗಳನ್ನು ವಿಶಿಷ್ಟವಾದ ಪರಿಕಲ್ಪನೆಯನ್ನಾಗಿ ಸ್ವೀಕರಿಸಲಾಗಿದೆ. ಬೊದಿಲೇರ್ ಹೇಳಿದ ಕುಡಿತಕ್ಕೂ ರತ್ನನ ಪದಗಳ ಕುಡಿತಕ್ಕೂ ಸಮಾನ ಧರ್ಮವಿರುವುದರಿಂದಲೇ ಗೋವಿಂದ ಪೈಗಳು ಇವೆರಡನ್ನೂ ಒಟ್ಟಿಗೆ ಇಟ್ಟು ನೋಡಿದ್ದಾರೆ. ಆದರೆ, ಬಹು ಹಿಂದೆಯೇ ಗೋವಿಂದ ಪೈ ಮನಗಂಡಿದ್ದ ವ್ಯಂಜನಾವೃತ್ತಿಯನ್ನು ಮುಂದೆ ಬಂದ ಕನ್ನಡ ವಿಮರ್ಶೆ ಸಮಾಧಿಮಾಡಿ, ಯೆಂಡ-ಕುಡ್ಕ-ಪಡಖಾನೆ ಎಂಬ ಶಬ್ದಗಳನ್ನು ಅಭಿಧಾವೃತ್ತಿಯಲ್ಲಷ್ಟೇ ಸ್ವೀಕಾರ ಮಾಡಿದೆ. ಈ ದೃಷ್ಟಿಯಿಂದ ಕೆಲವು ಅಭಿಪ್ರಾಯಗಳನ್ನು ಕನ್ನಡ ವಿಮರ್ಶೆಯಿಂದ ಆಯ್ದು ಇಲ್ಲಿ ಉಲ್ಲೇಖಿಸಲಾಗಿದೆ:

೧. ''ರತ್ನನನ್ನು ಎರಡು ಮುಖಗಳಲ್ಲಿ ನೋಡಬಹುದು: (೧) ಯೆಂಡ್ಕುಡ್ಕ ರತ್ನ (೨) ಪುಟ್ನಂಜಿ ರತ್ನ. ಒಂದು ಲೋಕದಲ್ಲಿ ನಾಯಕ ಹೆಂಡದ ನೆರವನ್ನು ಪಡೆದರೆ ಇನ್ನೊಂದೆಡೆಯಲ್ಲಿ ಅದರಿಂದ ಬಿಡುಗಡೆ ಪಡೆಯುತ್ತಾನೆ.'' – ಕೆ. ವಿ. ನಾರಾಯಣ

೨. ''ಗಾಂಧಿಯುಗ ಕುಡಿತವನ್ನು ವಿರೋಧಿಸಿದ

ಕಾಲ. ಸ್ವದೇಶಿ ಚಳುವಳಿಗೆ ವಿಶೇಷ ಮಹತ್ವ ಪ್ರಾಪ್ತವಾದ ಕಾಲ. ಅಂಥ ಸಂದರ್ಭದ ಕುಡಿತವನ್ನು ಬದುಕಿನ ಭಾಗವಾಗಿ – ಸೀರಿಯಸ್ ಆಗಿ ಪರಿಭಾವಿಸುವ ಕೇಂದ್ರವನ್ನು ನಿರ್ಮಿಸಿಕೊಳ್ಳುವ ಬಗ್ಗೆ ಹೆಚ್ಚು ಕುತೂಹಲ ಕಾರಿಯಾದ ಅಭ್ಯಾಸಕ್ಕೆ ದಾರಿ ಮಾಡಿಕೊಡಬಹುದು. ರತ್ನನ ಪದಗಳ ಕಡೆಯ ಭಾಗ ಕುಡಿತಕ್ಕೆ ಪೂರ್ಣ ವಿರಾಮ ಹಾಕುವ ನೆಲೆಯನ್ನು ತಲುಪುತ್ತದೆ.''

– ಕಿ. ರಂ. ನಾಗರಾಜ

೩. ''ರತ್ನನ ಭಾಷೆಯು ಕುಡುಕರ ಭಾಷೆಯಲ್ಲ. ಅವನ ಪದಗಳು ಯೆಂಡದ 'ಪರ'ಯತ್ನವಾಗುವುದೇ ಇಲ್ಲ. ಕುಡಿಯದೇ ಇದ್ದಾಗಲೂ ಕೂಡ ರತ್ನ ಹೀಗೆಯೇ ಮಾತನಾಡುವುದು. ಇದಕ್ಕೆ ನಿದರ್ಶನವಾಗಿ ಕುಡಿತವನ್ನು ಬಿಟ್ಟಮೇಲೆ ಮತ್ತು ನಾಗನ ಪದಗಳಲ್ಲಿ ಕೂಡ ಇದೇ ರೀತಿಯ ಭಾಷೆಯು ಬಳಕೆಯಾಗಿರುವುದನ್ನು ಗಮನಿಸಬಹುದು.''

- ಎಚ್. ಎಸ್. ರಾಘವೇಂದ್ರರಾವ್

೪ ''ಹೆಂಡ ಇಲ್ಲಿ ಪಡಖಾನೆಗೆ ಬಂದು ಮಾರಾಟವಾಗುತ್ತದೆ. ಹೆಂಡ ಕಮರ್ಷಿಯಲ್ ಆಗಿ, ಹಣ ಗಳಿಕೆಯ ವಸ್ತುವಾಗಿ, ಆ ಮೂಲಕ ಹೆಂಡದ ವ್ಯಾಪಾರ ಒಂದು ಶೋಷಣೆಯ ಮಟ್ಟಕ್ಕೇರಿದ್ದು ಹಾಗೂ ಹೆಂಡ ಒಂದು ದುಶ್ಚಟ ಎಂದು ಕರೆದು ಪಾನ ನಿರೋಧದ ಸ್ಲೋಗನ್‌ಗಳು ಕಾಣಿಸಿಕೊಂಡಿದ್ದೂ ಇದೇ ಸಂದರ್ಭದಲ್ಲಿ.''

– ಟಿ. ಎಸ್. ಸತ್ಯನಾಥ್

೫. ''ರಾಜರತ್ನಂ ಒಂದೇ ಒಂದು ಹನಿ ಹೆಂಡ ಸೇವಿಸದೆ ಯೆಂಡ್ಕುಡ್ಕ ರತ್ನನನ್ನು ಸೃಷ್ಟಿಸಿದರು... ಹೆಂಡವನ್ನು ಅದರ ಮಾದಕತೆ ಮತ್ತು ಅದು ಕೊಡಬಲ್ಲ ರೂಪಕಗಳಿಗಾಗಿ ಬಳಸಿರುವುದರಿಂದ ಕುಡ್ಕರತ್ನ ನಮ್ಮ ಸಾಹಿತ್ಯದಲ್ಲಿ ಮಂಕುತಿಮ್ಮನಿಗಿಂತ ಕೊಂಚ ಅಸೂಕ್ಷ್ಮನೂ, ಸೀಮಿತನೂ ಆಗುತ್ತಾನೆ.''

– ಪಿ. ಲಂಕೇಶ್

೬. ''ಗಾಂಧೀಜಿಯವರ ಪ್ರಭಾವ ದೇಶದಲ್ಲಿ ಹೆಚ್ಚಾಗಿದ್ದಾಗ ಪಾನ ನಿರೋಧದ ಬಗ್ಗೆ ಒಲವು ಇದ್ದಾಗ, ನೀವು ಪಡಖಾನೆಯ ರತ್ನನನ್ನು ಸೃಷ್ಟಿಸಿ, ಹೆಂಡವನ್ನು ಮುಖ್ಯ ಪ್ರತಿಮೆಯನ್ನಾಗಿ ಎತ್ತಿಕೊಳ್ಳಲು ಕಾರಣವೇನು ?''

– ಜಿ. ಶ್ರೀನಿವಾಸರಾಜು

ಮೇಲಿನ ಆಯ್ದ ಉಲ್ಲೇಖಗಳನ್ನು ಗಮನಿಸಿದರೆ, ಒಂದಂಶ ಸ್ಪಷ್ಟವಾಗುತ್ತದೆ. ಕುಡಿಯದವರಿಗೆ ಕುಡಿತದ ಬಗ್ಗೆ ಕುಡುಕರ ಬಗ್ಗೆ ಒಂದು ಬಗೆಯ ಕೆಟ್ಟ ಕುತೂಹಲ ವಿರುತ್ತದೆ. ಇಂಥ ಕೆಟ್ಟ ಕುತೂಹಲವನ್ನು ಕನ್ನಡ ವಿಮರ್ಶೆಯಲ್ಲೂ ಗಮನಿಸಬಹುದು. ಒಟ್ಟಿನಲ್ಲಿ ಹೇಳುವುದಾದರೆ, ರಾಜರತ್ನಂ ಪದಗಳನ್ನು ವಿಮರ್ಶಿಸುವಾಗ ಎಲ್ಲರೂ ಪಡಖಾನೆಗೆ ನಿಷ್ಠೆಯಿಂದ ನಡೆದುಕೊಂಡಿರುವುದು ಕಂಡುಬರುತ್ತದೆ. ಆದರೆ, ಈ ಲೇಖನದ ಮಟ್ಟಿಗೆ ಯೆಂಡ-ಕುಡ್ಕ-ಪಡಖಾನೆ ಸಂಬಂಧಿಯಾದ ವಿವರಗಳನ್ನು ಒಂದು ಪರಿಕಲ್ಪನೆ ಯೆಂಬಂತೆ ಸ್ವೀಕರಿಸಲಾಗಿದೆ. ಇದನ್ನು ಸ್ಪಷ್ಟಪಡಿಸುವ ಸಲುವಾಗಿಯೇ 'ಸದಾ ಕುಡಿದಿರು' ಎಂಬ ಬೋದಿಲೇರ್ ಗದ್ಯ ಖಂಡವನ್ನು ಪ್ರಾರಂಭದಲ್ಲೆ ಪ್ರಸ್ತಾಪಿಸಿದ್ದೇನೆ. ರಾಜರತ್ನಂ ಪದಗಳನ್ನು ಹೇಗೆ ನೋಡಬೇಕೆಂಬುದನ್ನು ಇದು ಬಹು ಚೆನ್ನಾಗಿ ನಿರ್ದೇಶಿಸುತ್ತದೆ. ನಾನು ವಿಮರ್ಶೆಯಲ್ಲಿ ವಿವರಿಸಬೇಕಾಗದ್ದನ್ನೆಲ್ಲ ಬೋದಿಲೇರ್ ಗದ್ಯಖಂಡವು ತುಂಬ ಸಮರ್ಥವಾಗಿ ಹೇಳುತ್ತಿದೆ. ನನ್ನ ವಿಮರ್ಶೆಯ ಮಾತುಗಾರಿಕೆ ಈ ಗದ್ಯಖಂಡದ ಕಾಣ್ಕೆಯ ವಿಸ್ತರಣೆಯಾಗಿದೆ. ರಾಜರತ್ನಂ ಪದಗಳಲ್ಲಿ ಯೆಂಡ ಸಂಬಂಧಿಯಾದ ವಿವರಗಳು ಸ್ಫೂರ್ತಿ ತತ್ವದ ಮಹಾನ್ ರೂಪಕವಾಗಿ ಕಾಣಿಸಿಕೊಂಡಿದೆ. ಆದ್ದರಿಂದ, ರಾಜರತ್ನಂ ಪದಗಳನ್ನು 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿರುವ ಶೂದ್ರ ಸಂಘದ ಮಹಾಸಭೆಯ ಅಧ್ಯಕ್ಷ ಭಾಷಣದಂತೆ ಪರಿಭಾವಿಸಬಾರದು; ''ಕುಡುದ್ರೆ ಸತ್ತಿ ಬತ್ತದೆ!'' ಎಂಬಂತೆ ನೋಡಬಾರದು.

ಯೆಂಡದ ಹಲವು ಮುಖಗಳು ಅಥವಾ ಹೆಂಡದ ಹಲವು ಬಗೆಗಳು ರಾಜರತ್ನಂ ಪದಗಳಲ್ಲಿವೆ :

೧. ರತ್ನನ ಮೊಕಾಬಿಲೆ; ೨. ಬುಂಡೆಬಕ್ತ ರತ್ನ; ೩. ಮುನಿಯನ್ ಗಿರಾಕಿ ರತ್ನ; ೪. ಪುಟ್ನಂಜಿ ರತ್ನ; ೫. ರುಸ್ತುಂ ರತ್ನ; ೬. ನಾಗನ ಪದಗಳು. ಇವು ರಾಜರತ್ನಂ ಪದಗಳ ಉಪಶೀರ್ಷಿಕೆಗಳು ಮಾತ್ರವಲ್ಲ! ರತ್ನ-ನಂಜಿಯಿಂದ ನಾಗ-ಮಲ್ಲಿಯವರೆಗೆ ಇರುವೆಲ್ಲ ನಿರೂಪಣೆಗಳು ಬದುಕಿನ ಅವಸ್ಥಾಂತರಗಳು; ಜೀವನ ಯಾತ್ರೆಯ ಸ್ಥಿತ್ಯಂತರಗಳು ಎಂಬಂತೆ ನೋಡಬೇಕು. 'ರತ್ನನ ಪದಗಳು' ಮತ್ತು 'ನಾಗನ ಪದಗಳು' ಇವನ್ನು ಇಡಿಯಾಗಿ ಗೊಲ್ಗೊಥಾ ಮತ್ತು ವೈಶಾಖಿ ಮಾದರಿಯಲ್ಲಿ ಸಮಾನ ವಸ್ತುವುಳ್ಳ ಎರಡು ಖಂಡಕಾವ್ಯಗಳಂತೆ ಸ್ವೀಕರಿಸಬೇಕು, ಪ್ರತ್ಯೇಕ ದೃಷ್ಟಿಯಿಂದ ನೋಡಬಾರದು. ಈ ನಿಟ್ಟಿನಲ್ಲಿ ಕಿ. ರಂ. ನಾಗರಾಜರ ಮಾತುಗಳು ಸ್ಮರಣೀಯವಾಗಿವೆ:

> ''ಮೇಲುನೋಟಕ್ಕೆ ಬೇರೆ ಬೇರೆ ಕವಿತೆಗಳಂತೆ ಕಾಣಿಸಿಕೊಂಡಿದ್ದರೂ 'ರತ್ನನ ಪದಗಳು' ಒಂದೇ ಕವಿತೆ ಎಂದು ಪರಿಭಾವಿಸುವುದು ಮುಖ್ಯ.''

ರತ್ನನ ಜೊತೆ 'ಕಾಲ್ಪನಿಕ ಸಂದರ್ಶನ' ನಡೆಸಿರುವ ಕ. ನಂ. ನಾಗರಾಜು ಅವರು ರತ್ನ - ಪುಟ್ನಂಜಿ ಮತ್ತು ನಾಗ-ಮಲ್ಲಿ ಇವರನ್ನು ಅಭೇದ ಕಲ್ಪನೆಯಿಂದ ಕಂಡಿರುವುದು ಸರಿಯಾಗಿದೆ. ಪಂಪಭಾರತದಲ್ಲಿ ಅರ್ಜುನ - ಅರಿಕೇಸರಿ ಹೇಗೋ ಹಾಗೆ ರಾಜರತ್ನಂ ಪದಗಳಲ್ಲಿ ರತ್ನ-ನಾಗ ಒಂದೇ ಆಗಿದ್ದಾರೆ. ಮುದ್ದಣ-ಮನೋರಮೆ, ರಂಗ-ಬಸ್ಸಿ, ರತ್ನ-ಪುಟ್ನಂಜಿ, ನಾಗ-ಮಲ್ಲಿ – ಇವರೆಲ್ಲ ಒಂದೇ ಮೂಲದವರು. ರಾಜರತ್ನಂ ಪದಗಳಲ್ಲಿ ಒಂದು ಪ್ರಕ್ರಿಯಾತ್ಮಕ ನೆಲೆಯನ್ನು ಕಾಣಬಹುದು. ಬಾಳಿನ ಹೋರಾಟದಲ್ಲಿ ತನ್ನನ್ನು ತಾನೇ ಮುರಿದುಕೊಳ್ಳುತ್ತಾ, ನವೀಕರಣಗೊಳಿಸುತ್ತಾ ಮುಂದೆ ಸಾಗುವ ಪ್ರಕ್ರಿಯೆಯೊಂದನ್ನು ನಾವಿಲ್ಲಿ ನೋಡುತ್ತೇವೆ. ಯೆಂಡ → ಯೆಡ್ತಿ → ಕನ್ನಡ ಪದಗಳು → ನಮ್ದೆ ಒಂದು ಲೋಕ (= ಮಾನಸಿಕ ರಚನೆ) ಈ ನಾಲ್ಕು ಸಂಗತಿಗಳು

## ಪೂರ್ಣ ?

ಪಾಪ, ಪ್ರಾಣಿಗಳೇನು
ಮಾಡಿಯಾವು ?
ಮನುಷ್ಯ ಪ್ರಾಣಿ ಏನೇನು ಮಾಡಬಲ್ಲ,
ಮಾಡಿದ್ದಾನೆ !

ಹಿಂದಿರುಗಿ ನೋಡಿದರೆ :
ಹಿರೋಷಿಮಾ, ನಾಗಸಾಕಿ ;
ವಿಶ್ವವಾಣಿಜ್ಯ ಕೇಂದ್ರ ಕಟ್ಟಡ ;
ತುಸು ಹಿಂದಕ್ಕೆ ಹೋದರೆ,
ಹಂಪೆ – ಇತ್ಯಾದಿ ಇತ್ಯಾದಿ !

ಇವನ್ನೂ ಮಾಡಿದ್ದಾನಲ್ಲ:
ಪಿರಮಿಡ್ಡು, ಚಂದ್ರಗ್ರಹದಿಂದಲೂ
ಕಾಣಬಲ್ಲ ಚೀಣಾದ ಮಹಾಗೋಡೆ ;
ತಾಜ್‌ಮಹಲ್ – ಇತ್ಯಾದಿ ಇತ್ಯಾದಿ !

ದೇವರು, ದಾನವ, ಮೃಗ -
ಒಂದೊಂದೂ ಸರಳ ;
ಎಲ್ಲ ಸಂಗಮಿಸಿದ ಸಂಕೀರ್ಣ,
ಮಾನವ ಪ್ರಾಣಿ :
ಒಂದರ್ಥದಲ್ಲಿ ಪೂರ್ಣ ?



ಸಿ.ಪಿ.ಕೆ.
ಮೈಸೂರು

ಬೇರೆ ಬೇರೆಯೆಂದು ತಿಳಿಯಬಾರದು. ಇವು ನಾಲ್ಕು ಬಗೆಯ ಯೆಂಡಗಳೆಂದು ಕರೆದರೂ ಅಡ್ಡಿಯಿಲ್ಲ.

ಆರಂಭದಲ್ಲಿ ರತ್ನ ಬುಂಡೆ ಬಕ್ತನಾಗಿದ್ದ; ಆಮೇಲೆ ಯೆಂಡವನ್ನು ಬಿಟ್ಟುಬಿಟ್ಟ ಎಂಬುದಕ್ಕೆ ರಾಜರತ್ನಂ ಪದಗಳಲ್ಲಿ ಆಧಾರವಿಲ್ಲ. ಯೆಂಡವನ್ನು ರತ್ನ ಬಿಟ್ಟರೂ ರತ್ನನನ್ನು ಯೆಂಡಬಿಡದೆ ಕಾಡುವುದಕ್ಕೆ ಪದಗಳಲ್ಲಿ ಆಧಾರಗಳಿವೆ:

ಬುಂಡೆ ಬಕ್ತನಾಗುವುದಕ್ಕೆ :
ಯೆಂಡ ಯೆಡ್ತಿ ಕನ್ನಡ್ ಪದಗೊಳ್
ಅಂದ್ರೆ ರತ್ನಂಗ್ ಪ್ರಾಣ
ಬುಂಡೇನ್ ಎತ್ತಿ ಕುಡುದ್ಬುಟ್ಟಾಂದ್ರೆ
ತಕ್ಕೊ ಪದಗೊಳ್ ಬಾಣ

– ಕನ್ನಡ ಪದಗೊಳು, ೧೨

ಯೆಂಡಕ್ಕೆ ತರಪ್ಣ ಕೊಟ್ಟಿದ್ದಕ್ಕೆ :
ಪ್ರಾಣಕ್ಕಿಂತ ಯೆಂಡ ಯೆಚ್ಚು
ಯೆಂಡಕ್ಕಿಂತ ಮಾನ ಯೆಚ್ಚು
ಯೆಂಡದ್ ಮುನಿಯ ಜಿಪ್ಣ!
ಮಾನದ್ ಮುಂದೆ ಯಾವ್ದ್ ಏನೈತೆ
ತಕ್ಕೊ ! ಕೊಡ್ತೀನ್ ಈಗ್ ಬತ್ತೈತೆ
ಆಳ್ ಯೆಂಡಕ್ಕೆ ತರಪ್ಣ!

–ಯೆಂಡಕ್ಕ್ ತರಪ್ಣ, ೫೦

ಸತ್ತೋಗ್ ದಫನ್ನಾದ ಯೆಂಡದಯ್ಯ :
ಉತ್ತಮ್ ಜನ್ಮಕ್ ಬರೋದ್ ಮನ್ಸನ್ ಪ್ರಯತ್ನ
ಸತ್ತೋಗ್ ದಫನ್ನಾದ ಯೆಂಡದಯ್ಯ ರತ್ನ
ಮಳ್ಳಿ ಚಿಗತ್ಕೊಂಡೌನೆ ಪುಟ್ಟಂಜಿ ರತ್ನ
ನೋಡು ಯೆಂಡ್ ಇಲ್ದೇನೆ ಔನಾಡೋ ಗತ್ನ

– ಮುನಿಯನ್ ಮೊಕ್ಕ ಮುಸ್ಪಿ, ೫೨

(= ಪುಟ ೫೩ರಲ್ಲಿ 'ಕಡೇ ಆಡು' ಎಂಬ ಶೀರ್ಷಿಕೆಯ ಪದ್ಯವಿದೆ.)

ರತ್ನನನ್ನು ಬಿಡದ ಯೆಂಡದ ನಂಟಿಗೆ:

೧. 'ನಾನ್ಯಾರ್ ಗೊತ್ತೆ ? ಅಂದ್ರೆ 'ಹ್ಞೂಂ'ತ
'ನೀ ಯೆಂಡ ಕುಡಕ' ಅಂದ್ಲು
ನೆಗ್ತ ಅತ್ರ ಬಂದ್ಲು

– ಮಡಿಕೇರೀಲಿ ರತ್ನ, ೭೮

೨. ಯೆಂಡ ಕುಡದೋನ್ ಕಂತೇಂತ್ ಯೋಳಿ
ನೆಗದ ಯೋಳಾದ್ ಕೇಳು
ಒಂದ್ ದಿನಾರ ಸಾಜಾ ತಿಳಕೋ
ಇದ್ದೇ ಇರತೈತ್ ಗೋಳು

– ಗ್ನಾನದ್ ದೀಪ, ೮೪

೩. ಯೆಂಡ ಕುಡದೋನ್ ಮಾತ್ ಅಂತೇಳಿ
ನೆಗಬೇಡೋ ಏ ಪೆಂಗೆ

– ದುಕ್ಕ, ೮೭

೪. ಕುಡಿಯೋನ್ ನಾನು ! ಆಡೋನ್ ನಾನಾ
ಮೂಳೆ ಮಾಂಸದ ಕಂಬ ?
ಯೆಂಡ ಕುಂತ್ಕೊಂಡ್ ಆಡಿಸ್ತಿದ್ರೆ
ನಂಗ್ ಯಾಕಣ್ಣ ಜಂಬ ?

ಸೂತ್ರದ್‌ಗೊಂಬೆ ಇದ್ದಂಗ್ ಇಪ್ಪಿ
ಯೆಂಡದ್ ಕೈಲಿ ನಾನು
ಯೆಂಗ್ ಆಡಂದ್ರೆ ಅಂಗ್ ಆಡ್ಬೇಕು
ನಂಗೀ ಜಂಬದಿಂದ್ ಏನು !

..............................
ಯೆಂಡ ಕುಡದೋನ್ ಕಂತೇಂತೇಳಿ
ಮೂಲೇಗ್ ಇದನ್ ಆಕ್ಬಾರ್ದು
ಮನ್ಸನ್ ಜೀವ ತಿಳಕೊಳ್ದೇನೆ
ಸುಂಕೆ ನೋಯಿಸ್ಬಾರ್ದು

– ಜಂಬ, ೮೮-೮೯

೫. ಅದಿನಾರು ಮೇಲಾಯ್ತು ವರುಸವಗ್ನಾತ
ಅಂಟಕೊಂಡೈತೆ ಇನ್ನ ಒಸಿ ಆಳೀ ನಾತ
ಬಂದೀಯ ಗೆಣೆಯ ನೀ ನನ್ನ ಸಂಗಾತ ?
ಯೋಳಾದ್ ಒಂದ್ ಈಟೈತೆ ಭೋ ಗುಟ್ಟಿನ ಮಾತ.

..............................
ವೋಗಿಲ್ಲ ಅಳದು, ಯಿಡಿದಿಲ್ಲ ವೊಸದು
ಕನಡ ನಂದ್ ಯಿಂಗಾಗಿ ಎಳ್ಡು ಕಡೆ ಮಸದು
ಬಂದಂಗ್ ಆಡ್ತೀನಿ; ಅದ ಬರಿತಿನೆಂಗೆಂಗೋ !
ಯೆತ್ತೋರ್ ಯೆಗ್ಣದ ಕತನೆ ಈ ಯೆಲ್ಲ ನಂಗೋ!

–ಬಂದೀಯ ಗೆಣೆಯ

(=ನಾಗನ ಪದಗಳು)೧೦

ಮೇಲಿನ ಉಲ್ಲೇಖಗಳಲ್ಲಿರುವಂತೆ, ಯೆಂಡಕ್ಕೆ ತರ್ಪಣ ಕೊಟ್ಟ ಮೇಲೂ, 'ಕಡೇ ಆಡು' ಆದ ಮೇಲೂ ಇಲ್ಲಿ ಯೆಂಡದ ನಾತ ಇದ್ದೇ ಇದೆ. 'ಬುಂಡೆಯೆಂಡ' ಹೋದಮೇಲೆ ಯೆಡ್ತಿ ಎಂಬ ಯೆಂಡವಿದೆ. ಯೆಡ್ತಿ ಹೋದ್ರೇನಂತೆ ? 'ಕನ್ನಡ' ಎಂಬ ಯೆಂಡವಿದೆ. ನಾವೇ ಹುಟ್ಟಿಸಿಕೊಳ್ಳಬೇಕಾದ ನಮ್ದೆ ಒಂದು ಲೋಕವೂ ಯೆಂಡವಿದ್ದಂತೆಯೇ ಹೌದು ! ಇವೆಲ್ಲ ಸೇರಿಯೇ 'ರತ್ನನ ಪರ್ಪಂಚ' ನಿರ್ಮಾಣವಾಗಿದೆ. 'ನಮ್ದೆ ಒಂದು ಲೋಕ' ಅಥವಾ 'ರತ್ನನ ಪರ್ಪಂಚ'ವು ಇಂದು ಬೆಳಿಗ್ಗೆ ಉದ್ಘಾಟನಾ ಭಾಷಣ ಮಾಡಿದ ಡಾ॥ ಜಿ. ಎಸ್. ಶಿವರುದ್ರಪ್ಪನವರು ಪಲಾಯನವಾದ ವಲ್ಲವೆಂದು ಹೇಳಿದ್ದು ಸರಿ ಇದೆ. ಇದೊಂದು ರೀತಿಯಲ್ಲಿ ಸಶಕ್ತವಾದ ಮನೋಲೋಕ ! ಇಂಥದೊಂದು ಮಾನಸಿಕ ರಚನೆ ಪ್ರತಿಯೊಬ್ಬನಿಗೂ ಅತ್ಯಗತ್ಯವಾಗಿ ಬೇಕೇ ಬೇಕು. ರತ್ನನ ಸ್ವವಿರಚಿತ ಜಗತ್ತಿಗೂ ಇಂದಿನ ಐ.ಟಿ. ಕ್ರಾಂತಿಯ ಖಾಸಗೀಕರಣದ ಪರಿಣಾಮವಾದ ಸ್ವವಿರಚಿತ ಜಗತ್ತಿಗೂ ಅಗಾಧವಾದ ಕಂದರವೇ ಇದೆ. ಸಮಷ್ಟಿಗೆ ಬದ್ಧವಾಗಿರುವ ರತ್ನನ ಸ್ವವಿರಚಿತ ಜಗತ್ತು ಸ್ವೀಕಾರಾರ್ಹವಾಗಿರುವಂತೆ, ಖಾಸಗೀಕರಣದ ಸ್ವವಿರಚಿತ ಜಗತ್ತು ಸ್ವೀಕಾರಾರ್ಹವಾದುದಲ್ಲ.

**ಕನ್ನಡ ಪದಕೆ ಬೆರಕ್ಯಾಗೈತೆ ಕ್ಷಮ್ಸಿ!**

ರಾಜರತ್ನಂ ಪದಗಳ ಕಾವ್ಯಭಾಷೆಯ ಬಗ್ಗೆ ಚರ್ಚಿಸುವಾಗಲೂ ಹೆಂಡವೆಂಬ ಭಾವಭ್ರಮೆಯಿಂದ ಪಾರಾಗಿಲ್ಲ. ''ಯೆಂಡಕುಡ್ಕರ ಭಾಷೆ ಎಂಬುದಿದೆ. ಇದನ್ನು ರಾಜರತ್ನಂ ಕಿವಿಗೊಟ್ಟು ಕೇಳಿಸಿಕೊಂಡು ಬರೆದಿದ್ದಾರೆ; ಯೆಂಡಕುಡ್ಕರ ಧ್ವನಿ ಅನುಕರಣೆ, ಉಚ್ಚಾರ, ಏರಿಳಿತಗಳು, ತೊದಲು ಮಾತು ಇವುಗಳನ್ನೆಲ್ಲ ತುಂಬ ಶ್ರದ್ಧೆಯಿಂದ ಅಭ್ಯಾಸಮಾಡಿ ಕನ್ನಡ ಕಾವ್ಯಕ್ಕೆ ಯೆಂಡ ಕುಡ್ಕರ ಭಾಷೆಯನ್ನು ಕೊಡುಗೆಯನ್ನಾಗಿ ಕೊಟ್ಟಿದ್ದಾರೆ'' ಮುಂತಾದ ಅಭಿಪ್ರಾಯಗಳಿವೆ. ಇವುಗಳಲ್ಲಿ 'ಕೊಡುಗೆ' ಎಂಬುದನ್ನು ಒಪ್ಪಿಕೊಂಡು, ಯೆಂಡಸಂಬಂಧಿಯಾದ ಊಹಾಪೋಹಗಳನ್ನು ಪೂರ್ತಿಯಾಗಿ ಬಿಟ್ಟುಬಿಡಬೇಕಾಗಿದೆ. ಏಕೆಂದರೆ, 'ಯೆಂಡಕುಡ್ಕರ ಭಾಷೆ' ಅಂತಾ ಒಂದಿರುವುದಿಲ್ಲ. 'ಭಾಷಾವಿಜ್ಞಾನ'ದ ದೃಷ್ಟಿಯಿಂದ ನೋಡಿದರೂ ಯಾವುದೇ ಒಂದು ಭಾಷೆಯಲ್ಲಿ ನಾವು ಗುರುತಿಸುವುದು ವ್ಯಕ್ತಿಭಾಷೆ, ಉಪಭಾಷೆ (= ಪ್ರಾದೇಶಿಕ ಮತ್ತು ಸಾಮಾಜಿಕ), ಪ್ರಮಾಣ ಭಾಷೆಗಳನ್ನು ಮಾತ್ರ ! 'ಕಾವ್ಯಭಾಷೆ' ಎಂಬುದು ಕವಿ ಕಲ್ಪಿತ ಮತ್ತು ಪ್ರತಿಭಾಜನ್ಯವಾದುದು. ಪ್ರತಿಯೊಬ್ಬ ಕವಿಯು ತನ್ನದೇ ಆದ ಭಾಷಾಭಿವ್ಯಕ್ತಿಯೊಂದನ್ನು ತನ್ನ ಕಾಣ್ಕೆಗೆ ತಕ್ಕಂತೆ ರೂಪಿಸಿಕೊಳ್ಳುತ್ತಾನೆ. ಇದು ಕೆಲವರಲ್ಲಿ 'ಬಹುರೂಪಿ'ಯಾಗಿದ್ದರೆ, ಇನ್ನು ಕೆಲವರಲ್ಲಿ 'ಏಕರೂಪಿ'ಯಾಗಿರುತ್ತದೆ. ಕುವೆಂಪು ಅವರ ಕಾವ್ಯಭಾಷೆ ಬಹುರೂಪಿಯಾದುದು. ಪದ್ಯ-ಗದ್ಯ-ನಾಟಕ-ಪ್ರಬಂಧ-ಮಹಾಕಾವ್ಯಗಳಿಗೆ ಸಂಬಂಧಪಟ್ಟಂತೆ ಕುವೆಂಪು ಅವರ ಕಾವ್ಯಭಾಷೆ ವೈವಿಧ್ಯಮಯವಾಗಿದೆ. ಕವಿ ಬೇಂದ್ರೆ ಮತ್ತು ರಾಜರತ್ನಂ ಪದಗಳ ಕಾವ್ಯಭಾಷೆ ಆಂತರಿಕ ವೈವಿಧ್ಯದಿಂದ ಕೂಡಿದ ಏಕರೂಪಾತ್ಮಕ ಅಭಿವ್ಯಕ್ತಿಯಾಗಿದೆ. ತನ್ನ ಕಾವ್ಯಭಾಷೆ ಕಲಬೆರಕೆಯದೆಂಬ ಅಭಿಪ್ರಾಯ ಸ್ವತಃ ಕವಿಗೆ ಇದೆ :

ಯೆಂಡಕ್ ಮುನ್ನ ನೀರ್‌ಗೀರ್ ಬೆರಸಿ
ಮೋಸ ಮಾಡ್ತೌನ್ ನಮ್ಸಿ;
ಅದಕೇ ಈವೊತ್ ಕನ್ನಡ ಪದಕೆ
ಬೆರಕ್ಯಾಗೈತೆ ಕ್ಷಮ್ಸಿ!

'ಭಾಷಾ ವಿಜ್ಞಾನ'ದಲ್ಲಿ ಪ್ರಸ್ತಾಪಿತವಾಗಿರುವ 'ನುಡಿ ಜಿಗಿತ' ಮತ್ತು 'ನುಡಿಬೆರಕೆ'ಗಳಿಂದ ಕೂಡಿದ ಉಕ್ತಿ ವಿಶೇಷವನ್ನಾಧರಿಸಿ, ರಾಜರತ್ನಂ ಪದಗಳ 'ಕಾವ್ಯಭಾಷೆ' ರೂಪುಗೊಂಡಿರುವುದನ್ನಿಲ್ಲಿ ಗಮನಿಸಬೇಕು. ಈ ಕಾವ್ಯಭಾಷೆಯನ್ನು 'ಭಾಷಿಕ ಛದ್ಮವೇಷ' (=ಲಿಂಗ್ವಿಸ್ಟಿಕ್ ಕಮೌಫ್ಲೇಜ್) ಎಂದು ಕರೆಯಬಹುದು. ತಾನು ಬದುಕುತ್ತಿರುವ ಪರಿಸರದ ಒಟ್ಟು ವ್ಯವಸ್ಥೆಯ ವಿರುದ್ಧ ತಿರುಗಿಬೀಳುವ ಕವಿಯ ಮನಸ್ಸು ಭಾಷಿಕವಾಗಿ ಇಂಥದೊಂದು ಛದ್ಮವೇಷವನ್ನು ತೊಡುವುದು ಅತ್ಯಂತ ಸಹಜವಾದುದು. ತುರ್ತು ಪರಿಸ್ಥಿತಿಗೂ ಮುಂಚೆಯೇ ಪ್ರಕಟಗೊಂಡ ಸಿದ್ಧಲಿಂಗಯ್ಯನವರ 'ಹೊಲೆ ಮಾದಿಗರ ಹಾಡು' ಕೂಡ ಭಾಷಿಕ ಛದ್ಮವೇಷಕ್ಕೆ ಉತ್ತಮ ಉದಾಹರಣೆ. ಪರಾಧೀನತೆ ಮತ್ತು ನವೋದಯದ ಭಾವ ಸಂಭ್ರಮದ ಸಂದರ್ಭದಲ್ಲಿ ಪ್ರಕಟಗೊಂಡ 'ರತ್ನನ ಪದಗಳು' ಭಾಷಿಕ ಛದ್ಮವೇಷವನ್ನು ತೊಟ್ಟು ಬಂದಿದೆ. 'ಲಿಂಗ್ವಿಸ್ಟಿಕ್ಸ್' ಮತ್ತು 'ಇಕಾಲಜಿ' ಇವೆರಡು ನೆಲೆಗಳನ್ನು ಬೆಸೆದು ರೂಪಿಸಿಕೊಂಡಿರುವ ಪರಿಭಾಷೆಯೆಂಬಂತೆ 'ಲಿಂಗ್ವಿಸ್ಟಿಕ್ ಕಮೌಫ್ಲೇಜ್' – ಅನ್ನು ಸಹೃದಯರು ಸ್ವೀಕರಿಸಬೇಕು. ಗುಪ್ತವೇಷದಲ್ಲಿ ತಿರುಗುತ್ತಿದ್ದ ಸ್ವಾತಂತ್ರ್ಯ ಹೋರಾಟಗಾರರಂತೆ, ಭಾಷಿಕವಾಗಿ ಮಾರುವೇಷ ತೊಟ್ಟು ವ್ಯವಸ್ಥೆಯನ್ನು ಉಗ್ರವಾಗಿ ಟೀಕಿಸುವ, ವಿಡಂಬಿಸುವ ಪರಿಯೊಂದನ್ನು ರತ್ನನ ಪದಗಳಲ್ಲಿ ಗುರುತಿಸಬಹುದು. ವಿಡಂಬನೆಯ ವಾಗ್ಬಾಣಗಳು ಕೊಂಚ ಮೆದುವಾದಂತೆ ಕಂಡುಬರುವ ನಾಗನಪದಗಳಲ್ಲೂ ಇದೇ ಬಗೆಯ ಮಾರುವೇಷ ಭಾಷಿಕವಾಗಿ ಮುಂದುವರೆದಿದೆ.

**ಕಣ್ಣಿನಿಂದ ಕವಿಗೆ ಮಾಡಿದ ಜಂಪ್**

೧೯೩೪ರಲ್ಲಿ ಮೊದಲನೆಯ ಮುದ್ರಣವನ್ನು ಕಂಡ

'ರತ್ನನ ಪದಗಳು' ಅರಿಕೆಯಲ್ಲಿ ಕೆಳಕಂಡ ನುಡಿಗಳಿವೆ:

''ಈ ಪುಸ್ತಕ ಓದೋರು ದಯಮಾಡಿ ಮೆಲ್ಲಗೆ ಮನಸ್ಸಿನಲ್ಲಿ ಓದಿಕೊಬಾರದು. ಗಟ್ಟಿಯಾಗಿ ಕಿವಿ ಮೇಲೆ ಬೀಳೋ ಹಾಗೆ ಓದಿಕೊಬೇಕು...''

ಇದೇ ರೀತಿಯ ಮಾತುಗಳನ್ನು ೧೯೭೫ರಲ್ಲಿ ಮೊದಲ ಮುದ್ರಣವನ್ನು ಕಂಡ ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಕವನ ಸಂಕಲನದಲ್ಲೂ ಮನಗಾಣಬಹುದು:

''ಇವು ಹಾಡುಗಳು ಎಂದು ಮತ್ತೊಮ್ಮೆ ಹೇಳುತ್ತಿದ್ದೇನೆ. ಗಟ್ಟಿಯಾಗಿ, ಲಯಬದ್ಧವಾಗಿ ಹಾಡಿದಾಗ ಓದಿಕೊಂಡಾಗ ಮಾತ್ರ ನನ್ನ ರಚನೆಯ ಉದ್ದೇಶ ಸ್ಪಷ್ಟವಾಗುತ್ತದೆ.''

ನಮ್ಮ ಕನ್ನಡ ಕಾವ್ಯದ ಲಿಖಿತ ಪರಂಪರೆಯನ್ನು ಗಮನಿಸಿದರೆ, ರಾಜರತ್ನಂ ಮತ್ತು ಸಿದ್ಧಲಿಂಗಯ್ಯ – ಇವರಿಬ್ಬರು 'ಕಣ್ಣಿನಿಂದ ಕಿವಿಗೆ ಮಾಡಿದ ಜಂಪ್' ಎದ್ದು ಕಾಣುತ್ತದೆ. ಕಣ್ಣಿನ ವಲಯವನ್ನು ಮೀರಿ ಕಿವಿಯ ವಲಯಕ್ಕೆ ಜಂಪ್ ಮಾಡಿದ ಈ ಬಗೆಯಿಂದಾಗಿ ಕಾವ್ಯಪ್ರಸಾರ ಗಮನಾರ್ಹವಾಗಿ ದ್ವಿಗುಣೀಕರಣಗೊಂಡಿದೆ. ಪಿ. ಕಾಳಿಂಗರಾವ್, ಮೈಸೂರು ಅನಂತಸ್ವಾಮಿ ಅವರ ಹಾಡುಗಾರಿಕೆಯಿಂದ ರಾಜರತ್ನಂ ಪದಗಳಿಗೆ ಲಭ್ಯವಾದ ಸುವಿಸ್ತಾರವಾದ ಹೊಸಬೀಸು ಕನ್ನಡ ಸಂಸ್ಕೃತಿಯ ಹಿರಿಮೆಗೆ ನಿದರ್ಶನವಾಗಿದೆ. ಪ್ರೊ॥ ಕಿ. ರಂ. ನಾಗರಾಜ ಅವರು ತಾನು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗಲೇ ರತ್ನನ ಪದಗಳ ಬಗ್ಗೆ ಕೇಳಿ ತಿಳಿದಿದ್ದೆನೆಂದು ಬರೆದುಕೊಂಡಿದ್ದಾರೆ.

ರತ್ನನ ಕಾವ್ಯದೊಂದಿಗೆ ನನ್ನ ತಲೆಮಾರಿನವರ ಅನುಭವ ಕೂಡ ಬಹುಮಟ್ಟಿಗೆ ಕಿ. ರಂ. ಅವರನ್ನೇ ಹೋಲುತ್ತದೆ. ರಾಜರತ್ನಂ ಪದಗಳಲ್ಲಿರುವ ಈ ಕಾವ್ಯಭಾಷೆಗೆ ಇಂದಿಗೂ ವಿಚಿತ್ರವಾದ ಆಕರ್ಷಣೆಯಿದೆ. ನಾನು ಸೇವೆ ಸಲ್ಲಿಸಿದ ಮಡಿಕೇರಿ, ಕೋಲಾರ, ಗುಬ್ಬಿ , ಚಿಕ್ಕಬಳ್ಳಾಪುರ ಮುಂತಾದ ಗ್ರಾಮಾಂತರ ಪ್ರದೇಶಗಳಲ್ಲಿ ಪಠ್ಯದ ಭಾಗವಾಗಿದ್ದ ರತ್ನನ ಪದಗಳನ್ನು ಹೊಸ-ಹೊಸ ತಲೆಮಾರಿನ ವಿದ್ಯಾರ್ಥಿಗಳೆಲ್ಲ ಖುಷಿಯಿಂದ ಕೇಳಿದ್ದಾರೆ. ಕವಿ ಬೇಂದ್ರೆ, ಕುವೆಂಪು ಅವರ ಶ್ರೇಷ್ಠ ಪದ್ಯಗಳಿಗೆ ತೋರದ ಆಸಕ್ತಿಯನ್ನೂ, ರತ್ನನ ಪದಗಳಲ್ಲಿ ವಿಶೇಷ ಕುತೂಹಲವನ್ನೂ ವಿದ್ಯಾರ್ಥಿಗಳು ತೋರುತ್ತಾ ಬಂದಿದ್ದಾರೆ. ಈ ದೃಷ್ಟಿಯಿಂದ ರತ್ನ ಕನ್ನಡಿಗರ ಚಿತ್ತಚೋರ!

ನರಕಕ್ ಇಳ್ಸಿ ನಾಲ್ಗೆ ಸೀಳ್ಸಿ
ಬಾಯ್ ಒಲಿಸಾಕಿದ್ರೂನೆ –
ಮೂಗ್ನಲ್ ಕನ್ನಡ್ ಪದವಾಡ್ತೀನಿ!
ನನ್ ಮನಸನ್ ನೀ ಕಾಣೆ!

ರತ್ನನ ಕಾವ್ಯಭಾಷೆಯ ಬಗ್ಗೆ ಟಿ. ಎಸ್. ಸತ್ಯನಾಥ್ ಮಾತುಗಳು ಸ್ಮರಣೀಯ: ''ಕೈಲಾಸಂ ಹಾಡುಗಳ ಮಾದರಿಯ ಮೇಲೆ ರೂಪಿಸಿಕೊಂಡರು ಎನಿಸುತ್ತದೆ. ಕೈಲಾಸಂರವರ 'ರಂಗ-ಬಸ್ವಿ'ಯ ಕಲ್ಪನೆಯನ್ನು ಆಧರಿಸಿ ರತ್ನ-ಪುಟ್ನಂಜಿ, ನಾಗ-ಮಲ್ಲಿ ಬಂದಂತೆ ಕಾಣುತ್ತದೆ...''

**ಒಕ್ ನೋಡಿದ್ರೆ ಮಸ್ತಾಗ್ ಅವೆ ಗುಟ್ಟು**

ರಾಜರತ್ನಂ ಪದಗಳ ಕಾವ್ಯವಸ್ತು ಏನು, ಎಂಬುದು ಬಹಳ ಮುಖ್ಯವಾದ ಪ್ರಶ್ನೆ. ಈ ಬಗ್ಗೆ ಟಿ. ಎಸ್. ಸತ್ಯನಾಥ್ ನಡೆಸಿರುವ ಪರಿಶೀಲನೆ ಮತ್ತಷ್ಟು ಚರ್ಚೆಯನ್ನು ಆಹ್ವಾನಿಸುತ್ತದೆ:

''...ರತ್ನ-ಪುಟ್ನಂಜಿ ಮತ್ತು ನಾಗ-ಮಲ್ಲಿಯರ ಜೀವನ ಕೂಡ ಮಧ್ಯಮ ವರ್ಗದ ಜೀವನ ಕ್ರಮದಂತೆ ಚಿತ್ರಣಗೊಂಡಿದೆ. ನಡವಳಿಕೆ, ಯೋಚನಾ ಕ್ರಮಗಳಲ್ಲಿ ಯಾವ ಪಾತ್ರವೂ ತಾನಾಡುವ ಭಾಷೆಯ ವರ್ಗದಂತೆ ವ್ಯವಹರಿಸದೆ ಸುಸಂಸ್ಕೃತ ಮಧ್ಯಮ ವರ್ಗದಂತೆ ನಡೆದುಕೊಳ್ಳುತ್ತದೆ...ದೇವನೂರು ಮಹಾದೇವ ಮತ್ತು ಸಿದ್ಧಲಿಂಗಯ್ಯನವರಂತೆ ತಮ್ಮ ವರ್ಗದವರ ಆಡುನುಡಿಯನ್ನು ಬಳಸಿಕೊಂಡು ತಮ್ಮವರ ನೋವು, ಸಮಸ್ಯೆಗಳನ್ನು ಅಭಿವ್ಯಕ್ತಿಸಿದಂತೆ ರತ್ನ-ನಾಗರ ವರ್ಗದವರ ನೋವು ಸಮಸ್ಯೆಗಳನ್ನು ಅಭಿವ್ಯಕ್ತಿಸಲು ರಾಜರತ್ನಂಗೆ ಸಾಧ್ಯವಾಗುವುದಿಲ್ಲ... ಮಧ್ಯಮ ವರ್ಗದ ನಡವಳಿಕೆ, ಯೋಚನಾ ಕ್ರಮಗಳನ್ನು ಸ್ಪಷ್ಟವಾಗಿ ತೋರುವ ಅವರ ಪಾತ್ರಗಳು ಭಾಷೆ ಮತ್ತು ಹೆಸರುಗಳಲ್ಲಿ ಕೆಳವರ್ಗದವರ ಸೋಗನ್ನು ಹಾಕಿ ನಿಂತಿವೆ ಅಷ್ಟೆ'... (ರತ್ನನ ಪದಗಳು ಕುರಿತು, ಪು. ೩೮-೩೯; ಕ್ರೈಸ್ಟ್ ಕಾಲೇಜ್ ಕನ್ನಡ ಸಂಘದ ಪ್ರಕಟಣೆ.)




ರೂ. 25



ರೂ. 45



ರೂ. 40



ರೂ. 60



ರೂ. 30


ರೂ. 30



ಶ್ರೀ ಸರಸ್ವತಿ ಬುಕ್ಸ್

ನಂ. 342, ಚಿತ್ರಮಾಲ ಅಪಾರ್ಟ್‌ಮೆಂಟ್ಸ್
ಬೈರಸಂದ್ರ, ಜಯನಗರ 1ನೇ ಬ್ಲಾಕ್ ಪೂರ್ವ
ಬೆಂಗಳೂರು – 560 011
ದೂರವಾಣಿ : 22441417, 98458 08500


ರೂ. 40

ದೇವನೂರು ಮತ್ತು ಸಿದ್ಧಲಿಂಗಯ್ಯನವರಂತೆ ರಾಜರತ್ನಂ ಅವರಿಗೆ ಕೆಳವರ್ಗದವರ ನೋವು ಮತ್ತು ಸಮಸ್ಯೆಗಳನ್ನು ಅಭಿವ್ಯಕ್ತಿಸಲು ಸಾಧ್ಯವಾಗಿಲ್ಲವೆಂಬ ಸತ್ಯನಾಥರ ಅಭಿಪ್ರಾಯ ಚರ್ಚಾಸ್ಪದವಾಗಿದೆ. ನೋವು ಮತ್ತು ಸಮಸ್ಯೆಗಳನ್ನೇ ಪ್ರಧಾನವಾಗಿ ಚಿತ್ರಿಸಬೇಕೆಂಬ ಕಾಳಜಿಯನ್ನು ಬಹು ಹಿಂದೆ ಏಂಗೆಲ್ಸ್ ಕೂಡ ವಿರೋಧಿಸಿದ್ದಾರೆ. ಏಂಗೆಲ್ಸ್ ಅವರ ಆ ಸುಪ್ರಸಿದ್ಧ ಪತ್ರಗಳ ಪ್ರಕಾರ ಸಾಹಿತ್ಯ ಕೃತಿಯಲ್ಲಿ ನೋವು-ಸಮಸ್ಯೆಗಳು ವಾಚ್ಯವಾಗಿ ವ್ಯಕ್ತಗೊಳ್ಳಬಾರದು; ಅವು ಒಟ್ಟು ಕ್ರಿಯೆ ಮತ್ತು ಸನ್ನಿವೇಶಗಳಲ್ಲಿ ಅಡಕಗೊಂಡಿರಬೇಕು ಎಂಬ ಪ್ರತಿಪಾದನೆಯಿದೆ. ಈ ದೃಷ್ಟಿಯಿಂದ ಪರಿಶೀಲಿಸಿದರೆ, ರಾಜರತ್ನಂ ಪದಗಳ ಒಟ್ಟು ವಸ್ತು ವಿನ್ಯಾಸದಲ್ಲೆ ಬಡತನ-ಹಸಿವು-ಅವಮಾನಗಳು ಮುಪ್ಪುರಿಯಾಗಿ ಹೆಣೆದುಕೊಂಡಿವೆ. ಆದ್ದರಿಂದ, ಸಮಸ್ಯಾ ಪ್ರಧಾನ ದೃಷ್ಟಿಯಿಂದ ನಡೆಸುವ ಅನ್ವೇಷಣೆಯ ವಿಮರ್ಶೆಗಿಂತಲೂ, ಇರುವುದನ್ನು ಅನಾವರಣಗೊಳಿಸುವ, ಸಹಸ್ಪಂದನದ ವಿಮರ್ಶೆ ಹೆಚ್ಚು ಉಪಯುಕ್ತವಾಗುತ್ತದೆ. ನಾವೇ ಹುಟ್ಟಿಸಿಕೊಳ್ಳಬೇಕಾದ 'ನಮ್ದೆ ಒಂದು ಲೋಕ' ಅಥವಾ 'ರತ್ನನ್ ಪರ್ಪಂಚ' ಎಂತಹುದೆಂಬುದನ್ನು ಬೆಳಿಗ್ಗೆ ಜಿ. ಎಸ್. ಶಿವರುದ್ರಪ್ಪ ತಿಳಿಸಿದ್ದಾರೆ. ಇಂದಿನ ಜಾಗತೀಕರಣದ ಆಕ್ರಮಣದಲ್ಲಿ ದುರಾಸೆಗೆ ಬಲಿಯಾಗದೆ, ಅಲ್ಪತೃಪ್ತಿಯಿಂದ ಕೂಡಿದ ಸರಳವಾದ ಬದುಕಿನ ಆದರ್ಶವನ್ನು ಬಿಂಬಿಸುವ 'ರತ್ನನ್ ಪರ್ಪಂಚ' ಬಹುಮುಖ್ಯವೆಂದು ಜಿ.ಎಸ್.ಎಸ್. ಹೇಳಿದ್ದು ಸರಿಯಾಗಿದೆ.

ವರಕವಿ ದ. ರಾ. ಬೇಂದ್ರೆಯವರು ಹೇಳಿರುವಂತೆ, ಬಡತನವು ಸಾಹಿತ್ಯದ ಸಾರ್ವಭೌಮ ವಸ್ತುವಾಗಿದೆ. ಈ ಮಾತು ರಾಜರತ್ನಂ ಪದಗಳಿಗೆ ಸಂಪೂರ್ಣವಾಗಿ ಅನ್ವಯಿಸುತ್ತದೆ. ದೊಡ್ಡೋರು - ಚಿಕ್ಕವ್ರು ಎಂಬ ಅಂತರ, ಕುಡ್ಕರ ಬಗ್ಗೆ ತೋರುವ ತಿರಸ್ಕಾರ, ಕುಡಿತಕ್ಕೆ ಕಾಸಿಲ್ಲದ ಪರದಾಟ, ಕುಡಿಯುವುದಕ್ಕಾಗಿ ಪಡುವ ಫಜೀತಿ, ಕುಡ್ಕರ ನುಡಿಗಳ ಬಗ್ಗೆ ಅನಾದರ, ಕುಡ್ಕರ ಮಾತುಗಳಲ್ಲಿರುವ ಅಪೂರ್ವ ಕಾಣ್ಕೆ – ಮುಂತಾದವುಗಳನ್ನೊಳಗೊಂಡಿರುವ ರಾಜರತ್ನಂ ಪದಗಳು ಒಳಹೊಕ್ಕು ನೋಡಿದವರಿಗೆ ಗುಟ್ಟುಗಳನ್ನು ಬಿಟ್ಟುಕೊಡುವ ರಚನೆಗಳಾಗಿವೆ. ಉದಾಹರಣೆಗೆ, ಅಷ್ಟೇನೂ ಪ್ರಸಿದ್ಧವಲ್ಲದ 'ಜೋಗಿನ್ ಜಲಪಾತ' ಎಂಬ ಕವಿತೆಯನ್ನು ನೋಡಿ: ರಾಜಾ-ರಾಣಿ-ರೋರರ್-ರಾಕೆಟ್ ಎಂಬ ಜಲಪಾತದ ನಾಲ್ಕು ಧಾರೆಗಳನ್ನು ವರ್ಣಿಸುತ್ತಿರುವ ಈ ಕವಿತೆ ಬಡತನವು ಸಾಹಿತ್ಯದ ಸಾರ್ವಭೌಮ ವಸ್ತು ಎಂಬುದಕ್ಕೆ ನಿದರ್ಶನ. ನಷ್ಟಕ್ಕೆ ಸಿಕ್ಕಿ ನರಳುವವನಿಗೆ ಮೇಲಿಂದ ಮೇಲೆ ಕಷ್ಟ ಬರುವಂತೆ, ಒದ್ಕೊಂಡು ಬಂದು ಬಿಡಿಯುತ್ತಿರುವ 'ರಾಜ' ಜಲಧಾರೆ ದುಮ್ಮಿಕ್ಕುತ್ತಿದೆ. ದುಡ್ಡು ಇಲ್ಲದವರನ್ನು ಗದರಿಸಿ ಓಡಿಸುವಂತೆ 'ರೋರರ್' ಜಲಧಾರೆ ಗರ್ಜಿಸುತ್ತಿದೆ. ಬಡವರನ್ನು ಮುಕ್ಕುತ್ತಿರುವ ಸಾವಿರ ಸಂಕಟ ಜಾಗ ಸಾಲದೆ ಒಳಗೆ ಉಕ್ಕಿ ಬರುವಂತೆ ಎದ್ದು ಬರುತ್ತಿರುವ 'ರಾಕೆಟ್' ಜಲಧಾರೆ ಕೆಳಗುರುಳಿ ಬೀಳುತ್ತಿದೆ. ಬಡವರನ್ನು ತಿನ್ನುವ ಸಿರಿವಂತಿಕೆಯಮ್ಮ ಬಳುಕುತ್ತಾ ಬಂದಂತೆ, ಜಾರುತ್ತಾ ತೇಲುತ್ತಾ ಬರುತ್ತಿರುವ 'ಲೇಡಿ' ಜಲಧಾರೆ ಮೈಮನಗಳನ್ನು ಜುಂ ಜುಂ ಮಾಡುತ್ತಿದೆ. ಬಡವರ ಬಾಯಿಗಳಿಗೆ ಬೀಗ ಹಾಕಿ ಮೇಲೆ ಬಣ್ಣ ಬಳಿದಂಗೆ ಜಲಪಾತದ ಮೇಲೆ ಕಾಮನಬಿಲ್ಲು ಮೂಡಿ ರಂಗುರಂಗಾಗಿದೆ. ಒಟ್ಟಿನಲ್ಲಿ ಬಡವರ ಬದುಕು ಎದ್ದು ಬಂದಂತೆ 'ಜೋಗದ ಜಲಪಾತ' ಕಣ್ಣಿಗೆ ಕಾಣುತ್ತಿದೆ – ಎಂಬ ಒಟ್ಟು ವರ್ಣನೆ ತುಂಬ ಅಪೂರ್ವವಾಗಿದೆ. ನಿಸರ್ಗದ ದೈವಿಕ ಆರಾಧನೆಯನ್ನು ಮೀರಿದಂತೆ ಪ್ರಕಟಗೊಂಡಿರುವ ಈ ಬಗೆಯ 'ನಿಸರ್ಗದ ಸಾಮಾಜಿಕೀಕರಣ' (= ೧೯೩೦ರಲ್ಲಿ ಮಾತ್ರವಲ್ಲ!) ಇಂದಿಗೂ ನಿತ್ಯನೂತನವಾಗಿದೆ.




ಕಾವ್ಯದ ಮೌಲ್ಯಮಾಪನಕ್ಕೆ ಸಂಬಂಧಪಟ್ಟಂತೆ ಜಿ. ಪಿ. ರಾಜರತ್ನಂ ಅವರ 'ನಾಗಮುತ್ತು' ಎಂಬ ಕವನ, ಕುವೆಂಪು ಅವರ 'ಪಕ್ಷಿಕಾಶಿ' ಮತ್ತು ಎ. ಕೆ. ರಾಮಾನುಜನ್ ಅವರ 'ಅಂಗುಲ ಹುಳುವಿನ ಪರಕಾಯ ಪ್ರವೇಶ' – ಈ ಮೂರನ್ನು ತೌಲನಿಕವಾಗಿ ಪರಿಶೀಲಿಸಿದರೆ ಬಹುರೂಪಾತ್ಮಕ ಒಳನೋಟಗಳು ಸಿಗುತ್ತವೆ. ಆದ್ದರಿಂದ, ಕಣ್ಣಿನಿಂದ ಕಿವಿಗೆ ಜಂಪ್ ಆದ 'ಜನಪ್ರಿಯ' ಕವಿತೆಗಳನ್ನಷ್ಟೇ ಗಮನಿಸಿ ಮಾತನಾಡದೆ, ಇನ್ನೂ ಕಣ್ಣಿನಲ್ಲೆ ಕೆರೆಯುತ್ತಿರುವ ಅಪ್ರಸಿದ್ಧ ಕವಿತೆಗಳನ್ನು ಆಧರಿಸಿ ವಿಮರ್ಶೆಯ ಕಾರ್ಯ ಸಾಗಬೇಕಿದೆ.

**ದೇವ್ರಿಗೆ ದೇವ್ರೆ ! ನಮಗೆ ನಾವೇ !**

ಬುದ್ಧ ದರ್ಶನವನ್ನು ಬಿಂಬಿಸುತ್ತಿರುವ ಈ ನುಡಿಮುತ್ತು ರಾಜರತ್ನಂ ಪದಗಳಲ್ಲಿ ಇರುವ 'ಯಿಸ್ನಾಮಿತ್ರ ರತ್ನ'ದಿಂದ ಆಯ್ದ ಸಾಲು. ಮನುಷ್ಯರ ಪೂಜೆ-ಪ್ರಾರ್ಥನೆ-ಪ್ರದಕ್ಷಿಣೆ ಮುಂತಾದ ಆಚರಣೆಯ ಕರ್ಮಕಾಂಡಕ್ಕೆ ಕಿಂಚಿತ್ತೂ ಸ್ಪಂದಿಸದ ದೇವರು ಬೌದ್ಧ ಮತ್ತು ಜೈನ ಧರ್ಮದ ತಿರುಳು ಎನ್ನಬಹುದು. ರಾಜರತ್ನಂ ಅವರಿಗೆ ಇದರ ಅರಿವು ಸ್ಪಷ್ಟವಾಗಿದ್ದುದರಿಂದಲೇ ''ದೇವ್ರಿಗೆ ದೇವ್ರೆ ! ನಮಗೆ ನಾವೇ !'' – ಎಂದು ಹೇಳಲು ಸಾಧ್ಯವಾಗಿದೆ. 'ಈ ಸವಾಲ್ಗ್ ಏನ್ ಏಳ್ತೀರಣ್ಣ?' – ಎಂಬ ಕವಿತೆಯಿಂದ ಆಯ್ದು ಸಾಲುಗಳಿವು:

*ಯೆಂಡ್ದಂಗ್ಡೀಗ್ ಕುಡಿಯೋರ್ ಓಗೋವಂಗ್ ಓಯ್ತಾರ*
*ಗಂಡಸ್ರು ದೇಸ್ತಾನಗಳ್ಗೆ !*
*ದೇವ್ರ್ ಅವ್ರಿಗ್ ಇತ್ತಂದ್ರೆ ಗುಡೀಲಿ - ನಮ್ಗೇನು ?*
*ನಾವು ಕುಡಿಯೋ ಯೆಂಡಾನೆ ದೇವ್ರು*

*ಗುಡಿಯಾಗ್ ಪೂಜಾರಿ ಕಸ್ಗೋತ್ತಾನ್ ಆರ್ಕಾಸ*
*ಪಡಖಾನೆ ಮುನಿಯಪ್ಪನಂಗೆ !*
*ದೇವರ್ನ ಕಂಡವ್ರು ಸುಕಪಡೋ ಮಾದ್ರೀಲಿ*
*ನಾವೂನೆ ಸುಕಪಡ್ತೀವ್ ಕುಡ್ದು !*

*ನಂ ನೋಡಿ ನೆಗ್ತಾರೆ ! ಬಕ್ತರ್ಗೆ ಬೊಗ್ತಾರೆ !*
*ಯತ್ವಾಸ ಏನ್ ನಮ್ಗು ಔರ್ಗು ?*

ಬೌದ್ಧ ಸಾಹಿತ್ಯದ ಬಗ್ಗೆ ವಿಶೇಷವಾದ ಅಧ್ಯಯನ ನಡೆಸಿ ಪ್ರಖರವಾದ ವೈಚಾರಿಕತೆಯನ್ನು ರಾಜರತ್ನಂ ಗಳಿಸಿದ್ದರು ಎಂಬುದಕ್ಕೆ ಮೇಲಿನ ನುಡಿ ಮಾಲಿಕೆಗಳು ಸ್ಪಷ್ಟ ನಿದರ್ಶನವಾಗಿವೆ. ಕುವೆಂಪು ಅವರ 'ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ' ಎಂಬ ಲೇಖನ ಮತ್ತು ಶಿವರಾಮ ಕಾರಂತರ 'ನಮ್ಮ ಅಳತೆಯನ್ನು ಮೀರಲಾರದ ದೇವರು' ಎಂಬ ಲೇಖನಗಳ ಜೊತೆಗಿಟ್ಟು ವಿವೇಚಿಸಬೇಕಾದ ನೆಲೆಯನ್ನು ರಾಜರತ್ನಂ ಅವರಿಬ್ಬರಿಗಿಂತಲೂ ಮುಂಚೆಯೇ ೧೯೩೦ರಲ್ಲೆ ಹೊಂದಿದ್ದಾರೆಂಬುದು ಗಮನಾರ್ಹ. ಆದರೆ, ಇಂಥ ನಿರ್ಣಯ ಶಕ್ತಿಯನ್ನು ಉರುಳಿಸುವ ಅದ್ಯಾವ 'ದುಗುಡ' ರಾಜರತ್ನಂ ಅವರನ್ನು ಆಕ್ರಮಿಸಿಕೊಂಡಿತೋ ತಿಳಿಯದು ! ರಾಜರತ್ನಂ ಅವರ ಕೊನೆಯ ದಿನಗಳು ಎಚ್. ಎಸ್. ರಾಘವೇಂದ್ರರಾವ್ ಅವರು ಆಶಯಭಾಷಣದಲ್ಲಿ ಹೇಳಿದಂತೆ ಧರ್ಮ ಗ್ರಹಣಕ್ಕೆ ಒಳಗಾದದ್ದು ವಿಪರ್ಯಾಸವಾಗಿದೆ:

*ರತ್ನನ್ ಪದಗೊಳ್ ನಾಗನ್ ಪದಗೊಳ್ ಕೇಳ್ತಾ ಇದ್ರೆ*
*ನಡೆ ನುಡಿ ಎಲ್ಲಕ್ಕೂ ಉಲ್ಟವೊಡೆವ ತಲಕಿಂದ್ಲಾಟ !*
*ಇದ್ನ್ ಬರೆದವ್ರು ಸಾಯಿಬಾಬಂಗ್ ಅಡ್ಡಬಿದ್ದಿದ್ ನೋಡ್ದ್ರೆ*
*ಕುಡುದ್ಬುಟ್ಟು ಮೋರಿಗ್ ಮೋಚ್ಕೊಂಡ್ ಸೂರ್ಯಪ್ನ್ ಮಾಟ !*

ಕುವೆಂಪು-ಕಾರಂತರ ಬದಲಾಗದ ತತ್ವ ನಿಷ್ಠೆಯ ಸೂರ್ಯನೆದುರು ರಾಜರತ್ನಂ-ಗೋಕಾಕರು ಮಂಜಿನಂತೆ ಕರಗಿ ಹೋಗಿರುವುದಕ್ಕೆ ಇನ್ನಾವುದೇ ವಿವರಣೆ ಬೇಕಿಲ್ಲ.

ಎ. ಚಂದ್ರಶೇಖರ ನಂಗಲಿ
೧೬. ಶ್ರೀ ಗೌರಿ, ಸೆಕೆಂಡ್ ಕ್ರಾಸ್, ಕನಕ ನಗರ, ಹೊಸಕೋಟೆ – ೫೬೨೧೧೪

*(ಜಿ. ಪಿ. ರಾಜರತ್ನಂ ಜನ್ಮ ಶತಮಾನೋತ್ಸವದ ಪ್ರಯುಕ್ತ ದಿನಾಂಕ: ೫.೯.೨೦೦೮ರಂದು ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಸೆನೆಟ್ ಹಾಲಿನಲ್ಲಿ ನಡೆದ ಮೊದಲನೆಯ ಗೋಷ್ಠಿಯಲ್ಲಿ 'ರಾಜರತ್ನಂ ಕಾವ್ಯ'ದ ಬಗ್ಗೆ ಮಾಡಿದ ಭಾಷಣವನ್ನು ಆಧರಿಸಿ ಬರೆದ ಲೇಖನ.) (ವ್ಯವಸ್ಥೆ: ಕೇಂದ್ರ ಸಾಹಿತ್ಯ ಅಕಾಡೆಮಿ, ಪ್ರಾದೇಶಿಕ ಕಚೇರಿ, ಸೆಂಟ್ರಲ್ ಕಾಲೇಜು ಆವರಣ.)*




## ನಭಾವಲೋಕನ

ಪ್ರತಿ ವರ್ಷದಂತೆ ಈ ವರ್ಷವೂ ವಿಶೇಷವೇ. ಖಗೋಳ ವಿಜ್ಞಾನದ ವರ್ಷ ಎಂಬ ಕಾರಣಕ್ಕೆ ದುರ್ಬೀನು, ದೂರದರ್ಶಕಗಳನ್ನು ಈಚೆಗೆ ತೆಗೆದು ದೂಳು ಒರೆಸಿಟ್ಟದ್ದುದೇ ಆದರೆ ಅದನ್ನು ಬಳಸಲು ಅನೇಕ ಸಂದರ್ಭಗಳಿವೆ. ಜನವರಿಯ ಆರಂಭದಲ್ಲೇ ಸಂಜೆ ಬುಧ ಮತ್ತು ಶುಕ್ರ ಪ್ರಕಾಶಮಾನವಾಗಿ ಕಂಗೊಳಿಸುವುವು. ಬುಧಗ್ರಹವನ್ನು ನೋಡಲು ಒಳ್ಳೆಯ ಅವಕಾಶ. ೨೬ರಂದು ಕಂಕಣ ಸೂರ್ಯಗ್ರಹಣವಿದೆ. ಬೆಂಗಳೂರು, ಚೆನ್ನೈ, ಹೈದರಾಬಾದ್‌ಗಳಿಂದ ಮಧ್ಯಾಹ್ನ ಸೂರ್ಯಬಿಂಬದ ಅಂಚನ್ನು ಸವರಿಕೊಂಡು ಹೋದಂತೆ ಚಂದ್ರ ಸಾಗುವುದು. ದೂರದರ್ಶಕದಿಂದ ಸೂರ್ಯಬಿಂಬವನ್ನು ತೆರೆಯ ಮೇಲೆ ಮೂಡಿಸಲು ಪ್ರಯತ್ನ ಮಾಡಲು ಇದು ಒಳ್ಳೆಯ ಅವಕಾಶ. ಇದಾದ ಹದಿನೈದು ದಿನಕ್ಕೆ ಚಂದ್ರಗ್ರಹಣವಿದೆ. ಚಂದ್ರ ಭೂಮಿಯ ನೆರಳಿನ ಕೇಂದ್ರದ ದಟ್ಟ ಭಾಗವನ್ನು ದಾಟದೇ ಹೊರವಲಯವನ್ನು ಮಾತ್ರ ಸವರಿಹೋಗುವ ಈ ಗ್ರಹಣವನ್ನು ಬರಿಗಣ್ಣಿಂದ ಗುರುತಿಸುವುದೂ ಒಂದು ಸವಾಲೇ ಎನ್ನಬಹುದು. ಅಷ್ಟು ಹೊತ್ತಿಗೆ ಬೆಳಗಿನ ಜಾವಕ್ಕೆ ಸರಿಯುವ ಬುಧ ಪುನಃ ಗರಿಷ್ಠ ಎತ್ತರದಲ್ಲಿ ಬೆಳಗುತ್ತದೆ. ಗುರುಗ್ರಹದ ಜೊತೆಗೂಡುತ್ತದೆ. ಶುಕ್ರ-ಚಂದ್ರ ಒಳ್ಳೆಯ ನೋಟ ಒದಗಿಸುತ್ತವೆ. ಮಾರ್ಚ್‌ನಲ್ಲಿ ಶುಕ್ರ, ಬುಧ ಎರಡೂ ಸೂರ್ಯನ ನೇರಕ್ಕೆ ಬರುವುದರಿಂದ ಕಾಣದಾಗುತ್ತವೆ. ಶನಿಗ್ರಹ ಗರಿಷ್ಠ ಪ್ರಕಾಶದಿಂದ ಬೆಳಗುವ ಅವಕಾಶ ಉಪಯೋಗಿಸಿಕೊಂಡು ಉಂಗುರಗಳನ್ನು ಗುರುತಿಸಲು ಪ್ರಯತ್ನಿಸಿ. ಕಾಣುವುದಿಲ್ಲ. ಏಕೆಂದರೆ ನಮ್ಮ ಕಣ್ನೋಟಕ್ಕೆ ಸರಿಸುಮಾರು ನೇರವಾಗಿಯೇ ಇರುವುದರಿಂದ ಕಳೆದುಹೋದಂತೆ ಕಾಣುತ್ತವೆ.

ಛಾಯಾಗ್ರಹಣಕ್ಕೆ ಉತ್ತಮ ಅವಕಾಶ ಸಿಗುವುದು ಏಪ್ರಿಲ್ ೬ರ ಸಂಜೆ. ತೆಳ್ಳನೆಯ ರೇಖಾಚಂದ್ರವನ್ನು ಹುಡುಕಿ ಪತ್ತೆಮಾಡಿ. ಅದರ ಪಕ್ಕದಲ್ಲೇ ಬುಧಗ್ರಹ ಕಾಣುತ್ತದೆ.

ಮೇ ತಿಂಗಳ ಬೆಳಗಿನ ಜಾವ ಶುಕ್ರ, ಬುಧ, ಗುರು ಕಾಣುತ್ತವೆ. ಡಿಸೆಂಬರ್ ೧ರ ಸಂಜೆ ಹಸನ್ಮುಖವೊಂದು ಕಂಡಿದ್ದು ನೆನಪಿದೆಯೇ? ಅಂತಹ ಅವಕಾಶ ಮೇ ೨೧ರ ಬೆಳಿಗ್ಗೆ ಪುನಃ ದೊರಕುತ್ತದೆ. ಮಂಗಳ, ಶುಕ್ರ ರೇಖಾ ಚಂದ್ರನೊಡನೆ ಸೇರಿ ಈ ಅವಕಾಶ ಮಾಡಿಕೊಡುತ್ತವೆ. ಜುಲೈನ ವಿಶೇಷವೆಂದರೆ ಪೂರ್ಣ ಗ್ರಹಣ. ಭಾರತದ ಪಶ್ಚಿಮದ ಅಂಚಿನಲ್ಲಿ ಆರಂಭವಾಗುತ್ತದೆ. ಸೂರತ್‌ನಲ್ಲಿ ಪೂರ್ಣಗ್ರಹಣವಾಗುವುದು ಸೂರ್ಯೋದಯದಲ್ಲಿ. ಕಪ್ಪು ಸೂರ್ಯನ ಉದಯ ಎಂತಹ ಅದ್ಭುತ ದೃಶ್ಯವಾಗಬಹುದು ಅಲ್ಲವೇ? ಬರೋಡಾ, ಪಾಟ್ನಾ, ವಾರಾಣಸಿ ಈ ನಗರಗಳಿಂದಲೂ ಪೂರ್ಣ ಗ್ರಹಣ ಕಾಣುತ್ತದೆ. ಸೂರ್ಯೋದಯವಾಗುವಾಗ ಅರ್ಧ ಚಂದ್ರದ ಆಕಾರ; ಅರ್ಧಮುಕ್ಕಾಲು ಗಂಟೆಯೊಳಗಾಗಿ ಪೂರ್ಣಕತ್ತಲು - ಪುನಃ ಬೆಳಕು. ಈ ಅನುಭವ ಅದ್ಭುತ ಅಲ್ಲವೇ? ಪೂರ್ಣತೆಯ ಅವಧಿ ನಗರಗಳಲ್ಲಿ ೩೦-೪೦ ಸೆಕೆಂಡುಗಳು ಮಾತ್ರ. ಆದರೆ ಮುಂದೆ ನಡುನೆತ್ತಿಯಲ್ಲಿ ಪೂರ್ಣ ಗ್ರಹಣವಾಗುವುದು ಚೀನಾದ ಷಾಂಗ್‌ಹೈನಲ್ಲಿ. ಸುಮಾರು ೬ ನಿಮಿಷಗಳಷ್ಟು ದೀರ್ಘ ಅವಧಿಯ ಕತ್ತಲು ಮಟಮಟ ಮಧ್ಯಾಹ್ನದಲ್ಲಿ! ಭಾರತದಲ್ಲಿ ಆಗ ಮಾನ್‌ಸೂನ್ ಹಾವಳಿ ಎಂಬುದೇನೋ ನಿಜ. ಆದರೂ ಕತ್ತಲೆಯ ಅನುಭವವಂತೂ ಖಂಡಿತಾ ಉಂಟಾಗುತ್ತದೆ. ಈ ಅನುಭವವನ್ನು ಆಸ್ವಾದಿಸಲು ಈಗಲೇ ಪ್ರಯಾಣಕ್ಕೆ ಸಿದ್ಧತೆ ಮಾಡಿಕೊಳ್ಳಿ. ಈ ಗ್ರಹಣದ ಹಿಂದಿನ ಮತ್ತು ಮುಂದಿನ ಹುಣ್ಣಿಮೆಗಳಲ್ಲಿ ಚಂದ್ರಗ್ರಹಣವಿದೆ. ಆದರೆ ಗ್ರಹಣ ಎಂದು ಪತ್ತೆಹಚ್ಚುವುದೇ ಸವಾಲು!

ಆಗಸ್ಟ್ ತಿಂಗಳುದ್ದಕ್ಕೂ ರಾಜನೆಂಬಂತೆ ಬೆಳಗುವ ಗ್ರಹ ಗುರು. ಅದರ ಉಪಗ್ರಹಗಳನ್ನು ಗುರುತಿಸಲು ಇದು ಒಳ್ಳೆಯ ಅವಕಾಶ. ವರ್ಷದ ಕೊನೆಗೆ ಮತ್ತೊಂದು ಚಂದ್ರಗ್ರಹಣ.

ಈ ವರ್ಷ ಲಿಯೋನಿಡ್ಸ್ ಉಲ್ಕಾವೃಷ್ಟಿ ಜೋರಿರಬೇಕು ಎಂದು ನಿರೀಕ್ಷೆ. ಕಾದು ನೋಡೋಣ.

**ಜನವರಿ ತಿಂಗಳ ವಿಶೇಷಗಳು**

೨ ಕ್ವಾಡ್ರಾಂಟೆಡ್ಸ್ ಉಲ್ಕಾವೃಷ್ಟಿ
೪ ಬುಧಗ್ರಹದ ಗರಿಷ್ಠ ಕೋನೋನ್ನತಿ
ಚಾಂದ್ರಮಾಸದ ಮೊದಲ ಪಾದ
೧೦ ಚಂದ್ರ-ಭೂಮಿ ದೂರ ಕನಿಷ್ಠ
೧೧ ಹುಣ್ಣಿಮೆ ೦೮:೫೭ಕ್ಕೆ
೧೪ ಶುಕ್ರಗ್ರಹದ ಗರಿಷ್ಠ ಕೋನೋನ್ನತಿ
೧೫ ಶನಿ-ಚಂದ್ರ ಜೋಡಿ
೧೮ ಚಾಂದ್ರಮಾಸದ ಕೊನೆಯ ಪಾದ
೨೦ ಬುಧಗ್ರಹದ ಯುತಿ
೨೧ ಚಂದ್ರ-ಜ್ಯೇಷ್ಠಾ ಜೋಡಿ
೨೩ ಚಂದ್ರ-ಭೂಮಿ ನಡುವೆ ಗರಿಷ್ಠ ದೂರ
೨೪ ಗುರುಗ್ರಹದ ಯುತಿ
೨೫ ಮಂಗಳ ಚಂದ್ರ ಜೋಡಿ
೨೬ ಕಂಕಣ ಸೂರ್ಯಗ್ರಹಣ ಅಮಾವಾಸ್ಯೆ ೧೩:೨೫ಕ್ಕೆ
(ದಕ್ಷಿಣ ಭಾರತಕ್ಕೆ ಪಾರ್ಶ್ವಗ್ರಹಣ ಮಾತ್ರ ಗೋಚರ)
ಗುರು, ಬುಧ, ಸೂರ್ಯ ಸಮಾಗಮ
೩೦ ಚಂದ್ರ - ಶುಕ್ರ ಜೋಡಿ

೩೦ ಜನವರಿ ಸಂಜೆ ಪಶ್ಚಿಮದ ನೋಟ; ಚಂದ್ರ ಮತ್ತು ಶುಕ್ರ

**೨೬ರ ಸೂರ್ಯ ಗ್ರಹಣದ ವಿವರಗಳು**

ದಕ್ಷಿಣ ಭಾರತಕ್ಕೆ ಮಾತ್ರ ಕಾಣುತ್ತದೆ. ಪಣಜಿ, ಬೆಳಗಾಂ ಈ ಭಾಗಕ್ಕೆ ಇಲ್ಲ. ಶೇಕಡಾ ೧೦ ಭಾಗ ಮಾತ್ರ ಮರೆಯಾಗುತ್ತದೆ.

| | ಆರಂಭ | ಮುಕ್ತಾಯ |
|---|---|---|
| ಬೆಂಗಳೂರು | ೧೪.೩೩ | ೧೫.೫೬ |
| ಮೈಸೂರು | ೧೪.೩೧ | ೧೫.೫೫ |
| ಮಂಗಳೂರು | ೧೪.೪೦ | ೧೫.೪೫ |
| ಚೆನ್ನೈ | ೧೪.೨೯ | ೧೬.೦೫ |
| ಹೈದರಾಬಾದ್ | ೧೫.೦೨ | ೧೫.೪೦ |

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

# ಶ್ರೀ ಸದಾಶಿವ ಯೋಗ ಪ್ರತಿಷ್ಠಾನ, ಭಾರತ (ರಿ)

ಶ್ರೀ ಶಿವಾನಂದ ಯೋಗಾಶ್ರಮ, ಹಂಪಿ-583 239, ಹೊಸಪೇಟೆ ತಾ||, ಬಳ್ಳಾರಿ ಜಿಲ್ಲೆ

ಕಳೆದ ಹಲವು ವರ್ಷಗಳಿಂದ ಆಧ್ಯಾತ್ಮಿಕತೆಯ ವೈಜ್ಞಾನಿಕ ಹಿನ್ನೆಲೆಯನ್ನು ತರ್ಕಬದ್ಧವಾಗಿ ವಿಶ್ಲೇಷಣೆ ಮಾಡುತ್ತ ಬಂದಿರುವ ಶ್ರೀ ಸದಾಶಿವಯೋಗಿಗಳು ಮೂಢ ನಂಬಿಕೆಗಳ ವಿರುದ್ಧ ಅವಿರತ ಹೋರಾಟದಲ್ಲಿ ತೊಡಗಿಕೊಂಡಿದ್ದಾರೆ. ಹಂಪೆಯಲ್ಲಿ ನೆಲೆಸಿರುವ ಇವರು ಹೋಮಿಯೋ ವೈದ್ಯರಾಗಿ ಜನಸಾಮಾನ್ಯರಿಗೆ ನೆರವಾಗುತ್ತಿದ್ದಾರೆ. 'ಸದಾಶಿವ ಸೂತ್ರಗಳು ಎಂಬ ಹೆಸರಿನಲ್ಲಿ ತಮ್ಮ ವಿಚಾರಗಳನ್ನು ಪ್ರಸ್ತುತ ಪಡಿಸುತ್ತಾರೆ. ಹಲವು ಗ್ರಂಥಗಳನ್ನು ರಚಿಸಿದ್ದಾರೆ.



ಶ್ರೀ ಸದಾಶಿವ ಯೋಗಿಗಳು
ಸಂಸ್ಥಾಪಕ ಅಧ್ಯಕ್ಷರು

## ಕೆಲವು ಸದಾಶಿವ ಸೂತ್ರಗಳು ('ಯೋಚಿಸಿನೋಡಿ' ಪುಸ್ತಕದಿಂದ ಆಯ್ದ ಭಾಗಗಳು)

1. ವಿಧಾತ (ಬ್ರಹ್ಮ)ನೆಂಬ ಅಗೋಚರ ಶಕ್ತಿ ಯಾರ ಹಣೆಯಲ್ಲೂ ಏನೂ ಬರೆದು ಕಳಿಸಿಲ್ಲ. 'ವಿಧಿ', 'ಹಣೆಬರಹ' - ಮುಂತಾದ ವಿಚಾರಗಳು ಬುದ್ಧಿಹೀನ ಸೋಮಾರಿಗಳ ಕಲ್ಪನೆ. 'ವಿಧಿ'ಯನ್ನು ಮೆಟ್ಟಿನಿಂತ ಮನುಜನು ಜಾಣನಾಗುತ್ತಾನೆ.
2. ತನ್ನ ದೇಹದ ರಕ್ಷಣೆಯ ಕಡೆಗೆ ಗಮನಹರಿಸಬೇಕಾದ್ದು ಪ್ರತಿಯೊಬ್ಬ ವ್ಯಕ್ತಿಯ ಆದ್ಯ ಕರ್ತವ್ಯ. ಹೀಗಿರುತ್ತ, ದೇಹ ಪೋಷಣೆಗೆ ಅತ್ಯವಶ್ಯವಾದ ವಸ್ತುಗಳನ್ನು ವರ್ಜಿಸಬೇಕು ಎನ್ನುವುದು ಅಜ್ಞಾನವಾಗುತ್ತದೆ. ಹೊಳೆದಾಟುವುದಕ್ಕೆ ದೋಣಿ ಅಗತ್ಯವಿರುವಂತೆ, ದೇಹದೊಳಗಿನ ಮರ್ಮ ತಿಳಿಯಲು ಸದೃಢ ದೇಹ ಅವಶ್ಯಕ.
3. ಮನುಜನು ತನ್ನ ಬದುಕಿನ ಮೂಲ ಬಯಕೆಯೇ ಆದ ಸುಖ ಶಾಂತಿಯನ್ನು ಪ್ರತಿನಿತ್ಯ ಅನೇಕ ವಿಧಗಳಿಂದ ಹೊಂದುತ್ತಲೇ ಇದ್ದಾನೆ; ಆದರೂ, ಆ ತನ್ಮಯ ಸ್ಥಿತಿಯಲ್ಲಿಯೇ ಉಳಿಯಲು ಇಷ್ಟಪಡುತ್ತಿಲ್ಲ. ಇದು ಆತನ ದೌರ್ಭಾಗ್ಯವೇ ಆಗಿರುತ್ತದೆ.
4. ಅನುಕೂಲಗಳನ್ನು ಹೆಚ್ಚಿಸಿಕೊಳ್ಳಲು ಹೆಣಗಾಡುವುದೇ ಮುಂದಿನ ಆಪತ್ತುಗಳಿಗೆ ಆಹ್ವಾನವಿತ್ತಂತೆ. ಕಷ್ಟದಲ್ಲಿ ಸುಖವನ್ನು ಹುಡುಕಬೇಕೇ ವಿನಾ ಸುಖದಲ್ಲಿ ಅತಿ ಸುಖ ಹುಡುಕುವ ಬಯಕೆಯಲ್ಲಿ ಇದ್ದ ಸುಖವನ್ನು ಕಳೆದುಕೊಂಡು ತಾಪತ್ರಯಗಳಿಗೆ ಒಳಗಾಗಬಾರದು.
5. ನುಡಿದಂತೆ ನಡೆಯಲು ಛಲ ಹಾಗೂ ದೃಢತೆ ಬೇಕಾಗುತ್ತದೆ. ನಡೆದಂತೆ ನುಡಿಯಲು ಆತ್ಮಸ್ಥೈರ್ಯ, ನೈತಿಕಬಲ, ಸತ್ಯಶೀಲತೆ ಬೇಕು. ನುಡಿದಂತೆ ನಡೆದು, ನಡೆದಂತೆ ನುಡಿದಾತನೇ ಸಂತ.



ರೂ. 115



ರೂ. 80

**ಶ್ರೀ ಸದಾಶಿವ ಯೋಗಿಯವರು ರಚಿಸಿರುವ ಗ್ರಂಥಗಳು**






ರೂ. 100



ರೂ. 35



ರೂ. 95



ರೂ. 30



ರೂ. 70




ರೂ. 120

**ಶ್ರೀ ಸದಾಶಿವ ಯೋಗ ಪ್ರತಿಷ್ಠಾನ, ಭಾರತ (ರಿ) ಸಂಸ್ಥೆಗೆ ನೀಡುವ ದೇಣಿಗೆಗೆ 'ಸೆಕ್ಷನ್ 80ಜಿ' ಅನ್ವಯ ಆದಾಯ ತೆರಿಗೆ ವಿನಾಯಿತಿ ಇದೆ.**

# ನ್ಯಾನೊ ತಂತ್ರಜ್ಞಾನ

ಪ್ರೊ॥ ಜೆ. ಆರ್. ಲಕ್ಷ್ಮಣರಾವ್

ನಮ್ಮ ಸುತ್ತಮುತ್ತ ಕಾಣಬರುವ ಚೇತನ ಹಾಗು ಅಚೇತನ ವಸ್ತು ಪ್ರಪಂಚದ ಬಗ್ಗೆ ನಂಬಲರ್ಹವಾದ ...ನವನ್ನು ಗಳಿಸುವುದು ವಿಜ್ಞಾನದ ಗುರಿ. ಹಾಗೆ ಗಳಿಸಿದ ಜ್ಞಾನವನ್ನು ನಮ್ಮ ಪ್ರಯೋಜನಕ್ಕೆ ಬಳಸಿಕೊಳ್ಳುವುದು ...ಂತ್ರಜ್ಞಾನದ ಗುರಿ. ಭೌತವಿಜ್ಞಾನ, ಜೀವ ವಿಜ್ಞಾನ, ಖಗೋಳ ವಿಜ್ಞಾನ, ಮುಂತಾದವು ವಿಜ್ಞಾನಗಳು. ಅಂತೆಯೇ ...ಂಜಿನಿಯರಿಂಗ್, ವೈದ್ಯಶಾಸ್ತ್ರ, ಕೃಷಿ ವಿಜ್ಞಾನ ಮುಂತಾದವು ತಂತ್ರಜ್ಞಾನಗಳು. ಇವುಗಳನ್ನು ಕ್ರಮವಾಗಿ ಶುದ್ಧ ...ಜ್ಞಾನಗಳು, ಆನ್ವಯಿಕ ವಿಜ್ಞಾನಗಳು ಎಂದೂ ಕರೆಯುವುದುಂಟು. ವಿಜ್ಞಾನ ಮತ್ತು ತಂತ್ರಜ್ಞಾನಗಳಲ್ಲಾಗಿರುವ ...ತ್ತೀಚಿನ ಬೆಳವಣಿಗೆಗಳ ಪ್ರಸ್ತಾಪ ಬಂದಾಗ ನ್ಯಾನೊ ತಂತ್ರಜ್ಞಾನ ಎಂಬ ಪದ ಕಿವಿಯ ಮೇಲೆ ಬೀಳುವ ಸಂಭವ ...ಹಳವೇ ಇದೆ. ಈ ನ್ಯಾನೊ ತಂತ್ರಜ್ಞಾನ ಎಂಬುದು ಯಾವ ಬಗೆಯ ತಂತ್ರಜ್ಞಾನ ? ನ್ಯಾನೊ ಎಂದರೇನು ?

ವಾಸ್ತವವಾಗಿ 'ನ್ಯಾನೊ' ಎಂಬುದು, ವಿಜ್ಞಾನದ ಪರಿಭಾಷೆಯಲ್ಲಿ ಅಳತೆಯ ಮಾನಗಳಾದ ಲೀಟರ್, ...ೀಟರ್, ಗ್ರಾಮ್ ಮುಂತಾದವುಗಳ ಉಪವಿಭಾಗಗಳನ್ನು ಸೂಚಿಸಲು ಅವುಗಳ ಹಿಂದೆ ಅಂಟಿಸುವ ಒಂದು ...ರ್ವ ಪ್ರತ್ಯಯ. ಸೆಂಟಿಮೀಟರ್ ಎಂಬುದು ಮೀಟರ್‌ನ ನೂರರಲ್ಲೊಂದು ಭಾಗ, ಮಿಲಿಮೀಟರ್ ಎಂಬುದು ...ೀಟರ್‌ನ ಸಾವಿರದಲ್ಲೊಂದು ಭಾಗ, ಅದೇ ರೀತಿ ನ್ಯಾನೊ ಮೀಟರ್ ಎಂಬುದು ಮೀಟರ್‌ನ ಬಿಲಿಯನ್ ...,000,000,000)ನಲ್ಲಿ ಒಂದು ಭಾಗ.

ಸೆಂಟಿಮೀಟರ್ ಮತ್ತು ಮಿಲಿಮೀಟರ್‌ಗಳನ್ನು ನಾವು ಅಳತೆಪಟ್ಟಿಯಲ್ಲಿ ನೋಡಿರುವುದರಿಂದ ಅವುಗಳ ...ರಿಚಯ ನಮಗಿದೆ. ಮಿಲಿಮೀಟರ್‌ನ ಸಾವಿರದಲ್ಲೊಂದು ಭಾಗ (ಅಂದರೆ ಮೀಟರ್‌ನ ಮಿಲಿಯನ್‌ನಲ್ಲಿ ಒಂದು ...ಗ)ವನ್ನು ಮೈಕ್ರಾನ್ ಎಂದೂ ಕರೆಯುತ್ತಾರೆ. ಅದನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವುದು ನಮಗೆ ಸ್ವಲ್ಪ ಕಷ್ಟ. ...ದರೆ, ಹಲವು ಮೈಕ್ರಾನ್‌ಗಳ ಗಾತ್ರವುಳ್ಳ ಬ್ಯಾಕ್ಟೀರಿಯ, ಮೊದಲಾದ ಸೂಕ್ಷ್ಮಜೀವಿಗಳನ್ನು ನಾವು ...ಕ್ಷ್ಮದರ್ಶಕದಲ್ಲಿ ನೋಡಬಹುದು. ಮೈಕ್ರಾನ್‌ನ ಸಾವಿರದಲ್ಲೊಂದು ಭಾಗವಾದ ನ್ಯಾನೊಮೀಟರ್ ಎಂಬುದು ...ಾತ್ರ ನಿಜವಾಗಿಯೂ ನಮ್ಮ ಕಲ್ಪನೆಗೆ ಎಟುಕುವುದಿಲ್ಲ.

ಗಾತ್ರಗಳ ವಿಷಯದಲ್ಲಿ ನಾವು ಅಷ್ಟು ಕೆಳಕ್ಕೆ ಇಳಿದಾಗ ಅಣು ಪರಮಾಣುಗಳ ಹಂತಕ್ಕೆ ಇಳಿದಂತೆಯೇ. ...ಕೆಂದರೆ, ಅಣು ಪರಮಾಣುಗಳ ಗಾತ್ರಗಳನ್ನು ಹೇಳಲು ನಾವು ಬಳಸುವ ಅಳತೆಯ ಮಾನ, 'ಆಂಗ್‌ಸ್ಟ್ರಾಮ್' ...ಂಬುವ ನ್ಯಾನೊ ಮೀಟರ್‌ನ ಹತ್ತರಲ್ಲೊಂದು ಭಾಗ, ಅಷ್ಟೆ. ದಿನಬಳಕೆಯ ಯಾವುದೇ ವಸ್ತುವಿನ ಒಂದು ..., ಕೆಲವು ನ್ಯಾನೊ ಮೀಟರ್‌ನಿಂದ ನೂರು ನ್ಯಾನೊ ಮೀಟರ್‌ಗಳ ವ್ಯಾಪ್ತಿಯಲ್ಲಿದ್ದರೆ ಅದನ್ನು ನ್ಯಾನೊ ಕಣ (nanoparticle) ಎನ್ನುತ್ತಾರೆ. ವಸ್ತುಗಳ ಗಾತ್ರ ಅಷ್ಟು ಕಡಿಮೆಯಾದಾಗ ಆ ವಸ್ತುವಿನ ಗುಣ ಲಕ್ಷಣಗಳು ಗಮನಾರ್ಹವಾಗಿ ಬದಲಾಯಿಸುತ್ತವೆ. ಅಂಥ ಬದಲಾವಣೆಗಳನ್ನು ನಮ್ಮ ಆವಶ್ಯಕತೆಗಳಿಗೆ ಅನುಸಾರವಾಗಿ ಉಪಯೋಗಿಸಿಕೊಳ್ಳುವ ವಿಧಿ ವಿಧಾನ ಗಳನ್ನೇ ನಾವು 'ನ್ಯಾನೊ ತಂತ್ರಜ್ಞಾನ' ಎಂದು ಕರೆಯುವುದು.

ವಸ್ತುಗಳ ಗಾತ್ರ ಬದಲಾಯಿಸಿದಾಗ ಅದರ ಗುಣಲಕ್ಷಣಗಳು ಬದಲಾಯಿಸುವುದು ನಮ್ಮ ಸಾಮಾನ್ಯ ಅನುಭವಕ್ಕೆ ಬಂದಿರುವ ವಿಷಯ. ರಸ್ತೆಯ ದುರಸ್ತಿಗಾಗಿ ಸಂಗ್ರಹಿಸಿದ ಜಲ್ಲಿ ಕಲ್ಲಿನ ರಾಶಿಗಳನ್ನು ಕೆಲವು ವೇಳೆ ರಸ್ತೆಯ ಪಕ್ಕದಲ್ಲಿ ಹಾಕಿರುತ್ತಾರಷ್ಟೆ. ಆ ರಾಶಿಯ ಮೇಲೆ ನಾವು ನಿಂತುಕೊಳ್ಳಬಹುದು. ಜಲ್ಲಿ ಕಲ್ಲಿನ ತುಂಡುಗಳು ಸಾಮಾನ್ಯವಾಗಿ ಎರಡು ಮೂರು ಇಂಚು ದಪ್ಪ ಇರುತ್ತವೆ. ಅವು ಸ್ವಲ್ಪ ಕಡಮೆ, ಅಂದರೆ, ಒಂದು ಒಂದೂವರೆ ಇಂಚು ದಪ್ಪವಿದ್ದರೂ ಅಂಥ ರಾಶಿಯ ಮೇಲೆ ನಿಂತುಕೊಳ್ಳಲು ಸಾಧ್ಯ. ಆ ತುಂಡುಗಳ ಗಾತ್ರ ಇನ್ನೂ ಕಡಮೆಯಾಗಿ ಒಂದೆರಡು ಮಿಲಿಮೀಟರ್ ದಪ್ಪ



ಕಂಪ್ಯೂಟರ್‌ನಲ್ಲಿ ರಚಿತವಾದ ನ್ಯಾನೊ ಚಿತ್ರ

ನ್ಯಾನೊ ಕಣಗಳ ಉಪಯುಕ್ತತೆಯ ನಿದರ್ಶನಗಳು ಈಗಾಗಲೇ ಕಾರ್ಯಸಾಧ್ಯವಾಗಿರುವಂಥವು ಮತ್ತು ಪರಿಣತರಲ್ಲದ ಸಾಮಾನ್ಯರ ದೃಷ್ಟಿಯಲ್ಲಿಯೂ ಕಾರ್ಯಸಾಧ್ಯವೆಂಬ ಭರವಸೆ ಮೂಡಿಸುವಂಥವು. ಈ ಕ್ಷೇತ್ರದಲ್ಲಿ ಸಂಶೋಧನೆ ನಡೆಸುತ್ತಿರುವ ವಿಜ್ಞಾನಿಗಳ ಮತ್ತು ಪರಿಣತರ ದೃಷ್ಟಿಯಲ್ಲಿ ಮಾತ್ರ ಕಾರ್ಯಸಾಧ್ಯವೆನಿಸುತ್ತಿರುವ, ಆದರೆ ಜನಸಾಮಾನ್ಯರ ದೃಷ್ಟಿಯಲ್ಲಿ ನಂಬಲು ಕಷ್ಟವಾದ ಅದ್ಭುತವಾಗಿ ಕಾಣಿಸುವ ನಿದರ್ಶನಗಳ ಮೇಲೆ ಈಗ ಕಣ್ಣು ಹಾಯಿಸಬಹುದು.

ಇರುವುದಾದರೆ, ಆ ರಾಶಿ ಮರಳಿನ ರಾಶಿಯಂತಾಗುವುದರಿಂದ ಅದರ ಮೇಲೆ ನಿಲ್ಲಲು ಯತ್ನಿಸಿದರೆ ಕಾಲುಗಳು ರಾಶಿಯಲ್ಲಿ ಹೂತುಹೋಗುವುವಲ್ಲವೇ ?

ನಮ್ಮ ಸಾಮಾನ್ಯ ಅನುಭವದ ಇನ್ನೊಂದು ಉದಾಹರಣೆಯನ್ನು ಕೊಡಬಹುದು. ಬಣ್ಣವಿಲ್ಲದ ಗಾಜಿನ ಹಾಳೆ ಸಂಪೂರ್ಣ ಪಾರದರ್ಶಕವಷ್ಟೆ. ಅದು ಮೇಜಿನ ಮೇಲಿದ್ದರೆ ಮೇಜಿನ ಮೇಲ್ಮೈ ನಮಗೆ ಸ್ಪಷ್ಟವಾಗಿ ಕಾಣಿಸುವುದು. ಆ ಹಾಳೆ ಒಡೆದು ತುಂಡುಗಳಾಗಿ, ಒಂದೊಂದು ತುಂಡೂ ಕೇವಲ ಒಂದೆರಡು ಸೆಂ.ಮೀ. ಉದ್ದ, ಒಂದು ಸೆಂ.ಮೀ. ಅಗಲ ಆದರೆ, ಆಗ ಆ ತುಂಡುಗಳೂ ಪಾರದರ್ಶಕವೇ ಆಗಿರುತ್ತವೆ. ಆ ಗಾಜು ತುಂಡುಗಳನ್ನು ಅರೆದು ಪುಡಿ ಮಾಡಿದರೆ? ಆಗ ಅದರ ಪಾರದರ್ಶಕತೆ ಮಾಯವಾಗಿ ಅದು ಬಿಳಿ ಬಣ್ಣದ ಪುಡಿಯಾಗುತ್ತದೆ.

ನಮ್ಮ ದಿನನಿತ್ಯದ ಅನುಭವದಲ್ಲಿ ನಾವು ಸಂಧಿಸುವ ಅಲ್ಪ ಗಾತ್ರ ವ್ಯತ್ಯಾಸಗಳ ಪರಿಣಾಮವೇ ಹೀಗಿರುವಾಗ, ವಸ್ತುವಿನ ಗಾತ್ರ ಕೇವಲ ಕೆಲವು ನ್ಯಾನೊ ಮೀಟರ್‌ಗಳಷ್ಟಾದಾಗ ಪರಿಣಾಮ ಹೇಗಿರಬಹುದು? ಸಹಜವಾಗಿಯೇ ಪರಿಣಾಮ ಇನ್ನೂ ಗಮನಾರ್ಹವಾಗಿರುತ್ತದೆ. ಹಾಗೆ ಉಂಟಾಗುವ ಗುಣಲಕ್ಷಣಗಳ ಬದಲಾವಣೆಯನ್ನು ಹೇಗೆ ಉಪಯೋಗಿಸಿಕೊಳ್ಳಬಹುದು, ಹೇಗೆ ಉಪಯೋಗಿಸಿಕೊಳ್ಳಲಾಗಿದೆ ಎಂಬುದಕ್ಕೆ ಕೆಲವು ಉದಾಹರಣೆಗಳನ್ನು ಕೊಡಬಹುದು.

ದೃಷ್ಟಿ ದೋಷವುಳ್ಳವರು ಉಪಯೋಗಿಸುವ ಕನ್ನಡಕಗಳ ಲೆನ್ಸ್‌ಗಳು ಸಾಮಾನ್ಯವಾಗಿ ಗಾಜಿನವು. ದೃಷ್ಟಿ ದೋಷ ಹೆಚ್ಚಾಗಿದ್ದರೆ ಕನ್ನಡಕಕ್ಕೆ ಬಹುದಪ್ಪ ಗಾಜುಗಳು ಬೇಕಾಗುತ್ತವೆ. ಅವುಗಳ ತೂಕ ಹೆಚ್ಚಾಗುವುದರಿಂದ ಮೂಗಿನ ಮೇಲ್ಭಾಗದ ಮೇಲೆ ಬೀಳುವ ಒತ್ತಡ ಅಸಹನೀಯವಾಗುತ್ತದೆ. ಗಾಜಿನ ಲೆನ್ಸ್‌ಗಳ ಬದಲು ಹಗುರವಾಗಿರುವ ಪ್ಲಾಸ್ಟಿಕ್ ಲೆನ್ಸ್‌ಗಳನ್ನು ಬಳಸುವುದು ಸಾಧ್ಯ. ಆದರೆ ಅದರಲ್ಲಿ ಒಂದು ತೊಂದರೆ ಇದೆ. ಅಕಸ್ಮಾತ್ ಗಡುಸಾಗಿರುವ ಯಾವುದಾದರೂ ವಸ್ತು ಆ ಲೆನ್ಸ್‌ಗಳಿಗೆ ಬಡಿದರೆ ಲೆನ್ಸ್‌ಗಳ ಮೇಲೆ ಗೀರುಗಳುಂಟಾಗಿ, ಲೆನ್ಸ್ ನಿಷ್ಪ್ರಯೋಜಕವಾಗುತ್ತವೆ. ಹಾಗಾಗದಂತೆ ಲೆನ್ಸ್‌ಗಳನ್ನು ರಕ್ಷಿಸಲು ಜಿರ್ಕೋನಿಯ (ಜಿರ್ಕೋನಿಯಮ್ ಆಕ್ಸೈಡ್) ನ್ಯಾನೊ ಕಣಗಳನ್ನು ಲೇಪಿಸುತ್ತಾರೆ. ಜಿರ್ಕೋನಿಯ ಒಂದು ಬಗೆಯ ಪಿಂಗಾಣಿ ಪದಾರ್ಥವಾದುದರಿಂದ ಅದು ಲೆನ್ಸ್‌ಗಳಿಗೆ ರಕ್ಷಣೆ ಒದಗಿಸುತ್ತದೆ. ನ್ಯಾನೊಕಣಗಳ ಗಾತ್ರ ನೂರು ನ್ಯಾನೊ ಮೀಟರ್‌ಗಳಿಗಿಂತ ಕಡಿಮೆಯಷ್ಟೆ. ಬೆಳಕಿನ ಅಲೆಯುದ್ದವಾದರೋ ೪೦೦ - ೮೦೦ ನ್ಯಾನೊ ಮೀಟರ್! ಆದುದರಿಂದ ಆ ಕಣಗಳು ಬೆಳಕಿನ ಅಲೆಗಳ ಪ್ರಭಾವಕ್ಕೆ ಒಳಗಾಗುವುದಿಲ್ಲ ವಾದುದರಿಂದ ಲೆನ್ಸ್‌ನ ಪಾರದರ್ಶಕತೆಗೆ ಕುಂದುಂಟಾಗುವುದಿಲ್ಲ.

ರೈಲು ಬಂಡಿಗಳ ಹೊರಮೈ, ಸ್ವಲ್ಪಮಟ್ಟಿಗೆ ಒಳಮೈ ಸಹ, ದೂಳು ಮುಚ್ಚಿಕೊಂಡು ಕೊಳಕಾಗಿರುವುದುಂಟು. ಅದರಿಂದಾಗಿ ರೈಲು ಪ್ರಯಾಣ ಅನೇಕ ವೇಳೆ ಅಹಿತಕರವಾಗುತ್ತದೆ. ಬಂಡಿಗಳಿಗೆ ಬಣ್ಣ ಬಳಿಯುವಾಗ, ಬಣ್ಣವನ್ನು ಜಾಡಿಯಲ್ಲಿ ಕಲಸಿಕೊಂಡ ಮೇಲೆ ಅದರಲ್ಲಿ ಸಾಕಷ್ಟು ನ್ಯಾನೊ ಕಣಗಳನ್ನು ಹಾಕಿ ಕಲಸಿ, ಆ ಬಣ್ಣವನ್ನು ಬಂಡಿಯ ಮೈಗೆ ಬಳಿದರೆ, ಆ ಕಣಗಳು ಅತ್ಯಂತ ಸೂಕ್ಷ್ಮ ಕಣಗಳಾಗಿರುವುದರಿಂದ ಬಂಡಿಯ ಮೈ ತುಂಬ ನುಣಪಾಗುತ್ತದೆ. ದೂಳು ಕಣಗಳು ಆ ಮೈಗೆ ಅಂಟಿಕೊಳ್ಳುವುದೇ ಇಲ್ಲ; ಉದುರಿಹೋಗುತ್ತವೆ. ಅಂಥ ದೂಳು ನಿವಾರಕ ಮೈ ಇರುವ ರೈಲ್ವೆ ಬಂಡಿಗಳು ಈಗಾಗಲೇ ಯೂರೋಪಿನಲ್ಲಿ ಕೆಲವು ಕಡೆ ಬಳಕೆಗೆ ಬಂದಿವೆ. ಈ ವಿಧಾನದಿಂದ ದೂಳು ನಿವಾರಕ ಬಟ್ಟೆಯನ್ನು ತಯಾರಿಸುವ ಪ್ರಯತ್ನಗಳು ನಡೆಯುತ್ತಿವೆ. ಟೆಫ್ಲಾನ್ ಲೇಪನ ಉಳ್ಳ ನೆಕ್‌ಟೈಗಳು ಈಗಾಗಲೇ ಮಾರುಕಟ್ಟೆಗೆ ಬಂದಿವೆ.

ಕಾರ್, ಬಸ್ ಮುಂತಾದ ಮೋಟಾರ್ ವಾಹನಗಳ ಎಂಜಿನ್ನುಗಳನ್ನು ನಾಡು ಕಬ್ಬಿಣ ಅಥವಾ ಕಬ್ಬಿಣದ ಮಿಶ್ರ ಲೋಹಗಳಿಂದ ತಯಾರಿಸುತ್ತಾರೆ. ಎಂಜಿನ್ನಿನಲ್ಲಿ

ಕನ್ನಡದ ಅತ್ಯಂತ ಜನಪ್ರಿಯ ಅಂಕಣಕಾರ ಪ್ರತಾಪ್‌ಸಿಂಹ ಅವರ ಕೃತಿಗಳು

ಬೆತ್ತಲೆ ಜಗತ್ತು
ಪ್ರತಾಪ್ ಸಿಂಹ
3 ಬೆತ್ತಲೆ ಜಗತ್ತು
ಬೆತ್ತಲೆ ಜಗತ್ತು 4
ಪ್ರತಾಪ್ ಸಿಂಹ
5 ಬೆತ್ತಲೆ ಜಗತ್ತು
6 ಬೆತ್ತಲೆ ಜಗತ್ತು
ಬೆತ್ತಲೆ ಜಗತ್ತು 7

ಸದಭಿರುಚಿಯ ಸಂಗಾತಿ
ಸಾಹಿತ್ಯ ಪ್ರಕಾಶನ
ಕೊಪ್ಪೀಕರ್ ಬೀದಿ, ಹುಬ್ಬಳ್ಳಿ: ೫೮೦ ೦೨೦
☎: 0836-2367676, 94481 10034.
E-mail : sahithyaprakashana@yahoo.co.in

ಟ್ರೋಲ್ ಅಥವಾ ಡೀಸೆಲ್ ಉರಿಸಿದಾಗ ಉಂಟಾಗುವ ಹೆಚ್ಚಿನ ಉಷ್ಣತೆ ಮತ್ತು ತ್ತಡಗಳ ಕಾರಣ ಕಬ್ಬಿಣವೇ ಆಗಲಿ, ಅದರ ಯಾವುದಾದರೂ ಮಿಶ್ರಲೋಹವೇ ಗಲಿ, ಅದು ರಾಸಾಯನಿಕ ಕೊರೆತಕ್ಕೆ ಗುರಿಯಾಗುವುದರಿಂದ ಎಂಜಿನ್ನಿನ ೀವಿತಾವಧಿ ಗಣನೀಯವಾಗಿ ಕಡಿಮೆಯಾಗುತ್ತದೆ. ಪಿಂಗಾಣಿ ಪದಾರ್ಥಗಳು ಆ ಗೆಯ ರಾಸಾಯನಿಕ ಕೊರೆತಕ್ಕೆ ಗುರಿಯಾಗುವುದಿಲ್ಲ. ಆದುದರಿಂದಲೇ ಅಲ್ಲವೇ ಬಲವಾದ ಆಮ್ಲಗಳನ್ನು ತುಂಬಿ ಇಡಲು ಪಿಂಗಾಣಿ ಜೇಡಿ ಜಾಡಿಗಳನ್ನು ಪಯೋಗಿಸುವುದು ? ಮೋಟಾರ್ ವಾಹನಗಳ ಎಂಜಿನ್‌ಗಳನ್ನು ಪಿಂಗಾಣಿ ೇಡಿಯಂಥ ಪದಾರ್ಥಗಳಿಂದ ತಯಾರಿಸಿದರೆ, ಅವು ರಾಸಾಯನಿಕ ಕೊರೆತಕ್ಕೆ ರಿಯಾಗುವುದಿಲ್ಲವಾದ್ದರಿಂದ ಅವುಗಳನ್ನು ದೀರ್ಘಕಾಲ ಬಳಸಬಹುದು. ಆದರೆ, ರದೃಷ್ಟವಶಾತ್ ಪಿಂಗಾಣಿ ಪದಾರ್ಥಗಳು ಬಧುರ. ಅಂದರೆ, ವುಗಳಿಗೆ ಏಟು ಬಿದ್ದರೆ ಅವು ಒಡೆಯುತ್ತವೆ. ಬ್ಬಿಣ ಮತ್ತು ಅದರ ಮಿಶ್ರ ಲೋಹಗಳಂತೆ ಂಗಾಣಿ ವಸ್ತುಗಳೂ ಕುಟ್ಯ nalleable)ವಾಗಿದ್ದಿದ್ದರೆ, ಅಂದರೆ, ಡಿದು ಹಾಳೆಗಳನ್ನು ತಯಾರಿಸು ಂತಿದ್ದಿದ್ದರೆ ಮತ್ತು ತನ್ಯ (ductile) ಾಗಿದ್ದಿದ್ದರೆ, ಅಂದರೆ, ಎಳೆದು ಲಾಕೆಗಳನ್ನೂ ತಂತಿಗಳನ್ನೂ ಮಾಡು ುದು ಸಾಧ್ಯವಿದ್ದಿದ್ದರೆ, ಮೋಟಾರ್ ಂಜಿನ್‌ಗಳನ್ನು ಪಿಂಗಾಣಿ ಪದಾರ್ಥ ಳಿಂದ ತಯಾರಿಸಬಹುದಾಗಿತ್ತು.

ಈ ಬಗೆಯ ಯೋಚನೆ ೋಟಾರ್ ಎಂಜಿನ್ ತಯಾರಕರಿಗೆ ಂದೆ ಎಷ್ಟೋ ಸಲ ಬಂದಿದೆ. ಅದು ೇವಲ ಒಂದು ಕನಸು ಎಂದೇ ಾವಿಸಲಾಗಿತ್ತು. ಆದರೆ, ಈಚೆಗೆ ಳಿದುಬಂದಿರುವ ಪ್ರಕಾರ, ಪಿಂಗಾಣಿ ದಾರ್ಥಗಳನ್ನು ನ್ಯಾನೊ ಕಣಗಳಾಗಿ ಗೆದುಕೊಂಡಾಗ ಅದನ್ನು ಹಾಳೆಗಳಾಗಿ ಕಟ್ಟಬಹುದು ುತ್ತು ಸಲಾಕೆ ಹಾಗು ತಂತಿಗಳಾಗಿ ಎಳೆಯಬಹುದು. ಈ ಷಯ ಗೊತ್ತಾದ ಮೇಲೆ, ಮೋಟಾರ್ ಎಂಜಿನ್ ತಯಾರಕರು ಮ್ಮ ಕನಸನ್ನು ನನಸಾಗಿ ಪರಿವರ್ತಿಸುವ ಯೋಚನೆ ಮಾಡುತ್ತಿದ್ದಾರೆ.

ನ್ಯಾನೊ ಫ್ಲವರ್

ನ್ಯಾನೊ ಕಣಗಳ ಉಪಯುಕ್ತತೆಯ ಈ ನಿದರ್ಶನಗಳು ಈಗಾಗಲೇ ಾರ್ಯಸಾಧ್ಯವಾಗಿರುವಂಥವು ಮತ್ತು ಪರಿಣತರಲ್ಲದ ಸಾಮಾನ್ಯರ ದೃಷ್ಟಿಯಲ್ಲಿಯೂ ಾರ್ಯಸಾಧ್ಯವೆಂಬ ಭರವಸೆ ಮೂಡಿಸುವಂಥವು. ಈ ಕ್ಷೇತ್ರದಲ್ಲಿ ಸಂಶೋಧನೆ ಡೆಸುತ್ತಿರುವ ವಿಜ್ಞಾನಿಗಳ ಮತ್ತು ಪರಿಣತರ ದೃಷ್ಟಿಯಲ್ಲಿ ಮಾತ್ರ ಾರ್ಯಸಾಧ್ಯವೆನಿಸುತ್ತಿರುವ, ಆದರೆ ಜನಸಾಮಾನ್ಯರ ದೃಷ್ಟಿಯಲ್ಲಿ ನಂಬಲು ಷ್ಟವಾದ ಅದ್ಭುತವಾಗಿ ಕಾಣಿಸುವ ನಿದರ್ಶನಗಳ ಮೇಲೆ ಈಗ ಕಣ್ಣು ಾಯಿಸಬಹುದು.

ಮೊತ್ತಮೊದಲು ಅವುಗಳ ಕಡೆ ಸಾರ್ವಜನಿಕರ ಗಮನವನ್ನು ಸೆಳೆದವರು ಎರಿಕ್ ಡೆಕ್ಸ್‌ಲರ್ ಎಂಬ ವಿಜ್ಞಾನಿ. ಅವರು ೧೯೮೬ರಲ್ಲಿ **ಸೃಷ್ಟಿಕರ್ತ ಎಂಜಿನ್‌ಗಳು, ರಲಿರುವ ನ್ಯಾನೊ ತಂತ್ರಜ್ಞಾನ ಯುಗ** (*Engines of creation, the coming era Nanotechnology*) ಎಂಬ ಪುಸ್ತಕವನ್ನು ಪ್ರಕಟಿಸಿದರು. ಆ ಪುಸ್ತಕದಲ್ಲಿ ವರು ಕೇವಲ ಕೆಲವು ನ್ಯಾನೊ ಮೀಟರ್‌ಗಳಷ್ಟು ಗಾತ್ರವಿರುವ ಯಂತ್ರಗಳ ಗ್ಗೆ ಪ್ರಸ್ತಾಪ ಮಾಡಿದರು: ಮೋಟಾರ್‌ಗಳು, ಡೈನಮೊಗಳು, ರೋಬಟ್‌ನ ೋಳುಗಳು, ಅಷ್ಟೇ ಏಕೆ, ಇಡೀ ಕಂಪ್ಯೂಟರ್‌ಗಳು! ಇದೆಲ್ಲ ಕೇವಲ ಕಲ್ಪನಾ ಾಮ್ರಾಜ್ಯ ಎಂದು ಜನ ಮೂದಲಿಸಿದರು. ಅನೇಕ ವಿಜ್ಞಾನಿಗಳೇ ಅದನ್ನು ಅಲ್ಲಗಳೆದು ಾರ್ಯಸಾಧ್ಯವಲ್ಲದ ವಿಷಯ ಎಂದು ಅಭಿಪ್ರಾಯಪಟ್ಟರು. ಡೆಕ್ಸ್‌ಲರ್ ಮಾತ್ರ ವಿಚಲಿತರಾಗದೆ ಪಟ್ಟು ಹಿಡಿದು, ಸಂಬಂಧಪಟ್ಟ ಮಾಹಿತಿಯ ಅಧ್ಯಯನ ಮತ್ತು ವಿಶ್ಲೇಷಣೆಯಲ್ಲಿ ನಿರತರಾದರು. ''ನೀವು ವೈಜ್ಞಾನಿಕ ಕಟ್ಟುಕಥೆಯ ರಚನೆಯಲ್ಲಿ ತೊಡಗಿರುವಿರಿ'' ಎಂದು ಸುತ್ತಮುತ್ತಲಿನವರು ಹೇಳಿದುದನ್ನು ಕಿವಿಗೆ ಹಾಕಿಕೊಳ್ಳದೆ ಅವರು ತಮ್ಮ ಕೆಲಸವನ್ನು ಮುಂದುವರಿಸಿ, ಅದೆಲ್ಲ ಸಾಧ್ಯವೆಂಬುದು ಮಾತ್ರವಲ್ಲ; ತಂತ್ರಜ್ಞಾನ ಅಭಿವೃದ್ಧಿಯಾದಂತೆಲ್ಲ ಅದು ಅನಿವಾರ್ಯ ಸಹ ಎಂಬ ತೀರ್ಮಾನಕ್ಕೆ ಬಂದುದಲ್ಲದೆ, ತಮ್ಮ ಅಭಿಪ್ರಾಯಗಳಿಗೆ ವೈಜ್ಞಾನಿಕ ವಲಯದ ಅನುಮೋದನೆ ಗಳಿಸುವುದರಲ್ಲಿ ಯಶಸ್ವಿಯಾದರು. ನ್ಯಾನೊ ತಂತ್ರಜ್ಞಾನ ಎಂಬುದು ಗೌರವಾನ್ವಿತ ಕಲ್ಪನೆಯಾಯಿತು. ೧೯೮೮ರಲ್ಲಿ ಅವರು ಪ್ರತಿಷ್ಠಿತ ಸ್ಟ್ಯಾನ್‌ಫರ್ಡ್ ವಿಶ್ವ ವಿದ್ಯಾನಿಲಯದಲ್ಲಿ ನ್ಯಾನೊ ತಂತ್ರಜ್ಞಾನವನ್ನು ಕುರಿತ ಒಂದು ಉಪನ್ಯಾಸ ಮಾಲೆಯನ್ನು ಸಹ ನೀಡಿದರು.

ಅವರ ಭವಿಷ್ಯವಾಣಿ ನಿಜವಾಗಲು ಮೊತ್ತ ಮೊದಲನೆಯದಾಗಿ, ವಿವಿಧ ರಾಸಾಯನಿಕ ಧಾತುಗಳ ಪರಮಾಣುಗಳ ಪೈಕಿ ಯಾವ ಯಾವವು ಬೇಕೋ ಅವುಗಳನ್ನು ಆಯ್ದು, ಯಾವ ರೀತಿ ಬೇಕೋ ಆ ರೀತಿ ಅವುಗಳನ್ನು ಒಂದರೊಡನೊಂದು ಜೋಡಿಸಿ ನಮಗಿಷ್ಟ ಬಂದ ಪದಾರ್ಥವನ್ನು ಸೃಷ್ಟಿಸಬಲ್ಲ ಒಂದು ಯಂತ್ರವನ್ನು ನಿರ್ಮಿಸಬೇಕು. ಅಂಥ ಯಂತ್ರವನ್ನು ಸಂಯೋಜಕ (Assembler) ಎಂದು ಕರೆಯಬಹುದು. ಅಂಥ ಸಂಯೋಜಕ ಒಂದನ್ನು ಒಮ್ಮೆ ತಯಾರಿಸಿದರೆ ಸಾಕು, ಪುನಃ ಪುನಃ ಅಂಥ ಸಂಯೋಜಕಗಳನ್ನು ತಯಾರಿಸ ಬೇಕಾಗಿಲ್ಲ, ಏಕೆಂದರೆ, ಆ ಸಂಯೋಜಕವೇ ಬೇಕಾದ ಪರಮಾಣು ಗಳನ್ನು ಬೇಕಾದ ರೀತಿಯಲ್ಲಿ ಜೋಡಿಸಿ ಇನ್ನೊಂದು ಸಂಯೋಜಕವನ್ನು ತಯಾರಿಸ ಬಲ್ಲದಾಗಿರುತ್ತದೆ. ಅಂಥ ಸಂಯೋಜಕ ಒಂದು ನಮಗೆ ದೊರೆತ ತರುವಾಯ ಅದರ ನೆರವಿನಿಂದ ಏನೇನು ಮಾಡಬಹುದು ಎಂದು ಪಟ್ಟಿ ಮಾಡುತ್ತ ಹೋದರೆ ಅದಕ್ಕೆ ಕೊನೆಯೇ ಇಲ್ಲ.

ಭೂಗ್ರಹದ ಮೇಲೆ ಮಾನವ ಕುಲ ಜನ್ಮವೆತ್ತಿದ ಮೇಲೆ ನಾವು ನಮ್ಮ ಪರಿಸರಕ್ಕೆ ಉಂಟು ಮಾಡಿರುವ ಹಾನಿಯನ್ನೆಲ್ಲ ಸರಿಪಡಿಸಬಹುದು. ನ್ಯಾನೊ ತಂತ್ರಜ್ಞಾನದಿಂದ ಕಾಗದವನ್ನು ತಯಾರಿಸಬಹುದಾದ್ದರಿಂದ, ಅದಕ್ಕಾಗಿ ಕಾಡು ಕಡಿಯಬೇಕಾಗಿಲ್ಲ, ಎಲ್ಲ ಆಹಾರ ಪದಾರ್ಥಗಳನ್ನೂ ಕೃತಕವಾಗಿ ತಯಾರಿಸಬಹುದಾದ್ದರಿಂದ ಕ್ಷಾಮ ಡಾಮರುಗಳನ್ನು ದೂರೀಕರಿಸಬಹುದು. ಅದಕ್ಕಿಂತ ಮಿಗಿಲಾಗಿ ಇಂದಿನವರೆಗೆ ವ್ಯವಸಾಯದ ಭೂಮಿಗಾಗಿ ಕಾಡುಗಳಿಂದ ಪಡೆದ ಭೂಮಿಯಲ್ಲೆಲ್ಲಾ ಪುನಃ ಕಾಡು ಬೆಳೆಯಲು ಅವಕಾಶ ಮಾಡಿಕೊಡಬಹುದು. ವಿದ್ಯುದುತ್ಪಾದನೆಗೆ ಬೇಕೆಂದು ಭೂಮಿಯನ್ನು ಅಗೆದು ಕಲ್ಲಿದ್ದಲು ತೆಗೆಯಬೇಕಾಗಿಲ್ಲ; ಸೌರ ವಿದ್ಯುತ್ತಿನ ಉತ್ಪಾದನೆಗೆ ಬೇಕಾಗುವ ಸೌರ ಪ್ಯಾನೆಲ್‌ಗಳನ್ನು ಕೃತಕವಾಗಿ ತಯಾರಿಸಿ ವಿದ್ಯುತ್ತನ್ನು ಹೇರಳವಾಗಿ ಪಡೆಯಬಹುದು. ಈ ಹಿಂದೆಯೇ ಹೇಳಿರುವಂತೆ ಈ ಪಟ್ಟಿಗೆ ಕೊನೆಯೇ ಇಲ್ಲ.

ನ್ಯಾನೊ ವಿಜ್ಞಾನಿಗಳು ಕಾಣುತ್ತಿರುವ ಈ ಕನಸು ನನಸಾದಾಗ ನಿಜವಾಗಿಯೂ ಅದನ್ನು ಸ್ವರ್ಣಯುಗ ಎಂದು ಕರೆಯಬಹುದು.

ಪ್ರೊ॥ ಜಿ. ಆರ್. ಲಕ್ಷ್ಮಣರಾವ್
'ಸ್ಮೃತಿ', ೧೨ನೆಯ ಮುಖ್ಯ ರಸ್ತೆ, ಸರಸ್ವತಿಪುರಂ
ಮೈಸೂರು - ೫೭೦ ೦೦೯

# ನೀವು ಮನೆ ಕಟ್ಟುವ ಕನಸನ್ನು ನನಸಾಗಿಸಲು ಹೊರಟಿದ್ದೀರಾ?



ಅಭಿಮಾನದಿಂದ "ನಮ್ಮ ಮನೆ" ಎಂದು ಹೇಳಿಕೊಳ್ಳುವ ಮನೆ ತಮ್ಮದಾಗಿಸಿಕೊಳ್ಳುವುದು ಪ್ರತಿಯೊಬ್ಬರ ಕನಸಾಗಿರುತ್ತದೆ. ಇಂತಹುದೊಂದು ಮನೆ ನಮ್ಮ ತಲೆಯ ಮೇಲು ಸೂರು ಮಾತ್ರವಲ್ಲದೆ ಮನೆಮಂದಿಗೆಲ್ಲಾ ಆಶ್ರಯ ನೀಡಿ ಮುಂಬರುವ ಪೀಳಿಗೆಗೆ ಕೂಡಾ ನೆನಪಿನಲ್ಲುಳಿಯುವ ಸಂಗತಿಯಾಗಬೇಕು.

ಸಿಮೆಂಟ್ – ಹೆಚ್ಚಾಗಿ ಮನೆಯನ್ನು ಸುಭದ್ರವಾಗಿಡುವ ಏಕೈಕ ವಸ್ತುವೆಂದರೆ ಸಿಮೆಂಟ್. ಮನೆ ಬಾಳಿಕೆಯ ಸುದೀರ್ಘತೆಯನ್ನು ನಿರ್ಧರಿಸುವುದೇ ಸಿಮೆಂಟ್. ಆದ್ದರಿಂದ ಸೂಕ್ತ ತೆರನಾದ ಸಿಮೆಂಟ್‌ಅನ್ನು ಆಯ್ದುಕೊಳ್ಳುವುದರಲ್ಲಿ ಗಮನ ಹರಿಸುವುದು ಮುಖ್ಯವಾದ ವಿಷಯ. ಮಾರುಕಟ್ಟೆಯಲ್ಲಿ ದೊರಕುವ ಸಿಮೆಂಟ್ ಅನ್ನು ನಮ್ಮ ಜನ ಪರೀಕ್ಷೆಗೊಡ್ಡುವುದೇ ಇಲ್ಲ. ಹೆಚ್ಚಿನ ಮಂದಿ ಶಿಫಾರಸ್ಸಿನಂತೆ ಅಥವಾ ಬಣ್ಣದ ರೀತ್ಯಾ ನಿರ್ಧರಿಸುವುದೋ ಅಥವಾ ಅತಿ ನಾಜೂಕಾದ ವಸ್ತುವಿನಂತೆ ಕಂಡುಬರುವುದನ್ನು ಆಯ್ದುಕೊಳ್ಳುವುದೋ ಸಾಮಾನ್ಯವಾಗಿದೆ. ವೈಪರೀತ್ಯವೆಂದರೆ ಸಿಮೆಂಟ್‌ಗೆ ಇರಬೇಕಾದ ತಾಂತ್ರಿಕ ಲಕ್ಷಣಗಳನ್ನು ಮರೆಮಾಚುವುದು ಅತೀ ಸಾಮಾನ್ಯವಾಗಿದೆ.



ಜರ್ಮನಿಯ ಹೈಡೆಲ್‌ಬರ್ಗ್ ಸಿಮೆಂಟ್ ಸಂಸ್ಥೆಯ ಸದಸ್ಯತ್ವವನ್ನು ಹೊಂದಿರುವ ಮೈಸೆಮ್ ನಿಮಗಾಗಿ ಉತ್ಕೃಷ್ಟ ಗುಣಗಳನ್ನು ಹೊಂದಿರುವ ಸಿಮೆಂಟ್‌ಅನ್ನು ನೀಡುತ್ತದೆ. ನೀವು ಕಟ್ಟಲಿರುವ ಸೌಧಗಳಿಗೆ ಸುಭದ್ರತೆ ಮತ್ತು ಸುದೀರ್ಘತೆಯನ್ನು ನೀಡುತ್ತದೆ.

**mycem** ©

**for better building**

**HEIDELBERG**CEMENT **Group**

*For more information and technical assistance, please contact us:*

**9880530906, 9972011005, 9980812728, 9448350923**

Copyright © JNC Mar '07

# ತಮಿಳುನಾಡಿನ ತಮಿಳೀಕರಣ ಪ್ರಕ್ರಿಯೆಯಲ್ಲಿ ದ್ರಾವಿಡ ಚಳವಳಿ, ಏಕೀಕರಣ ಹಾಗೂ ಶಾಸ್ತ್ರೀಯತೆ

ಡಾ॥ ಕೆ. ಮೋಹನ್‌ಕೃಷ್ಣ ರೈ

**ಚ**ರಿತ್ರೆಯೆಂದರೆ ಜನರು ತಮ್ಮ ಅಸ್ತಿತ್ವಕ್ಕಾಗಿ ನಡೆಸುವ ಹೋರಾಟ, ಹೊಂದಾಣಿಕೆ ಹಾಗೂ ಆ ಮೂಲಕ ಕಟ್ಟಿಕೊಳ್ಳುವ ಬದುಕಿನ ಕಥನ. ಬದುಕನ್ನು ಕಟ್ಟುವ ಹೋರಾಟದ ನೆಲೆಗಳು ರೂಪುಗೊಳ್ಳುವುದು ಆಯಾ ಸಮಯ ಹಾಗೂ ಸಂದರ್ಭದ ಅವಶ್ಯಕತೆಗಳ ಅಥವಾ ಒತ್ತಡಗಳ ಮೂಲಕ. ಜಾತಿ, ವರ್ಗ, ಭಾಷೆ, ಭೌಗೋಳಿಕತೆ ಮುಂತಾದ ನೆಲೆಗಳು ಚರಿತ್ರೆಯುದ್ದಕ್ಕೂ ಮಾನವರನ್ನು ಒಂದುಗೂಡಿಸುವ ಹಾಗೂ ಬೇರ್ಪಡಿಸುವ ಕೆಲಸವನ್ನು ಮಾಡಿಕೊಂಡೇ ಬಂದಿವೆ. ಖಂಡ, ದೇಶ, ರಾಜ್ಯ ಹಾಗೂ ಸಮುದಾಯಗಳು ತಮ್ಮ ಅಸ್ತಿತ್ವಕ್ಕಾಗಿ ನಡೆಸುವ ಹೋರಾಟದಲ್ಲಿ ಈ ಎಲ್ಲ ನೆಲೆಗಳು ಪ್ರಧಾನ ಪಾತ್ರ ವಹಿಸುತ್ತಿರುತ್ತವೆ. ಇದಕ್ಕೆ ಉತ್ತಮ ಉದಾಹರಣೆ ಯೆಂದರೆ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಭಾರತದಲ್ಲಿ ನಡೆದ ಭಾಷಾವಾರು ಪ್ರಾಂತ್ಯಗಳ ರಚನೆಗೆ ಸಂಬಂಧಿಸಿದ ಹೋರಾಟಗಳು. ಸ್ವಾತಂತ್ರ್ಯ ಪೂರ್ವದಲ್ಲೇ ಈ ಹೋರಾಟಗಳು ಆರಂಭ ಗೊಂಡಿದ್ದರೂ ಹೋರಾಟಕ್ಕೊಂದು ದಿಕ್ಕು ಹಾಗೂ ಧ್ವನಿ ಲಭ್ಯವಾಗಿರುವುದು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ. ಈ ಹೋರಾಟದಲ್ಲಿ ಭಾಷೆ ಪ್ರಧಾನವಾಗಿ ಕಂಡುಬಂದರೂ ಜಾತಿ, ವರ್ಗ ಹಾಗೂ ಭೌಗೋಳಿಕ ವಿಚಾರಗಳು ಸಾಕಷ್ಟು ಪ್ರಭಾವ ಬೀರಿರುವುದಂತೂ ನಿಜ. ದೇಶದೆಲ್ಲೆಡೆ ನಡೆದ ಈ ಹೋರಾಟದ ಉದ್ದೇಶ ಒಂದೇ ಆಗಿದ್ದರೂ, ಹೋರಾಟದ ದಾರಿ ಹಾಗೂ ವಿಧಾನ ಪ್ರಾಂತ್ಯದಿಂದ ಪ್ರಾಂತ್ಯಕ್ಕೆ ಭಿನ್ನವಾಗಿತ್ತು. ಈ ನಿಟ್ಟಿನಲ್ಲಿ ತಮಿಳುನಾಡಿನಲ್ಲಿ ನಡೆದ ಹೋರಾಟ ಬೇರೆ ಪ್ರಾಂತ್ಯಗಳಿಗಿಂತ ಭಿನ್ನವಾಗಿ ಕಂಡುಬರುತ್ತದೆ. ತಮಿಳುನಾಡಿನಲ್ಲಿ ಏಕೀಕರಣ ಹೋರಾಟವು ಗಡಿಗಳನ್ನು ನಿರ್ಧರಿಸುವುದರ ಜೊತೆ ಜೊತೆಗೆ ತಮಿಳೀಕರಣ ಪ್ರಕ್ರಿಯೆಯನ್ನೂ ಗಟ್ಟಿಗೊಳಿಸಿತು.

ತಮಿಳುನಾಡಿನಲ್ಲಿ ಏಕೀಕರಣ ಚಳವಳಿಯು ರಾಜಕೀಯ ಏಕೀಕರಣ ಹಾಗೂ ಸಾಂಸ್ಕೃತಿಕ ಏಕೀಕರಣ ಎನ್ನುವ ಎರಡು ನೆಲೆಗಳಿಂದ ನಡೆಯಿತು. ದಕ್ಷಿಣ ಭಾರತದ ರಾಜ್ಯಗಳೆಲ್ಲವನ್ನು ಒಂದುಗೂಡಿಸಿ 'ದ್ರಾವಿಡ ರಾಜ್ಯ' ನಿರ್ಮಾಣ ಮಾಡಬೇಕೆನ್ನುವ ಪ್ರಯತ್ನ ಆರಂಭ ಗೊಂಡಿದ್ದು ತಮಿಳುನಾಡಿನಲ್ಲಿ. ತೆಲುಗು, ತಮಿಳು, ಕನ್ನಡ ಮತ್ತು ಮಲೆಯಾಳಂ ಭಾಷಿಕರನ್ನು ಒಂದುಗೂಡಿಸುವ ಪ್ರಯತ್ನ ಅದಾಗಿತ್ತು. ಆದರೆ ಪ್ರತಿಯೊಂದು ಪ್ರದೇಶವೂ ತನ್ನದೇ ಆದ ಭಾಷಿಕರನ್ನು ಹಾಗೂ ಭೌಗೋಳಿಕ ಎಲ್ಲೆ ಕಟ್ಟುಗಳನ್ನು ಹೊಂದುವ ಹೋರಾಟದಲ್ಲಿತ್ತು. ತಮಿಳುನಾಡಿನಲ್ಲಿ ಆರಂಭಗೊಂಡ ದ್ರಾವಿಡ ರಾಜ್ಯ ನಿರ್ಮಾಣದ ಹೋರಾಟವು ಆರ್ಯರ ವಿರುದ್ಧ ಅಥವಾ ಉತ್ತರ ಭಾರತದ ವಿರುದ್ಧ ಹಾಗೂ ಅದೇ ಸಂದರ್ಭದಲ್ಲಿ ಬ್ರಿಟಿಷ್ ಆಳ್ವಿಕೆಯ ವಿರುದ್ಧವೂ ಆಗಿತ್ತು. ಆದರೆ ಕೊನೆಗೆ ಅದು ತಮಿಳು ಭಾಷೆ ಯನ್ನಾಡುವ ಪ್ರದೇಶಗಳಿಗಷ್ಟೇ ಸೀಮಿತವಾಯಿತು.

ತೆಲುಗು ಮತ್ತು ತಮಿಳು ಭಾಷಿಕರ ನಡುವೆ ಹುಟ್ಟಿ ಕೊಂಡ ಸಮಸ್ಯೆಗಳು ಎರಡೂ ಪ್ರದೇಶಗಳ ಏಕೀಕರಣ ಚಳವಳಿಯ ಮೂಲ ವಸ್ತುಗಳಾದವು. ಮದ್ರಾಸ್ ರಾಜ್ಯದ ಅಧೀನದಲ್ಲಿದ್ದ ಇವು ಪ್ರತ್ಯೇಕ ಪ್ರತ್ಯೇಕ ವಾಗಿಯೆ ಗುರುತಿಸಿಕೊಳ್ಳಲು ಪ್ರಯತ್ನಿಸಿದವು. ಈ ಪ್ರಯತ್ನವೇ ಏಕೀಕರಣ ಚಳವಳಿಯ ರೂಪದಲ್ಲಿ ನಡೆಯಿತು. ತೆಲುಗು ಭಾಷಿಕರು ತಮಿಳರ ಅಧೀನ ದಲ್ಲಿರಲು ಇಷ್ಟಪಡಲಿಲ್ಲ. ಆದರೆ ಮದ್ರಾಸ್ ತೆಲುಗರಿಗೇ ಸೇರಬೇಕೆಂಬ ಬೇಡಿಕೆಯಿತ್ತು. ಇದನ್ನು ತಮಿಳರು ತೀವ್ರವಾಗಿ ವಿರೋಧಿಸಿದರು. ತಮಿಳು ರಾಷ್ಟ್ರೀಯತೆ ಪೆರಿಯಾರ್, ರಾಜಗೋಪಾಲಾಚಾರಿ, ಅಣ್ಣಾದೊರೈ, ಕಾಮರಾಜ್ ಮುಂತಾದವರ ನಾಯಕತ್ವದಲ್ಲಿ ಹೆಚ್ಚಿನ ಪ್ರಚಾರವನ್ನು ಪಡೆದು ಕೊಂಡಿತು. ಇವರೆಲ್ಲರೂ ತಮಿಳು ಭಾಷಿಕರನ್ನು ಒಂದುಗೂಡಿಸುವ ಹಾಗೂ ಬಲಿಷ್ಠ ತಮಿಳುನಾಡನ್ನು ರಚಿಸುವ ಕಾರ್ಯವನ್ನು ತಮ್ಮ ಸಂಘಟನೆಗಳ ಹಾಗೂ ಪಕ್ಷಗಳ ಮೂಲಕ ಮಾಡಿದರು.

ಭಾರತದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ತಮಿಳುನಾಡಿನಲ್ಲಿ ಬ್ರಿಟಿಷರ ವಿರುದ್ಧ ೧೮ನೆಯ ಶತಮಾನದ ಆರಂಭದಿಂದಲೇ ಹೋರಾಟಗಳು ಕಾಣಿಸಿ ಕೊಂಡವು. ತಮಿಳುನಾಡಿನ ಸ್ಥಳೀಯ ನಾಯಕರು (ಪಾಳೆಯಗಾರರು) ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಸ್ವಾರ್ಥಪೂರಿತ ವಾಣಿಜ್ಯ ನೀತಿಯ ವಿರುದ್ಧ ಹೋರಾಟ ಮಾಡಿದರು. ಆದರೆ ೧೮೦೧ರಲ್ಲಿ ಬ್ರಿಟಿಷರು ತಮಿಳುನಾಡಿನ ಮೇಲೆ ನೇರ ಹಿಡಿತ ಸಾಧಿಸಿದರು. ಇದು ತಮಿಳುನಾಡಿನ ಜನತೆ ರಾಜಕೀಯವಾಗಿ ಎಚ್ಚೆತ್ತು ಕೊಳ್ಳುವಂತೆ ಮಾಡಿತು. ಈಸ್ಟ್ ಇಂಡಿಯಾ ಕಂಪನಿಯ ವ್ಯಾಪಾರ ನೀತಿ ಹಾಗೂ ಸರಕಾರವು ಮಿಶನರಿಗಳ ಧಾರ್ಮಿಕ ಚಟುವಟಿಕೆಗಳಿಗೆ ತಡೆಯೊಡ್ಡದಿರುವುದರ

ಭಾರತದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ತಮಿಳುನಾಡಿನಲ್ಲಿ ಬ್ರಿಟಿಷರ ವಿರುದ್ಧ ೧೮ನೆಯ ಶತಮಾನದ ಆರಂಭದಿಂದಲೇ ಹೋರಾಟಗಳು ಕಾಣಿಸಿಕೊಂಡವು. ತಮಿಳುನಾಡಿನ ಸ್ಥಳೀಯ ನಾಯಕರು (ಪಾಳೆಯಗಾರರು) ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಸ್ವಾರ್ಥಪೂರಿತ ವಾಣಿಜ್ಯ ನೀತಿಯ ವಿರುದ್ಧ ಹೋರಾಟ ಮಾಡಿದರು. ಆದರೆ ೧೮೦೧ರಲ್ಲಿ ಬ್ರಿಟಿಷರು ತಮಿಳುನಾಡಿನ ಮೇಲೆ ನೇರ ಹಿಡಿತ ಸಾಧಿಸಿದರು. ಇದು ತಮಿಳುನಾಡಿನ ಜನತೆ ರಾಜಕೀಯವಾಗಿ ಎಚ್ಚೆತ್ತುಕೊಳ್ಳುವಂತೆ ಮಾಡಿತು. ಈಸ್ಟ್ ಇಂಡಿಯಾ ಕಂಪನಿಯ ವ್ಯಾಪಾರ ನೀತಿ ಹಾಗೂ ಸರಕಾರವು ಮಿಶನರಿಗಳ ಧಾರ್ಮಿಕ ಚಟುವಟಿಕೆಗಳಿಗೆ ತಡೆಯೊಡ್ಡದಿರುವುದರ ವಿರುದ್ಧ ತಮಿಳು ನಾಡಿನಲ್ಲಿ ಸಂಘಟನೆಗಳು ಹುಟ್ಟಿಕೊಂಡವು. ಮದ್ರಾಸ್ ಪ್ರೆಸಿಡೆನ್ಸಿಯ ಆಳ್ವಿಕೆಯ ವಿರುದ್ಧ ತಮಿಳು ಜನತೆ ಹೋರಾಟ ಆರಂಭಿಸಿತು. ಇದು ಸ್ವಾತಂತ್ರ್ಯ ಹೋರಾಟದ ರೂಪದಲ್ಲಿ ಕಂಡುಬಂದರೂ, ತಮಿಳರ ಸ್ವಾಭಿಮಾನ ಹಾಗೂ ಪ್ರತ್ಯೇಕ ರಾಜ್ಯದ ಕನಸುಗಳು ಅದರೊಳಗಿದ್ದವು.

## ಸಾಹಿತ್ಯ ಮಾಲಿಕೆ, ದರ್ಶನ ಮಾಲಿಕೆ ಮತ್ತು ಮಕ್ಕಳ ಮಾಲಿಕೆ

| | | |
|---|---|---|
| 1. | ನನ್ನ ಲೇಖನಗಳು | ಡಾ|| ಶೈಲಜಾ ಉಡಚಣ |
| 2. | ಓದಿ ಪುಸ್ತಕ ಓದು | ಡಾ|| ವಸಂತ ಕುಷ್ಟಗಿ |
| 3. | ಸಾಹಿತ್ಯ ಸುಧಾ | ಎಚ್. ಕಾಶೀನಾಥ ರೆಡ್ಡಿ |
| 4. | ಸಾಹಿತ್ಯ ಸೌರಭ | ಪ್ರೊ|| ವೀರೇಂದ್ರ ಸಿಂಪಿ |
| 5. | ಸಾಹಿತ್ಯ ಸಂಪದ | ಪ್ರೊ|| ಸೊಗಯ್ಯ ಹಿರೇಮಠ |
| 6. | ಸಾಹಿತ್ಯ ಸಂಕ್ರಮಣ | ಡಾ|| ಜಯದೇವಿ ಪಾಟೀಲ |
| 7. | ಜಾಗತೀಕರಣ ಮಹಿಳೆ ಸವಾಲುಗಳು | ಡಾ|| ಜಯದೇವಿ ಪಾಟೀಲ |
| 8. | ಮರದ ಮರೆಯ ತೇಜ | ಎ. ಕೆ. ರಾಮೇಶ್ವರ |
| 9. | ಒಂದಿಷ್ಟು ಮಾತು | ಡಾ|| ಸದಾನಂದ ಪೆರ್ಲ |
| 10. | ವಸಂತ ಕುಷ್ಟಗಿ ಕಾವ್ಯ | ರೂತಾ ಪ್ರಭುರಾವ್ |
| 11. | ಶರಣರ ತತ್ವಗಳು | ಡಾ|| ಜಯಶ್ರೀ ದಂಡೆ |
| 12. | ಶಿವದಾಸ ಚಿಂತನೆ | ಡಾ|| ಗವಿಸಿದ್ದಪ್ಪ ಪಾಟೀಲ |
| 13. | ಅನುವಾದಿತ ನಾಟಕಗಳು | ಡಾ|| ಪಂಚಾಕ್ಷರಿ ಹಿರೇಮಠ |
| 14. | ಕಥಾ ಭಾರತಿ | ಶ್ರೀ ಬಿ. ಎಸ್. ಖೂಬಾ |
| 15. | ಕರಿ ರುದ್ರಾಕ್ಷಿ | ಶ್ರೀ ವೀರಭದ್ರಗೌಡ |
| 16. | ನಡುಗನ್ನಡ ಸಾಹಿತ್ಯ | ಡಾ|| ವಿ. ಜಿ. ಪೂಜಾರ |
| 17. | ಸಾಂಗತ್ಯ | ಗುಡಿಬಂಡೆ ಪೂರ್ಣಿಮಾ |
| 18. | ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ | ಡಾ|| ಟಿ. ಸಿ. ನಿಂಗಣ್ಣ |
| 19. | ಪ್ರಾಣಬಿಂದು | ಎ. ಜಿ. ರತ್ನಕಾಳೇಗೌಡ |
| 20. | ಸಣ್ಣ ಕತೆಗಳು | ಪ್ರೊ|| ಶಿವರಾಜ ಪಾಟೀಲ |
| 21. | ಅರವಿಂದರ ಕಾವ್ಯಮೀಮಾಂಸೆ | ಡಾ|| ಎಸ್. ಎಂ. ಹಿರೇಮಠ |
| 22. | ಆಧುನಿಕ ವಚನಗಳು | ಹಂಶಕವಿ |
| 23. | ನನ್ನ ಶಿವ | ಎಂ. ಮಕ್ತುಂಬಿ |
| 24. | ವಚನಗಿರಿ | ಹುಸೇನಪ್ಪ ಡಿ. ಅಮರಾಪುರ |
| 25. | ಎಚ್ಚೆತ್ತ ಚಿಮ್ಮಾವುಗೆ | ಚೆನ್ನಬಸಪ್ಪ ಬೆಟ್ಟದೂರು |
| 26. | ಪುಸ್ತಕಗಳ ಸುತ್ತ ಮುತ್ತ | ದೇಶಾಂಶ ಹುಡುಗಿ |
| 27. | ಶಿಲ್ಪದುಲಿ | ಜಲಜಾ ಗಂಗೂರ್ |
| 28. | ತುಂಗೆಯಿಂದ ಗಂಗೆಯವರೆಗೆ | ಪ್ರೊ|| ಶಾಶ್ವತಸ್ವಾಮಿ ಮುಕ್ಕುಂದಿಮಠ |
| 29. | ರಾಜಪುರೋಹಿತರ ಗರಿಗಳು | ಶ್ರೀನಿವಾಸ ಕುಷ್ಟಗಿ |
| 30. | ಪ್ರಜಾಧ್ವನಿ | ಕವಿತಾ ಮಲ್ಲಪ್ಪ |
| 31. | ಬಿ. ಮಹದೇವಪ್ಪ: ನೆನಪು | ಚಂದ್ರಕಾಂತ ಕರದಳ್ಳಿ, ಡಾ|| ಗವಿಸಿದ್ದಪ್ಪ ಪಾಟೀಲ |
| 32. | ನಿಜಾನಂದ ತತ್ವಪದಗಳು | ರಘುನಾಥ ಹಡಪದ |
| 33. | ಹಾಡುಹಬ್ಬ ಸಂಗ್ರಹ | ಪ್ರೊ|| ಎನ್. ಕೆ. ರಾಮಚಂದ್ರಪ್ಪ |
| 34. | ಜಾರ್ಜ್‌ಫರ್ನಾಂಡಿಸ್ | ವಿಶ್ವೇಶ್ವರಭಟ್ |
| 35. | ವಿಜ್ಞಾನ ವಿಶೇಷ | ಸವಿತಾ ಸಿರಗೋಜಿ |
| 36. | ಶಂಕರಾಚಾರ್ಯರು | ರಾಮಚಂದ್ರ ಜೋಷಿ |
| 37. | ಮಗು ನೀ ಜ್ಞಾನಿಯಾಗು | ಓಂಪ್ರಕಾಶದಡ್ಡೆ |
| 38. | ಗುಲಬರ್ಗಾ ತಾಲೂಕು ದರ್ಶನ | ಸಂಗಮನಾಥ ರೇವತಗಾಂವ |
| 39. | ಸೇಡಂ ತಾಲೂಕಾ ದರ್ಶನ | ಡಾ|| ಚಂದ್ರಕಲಾ ಬಿದರಿ |
| 40. | ಶಹಾಪುರ ತಾಲೂಕಾ ದರ್ಶನ | ಚಂದ್ರಕಾಂತ ಕರದಳ್ಳಿ |
| 41. | ಸುರಪುರ ತಾಲೂಕಾ ದರ್ಶನ | ಶಾಂತಪ್ಪಾ ಬೂದಿಹಾಳ |
| 42. | ಮಾನವಿ ತಾಲೂಕಾ ದರ್ಶನ | ಡಾ|| ಬಸವಪ್ರಭು ಪಾಟೀಲ |
| 43. | ದೇವದುರ್ಗ ತಾಲೂಕಾ ದರ್ಶನ | ಶರಣಪ್ಪ ಗುಡದಿನ್ನಿ |
| 44. | ಬೀದರ ತಾಲೂಕಾ ದರ್ಶನ | ಚಂದ್ರಪ್ಪ ಹೆಬ್ಬಾಳಕರ್ |
| 45. | ಔರಾದ ತಾಲೂಕಾ ದರ್ಶನ | ಶಿವಕುಮಾರ ಕಟ್ಟೆ |
| 46. | ಹೊಸಪೇಟೆ ತಾಲೂಕಾ ದರ್ಶನ | ಡಾ|| ಮೀನಾಕ್ಷಿ ಜಂಗಮನಿ |



**ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ**

ಸರಸ್ವತಿ ಗೋದಾಮು, ಗುಲಬರ್ಗಾ – 585 101

ಫೋನ್ : 08472-226303 ಮೊಬೈಲ್ : 94481 24431


ವಿರುದ್ಧ ತಮಿಳುನಾಡಿನಲ್ಲಿ ಸಂಘಟನೆಗಳು ಹುಟ್ಟಿಕೊಂಡವು. ಮದ್ರಾಸ್ ಪ್ರೆಸಿಡೆನ್ಸಿಯ ಆಳ್ವಿಕೆಯ ವಿರುದ್ಧ ತಮಿಳು ಜನತೆ ಹೋರಾಟ ಆರಂಭಿಸಿತು. ಇದು ಸ್ವಾತಂತ್ರ್ಯ ಹೋರಾಟದ ರೂಪದಲ್ಲಿ ಕಂಡುಬಂದರೂ, ತಮಿಳರ ಸ್ವಾಭಿಮಾನ ಹಾಗೂ ಪ್ರತ್ಯೇಕ ರಾಜ್ಯದ ಕನಸುಗಳು ಅದರೊಳಗಿದ್ದವು.

೧೮೫೨ರಲ್ಲಿ ಮದ್ರಾಸ್‌ನಲ್ಲಿ ಮದ್ರಾಸ್ ಸ್ಥಳೀಯ ಸಂಘ ಹುಟ್ಟಿಕೊಂಡಿತು. ಇದು ಕಂಪನಿಯ ವಾಣಿಜ್ಯ ಮತ್ತು ಧಾರ್ಮಿಕ ನೀತಿಗಳನ್ನು ವಿರೋಧಿಸಿತು. ೧೮೫೩ರ ಹೊತ್ತಿಗೆ ಈ ಸಂಘವು ತನ್ನ ವ್ಯಾಪ್ತಿಯನ್ನು ಮದ್ರಾಸ್‌ನ ಹೊರಗಡೆಗೂ ವಿಸ್ತರಿಸಿಕೊಂಡಿತು. ಕಡಲೂರು, ತಿರುಚಿರಾಪಳ್ಳಿ, ಸೇಲಂ ಹಾಗೂ ತಿರುನೆಲ್‌ವೇಲಿಗಳಲ್ಲಿ ಇದರ ಪ್ರಭಾವ ಕಂಡುಬಂತು. ಆದರೆ ಈ ಸಂಘವು ತನ್ನ ಆಂತರಿಕ ಸಮಸ್ಯೆಗಳಿಂದಾಗಿ ಬ್ರಿಟಿಷ್ ವಿರುದ್ಧದ ತನ್ನ ನಿಲುವುಗಳನ್ನು ಪ್ರತಿಪಾದಿಸುವಲ್ಲಿ ಸೋತಿತು. ೧೮೮೪ರಲ್ಲಿ ''ಮದ್ರಾಸ್ ಮಹಾಜನ ಸಭೆ'' ಎನ್ನುವ ಸಂಘಟನೆಯೊಂದು ಆರಂಭಗೊಂಡಿತು. ಮದ್ರಾಸಿನ ಜನರ ಸಮಸ್ಯೆಗಳನ್ನು ಬ್ರಿಟಿಷ್ ಸರಕಾರದ ಗಮನಕ್ಕೆ ನೇರವಾಗಿ ತರುವುದು ಈ ಸಭೆಯ ಉದ್ದೇಶವಾಗಿತ್ತು. ಹಿಂದಿನ ಮದ್ರಾಸ್ ಸ್ಥಳೀಯ ಸಂಘದಲ್ಲಿ ಸರಕಾರದ ಅಧಿಕಾರಿಗಳು ಇದ್ದಿದ್ದರಿಂದಾಗಿ ಮದ್ರಾಸ್‌ನ ಜನತೆಯ ಸಮಸ್ಯೆಯನ್ನು ನೇರವಾಗಿ ಬ್ರಿಟಿಷ್ ಸರಕಾರದ ಗಮನಕ್ಕೆ ತರಲು ಸಾಧ್ಯವಾಗುತ್ತಿರಲಿಲ್ಲ. ಈ ಸಭೆಯು ತಮಿಳುನಾಡಿನಲ್ಲಿ ಸಂಘಟಿತ ರಾಜಕೀಯ ಚಟುವಟಿಕೆಗಳ ಆರಂಭಕ್ಕೆ ನಾಂದಿ ಹಾಡಿತು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನಂತೆ ಇದೂ ವಾರ್ಷಿಕ ಅಧಿವೇಶನಗಳನ್ನು ನಡೆಸುತ್ತಿತ್ತು. ನಿಧಾನವಾಗಿ ಮದ್ರಾಸ್‌ನಿಂದ ಹೊರಗಡೆಗೂ ಇದರ ವ್ಯಾಪ್ತಿ ವಿಸ್ತರಿಸಿಕೊಂಡಿತು. ಪ್ರಾಂತೀಯ ಸಮ್ಮೇಳನಗಳು ನಡೆಯಲಾರಂಭಿಸಿದವು.

ಮದ್ರಾಸ್ ಪ್ರಾಂತೀಯ ಸಮ್ಮೇಳನಗಳು ಮದ್ರಾಸ್ ನಗರದಲ್ಲಿ ಐದು ಬಾರಿ ನಡೆದವು. ನಂತರ ಕುಂಭಕೋಣಂ, ಕೊಯಮತ್ತೂರು, ಮಧುರೈ, ಉತ್ತರ ಆರ್ಕಾಟ್, ತಂಜಾವೂರು ಮುಂತಾದ ಜಿಲ್ಲಾ ಕೇಂದ್ರಗಳಲ್ಲೂ ಸಮ್ಮೇಳನಗಳು ನಡೆದವು. ಇದೇ ಸಂದರ್ಭದಲ್ಲಿ ಕಾಂಗ್ರೆಸ್ ಸಹ ತನ್ನ ರಾಷ್ಟ್ರೀಯ ಹೋರಾಟದ ಕೆಲಸವನ್ನು ತಮಿಳುನಾಡಿನ ವಿವಿಧ ಪ್ರದೇಶಗಳಲ್ಲಿ ನಡೆಸುತ್ತಿತ್ತು. ಸ್ವದೇಶಿ ಹೋರಾಟದ ಸಂದರ್ಭದಲ್ಲಿ ಈ ಸಭೆಯು ತಮಿಳುನಾಡಿನಾದ್ಯಂತ ಚುರುಕಿನಿಂದ ಕೆಲಸ ಮಾಡಿತು. ಸ್ವದೇಶಿ ಕಲ್ಪನೆಯು ಪ್ರತ್ಯೇಕ ರಾಜ್ಯ ಬೇಡಿಕೆ ಹುಟ್ಟಿಕೊಳ್ಳುವಲ್ಲಿ ಪ್ರಮುಖ ಪಾತ್ರ ವಹಿಸಿತು. ಇದು ಜನರನ್ನು ಸಾಮಾಜಿಕವಾಗಿ ಒಂದುಗೂಡಿಸುವ ಹಾಗೂ ಆರ್ಥಿಕವಾಗಿ ಸ್ವಾವಲಂಬಿಗಳಾಗುವಂತೆ ಮಾಡಿತು.

ತಮಿಳುನಾಡಿನಲ್ಲಿ ಸಾಮಾಜಿಕ ಸುಧಾರಣಾ ಕಾರ್ಯಗಳು ಹತ್ತೊಂಬತ್ತನೆಯ ಶತಮಾನದ ದ್ವಿತೀಯಾರ್ಧದಲ್ಲಿ ಕಂಡುಬಂದವು. ಇದು ತಮಿಳು ಭಾಷಿಕರಲ್ಲಿ ಜಾಗೃತಿ ಉಂಟುಮಾಡುವಂತೆ ಮಾಡಿತು. ಶ್ರೇಣೀಕೃತ ಸಮಾಜ ರಚನೆಯ ವಿರುದ್ಧ ಹಾಗೂ ಬ್ರಾಹ್ಮಣ ಸಮುದಾಯದ ವಿರುದ್ಧ ಹೋರಾಟಗಳು ಕಾಣಿಸಿಕೊಂಡವು. ಆಧುನಿಕತೆಯ ಲಾಭವನ್ನು ಪಡೆದುಕೊಂಡು ಬ್ರಾಹ್ಮಣವರ್ಗವು ಬ್ರಾಹ್ಮಣೇತರ ವರ್ಗಗಳ ಮೇಲೆ ಸವಾರಿ ಮಾಡಲಾರಂಭಿಸಿದ್ದೆ, ಬ್ರಾಹ್ಮಣೇತರ ವರ್ಗಗಳ ಹೋರಾಟಕ್ಕೆ ಕಾರಣವಾಯಿತು. ಆರಂಭದಲ್ಲಿ ಜಿ. ಸುಬ್ರಹ್ಮಣ್ಯ ಅಯ್ಯರ್, ಟಿ. ಮಾಧವರಾವ್, ಸೋಮಸುಂದರಂ ಚೆಟ್ಟಿ ಮೊದಲಾದವರು ಹಿಂದೂ ಸಮಾಜದ ಅನಿಷ್ಟ ಪದ್ಧತಿಗಳನ್ನು ವಿರೋಧಿಸಿ, ಅವುಗಳಿಂದ ಜನರನ್ನು ಹೊರತರುವ ಪ್ರಯತ್ನ ಮಾಡಿದರು. ತಮಿಳುನಾಡಿನಾದ್ಯಂತ ಸಾರ್ವಜನಿಕ ಸಭೆಗಳನ್ನು ನಡೆಸಿ, ಒಂದು ಪರ್ಯಾಯ ಶಕ್ತಿ ರೂಪುಗೊಳ್ಳುವಂತೆ ಮಾಡಿದರು. ೧೯೧೪ರಲ್ಲಿ ಬ್ರಾಹ್ಮಣೇತರ ವರ್ಗದ ವಿದ್ಯಾರ್ಥಿಗಳಿಗಾಗಿ 'ದಿ ದ್ರವೀಡಿಯನ್ ಹೋಂ' ಎನ್ನುವ ವಸತಿ ನಿಲಯವನ್ನು ನಟೇಶ್ ಮೊದಲಿಯಾರ್ ಎನ್ನುವವರು ಸ್ಥಾಪಿಸಿದರು. ೧೯೧೬ರಲ್ಲಿ 'ಸೌತ್ ಇಂಡಿಯನ್ ಪೀಪಲ್ಸ್ ಅಸೋಸಿಯೇಷನ್' ಎನ್ನುವ ಸಂಸ್ಥೆ ಹುಟ್ಟಿಕೊಂಡು ದ್ರಾವಿಡ ಚಳವಳಿಗೆ ಸ್ಪಷ್ಟರೂಪವನ್ನು ಕೊಟ್ಟಿತು. ಈ ಸಂಸ್ಥೆ ಮುಂದೆ 'ಜಸ್ಟಿಸ್ ಪಾರ್ಟಿ' ಎನ್ನುವ ಹೆಸರನ್ನು ಪಡೆದುಕೊಂಡಿತು.

ತಮಿಳುನಾಡಿನ ಸ್ವಾತಂತ್ರ್ಯ ಹೋರಾಟ ಹಾಗೂ ಏಕೀಕರಣ ಚಳವಳಿಗಳಲ್ಲಿ ಜಸ್ಟಿಸ್ ಪಾರ್ಟಿಯು ಮಹತ್ವದ ಪಾತ್ರವನು ವಹಿಸಿತು. ತಮಿಳುನಾಡಿನಲ್ಲಿ ಬ್ರಾಹ್ಮಣೇತರ ವರ್ಗಗಳನ್ನು ಒಂದುಗೂಡಿಸಿ, ಸ್ವಾಭಿಮಾನದ ಕಿಚ್ಚನ್ನು ಪಸರಿಸಿದ ಖ್ಯಾತಿ ಈ ಪಕ್ಷದ್ದು. ತಮಿಳು ಜನತೆ ಹಾಗೂ ತಮಿಳು ಭಾಷೆಯಾಗಿ ಈ ಪಕ್ಷ ಹೋರಾಟ ಮಾಡಿತು. ಸರ್ ಎಂ. ತ್ಯಾಗರಾಜನ್, ಟಿ. ಎಂ. ನಾಯರ್ ಮುಂತಾದವರು ಈ ಪಕ್ಷದ ರೂವಾರಿಗಳು. ಬ್ರಾಹ್ಮಣೇತರ ವರ್ಗಗಳಿಗೆ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರದಲ್ಲಿ ನ್ಯಾಯ ಒದಗಿಸುವುದು ಇದರ ಉದ್ದೇಶವಾಗಿತ್ತು. ೧೯೩೦ರಲ್ಲಿ ಕಾಂಗ್ರೆಸ್ ಪಕ್ಷ ತಮಿಳು

ನಾಡಿನಲ್ಲಿ ಪ್ರಭಾವಿ ಪಕ್ಷವಾಗಿಯೇ ಗುರುತಿಸಿಕೊಂಡಿತ್ತು. ಜಸ್ಟಿಸ್, ದ್ರಾವಿಡಿಯನ್ ಮುಂತಾದ ಪತ್ರಿಕೆಗಳು ದ್ರಾವಿಡ ಜನರ ಹಿತಾಸಕ್ತಿಗಳನ್ನು ಬಿಂಬಿಸುತ್ತಿದ್ದವು. ದ್ರಾವಿಡ ರಾಜ್ಯದ ಉದ್ದೇಶವನ್ನು ತಮಿಳುನಾಡಿನಾದ್ಯಂತ ಪ್ರಚಾರ ಮಾಡಿದವು.

ದ್ರಾವಿಡ ರಾಜ್ಯದ ಕನಸನ್ನು ಹೊತ್ತು, ತಮಿಳುನಾಡಿನ ಜನತೆಯ ಸಾಮಾಜಿಕ ಹಾಗೂ ಆರ್ಥಿಕ ಸುಧಾರಣೆಗಾಗಿ ದುಡಿದವರಲ್ಲಿ 'ಪೆರಿಯಾರ್' ಎಂದೇ ಖ್ಯಾತರಾದ ಇ. ವಿ. ರಾಮಸ್ವಾಮಿ ನಾಯ್ಕರ್ ಅವರು ಪ್ರಮುಖರು. ಪೆರಿಯಾರರು ಆರಂಭದಲ್ಲಿ ಕಾಂಗ್ರೆಸ್‌ನೊಂದಿಗೆ ನಿಕಟ ಸಂಬಂಧ ಹೊಂದಿದ್ದರು. ತಮಿಳುನಾಡಿನ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿಯೂ ಕೆಲಸ ಮಾಡಿದ್ದರು. ಆದರೆ ಕಾಂಗ್ರೆಸ್ ಪಕ್ಷದೊಳಗಿನ ಬ್ರಾಹ್ಮಣ ಯಜಮಾನಿಕೆ ಅವರನ್ನು ಆ ಪಕ್ಷದಿಂದ ದೂರ ಮಾಡಿತು. ೧೯೨೫ರಲ್ಲಿ ಕಾಂಗ್ರೆಸ್ ಪಕ್ಷವನ್ನು ತೊರೆದು ದ್ರಾವಿಡ ಜನರ ಅಭಿವೃದ್ಧಿಗಾಗಿ 'ಆತ್ಮ ಗೌರವ ಚಳವಳಿ'ಯನ್ನು ಹುಟ್ಟುಹಾಕಿದರು. ವೈದಿಕ ಧರ್ಮವನ್ನು ಕಟುವಾಗಿ ಟೀಕಿಸಿ, ಅದರ ಗೊಡ್ಡುಸಂಪ್ರದಾಯಗಳನ್ನು ಜನರು ವಿರೋಧಿಸಬೇಕೆಂದು ಕರೆ ನೀಡಿದರು. ೧೯೩೭ರಲ್ಲಿ ಸಿ. ರಾಜಗೋಪಾಲಾಚಾರಿಯವರು ಹಿಂದಿ ಕಲಿಕೆಯನ್ನು ಕಡ್ಡಾಯಗೊಳಿಸಿದಾಗ, ಪೆರಿಯಾರ್ ನೇತೃತ್ವದ ತಮಿಳು ಪ್ರೇಮಿಗಳು ಕಾಂಗ್ರೆಸ್‌ನ ಧೋರಣೆಯನ್ನು ತಮಿಳು ಭಾಷೆ ಮತ್ತು ಸಂಸ್ಕೃತಿಯ ಮೇಲಿನ ದಾಳಿ ಎಂಬುದಾಗಿ ಪರಿಗಣಿಸಿ ತೀವ್ರ ಪ್ರತಿಭಟನೆ ನಡೆಸಿದರು.

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಬ್ರಾಹ್ಮಣ ಪರ ನೀತಿಯನ್ನು ಹಾಗೂ ತಮಿಳುನಾಡಿನಲ್ಲಿದ್ದ ಬ್ರಾಹ್ಮಣವರ್ಗದ ಧೋರಣೆಯನ್ನು ವಿರೋಧಿಸಲು ಪ್ರತ್ಯೇಕ ದ್ರಾವಿಡ ರಾಜ್ಯದ ನಿರ್ಮಾಣವಾಗಬೇಕೆನ್ನುವ ಕರೆಯನ್ನು ಪೆರಿಯಾರ್ ನೀಡಿದರು. ೧೯೩೮ರಲ್ಲಿ ಜಸ್ಟಿಸ್ ಪಕ್ಷದ ಅಧ್ಯಕ್ಷರಾದ ಪೆರಿಯಾರ್ ತಮಿಳುನಾಡನ್ನು ಬ್ರಿಟಿಷ್ ಆಡಳಿತಕ್ಕೊಳಪಟ್ಟ ಒಂದು ಪ್ರತ್ಯೇಕ ರಾಜ್ಯವನ್ನಾಗಿ ಪರಿಗಣಿಸಬೇಕೆಂದು ಒತ್ತಾಯಿಸಿದರು. ೧೯೩೯ರಲ್ಲಿ ದ್ರಾವಿಡ ನಾಡು ಸಮ್ಮೇಳನವನ್ನು ಪೆರಿಯಾರ್ ಸಂಘಟಿಸಿದರು. ತಮಿಳು, ತೆಲುಗು, ಕನ್ನಡ, ಮಲಯಾಳಂ ಮುಂತಾದ ದ್ರಾವಿಡ ಭಾಷೆಯನ್ನಾಡುವ ಜನರನ್ನು ಒಟ್ಟುಸೇರಿಸಿ ದ್ರಾವಿಡ ರಾಜ್ಯ ನಿರ್ಮಾಣ ಮಾಡಬೇಕೆನ್ನುವುದು ಪೆರಿಯಾರ್ ಅವರ ಮಹದಾಸೆಯಾಗಿತ್ತು.

ಜಸ್ಟಿಸ್ ಪಕ್ಷವು ೧೯೪೪ರಲ್ಲಿ ಪೆರಿಯಾರ್ ಅವರ ಆಶಯದಂತೆ 'ದ್ರಾವಿಡ ಕಳಗಂ' ಪಕ್ಷವಾಗಿ ಗುರುತಿಸಿಕೊಂಡಿತು. ಇದು ದ್ರಾವಿಡ ರಾಜ್ಯದ ನಿರ್ಮಾಣಕ್ಕಾಗಿ ಉಗ್ರ ಹೋರಾಟಗಳನ್ನು ನಡೆಸಿತು. ದ್ರಾವಿಡ ಕಳಗಂ ಪಕ್ಷವು ಬ್ರಿಟಿಷ್ ಸರಕಾರವನ್ನು ಹಾಗೂ ಬ್ರಾಹ್ಮಣ ಹಿಡಿತದ ಸಾಮಾಜಿಕ ವ್ಯವಸ್ಥೆಯನ್ನು ಸಮಾನವಾಗಿ ವಿರೋಧಿಸಿತು. ಭಾರತಕ್ಕೆ ಸ್ವಾತಂತ್ರ್ಯ ದೊರಕುವ ಸಂದರ್ಭದಲ್ಲಿ ಪಾಕಿಸ್ತಾನದ ಮಾದರಿಯಲ್ಲಿ ಪ್ರತ್ಯೇಕ ದ್ರಾವಿಡನಾಡು ಅಸ್ತಿತ್ವಕ್ಕೆ ಬರಬೇಕೆಂದು ಪೆರಿಯಾರ್ ಒತ್ತಾಯಿಸಿ ಹೋರಾಟ ಮಾಡಿದರು. ತಮಿಳು ಭಾಷೆಯನ್ನು ಸಂಸ್ಕೃತದ ಹಿಡಿತದಿಂದ ಮುಕ್ತಗೊಳಿಸುವ ಪ್ರಯತ್ನವನ್ನು ಮಾಡಿದರು. ಇದು ತಮಿಳುನಾಡಿನ ಸಾಂಸ್ಕೃತಿಕ ಏಕೀಕರಣದ ಪ್ರಯತ್ನಗಳಾಗಿ ಕಂಡುಬರುತ್ತದೆ. ರಾಜಕೀಯ ಏಕೀಕರಣಕ್ಕಿಂತಲೂ ಸಾಂಸ್ಕೃತಿಕ ಏಕೀಕರಣ

## ಅಪ್ಪ.... ಇದ್ದಾರೆ

ಮೋಟು ಬೀಡಿಯ ಹೊಗೆಯಲ್ಲಿ
ತೂರಿಬಿಟ್ಟ ಕನಸುಗಳಲ್ಲಿ
ಒಡೆಯನಿಲ್ಲದ ರಂಟೆಕುಂಟೆಗಳ
ರಟ್ಟೆಗಳಲ್ಲಿ ಬಲವಿಲ್ಲ.

ಹೊರಳಿ ಹೊರಳಿ
ಅರಳಿದ ಮಣ್ಣಿಗೆ
ತೀರಿಸುತಿದೆ ಗರಿಕೆ
ಯಾವುದೋ ಹಳೆಯ ಹರಕೆ

ಅವ್ವನೊಂದಿಗೆ ಮಾತಿಗೆಂದು
ಅವಸರದಿ ಬಂದ
ಚುಮು ಚುಮು ನಸುಕಿಗೆ
ಬಾಯಿ ಹೋಗಿದೆ!
ಇಬ್ಬನಿ
ಕಂಬನಿ ಸುರಿಸಿದೆ!
ಪಿಸುಗುಟ್ಟಿದ ರಂಗವಲ್ಲಿಗೆ
ಜೀವ ಹೋಗಿದೆ.

ಹಿಟ್ಟು ಬೀಸಿದ ಕಲ್ಲು
ಮೂಕವಾಗಿದೆ
ಹರಕೆ ತುಂಬಿದ
ಅವ್ವನ ಹಾಡಿನೊಂದಿಗೆ.

ಎತ್ತುಗಳ ಕೊರಳ ಗಂಟೆ
ನಿಶ್ಶಬ್ದವಾಗಿದೆ
ಗಂಜಲದ ವಾಸನೆ
ಹಸಿಹುಲ್ಲುಮಣ್ಣ ವಾಸನೆ
ದೂರ ದೂರ ಸಾಗಿವೆ...



ಅಪ್ಪ-ಮಗನ ನಡುವೆ
ಅಂಟು ಬರಸಿ
ನಂಟು ಬೆಳೆಸಿದೆ
ಜೇಡರ ಹುಳುವೊಂದು.



ಹಳೆಯ ಪಳೆಯ
ಮಾತುಗಳೆಲ್ಲ ಅಟ್ಟ ಸೇರಿ
ಊರು ತುಂಬಾ
ಸೋರಿ ಹೋಗಿದೆ ಮೌನ.

ಸೂರ್ಯಂಗೂ ಮುನ್ನ
ಹೊಲದಲ್ಲಿ ಉದಯಿಸಿದವರು
ಸಂಜೆ ಕೆಂಪು ಸೂರ್ಯನ
ಜೊತೆಗೆ
ಮನೆಗೆ ಮರಳಿದವರು,
ಆ ಗೂಡುಗಳಲಿಲ್ಲ...
ಅಗೋ ನಿಂತಿದ್ದಾರೆ
ಕಾರ್ಖಾನೆಗಳ ಹೊರಗೆ!

ಅಪ್ಪನ ಬೆವರ ಹನಿಗೆ
ಅವ್ವನ ಕಣ್ಣ ಹನಿ ಸೇರಿಸಿ
ಪದಕ ಪಡೆದವರು
ಎಲ್ಲೋ ಸಭೆ ನಡೆಸಿದ್ದಾರೆ
ಯಾವುದೋ ಪಾರ್ಕಿನಲ್ಲಿ!

ನೆಲ ಕದ್ದು
ಹಗಲು ಕದ್ದು
ರಾತ್ರಿಗಳನ್ನು ಕದ್ದವರು
ಊರ ಗರ್ಭದೊಳಿದ್ದರೂ
ಉಳಿಸಬೇಕಿದೆ
ಕೆಂಪೇಗೌಡನ ಗತ್ತಿನ ಊರನ್ನು
ಯಾಕೆಂದರೆ
ಅಲ್ಲಿ ನನ್ನವರಿದ್ದಾರೆ
ಗೂಡು ಬಿಟ್ಟು ಬಂದ
ನನ್ನವರಿದ್ದಾರೆ...

ಬಿ. ಶ್ರೀನಿವಾಸ ಹಾವೇರಿ
ಶಿರಸ್ತೇದಾರರು, ಜಿಲ್ಲಾ ನ್ಯಾಯಾಲಯ, ಹಾವೇರಿ

ಮೊದಲು ಆಗಬೇಕಾದ ಕೆಲಸ ಎನ್ನುವುದು ಸುಧಾರಣಾವಾದಿಗಳ ನಿಲುವಾಗಿತ್ತು. ದ್ರಾವಿಡ ಕಳಗಂ ಪಕ್ಷವು ತಮಿಳುನಾಡಿನಾದ್ಯಂತ ತನ್ನ ಶಾಖೆಗಳನ್ನು ತೆರೆದು ತಮಿಳು ರಾಷ್ಟ್ರೀಯತೆಯನ್ನು ಬೆಳೆಸುವ ಕೆಲಸವನ್ನು ಮಾಡಿತು. ತಮಿಳು ರಾಷ್ಟ್ರೀಯತೆ ಬೆಳೆಯುತ್ತಿದ್ದ ಸಂದರ್ಭದಲ್ಲಿಯೇ ತೆಲುಗು ಭಾಷಿಕರು ಪ್ರತ್ಯೇಕ ಆಂಧ್ರ ಪ್ರದೇಶ ಬೇಡಿಕೆಯನ್ನಿಟ್ಟು ಹೋರಾಟ ಆರಂಭಿಸಿದರು. ಇವೆರಡೂ ಒಟ್ಟೊಟ್ಟಿಗೆ ನಡೆದವು.

ತಮಿಳುನಾಡಿನಲ್ಲಿ ನಡೆದ ಇನ್ನೊಂದು ಮಹತ್ವದ ಘಟನೆಯೆಂದರೆ ೧೯೪೯ರಲ್ಲಿ ಸಿ. ಎನ್. ಅಣ್ಣಾದೊರೈ ಅವರ ನೇತೃತ್ವದಲ್ಲಿ 'ದ್ರಾವಿಡ ಮುನ್ನೇತ್ರ ಕಳಗಂ' (ಡಿ.ಎಂ.ಕೆ.) ಎಂಬ ಹೆಸರಿನ ಹೊಸ ಪಕ್ಷ ಹುಟ್ಟಿಕೊಂಡದ್ದು. ಪೆರಿಯಾರ್ ನೇತೃತ್ವದ ದ್ರಾವಿಡ ಕಳಗಂ ಪಕ್ಷದಲ್ಲಿ ಭಿನ್ನಮತ ಹುಟ್ಟಿಕೊಂಡು ಅದೇ ಪಕ್ಷದೊಳಗಿನ ಗುಂಪೊಂದು ಸಿ. ಎನ್. ಅಣ್ಣಾದೊರೈ ಅವರ ನೇತೃತ್ವದಲ್ಲಿ ಈ ಪ್ರತ್ಯೇಕ ಪಕ್ಷವನ್ನು ಸ್ಥಾಪಿಸಿತು. ಡಿ. ಎಂ.ಕೆ.ಯು ಬ್ರಾಹ್ಮಣ ವಿರೋಧಿ, ಉತ್ತರ ಭಾರತ ವಿರೋಧಿ ಹಾಗೂ ಆರ್ಯನ್ನರ ವಿರೋಧಿ ಪಕ್ಷವಾಗಿತ್ತು. ಎಂ. ಜಿ. ರಾಮಚಂದ್ರನ್, ಕೆ. ಆರ್. ರಾಮಸ್ವಾಮಿ, ಎಸ್. ಎಸ್. ರಾಜೇಂದ್ರನ್, ಎಂ. ಕರುಣಾನಿಧಿ, ಎನ್. ವಿ. ನಟರಾಜನ್ ಮುಂತಾದವರು ದ್ರಾವಿಡ ಮುನ್ನೇಟ್ರ ಕಳಗಂ ಪಕ್ಷವನ್ನು ಬೆಂಬಲಿಸಿದರು. ಪೆರಿಯಾರ್ ಮತ್ತು ಅಣ್ಣಾದೊರೈ ಇವರುಗಳ ನಡುವಿನ ಭಿನ್ನಾಭಿಪ್ರಾಯದ ಲಾಭವನ್ನು ಕಾಂಗ್ರೆಸ್ ಪಡೆದುಕೊಂಡಿತು. ೧೯೫೧-೫೨ರ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಜಯಗಳಿಸಿ ಸಿ. ರಾಜಗೋಪಾಲಾಚಾರಿಯವರು ಮುಖ್ಯಮಂತ್ರಿಗಳಾದರು. ಕಾಂಗ್ರೆಸ್ ಪಕ್ಷವು ದ್ರಾವಿಡ ಚಳವಳಿಯನ್ನು ತನ್ನದಾಗಿಸಿಕೊಳ್ಳುವ ಪ್ರಯತ್ನವನ್ನು ಮಾಡಿದಾಗ ಪೆರಿಯಾರ್ ಅವರು ಆ ಪ್ರಕ್ರಿಯೆಗೆ ಬೆಂಬಲ ನೀಡಿದರು. ಹಾಗಾಗಿ ದ್ರಾವಿಡ ಮುನ್ನೇಟ್ರ ಕಳಗಂ ದ್ರಾವಿಡ ಚಳವಳಿಯನ್ನು ತನ್ನದಾಗಿಸಿಕೊಳ್ಳುವ ಪ್ರಯತ್ನ ಮಾಡಿತು. ೧೯೫೦ರ ದಶಕದಲ್ಲಿ ಪೆರಿಯಾರ್ ಅವರು 'ದ್ರಾವಿಡ ರಾಜ್ಯ'ದ ಬೇಡಿಕೆಯನ್ನು ಕೈಬಿಟ್ಟು ತಮಿಳು ಭಾಷಿಕರಿರುವ ಪ್ರತ್ಯೇಕ ತಮಿಳುನಾಡಿನ ಸ್ಥಾಪನೆಗಾಗಿ ಹೋರಾಡಿದರು. 'ದ್ರಾವಿಡ ನಾಡು' ಸ್ಥಾಪನೆ ವಿಚಾರವನ್ನು ಮುಂದೆ ಕೈಗೆತ್ತಿಕೊಳ್ಳಲಾಗುವುದೆಂದು ತಿಳಿಸಿದರು. ತಮಿಳುನಾಡು, ತಮಿಳು ಭಾಷೆ ಹಾಗೂ ತಮಿಳು ಜನತೆಯ ಪರವಾಗಿರುವ ಪಕ್ಷಕ್ಕೆ ಪೆರಿಯಾರ್ ಬೆಂಬಲ ಸೂಚಿಸಿದರು. ಕಾಂಗ್ರೆಸ್ ಪೆರಿಯಾರ್ ಅವರ ವಿಚಾರವನ್ನು ಸರಿಯಾಗಿ ಬಳಸಿಕೊಂಡಿತು.

ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಬ್ರಾಹ್ಮಣೇತರ ಸಮುದಾಯದ ದ್ರಾವಿಡ ರಾಜ್ಯದ ಕಲ್ಪನೆಯ ಜೊತೆ ಜೊತೆಗೆ ರಾಜಕೀಯವಾಗಿ ಮದ್ರಾಸ್ ರಾಜ್ಯದೊಳಗೆ ಅನೇಕ ರೀತಿಯ ಬೆಳವಣಿಗೆಗಳು ಕಂಡುಬಂದವು. ನಾಗಪುರದಲ್ಲಿ ೧೯೨೦ರಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಪ್ರಕಾರ ಭಾರತವನ್ನು ೨೧ ಭಾಗಗಳನ್ನಾಗಿ ವಿಂಗಡಿಸುವ ತೀರ್ಮಾನ ತೆಗೆದುಕೊಳ್ಳಲಾಯಿತು. ಅದರಲ್ಲಿ ಮದ್ರಾಸ್ (ತಮಿಳು) ಪ್ರಾಂತ್ಯವೂ ಒಂದು. ಪ್ರಾಂತ್ಯಗಳನ್ನು ಭಾಷೆಯ ಆಧಾರದ ಮೇಲೆ ವಿಂಗಡಣೆ ಮಾಡಬೇಕೆಂದು ಕಾಂಗ್ರೆಸ್ ಒತ್ತಾಯಿಸಿತು. ೧೯೧೮ರಲ್ಲಿ ಮಾಂಟ್-ಫೋರ್ಡ್ ವರದಿಯು ಭಾಷಾವಾರು ಪ್ರಾಂತ್ಯ ರಚನೆಯಾಗಬೇಕೆಂದು ವರದಿ ನೀಡಿತ್ತು. ಆದರೆ ೧೯೫೦ರ ದಶಕದವರೆಗೂ ಭಾಷಾವಾರು ಪ್ರಾಂತ್ಯಗಳ ರಚನೆಯ ಕುರಿತಾದ ಹೋರಾಟಗಳು ನಿರಂತರವಾಗಿ ನಡೆದುಕೊಂಡೆ ಬಂದವು. ಈ ಕುರಿತಾಗಿ ಅನೇಕ ಆಯೋಗಗಳೂ ರಚನೆಗೊಂಡವು.

೧೯೩೮ರ ಮಾರ್ಚ್‌ನಲ್ಲಿ ಮದ್ರಾಸು ಶಾಸನ ಸಭೆಯಲ್ಲಿ ಆಂಧ್ರ, ತಮಿಳುನಾಡು, ಕರ್ನಾಟಕ ಹಾಗೂ ಕೇರಳ ಪ್ರದೇಶಗಳನ್ನು ಭಾಷಾಧಾರಿತ ರಾಜ್ಯಗಳನ್ನಾಗಿ ವಿಂಗಡಿಸಬೇಕೆನ್ನುವ ನಿರ್ಣಯ ಕೈಗೊಳ್ಳಲಾಯಿತು. ಅಂದಿನ ಮದ್ರಾಸ್ ರಾಜ್ಯದ ಮುಖ್ಯಮಂತ್ರಿಯಾಗಿದ್ದ ರಾಜಗೋಪಾಲಾಚಾರಿಯವರು ಪ್ರತ್ಯೇಕ ರಾಜ್ಯ ಬೇಡಿಕೆಯನ್ನು ವಿರೋಧಿಸಿದರು. ಇದು ಹೋರಾಟಕ್ಕೆ ಹಿನ್ನಡೆಯನ್ನುಂಟುಮಾಡಿತು. ಪ್ರತ್ಯೇಕ ಆಂಧ್ರದ ನಿರ್ಮಾಣವನ್ನು ಕೆಲವು ತಮಿಳಿನ ಮಂತ್ರಿಗಳು ವಿರೋಧಿಸಿದರು. ಮದ್ರಾಸ್ ತೆಲುಗು ಮತ್ತು ತಮಿಳು ಭಾಷಿಕರಿಗೆ ಕೇಂದ್ರಸ್ಥಾನವಾಯಿತು. ಏಕೆಂದರೆ ತೆಲುಗು ಭಾಷಿಕರ ಹಲವಾರು ಪ್ರದೇಶಗಳು ಹೈದರಾಬಾದಿನ ನಿಜಾಮರ ಅಧೀನದಲ್ಲಿದ್ದವು. ಮದ್ರಾಸ್ ರಾಜ್ಯದೊಳಗಿರಲು ತೆಲುಗು ಭಾಷಿಕರು ಇಷ್ಟಪಡಲಿಲ್ಲ. ಮದ್ರಾಸ್ ಶಾಸನ ಸಭೆಯಲ್ಲಿ ಆಂಧ್ರ ನಾಯಕರು ತೆಲುಗಿನಲ್ಲಿಯೆ ಮಾತನಾಡತೊಡಗಿದರು.

ಹೀಗಾಗಿ ತೆಲುಗು ಮತ್ತು ತಮಿಳು ಭಾಷಿಕರು ಮದ್ರಾಸ್ ರಾಜ್ಯದೊಳಗೆ ಪ್ರತ್ಯೇಕ ಪ್ರತ್ಯೇಕವಾಗಿಯೆ ಗುರುತಿಸಿಕೊಳ್ಳಲಾರಂಭಿಸಿದರು. ಸಂಯುಕ್ತ ಮದ್ರಾಸ್ ರಾಜ್ಯದಿಂದಾಗಿ


## ನಮ್ಮ ಕೆಲವು ಜನಪ್ರಿಯ ಪ್ರಕಟಣೆಗಳು




ರೂ. 350




ರೂ. 180




ರೂ. 175




ರೂ. 350



**ಹೇಮಂತ ಸಾಹಿತ್ಯ**

972-ಸಿ, 4ನೇ 'ಇ' ವಿಭಾಗ, 10ನೇ 'ಎ' ಮುಖ್ಯರಸ್ತೆ
ರಾಜಾಜಿನಗರ, ಬೆಂಗಳೂರು - 560 010
ದೂರವಾಣಿ : 23354619

ಆಗುವ ಅನರ್ಥಗಳ ಬಗ್ಗೆ ಸಂಯುಕ್ತ ಮದ್ರಾಸ್ ರಾಜ್ಯದ ಶಾಸನ ಸಭೆಯಲ್ಲಿ ಆಂಧ್ರದ ನಾಯಕರು ಹಲವು ವಿವರಿಸಿ, ಪ್ರತ್ಯೇಕ ರಾಜ್ಯ ಬೇಡಿಕೆಯನ್ನು ಮುಂದಿಟ್ಟರು. ಮದ್ರಾಸ್ ರಾಜ್ಯ ಸರಕಾರ ಮತ್ತು ಭಾರತ ಸರಕಾರಗಳೆರಡನ್ನೂ ಆಂಧ್ರದ ನಾಯಕರು ಟೀಕಿಸಿದರು. ಭಾಷಾವಾರು ಪ್ರಾಂತ್ಯಗಳ ರಚನೆಗೆ ಮೊದಲ ಆದ್ಯತೆ ನೀಡಿದ್ದ ಕಾಂಗ್ರೆಸ್, ಸ್ವಾತಂತ್ರ್ಯ ಬಂದು ಅಧಿಕಾರ ಚುಕ್ಕಾಣಿ ಹಿಡಿದ ಬಳಿಕ ಅದೇ ಸಮಸ್ಯೆಗೆ ದ್ವಿತೀಯ ಆದ್ಯತೆ ನೀಡಿತು.

ಆಂಧ್ರಪ್ರದೇಶದ ನಿರ್ಮಾಣ ವಿಳಂಬವಾಗುತ್ತಿರುವುದಕ್ಕೆ ಹಾಗೂ ಕಾಂಗ್ರೆಸ್‌ನ ಧೋರಣೆಯನ್ನು ವಿರೋಧಿಸಿ ಪೊಟ್ಟಿ ಶ್ರೀರಾಮುಲು ಅವರು ಆಮರಣಾಂತ ಉಪವಾಸ ಸತ್ಯಾಗ್ರಹ ಕೈಗೊಂಡು ೧೯೫೨ರ ಡಿಸೆಂಬರ್ ೧೫ರಂದು ನಿಧನರಾದರು. ಇದು ಆಂಧ್ರ ರಾಜ್ಯದ ಬೇಡಿಕೆ ಉಗ್ರರೂಪವನ್ನು ಪಡೆಯುವಂತೆ ಮಾಡಿ, ನೆಹರೂ ನೇತೃತ್ವದ ಸರಕಾರ ಪ್ರತ್ಯೇಕ ರಾಜ್ಯ ಬೇಡಿಕೆಯನ್ನು ಒಪ್ಪುವಂತೆ ಮಾಡಿತು. ಮದ್ರಾಸ್ ಆಂಧ್ರದ ರಾಜಧಾನಿಯಾಗುವುದಿಲ್ಲ ಹಾಗೂ ಅದು ತಮಿಳುನಾಡಿಗೆ ಸೇರುತ್ತದೆ ಎನ್ನುವ ತೀರ್ಮಾನವನ್ನು ನೆಹರೂ ಪ್ರಕಟಿಸಿದರು. ಏಕೆಂದರೆ ಮದ್ರಾಸ್ ಇಲ್ಲದ ಆಂಧ್ರರಾಜ್ಯ ಬೇಡ ಎನ್ನುವ ಕೂಗೂ ಇತ್ತು. ಕೊನೆಗೂ ಅಕ್ಟೋಬರ್ ೧೯೫೩ರಲ್ಲಿ ಆಂಧ್ರಪ್ರದೇಶ ಅಸ್ತಿತ್ವಕ್ಕೆ ಬಂದಿತು. ಹೀಗಾಗಿ ತೆಲುಗು ಭಾಷೆಯನ್ನಾಡುವ ಪ್ರದೇಶಗಳು ಮದ್ರಾಸ್ ರಾಜ್ಯದಿಂದ ಬೇರ್ಪಟ್ಟವು. ಏಕಕಾಲದಲ್ಲಿ ತಮಿಳು ಭಾಷೆಯನ್ನಾಡುವ ಪ್ರದೇಶಗಳು ಸೇರಿ ಮದ್ರಾಸ್ ರಾಜ್ಯದೊಳಗೆ ತಮಿಳುನಾಡು ಅಸ್ತಿತ್ವಕ್ಕೆ ಬಂದಿತು. ಆ ಸಂದರ್ಭದಲ್ಲಿ ಸಿ. ರಾಜಗೋಪಾಲಾಚಾರಿಯವರು ಮುಖ್ಯಮಂತ್ರಿಯಾಗಿದ್ದರು. ಅಕ್ಟೋಬರ್ ೨೫, ೧೯೫೩ರಲ್ಲಿ ಸೇಲಂನಲ್ಲಿ ತಮಿಳುನಾಡಿನ ರಾಜಕೀಯ ಸಮ್ಮೇಳನ ನಡೆಯಿತು. ಈ ಸಮ್ಮೇಳನದಲ್ಲಿ ಸಿ. ರಾಜಗೋಪಾಲಾಚಾರಿ, ಪಿ. ಸುಬ್ಬರಾಯನ್, ಕೆ. ಕಾಮರಾಜ್ ಮುಂತಾದವರು ಭಾಗವಹಿಸಿದರು. ಏಪ್ರಿಲ್ ೧೯೫೪ರಲ್ಲಿ ಸಿ. ರಾಜಗೋಪಾಲಾಚಾರಿಯವರು ರಾಜೀನಾಮೆ ನೀಡಿ, ಕೆ. ಕಾಮರಾಜ್ ಅವರು ೧೩ ಏಪ್ರಿಲ್ ೧೯೫೪ರಂದು ತಮಿಳುನಾಡಿನ ಮುಖ್ಯಮಂತ್ರಿಯಾದರು. ಆ ಸಂದರ್ಭದಲ್ಲಿ ಪೆರಿಯಾರ್‌ರವರು ಅವರಿಗೆ ಬೆಂಬಲ ಸೂಚಿಸಿದರು. ಏಕೆಂದರೆ ಕಾಮರಾಜ್‌ರವರು ಬ್ರಾಹ್ಮಣೇತರ ಸಮುದಾಯಕ್ಕೆ ಸೇರಿದವರಾಗಿದ್ದರು.

ಸಾಂಸ್ಕೃತಿಕವಾಗಿ ತಮಿಳುನಾಡು ರಚನೆಗೊಂಡಿದ್ದರೂ, ರಾಜಕೀಯವಾಗಿ ಅದು ಪೂರ್ಣಗೊಂಡಿದ್ದು ೧೯೫೬ರಲ್ಲಿಯೆ. ಮದ್ರಾಸ್ ರಾಜ್ಯದ ಅಧೀನದಲ್ಲಿದ್ದ ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೊಯಿಮತ್ತೂರು ಜಿಲ್ಲೆಯ ಕೊಳ್ಳೇಗಾಲ ತಾಲೂಕುಗಳು ೧೯೫೬ರಲ್ಲಿ ಕರ್ನಾಟಕಕ್ಕೆ ಸೇರಿಕೊಂಡವು. ಮದ್ರಾಸ್ ರಾಜ್ಯದ ಬಹುಮುಖ್ಯ ಭಾಗವಾಗಿದ್ದ ಮಲಬಾರ್ ಪ್ರಾಂತ್ಯ ೧೯೫೬ರಲ್ಲಿ ಕೇರಳದೊಂದಿಗೆ ಸೇರಿಕೊಂಡಿತು. ತಿರುವಾಂಕೂರು-ಕೊಚ್ಚಿನ್ ರಾಜ್ಯದ ಭಾಗವಾಗಿದ್ದ ಹಳೆಯ ತಿರುವಾಂಕೂರಿನ ದಕ್ಷಿಣ ಭಾಗಗಳಾದ ಕನ್ಯಾಕುಮಾರಿ ಜಿಲ್ಲೆಯ ತಾವೊಲಾ, ಅಗಸ್ತೀಶ್ವರಂ, ಕಾಲ್ಕುಳಂ ಮತ್ತು ವಿಲವಾನ್‌ಕೋಡ್ ತಾಲ್ಲೂಕುಗಳು ಮತ್ತು ಚೆಂಗೋಟ್ಟೈನ ಕೆಲವು ಭಾಗಗಳು ತಮಿಳುನಾಡಿನೊಂದಿಗೆ ಸೇರಿಕೊಂಡವು. ಈ ಎಲ್ಲ ಗಡಿ ಹೊಂದಾಣಿಕೆಗಳು ರಾಜ್ಯ ಪುನರ್ವಿಂಗಡಣಾ ಆಯೋಗದ ತೀರ್ಮಾನದಂತೆ ಆದವು. ಹೀಗಾಗಿ ನವೆಂಬರ್ ೧, ೧೯೫೬ರಲ್ಲಿ ತಮಿಳುನಾಡು ಪಡೆದುಕೊಂಡದ್ದಕ್ಕಿಂತ ಕಳೆದುಕೊಂಡದ್ದೇ ಹೆಚ್ಚು ಆದರೂ ತಮಿಳುನಾಡಿಗೊಂದು ಪ್ರತ್ಯೇಕ ಅಸ್ತಿತ್ವ ದೊರಕಿತು. ರಾಜಕೀಯವಾಗಿ ಅದು ಪೂರ್ಣ ಪ್ರಮಾಣದಲ್ಲಿ೧೯೫೬ರಲ್ಲಿ ಅಸ್ತಿತ್ವಕ್ಕೆ ಬಂದಿತು.

ಹೀಗೆ ತಮಿಳುನಾಡಿನ ಏಕೀಕರಣ ಚಳವಳಿಯು ಬ್ರಾಹ್ಮಣ ವಿರೋಧಿಯಾಗಿ ಉತ್ತರ ಭಾರತ ವಿರೋಧಿಯಾಗಿ ಹಾಗೂ ಸುಧಾರಣಾ ಚಳವಳಿಯಾಗಿ ನಡೆಯಿತು. ಆಂಧ್ರಪ್ರದೇಶವು ಭಾಷೆಯ ಆಧಾರದ ಮೇಲೆ ಪ್ರತ್ಯೇಕಗೊಂಡು ನೂತನ ರಾಜ್ಯವಾದಾಗ, ತಮಿಳುನಾಡು ತಮಿಳು ಭಾಷಿಕರ ರಾಜ್ಯವಾಗಿ ರೂಪುಗೊಂಡಿತು.

## ಮಾಡಿಕೋ ಆತ್ಮಾವಲೋಕನ

ಅಂತರಂಗದಲ್ಲಿ ನೀ ತುಂಬಿಕೊಂಡು ಸ್ವಾರ್ಥ
ಬಹಿರಂಗದಲ್ಲಿ ನಟಿಸುವೆ ಪರಮಾರ್ಥ
ನಿನ್ನ ಕಪಟವನ್ನು ಕಾಣನೆ ನಿನ್ನ ಭಗವಂತ ?

ಅಂತರಂಗದಲ್ಲಿ ಅಸೂಯೆ, ಅಸಹನೆ
ಬಹಿರಂಗದಲ್ಲಿ ಸನ್ನಡತೆಯ ನಟನೆ
ನಿನ್ನ ಕಪಟ ನಾಟಕವನ್ನು ಕಾಣನೆ ನಿನ್ನ ಭಗವಂತ ?

ಅಂತರಂಗದಲ್ಲಿ ವಿಷವನ್ನಿಟ್ಟುಕೊಂಡು
ನೀ ಪರರಿಗೆ ಅಮೃತವನ್ನು ಹೇಗೆ ತಾನೆ ಕೊಡಬಲ್ಲೆ ?
ಪರನಿಂದೆಯಿಂದ ನೀ ನೆಮ್ಮದಿಯನ್ನು ಹೇಗೆ ತಾನೆ
ಪಡೆಯಬಲ್ಲೆ ?


**ಪ್ರೊ|| ಶ್ರೀನಿವಾಸ್ ವಿ. ಸುತ್ರಾವೆ**
೧೬೪೬/೧೮, ಮಹಡಿ, ವಿದ್ಯಾನಗರ
ದಾವಣಗೆರೆ - ೫೭೭ ೦೦೫


ಆದರೆ ಅದು ಮದ್ರಾಸ್ ರಾಜ್ಯವಾಗಿಯೇ ಗುರುತಿಸಿಕೊಂಡಿತ್ತು. ರಾಜ್ಯ ಪುನರ್ವಿಂಗಡಣಾ ಆಯೋಗದ ಶಿಫಾರಸ್ಸಿನಂತೆ ಕರ್ನಾಟಕ ಮತ್ತು ಕೇರಳ ರಾಜ್ಯಗಳು ನವೆಂಬರ್ ೧, ೧೯೫೬ರಲ್ಲಿ ಅಸ್ತಿತ್ವಕ್ಕೆ ಬಂದಾಗ ತಮಿಳುನಾಡು ಅನೇಕ ಪ್ರದೇಶಗಳನ್ನು ಕಳೆದುಕೊಳ್ಳಬೇಕಾಯಿತು. ಗಡಿ ಹೊಂದಾಣಿಕೆಯೊಂದಿಗೆ ಆಧುನಿಕ ತಮಿಳುನಾಡು ರೂಪುಗೊಂಡಿದ್ದು ೧೯೫೬ರಲ್ಲಿ. ಪೆರಿಯಾರ್, ಅಣ್ಣಾದೊರೈ ಮುಂತಾದವರು ನಡೆಸಿದ ದ್ರಾವಿಡ ಚಳವಳಿಯ ಫಲವಾಗಿ ತಮಿಳುನಾಡು ಬಲಿಷ್ಠವಾಗಿ ರೂಪುಗೊಂಡಿತು. ತಮಿಳು ಭಾಷೆಯು ತಮಿಳೀಕರಣ ಪ್ರಕ್ರಿಯೆಯಿಂದಾಗಿ ರಾಜಕೀಯ ಹಾಗೂ ಆರ್ಥಿಕ ಸಾಮರ್ಥ್ಯವನ್ನು ಪಡೆದುಕೊಂಡಿತು. ತಮಿಳುನಾಡಿನ ರಾಜಕೀಯ ಪಕ್ಷಗಳು ಅಲ್ಲಿನ ಜನತೆ, ಭಾಷೆ ಹಾಗೂ ಸಂಸ್ಕೃತಿಯನ್ನು ಪ್ರಧಾನ ವಿಚಾರವನ್ನಾಗಿ ಇಟ್ಟುಕೊಂಡು ಹೋರಾಟ ಮಾಡಿದ್ದರಿಂದಾಗಿ, ಅಲ್ಲಿನ ಜನರ ಪ್ರೀತಿ ಮತ್ತು ವಿಶ್ವಾಸವನ್ನು ಗಳಿಸಿಕೊಂಡವು.

ಪ್ರಾದೇಶಿಕ ಪಕ್ಷಗಳ ಅನಿವಾರ್ಯತೆ ಏನು ಹಾಗೂ ಅವು ರಾಜ್ಯ ನಿರ್ಮಾಣದಲ್ಲಿ ಯಾವ ಪಾತ್ರವನ್ನು ವಹಿಸಬಹುದೆನ್ನುವುದನ್ನು ತಮಿಳುನಾಡಿನ ಪ್ರಾದೇಶಿಕ ಪಕ್ಷಗಳು ತೋರಿಸಿಕೊಟ್ಟವು. ಭಾರತದಾದ್ಯಂತ ತನ್ನ ಛಾಪನ್ನು ಒತ್ತಿದ್ದ ಕಾಂಗ್ರೆಸ್ ಪಕ್ಷ ಈ ಪ್ರಾದೇಶಿಕ ಪಕ್ಷಗಳೆದುರು ಸೋಲಬೇಕಾಗಿ ಬಂತು. ಏಕೆಂದರೆ ರಾಷ್ಟ್ರೀಯ ಹಾಗೂ ಪ್ರಾದೇಶಿಕ ಪಕ್ಷಗಳ ಆದ್ಯತೆಗಳು ಬೇರೆ ಬೇರೆಯದೇ ಆಗಿರುತ್ತವೆ. ಪ್ರಾದೇಶಿಕ ಪಕ್ಷಗಳು ತಮ್ಮ ಪ್ರದೇಶದ ಸಮಸ್ಯೆಗಳನ್ನೇ ಪ್ರಧಾನವಾದ ಪ್ರಣಾಳಿಕೆಯಾಗಿ ಹೊಂದಿದ್ದರೆ, ರಾಷ್ಟ್ರೀಯ ಪಕ್ಷಗಳು ಎಲ್ಲ ಪ್ರದೇಶಗಳಿಗೂ ಸರಿಹೊಂದಬಹುದಾದ ರಾಷ್ಟ್ರೀಯ ಮಾದರಿಯ ಅಭಿವೃದ್ಧಿ ಸೂತ್ರವನ್ನಾಧರಿಸಿದ ಪ್ರಣಾಳಿಕೆಯನ್ನು ಹೊಂದಿರುತ್ತವೆ. ತಮಿಳಿಗೆ ಶಾಸ್ತ್ರೀಯ ಸ್ಥಾನಮಾನ ಸಿಕ್ಕಿರುವುದು ಹಾಗೂ ತಮಿಳುನಾಡು ತನಗೆ ಬೇಕಾದದ್ದನ್ನು ಕೇಂದ್ರದಿಂದ ಪಡೆದುಕೊಳ್ಳಲು ಸಾಧ್ಯವಾಗಿದ್ದು ಅದರ ಪ್ರಾದೇಶಿಕ ಗಟ್ಟಿತನದಿಂದಾಗಿ. ಈ ಗಟ್ಟಿತನ ಸಾಧ್ಯವಾದದ್ದು ಪೆರಿಯಾರ್, ಅಣ್ಣಾದೊರೈ ಮುಂತಾದ ತಮಿಳುನಾಡಿನ ಭವಿಷ್ಯದ ಕುರಿತಾಗಿ ಚಿಂತನೆ ನಡೆಸಿದ ಮಹನೀಯರ ಪರಿಶ್ರಮದಿಂದಾಗಿ. ತಮಿಳು ಭಾಷೆಯನ್ನು ಶಾಸ್ತ್ರೀಯ ಭಾಷೆಯನ್ನಾಗಿ ಘೋಷಿಸಬೇಕೆಂಬ ಒತ್ತಾಯ ಬಹಳ ಹಿಂದಿನದ್ದು. ೧೮೮೭ರಲ್ಲಿ ಪರುತ್ತಿಮಲ್ ಕಲೈಂಞರ್ ಎಂಬ ವಿದ್ವಾಂಸರು ಈ ಬೇಡಿಕೆಯನ್ನು ಮಂಡಿಸಿದ್ದರು. ತಮಿಳುನಾಡಿನ ಅದೃಷ್ಟ ವೆಂಬಂತೆ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ಸಂಸ್ಕೃತ ಮತ್ತು ತಮಿಳು ಪ್ರಾಧ್ಯಾಪಕ ಜಾರ್ಜ್ ಎಲ್. ಹಾರ್ಟ್ ಎನ್ನುವವರು ತಮಿಳು ಭಾಷೆ ಶಾಸ್ತ್ರೀಯ ಸ್ಥಾನಮಾನಕ್ಕೆ ಅರ್ಹ ಎಂಬ ತನ್ನ ವಾದವನ್ನು ಮಂಡಿಸಿದರು. ಅವರ ಪ್ರಕಾರ ತಮಿಳು ಪುರಾತನ ಭಾಷೆ, ಅದು ಬೇರೆ ಭಾಷೆಯಿಂದ ಪ್ರಭಾವಿತಗೊಂಡಿಲ್ಲ, ಅದಕ್ಕೆ ಜಾಗತಿಕ ದೃಷ್ಟಿಕೋನ ಇದೆ ಹಾಗೂ ಭಾರತೀಯ ಸಂಸ್ಕೃತಿಗೆ ತಮಿಳು ಭಾಷೆ ಮೂಲ ತಳಹದಿ. ಹೀಗಾಗಿ ತಮಿಳು ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಲಭಿಸಲೇಬೇಕು ಎನ್ನುವ ಒತ್ತಾಯ ತೀವ್ರವಾಗಿ ಕಾಣಿಸಿಕೊಂಡಿತು. ಸಂಗಂ ಸಾಹಿತ್ಯವನ್ನು ತಮಿಳು ಭಾಷೆಯ ಪ್ರಾಚೀನತೆಯನ್ನು ಸಾಬೀತುಪಡಿಸಲು ಬಳಸಿಕೊಳ್ಳಲಾಯಿತು. ಡಿ. ಎಂ. ಕೆ. ಸರಕಾರ ಈ ನಿಟ್ಟಿನಲ್ಲಿ ಯಶಸ್ವಿಯಾಗಿ, ಯು.ಪಿ.ಎ. ಸರ್ಕಾರವನ್ನು ಒಪ್ಪಿಸಿ ತಮಿಳು ಭಾಷೆಗೆ ಶಾಸ್ತ್ರೀಯ ಸ್ಥಾನಮಾನವನ್ನು ಪಡೆದುಕೊಂಡಿತು. ಸಹಜವಾಗಿಯೆ ಶಾಸ್ತ್ರೀಯತೆಯ ಮೂಲಕ ಬರುವ ಲಾಭಗಳನ್ನು ತಮಿಳುನಾಡು ಪಡೆದುಕೊಂಡಿತು.

ವೈಭವಯುತವಾದ ಗತವನ್ನು ಕಟ್ಟುವ ಮೂಲಕ ವರ್ತಮಾನವನ್ನು ಸಮೃದ್ಧಗೊಳಿಸುವ ಪ್ರಯತ್ನ ತಮಿಳುನಾಡಿನಲ್ಲಿ ಸಾಕಷ್ಟು ನಡೆದಿದೆ ಹಾಗೂ ನಡೆಯುತ್ತಿದೆ. ಇದು ವಿಶೇಷ ಸ್ಥಾನಮಾನಗಳಿಗಾಗಿ ಹೋರಾಟ ನಡೆಸುವಾಗ ಅನುಸರಿಸುವ ವಿಧಾನ. ಇದು ಅನ್ಯಭಾಷಿಕರಿಗೆ ಸಹ್ಯವಾಗದಿದ್ದರೂ, ಹೋರಾಟ ನಡೆಸುವ ಭಾಷಿಕರಿಗೆ ಅಥವಾ

ರಾಜ್ಯಗಳಿಗೆ ಅನುಸರಿಸಲೇ ಬೇಕಾದ ತಂತ್ರವಾಗಿರುತ್ತದೆ. ಇದರರ್ಥ ಎಲ್ಲ ರಾಜ್ಯಗಳೂ ಈ ತಂತ್ರವನ್ನು ಅನುಸರಿಸುತ್ತವೆ ಎಂದಲ್ಲ, ಪ್ರತಿಯೊಂದು ರಾಜ್ಯವೂ ತನ್ನದೇ ಆದ ಧೋರಣೆಯನ್ನು ಹೊಂದಿರುತ್ತದೆ ಹಾಗೂ ಅಲ್ಲಿನ ಜನಸಾಮಾನ್ಯರು, ಬುದ್ಧಿಜೀವಿಗಳು ಹಾಗೂ ರಾಜಕಾರಣಿಗಳು ತಮ್ಮದೇ ಆದ ನಿಲುವನ್ನು ಹೊಂದಿರುತ್ತಾರೆ. ಈ ನಿಲುವುಗಳು ಒಂದಕ್ಕೊಂದು ಪೂರಕವಾಗಿರಬೇಕೆಂದೇನೂ ಇಲ್ಲ. ಉದಾಹರಣೆಗೆ, ಕರ್ನಾಟಕದಲ್ಲಿ ಕನ್ನಡದ ಶಾಸ್ತ್ರೀಯ ಸ್ಥಾನಮಾನದ ಬಗ್ಗೆ ಇರುವ ಭಿನ್ನ ನಿಲುವುಗಳು. ಇಲ್ಲಿನ ಸಾಹಿತಿಗಳು, ಸಮಾಜ ವಿಜ್ಞಾನಿಗಳು, ರಾಜಕಾರಣಿಗಳು ಹಾಗೂ ಕನ್ನಡಪರ ಸಂಘಟನೆಗಳು ಶಾಸ್ತ್ರೀಯತೆಯನ್ನು ತಮ್ಮದೇ ಆದ ಚೌಕಟ್ಟಿನಲ್ಲಿಟ್ಟು ವ್ಯಾಖ್ಯಾನಿಸುತ್ತಿರುವುದನ್ನು ಕಾಣಬಹುದಾಗಿದೆ. ಇನ್ನು ದುಡಿಯುವ ವರ್ಗಗಳಿಗೆ ಬದುಕಿನ ಪ್ರಶ್ನೆಯೇ ಮುಖ್ಯವಾಗಿರುವುದರಿಂದಾಗಿ ಶಾಸ್ತ್ರೀಯತೆ ಅವರ ಆದ್ಯತೆಯ ವಿಷಯವಾಗಿಲ್ಲ. ಕನ್ನಡದ ಮೂಲಕ ಸ್ವಾವಲಂಬಿಗಳಾಗಬಹುದೆನ್ನುವ ವಿಶ್ವಾಸವೂ ಅವರಿಗಿಲ್ಲ. ಕರ್ನಾಟಕದಲ್ಲಿ ಕರ್ನಾಟಕವನ್ನೇ ಪ್ರತಿನಿಧಿಸುವ ಸಮರ್ಥ ಪ್ರಾದೇಶಿಕ ಪಕ್ಷವೊಂದು ಇಲ್ಲದಿರುವುದು ಬಹುದೊಡ್ಡ ಕೊರತೆಯಾಗಿದೆ. ಹಲವಾರು ವ್ಯಕ್ತಿಗಳು ಕನ್ನಡದ ವಾರಸುದಾರರಾಗಿ ಸಂಸ್ಥೆಗಳನ್ನು ಕಟ್ಟಿಕೊಂಡು ಬೆಳೆಯುತ್ತಿರುವುದು ಕನ್ನಡದ ಉಳಿವಿಗೆ ಪೂರಕವಾಗುತ್ತೊ ಅಥವಾ ಮಾರಕವಾಗುತ್ತೊ ಎನ್ನುವುದನ್ನು ಕಾದು ನೋಡಬೇಕಾಗಿದೆ. ಇನ್ನು ಕರ್ನಾಟಕದೊಳಗೆ ಇರುವ ಅನ್ಯ ಭಾಷೆಗಳಾದ ತುಳು, ಕೊಡವ, ಕೊಂಕಣಿ, ಬ್ಯಾರಿ ಮುಂತಾದವು ಈ ಶಾಸ್ತ್ರೀಯತೆಯಿಂದ ತಮಗೇನು ಲಾಭ ಎನ್ನುವ ಚಿಂತನೆಯಲ್ಲಿ ತೊಡಗಿವೆ.

ಕೇಂದ್ರ ಸರ್ಕಾರ ಹೊರಡಿಸಿರುವ ಶಾಸ್ತ್ರೀಯ ಭಾಷೆಯ ಅರ್ಹತೆಗಳನ್ನು ಪಡೆದುಕೊಳ್ಳಲು ಅಥವಾ ಸಾಬೀತುಪಡಿಸಲು ಕರ್ನಾಟಕದಲ್ಲಿ ಭಗೀರಥ ಪ್ರಯತ್ನಗಳೂ ನಡೆದಿವೆ. ಕನ್ನಡಕ್ಕೆ ಶಾಸ್ತ್ರೀಯತೆಯನ್ನು ಪಡೆಯುವ ಸಾಮರ್ಥ್ಯ ಇದೆ ಅಥವಾ ಇಲ್ಲ ಎಂದು ವಾದಿಸುವ ಜೊತೆಗೆ ಭಾಷೆ ರಾಜಕೀಯದ ಅಧೀನದಲ್ಲಿರುತ್ತದೆ ಎನ್ನುವ ವಾಸ್ತವ ವಿಚಾರದ ಕಡೆಗೂ ಗಮನಹರಿಸಬೇಕಾಗುತ್ತದೆ. ಹೀಗಾಗಿ ಭಾಷಿಕ ಸಾಮರ್ಥ್ಯವಷ್ಟೇ ಸಾಕಾಗುವುದಿಲ್ಲ. ಅದರಲ್ಲೂ ಭಾಷಿಕ ನೆಲೆಯಲ್ಲಿಯೇ ಹಲವಾರು ವೈರುಧ್ಯಗಳಿರುವುದೂ ತಡೆಗೋಡೆಯಾಗಿ ಪರಿಣಮಿಸಿದೆ. ಕರ್ನಾಟಕವನ್ನು ಭಾಷಿಕ ನೆಲೆಯಿಂದಷ್ಟೆ ನೋಡದೆ ಭೌಗೋಳಿಕ ನೆಲೆಯಿಂದಲೂ ನೋಡುವ ಅನಿವಾರ್ಯತೆ ಇದೆ. ಭಾಷೆಯ ಭಾವುಕ ನೆಲೆ ಅದು ಪ್ರತಿನಿಧಿಸುವ ಪ್ರದೇಶದ ವಾಸ್ತವ ನೆಲೆಗಿಂತ ಭಿನ್ನವಾಗಿರುವ ಸಾಧ್ಯತೆಗಳೂ ಇರುತ್ತವೆ. ಅಂಥ ಸಂದರ್ಭಗಳಲ್ಲಿ ವೈರುಧ್ಯಗಳು ಕಾಣಿಸಿಕೊಳ್ಳಲಾರಂಭಿಸುತ್ತವೆ. ಆದರೆ ತಮಿಳುನಾಡು ಈ ನಿಟ್ಟಿನಲ್ಲಿ ಸಮತೋಲನವನ್ನು ಕಾಯ್ದುಕೊಂಡಿದೆ.

ತಮಿಳುನಾಡಿನಲ್ಲಿ ದ್ರಾವಿಡ ಚಳವಳಿಯಿಂದ ಏಕೀಕರಣದವರೆಗೆ ತಮಿಳೀಕರಣ ಪ್ರಕ್ರಿಯೆ ಏಕೈಕ ಅಜೆಂಡಾವಾಗಿ ಮುಂದುವರಿದಿದ್ದರಿಂದಾಗಿ ಅಲ್ಲಿನ ನೆಲ, ಜಲ ಹಾಗೂ ಭಾಷೆಯ ವಿಚಾರವಾಗಿ ಭಿನ್ನಮತಗಳು ಕಂಡುಬರಲಿಲ್ಲ. ಸರ್ಕಾರಗಳು ಬದಲಾದರೂ ತಮಿಳುನಾಡಿನ ನಾಡು ಹಾಗೂ ನುಡಿಯ ಕುರಿತಾದ ಧೋರಣೆಗಳು ಬದಲಾಗಲಿಲ್ಲ. ಇವೆಲ್ಲವೂ ರಾಜ್ಯದ ಹಾಗೂ ರಾಜ್ಯದ ಜನತೆಯ ಪ್ರಥಮ ಆದ್ಯತೆಯಾಗಿ ಪರಿಗಣಿತವಾದ್ದರಿಂದ ಅದಕ್ಕೊಂದು ಸ್ಪಷ್ಟ ರೂಪವನ್ನು ಕೊಡಲು ಸಾಧ್ಯವಾಯಿತು. ಇನ್ನು ತಮಿಳುನಾಡು ತನ್ನ ಕಾರ್ಯಸಾಧನೆಗೆ ಬಳಸಿದ ತಂತ್ರ ಅಥವಾ ವಿಧಾನದ ಕುರಿತು ಸಾಕಷ್ಟು ಚರ್ಚೆಗಳು ನಡೆದಿವೆ ಹಾಗೂ ನಡೆಯುತ್ತಿವೆ. ಅದರಲ್ಲೂ ತಮಿಳುನಾಡು ಸರ್ಕಾರ ಕೇಂದ್ರ ಸರ್ಕಾರದ ಮೇಲೆ ಹೇರಿದ ಒತ್ತಡ, ತಮಿಳು ಭಾಷೆಯ ಪ್ರಾಚೀನತೆಯ ಕುರಿತು ಮಂಡಿಸಿದ ವಾದ ಹಾಗೂ ಸಂಗಂ ಸಾಹಿತ್ಯವನ್ನು ತಮಿಳುನಾಡಿಗಷ್ಟೆ ಸೀಮಿತಗೊಳಿಸಿಕೊಂಡದ್ದು ಅನೇಕ ವಾದ-ಪ್ರತಿವಾದಗಳಿಗೆ ಕಾರಣವಾಯಿತು. ತಮಿಳುನಾಡಿನ ನಿಲುವನ್ನು ವಿರೋಧಿಸುವ ಹಾಗೂ ಅಲ್ಲಗಳೆಯುವ ಪ್ರಯತ್ನಗಳು ತಮಿಳುನಾಡಿನ ಎಲ್ಲೆಯಾಚೆಗೆ ನಡೆಯಲಾರಂಭಿಸಿದವು. ಇಲ್ಲಿ ಸರಿ ಅಥವಾ ತಪ್ಪು ಎಂದು ವಾದಿಸುವ ಬದಲು ಅಸ್ತಿತ್ವಕ್ಕಾಗಿ ಅಥವಾ ವಿಶೇಷ ಸೌಲಭ್ಯಗಳಿಗಾಗಿ ನಡೆಯುವ ಹೋರಾಟಗಳ ಅಜೆಂಡಾಗಳು, ಅವು ಅನುಷ್ಠಾನಗೊಳ್ಳುವ ರೀತಿ, ಅವುಗಳ ಹಿಂದಿರುವ ಉದ್ದೇಶಗಳು ಹಾಗೂ ಪರಿಣಾಮಗಳ ಕುರಿತು ಚಿಂತನೆ ಹಾಗೂ ಮರುಚಿಂತನೆ ನಡೆಸಿ ತೀರ್ಮಾನವೊಂದಕ್ಕೆ ಬರುವುದು ಸೂಕ್ತ ಅನಿಸುತ್ತದೆ.

ತಮಿಳು ಭಾಷೆಯಷ್ಟೆ ಶಾಸ್ತ್ರೀಯತೆಗೆ ಅರ್ಹ, ಮಿಕ್ಕಿದ ಭಾಷೆಗಳಿಗೆ ಈ ಅರ್ಹತೆ ಇಲ್ಲ ಎಂದು ತಮಿಳುನಾಡು ವಾದಿಸಿದರೆ ಅದು ಭಾಷಿಕ ಯಜಮಾನಿಕೆಯಾಗುತ್ತದೆ. ಸಂಸ್ಕೃತ, ಹಿಂದಿ ಹಾಗೂ ಇಂಗ್ಲಿಷ್ ಭಾಷೆಗಳು ಇದೇ ರೀತಿಯ ಯಜಮಾನಿಕೆಯನ್ನು ಸ್ಥಾಪಿಸಿದಾಗ ತಮಿಳು ಅದನ್ನು ವಿರೋಧಿಸಿತ್ತು. ಈ ವಿರೋಧದ ನೆಲೆಯಲ್ಲಿ ಕಟ್ಟಿದ ಚರಿತ್ರೆಯನ್ನು ತಮಿಳುನಾಡು ಮರೆಯಬಾರದು. ಅದೇ ರೀತಿ ಪೆರಿಯಾರ್ ಹುಟ್ಟು ಹಾಕಿದ ದ್ರಾವಿಡ ನಾಡು ಕಲ್ಪನೆ ದಕ್ಷಿಣ ಭಾರತಕ್ಕೆ ಸಂಬಂಧಪಟ್ಟಿದ್ದಾದರೂ ಅದರ ಲಾಭವನ್ನು ಪಡೆದುಕೊಂಡದ್ದು ತಮಿಳುನಾಡು. ಅದು ದ್ರಾವಿಡ ಚಳವಳಿಗೆ ಬಲವನ್ನು ನೀಡಿತು. ಸಂಗಂ ಸಾಹಿತ್ಯ ಬಹುತೇಕ ದಕ್ಷಿಣ ಭಾರತವನ್ನು ಒಳಗೊಂಡಿದೆಯಾದರೂ ಮತ್ತೊಮ್ಮೆ ಅದರ ಲಾಭವನ್ನು ಪಡೆದುಕೊಂಡದ್ದು ತಮಿಳುನಾಡು. ತಮಿಳು ಭಾಷೆಗೆ ಶಾಸ್ತ್ರೀಯ ಸ್ಥಾನವನ್ನು ಪಡೆಯುವಲ್ಲಿ ಅದು ನೆರವಾಯಿತು. ಯಾವುದೇ ಭಾಷೆ ತನ್ನ ಯಶಸ್ಸಿನ ಉತ್ತುಂಗಕ್ಕೆ ಏರಿದಾಗ ತಾನು ನಡೆದುಬಂದ ದಾರಿಯನ್ನೊಮ್ಮೆ ಹಿಂತಿರುಗಿ ನೋಡಬೇಕು. ಆಗ ತನ್ನ ಹಾಗೂ ಇತರ ಭಾಷೆಗಳ ಮಧ್ಯೆ ಇದ್ದ ಕೊಡು-ಕೊಳ್ಳುವ ಸಂಬಂಧಗಳ ಪರಿಚಯವಾಗಲು ಸಾಧ್ಯ. ಭಾಷೆಗೆ ಗಡಿಗಳಿರುವುದಿಲ್ಲ. ಆದರೆ ಭಾಷೆಯ ಆಧಾರದ ಮೇಲೆ ನಿರ್ಮಾಣಗೊಂಡ ರಾಜ್ಯಗಳಿಗೆ ಗಡಿಗಳಿರುತ್ತವೆ. ರಾಜ್ಯದ ಗಡಿಗಳನ್ನು ಭಾಷೆಯ ಮೇಲೂ ಹೇರಿದಾಗ ಎಲ್ಲೋ ಒಂದು ಕೊಂಡಿ ಕಳಚಿದ ಅನುಭವ ಭಾಷೆಗಳಿಗಾಗುವುದು ಸಹಜ. ಆಧುನಿಕ ರಾಜ್ಯ ಕಲ್ಪನೆಯಲ್ಲಿ ಇದು ಅನಿವಾರ್ಯವೂ ಆಗಿದೆ. ಅಷ್ಟಕ್ಕೂ ಇದೊಂದು ಆಂತರಿಕ ವಿಷಯ. ತಮಿಳುನಾಡು ತನ್ನ ರಾಜ್ಯದ ಹಿತಕ್ಕಾಗಿ ಯಾವ ಕಾರ್ಯತಂತ್ರವನ್ನು ಬೇಕಾದರೂ ರೂಪಿಸಬಹುದು ಹಾಗೂ ಪ್ರಜಾಪ್ರಭುತ್ವದಲ್ಲಿ ಇದಕ್ಕೆ ಅವಕಾಶವಿದೆ ಎನ್ನುವುದು ಲಿಬರಲ್ ವಾದ. ಅದೇ ರೀತಿ ಈ ರಾಜ್ಯದ ಮಾದರಿಯನ್ನು ಅನ್ಯ ರಾಜ್ಯಗಳು ಅನುಸರಿಸಬಹುದು ಅಥವಾ ಪರ್ಯಾಯ ಮಾರ್ಗೋಪಾಯಗಳನ್ನು ಕಂಡುಕೊಳ್ಳಬಹುದು. ಪ್ರತಿಯೊಂದು ರಾಜ್ಯವೂ ತನ್ನದೇ ಆದ ಭೌಗೋಳಿಕತೆ, ಸಂಸ್ಕೃತಿ ಹಾಗೂ ಚರಿತ್ರೆಯನ್ನು ಹೊಂದಿರುವುದರಿಂದಾಗಿ ಸ್ವಂತಿಕೆಯ ಆಧಾರದ ಮೇಲೆ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿರುತ್ತದೆ. ಆದರೆ ಇಲ್ಲಿರುವ ಪ್ರಶ್ನೆಯೆಂದರೆ ಸಮಕಾಲೀನ ಸಂದರ್ಭದ ಸಾಧನೆಗಳನ್ನು ವೈಭವೀಕರಿಸದೆ, ಸಾಧನೆಗಳನ್ನು ಆಗುಮಾಡಿಸಿದ ಚಾರಿತ್ರಿಕ ವಾಸ್ತವಗಳನ್ನು ಅರಿತುಕೊಂಡು ಮುನ್ನಡೆಯಬೇಕು ಎನ್ನುವುದೇ ಆಗಿದೆ.

**ಡಾ|| ಕೆ. ಮೋಹನ್‌ಕೃಷ್ಣ ರೈ**
ಉಪನ್ಯಾಸಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಬಹುಜನ ಮಾಧ್ಯಮ ಕೇಂದ್ರ (ರಿ)
ಅಂತರರಾಷ್ಟ್ರೀಯ ಪ್ರಸಿದ್ಧಿಯ ನಮ್ಮ ಇತ್ತೀಚಿನ ಪ್ರಕಟಣೆಗಳು
ಡಾ|| ಮ. ನ. ಜವರಯ್ಯ ಅವರ
Ambedkar versus Hindurashtra
ಬೆಲೆ : ರೂ. 500/-
ಸೂರಪ್ಪ (ಮಹಾ ಕಾದಂಬರಿ) ಬೆಲೆ : ರೂ. 300/-
ಅಂಬೇಡ್ಕರ್ ವರ್ಸಸ್ ಮನುವಾದ
ಬೆಲೆ : ರೂ. 400/-
ಸೋನಿಯಾ ಗಾಂಧಿ
(ಸೋನಿಯಾ ಗಾಂಧಿ ಅವರ ಜೀವನ ಸಂಘರ್ಷ)
ಬೆಲೆ : ರೂ. 400/-
Ambedkar and we the people of India
ಬೆಲೆ : ರೂ. 500/-
——— ಪ್ರತಿಗಳಿಗಾಗಿ ಸಂಪರ್ಕಿಸಿ ———
ಬಹುಜನ ಮಾಧ್ಯಮ ಕೇಂದ್ರ (ರಿ)
ನಂ. ಎಂ -13, 2ನೇ ಅಡ್ಡರಸ್ತೆ, 2ನೇ ಮುಖ್ಯ ರಸ್ತೆ, 2ನೇ ಹಂತ
ಇ ಮತ್ತು ಎಫ್ ಬ್ಲಾಕ್, ರಾಮಕೃಷ್ಣನಗರ, ಮೈಸೂರು - 570 022

# ಗಫೂರನ ಎತ್ತು

(ಶರತ್‌ಚಂದ್ರ ಚಟರ್ಜಿಯವರ ಬಂಗಾಳಿ ಕಥೆಯನ್ನಾಧರಿಸಿದ ನಾಟಕ)

ನಾಟಕ ಪ್ರಾರಂಭವಾಗುತ್ತಿದ್ದಂತೆ ರಂಗದ ಒಂದು ಬದಿಯಲ್ಲಿ ಮನೆಯಂತೆ ನಿಂತುಕೊಂಡಿರುವ ನಟರು, ಪಕ್ಕದಲ್ಲಿ ಎತ್ತಿನಂತೆ ನಿಂತ ನಟರು – ಎಲ್ಲರೂ ಅತೀ ಸರಳ ಉಡುಗೆಯಲ್ಲಿದ್ದಾರೆ. ಸೂತ್ರಧಾರ ಪ್ರವೇಶಿಸಿ ಪ್ರೇಕ್ಷಕರಿಗೆ ನಮಿಸುತ್ತಾನೆ.

ಸೂತ್ರಧಾರ : ಕಲಾಭಿಮಾನಿಗಳೇ, ನನಗೆ ಗೊತ್ತು, ನೀವು ನಮ್ಮ ನಾಟಕವನ್ನು ನೋಡಲಿಕ್ಕಾಗಿ ಬಂದಿದ್ದೀರಿ. ಹಾಗೇ ನೀವೆಲ್ಲಾ ಉದಾರ ಹೃದಯಿಗಳು – ವಿಚಾರವಂತರೂ ಎನ್ನುವುದೂ ನನಗೆ ಗೊತ್ತು. ನೋಡಿ, ಈ ನಾಟಕದ ಮೂಲೆಯಲ್ಲಿ ಇದೆಯಲ್ಲ ಇದು ಒಂದು ಮನೆ – ಓಹ್ ಕ್ಷಮಿಸಿ – ಇದು ಮನೆಯಲ್ಲ ಗುಡಿಸಲು. ಈ ಮನೆಯ ಒಡೆಯ ಗಫೂರ – ಮನೆಯ ಒಡೆಯ – ಅಂತಂದ್ರೆ ಮನೆ ಅವನದೇನಲ್ಲ – ಈ ಊರಿನ ಸಾಹುಕಾರ ಶಿವಯ್ಯನದ್ದು – ಇವನು ಅವರ ಗದ್ದೆಯಲ್ಲಿ ಹಗಲೂ ಇರುಳೂ ದುಡೀತಾನೆ, ಮನೇ ಕೂಲೀ ಮಾಡೋನು. ಅಂದಮೇಲೆ ಇರಲಿಕ್ಕೆ ಒಂದು ಚಾಟಾದರೂ ಬೇಡವೇ ? ಅದಕ್ಕೆ ಗಫೂರನಿಗೆ ಶಿವಯ್ಯನವರ ಆಶ್ರಯ ಯೋಜನೆಯಲ್ಲಿ ದಕ್ಕಿದ ಗುಡಿಸಲು ಇದು. ಇಲ್ಲಿ ನೋಡಿ, ಈ ಮನೆ ಹೇಗಿದೆ ಅಂತ. ಮನೆ ಬಾಗಿಲಿಗೆ ಬರೀ ಚೌಕಟ್ಟು ಮಾತ್ರ ಇದೆ. ಒಳಗಿರೋದು ಎಲ್ಲಾ ಹರಕು ಮುರುಕು ವಸ್ತುಗಳೇ, ಬೀದೀಲಿ ಹೋಗೋರಿಗೆಲ್ಲ ಕಾಣುತ್ತೆ. ಮನೆಗೆ ಹುಲ್ಲು ಹೊಚ್ಚದೆ ಎಷ್ಟು ವರ್ಷವಾಯ್ತೋ ಏನೋ – ಮಳೆ ನೀರೆಲ್ಲಾ ಗೋಡೇ ಮೇಲೆ ಸುರಿದು ಗೋಡೆ – ನೆಲಕ್ಕೆ ಬಿದ್ದಿದೆ. ಇಂಥ ಮನೆಯಲ್ಲೂ ಗಫೂರ ಬದುಕಿದ್ದಾ ನೆಂದರೆ, ನಿಜಕ್ಕೂ ಗಟ್ಟಿಗನೇ ಇರಬೇಕಲ್ಲವೇ ? ನಿಮಗೆ ಗಫೂರನನ್ನು ಪರಿಚಯ ಮಾಡಿಸ್ತೇನೆ – ತಾಳಿ – "ಗಫೂರ, ಏ ಗಫೂರ'' ಮನೇನಲ್ಲಿ ಇಲ್ಲ ಅಂತ ಕಾಣುತ್ತೆ. ಕೆಲಸಕ್ಕೆ ಹೋಗಿರಬೇಕು – ಗಫೂರನ ಸಂಸಾರ ಅಂದರೆ, ಅವನ ಮಗಳು ಅಮೀನಾ ಬೇಗಂ. ಹಾಗೂ ಅಗೋ, ಅಲ್ಲಿದೆಯಲ್ಲ ಆ ಎತ್ತು – ಅದರ ಹೆಸರು ಏನು ಗೊತ್ತೆ? 'ಮಹೇಶ' ಅಂತ. ಚೆನ್ನಾಗಿದೆ ಅಲ್ಲವೆ ? ಇಗೋ, ಇಲ್ಲಿ ನೋಡಿ – ಇದು ಶಿವಯ್ಯನವರ ಮನೆ. (ನಟರು ದೊಡ್ಡ ಮನೆಯಂತೆ ನಿಂತಿದ್ದಾರೆ) ಈ ಊರಿನ ಹೆಸರು ಕಾಶೀಪುರ ಅಂತ. ಕಾಶೀಪುರ ಸಣ್ಣ ಊರು. ಈ ಊರಿನ ಸಾಹುಕಾರ ಶಿವಯ್ಯ, ಇನ್ನೂ ಸಣ್ಣವನು. ಅವನ ಮನೆ ದೊಡ್ಡದೇ ವಿನಃ ಮನಸ್ಸಲ್ಲ. ನಿಮಗೆ ಶಿವಯ್ಯನ ಪರಿಚಯ ಮಾಡಿಸ್ತೇನೆ. "ಶಿವಯ್ಯನೋರೆ, ಶಿವಯ್ಯನೋರೆ'' – ಇಲ್ಲ – ಅವರೂ ಮನೇನಲ್ಲಿ ಇಲ್ಲಾಂತ ಕಾಣುತ್ತೆ. ಓಹ್ ಮರ್‍ತೇ ಬಿಟ್ಟಿದ್ದೆ. ಇವತ್ತು ಅವರ ಕಿರೀ ಮಗನ ಹುಟ್ಟು ಹಬ್ಬ. ಊರಿನ ದೇವಸ್ಥಾನದಲ್ಲಿ ಭಾರೀ ಪೂಜೆ ಇಟ್ಕೊಂಡಿದ್ದಾರೆ. ದೇವಸ್ಥಾನದ ಪೂಜಾರಿ ತರ್ಕರತ್ನ ಈಗತಾನೆ ಪೂಜೆ ಮುಗಿಸಿಕೊಂಡು ಬರ್‍ತಿದಾರೆ. ಆಯ್ತು ನಾನಿನ್ನು ಬರ್‍ತೀನಿ. ನಟನ ರಂಗ ಪ್ರವೇಶ ಆದಮೇಲೆ ಸೂತ್ರಧಾರನಿಗೇನು ಕೆಲಸ – ಆಮೇಲೆ ಸಿಕ್ಕೋಣ. (ಕೈ ಮುಗಿದು ಓಡಿಹೋಗುತ್ತಾನೆ)

ರೂಪಾಂತರ

**ಲಕ್ಷ್ಮೀನಾರಾಯಣ ಎಚ್. ವಿ.**

ತರ್ಕರತ್ನ : (ಗಫೂರನ ಮನೆಯಿಂದ ಸ್ವಲ್ಪ ದೂರದಲ್ಲಿ ನಿಂತಿದ್ದಾನೆ) ಗಫೂರ, ಏ ಗಫೂರ, - ಗಫೂರ, ಮನೇಲಿದ್ದೀಯೋ ಇಲ್ಲೋ... ಗಫೂರ್.

ಅಮೀನಾ : (ಬಾಗಿಲಿನ ಬಳಿ ಬಂದು) ಯಾಕೆ, ಅಪ್ಪನಿಗೆ ಜ್ವರ ಬಂದಿದೆ. ಏಳೋಕೂ ಆಗ್ತಾ ಇಲ್ಲ.

ತರ್ಕರತ್ನ : ಜ್ವರವಂತೆ ಜ್ವರ, ಆ ದರಿದ್ರದವನನ್ನು ಕರೀ. ಏ ಗಫೂರ - ಬಾರೋ ಹೊರಗೆ. (ಗಫೂರ



ನಡುಗುತ್ತಾ ನಿಧಾನವಾಗಿ ಬಾಗಿಲಿಗೆ ಬಂದು ನಿಲ್ಲುತ್ತಾನೆ) ಏ, ನೀಚ, ನಿನಗೆ ಮೈಮೇಲೆ ಎಚ್ಚರ ಇದೆಯೋ ಇಲ್ಲವೋ... ಇದು ಹಿಂದುಗಳ ಊರು. ಇದರ ಸಾಹುಕಾರರು ಬ್ರಾಹ್ಮಣರು ಗೊತ್ತಾ.

ಗಫೂರ : ಗೊತ್ತು ಸ್ವಾಮೀ... ನಾನೇನು ಮಾಡ್ದೆ ಅಂತ...

ತರ್ಕರತ್ನ : ಅದೇನಯ್ಯ ಅದು. ಆ ಎತ್ತನ್ನು ನಾನು ಬೆಳಿಗ್ಗೆ ದೇವಸ್ಥಾನಕ್ಕೆ ಹೋಗುವಾಗ ನೋಡಿದ್ದೆ. ಅದೇ ಕಂಬಕ್ಕೆ ಕಟ್ಟಿದ್ದೆ. ಈಗ ಮಧ್ಯಾಹ್ನ ಮುಗೀತಾ ಬಂತು. ಈಗಲೂ ಅಲ್ಲೇ ಕಟ್ಟಿದೆಯಲ್ಲ. ಆ ಎತ್ತು ಸತ್ತು ಹೋಗೋಲ್ವೇನೋ. ಗೋ ಹತ್ಯೆಯಾದರೆ ನಮ್ಮ ಒಡೆಯರು ನಿನ್ನ ಜೀವಂತ ಹುಗಿಸಿಬಿಡ್ತಾರೆ. ಅವರು ಅಂತಿಂಥ ಬ್ರಾಹ್ಮಣರಲ್ಲ.

ಗಫೂರ : ಏನು ಮಾಡಲಿ ಪಂಡಿತರೇ ? ಬೇರೆ ಉಪಾಯವೇ ಇಲ್ಲ. ೩-೪ ದಿನದಿಂದ ಜ್ವರ ಬರ್‍ತಾ ಇದೆ. ಸ್ವಲ್ಪ ದೂರ ಹೋಗಿ ಮೇಯಿಸಿಬರೋಣ ಅಂದರೆ, ನಡಿಯುವಾಗ ಕಣ್ಣು ಕತ್ತಲು ಬರ್‍ತದೆ. ಬಿದ್ದುಬಿಡ್ತೇನೆ.

ತರ್ಕರತ್ನ: ಹಾಗಾದರೆ, ಬಿಚ್ಚಿ ಬಿಡು, ಅದಾಗಿಯೇ ಮೇಯ್ದು ಬರಲಿ.

ಗಫೂರ : ಬಿಚ್ಚಿ ಎಲ್ಲಿಗೆ ಅಟ್ಟಲಿ ಪಂಡಿತರೇ ? ಪೈರನ್ನು ಇನ್ನೂ ಪೂರಾ ಕೊಯ್ದು ಆಗಿಲ್ಲ. ಕೊಯ್ದ ಪೈರು ಕೂಡ ಹೊಲದಲ್ಲೇ ಇದೆ. ಬಯಲು ಒಣಗಿ ಹೋಗಿದೆ. ಎಲ್ಲೆಲ್ಲೂ - ಹುಲ್ಲಿನ ಕಡ್ಡಿ ಕೂಡ ಇಲ್ಲ. ದೂರ ಪೈರಿಗಾದರೂ ಬಾಯಿ ಹಾಕಿದರೆ ಏನು ಮಾಡಲಿ ?

ತರ್ಕರತ್ನ: ಹೋಗಲಿ. ಎಲ್ಲಾದರೂ ನೆರಳಲ್ಲಿ ಕಟ್ಟಿ ಮೇವು ಹಾಕು. ಕುಡೀಲಿಕ್ಕೆ ಕಲಗಚ್ಚಾದ್ರೂ ಕೊಡು.

ಗಫೂರ : ಕಲಗಚ್ಚಾ?

ತರ್ಕರತ್ನ : ಯಾಕೆ ಅದೂ ಇಲ್ಲವಾ ? ಮೇವೆಲ್ಲಾ ಏನು ಮಾಡಿದೆ ? ಎಲ್ಲಾ ಮಾರ್‍ಕೊಂಡು ತಿಂದೆ ಹೌದಲ್ವೆ ? ಎತ್ತಿಗೆ ಸ್ವಲ್ಪನೂ ಉಳಿಸಲಿಲ್ವೇನೋ ?

ಗಫೂರ : ಉಳಿಸೋದು ಹೇಗೆ ಪಂಡಿತರೆ ? ಇದ್ದದ್ದನ್ನು ಹಿಂದಿನ ಬಾಕಿ ಬಾಬ್ತು ಅಂತ ಸಾಹುಕಾರ್ರು ಇಟ್ಟುಕೊಂಡರು. ಅತ್ತು ಕರೆದು ಅಡ್ಡ ಬಿದ್ದು ಬೇಡ್ಕೊಂಡೆ. ನನ್ನ ಎತ್ತಿಗೆ ಒಂದು ಹತ್ತು ಹೊರೆನಾದರೂ ಕೊಡಿ ಅಂದೆ. ಮಹೇಶ ಹಸಿವಿಂದ ಸತ್ತು ಹೋಗುತ್ತೆ ಅಂತ ಗೋಗರೆದೆ.

ತರ್ಕರತ್ನ : ಮಹೇಶ, ಏನು ? ಇದರ ಹೆಸರು ಮಹೇಶ ಅಂತಾನ ? ಹ, ಹ, ತಮಾಷೆಯಾಗಿದೆ.

ಗಫೂರ : ನಾನು ಎಷ್ಟು ಬೇಡ್ಕೊಂಡರೂ ದಣಿಗಳಿಗೆ ದಯೆ ಬರಲಿಲ್ಲ. ಎರಡು ತಿಂಗಳು ಗಂಜಿ ಬೇಯಿಸಲಿಕ್ಕೆ ಭತ್ತ ಕೊಟ್ಟರು. ಹುಲ್ಲನ್ನು ಮಾತ್ರ ಕೊಡಲೇ ಇಲ್ಲ. ಈ ಬಡ ಪಶುವಿಗೆ ಒಂದು ಮುಷ್ಟಿ ಹುಲ್ಲನ್ನು ಕೊಡಲಿಲ್ಲ.

ತರ್ಕರತ್ನ : ಏನು ಮಾತನಾಡ್ತೀಯ - ಜಮೀನ್ದಾರ್ರು ನಿನ್ನ ಸಂಸಾರನೆಲ್ಲಾ ಹೊಟ್ಟೆ ಹೊರೆಯಬೇಕೇನೋ, ನೀನು ರಾಮರಾಜ್ಯದಲ್ಲಿರೋ ನೀಚ. ಅದಕ್ಕೇ ಇಂಥ ಮಾತನಾಡ್ತೀಯ.

ಗಫೂರ : ನಾನು ಏನು ಮಾತನಾಡಿದೆ ? ಪಂಡಿತರೆ, ನೀವೇ ಹೇಳಿ. ನಾನು ಬಡವ. ಅವರಿಗೆ ಎಂದೂ ಎರಡು ಎಣಿಸಿದವನಲ್ಲ. ಸಾಹುಕಾರರ ೪ ಖಂಡುಗ ಗದ್ದೆ ಬೇಸಾಯ ಮಾಡ್ತೇನೆ. ಎರಡು ವರ್ಷದಿಂದ ಮಳೆ ಬಿದ್ದಿಲ್ಲ. ಅಪ್ಪ - ಮಗಳು, ಅರೆ ಹೊಟ್ಟೆ ಉಂಡು ಬದುಕ್ತಾ ಇದೀವಿ. ಆ ಮಹೇಶನ್ನ ನೋಡಿ - ಎಲುಬುಗಳು ಎದ್ದು ಕಾಣ್ತಾ ಇವೆ. ಸ್ವಲ್ಪ ಮೇವನ್ನು ನೀವಾದರೂ ಕೊಡಿ. ೧-೨ ದಿನಾದರೂ ಅದಕ್ಕೆ ಹೊಟ್ಟೆ ತುಂಬಿಸ್ತೇನೆ. (ಗಫೂರ ತರ್ಕರತ್ನನ ಕಾಲು ಹಿಡಿದುಕೊಳ್ಳುತ್ತಾನೆ)

ತರ್ಕರತ್ನ : ಥೂ, ಧರಿದ್ರ, ನನ್ನ ಮುಟ್ಟ್‌ಬಿಟ್ಟೆಯಲ್ಲೋ; ನೀನು ಸತ್ತೋಗು; ಥೂ ಸ್ನಾನ ಮಾಡ್ಬೇಕಾಯ್ತು.

ಗಫೂರ : ಇಲ್ಲ ಸ್ವಾಮಿ ಇಲ್ಲ - ಈ ವರ್ಷ ಸ್ವಲ್ಪ ಮೇವನ್ನು ನೀವು ಕೊಡಲೇ ಬೇಕು. ನಿಮ್ಮ ಮನೆ ಹಿತ್ತಲಿನಲ್ಲಿ ೨ ಹುಲ್ಲಿನ ರಾಶಿ ಇರೋದನ್ನು ನಾನು ನೋಡಿದ್ದೇನೆ. ಅದರಲ್ಲಿ ಸ್ವಲ್ಪ ಕೊಟ್ಟರೆ, ನಿಮಗೇನೂ ಹೊರೆಯಾಗೋದಿಲ್ಲ. ಮಹೇಶ ತುಂಬಾ ಒಳ್ಳೇ ಜೀವ. ಪಾಪ, ಮೂಕ ಪ್ರಾಣಿ, ಬಾಯಿ ಬಿಟ್ಟು ಹೇಳೋದಿಲ್ಲ. ಬರೀ ಕಣ್ಣು ಬಿಟ್ಟು ನೋಡ್ತಾ ಕಣ್ಣೀರು ಸುರಿಸ್ತಾ ಇರ್ತದೆ. ಒಂದು ಹತ್ತು ಹೊರೆ ಹುಲ್ಲು ಸಾಲ ಕೊಡಿ. ಮುಂದೆ ಖಂಡಿತಾ ತೀರಸ್ತೀನಿ.

ತರ್ಕರತ್ನ : ಹತ್ತು ಹೊರೆ ಹುಲ್ಲು ಬೇಕಂತೆ. ಹೇಗಾದರೂ ತೀರಸ್ತಾನಂತೆ - ಹೋಗಯ್ಯ ಹೋಗು.

ಗಫೂರ : ಹೋಗಲಿ ಸ್ವಾಮಿ, ನಿಮ್ಮ ಕೈನಲ್ಲಿ ಇರೋ ಆ ಎರಡು ಬಾಳೇ ಹಣ್ಣಾದರೂ ಕೊಡಿ. ಪಾಪ - ತಿನ್ನಲಿ.

ತರ್ಕರತ್ನ : ಹೋಗಯ್ಯ ಸಾಕು. ಆ ಎತ್ತನ್ನ ಸ್ವಲ್ಪ ಹಿಡ್ಕೋ ನಾನು ಹೋಗ್ಬೇಕು. (ತರ್ಕರತ್ನ ಹೊರಡಲು ಅನುವಾಗುತ್ತಿದ್ದಂತೆ, ಮಹೇಶ ಅವನ ಹತ್ತಿರ ಬರುತ್ತದೆ - ತರ್ಕರತ್ನ ಹೆದರಿ - ಹೌಹಾರಿ ಓಡಿಹೋಗುತ್ತಾನೆ - ಸ್ವಲ್ಪ ಮುಂದೆ ಹೋಗಿ - ಶಿವಯ್ಯನ ಮನೆ ಬಾಗಿಲಿನಲ್ಲಿ ನಿಂತು ಏ ಬೇವರ್ಸಿ; ಯಾರದ್ದಾದ್ರೂ ಪುಕಟೆ ಸಿಕ್ರೆ, ತಿನ್ನೋಣ ಅಂತಿದೀಯೇನೋ - ಆ ಎತ್ತನ್ನು ಹಂಗೇ ಬಿಟ್ಟಿದೆಯೊ ? ನಿರ್ಗಮಿಸುತ್ತಾನೆ).

ಗಫೂರ : (ಎತ್ತನ್ನು ಮುದ್ದಿಸುತ್ತಾ) ಓ ಮಹೇಶ, ನಿನಗೆ ಒಂದು ಹಿಡಿ ಹುಲ್ಲನ್ನು ಕೊಡೋರು ಈ ಕಾಶೀಪುರದಲ್ಲಿ ಯಾರೂ ಇಲ್ಲವೆ ? ಅವರ ಹತ್ತಿರ ಬೇಕಾದಷ್ಟಿದೆ. ಆದರೆ ಅದನ್ನು ಅವರು ಯಾರಿಗೂ ಕೊಡೋದಿಲ್ಲ. ಕೊಡದೆ ಇದ್ದರೆ ಹೋಗಲಿ ಬಿಡೋ (ಅಪ್ಪಿಕೊಂಡು ಮುದ್ದಿಸುತ್ತಾನೆ ) ನಿನ್ನ ಹುಲ್ಲನ್ನು ಕಸಿದುಕೊಂಡು ಅವರಾದರೂ ಚೆನ್ನಾಗಿರಲಿ. ಮಹೇಶ, ಈ ಬರಗಾಲದಲ್ಲಿ - ನಿನ್ನನ್ನು ಹ್ಯಾಗೆ ಬದುಕಿಸಲಿ. ನಿನ್ನ ಬಿಚ್ಚಿ ಬಿಡಲಾ ? ಬೇರೆಯವರ ಧಾನ್ಯಕ್ಕೆ ಬಾಯಿ ಹಾಕ್ತೀಯ. ನಿನ್ನ ದೇಹದಲ್ಲಿ ಶಕ್ತೀನೂ ಇಲ್ಲ. ಎಂಟು ವರ್ಷದಿಂದ ದುಡುದು - ದುಡುದು ಹಣ್ಣಾಗಿದೀಯ. ಈಗ ನೀನು ಯಾರಿಗೂ ಬೇಡ. ಕಸಾಯಿಖಾನೆಗೆ ಮಾರು ಅಂತ ಊರ್‍ನವರು ಹೇಳ್ತಾರೆ. ಆದರೆ ಕಸಾಯಿಖಾನೆ ಅಂದ್ರೆ ನನ್ನ ಮೈ ಝುಂ ಅನ್ನುತ್ತೆ. ಅದು ಮಾತ್ರ ಎಂದೂ ಸಾಧ್ಯವಿಲ್ಲ.. ಮಹೇಶ ನನ್ನ ಮನೇಮೇಲಿರೋ ಮುಷ್ಟಿ ಹುಲ್ಲನ್ನೇ ಕಿತ್ತು ತಿನ್ನಿಸ್ತೀನಿ ತಗೊ... (ಮನೆಯ ಸೂರಿನಿಂದ ಹುಲ್ಲನ್ನು ಕಿತ್ತಂತೆ ನಟಿಸುತ್ತಾನೆ). ತಿನ್ನು... ಬೇಗ ತಿನ್ನು...

ಅಮೀನಾ : ಅಪ್ಪಾ, ಪುನಃ ಮನೆ ಮಾಡಿನ ಹುಲ್ಲನ್ನು ಮಹೇಶನಿಗೆ ತಿನ್ನಿಸುತ್ತಿದ್ದೀಯಾ ?

ಗಫೂರ : ಇಲ್ಲಮ್ಮ... ಹಳೇ ಹುಲ್ಲು - ಬಿದ್ದುಹೋಗ್ತಾ ಇತ್ತು, ಸ್ವಲ್ಪ ಮುಟ್ಟಿದೆ ಬಿತ್ತು ಅಷ್ಟೆ.

ಅಮೀನಾ : ನೀನು ಹುಲ್ಲನ್ನು ಎಳೀತಾ ಇದ್ದೆ. ನನಗೆ ಶಬ್ದ ಕೇಳಿತು.

ಗಫೂರ : ಇಲ್ಲ ಮಗೂ...

ಅಮೀನಾ : ಹೀಗೆ ಹುಲ್ಲನ್ನೆಲ್ಲಾ ಎಳೆದು ಛಾವಣಿ ಬರಿದಾದರೆ ಮಳೆಗಾಲದಲ್ಲಿ ಗೋಡೆ ಬಿದ್ದರೆ...

ಗಫೂರ : ಹುಂ... ಹೋಗಲಿ ಬಿಡು. ಸ್ವಲ್ಪ ಗಂಜೀ ತಿಳೀನಾದರೂ ಕೊಡು. ಪಾಪ - ಉಣಿಸ್ತೀನಿ. ಆಮೇಲೆ ನಾನು ಉಣ್ತೇನೆ - ಹಸಿವಾಗ್ತಿದೆ.

ಅಮೀನಾ : ಇವತ್ತು ಅನ್ನ ಬಸೀಲಿಲ್ಲಪ್ಪ - ಹಾಗೇ ಗಡಿಗೇನಲ್ಲೇ ಬತ್ತಿಸಿಬಿಟ್ಟೆ.

ಗಫೂರ : (ಏನೋ ಯೋಚಿಸಿ) ಅಮೀನಾ ನನಗ್ಯಾಕೋ ಛಳಿ ಜಾಸ್ತಿ ಆಗ್ತಾ ಇದೆ - ಜ್ವರ. ಊಟ ಬೇಡವೇನೋ ಅನಿಸುತ್ತೆ.

ಅಮೀನಾ : ಬಹಳ ಹಸಿವು ಅಂತ ಈಗ ತಾನೆ ಹೇಳಿದೆ ?

ಗಫೂರ : ಇಲ್ಲ... ಇಲ್ಲ... ಈಗ ಜ್ವರ ಬಂದಾಗೆ ಅನ್ನಿಸ್ತಿದೆ.

ಅಮೀನಾ : ಹಾಗಾದರೆ, ಮುಚ್ಚಿ ಇಡ್ತೇನೆ - ಸಂಜೆ ಉಣ್ತೀಯಾ.

ಗಫೂರ : (ಯೋಚಿಸಿ) ಇಲ್ಲ - ತಣಿದ ಗಂಜಿ ಉಂಡರೆ ಜ್ವರ ಜಾಸ್ತಿಯಾದೀತು.

ಅಮೀನಾ : ಹಾಗಾದರೆ...

ಗಫೂರ : ಹಾಗಾದರೆ, ಒಂದು ಕೆಲಸ ಮಾಡು – ಅದನ್ನ ಈಗ ಮಹೇಶನಿಗೆ ತಿನ್ನಿಸಿ ಬಿಡು.

ಅಮೀನಾ : ಹಾಗೇ ಆಗಲಿ ಅಪ್ಪ.

- ಕತ್ತಲೆ -

ದೃಶ್ಯ - ೨

ಗಫೂರನ ಮನೆಯ ಮುಂದೆ ಗಫೂರ ಚಿಂತಾಕ್ರಾಂತನಾಗಿದ್ದಾನೆ. ಅವನ ಮಗಳು ಒಳಗಿನಿಂದ ಇಣುಕುತ್ತಾಳೆ.

ಅಮೀನಾ : ಅಪ್ಪಾ, ಮಹೇಶನ್ನ ರಾಮಯ್ಯನವರು ದೊಡ್ಡಿಗೆ ಹೊಡ್ಸಿದ್ದಾರಂತೆ.

ಗಫೂರ : ಇಲ್ಲ ಬಿಡೆ, ಸುಳ್ಳು.. ಹುಚ್ಚಿ...

ಅಮೀನಾ : ನಿಜಕ್ಕೂ ಹೌದಪ್ಪ, ಅವರ ಮನೆ ಆಳೇ ನನಗೆ ಹೇಳಿದ. ನಿನಗೂ ಹೇಳು ಅಂತಂದ.


ಶುಭಾಶಯಗಳೊಂದಿಗೆ




ತನು ಮನು ಪ್ರಕಾಶನ
ಪ್ರಕಾಶಕರು ಮತ್ತು ಪುಸ್ತಕ ವ್ಯಾಪಾರಿಗಳು

ಎಚ್.ಐ.ಜಿ-1267, 'ಕಾವ್ಯಲೋಕ', 1ನೇ ತಿರುವು
2ನೇ ಹಂತ, ಶ್ರೀರಾಮಪುರ ಬಡಾವಣೆ, ಮೈಸೂರು - 570 023
ದೂರವಾಣಿ : 2363001

ಗಫೂರ : ಅದೇನು ಮಾಡಿತ್ತಂತೆ ?

ಅಮೀನಾ : ಅವರ ಹಿತ್ತಲಿಗೆ ಹೋಗಿ ಹೂವಿನ ಗಿಡನೆಲ್ಲಾ ಹಾಳುಮಾಡಿತಂತೆ.

ಗಫೂರ : ರಾಮಯ್ಯನವರು ಆ ಮೂಕ ಪ್ರಾಣಿಯನ್ನು ದೊಡ್ಡಿಗೆ ಹೊಡೆದರೆ... ದಿನ ಬೆಳಗಾದರೆ ಗೋಪೂಜೆ ಮಾಡೋ ರಾಮಯ್ಯನೋರು ಇಂಥ ಕೆಲಸ ಖಂಡಿತ ಮಾಡಿರಲಿಕ್ಕಿಲ್ಲ.

ಅಮೀನಾ : ಹೌದಪ್ಪ - ಕತ್ತಲೆ ಆಗೋದ್ರೊಳಗೆ ಹಣಕೊಟ್ಟು ಬಿಡಿಸ್ಕೊಂಡು ಬಾ.

ಗಫೂರ : ಹಣ ಎಲ್ಲಿಂದ ತರ್ಲಮ್ಮ. ಕೂಲಿಗೆ ಹೋಗದೆ ಒಂದು ವಾರ ಆಯ್ತು. ಈವತ್ತು ಜ್ವರ ಬಿಟ್ಟಿದೆ ಅಷ್ಟೆ.

ಅಮೀನಾ : ೩ ದಿನದೊಳಗೆ ಬಿಡಿಸಿ ತರದಿದ್ದರೆ ಎತ್ತನ್ನ ಹರಾಜು ಹಾಕ್ತಾರಂತೆ.

ಗಫೂರ : ಹರಾಜು ಹಾಕ್ಲಿಬಿಡು - ನಮ್ಮಿಬ್ಬರ ಋಣ ತೀರಿತು - ಅಷ್ಟೆ.

ಅಮೀನಾ : ಕಸಾಯಿಖಾನೆಯವರು ಅದನ್ನು ಕೊಂಡ್ಕೋತಾರೆ ಅಷ್ಟೆ.

ಗಫೂರ : (ಸ್ವಲ್ಪ ಮೌನದ ನಂತರ) ಅಮೀನಾ, ಆ ಹಿತ್ತಾಳೆ ತಟ್ಟೆ ಇದೆಯಲ್ಲಾ ಅದನ್ನು ತಗೊಂಡು ಬಾ.

ಅಮೀನಾ : ಯಾಕಪ್ಪಾ...

ಗಫೂರ : ಶೆಟ್ಟರ ಅಂಗಡಿಗೆ ಹೋಗಿ - ಇದನ್ನು ಅಡವಿಟ್ಟು - ಮಹೇಶನನ್ನು ಬಿಡಿಸ್ಕೊಂಡು ಬರ್ತೀನಿ.

ಅಮೀನಾ : ಆಯ್ತಪ್ಪಾ (ತಟ್ಟೆಯನ್ನು ತಂದುಕೊಡುತ್ತಾಳೆ)

- ಕತ್ತಲೆ -

ದೃಶ್ಯ - ೩

ಗಫೂರನ ಮನೆಯ ಮುಂದೆ ಗಫೂರ ಚಿಂತಿಸುತ್ತ ಕೂತಿದ್ದಾನೆ.

ಗಫೂರ : ಅಮೀನಾ, ಅನ್ನ ಆಯಿತಾ ? (ಅಮೀನಾ ಬಾಗಿಲ ಬಳಿ ಬಂದವಳು ತಲೆ ತಗ್ಗಿಸಿ ನಿಂತಿದ್ದಾಳೆ)

ಗಫೂರ : ಅಮೀನಾ, ಅನ್ನ ಇನ್ನೂ ಆಗಲಿಲ್ಲವಾ ? ಯಾಕೆ ಆಗಲಿಲ್ಲ?

ಅಮೀನಾ : ಅಕ್ಕಿ ಇಲ್ಲ ಅಪ್ಪ

ಗಫೂರ : ಅಕ್ಕಿ ಇಲ್ವಾ ? ಮೊದಲ್ಯಾಕೆ ಹೇಳ್ಲಿಲ್ಲ.

ಅಮೀನಾ : ನಿನ್ನೆ ರಾತ್ರೀನೆ ಹೇಳಿದ್ದೆ ಅಪ್ಪಾ.

ಗಫೂರ : ಮುಚ್ಚೆ ಬಾಯಿ, ನಿನ್ನೆ ರಾತ್ರಿ ಹೇಳಿದ್ದಿ, ನಂಗೆ ಹ್ಯಾಗೆ ನೆನಪಿರುತ್ತೆ, ಅಪ್ಪ ಅಂಡರೆಷ್ಟು ಬಿಟ್ಟರೆಷ್ಟು? ನಿನಗೊಂದು ೩ ಹೊತ್ತು ಇದ್ದರೆ ಸರಿ - ಹೋಗಲಿ - ಒಂದು ಚೆಂಬಿಗೆ ನೀರಾದರೂ ಕೊಡು, ಅದನ್ನ ಕುಡ್ಕೊಂಡಾದರೂ ಸಾಯ್ತೀನಿ. (ಮೌನ)

ಅದೂ ಇದೆಯೋ ಇಲ್ಲವೋ ?

(ಮೌನ) (ಚಕ್ಕನೆದ್ದು ಅಮೀನಾಳ ಕೆನ್ನೆಗೆ ಹೊಡೆಯುತ್ತಾನೆ.)

ಥೂ ದರಿದ್ರಗೆಟ್ಟವಳೆ, ನೀನು ಇಡೀ ದಿನ ಮಾಡೋದಾದರೂ ಏನು ? ಇಷ್ಟು ಜನ ಸಾಯ್ತಾರೆ, ನೀನ್ಯಾಕೆ ಸಾಯೋಲ್ಲ - ಹೋಗು - ಎಲ್ಲಾದರೂ ಹಾಳಾಗಿಹೋಗು.

ಅಮೀನಾ : ಇಲ್ಲಪ್ಪ, ಬೆಳಿಗ್ಗೆ ನೀರಿಗೆ ಹೋದವಳು ಈಗ ತಾನೆ ಮನೀಗೆ ಬಂದೆ... ಇಡೀ ಊರಿನ ಕೆರೆ ಬಾವಿ ಎಲ್ಲ ಬತ್ತಿಹೋಗಿದೆ. ಊರ ಮುಂದೆ ಒಂದು ಬಾವಿ ಇದೆ - ಅದರಲ್ಲಿ ತುಂಬಾ ಜನ. ಅದು ಮೇಲ್ಜಾತಿಯವರ ಬಾವಿ. ನಾನು ಅಲ್ಲಿ ನೀರು ಸೇದೋ ಹಾಗಿಲ್ಲ, ಮೊದಲು ಅವರು ಸೇದಿ ಆದ ಮೇಲೆ ಅವರಿಗಾಗಿ ಉಳಿದರೆ, ನನಗೆ ೧-೨ ಕೊಡ ಸೇದಿಕೊಡ್ತಾರೆ. ಇವತ್ತು ಬೆಳಿಗ್ಗಿಂದ ಯಾರೂ ಸೇದಿಕೊಡ್ಲಿಲ್ಲ - ಅಪ್ಪ ಹಾಗೇ ಬಂದೆ... (ಕೊಡ ಹಿಡಿದು ನೀರಿಗೆ ಹೋಗುತ್ತಾಳೆ)

ಗಫೂರ ದುಃಖದಿಂದ ಮಗಳನ್ನೇ ನೋಡುತ್ತಾನೆ.

(ಜಮೀನ್ದಾರನ ಆಳು ಅಮೀನಾಳನ್ನು ಆಸೆಗಣ್ಣಿನಿಂದ ನೋಡುತ್ತಾ ನಿಂತಿದ್ದಾನೆ - ಅಮೀನಾ ಸಿಟ್ಟಿನಿಂದ ಹೋಗುತ್ತಾಳೆ - ಅದನ್ನು ಗಫೂರ ಗಮನಿಸುತ್ತಾನೆ)

ಗಫೂರ : ಏ, ಏನಪ್ಪ ನಿಮ್ಮ ಸಾವ್ಕಾರ್ರು ಮಾತ್ರ ದೊಡ್ಡ ಜನ ಅದ್ಕೊಂಡಿದ್ದೆ - ಅವರ ಆಳು ಕೂಡ ದೊಡ್ಮನಷಾ ಅಂತ ಕಾಣುತ್ತೆ.

ಆಳು : ಏ - ಗಫೂರ; ಹಲ್ ಹಿಡ್ದ್ ಮಾತಾಡಲೇ ? ನೋಡು ನಮ್ಮ ಸಾವ್ಕಾರ್ರು ಹೇಳಿದಾರೆ - ಕೂಡಲೇ ಬರಬೇಕಂತೆ.

ಗಫೂರ : ನಂಗೆ ಇನ್ನೂ ಊಟ ಆಗಿಲ್ಲ, ಸ್ವಲ್ಪ ಹೊತ್ತು ಬಿಟ್ಟು ಬರ್ತೀನಿ, ಅಂತ ಹೇಳು.

ಆಳು : ಇಲ್ನೋಡು - ಬರ್ದೇ ಹೋದ್ರೆ - ಸರಿಯಾಗಿ ಛಡಿಯೇಟು ಕೊಟ್ಟು ಕರ್ಕೊಂಡು ಬಾ ಅಂದಿದ್ದಾರೆ.

ಗಫೂರ : ಏ, ನಾನೇನು ನಿಮ್ಮ ಸಾವ್ಕಾರರ ಗುಲಾಮ ಅಲ್ಲ, ಅವರು ಹೊಲ ಕೊಟ್ರೆ ನಾನು ಗೇಣಿ ಕೊಡ್ತೀನಿ, ಅವರು ಕೂಲಿ ಕೊಡ್ತಾರೆ - ನಾನು ಗೈಯ್ತೀನಿ. ನಾನೇನು ಪುಕ್ಕಟ್ಟೆ ಆಳಲ್ಲ ಗೊತ್ತಾಯ್ತಾ ? ನಾನು ಈಗ ಬರೋಲ್ಲ, ಹೋಗಿ ಹೇಳು.

ಆಳು : ಅಲ್ಲೋ, ನಿನ್ನ ಎತ್ತು ಅವರ್ಮನೆ ಹಿತ್ತಲಿಗೆ ನುಗ್ಗಿ ಗಿಡಾನೆಲ್ಲಾ ಹಾಳು ಮಾಡಿದೆಯಂತೆ - ಅದಕ್ಕೆ ಬರ್ಲಿಕ್ಕೆ ಹೇಳಿದಾರೆ - ಅಂದ್ರೆ ಬಾಯಿಗೆ ಬಂದಾಗೆ ಮಾತಾಡ್ತೀಯಲ್ಲೋ - ಹೋಗಿ ಎಲ್ಲಾ ಹೇಳ್ತೀನಿ ನೋಡು.

ಗಫೂರ : ಹೋಗೊ - ಹೋಗೊ ಹೇಳೊ. ಇಲ್ಲಿ ಯಾರನ್ನೇನೂ ಅನ್ನ ಗಂಜಿ ಕೊಟ್ಟು ನಿನ್ನ ಸಾವ್ಕಾರ್ರು ಸಾಕಿಲ್ಲ, ಅವರು ಕರ್ದಾಗ ಹೋಗ್ಬೇಕು ಅನ್ನೋದೇನು ? (ಇದನ್ನೆಲ್ಲಾ ಆಲಿಸುತ್ತಿದ್ದ ಸಾಹುಕಾರರು ಇನ್ನೂ ಮುಂದೆ ಬಂದು ಗಫೂರನ ಬೆನ್ನಿಗೆ ದೊಣ್ಣೆಯಿಂದ ಹೊಡೆಯುತ್ತಾರೆ - ಗಫೂರ ಕೂಗುತ್ತಾನೆ - ಆದರೂ ಹೊಡೆಯುತ್ತಾರೆ. ಗಫೂರ ತಪ್ಪೊಪ್ಪಿಕೊಂಡು ಕಾಲಿಗೆ ಬಿದ್ದ ಮೇಲೆ - ಕೋಲನ್ನು ಎಸೆದು ಹೊರಟು ಹೋಗುತ್ತಾರೆ - ಗಫೂರನು ಬೆನ್ನಿನ ಗಾಯವನ್ನು ನೋಡಿಕೊಳ್ಳುತ್ತಾ ಉಜ್ಜಿಕೊಳ್ಳುತ್ತಾ ಇರುವಾಗ ಅಮೀನಾ ಮಣ್ಣಿನ ಕೊಡದಲ್ಲಿ ನೀರು ತರುತ್ತಾಳೆ - ನಿಧಾನವಾಗಿ ಬಳಲಿ ಬರುತ್ತಿದ್ದಾಳೆ. ಇದ್ದಕ್ಕಿದ್ದಂತೆ ತಲೆ ಸುತ್ತಿ ಬಂದಹಾಗಾಗಿ ಬೀಳುತ್ತಾಳೆ. ಕೊಡ ಒಡೆದು ನೀರು ಚೆಲ್ಲುತ್ತದೆ - ಗಫೂರ ತಲೆ ಎತ್ತಿ ನೋಡುತ್ತಾನೆ. ಅಷ್ಟರಲ್ಲಿ ಮಹೇಶ ನೀರನ್ನು ಕುಡಿಯಲು ಬರುತ್ತದೆ. ಗಫೂರನ ಸಿಟ್ಟು ನೆತ್ತಿಗೇರುತ್ತದೆ - ಅಲ್ಲೇ ಇದ್ದ ದೊಣ್ಣೆಯನ್ನು ತೆಗೆದುಕೊಂಡು ಮಹೇಶನ ತಲೆಯ ಮೇಲೆ ಹೊಡೆಯುತ್ತಾನೆ - ಅದು ಅಲ್ಲೇ ಸತ್ತು ಬೀಳುತ್ತದೆ. ಒಬ್ಬಿಬ್ಬರು ಜನರು ಬರುತ್ತಾರೆ. ತಮ್ಮ ತಮ್ಮಲ್ಲೇ ಪಿಸು ಮಾತನ್ನಾಡಿ ಕೊಳ್ಳುತ್ತಾರೆ - ಅಷ್ಟರಲ್ಲಿ ತರ್ಕರತ್ನನೂ ಬರುತ್ತಾನೆ.)

ತರ್ಕರತ್ನ : ಏ ಗಫೂರ, ಇದು ಕಾಶೀಪುರ - ಹಿಂದುಗಳ ಊರು. ಎತ್ತು ಅಂದರೆ ಆ ಈಶ್ವರನ ವಾಹನ. ಅದನ್ನ ಕೊಂದು ಗೋಹತ್ಯಾ ಪಾಪವನ್ನು ಮಾಡಿದೀಯ - ಅದಕ್ಕೆ ನಿನಗೆ ಪ್ರಾಯಶ್ಚಿತ್ತ ಆಗಲೇಬೇಕು. ಇಲ್ಲವಾದರೆ ಇಡೀ ಊರೇ ಹಾಳಾಗಿಬಿಡುತ್ತೆ.

(ಗಫೂರ ಮಾತನಾಡುವುದಿಲ್ಲ; ಹಾಗೇ ಮೊಣಕಾಲಿನಲ್ಲಿ ಮುಖ ಹುದುಗಿಸಿ ಕುಳಿತಿದ್ದಾನೆ. ಜನರೆಲ್ಲಾ ಹೊರಟುಹೋಗುತ್ತಾರೆ.)

ಗಫೂರ : ಅಮೀನಾ, ನಡೆ, ನಾವು ಇಲ್ಲಿಂದ ಹೊರಡೋಣ.

ಅಮೀನಾ : ಎಲ್ಲಿಗೆ ಅಪ್ಪಾ ?

ಗಫೂರ : ಪಟ್ಟಣಕ್ಕೆ ಹೋಗಿಬಿಡೋಣ, ಅಲ್ಲಿ ಗಿರಣಿನಲ್ಲಿ ಕೆಲಸ ಇದೆಯಂತೆ - ಸೇರ್ಕೊಬಿಡೋಣ.

ಅಮೀನಾ : ಏನಪ್ಪಾ ಹೀಗೆ ಹೇಳ್ತಿದೀಯಾ, ಪಟ್ಟಣದಲ್ಲಿ ಗಿರಣಿ ಕೆಲಸಕ್ಕೆ ಸೇರಿದರೆ ಅಲ್ಲಿ ಮಾನ ಇಲ್ಲ - ಮರ್ಯಾದೆ ಇಲ್ಲ, ಬೇಡವೇ ಬೇಡ ಅಂತಿದ್ದೆ. ಪೇಟೆ ಪಟ್ಟಣ ಗಿರಣಿನಲ್ಲಿ ಹೆಂಗಸರಿಗೆ ಗೌರವ ಇಲ್ಲ - ಧರ್ಮ ಇರೋಲ್ಲ ಅಂತಿದ್ದೆಯಲ್ಲ.

ಗಫೂರ : ಹುಂ... ತಡ ಮಾಡಬೇಡ, ತುಂಬಾ ದೂರ ಹೋಗ್ಬೇಕು. ಜನರಿಗೆಲ್ಲಾ ಗೊತ್ತಾಗೋದು ಬೇಡ - ಬೇಗ ಹೊರಡು.

ಅಮೀನಾ : ಅಪ್ಪಾ ತಾಳು ಬರ್ತೀನಿ. (ಮನೆಯೊಳಗೆ ಹೋಗುತ್ತಾಳೆ)

ಇಬ್ಬರು ಧಡೂತಿ ವ್ಯಕ್ತಿಗಳು ಬಿದಿರು ದೊಣ್ಣೆ ಹಿಡಿದುಕೊಂಡು ಕೈಯಲ್ಲಿ ಚೂರಿ - ಒಂದು ಕೊಳಕು ಚೀಲ ತೆಗೆದುಕೊಂಡು ಬರುತ್ತಾರೆ. ಗಫೂರ ಅವರನ್ನು ನೋಡುತ್ತಿದ್ದಂತೆ - ಅಲ್ಲೇ ದುಃಖದಿಂದ ಕುಸಿಯುತ್ತಾನೆ - ಅವರು ಮಹೇಶ ಬಿದ್ದ ಜಾಗದಲ್ಲಿ ಅದರ ಚರ್ಮ ಸುಲಿಯಲು ಸಜ್ಜಾಗುತ್ತಿದ್ದಂತೆ - ಅಮೀನಾ ಹಿತ್ತಾಳೆಯ ತಟ್ಟೆಯನ್ನು ತರುತ್ತಾಳೆ.

ಗಫೂರ : ಅಮೀನಾ, ಬೇಡ ಅದನ್ನು ಅಲ್ಲೇ ಇಟ್ಟು ಬಾ - ಮಹೇಶನನ್ನು ಕೊಂದ ಪಾಪಕ್ಕೆ ಪ್ರಾಯಶ್ಚಿತ್ತವಾಗುತ್ತದೆ - ಅದು ಇಲ್ಲೇ ಇರಲಿ ಬುಡು.

(ಇಬ್ಬರೂ ಹೊರಟುನಿಂತಿದ್ದಾರೆ)

ಗಫೂರ : ಓ ಅಲ್ಲಾ; ನನ್ನ ಮಹೇಶ ಬಾಯಾರಿ ಸತ್ತುಹೋಯಿತು. ಅದಕ್ಕೆ ಮೇಯಲು ಯಾರೂ ಒಂದು ಗೇಣಿ ಭೂಮಿಯನ್ನು ಕೊಡಲಿಲ್ಲ, ಓ ದೇವರೆ, ನೀನು ನನ್ನನ್ನು ಎಷ್ಟು ಬೇಕಾದರೂ ಶಿಕ್ಷಿಸು, ಆದರೆ ಹಸಿದ ವರಿಗಾಗಿ ನೀನು ಕೊಟ್ಟ ಹುಲ್ಲನ್ನು, ಬಾಯಾರಿದವರಿಗಾಗಿ ನೀನು ಕೊಟ್ಟ ನೀರನ್ನು ಯಾರು ಮಹೇಶನಿಗೆ ಕೊಡಲಿಲ್ಲವೋ ಅವರನ್ನು ಮಾತ್ರ ಯಾವತ್ತೂ ಕ್ಷಮಿಸಬೇಡ.

- ಕತ್ತಲೆ -



ರೂಪಾಂತರ : ಲಕ್ಷ್ಮೀನಾರಾಯಣ ಎಚ್. ವಿ.
೧೨ನೇ ಅಡ್ಡ ರಸ್ತೆ, ಸೊಪ್ಪುಗುಡ್ಡೆ, ತೀರ್ಥಹಳ್ಳಿ - ೫೭೭೪೩೨


ಸಿಡಿ ರಾಮ್‌ಗಳು


ಕಾರ್ಡ್ಸ್


ಗಿಫ್ಟ್ಸ್


ಟಾಯ್ಸ್


ಮೂವಿಸ್, ಮ್ಯೂಸಿಕ್


ಸ್ಟೇಷನರಿ

ಪುಸ್ತಕ ಪ್ರಿಯರ ಮನೆ ಮನದಾಳದಲ್ಲಿ
ಅಚ್ಚಳಿಯದೆ ಉಳಿದಿರುವ
ನಿಮ್ಮ ಪ್ರೀತಿಯ
ವೈವಿಧ್ಯಮಯ
ಪುಸ್ತಕ ಭಂಡಾರ.







ನೀವು ಹಾಗೂ ನಿಮ್ಮ ಕುಟುಂಬದ ಸದಸ್ಯರಿಗೆ
ಪುಸ್ತಕ ಕೊಳ್ಳುವಿಕೆಗೆ ಅನುಕೂಲಕರವಾದ ವಾತಾವರಣ
1,00,000 ಚದರ ಅಡಿ ವಿಸ್ತೀರ್ಣದಲ್ಲಿ
ಹವಾನಿಯಂತ್ರಿತ ಸೌಲಭ್ಯದೊಂದಿಗೆ
(ಬೆಂಗಳೂರು ನಗರದಲ್ಲಿ 4 ಶಾಖೆಗಳು
ಹಾಗೂ ಮೈಸೂರು ನಗರದಲ್ಲಿಯೂ ಸಹ)

ದಿ ಬುಕ್ ಮಾಲ್




ಸಪ್ನ ಬುಕ್ ಹೌಸ್®

ಕನ್ನಡ ಮತ್ತು ಇಂಗ್ಲಿಷ್ ಪುಸ್ತಕಗಳ ಭಾರತದ ಅತಿದೊಡ್ಡ ಭಂಡಾರ

• ಗಾಂಧಿನಗರ: 3ನೇ ಮುಖ್ಯ ರಸ್ತೆ, ಬೆಂಗಳೂರು - 560 009.
**Ph:** (080) 4011 4455 **Fax:** 2226 9648 **e-mail:** sapnabooks@vsnl.com

• ಸದಾಶಿವನಗರ: ವೈಯಾಲಿಕಾವಲ್ ಮುಖ್ಯ ರಸ್ತೆ, ಭಾಷ್ಯಂ ವೃತ್ತದ ಹತ್ತಿರ,
ಬೆಂಗಳೂರು - 560 003. **Ph:** (080) 2344 6444

• ಜಯನಗರ: ನಂ. 14, 27ನೇ ಕ್ರಾಸ್, 4ನೇ ಬ್ಲಾಕ್,
ಬೆಂಗಳೂರು - 560 011. **Ph:** (080) 4130 7322.

• ಇಂದಿರಾನಗರ: ನಂ.2725, 80 ಅಡಿ ರಸ್ತೆ, ಚಿನ್ಮಯ ಕೃಷ್ಣ ದೇವಸ್ಥಾನದ ಎದುರು,
ಬೆಂಗಳೂರು - 560 038. **Ph:** (080) 4045 5999

• ಮೈಸೂರು: ನಂ.1433, ನಾರಾಯಣ ಶಾಸ್ತ್ರಿ ರಸ್ತೆ, ದೇವರಾಜ ಮೊಹಲ್ಲಾ,
ಮೈಸೂರು- 570 001. **Ph:** (0821) 400 4499


ಫ್ಯಾಷನ್ ಜ್ಯುಯೆಲ್ರಿ

**Shop**
**online @**
**www.sapnaonline.com**

# ನನ್ನ ದುರ್ಗಿಗುಡಿ ದಿನಗಳು

**ಯು. ಎಸ್. ವೆಂಕಟರಾಮನ್**

**ಈ** ಶೀರ್ಷಿಕೆ ನೋಡಿದೊಡನೆಯೆ, ಯಾವ ದುರ್ಗಿಗುಡಿ, ಯಾವ ದಿನಗಳು, ಇವುಗಳ ಮುಖ್ಯತ್ವವೇನು, ಇವನ್ನು ಏಕೆ ಹೇಳಬೇಕು ಎಂಬ ಪ್ರಶ್ನೆಗಳು ಸಹಜವಾಗಿ ಉದ್ಭವಿಸುತ್ತವೆ. ಆದರೆ ನನ್ನ ಮಟ್ಟಿಗೆ ಆ ದುರ್ಗಿಗುಡಿ ದಿನಗಳು ರೋಮಾಂಚನಕಾರಿಯಾಗಿದ್ದವು. ಬಾಲಕರಲ್ಲಿ ಸಹ ಉತ್ಸಾಹ ಮತ್ತು ಧೈರ್ಯ ಉಂಟುಮಾಡುವ ದಿನಗಳು. ಆ ಕಾಲ ನನ್ನ ಮನಸ್ಸಿನಲ್ಲಿ ಅಚ್ಚಳಿದಿದೆ. ಈಗ ಅಂದಿನ ದಿನಗಳನ್ನು ನೆನಸಿಕೊಳ್ಳುವುದರಲ್ಲಿ ಔಚಿತ್ಯವಿದೆ.

ದುರ್ಗಿಗುಡಿ ಶಿವಮೊಗ್ಗ ಪಟ್ಟಣದ ಒಂದು ಬಡಾವಣೆ. ಆ ಕಾಲ ೧೯೪೨ರ ಆಗಸ್ಟ್ ತಿಂಗಳ ದಿನಗಳು. ಇಷ್ಟು ಹೇಳಿದ ಮೇಲೆ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದ ೬೦ನೇ ವರ್ಷ ಆಚರಿಸುವಾಗ, ಅದರ ಹಿನ್ನೆಲೆ ಸಾಕಷ್ಟಿದೆ ಎಂಬುದರ ಅರಿವಾಗುತ್ತದೆ.

ದುರ್ಗಿಗುಡಿಯಲ್ಲಿ ನನ್ನ ದೊಡ್ಡಪ್ಪ ರಾಜಕಾರ್ಯಪ್ರಸಕ್ತ ಎಂ.ನರಸಿಂಹಯ್ಯನವರ ಮನೆಯಲ್ಲಿದ್ದೆ. ಈ ಮನೆ ಎದುರಿಗೆ ಶ್ರೀ ಹೆಚ್. ಕೆ. ಎನ್. ಆಚಾರ್ಯರ ಬಂಗಲೆ, ಮೈಸೂರು ಸರ್ಕಾರದಲ್ಲಿ ಮಂತ್ರಿಯಾಗಿದ್ದ ವಕೀಲ ಶ್ರೀ ಸಿದ್ದಪ್ಪನವರ ಬಂಗಲೆ. ಎದುರಿಗೆ ನನ್ನ ದೊಡ್ಡಪ್ಪನವರ ಸೂಪರಿಂಟೆಂಡಿಂಗ್ ಇಂಜಿನಿಯರ್ ಕಛೇರಿಯಿದ್ದಿತು. ಐದಾರು ಮನೆಗಳ ಆಚೆ ಪಂಡಿತ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳ ಮನೆಯಿದ್ದಿತು. ಇಲ್ಲೊಂದು ವಿಶೇಷ ವಾತಾವರಣ ಇತ್ತು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದೇನೆಂದರೆ, ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳ ಪುತ್ರ ಸೀತಾರಾಮ ಶಾಸ್ತ್ರಿ ಕುಕ್ಕೆ ಈ ಬಡಾವಣೆಯ ಯುವಕರ ಮತ್ತು ಬಾಲಕರ ಮುಖಂಡನಾಗಿದ್ದ. ಒಳ್ಳೆ ಕಾಲ್ಚೆಂಡು ಆಟಗಾರ, ಈತ ಮತ್ತು ಗೆಳೆಯರು ''ಜಾಲಿ ಸೆವೆನ್'' ಎಂಬ ಹೆಸರಿನ ಕ್ರೀಡಾ ಸಂಘಟನೆಯನ್ನು ಸ್ಥಾಪಿಸಿದ್ದರು. ಇದೇ ಕುಟುಂಬದ ಶ್ರೀಕಂಠ ಶಾಸ್ತ್ರಿ ಮುಂದೆ ಎಸ್. ಎಸ್. ಕುಕ್ಕೆ ಎಂಬ ಹೆಸರಿನಲ್ಲಿ ಉತ್ತಮ ಕಲಾವಿದನೆಂದು ಖ್ಯಾತಿ ಗಳಿಸಿ ಈಗಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಸಂಸ್ಥಾಪಕ ಜಂಟಿ ಕಾರ್ಯದರ್ಶಿಯಾದ್ದು. ಕುಕ್ಕೆಯವರಿಗೆ ೧೭-೧೮ ವಯಸ್ಸು. ನನಗಿಂತ ಐದಾರು ವರ್ಷ ದೊಡ್ಡವರು. ೧೯೪೨ರಲ್ಲಿ ನನ್ನ ವಯಸ್ಸು ೧೨. ತೀರ್ಥಹಳ್ಳಿ ರಸ್ತೆಯಲ್ಲಿರುವ ನ್ಯೂ ಮಿಡ್ಲ್ ಸ್ಕೂಲಿನಲ್ಲಿ ಲೋವರ್ ಸೆಕೆಂಡರಿ ಕಡೆಯ ವರ್ಷದಲ್ಲಿ ಓದುತ್ತಿದ್ದೆ. ಲಕ್ಷ್ಮೀನಾರಾಯಣ ರಾಯರು, ನಮ್ಮ ಹೆಡ್ ಮಾಸ್ಟರ್. ಅವರು ಇಂಗ್ಲಿಷ್, ಇತಿಹಾಸ, ಗಣಿತ ಬೋಧಿಸುತ್ತಿದ್ದ ಆಲ್‌ರೌಂಡರ್. ಇತಿಹಾಸ ಬೋಧಿಸುವಾಗ ಎಳೆಯ ಮನಸ್ಸುಗಳಿಗೆ ತಿಳಿಯುವಂತೆ ಸ್ವಾತಂತ್ರ್ಯ ಏಕೆ ಬೇಕೆಂಬುದನ್ನು ವಿವರಿಸುತ್ತಿದ್ದರು. ಬ್ರಿಟಿಷರು ಭಾರತದಲ್ಲಿ ಕಾಲಿಟ್ಟಾಗಿನಿಂದ, ಗಾಂಧಿ ಮುಖಂಡತ್ವದ ರಾಷ್ಟ್ರೀಯ ಚಳುವಳಿ ಬಗ್ಗೆ ಸ್ವಾರಸ್ಯಕರವಾಗಿ ಹೇಳುತ್ತಿದ್ದರು. ಇವರು ಪರೋಕ್ಷ ಸ್ವಾತಂತ್ರ್ಯ ಹೋರಾಟಗಾರರು.

೧೯೪೨ರ ಆಗಸ್ಟ್ ತಿಂಗಳ ೯ನೇ ತಾರೀಖನ್ನು 'ಬ್ರಿಟೀಷರೇ ಭಾರತ ಬಿಟ್ಟು ತೊಲಗಿ', 'ಆಂಗ್ರೇಜಿ ಚಲೇ ಜಾವ್', 'ಕ್ವಿಟ್ ಇಂಡಿಯ' ಎಂಬ ದಿನಾಚರಣೆಯಾಗಿ ಆಚರಿಸಬೇಕೆಂದು ಗಾಂಧೀಜಿ ಕರೆಕೊಟ್ಟಿದ್ದರು. ಈ ಕರೆಗೆ ದೇಶಾದ್ಯಂತ ಪೂರ್ವ ಸಿದ್ಧತೆಗಳಾದವು. ಎಲ್ಲೆಲ್ಲೂ ಸಭೆಗಳು, ಮೆರವಣಿಗೆಗಳು, ಇನ್ನೊಂದೆಡೆ ಸರ್ಕಾರದಿಂದ ದಮನ ಮಾಡುವ ಕಾರ್ಯಾಚರಣೆಗಳು, ಜನ ತಮ್ಮಿಂದ ತಾವೇ ಯಾವ ಒತ್ತಾಯಗಳೂ ಇಲ್ಲದೆ ಭಾಗವಹಿಸುತ್ತಿದ್ದರು. ಇಂತಹ ವಾತಾವರಣದಲ್ಲಿ ಬಾಲಕರು ಸಹ ಪ್ರಚೋದಿತರಾಗುತ್ತಿದ್ದರು.

ಪ್ರಾತಃಕಾಲ ಆರೇಳು ಘಂಟೆಗೆ ಪ್ರಭಾತ್ ಫೇರಿ. ಸುಮಾರು ೧೫-೨೦ ಬಾಲಕರು, ೩-೪ ಸ್ತ್ರೀಯರು, ಇಷ್ಟೇ ಸಂಖ್ಯೆಯ ಗಂಡಸರು, ಒಟ್ಟಿಗೆ ಸೇರಿ ಮೆರವಣಿಗೆ ಹೊರಡುವುದು. ಈ ನಮ್ಮ ತಂಡಕ್ಕೆ ಕುಕ್ಕೆ ಮುಖಂಡರು. ಎಲ್ಲರೂ ಒಂದೆಡೆ ಸೇರಿದ ನಂತರ ಕಾರ್ಯಕ್ರಮ ಆರಂಭ. 'ಬೋಲೋ ಭಾರತ್ ಮಾತಾ ಕೀ ಜೈ', 'ಮಹಾತ್ಮ ಗಾಂಧೀ ಕೀ ಜೈ', 'ವಂದೇ ಮಾತರಂ, ವಂದೇ ಮಾತರಂ', ಈ ಘೋಷಣೆಗಳ ಪುನರಾವೃತ್ತಿಯ ನಂತರ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' – ಇದೊಂದು ಮೂಲ ಘೋಷಣೆ. ಈ ಘೋಷಣೆಗಳಾದ ಮೇಲೆ ಇಬ್ಬಿಬ್ಬರು ಸಾಲಾಗಿ ನಡೆಯುತ್ತಿದ್ದ ಮೆರವಣಿಗೆ ಆರಂಭ. ಮೆರವಣಿಗೆಯಲ್ಲಿ,

ಭಾರತೀಯ ವೀರರೆ ಏಳಿ ಏಳೀ ಧೀರರೆ  
ಶೂರತನವ ಸಾರಿ ತೋರಲು ಕಾಲ ಸಿದ್ಧವಾಗಿದೆ  
ಏಳಿ ಏಳಿ ಕನ್ನಡಾಂಬೆಯ ಕುವರರೆ  
ಝಂಡಾ ಊಂಚಾ ರಹೆ ಹಮಾರ  
ವಿಜಯೀ ವಿಶ್ವತಿರಂಗ ಪ್ಯಾರ  
ಹಿಂದೂಸ್ಥಾನ್ ಹಮಾರಾ

ಎಂಬಂತಹ ಘೋಷಣೆಗಳು ಮತ್ತು ಮೇಲಿನ ದೇಶಭಕ್ತಿಗೀತೆಗಳೊಂದಿಗೆ ಮೆರವಣಿಗೆ ಮುಂದುವರಿದಂತೆ ಎದುರಿಗೆ ಪೊಲೀಸ್ ವ್ಯಾನ್ ಕಾಣಿಸಿಕೊಳ್ಳುತ್ತದೆ.



ಇಲ್ಲಿ ಒಂದು ವಿಪರ್ಯಾಸ ಕಾಣಬಹುದು. ವಿದ್ಯಾರ್ಥಿಗಳು ಶಾಲೆಯಲ್ಲಿ ''ಕಾಯೌ ಶ್ರೀ ಗೌರಿ ಕರುಣಾಲಹರಿ, ತೋಯಜಾಕ್ಷಿ ಶಂಕರೀಶ್ವರಿ'' ಎಂದು ಪ್ರಾರ್ಥಿಸಿ ನಂತರ ಇನ್ನೊಂದು ಪ್ರಾರ್ಥನೆಯಲ್ಲಿ ''ವಿಜಯವಾಗಲೆಮ್ಮ ಜಾರ್ಜ್ ಚಕ್ರವರ್ತಿ ಸಾರ್ವಭೌಮಗೆ'' ಎಂದು ಮುಗಿಸಿ, ಪ್ರಭಾತ್ ಫೇರಿಯಲ್ಲಿ ತದ್ವಿರುದ್ಧವಾದ ರಾಷ್ಟ್ರೀಯತೆಯನ್ನು ಸ್ವಾಭಾವಿಕವಾಗಿ ಪ್ರಕಟಿಸುವುದು. ವ್ಯಾನಿನಲ್ಲಿದ್ದ ಪೊಲೀಸರ ಸಮವಸ್ತ್ರ ಈಗಿನಂತಿರಲಿಲ್ಲ, ನೋಡಲು ಅಸಹ್ಯವಾಗಿತ್ತು. ತಲೆಗೆ ನೀಲಿ ರುಮಾಲು, ಎರಡು ಜೇಬಿರುವ ಕತ್ತು ಮುಚ್ಚುವ ನಿಲುವಂಗಿ, ನಿಕ್ಕರು, ಸೊಂಟಕ್ಕೆ ಚರ್ಮದ ಪಟ್ಟಿ ಬೂಡ್ಸ್ ಮತ್ತು ಕಾಲಿಗೆ ಬ್ಯಾಂಡೇಜ್ ರೀತಿಯ ಸುತ್ತುಪಟ್ಟಿ.

ಈ ವ್ಯಾನ್ ಸಮೀಪಿಸುತ್ತಿದ್ದಂತೆ ನಮ್ಮ ಮುಖಂಡರ ಆಜ್ಞೆ – ''ಹುಡುಗರೆಲ್ಲ ಚದುರಿ, ಚಲ್ಲಾಪಿಲ್ಲಿಯಾಗಿ ದೊಡ್ಡವರೆಲ್ಲಾ ಎದುರಿಸಿ ನಿಲ್ಲಿ'' ಸ್ವಲ್ಪ ದೂರದಲ್ಲೇ ವ್ಯಾನ್ ನಿಲ್ಲಿಸಿ, ಅದರಿಂದ ಇಳಿದ ಪೊಲೀಸರು ಕೈಯಲ್ಲಿ ಲಾಠಿ ಹಿಡಿದು ನುಗ್ಗಿ ಬರುವುದು. ನಂತರ ಕೈಗೆ ಸಿಕ್ಕಿದ ದೊಡ್ಡವರನ್ನು ಅರೆಸ್ಟ್ ಮಾಡಿದೀವಿ ಎಂದು ಹೇಳಿ ವ್ಯಾನಿನಲ್ಲಿ ಹತ್ತಿಸುವುದು. ಸಾಧಾರಣವಾಗಿ ಲಾಠಿ ಪ್ರಹಾರ ಮಾಡುತ್ತಿರಲಿಲ್ಲ, ಆದರೆ ಎದುರಿಸಿದರೆ ಮಾತ್ರ ಹೊಡೆತ ಬೀಳುತ್ತಿತ್ತು. ವ್ಯಾನಿನಲ್ಲಿ ಕೂರಿಸಿಕೊಂಡವರನ್ನು ಸಂಜೆತನಕ ಉಪವಾಸ ದಬ್ಬಿ ಸಂಜೆ ತೀರ್ಥಹಳ್ಳಿ ರಸ್ತೆಯಲ್ಲಿ, ವಿಪರೀತ ದೂರದಲ್ಲಿ ಬಿಡುಗಡೆ ಮಾಡುತ್ತಿದ್ದರು. ವ್ಯಾನಿನಲ್ಲೇ ಘೋಷಣೆ ಕೂಗಿದರೆ ಎದುರಿಗಿದ್ದ ಪೊಲೀಸ್ ಬೂಡ್ಸ್ ಕಾಲಿಂದ ತುಳಿಯುತ್ತಿದ್ದ. ಬಂಧಿತರಲ್ಲಿ ಹೆಣ್ಣು ಮಕ್ಕಳನ್ನು ಸ್ವಲ್ಪ ದೂರ ಕೊಂಡೊಯ್ದು ನಂತರ ಬಿಡುಗಡೆ ಮಾಡುತ್ತಿದ್ದರು. ಯಾರನ್ನೂ ಪೊಲೀಸ್ ಠಾಣೆಗೆ ಒಯ್ಯದೆ, ನಮಗೆ ತಿಳಿಯದ ಕಟ್ಟಡದಲ್ಲಿ ಕೂಡಿಹಾಕುತ್ತಿದ್ದರು. ಕಾವಲಿಗೆ ಇಬ್ಬರೇ ಪೇದೆಗಳು. ಸತ್ಯಾಗ್ರಹಿಗಳು ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿರಲಿಲ್ಲ. ಸಂಜೆ ಐದು ಘಂಟೆ ಸಮೀಪಿಸುತ್ತಿದ್ದಂತೆ ಮತ್ತೆ ವ್ಯಾನ್ ಹಾಜರಾಗಿ ಎಲ್ಲರನ್ನೂ ಅದರಲ್ಲಿ ತುಂಬಲಾಗುತ್ತಿತ್ತು. ನಂತರ ತೀರ್ಥಹಳ್ಳಿ ರಸ್ತೆಯಲ್ಲಿ ಕತ್ತಲಾದ ಮೇಲೆ ಬಿಡುಗಡೆ. ಆ ಕಾಲದಲ್ಲಿ ಪೊಲೀಸ್ ವ್ಯಾನ್‌ಗಳ ಸಂಖ್ಯೆ ಕಡಿಮೆಯಿತ್ತು. ಹೀಗಾಗಿ ಅನೇಕ ಪ್ರಭಾತ್ ಫೇರಿ ಜಾಥಾಗಳು ತುಂಗಾ ನದಿ ತೀರದಲ್ಲಿರುವ ರಾಮಣ್ಣ ಶೆಟ್ಟಿ ಪಾರ್ಕ್ ಸೇರಿ ಭಾರಿ ಸಭೆಗಳನ್ನು ಸಹ ನಡೆಸುತ್ತಿದ್ದವು. ಆಗ ನಮ್ಮನ್ನುದ್ದೇಶಿಸಿ ಮಾತನಾಡುತ್ತಿದ್ದವರು ಕಾಂಗ್ರೆಸ್ ಮತ್ತು ಹಿಂದೂ ಮಹಾ ಸಭಾ ಮುಖಂಡರಾಗಿದ್ದ ಎ. ಆರ್. ಬದ್ರಿನಾರಾಯಣ, ಡಾ|| ವೈ. ಪಾರ್ಥನಾರಾಯಣ ಪಂಡಿತರು. ಇನ್ನೊಬ್ಬರು ಭೂಪಾಲಂ ಚಂದ್ರಶೇಖರಯ್ಯನವರು.



ಇವರನ್ನು ಮೊದಲೇ ನೋಡಿದ್ದೆ. ಕಟ್ಟುಮಸ್ತಾದ ಆಳು, ಜುಬ್ಬ, ಕಚ್ಚೆಪಂಚೆ, ಕೇಸರಿ ಟೋಪಿ, ಕಾಲಿಗೆ ಮೆಟ್ಟು, ಇವರು ಉತ್ತಮ ಸಂಘಟಕರು ಮತ್ತು ಭಾಷಣಕಾರರೆಂದು ಹೆಸರು ಗಳಿಸಿದ್ದರು.

ಬದ್ರಿನಾರಾಯಣ ಮತ್ತು ಪಾರ್ಥನಾರಾಯಣ ಪಂಡಿತರು ಭೂಗತರಾಗಿದ್ದರು. ಭೂಗತರಾಗಿರುವವರು ನಿಜವಾಗಿಯೂ ಭೂಮಿಯಲ್ಲಿ ಅವಿತಿಟ್ಟುಕೊಂಡಿರುತ್ತಾರೆ ಎಂದು ತಿಳಿದಿದ್ದೆವು. ಇವರು ಆಗೊಮ್ಮೆ ಈಗೊಮ್ಮೆ ಕಾಣಿಸಿಕೊಂಡು ಪೊಲೀಸರ ಕೈಗೆ ಸಿಗದೆ ಜನರನ್ನು ಸಂಪರ್ಕಿಸುತ್ತಿದ್ದರು. ಪಾರ್ಥನಾರಾಯಣ ಪಂಡಿತರು ನಮ್ಮ ಮನೆಗೆ ಬರುತ್ತಿದ್ದರು. ಆದ್ದರಿಂದ ಅವರೊಂದಿಗೆ ಮಾತನಾಡಿದ್ದೇನೆ. ಸ್ವಾತಂತ್ರ್ಯ ಬಂದ ನಂತರ ಡಾ|| ಪಾರ್ಥನಾರಾಯಣ ಪಂಡಿತರು ಆಯುರ್ವೇದ ಆಸ್ಪತ್ರೆಯ ನಿರ್ದೇಶಕರಾದರು. ಬದ್ರಿನಾರಾಯಣ ಮಂತ್ರಿಯಾದರು.

ಹಿಂದೆ ತಿಳಿಸಿದಂತೆ ಪ್ರಭಾತ್ ಫೇರಿಯಲ್ಲಿರುವ ಬಾಲಕರು ಚದುರಬೇಕು. ಒಮ್ಮೆ ಕುತೂಹಲ ಉಂಟಾಗಿ, ನಾನು ದೊಡ್ಡವರ ಜೊತೆಯಿದ್ದು ಅವರೊಡನೆ ಏಕಿರಬಾರದು, ಏನಾಗುತ್ತೋ ನೋಡೋಣ, ಎಂದುಕೊಂಡೆ. ಸರಿ ದೊಡ್ಡವರಂತೆಯೇ ನಿಂತೆ. ಎಲ್ಲರೊಡನೆ ನನ್ನನ್ನೂ ವ್ಯಾನಿಗೆ ತಳ್ಳಿದರು. ಎಲ್ಲರ ಹೆಸರು, ವಿಳಾಸ ಕೇಳಿ ಪಡೆದುಕೊಂಡರು. ನನ್ನ ಸರದಿ ಬಂದಿತು. ನಾನು ನಿಜ ಹೇಳಿದೆ. ''ಇವನು ಇಂಜಿನಿಯರ್ ಸಾಹೇಬರ ವಿಳಾಸ ಹೇಳ್ತಾ ಇದ್ದಾನೆ. ಎಂತಹ ಕೊರಮ'' ಎಂದು ಒಬ್ಬ ಪೇದೆ ಹೇಳಿದ. ಎರಡು ಬಿಗೀಬೇಕು ಎನ್ನುತ್ತ ಬೆನ್ನಿಗೆ ಹೊಡೆದ. ಮತ್ತೆ ''ನಿಜ ಹೇಳು''ಎಂದ. ನಾನು ''ಸುಳ್ಳು ಹೇಳೋಲ್ಲ'' ಎಂದೆ. ಆಗ ಅವನ ಪ್ರತಿಕ್ರಿಯೆ ಬೇರೆಯಾಯಿತು. ''ಇವನನ್ನು ದೂರದಲ್ಲಿ ಬಿಡೋಣ. ಸಾಹೇಬರಿಗೆ ತಿಳಿಸೋಣ'' ಎಂದ. ಯಥಾಪ್ರಕಾರ ತೀರ್ಥಹಳ್ಳಿ ರಸ್ತೆಯಲ್ಲಿ ಸುಮಾರು ೬ ಘಂಟೆಗೆ ನನ್ನನ್ನು ಕೆಳಗಿಳಿಸಿದರು. ವ್ಯಾನ್‌ನಿಂದ ಇಳಿಸುವುದಕ್ಕೆ ಮುಂಚಿತವಾಗಿ ನನ್ನ ಕ್ಯಾನ್‌ವಾಸ್ ಶೂಸ್ ಕಿತ್ತುಕೊಂಡರು. (ಶಿವಮೊಗ್ಗದ ಭಾರಿ ಮಳೆಗೆ ಕ್ಯಾನ್‌ವಾಸ್ ಶೂಗಳೇ ಸರಿ.) ಆಗ ನನಗೆ ಮನದಟ್ಟಾಗಿದ್ದು ಪ್ರಭಾತ್ ಫೇರಿಯ ಸ್ವಯಂ ಸೇವಕರು ಪಾದರಕ್ಷೆ ಇಲ್ಲದೆ ಕಲ್ಲು-ಮುಳ್ಳು ತುಳಿಯಲು ಶಕ್ಯರಿರಬೇಕೆಂಬುದು. ನಡೆದುಕೊಂಡು ಮನೆ ಸೇರಲು ಸುಮಾರು ಮೂರು ಘಂಟೆ ಕಾಲ ಹಿಡಿಯಿತು. ನಾನು ಮನೆ ಸೇರುವ ಹೊತ್ತಿಗೆ ರಾತ್ರಿ ಒಂಬತ್ತು ಘಂಟೆಯಾಗಿರಬೇಕು. ಅಷ್ಟರಲ್ಲಿ ಪೊಲೀಸರು ನಮ್ಮ ದೊಡ್ಡಪ್ಪನವರಿಗೆ ವಿಷಯ ತಿಳಿಸಿದ್ದರು. ನನ್ನ ದೊಡ್ಡಪ್ಪ ನನ್ನನ್ನು ದಂಡಿಸಲಿಲ್ಲ. ''ಪ್ರಭಾತ್ ಫೇರಿಗೆ ಹೋಗು. ಇತರ ಹುಡುಗರಂತೆ ನಡೆದುಕೋ. ರಾತ್ರಿ ಹೊತ್ತಿನಲ್ಲಿ ನಿಧಾನವಾಗಿ ಬರುವುದು ಅಪಾಯ. ಇನ್ನು ಮುಂದೆ ಎಚ್ಚರಿಕೆಯಿಂದಿರು''. ಇದು ನನ್ನ ದೊಡ್ಡಮ್ಮನ ಪ್ರಭಾವ. ಆಕೆ ಪಕ್ಕಾ ಕಾಂಗ್ರೆಸ್ ಬೆಂಬಲಿಗರು. ರಾಷ್ಟ್ರಪತಿ ರಾಜೇಂದ್ರ ಬಾಬು ಅವರಿಂದ ಪ್ರಪ್ರಥಮವಾಗಿ ಸಮಾಜ ಸೇವೆಗಾಗಿ ಪ್ರೆಸಿಡೆಂಟ್ಸ್ ಚಿನ್ನದ ಮೆಡಲ್ ಪಡೆದವರು. ಈ ಅನುಭವ ನನ್ನ ಮುಂದಿನ ಜೀವನಕ್ಕೆ ಅನುಗುಣವಾಯಿತು. ಸ್ವಾತಂತ್ರ್ಯ ಹೋರಾಟದಲ್ಲಿ ಲಕ್ಷಗಟ್ಟಲೆ ಅನಾಮಿಕರು ಭಾಗವಹಿಸಿ ಈ ದೇಶಕ್ಕೆ ಸ್ವಾತಂತ್ರ್ಯ ಬರಲು ಅಳಿಲು ಸೇವೆ ಮಾಡಿದ್ದಾರೆ, ಏನನ್ನೂ ತಮಗಾಗಿ ನಿರೀಕ್ಷಿಸದೆ! ಸರ್ಕಾರಿ ನೌಕರಿಯಲ್ಲಿರುವ ಅನೇಕ ಜನರ ಒಲವು ಮತ್ತು ಬೆಂಬಲ ಸ್ವಾತಂತ್ರ್ಯ ಚಳುವಳಿಗಿತ್ತು ಎಂಬುದು ಸ್ಪಷ್ಟ. ಇದಕ್ಕೆ ನನ್ನ ದೊಡ್ಡಪ್ಪ ಮತ್ತು ಹೆಡ್ ಮಾಸ್ಟರ್ ಲಕ್ಷ್ಮೀನಾರಾಯಣರೇ ಉದಾಹರಣೆ. ಇಂತಹವರು ಲಕ್ಷೋಪಗಟ್ಟಲೆ ಇದ್ದರಲ್ಲವೆ? ಹೀಗಿಲ್ಲದಿದ್ದರೆ ನಮಗೆ ಸ್ವಾತಂತ್ರ್ಯ ಲಭಿಸುತ್ತಿತ್ತೆ?

ಯು. ಎಸ್. ವೆಂಕಟರಾಮನ್
೩೮೭, ೮ನೇ ಮುಖ್ಯ ರಸ್ತೆ, ಮಿಲ್ಕ್ ಕಾಲೋನಿ
ಬೆಂಗಳೂರು - ೫೬೦೦೫೫

# A Tonic for Your Child's Brain

# Children's Knowledge Bank

**Revised,**
**Updated & Redesigned**
**in Full Colour**



**890 Articles**
**800 Illustrations**
**800 Pages**

Each Vol. Rs 175/-
Set of 4 Vol. Rs 700/-
**Bargain Offer**
Pay Rs 399/- only

**General Knowledge ❖ Plants & Animals ❖ Human Body**
**Transport ❖ Medicine ❖ Science & Technology ❖ Universe & Space**
**Scientists & Inventions ❖ Earth Science ❖ Famous People**

Your little child is growing up. He is amazed and puzzled by the wonderful world around him. So many ***Hows and Whys*** come to his mind. He expects rational and logical explanations to his queries. He is also not content to learn things in bits and parts. And what happens if he does not get answers to his queries at all? He may start accepting anything and everything forced on to him. The making of a dull child begins thus.

Something needs to be done right now to ***nourish his brain to build well*** and help him realise his full potential.

Get Him **'CHILDREN'S KNOWLEDGE BANK'** Today!

The right Tonic for Your Child's Brain

The book series gradually builds up his foundation and IQ and acts as a tonic for his brain.



**PUSTAK MAHAL**™
Delhi • Mumbai • Patna • Hyderabad • Bangalore

10-B, Netaji Subhash Marg, Daryaganj, New Delhi-110 002
Tel: 011-2326 8292 / 93 • Fax: 011-2326 0518
E-mail: sales@pustakmahal.com
Website: www.pustakmahal.com

Authors are invited
All subjects considered

# TUNGABHADRA SPECIAL PRODUCTS

(100% EOU of TMPL - Green Card No. 760 dt.17-06-2007)

EXPLORATION



PRODUCTION



LOGISTICS











ENVIRONMENT & SOCIAL RESPONSIBILITY




TMPL

TUNGABHADRA MINERALS PVT. LTD.

A joint venture of Salgaocar Mining Industries (Goa) & Mysore Minerals Ltd. (GoK)

Regd Office : #322/3, II Floor, Sree Saptagiri Enclave, College Road, HOSPET - 583201

Tel : +91-8394-228 308, Fax : 224 998, URL : www.tml.co.in

## OUR ASSOCIATE COMPANIES

BMMPL
BALAJI MINES AND MINERALS PVT. LTD.

**Balaji Mines & Minerals Pvt. Ltd.,**
Suppliers of High Grade Iron Ore Lumps and
High Grade Iron Ore Fines. Mines at Jaisingpur Village

AURO
AURO MINERALS

**Auro Minerals Pvt. Ltd.,**
Suppliers of High Grade Iron Ore Lumps and
High Grade Iron Ore Fines. Mines at Kallahalli Village

# ಹಿಂದಣ ಹೆಜ್ಜೆಯನರಿತಲ್ಲದೆ ನಿಂದನಿಲುವನರಿಯಲಾಗದು

ಭಾಷೆ ಸಾಂಸ್ಕೃತಿಕ ಚರಿತ್ರೆಯ ವಾಹಕವೆಂಬುದನ್ನು ಎಲ್ಲರೂ ಬಲ್ಲರು. ಅದರಲ್ಲೂ ಕೆಲವು ನಿರ್ದಿಷ್ಟ ಪದಗಳ ಅರ್ಥ ಮತ್ತು ರೂಪಗಳಲ್ಲಾಗುವ ಪಲ್ಲಟಗಳು ಇಲ್ಲವೇ ವ್ಯತ್ಯಾಸಗಳು ನಮ್ಮ ಸಾಂಸ್ಕೃತಿಕ ಚರಿತ್ರೆಯಲ್ಲಾಗಿರಬಹುದಾದ ಸೂಕ್ಷ್ಮ ಮತ್ತು ಅಜ್ಞಾತ ತಿರುವುಗಳ ಕುರಿತಂತೆ ಮಹತ್ವದ ಮಾಹಿತಿಯನ್ನು ನೀಡಿಬಿಡಬಲ್ಲವು. ಅಂತಹ ಪದಗಳಲ್ಲಿನ ಪಲ್ಲಟಗಳು ಕೆಲವು ಆಚರಣೆಗಳ ಮೂಲ ರಹಸ್ಯಗಳನ್ನು ಉಸುರಬಲ್ಲವು. ಮತ್ತೂ ಕೆಲವು ಪದಗಳಂತೂ ಅವುಗಳ ಅರ್ಥಾನುಸಂಧಾನಗಳ ಪಲ್ಲಟಗಳ ಹಿನ್ನೆಲೆಯಲ್ಲಿ ಸ್ವಾರಸ್ಯಕರ ಅಂಶಗಳನ್ನೇ ಹುದುಗಿಸಿಕೊಂಡಿರಬಲ್ಲವು. ಪದಗಳ ಹುಟ್ಟಿನ ಮೂಲನೆಲೆಯ ನಿರ್ದಿಷ್ಟ ಜನಾಂಗಗಳಿಂದ ಮತ್ತೊಂದು ಜನಾಂಗದ, ಮತ್ತೊಂದು ಭಾಷೆಗೆ, ಇಲ್ಲವೇ ಭಾಷಾಗುಂಪಿಗೆ ಸೇರ್ಪಡೆಗೊಂಡಾಗ ಆಗುವ ರೂಪ-ಅರ್ಥಗಳಲ್ಲಿನ ಪಲ್ಲಟಗಳು, ಸಂಭವಿಸುವ ಅರ್ಥ ವೈರುಧ್ಯಗಳು, ಅವು ನಡೆಸುವ ಸಾಂಸ್ಕೃತಿಕ ಹೋರಾಟ, ನಂತರ ಕ್ರಮಕ್ರಮೇಣ ನಗಣ್ಯವಾಗಿ, ಮೂಲೆಗುಂಪಾಗಿ ಕೆಲವೊಮ್ಮೆ ಕಣ್ಮರೆಯಾಗುವ ಹಂತದವರೆಗೂ ಅವು ಕಟ್ಟಿಕೊಡುವ ಕಥನಗಳು ಸಾಂಸ್ಕೃತಿಕ ಚರಿತ್ರೆಯೊಂದನ್ನು ಪುನಾರೂಪಿಸುವಲ್ಲಿ ಮುಖ್ಯ ಸಾಧನಗಳಾಗಬಲ್ಲವು.

**ಲಕ್ಷ್ಮೀಪತಿ ಕೋಲಾರ**

ಅಪ್ಪ ಎಂದರೆ ಅಮ್ಮ ಎಂದಿದ್ದ ಅರ್ಥವು ಬದಲಾಗಿ ತಂದೆ ಸೂಚಕ ಪದವಾಗಿ ಮಾರ್ಪಟ್ಟಿರುವುದು
ುತ್ತು ಅಮ್ಮ, ಅಮ್ಮೆ ಎಂದರೆ ತಂದೆ ಎಂದಿದ್ದ ಅರ್ಥವು ಬದಲಾಗಿ ತಾಯಿ ಸೂಚಕ ಪದವಾಗಿ
ಾರ್ಪಟ್ಟಿರುವುದನ್ನು ಪಾ. ವೆಂ. ಆಚಾರ್ಯರು ಮನಗಾಣಿಸಿಕೊಟ್ಟಿರುವುದನ್ನು ನಾವಿಲ್ಲಿ ಗಮನಿಸ
ಬಹುದಾಗಿದೆ (ಪದಾರ್ಥ ಚಿಂತಾಮಣಿ, ಪು.೨೨). 'ಆದಿಮ ಶಿವ ರಹಸ್ಯ'ವನ್ನು ಕುರಿತಂತೆ ಅಧ್ಯಯನ
ಮಾಡುತ್ತಿರುವ ಸಂದರ್ಭದಲ್ಲಿ ನನ್ನ ಗಮನಕ್ಕೆ ಬಂದ ಅಂತಹ ಕೆಲವು ಸಂಸ್ಕೃತಿ ವಿಶಿಷ್ಟ ಪದಗಳ ಮೂಲ,
ಆ ಪದಗಳ ನಿಷ್ಪತ್ತಿ ಹಾಗೂ ಅವುಗಳಲ್ಲಾಗಿರುವ ಪಲ್ಲಟಗಳು ಕುತೂಹಲದಾಯಕವೆನಿಸಿದವು. ನನ್ನ
ಗ್ರಹಿಕೆಯೂ ಅಂತಿಮವೆಂದೇನೂ ನಾನು ಖಂಡಿತ ಭಾವಿಸುತ್ತಿಲ್ಲ. ಆದರೆ ಪದಪಲ್ಲಟಗಳ ಚರಿತ್ರೆಯ
ಒಳಕ್ಕಿಳಿದು ಗಮನಿಸುತ್ತ ಹೋದಂತೆಲ್ಲ, ಅವುಗಳ ಪಾರ್ಶ್ವಸತ್ಯಗಳು ಬೇರೆಯದೇ ಆಗಿ ಕಾಣಿಸ
ತೊಡಗಿದವು. ಶಿವನಿಗಿಂತಲೂ ಪ್ರಾಚೀನವಾದ ಲಿಂಗವು ಲೈಂಗಿಕ ಮೂಲದ ಪುರುಷ ಜನನೇಂದ್ರಿಯವೇ
ಆಗಿದ್ದು, ಆದಿಮ ಯುಗದ ಮಾನವನ ಬುಡಕಟ್ಟು ಹಂತದ ಸಹಜ ಅಧ್ಯಾತ್ಮದ ಅಭಿವ್ಯಕ್ತಿಯೇ ಆದಾಗಿದೆ.
ಸೃಷ್ಟಿಗೆ ಕಾರಣವಾಗುವ ಅವಯವವು ಪೂಜಾರ್ಹವೆನಿಸಿದ್ದರೆ ಅದೇನೂ ಅಚ್ಚರಿಯ ಸಂಗತಿ
ಯೇನಲ್ಲವಲ್ಲ? ನಂತರದಲ್ಲೆಂದೋ ಪುರುಷ ಜನನೇಂದ್ರಿಯವು ತಮ್ಮ ಪೂರ್ವಿಕ ಪಿತೃಗಳ ನೆನಪುಗಳ
ಭಾಗವಾಗಿಯೂ, ಸೃಷ್ಟಿಸೋಜಿಗದ ಕುರುಹಾಗಿಯೂ ಲಿಂಗಪೂಜೆಯ ಪರಂಪರೆ ಆರಂಭಗೊಂಡಂತಿದೆ.
ಈ ತಿಳಿವಳಿಕೆಯ ಹಿನ್ನೆಲೆಯಲ್ಲಿಯೇ ಕೆಲವು ನಿರ್ದಿಷ್ಟ ಪದಗಳನ್ನು ಇಲ್ಲಿ ಜಾಲಾಡುವ ಸಾಹಸಕ್ಕಿಳಿದಿದ್ದೇನೆ.
'ಪೂಜೆ' ಎನ್ನುವ ಪದ ಮೂಲತಃ ದ್ರಾವಿಡ ಭಾಷಾ ವರ್ಗದ ಪದವಾಗಿದೆ. 'ಪೂ' ಎನ್ನುವ ನಾಮಪದ
'ಚೆಯ್' ಎಂಬ ಕ್ರಿಯಾಪದದೊಂದಿಗೆ ಸೇರಿ 'ಪೂಜೆ' ಎಂಬ ಪದ ವಿನ್ಯಾಸಗೊಂಡಿದೆ. 'ಪೂ' ಎಂದರೆ
ದ್ರಾವಿಡ ಭಾಷಾ ವರ್ಗದಲ್ಲಿ 'ಹೂ' ಎಂಬ ಅರ್ಥವಿರುವುದನ್ನು ಎಲ್ಲರೂ ಬಲ್ಲರು. 'ಚೆಯ್' ಎಂದರೆ
ತೆಲುಗಿನಲ್ಲಿ 'ಮಾಡು' ಎಂಬರ್ಥವಿದೆ. ತಮಿಳಿನಲ್ಲಿ ಇದೇ ಕ್ರಿಯಾಪದವನ್ನು 'ಸೆಯ್' ಎಂದು
ಉಚ್ಚರಿಸಲಾಗುತ್ತದೆ. ಪ್ರಾದೇಶಿಕ ಭಿನ್ನತೆಗಳ ಹಿನ್ನೆಲೆಯಲ್ಲಿ ಕೆಲವೊಮ್ಮೆ ತೆಲುಗಿನಲ್ಲೂ 'ಸೆಯ್' ಪದದ
ಬಳಕೆ ಉಂಟು. 'ಪನಿಸೇಯ್' ಅಥವಾ 'ಪನಿಚೇಯ್' (ಪನಿಜೇಯ್) ಎಂದರೆ 'ಕೆಲಸ ಮಾಡು'
ಎಂದರ್ಥ. ಕನ್ನಡ ಭಾಷೆಯಲ್ಲಿ ಅನೇಕ ವೇಳೆ ತಮಿಳು-ತೆಲುಗಿನ ಶ, ಸ, ಚಕಾರಗಳು 'ಕ'ಕಾರವಾಗಿ
ರೂಪಾಂತರ ಹೊಂದುವುದುಂಟು. ಉದಾಹರಣೆಗೆ, ಶೆ (ಚೆ)ಯನ್ ಎಂದರೆ ಕನ್ನಡದಲ್ಲಿ ಕೆಂಪಣ್ಣ ಎಂಬ
ಅರ್ಥವೇ ಹೊರಡುತ್ತದೆ. ಹಾಗೆಯೇ ಚೆಂಗಪ್ಪ ಎಂದರೂ ಅದೇ ಅರ್ಥ, ಕೆಂಪಗಿರುವವನು ಎಂದು.
ಹೀಗೆ ಮೂಲ ದ್ರಾವಿಡ ಭಾಷೆಯ 'ಶಿನ್' ಎಂಬ ಬೀಜಶಬ್ದದ ಬಳಗಕ್ಕೆ ಸೇರಿದ ಚಿನ್, ಚೆನ್, ಕೆನ್ ಎಂಬ
ನುಡಿಗಡಣವನ್ನು ಹೇಗೆ ಅರೆದು ಒರೆದು ನೋಡಿದರೂ ಅದರಿಂದ ಕೆಂಪು ಎಂಬರ್ಥವೇ
ಹೊರಹೊಮ್ಮುತ್ತದೆಂದು ಶಂ. ಬಾ. ಜೋಶಿಯವರು ತಮ್ಮ 'ಶಿವರಹಸ್ಯ'ದಲ್ಲಿ ಸ್ಪಷ್ಟಪಡಿಸಿದ್ದಾರೆ. ಈ
ಹಿನ್ನೆಲೆಯಲ್ಲಿ 'ಚೆಯ್' ಎಂಬ ಪದ 'ಕ'ಕಾರದೊಂದಿಗೆ ಬಂದು ಕನ್ನಡದಲ್ಲಿ ನೆಲೆಸಿ ಕೂಡಲೇ 'ಗ'ಕಾರಕ್ಕೆ
ಇಗಿದು ಗೆಯ್, ಗೆಯ್ಮೆ ಎಂಬ ರೂಪಾಂತರದಲ್ಲಿ ನಿಟ್ಟುಸಿರು ಬಿಟ್ಟಂತಿದೆ! ಈ ಚೆಯ್ ಮತ್ತು ಗೆಯ್ ಮಧ್ಯೆ
ಅರ್ಥ ಸಂವಹನದ ಮೊದಲ ಕೊಂಡಿಯಾಗಿ, ತನ್ನ ಅಶ್ಲೀಲಾರ್ಥದ ಕಾರಣದಿಂದಾಗಿ ಕೊಂಚ ಮರೆಯಾಗಿ
ಉಳಿದಿರುವ ಧಾತು 'ಕೇ' ಎಂಬುದು. ಈ 'ಕೇ' ಎಂಬ ದ್ರಾವಿಡ ಭಾಷೆಗಳ ಧಾತುವಿಗೆ (೧) ಮಾಡು
(೨) ವಿಶ್ರಮಿಸು (೩) ಸಂಭೋಗಿಸು ಮುಂತಾದ ಅರ್ಥಗಳಿವೆ. ಸಂಭೋಗವೂ ಮಾಡುವ ಕ್ರಿಯೆಯೇ
ಆದ್ದರಿಂದ 'ಕೇ' ಎಂಬ ಮೂಲ ಧಾತುವಿನಿಂದಲೇ 'ಕೇಯ್' ಎಂಬ ಪದ ರೂಪುಗೊಂಡಿದೆ. ಹೀಗೆ
ತೆಲುಗಿನ ಚೆಯ್ ಎಂಬ ಪದದ 'ಮಾಡು' ಎಂಬ ಅರ್ಥ ಕನ್ನಡದ 'ಕೇ' ಎಂಬ ಧಾತುವಿನ ಮೂಲಕ ಹಿಂಜರಿಕೆ
ಯಿಂದಲೇ ಅಡಿಯಿಟ್ಟು ನಿಂತಿದೆ. ನಂತರ ಅದರ ನೇರ ಅಶ್ಲೀಲಾರ್ಥದಿಂದಲೇ ಏನೋ ಸಜ್ಜನ ಕನ್ನಡಿಗರು
'ಕ'ಕಾರಕ್ಕೆ ಬದಲಾಗಿ 'ಗ'ಕಾರವನ್ನು ತಂದು ಅದನ್ನು ಗೆಯ್ ಎಂದು ಮಾರ್ಪಡಿಸಿಕೊಂಡರು ಅಂತ
ಕಾಣುತ್ತೆ. ಹೀಗಾಗಿ ಗೆಯ್ಮೆಯ ಅಂತರಾಳದಲ್ಲಿ ಹುದುಗಿರುವ ಅಶ್ಲೀಲಾರ್ಥವು ಮಸುಕಾಗಿ ದುಡಿಮೆಯ,
ಸಾಧನೆಯ ಘನತೆಯೇ ಮುಂದಾಗುವುದರಿಂದ ಬಳಸುವ ನಮಗೂ, ಒಂದಿನಿತೂ ಸಂಕೋಚ
ವಿರುವುದಿಲ್ಲ. ಆದರೆ 'ಕೆಯ್' ಎಂಬ ಪೋಲಿ ಪದ ಭೂಗತವಾಗಿರುವಂತೆ ಭಾಸವಾದರೂ ನಮ್ಮ ಜನಪದರ
ಜನನಿತ್ಯದ ಬದುಕಲ್ಲಿ ವಿಪುಲವಾದ ಬಳಕೆಯಲ್ಲಿದ್ದು, ಅದೂ ಚಾಲೂಕಿನ ಚಲಾವಣೆಯಲ್ಲಿದ್ದೇ ಇದೆ!

ಈ 'ಕೇ' ಎಂಬ ಧಾತುವಿನ ಮೂಲಾರ್ಥವು ನೇರವಾಗಿ ಪುರುಷ ಜನನೇಂದ್ರಿಯಕ್ಕೇ ಸಂಬಂಧಿ

ಸುವುದರಿಂದಲೂ ಹಾಗೂ ಪುರುಷ ಜನನೇಂದ್ರಿಯವೇ ಲಿಂಗವಾಗಿ, ಶಿವನ ಪ್ರತೀಕವಾಗಿ ಮಾರ್ಪಟ್ಟಿರುವುದರಿಂದಲೂ ಬಹುಶಃ ಕೇತ, ಕೇದಾರ ಎಂಬ ಶೈವ ಮೂಲದ ಇನ್ನಿತರ ಪದಗಳೂ ಹುಟ್ಟಿಕೊಂಡಿವೆಯೆಂಬುದು ನನ್ನ ಊಹೆ. ಹೀಗೇ ಯಾಕಿರಬಹುದೆಂಬುದಕ್ಕೆ ಒಂದಷ್ಟು ವಿವರಣೆ ಅಗತ್ಯವಿರುವುದರಿಂದ ಸಂಕ್ಷಿಪ್ತವಾಗಿ ನೀಡುತ್ತೇನೆ. 'ಲಿಂಗ' ಎಂಬ ಪದ ಶಿವನಿಗಿಂತಲೂ ಪ್ರಾಚೀನವಾದದ್ದು. ಫ್ರಾನ್ಸಿನ ಸಂಸ್ಕೃತಿ ಸಂಶೋಧಕರಾಗಿದ್ದ ಪ್ರಿಲಸ್ಕಿ (Przyluski) ಅವರ ಪ್ರಕಾರ ವೈದಿಕಾರ್ಯರು ಹಾಗೂ ದ್ರಾವಿಡರು 'ಲಿಂಗ' ಎಂಬ ಪದ ಹಾಗೂ ಪರಿಕಲ್ಪನೆಯನ್ನು ದ್ರಾವಿಡಪೂರ್ವ ಬುಡಕಟ್ಟುಗಳಿಂದ ಎರವಲು ಪಡೆದಿದ್ದಾರೆ. ಋಗ್ವೇದ ಅಥವಾ ರುದ್ರಾಧ್ಯಾಯದಲ್ಲೆಲ್ಲೂ ರುದ್ರನಿಗೆ 'ಲಿಂಗ' ವೆಂಬ ಪರ್ಯಾಯ ನಾಮದ ಪ್ರಸ್ತಾಪವೇ ಇಲ್ಲದಿರುವುದು ಪ್ರಿಲಸ್ಕಿಯವರ ಅಭಿಮತವನ್ನೇ ಸಮರ್ಥಿಸುವಂತಿದೆ. (ಶಿವನ ಹೆಸರೇ ಇಲ್ಲವೆಂದಾಗ ಲಿಂಗವನ್ನಾರು ಕೇಳಬೇಕು?) ಅದರ ಜೊತೆಗೇ ರುದ್ರನಿಗೂ, ಲಿಂಗಕ್ಕೂ ವೇದಯುಗದಲ್ಲಿ ಯಾವ ಸಂಬಂಧವೂ ಇರಲಿಲ್ಲವೆಂಬುದು ಕೂಡ ಇದರಿಂದ ಸಾಬೀತಾದಂತಾಗುತ್ತದೆ. ಭಾಷಾ ವಿಜ್ಞಾನಿಗಳು ಈಗಾಗಲೇ ದೃಢಪಡಿಸಿರುವಂತೆ ಶಿವ ಮತ್ತು ಲಿಂಗ ಶಬ್ದಗಳು ಸಂಸ್ಕೃತ ಭಾಷೆಯವಲ್ಲ. ಆದ್ದರಿಂದಲೇ ಈ ಪದಗಳಿಗೆ ಸಂಸ್ಕೃತದಲ್ಲಿ ಧಾತ್ವರ್ಥವು ದೊರೆಯುವುದಿಲ್ಲ ಅಥವಾ ಈ ಬಳಗದ ಬೇರೆ ಹಲವು ಸಾಧಿತ ಶಬ್ದಗಳೂ ಸಂಸ್ಕೃತ ಭಾಷೆಯಲ್ಲಿ ಕಂಡುಬರುವುದಿಲ್ಲ. ಅದಷ್ಟೇ ಅಲ್ಲದೆ 'ಲಿಂಗ' ಎಂಬ ಪದವು ದ್ರಾವಿಡ ಭಾಷೆಗೂ ಸಂಬಂಧಿಸಿದ್ದಲ್ಲ. ಅದು ದ್ರಾವಿಡಪೂರ್ವ ಬುಡಕಟ್ಟುಗಳಾಗಿದ್ದಿರಬಹುದಾದ ಜೇನುಕುರುಬ, ಕಾಡುಕುರುಬ, ಸೋಲಿಗ, ಚೆಂಚು, ಕೊರಗ, ಶ್ರೀಲಂಕಾದ ವೆಡ್ಡಾ ಹಾಗೂ ಕೋಲ-ಮುಂಡಾ ಜನಾಂಗಗಳ ಭಾಷೆಯ ಲಿಗ್, ಲೀ ಎಂಬ ಧಾತುವಿನ 'ಮುನ್ನುಗ್ಗು' ಎಂಬ ಅರ್ಥದ ಶಬ್ದದಿಂದ ಸಾಧಿತವಾದ ಪದವೆಂದು ವಿದ್ವಾಂಸರು ತರ್ಕಿಸಿದ್ದಾರೆ. ಲಿಂಗವೆನ್ನುವುದು ಪುರುಷನ ಜನನೇಂದ್ರಿಯ ಸಂಬೋಧಿ ಪದವಷ್ಟೇ ಆಗಿದೆ. ತಿರುಪತಿಯ ರೇಣಿಗುಂಟದಿಂದ ಒಂಬತ್ತು ಕಿ.ಮೀ. ದೂರದಲ್ಲಿರುವ ಒಂದನೇ ಶತಮಾನದ ಗುಡಿಮಲ್ಲಂನಲ್ಲಿರುವ ಪಾಶುಪತರ ಲಿಂಗವೇ ಅತ್ಯಂತ ಪ್ರಾಚೀನ ಲಿಂಗವಾಗಿದ್ದು, ಅದು ಸ್ಪಷ್ಟವಾಗಿ ಹಾಗೂ ಸಾಕ್ಷಾತ್ತಾದ ಶಿಶ್ನರೂಪೀ ಲಿಂಗವೇ ಆಗಿದೆ. ಈ ವಿವರಣೆಯ ಹಿನ್ನೆಲೆಯಲ್ಲಿ ನಾವೀಗ ಜೇನುಕುರುಬರ ಮೂಲ ಕುಲದೈವತವಾದ ಅಣಪೆ ನೂರಾಳೊಡೆಯನ ಕುರಿತು ಮಾಹಿತಿಯನ್ನು ಪರಿಶೀಲಿಸಬೇಕು. ಅಣಪೆ ಎಂದರೆ ಪುರುಷ ಜನನೇಂದ್ರಿಯದ ಮಾದರಿಯಲ್ಲಿರುವ ಅಣಬೆಯೇ. ಕೆತ್ತಿಲ್ಲದ, ಒರಟೊರಟಾದ ಕಲ್ಲಿನ ಲಿಂಗದ ಹೆಸರೇ ಅಣಪೆ ನೂರಾಳೊಡೆಯ. ಅಣಬೆ-ಲಿಂಗಕ್ಕೆ ನೂರು ಆಳನ್ನು ಸೃಷ್ಟಿಸುವ ಶಕ್ತಿಯಿರುವುದರಿಂದಲೇ ಅವನು ಅಣಪೆ ನೂರಾಳೊಡೆಯನಾಗಿದ್ದಾನೆ. ಅಣಬೆಗಳು ಕುಡಿಯೊಡೆದಾಗ ಜೇನುಕುರುಬರು ಅಣಬೆತೋಡು ಎಂಬಲ್ಲಿ ನೆರೆದು ಅಣಬೆಗಳಿಗೆ ಹರಿಷಿಣ (ವೀರ್ಯದ ಸಂಕೇತವಾದ ಭಂಡಾರ), ಮತ್ತು ಮುಟ್ಟಿನ ರಕ್ತದ ಸಂಕೇತವಾದ ಕುಂಕುಮ (ತಂತ್ರಪಥದ ರಹಸ್ಯ ಭಾಷೆಯಲ್ಲಿ 'ಕಾಪುಷ್ಪ')ಗಳಿಂದ ಪೂಜಿಸಿ, ಆ ಅಣಬೆಗಳನ್ನು ಬೇಯಿಸಿ ತಿಂದು, ನಂತರ ಇಷ್ಟಪಟ್ಟು ಒಂದಾದ ಜೋಡಿಗಳು ಕಾಡಿನಲ್ಲಿ ಮರೆಯಾಗಿ ಮೂರು ದಿನಗಳವರೆಗೂ ಸ್ವಚ್ಛಂದವಾಗಿ ವಿಹರಿಸಿ ಅಣಪೆ ನೂರಾಳೊಡೆಯನ ನಿಜ 'ಪೂಚೆಯ್'ಅನ್ನು ಕೈಗೊಂಡು ಮತ್ತೆ ತಮ್ಮ ತಮ್ಮ ಹಾಡಿಗಳಿಗೆ ಹಿಂದಿರುಗುತ್ತಾರೆ. ಈ ಹಿನ್ನೆಲೆಯಲ್ಲಿ ಅಣಪೆ ನೂರಾಳೊಡೆಯನ ಪೂಚೆಯ್ ಆಚರಣೆಯ ಪರಿಕಲ್ಪನೆಯೊಂದಿಗೆ 'ಲಿಂಗ' ಎಂಬ ಆದಿಮ ದೈವತವನ್ನು ಎರವಲಾಗಿ ಸ್ವೀಕರಿಸಿದ ಸಮುದಾಯಗಳಿಂದ ಇಂದು ಆ ಆಚರಣೆ ಮತ್ತು ಜೇನುಕುರುಬರ ಕೊಂಟುಪೂಜೆ (ಶಿಶ್ನಾಕಾರದ ಮರದ ತುಂಡು)ಗೇ ಸಭ್ಯ ಮುಖವಾಡ ತೊಡಿಸಿ ಕೇದಾರ ವ್ರತವನ್ನಾಗಿ ಮುಂದುವರೆಸಿಕೊಂಡು ಬಂದಿದ್ದರೆ ಏನಾಶ್ಚರ್ಯ ಇಲ್ಲವೆನಿಸುತ್ತೆ. ಆದರೆ ವಿದ್ವಾಂಸರು 'ಕೇದಾರ' ಎಂಬುದು ಸಂಸ್ಕೃತ ಭಾಷೆಯ ಪದವೆಂದೂ, ಕೇದಾರವೆಂದರೆ ಗದ್ದೆ, ಪಾತಿ, ಕೇದಾರ ಕ್ಷೇತ್ರ, ಶಿವಲಿಂಗ (ಸಂಸ್ಕೃತ-ಕನ್ನಡ ನಿಘಂಟು, ಜಿ. ಎನ್. ಚಕ್ರವರ್ತಿ, ಪು. ೨೯೮) ಎಂಬ ಅರ್ಥಗಳನ್ನು ನೀಡುತ್ತಾರೆ. ಇದರ ಬಗ್ಗೆ ಇನ್ನಷ್ಟು ವ್ಯಾಪಕ ಅಧ್ಯಯನ ಅಗತ್ಯ. ಆದರೂ ದ್ರಾವಿಡ ಭಾಷೆಗಳ 'ಕೆ' ಧಾತುವಿನ ಅರ್ಥ ಪರಂಪರೆ ಸಂಸ್ಕೃತ ಮೂಲದ ಪದದಲ್ಲೂ ಅಗೋಚರವಾಗಿ ಸಂಚರಿಸಿ ಮುಟ್ಟಬೇಕಾದ ಲಿಂಗವನ್ನೇ ಮುಟ್ಟಿ ನಿಂತಿದೆಯಲ್ಲ?! ಕೇದಾರವೆಂದರೆ ಶಿವಲಿಂಗವೆಂಬರ್ಥ ಸಂಸ್ಕೃತದಲ್ಲೂ ಇದೆಯಲ್ಲ?

'ಅಣಬೆ' ಎಂಬ ಪದವು ಕೂಡ ಕೆಲವು ಸ್ವಾರಸ್ಯಗಳನ್ನು ತನ್ನಲ್ಲಿ ಹುದುಗಿಸಿಕೊಂಡಂತಿದೆ. ಅಣಪೆ, ಅಣಬೆ, ಆಳಿಂಬೆ, ಆಣಂಬು... ಇತ್ಯಾದಿಯಾಗಿ ಜನಪದರು ಬಗೆ ಬಗೆಯ ಉಚ್ಚಾರಗಳಲ್ಲಿ ಇದನ್ನು ಕರೆಯುವುದುಂಟು. ಆಳ್+ಅಂಬು =


With Best Compliments From



**Ministry of Communications Employees' Co-operative Housing Society Ltd.**

No. 419, 1st Floor, 12th Cross
Sadashivanagar
Bangalore - 560 080

# ರುಡಾಕಿ ಕವಿತೆಗಳು



ಮೂಲ ಪರ್ಷಿಯನ್ : ಕವಿ ರುಡಾಕಿ ಕನ್ನಡಕ್ಕೆ : ಡಾ|| ವಿಜಯಾ ಸುಬ್ಬರಾಜ್

೫೧, ಮೊದಲನೆ 'ಎ' ಕ್ರಾಸ್, ೩೦ನೇ ಮೆಯಿನ್, ಅತ್ತಿಮಬ್ಬೆ ರಸ್ತೆ
ಬನಗಿರಿ ನಗರ, ಬೆಂಗಳೂರು - ೮೫

-೧-

ಆ ದಮನ ಕಾಲದವರೆಗೆ
ಯಾರೊಬ್ಬರೂ ಜ್ಞಾನ ಮುಕ್ತರಿರಲಿಲ್ಲ
ಭಿನ್ನ ಭಿನ್ನ, ಬುದ್ಧಿವಂತ
ಭಾಷಿಕರೆಲ್ಲರೂ ಜ್ಞಾನದ ಬೆನ್ನಲ್ಲಿ
ನಡೆದು ಎದೆಗಪ್ಪಿಕೊಂಡು
ಕಲ್ಲುಗಳಲ್ಲಿ ಕೊರೆದಿಳಿಸಿದರು
ಜ್ಞಾನವು ಎದೆಯಲ್ಲಿ
ಉರಿವ ಹಣತೆ
ನಿನ್ನೆದೆಯಲ್ಲಿ ಲೇಪಿತ
ಮೈಲಿಗೆ ಕೇಡ ತಡೆಗೆ

-೨-

ಓ ನೀನು ಶೋಕಿಸುತ್ತಿರುವೆ
ದುಃಖಿಸುತ್ತಿರುವೆ
ಮೌನದಲಿ ಕಂಬನಿಗಳ
ಮಿಡಿಯುತ್ತಿರುವೆ
ಹೋದದ್ದು ಹೋಯಿತು
ಬಂದದ್ದು ಬಂದಿತು
ಆದದ್ದು ಆಯಿತು
ಪ್ರಯೋಜನವಿಲ್ಲದ್ದಕ್ಕೆ ಅಳುವೆಯೇಕೆ ?
ಜಗತ್ತನ್ನು ಗುರಿಯನ್ನು
ನಿಯಂತ್ರಿಸಬೇಕೆನ್ನುವೆಯಾ ?
ಜಗತ್ತು ಗುರಿಗಳನ್ನು
ನಿಯಂತ್ರಿಸಲೆಂದಾದರೂ
ಅವರು ಬಲ್ಲರೇನು ?
ಹುಚ್ಚು ಅಬ್ಬರ ಬೇಡ
ಹುಚ್ಚು ಅಬ್ಬರಗಳ
ಕೇಳಿಸಿಕೊಳ್ಳುವುದಿಲ್ಲ ಜಗತ್ತು
ಶೋಕಿಸಬೇಡ
ನಿನ್ನ ಶೋಕಕ್ಕೆ ಕಿವಿಗೊಡುವುದಿಲ್ಲ
ಪುನರುಜ್ಜೀವನದವರೆಗೆ
ಶೋಕಿಸುತ್ತಲೇ ಇರು.
ಆದರೂ ತರಬಲ್ಲೆಯೇನು
ಗತಿಸಿಹೋದದ್ದನ್ನು ?
ದುಃಖಗಳು ಸೇನಾ ತುಕಡಿಗಳಾಗಿ
ನಿನ್ನೆದೆಯನೊಡೆಯಲು ಬಂದಾಗ
ಮಧು ಬಟ್ಟಲನ್ನು
ತರಿಸಿ ಹಂಚು – ಅವರನ್ನು
ಸದೆ ಬಡಿ – ಪರೀಕ್ಷೆಯನ್ನೆದುರಿಸು
ಕಷ್ಟಗಳಲ್ಲೇ ಮನುಷ್ಯನ
ಶ್ರೇಷ್ಠತೆ, ಔನ್ನತ್ಯಗಳು
ನಾಯಕತ್ವದ ಹೊಗರು
ಹೊಮ್ಮುವುದು.

ಳಂಬು ಎಂಬುದೇ ಆಳಿಂಬೆಯಾಗಿ ಜನಪದರ ವ್ಯವಹಾರದಲ್ಲಿ ನಿಂತಿರುವಂತಿದೆ. ಅಂಬು' ಎನ್ನುವ ದ್ರಾವಿಡ ಭಾಷಾ ವರ್ಗದ ಪದದ ಅರ್ಥ ಬಾಣ. ಬಾಣವು ೇಹದ ಒಳಹೊಕ್ಕುವ ಕ್ರಿಯೆಯ, ಮುನ್ನುಗ್ಗುವ ಅರ್ಥವನ್ನೇ 'ಲಿಂಗ' ಪದವೂ ಳಗೊಂಡಿದೆ. ಅದರ ಜೊತೆಗೆ ಲಿಂಗ, ಶಿಶ್ನ, ಅಂಬು ಮತ್ತು ಅಣಬೆಯ ಕಾರಗಳೂ ಒಂದೇ ಬಗೆಯವಾಗಿದ್ದು ಒಂದಕ್ಕೊಂದು ಮಾದರಿ ಎಂಬಂತಿವೆ. ಆಣ್' ಎಂದರೆ ತಮಿಳಿನಲ್ಲಿ ಗಂಡು ಎಂಬರ್ಥವಿದೆ. 'ಮಂತು' ಎಂದರೆ ಕೋತಿ ಂಬರ್ಥವಿದೆ. ಆಣ್+ಮಂತು = ಆಣ್‌ಮಂತು, ಅಣಮಂತ ಎಂಬ ರೂಪದಲ್ಲಿ ಂತಂತಿದೆ. ಹಾಗೆಯೇ 'ಆಣ್ಡವನ್' ಎಂದರೆ ದೇವರು, ಸೃಷ್ಟಿಕರ್ತ ಎಂಬರ್ಥ ಇರುವುದೂ ಇಲ್ಲಿ ಗಮನಾರ್ಹ. ಈ ಆಣ್ ಎಂಬ ಪುರುಷನ ಜನನೇಂದ್ರಿಯವೇ ಂಬಾಗಿ, ಅದರ ಮಾದರಿಯಾದುದನ್ನೇ ಆಣಂಬು ಎಂದು ಕರೆದಿರಲಿಕ್ಕೆ ಸಾಧ್ಯವಿದೆ. ಣವಾದ ಈ 'ಅಂಬು' ಪದಕ್ಕೆ ಸಂವಾದಿ ಪದ ಸಂಸ್ಕೃತದಲ್ಲಿ 'ಶರ' ಎಂಬುದು. ರಧಿ ಎಂದರೆ 'ಕಡಲು' ಎಂಬ ಅರ್ಥವಿರುವಂತೆಯೇ 'ಅಂಬುಧಿ' ಎಂದರೂ ಡಲೇ. 'ಶರ' ಎಂಬ ಪದಕ್ಕೆ ನೀರು ಎಂಬ ಮತ್ತೊಂದು ಅರ್ಥವೂ ಉಂಟು. ಚಿತ್ರವೇನೆಂದರೆ ಶಿವ ಎಂಬ ಪದಕ್ಕೂ ನೀರು ಎಂಬುದೊಂದು ಅರ್ಥವಿದೆ. ಶಿವನ ತ್ತೊಂದು ಹೆಸರು ಹಾಗೂ ಸಂಸ್ಕೃತದಲ್ಲಿನ ಸಂವಾದಿ ಪದವಾದ 'ಹರ' ಎಂಬ ದದರ್ಥಗಳಲ್ಲಿ ನೀರು ಎಂಬುದೂ ಒಂದು! ಮತ್ತೂ ವಿಚಿತ್ರವೇನೆಂದರೆ ಕಿಟ್ಟೆಲ್ ೋಶದಲ್ಲಿ 'ಶಿಲೀಂಧ್ರ' ಎಂಬ ಪದಕ್ಕೆ ಕ್ರಮವಾಗಿ ಶರ, ಅಂಬು, ಬಾಣ ಹಾಗೂ ಣಬ್ಬೆ (a mushroom) ಎಂಬ ಅರ್ಥಗಳನ್ನು ನೀಡಲಾಗಿದೆ. ನಮ್ಮ ಕಡೆ ಜಾತ್ರೆ ಾದಾಗ ದೂರದಿಂದ ಬರುವ ಜನರಿಗೆ ಕುಡಿಯಲೆಂದು ನಿರ್ಮಿಸಿರುವ ಎತ್ತರದ ಲ್ಲಿನ ತೊಟ್ಟಿಗಳನ್ನು ಶಿಲೀಂಧ್ರಗಳೆಂದೇ ಕರೆಯುತ್ತಾರೆ. ಅಂದರೆ ಈ ಶಿಲೀಂಧ್ರ ಎಂಬ ದ ಸಾರಾಸಗಟಾಗಿ ಶರ, ಅಂಬು, ಬಾಣ, ಅಣಬೆ, ನೀರು, ಶಿವ, ಹರ, ಲಿಂಗ ಲ್ಲವನ್ನೂ ಹ್ರಸ್ವಗೊಳಿಸಿ ತನ್ನೊಳಗೆ ಅಡಕವಾಗಿಸಿಕೊಂಡಂತಿರುವುದು ಆಕಸ್ಮಿಕವೋ ೋದ್ಯವೋ ತಿಳಿಯುತ್ತಿಲ್ಲ. ಕನ್ನಡದಲ್ಲಿ ನೀರು ಎಂಬ ಅರ್ಥವನ್ನೇ ಸೂಚಿಸುವ ಈರ್' ಎಂಬ ಧಾತುವೊಂದಿದೆ. ಈ ಧಾತುವಿನಿಂದ ಸಾಧಿತವಾದ ಹಲವಾರು ಜ್ಞಾತಿ ಪದಗಳೂ ನಮ್ಮಲ್ಲುಂಟು. ಉದಾಹರಣೆಗೆ ಈರುಳ್ಳಿ = ನೀರುಳ್ಳಿ, ಮಳೆಯ ನೀರು ಮನೆಯೊಳಗೆ ಚೆಲ್ಲಲ್ಪಡುವುದರಿಂದ ಈರ್+ಚೆಲ್ಲು =ಇರಚಲು, ನೀರಾ ನೀಡುವುದರಿಂದ ಈಚಲು, ಅದನ್ನಿಳಿಸುವ ವೃತ್ತಿಯವ ಈಡಿಗ, ನೀರಲ್ಲಿ ತೇಲುವುದಕ್ಕೆ ಈಜು... ಹೀಗೆ. ಹೀಗಾಗಿ ಗಂಗೆಯನ್ನೇ ಎತ್ತಿ ತಲೆಯಲ್ಲಿ ಮುಡಿದ ಶಿವನಾಂಶದವನು ಕೂಡ ಈರಭದ್ರನೇ ಆಗುತ್ತಾನೆ ತಾನೇ ? ವೀರತ್ವದ ಗುಣವಾಚಕ ಸಹಜವಾಗಿ ಈರಭದ್ರನ ಮೇಲೆ ಅನ್ವಯಿಸಬಲ್ಲದಾಗಿ ಅವನನ್ನು ವೀರಭದ್ರನನ್ನಾಗಿಸಲಾಯಿತು. ಆದರೆ ಇಂದಿಗೂ ನಮ್ಮ ಜನಪದರು ಈರಭದ್ರನೆಂದೇ ಕರೆವುದು ವಾಡಿಕೆ. 'ನೀರು' ಎಂಬ ಪದದ ವಿಶಿಷ್ಟ ಜನಬಳಕೆಯ ಕುರಿತಾಗಿ ಪಾ. ವೆಂ. ಆಚಾರ್ಯರ ಗ್ರಹಿಕೆ ಹೀಗಿದೆ: 'ಕನ್ನಡದ ನೀರು ಅನ್ನೇ ತೆಗೆದುಕೊಳ್ಳಿ. ಇದು ನಿಸರ್ಗದಲ್ಲಿರುವ ನೀರನ್ನೆಷ್ಟೋ ಅಷ್ಟೇ ಪುರುಷನ ಇಂದ್ರಿಯ ಬಿಂದುವನ್ನು ಸೂಚಿಸುತ್ತದೆ. ಅವನ ಮುಖದ ನೀರು ಇಳಿಸಿದೆ ಎನ್ನುವಲ್ಲಿ ನೀರು ಬೆವರನ್ನು ಸೂಚಿಸುತ್ತದೆ ಎಂದು ವಾದಿಸಬಹುದಾದರೂ, ''ಅವನಲ್ಲಿ ಏನೂ ನೀರಿಲ್ಲ'' ಎನ್ನುವಲ್ಲಿ ಅದು ನಿಸ್ಸಂದೇಹವಾಗಿ ಲೈಂಗಿಕ ನೀರನ್ನೇ ಪ್ರತೀಕಿಸುತ್ತದೆ. ನೀರಿಲ್ಲದವನು ನಪುಂಸಕ' (ಪದಾರ್ಥ ಚಿಂತಾಮಣಿ - ಪು. ೮೩). ಹರಪ್ಪಾದ ಪಶುಪತಿಯ ಮೇಲ್ಮುಖವಾಗಿ ನಿಗುರಿನಿಂತ ಊರ್ಧ್ವ ಮೇಢ್ರವಾದ ಶಿವಲಿಂಗಕ್ಕೂ, ಪಾಣಿವಟ್ಟವಿಲ್ಲದ ಬಾಣಲಿಂಗಕ್ಕೂ, ಗಂಗೆಯನ್ನು ಧರಿಸಿದ ಗಂಗಾಧರನಿಗೂ, ನೂರಾಳನ್ನು ಸೃಷ್ಟಿಸಬಲ್ಲ ಅಣಪೆ ನೂರಾಳೊಡೆಯನಿಗೂ. ಈ ನೀರಿಗೂ ಬಿಡಿಸಲಾಗದಂತಹ ನಿಕಟ ನಂಟಿದೆಯೆಂಬ ಅಂಶ ಈ ವಿವರಣೆಗಳನ್ನು ಚಿಂತನೆಯ ಒಳನೇಯ್ಗೆಗೆ ಒಳಪಡಿಸಿದಾಗ ಸ್ಪಷ್ಟವಾಗದೇ ಇರದು.

'ಅಳಕಾ' ಎಂದರೆ ತಮಿಳಿನಲ್ಲಿ ನೀರು ಎಂಬರ್ಥವಿದೆ. 'ಅಲ' ಎಂದರೆ ತೆಲುಗಿನಲ್ಲಿ 'ಅಲೆ'ಯೆಂದೇ ಅರ್ಥ. ತಮಿಳಿನಲ್ಲಿ ಅಲ್ಯೆ. ಕೈಲಾಸದ ಬಳಿ ಅಲಕಾನಂದ ಎಂಬ ನದಿ ಹರಿಯುವ ಬಗ್ಗೆ ಶಿವಪುರಾಣದಲ್ಲಿ '...ಅಲಕಾನ್ನಿಕಷಾಚಾಸೀ ಕೈಲಾಸಃ ಶಂಕರಾಲಯಃ' ಎಂಬ ಉಲ್ಲೇಖವಿದೆ. ಅಳಕಾದ ಇನ್ನಿತರ ಜ್ಞಾತಿಪದಗಳು 'ಅಲರಿ' ಎಂದರೆ ನೀರಿನ ಕೊಳ 'ಅಲನ್ಸ್ಟ' ಎಂದರೆ ಕೊಳ, ಕೆರೆ, ಅಳಗಂ=ನೀರು, ಅಳಕ್ಕರ್=ಸಮುದ್ರ... ಹೀಗೆ ಜಲಸಂಬಂಧಿಯಾದ ಅನೇಕ ಪದಗಳೇ ಸಿಗಬಲ್ಲವು. ಕನ್ನಡದಲ್ಲೂ 'ಅಳಕ' ಎಂದರೆ

ನೀರಿನಷ್ಟು ತೆಳ್ಳಗೆ ಎಂಬರ್ಥವು ಬಳಕೆಯಲ್ಲಿದೆ. 'ಅಳವೆ' ಎಂದರೆ ನದೀ ಮುಖಜ ಎಂಬ ಅರ್ಥವೂ ಇದೆ. 'ಅಳಕ' ಎಂಬ ಕನ್ನಡ ಪದವು ಇಂದು ಬಳಕೆಯಿಂದ ಕಣ್ಮರೆಯಾಗಿದ್ದರೂ ಅದರ ಜ್ಞಾತಿ ಪದಗಳಂತೂ ದೂರಾನ್ವಯದ ಅರ್ಥಗಳಲ್ಲಾದರೂ ಉಳಿದುಕೊಂಡಿರುವುದನ್ನು ಗಮನಿಸಿದರೆ, ಬಹುಶಃ ಒಂದು ಕಾಲದಲ್ಲಿ ಕನ್ನಡದಲ್ಲೂ ನೀರಿಗೆ 'ಅಳಕ' ಎಂದು ಕರೆಯಲಾಗುತ್ತಿದ್ದ ಸಾಧ್ಯತೆಯನ್ನು ತಳ್ಳಿಹಾಕಲಾಗುವುದಿಲ್ಲವೆನಿಸುತ್ತೆ. ಯಾಕೆಂದರೆ ವೈದಿಕರ ನಂಬಿಕೆಯ ಪ್ರಕಾರ ಸ್ವರ್ಗದಲ್ಲಿ ಹರಿಯುವ ನದಿ ಮಂದಾಕಿನಿಯೇ ಹೊರತು ಗಂಗೆಯಲ್ಲ. ಗಂಗೆಯ ಅಥವಾ ಗಂಗಾನದಿಯ ಮೂಲ ಹೆಸರೇ ಅಲಕಾ. ಸ್ವರ್ಗದ ಮಂದಾಕಿನಿ ಶಿವಜಟೆಯ ಮೂಲಕ ಭೂಮಿಗೆ ಇಳಿದು ಹರಿದಾಗ ಗಂಗೆಯಾದದ್ದು ಹೇಗೆಂಬುದು ಒಂದು ಯಕ್ಷಪ್ರಶ್ನೆಯೇ ಆಗಿದೆ. ಗಂಗೆಯ ಪದನಿಷ್ಪತ್ತಿಯ ಬಗ್ಗೆ ಅಧ್ಯಯನ ಅಗತ್ಯವೆನಿಸುತ್ತದೆ. ದಕ್ಷಿಣ ಭಾರತದ ಗ್ರಾಮ ದೇವತೆಗಳಿಗೆ ಇಂದಿಗೂ ಬಲಿ ನೀಡುವ ಪದ್ಧತಿ ವ್ಯಾಪಕವಾಗಿಯೇ ಇರುವುದನ್ನು ನಾವು ಗಮನಿಸಬಹುದಾಗಿದೆ. ಬಲಿ ಕೊಡುವ ಪ್ರಾಣಿಯನ್ನು 'ಬ್ಯಾಟಿವಾರಿ' ಎಂತಲೂ ಕರೆವುದುಂಟು. ಆದರೂ 'ಬಲಿ' ಎಂಬ ಪದಕ್ಕೇ ದ್ರಾವಿಡ ಭಾಷೆಗಳಲ್ಲಿ ಪರ್ಯಾಯ ಪದವೊಂದು ಕಾಣಿಸದಂತಾಗಿ ಅತ್ಯಚ್ಚರಿಗೊಳಗಾದೆ. ಬಲಿ, ಆಹುತಿ, ಹಾರ... ಹೀಗೆ ಎಲ್ಲ ಪದಗಳೂ ಸಂಸ್ಕೃತ ಮೂಲದವೇ. ಕೊನೆಗೆ ತಮಿಳು ಮೂಲದ ನನ್ನ ಮಾವನವರನ್ನು ಈ ಬಗ್ಗೆ ವಿಚಾರಿಸಿದಾಗ ಅವರೂ ಜಿಜ್ಞಾಸೆಗೆ ಬಿದ್ದು ಕೊನೆಗೆ ತಮಿಳಿನಲ್ಲಿ 'ಬಲಿ' ಎಂಬುದನ್ನು 'ಕಾವು' ಎಂಬುದಾಗಿ ಕರೆಯುವ ಬಗ್ಗೆ ನನ್ನ ಗಮನ ಸೆಳೆದರು. ತಮಿಳಿನಲ್ಲಿರುವ ಈ 'ಕಾವು' ದ್ರಾವಿಡ ಭಾಷೆಯ ಕನ್ನಡದಲ್ಲೂ ಇರಬೇಕಲ್ಲವೇ ಎಂದು ನಾನು ಹುಡುಕಾಟಕ್ಕಿಳಿದಾಗ ಹೊಳೆದ ಪದ 'ಗಾವು'. ಕರಗದ ಕೊನೆಯ ದಿನ ಭಾರತ ಪಠಣದ ನಂತರ ಪೋತುರಾಜು 'ಗಾವು'ಸಿಗಿವ ಬಲಿಯ ಆಚರಣೆಯಿದೆ. ಹಾಗೆಯೇ ಅನೇಕ ಜಾತ್ರೆ-ಆಚರಣೆಗಳಲ್ಲೂ 'ಗಾವು' ಸಿಗಿವ ಆಚರಣೆಯಿದೆ. ನಮ್ಮಲ್ಲೂ 'ಕಾವು' ಎಂಬ ಪದವಿದ್ದರೂ ಅದಕ್ಕೆ ಹರಿತ, ಶಾಖ, ಬಿಸಿ ಎಂಬ ಅರ್ಥಗಳಿದ್ದು, ಸಂಸ್ಕೃತದ ಬಲಿ ಪದದ ಬಳಕೆಯೇ ಹೆಚ್ಚಾದಾಗ, ಸಹಜವಾಗಿಯೇ 'ಕಾವು-ಗಾವು' ಪದಗಳು ಕಣ್ಮರೆಯಾದವು ಅಥವಾ ಕಣ್ಮರೆಯಾಗುತ್ತಿವೆ ಎನ್ನಬಹುದೇನೋ ?

ಹೀಗೆಯೇ ಕಾಡಿನ ಮತ್ತೊಂದು ಪದ ದೇವ, ದೈವ. ಪಾರ್ಸಿ ಭಾಷೆಯಲ್ಲಿನ 'ದಏವ' ಎಂಬ ಪದವೇ ವೈದಿಕಾರ್ಯರ ಭಾಷೆಯಲ್ಲಿ 'ದೇವ' ಎಂದಾಯಿತು. ಪಾರ್ಸಿಯಲ್ಲಿ 'ದಏವ' ಅಂದರೆ ದುಷ್ಟ ಎಂಬ ಅರ್ಥವಿದ್ದು ಅಹುರ= ಅಸುರ ಎಂದರೆ ಸರ್ವಶಕ್ತ, ಬಲಿಷ್ಠ ಎಂಬ ಅರ್ಥವಿದೆ. ವೈದಿಕರಲ್ಲಿ ಅದು ತದ್ವಿರುದ್ಧ ಅರ್ಥದ ನೆಲೆಗಳಲ್ಲೀಗ ಬಳಕೆಯಾಗುತ್ತಿದೆ. ಅಂದರೆ ಈ ದೇವ ಪದ ದ್ರಾವಿಡ ಭಾಷೆಗಳೊಳಕ್ಕೆ ಇಳಿದುಕೊಳ್ಳುವ ಮುನ್ನ ಇಲ್ಲಿ ದೇವರಿಗೆ ಯಾವ ಪರ್ಯಾಯ ಪದದ ಬಳಕೆಯಾಗುತ್ತಿತ್ತೆಂಬುದೂ ನನ್ನ ಕುತೂಹಲಕ್ಕೀಡಾಯಿತು. ಈ ಹಿಂದೆಯೇ ಪ್ರಸ್ತಾಪಿಸಿರುವಂತೆ 'ಆಣ್ಡವನ್' ಜೊತೆಗೆ 'ಕಡವುಳ್' ಮತ್ತು 'ಕೋ' ಎಂಬ ಪದಗಳು ನೆನಪಾದವು. ಕನ್ನಡದಲ್ಲೂ ಕಡವುಳ್ ಎಂಬ ಪದವಿದ್ದು ಅದಕ್ಕೆ ದೇವರು, ಸೃಷ್ಟಿಕರ್ತ ಎಂಬ ಅರ್ಥ ಇದೆಯಾದರೂ ಕಡವುಳ್ ಪದವೀಗ ಬಳಕೆಯಲ್ಲೇ ಇಲ್ಲದಂತಾಗಿದೆ. ತಮಿಳಿನಲ್ಲಿ ಕಡವುಳ್, ಅಣ್ಡವನ್ ಜೊತೆಗೆ 'ಪೆರುಮಾಳ್' ಎಂಬ ಪದವೂ ಬಳಕೆಯಲ್ಲಿದೆ. 'ಪೆರುಮಾಳು' ಪದ ತೆಲುಗಿನಲ್ಲೂ ಇದ್ದು 'ಲೋ ಗುಟ್ಟು ಪೆರುಮಾಳುಕ್ಕೆರಕ' ಅಂದರೆ 'ಒಳಗಿನ ಗುಟ್ಟು ದೇವರಿಗೇ ಗೊತ್ತು' ಎಂಬ ನಾಣ್ಣುಡಿಯಿದೆ. ಉಳಿದಂತೆ ಕೋ+ಇಲ್ = ದೇವರ + ಮನೆ ಎಂಬ ರೂಪದ ಕೋಯಿಲ್, ಕೋವೆಲಗಳು ತಮಿಳು ಮತ್ತು ತೆಲುಗು ಭಾಷೆಗಳಲ್ಲಿ ದೇವಾಲಯಗಳಿಗೆ ಪರ್ಯಾಯ ಮೂಲ ಪದಗಳಾಗಿ ಇಂದಿಗೂ ವ್ಯವಹಾರದಲ್ಲುಳಿದಿವೆ. ಕನ್ನಡದಲ್ಲಿ ದೇವಾಲಯ, ದೇವಸ್ಥಾನಗಳೊಂದಿಗೆ ಗುಡಿ ಎಂಬ ಪದವೂ ಬಳಕೆಯಲ್ಲಿದ್ದು, ಅದೂ ದ್ರಾವಿಡ ಭಾಷೆಯ ಮೂಲದ್ದೇ ಆಗಿದೆ.

ಇಂತಹ ಇನ್ನೂ ಹಲವು ಧರ್ಮ, ಪಂಥ, ಸಂಸ್ಕೃತಿ ಹಿನ್ನೆಲೆಯ ಪದಗಳು ನನ್ನನ್ನು ಕಾಡಿಸಿದ್ದಿದೆ. ಅವುಗಳ ಪೈಕಿ ತಿರುಪತಿ, ತಿರುಪ್ಪತ್ತ್ಯಾ ಹಾಗೂ ಚಂದ್ರ, ಪುಡಗೋಸಿ-ಲಂಗೋಟಿ ಮತ್ತಿತರ ಪದಗಳ ಕುರಿತು ಈಗಾಗಲೇ ಬೇರೆಡೆ ಚರ್ಚಿಸಿದ್ದೇನಾದ್ದರಿಂದ ಅವುಗಳನ್ನು ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸುತ್ತಿಲ್ಲ. ಹೊಸ ಪದಗಳೊಂದಿಗೆ ನನ್ನ ಹುಡುಕಾಟವೂ ಈಗ ಮುಂದುವರೆದಿದೆ.

**ಲಕ್ಷ್ಮೀಪತಿ ಕೋಲಾರ**
ನಂ. ೧೪, ೩ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ ಹತ್ತಿರ, ೧ನೇ ಹಂತ, ಬಿ.ಇ.ಎಂ.ಎಲ್. ಲೇಔಟ್
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

*With Best Compliments From*



K. Vishwanath, PROP.

SRI VENKATESHWARA
WOOD INDUSTRIES SAWMILL
AND
SRI VENKATESHWARA PACKERS

Mfrs of : Wooden Packing case creates & export Packing case

# 11/1A, Laxmipura Main Road, Abbigere, Bangalore - 560 090
Phone : 23253624, Fax : 23253625, Mobile : 93412 58773
email : srivenkatgroup1979@gmail.com

# ಯೂಸುಫ್ ದಾದೂ

ಎಂ. ಎಸ್. ಪ್ರಭಾಕರ



**ಯೂ**ಸುಫ್ ದಾದೂ (ಜನ್ಮ : ಕೃಗರ್ಸ್ಡೋರ್ಪ್, ದಕ್ಷಿಣ ಆಫ್ರಿಕಾ, ೫ ಸೆಪ್ಟೆಂಬರ್ ೧೯೦೯; ಮೃತ್ಯು: ಲಂಡನ್, ೧೯ ಸೆಪ್ಟೆಂಬರ್ ೧೯೮೩) ದಕ್ಷಿಣ ಆಫ್ರಿಕಾದ ಒಬ್ಬ ಮಹಾನ್ ಸ್ವಾತಂತ್ರ್ಯ ಯೋಧ, ಆ ದೇಶದ ಕಮ್ಯುನಿಸ್ಟ್ ಪಕ್ಷದ ನಾಯಕ. ಮೃತ್ಯುವಿನ ಸಮಯದಲ್ಲಿ ಪಕ್ಷದ ಅಧ್ಯಕ್ಷ. ಇಡೀ ಜೀವನ ತನ್ನ ದೇಶದ ವರ್ಣ ಭೇದನೆಯ ಮತ್ತು ವರ್ಣ ವಿಭಜನೆಯ ನೀತಿಯ ವಿರುದ್ಧ ಆ ಪದ್ಧತಿಗಳ ಶೋಷಣೆ ದಬ್ಬಾಳಿಕೆಗಳಿಗೆ ಬಲಿಯಾಗಿದ್ದ ಇತರ ವರ್ಣೀಯ ಮತ್ತು ಅವರ್ಣೀಯ ಜನಗಳೊಡನೆ ಒಟ್ಟಾರೆ ಸುಮಾರು ಅರ್ಧಶತಮಾನ ಹೋರಾಟ ನಡೆಸಿದ್ದ ಕ್ರಾಂತಿಕಾರಿ.

ಆತ ದಕ್ಷಿಣ ಆಫ್ರಿಕಾದಲ್ಲಿ ಈಗಲೂ, ತೀರಿಕೊಂಡ ಕಾಲು ಶತಮಾನದ ನಂತರವೂ, ಅತಿ ಗೌರವಾನ್ವಿತ ನಾಯಕ. ಒಂದು ಮಾತಿನಲ್ಲಿ ಹೇಳಬಹುದಾದರೆ ಆತ ತನ್ನ ಮುವತ್ತನೆಯ ವಯಸ್ಸಿನಲ್ಲಿ ಕಮ್ಯುನಿಸ್ಟ್ ಪಕ್ಷದ ಸದಸ್ಯನಾದ ದಿನದಿಂದ ಅವನ ಕೊನೆಯ ದಿನಗಳವರೆಗೂ ಅವನ ಜೀವನದ ಉದ್ದೇಶ ಒಂದೇ ಒಂದಾಗಿತ್ತು. ಆ ಅಮಾನವೀಯ ವರ್ಣವಿದ್ವೇಷ ಪದ್ಧತಿಯನ್ನು ಧ್ವಂಸ ಮಾಡಿ ಅಲ್ಲಿನ ಪ್ರಜೆಗಳೆಲ್ಲರಿಗೂ ತಮ್ಮ ಜನ್ಮಸಿದ್ಧ ಸ್ಥಾನ, ಹಕ್ಕು, ಮರ್ಯಾದೆಗಳನ್ನು ದೊರಕಿಸಿಕೊಳ್ಳುವುದು. ಆತನ ಜೀವನಾದ್ಯಂತ ಸಹಕರ್ಮಿ, ಅದೇ ಕಮ್ಯುನಿಸ್ಟ್ ಪಕ್ಷದ ನಾಯಕ ಜೋ ಸ್ಲೊವೋನ ಶಬ್ದಗಳಲ್ಲಿ ಹೇಳುವುದಾದರೆ, ಆತನ, ದಾದೂನ, ಮತ್ತಿನ್ನೆಲ್ಲ ಮುಕ್ತಿಸ್ವಾತಂತ್ರ್ಯ ಯೋಧರ ಗುರಿ ಇದೇ ಆಗಿತ್ತು :

'ಅನೇಕ ವರುಷಗಳ ಹಿಂದೆ ನನ್ನ ಜೀವನದ ಗುರಿ ಒಂದೇ ಎಂದು ನಿರ್ಧರಿಸಿದ್ದೆ. ಅದೆಂದರೆ, ಈ ವರ್ಣವಿದ್ವೇಷೀಯ ಪದ್ಧತಿಯ ಸರಕಾರವನ್ನು ಪಲ್ಲಟಿಸಿ ಜನಸಾಮಾನ್ಯರಿಗೆ ತಮ್ಮ ಅಧಿಕಾರವನ್ನು ದೊರೆಕಿಸಿಕೊಳ್ಳುವುದು.'

ಈ ಬರವಣಿಗೆಯ ಉದ್ದೇಶ ದಾದೂ ಮತ್ತು ಆತನಂತೆ ಶತಸಹಸ್ರಾರು ಕ್ರಾಂತಿಕಾರರ ಜೀವನ ಪರ್ಯಂತದ ಪ್ರಯಾಸದ ಮೂಲಕ ದಕ್ಷಿಣ ಆಫ್ರಿಕಾದ ಜನಸಾಮಾನ್ಯರು ತಮ್ಮ ವಿಮೋಚನೆ ಹೇಗೆ ಗಳಿಸಿದರು ಎಂದು ವಿವರಿಸುವುದಲ್ಲ. ಆ ಬಗ್ಗೆ ಅನೇಕ ಪಾಂಡಿತ್ಯಪೂರ್ಣ ಪುಸ್ತಕಗಳು ಮತ್ತು ಪ್ರಬಂಧಗಳಿವೆ. ಅದಲ್ಲದೆ ಆತ ತೀರಿಕೊಂಡಾಗ ದಕ್ಷಿಣ ಆಫ್ರಿಕಾದ ಮುಕ್ತಿಯುದ್ಧ ತೀವ್ರವಾಗಿ ನಡೆದಿತ್ತು; ಆ ಮುಕ್ತಿಯ ಜಯ ಸುದೂರ, ಇನ್ನೂ ಹತ್ತು ವರುಷಗಳಿಗಿಂತಲೂ ಮೀರಿದ ಭವಿಷ್ಯದಲ್ಲಿತ್ತು. ಮುಕ್ತಿಯ ರಸ್ತೆಯಲ್ಲಿ ತಿಳಿದ ಮತ್ತು ತಿಳಿದಿಲ್ಲದ ಕಾಠಿಣ್ಯಗಳು, ಅಪಾಯಗಳು ಇನ್ನೂ ಅನೇಕವಿದ್ದವು. ಆದರೂ, ಶತ್ರು ಅತಿ ಬಲಿಷ್ಠನಾಗಿ ಕಂಡರೂ, ಮುಕ್ತಿಯುದ್ಧ ಜಯಗಳಿಸುತ್ತೆ ಎನ್ನುವುದರಲ್ಲಿ ದಾದೂ ಮತ್ತಿತರ ಸ್ವಾತಂತ್ರ್ಯ ಯೋಧರಿಗೆ ಏನೇನೂ ಸಂದೇಹವಿರಲಿಲ್ಲ. ಏಕೆ, ಅಟ್ಲಾಂಟಿಕ್ ಮಹಾಸಾಗರದಲ್ಲಿನ ಕರಾಳ ದ್ವೀಪ ಕಾರಾಗಾರ ರೋಬೆನ್ ಐಲಂಡ್‌ನಲ್ಲಿ ಆಜೀವಕಾಲದ ದಂಡನೆಗೆ ಒಳಗಾಗಿ ಬಂದಿಗಳಾಗಿದ್ದ ನೆಲ್ಸನ್ ಮಂಡೇಲ ಮತ್ತು ಅವರಷ್ಟೇ ವಿಖ್ಯಾತ ಕ್ರಾಂತಿಕಾರಿ ಸಹಕರ್ಮಿ ರಾಜಕೀಯ ಬಂದಿಗಳಿಗೂ ತಮ್ಮ ಹೋರಾಟ ಜಯ ಸಾಧಿಸುವ ಬಗ್ಗೆ ಏನೇನೂ ಸಂಶಯವಿರಲಿಲ್ಲ. ಏಕೆಂದರೆ ಅವರ ಸಂಗ್ರಾಮ ಒಬ್ಬ ವ್ಯಕ್ತಿಯ ಅಥವಾ ಒಂದು ಗುಂಪಿನ ಸ್ವಾರ್ಥದ ಸಂಗ್ರಾಮವಾಗಿರಲಿಲ್ಲ; ಅದು ಇಡೀ ದಕ್ಷಿಣ ಆಫ್ರಿಕಾದ ಜನರ ಮುಕ್ತಿಯ ಹೋರಾಟ.

ಅಂತಹ ಹೋರಾಟದಲ್ಲಿನ ಅಗ್ರಗಣ್ಯ ನಾಯಕರಲ್ಲಿ ದಾದೂ ಒಬ್ಬನಾಗಿದ್ದ. ಹಿಂದುಸ್ತಾನ ದಿಂದ ವಲಸೆ ಮಾಡಿದ್ದ ಪರಿವಾರದಲ್ಲಿ ಹುಟ್ಟಿ ಬೆಳೆದ ದಾದೂ ಮತ್ತು ಅವನ ಪರಿವಾರದವರ ಪರಿಸ್ಥಿತಿ ಅದೇ ಹಿನ್ನೆಲೆಯ ಬಹಳ ಹೆಚ್ಚು ಭಾಗ ಭಾರತೀಯ ವಲಸೆಗಾರರ ಪರಿಸ್ಥಿತಿಗಿಂತ ಎಷ್ಟೋ ಉತ್ತಮ. ದಕ್ಷಿಣ ಆಫ್ರಿಕಾಕ್ಕೆ ೧೮೬೦ರಿಂದ ವಲಸೆಮಾಡಿರುವ ಭಾರತೀಯರನ್ನು ಹೆಚ್ಚು ಕಮ್ಮಿ ಮೂರು ಗುಂಪುಗಳಲ್ಲಿ ಪರಿಗಣಿಸಬಹುದು. ಕಲಿಕತ್ತ ಮತ್ತು ಮದ್ರಾಸ್ ಬಂದರಿನಿಂದ ವಲಸೆ ಮಾಡಿದವರು ಬಹಳಷ್ಟು ಭಾಗ ಅತಿ ಬಡವರು. ಭಾರತದ ಮತ್ತು ದಕ್ಷಿಣ ಆಫ್ರಿಕಾದ ದಲಾಲಿಗಳು ಪುಸಲಾಯಿಸಿ, ಹೆಚ್ಚು ಹಣ ಸಂಪಾದಿಸುವ ಅವಕಾಶಗಳಿವೆ ಅಂತ ಆಸೆ ತೋರಿಸಿ, ಅಗತ್ಯವಿದ್ದಾಗ ಬಲಪ್ರಯೋಗದ ಒತ್ತಾಯ ಮಾಡಿ ಅಂತಹವರನ್ನು ಅಲ್ಲಿನ ನೆಟಾಲ್ ಪ್ರಾಂತ್ಯದಲ್ಲಿನ ಕಬ್ಬಿನ ಪ್ಲಾಂಟೇಷನ್‌ಗಳಲ್ಲಿ ಜೀತದ ಕೆಲಸದಾಳುಗಳಂತೆ ಕೂಲಿ ಮಾಡಲು ಕರೆದುಕೊಂಡು ಹೋದವರು. ಆದರೆ ಮುಂಬೈ ಬಂದರಿನಲ್ಲಿ ಹಡಗು ಹತ್ತಿದ ಜನರಲ್ಲಿ ಬಹುಮಂದಿ ಇವರಿಗಿಂತ ಬಹಳ ಭಿನ್ನ. ಮದರಾಸು, ಕಲಿಕತ್ತಾದಿಂದ ಹಡಗು ಹತ್ತಿದ ಜನ ಬಹಳಮಟ್ಟಿಗೆ ಭೂಮಿಯ ಬೇಸಾಯದವರಾಗಿದ್ದರೆ ಮುಂಬೈ ಬಂದರಿನಿಂದ ಹಡಗು ಹತ್ತಿದ ಜನರು ಬಹಳಮಟ್ಟಿಗೆ ವ್ಯಾಪಾರದ ಸಂಪ್ರದಾಯಕ್ಕೆ ಸೇರಿದವರು. ಅವರಲ್ಲಿ ಅನೇಕ ಮಂದಿ ತಮ್ಮ ಪ್ರಯಾಣಕ್ಕೆ ತಾವೇ ಹಣ ಕೊಟ್ಟು ತಿಕೀಟು ಕೊಂಡಿದ್ದರಿಂದ ಅವರು ಯಾತ್ರಿಕ ಹಿಂದುಸ್ತಾನಿಗಳು (ಪ್ಯಾಸೆಂಜರ್ ಇಂಡಿಯನ್ಸ್) ಎಂದು

ಯೂಸುಫ್ ದಾದೂ ಭಾರತದಿಂದ ದಕ್ಷಿಣ ಆಫ್ರಿಕಾಕ್ಕೆ ವಲಸೆ ಹೋಗಿದ್ದ ಪರಿವಾರದಲ್ಲಿ ಹುಟ್ಟಿ ಬೆಳೆದವರು. ಮೂವತ್ತನೆಯ ವಯಸ್ಸಿನಲ್ಲಿ ಕಮ್ಯುನಿಸ್ಟ್ ಪಕ್ಷದ ಸದಸ್ಯರಾದ ಅವರ ಜೀವನದ ಉದ್ದೇಶ ಅಲ್ಲಿನ ಅಮಾನವೀಯ ವರ್ಣಭೇದ ಪದ್ಧತಿಯನ್ನು ನಾಶಪಡಿಸುವುದು. ಆ ಸಂಗ್ರಾಮ ಏಕವ್ಯಕ್ತಿಯ ಅಥವಾ ಒಂದು ಗುಂಪಿನವರದಾಗಿರಲಿಲ್ಲ. ಅದು ಇಡೀ ದಕ್ಷಿಣ ಆಫ್ರಿಕಾದ ಮುಕ್ತಿಯ ಹೋರಾಟವಾಗಿತ್ತು. ದಕ್ಷಿಣ ಆಫ್ರಿಕದ ಮಹಾನ್ ಸ್ವಾತಂತ್ರ್ಯ ಯೋಧನಾದ ಅವರು ಆ ದೇಶದ ಕಮ್ಯುನಿಸ್ಟ್ ಪಕ್ಷದ ನಾಯಕ. ೧೯೮೩ರ ಸೆಪ್ಟೆಂಬರ್ ೧೯ರಂದು ಲಂಡನ್ನಿನಲ್ಲಿ ನಿಧನರಾದ ಅವರ ಬದುಕಿನ ಹೋರಾಟದ ಜೊತೆಗೆ ಅಲ್ಲಿನ ಕಮ್ಯುನಿಸ್ಟ್ ಪಕ್ಷದ ಒಳನೋಟಗಳ ಚಿತ್ರಣ ಇಲ್ಲಿದೆ.

ಬಿಸಿರಿ ಪ್ರಕಾಶನ ಯಶ್ ಕ್ರಿಯೇಶನ್ಸ್
(ಪ್ರಕಾಶಕರು, ಮುದ್ರಕರು, ಮಾರಾಟಗಾರರು)
33 (1126), 3ನೇ ಮುಖ್ಯರಸ್ತೆ, ಎಂ. ಸಿ. ಲೇಔಟ್, ವಿಜಯನಗರ, ಬೆಂಗಳೂರು - 560 040

ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳ ನಮ್ಮ ನೂತನ ಪ್ರಕಟಣೆಗಳು




ರೂ. 160/- ರೂ. 275/- ರೂ. 140/-

ನಮ್ಮ ಇತರ ಪ್ರಕಟಣೆಗಳು




ಪ್ರಕಟಣೆಯ ಹಂತದಲ್ಲಿ B.Ed., TCH, PSI
ಸ್ಪರ್ಧಾತ್ಮಕ ಪರೀಕ್ಷೆಗಳ ಕೈಪಿಡಿಗಳು

ಸಂಪರ್ಕಿಸಿ : ಡಾ|| ಮಂಜುನಾಥ ಪಾಳ್ಯ (ಪ್ರಕಾಶಕರು ಮತ್ತು ಲೇಖಕರು)
ಮೊಬೈಲ್ : 9341804700


ಗುರುತಿಸಲ್ಪಟ್ಟಿದ್ದರು. ದಾದೂನ ತಂದೆ ಇಂತಹ ಪರಿವಾರಕ್ಕೆ ಸೇರಿದಾತ. ಅರ್ಥಾತ್ ಆತನ ಸಂಸಾರದ ಪರಿಸ್ಥಿತಿ ಕಲಿಕತ್ತಾ ಮತ್ತು ಮದ್ರಾಸಿನಿಂದ ಬಂದವರಂತೆ ಅತ್ಯಂತ ಶೋಚನೀಯ ಅಲ್ಲ. ಅವರಂತಹವರು ದಕ್ಷಿಣ ಆಫ್ರಿಕಾಗೆ ಪಯಣಿಸಿದ್ದು ಅಲ್ಲಿ ಆಗಲೇ ತಲುಪಿದ್ದ ಹತ್ತಾರು ಸಾವಿರ ಭಾರತೀಯರಿಗೆ ಅಗತ್ಯವಾಗಿರುತ್ತಿದ್ದ ಸಾಮಾನು ಸರಂಜಾಮುಗಳನ್ನು ಭಾರತದಿಂದ ಆಮದಾನಿ ಮಾಡಿ ಮಾರಿ ಹಣ ಸಂಪಾದಿಸಿಕೊಳ್ಳಲಿಕ್ಕೆ.

ಈ ಎಲ್ಲ ಭಾರತೀಯ ವಲಸೆಗಾರರೂ ದಕ್ಷಿಣ ಆಫ್ರಿಕಾದ ವರ್ಣಭೇದ ನೀತಿಯ ಅಡಿಪಾಯದ ಮೇಲೆ ಕಟ್ಟಿದ್ದ ಸರಕಾರದಿಂದ ಶೋಷಿತರಾದವರೇ, ಸಮಾನವಾಗಿ ತುಚ್ಛತೆ, ಅವಮಾನ – ಅನ್ಯಾಯಗಳನ್ನು ಅನುಭವಿದವರೇ. ಆದರೂ ಈ ಶೋಷಿತ ಜನಗಳಲ್ಲಿ ಭೇದ ಭಾವನೆಗಳು ಇದ್ದವು. ಜಾತಿ, ಭಾಷೆ, ಧರ್ಮ, ಸಂಪ್ರದಾಯ, ಮತ್ತಿನ್ನಾವ ಯಾವ ವಿಷಯ ವ್ಯತ್ಯಾಸಗಳು ಭಾರತೀಯರನ್ನು ಹಿಂದುಸ್ತಾನದಲ್ಲಿ ವಿಭಜಿಸಿವೆಯೋ, ಇವೆಲ್ಲವೂ ಸುದೂರ ಪರದೇಶದಲ್ಲಿ ಗುಲಾಮರಂತೆ ವಾಸಮಾಡುತ್ತಿದ್ದ ಈ ಭಾರತೀಯ ವಲಸೆಗಾರರನ್ನೂ ವಿಭಜಿಸಿತ್ತು.

ಎಲ್ಲಕ್ಕಿಂತಲೂ ಮೀರಿ ಈ ಅತಿ ದಾರುಣ ಬಡತನದಲ್ಲಿದ್ದ ಭಾರತೀಯ ವಲಸೆಗಾರರು ಮತ್ತು ಅವರೊಡನೆ ಸ್ವಲ್ಪ ಒಳ್ಳೆಯ ಅವಸ್ಥೆಯಲ್ಲಿದ್ದ ಸಣ್ಣ ಬೇಪಾರಿ ವರ್ಗದವರು ತಮ್ಮ ಹೊಸ ಪರಿವೇಷದಲ್ಲಿನ, ತಮ್ಮಷ್ಟೇ ಅಥವಾ ತಮಗಿಂತಲೂ ದುಃಸ್ಥಿತಿಯಲ್ಲಿದ್ದ, ದಕ್ಷಿಣ ಆಫ್ರಿಕಾದ ಮೂಲವಾಸಿ ಕರಿಯರನ್ನು ಕೆಳಮಟ್ಟದವರೆಂದು ಗಣಿಸಿ ಹೇಸಿಗೆಪಡುತ್ತಿದ್ದರು. ದಕ್ಷಿಣ ಆಫ್ರಿಕಾದಲ್ಲಿನ ಜನರನ್ನು ಅಲ್ಲಿನ ವರ್ಣಭೇದದ ಭಿತ್ತಿಯ ಮೇಲೆ ರಚಿಸಿದ ಸರಕಾರ ನಾಲ್ಕು ಗುಂಪುಗಳಲ್ಲಿ ವಿಭಜಿಸಿತ್ತು. ಒಂದು, ಆಳುತ್ತಿದ್ದ ಶ್ವೇತ ವರ್ಣೀಯ ವಲಸೆಗಾರರು (ಸುಮಾರು ಶೇ. ೧೫), ಎರಡು, ಮಿಶ್ರಿತ ವರ್ಣೀಯ ಜನಾಂಗ (ಸುಮಾರು ಶೇ. ೧೧), ಮೂರು, ಭಾರತಮೂಲದ ವಲಸೆಗಾರರು (ಸುಮಾರು ಶೇ. ೩), ಮತ್ತು ನಾಲ್ಕು, ಅಲ್ಲಿನ ಮೂಲವಾಸಿ ಕರಿಯರು (ಸುಮಾರು ಶೇ. ೭೧). ಈ ಅಲ್ಪಸಂಖ್ಯಾತ ಬಿಳಿಯರು ಮಿಕ್ಕೆಲ್ಲರನ್ನು ತುಚ್ಛವಾಗಿ ಕಾಣುತ್ತಿದ್ದರು, ವ್ಯವಹರಿಸುತ್ತಿದ್ದರು. ಈ ಬಹುಸಂಖ್ಯೀಯ ವರ್ಣೀಯರಿಗೆ ಅಲ್ಲಿನ ಆಡಳಿತ ವರ್ಗ ಕೊಟ್ಟಿದ್ದ ಹೆಸರುಗಳೇ ಅವರು ಈ ಜನಗಳ ಬಗ್ಗೆ ಇಟ್ಟುಕೊಂಡಿದ್ದ ಹೇಸಿಗೆಯನ್ನು ಎತ್ತಿತೋರಿಸುತ್ತಿತ್ತು. ಕರಿಯರೆಲ್ಲರೂ ಅವರ ದೃಷ್ಟಿಯಲ್ಲಿ 'ಕಾಫಿರ್'ಗಳು. ಮುಸಲ್ಮಾನ ಸಂಪ್ರದಾಯದಲ್ಲಿ ಅತಿ ನೀಚ ಪದ ಎಂದು ಕುಖ್ಯಾತಿ ಪಡೆದ ಆ ಪದದ ಅರ್ಥವನ್ನೂ ಮಾಡಿಕೊಳ್ಳದೆ ಅದನ್ನು ಒಂದು ಬೈಗುಳದ ರೀತಿ ಬಿಳಿಯರು ಉಪಯೋಗಿಸುತ್ತಿದ್ದರು. ಇದೇ ಪ್ರಕಾರ ಮಿಶ್ರಿತ ವರ್ಣೀಯರು ಡಚ್ ಭಾಷೆಯ 'ಹಾಟೆಂಟಾಟ್'(ಅಸಂಸ್ಕೃತ) ಎಂಬ ಪದದಿಂದ ಅಳವಡಿಸಿಕೊಂಡಿದ್ದ 'ಹಾಟ್‌ನಾಟ್'; ಭಾರತೀಯ ಮೂಲದ ವಲಸೆಗಾರರು ನಾವೆಲ್ಲಾ ಸುಲಭವಾಗಿ ಅರ್ಥಮಾಡಿಕೊಳ್ಳಬಹುದಾದಂತಹ ಕೂಲಿಗಳು. ಆಳುವ ಬಿಳಿಯರ ಸಮಾಜದಲ್ಲಿನ ವಿಭಜನೆಗಳನ್ನೂ ನಾವಿಲ್ಲಿ ಗಮನಿಸಬೇಕು: ಹೆಚ್ಚು ಕಮ್ಮಿ ಅರ್ಧಕ್ಕರ್ಧ ಮೂಲತಃ ಡಚ್ ಮತ್ತು ಫ್ಲೆಮಿಷ್ ಭಾಷೆಗಳಿಂದ ಮಾರ್ಪಡಿಸಲ್ಪಟ್ಟ ಆಫ್ರಿಕಾನ್ಸ್ ಭಾಷೆ ಮಾತನಾಡುವವರು; ಮಿಕ್ಕವರು ಬಹಳಷ್ಟು ಇಂಗ್ಲಿಷ್ ಮೂಲದವರು; ಮತ್ತು ಪೋರ್ಚುಗೀಸ್ ಮತ್ತು ಗ್ರೀಕ್ ಮೂಲಭಾಷಿಗಳ ಪರಂಪರೆಯವರು. ಇಂತಹ ಒಳದ್ವಂದ್ವಗಳಿದ್ದರೂ, ಬಿಳಿಯರೆಲ್ಲರೂ ಒಂದಾಗಿ ಮಿಕ್ಕ ಅ-ಬಿಳಿಯರೆಲ್ಲರನ್ನೂ ತುಚ್ಛಭಾವದಿಂದ ಕಾಣುತ್ತಿದ್ದರು. ಇದಕ್ಕಿಂತ ಅಚ್ಚರಿಯ ವಿಷಯವೇನೆಂದರೆ ಭಾರತೀಯ ವಲಸೆಗಾರರು ಒಂದೆರಡು ಪೀಳಿಗೆಗಳನಂತರ – ಆ ಮೂಲದವರು ಎಂದು ಪರಿಚಿಸುವುದು ಉಚಿತ – ಮಿಕ್ಕ ಎರಡು ಅ-ಶ್ವೇತರನ್ನು ತಮ್ಮದೇ ಆದ ತುಚ್ಛ ರೀತಿಯಲ್ಲಿ ವ್ಯವಹರಿಸಿಕೊಳ್ಳುತ್ತಿದ್ದರು.

ಇಷ್ಟೆಲ್ಲಾ ವಿವರಣೆ ಕೊಡಲು ಒಂದು ಕಾರಣ ಇದೆ. ಗಾಂಧೀಜಿ ೨೧ ವರುಷಗಳು (೧೮೯೩-೧೯೧೪) ದಕ್ಷಿಣ ಆಫ್ರಿಕದಲ್ಲಿ ನಡೆಸಿದ ಸಂಗ್ರಾಮ ಭಾರತೀಯರೆಲ್ಲರಿಗೂ ಪರಿಚಿತ. ಆದರೂ ಈ ಸಂಗ್ರಾಮ ಅಲ್ಲಿನ ಭಾರತೀಯ ವಲಸೆಗಾರರನ್ನು ಬಿಟ್ಟು ಮಿಕ್ಕ ಇತರ, ಬಹುಭಾಗೀಯ, ಅ-ಶ್ವೇತವರ್ಣೀಯರನ್ನು ಗಮನಕ್ಕೇ ತೆಗೆದುಕೊಳ್ಳಲಿಲ್ಲ. ಗಾಂಧೀಜಿ ಸಹ ಅಲ್ಲಿನ ಕರಿಯರನ್ನು ಅಲ್ಲಿನ ಅಲ್ಪಸಂಖ್ಯಾತ ಶ್ವೇತರು ಯಾವ ರೀತಿ ವ್ಯವಹರಿಸಿಕೊಳ್ಳುತ್ತಿದ್ದರೋ ಹೆಚ್ಚು ಕಮ್ಮಿ ಅದೇ ರೀತಿ ವ್ಯವಹರಿಸಿಕೊಳ್ಳುತ್ತಿದ್ದರು. ಅವರ ಬರವಣಿಗೆಗಳಲ್ಲಂತೂ ಕರಿಯರನ್ನು ಯಾವಾಗಲೂ 'ಕಾಫಿರ್' ಎಂದೇ ಪರಿಚಯಿಸುತ್ತಿದ್ದರು, ವರ್ಣಿಸುತ್ತಿದ್ದರು.

ಸ್ವತಃ ಗಾಂಧೀಜಿಯೇ ತಮ್ಮ ಬರವಣಿಗೆಗಳಲ್ಲಿ ಸ್ಪಷ್ಟಪಡಿಸಿರುವಂತೆ ಭಾರತೀಯ

ವಲಸೆಗಾರರು ಸಮಾನ ಹಕ್ಕುಗಳನ್ನು ದೊರಕಿಸಿ ೂಳ್ಳಬೇಕೆಂದು ನಡೆಸಿದ ಹೋರಾಟ ಅಲ್ಲಿನ ತಿಸಂಖ್ಯೀಯ ಕರಿಯರು ಸಮಾನ ಹಕ್ಕುಗಳನ್ನು ೊರಕಿಸಿಕೊಳ್ಳಲು ನಡೆಸುತ್ತಿದ್ದ ಹೋರಾಟಕ್ಕಿಂತ ೕರೆ. ಪುಟ್ಟದಾಗಿ ಹೇಳಬೇಕೆಂದರೆ, ಅವರ ರಸ್ತೆ ಅವರದು, ನಮ್ಮ ರಸ್ತೆ ನಮ್ಮದು, ಇದು ಗಾಂಧೀಜಿಯ ುತವಾಗಿತ್ತು.

ಇದರ ಪರಿಣಾಮ, ಭಾರತೀಯ ವಲಸೆಗಾರರ ುನೆತನದವರ ಪರಿಸ್ಥಿತಿ ಪದೇ ಪದೇ ಏನೋ ಸ್ವಲ್ಪ ೆನ್ನಾದರೂ ಅಲ್ಲಿನ ಮೂಲವಾಸಿ ಅತಿಸಂಖ್ಯಾತ ರಿಯರ ಅವಸ್ಥೆ ಎಂದಿಗಿಂತ ಅನಿಷ್ಟವಾಗುತ್ತಿತ್ತು. ಿದಲ್ಲದೆ ಭಾರತೀಯ ಮೂಲವಾಸಿಗಳ ಬಗ್ಗೆ ಮತ್ತು ಿದಕ್ಕೂ ಮೀರಿ ಗಾಂಧೀಜಿಯ ಬಗ್ಗೆ ಅಲ್ಲಿನ ಜನಸಾಮಾನ್ಯರಲ್ಲಿ ಈಗಲೂ ಒಂದು ತರಹ ಈರ್ಷ್ಯೆ ುತ್ತು ತಿರಸ್ಕಾರ ಇದೆ. ಈಗ ಅಂತಹ ತಿರಸ್ಕಾರ ಬಹಳ ುಟ್ಟಿಗೆ ಕಮ್ಮಿ ಆಗಿರುವುದಕ್ಕೆ ಮತ್ತು ವರ್ಣದ್ವೇಷೀಯ ದ್ಧತಿ ಮತ್ತು ಸರಕಾರದ ವಿರುದ್ಧ, ಗಣತಂತ್ರದಲ್ಲಿ ಶ್ವಾಸವಿದ್ದವರೆಲ್ಲರೂ – ಕರಿಯರು, ಬಿಳಿಯರು, ಾರತೀಯ ಮೂಲದವರು, ಮಿಶ್ರಿತರು – ಒಟ್ಟಾರೆ ೋರಾಟ ನಡೆಸಿ ಜಯ ಗಳಿಸಿದ್ದು ದಾದೂವಿನಂತಹ ಾಯಕರು ಒದಗಿಸಿದ ನಾಯಕತ್ವದ ಸಾಧನೆ ನ್ನಬೇಕು. ಅಹುದು, ವರ್ಣೀಯ ಪದ್ಧತಿಯ ವಿರುದ್ಧ ೋರಾಟದ ನಾಯಕರಾಗಿ ಆ ಹೋರಾಟದಲ್ಲಿ ಜಯ ಳಿಸಿ ಆ ದೇಶದಲ್ಲಿ ಗಣತಂತ್ರವನ್ನು ಸ್ಥಾಪಿಸಿರುವ ಫ್ರಿಕನ್ ನ್ಯಾಶನಲ್ ಕಾಂಗ್ರೆಸ್‌ನ ನಾಯಕರ ಪ್ರಕಾರ ಮ್ಮ ಹೋರಾಟದಲ್ಲಿ, ಅಲ್ಲಿನ ಎಲ್ಲ ಗಣತಂತ್ರ ಾದಿಗಳು ಸಕ್ರಿಯವಾಗಿ ಪಾಲ್ಗೊಂಡಿದ್ದರು. ಆದರೂ ಲ್ಲಿನ ಜನಸಾಮಾನ್ಯರಲ್ಲಿ, ಅದರಲ್ಲೂ ಅಲ್ಲಿನ ರಿಯ ಜನಸಾಮಾನ್ಯರಲ್ಲಿ, ಆ ಹೋರಾಟದಲ್ಲಿ ಣತಂತ್ರೀಯ ರಾಜಕೀಯ ಚಟುವಟಿಕೆಗಳಲ್ಲಿ, ಂದರೆ ಸಶಸ್ತ್ರ ಸಮರ, ಪರದೇಶವಾಸ, ದೀರ್ಘ ರಾದಂಡದ ಶಿಕ್ಷೆ, ಗಲ್ಲು, ಅವೆಲ್ಲವನ್ನೂ ಅನುಭವಿಸಿ ಕ್ರಿಯವಾಗಿ ಪಾಲ್ಗೊಂಡಿದ್ದ ಭಾರತೀಯ ೂಲದವರನ್ನು ಬಿಟ್ಟು ಮಿಕ್ಕ ಬಹುಸಂಖ್ಯಾತ ಾರತೀಯ ಮೂಲವಾಸಿಗಳು ನಿಜವಾಗಿಯೂ ಆ ಂಗ್ರಾಮದಲ್ಲಿ ನಿರತರಾಗಿದ್ದರೇ, ಈ ಬಗ್ಗೆ ಈಗಲೂ ಂಶಯ ಸಂದೇಹಗಳಿವೆ.

ಈ ಸಂಶಯಗಳನ್ನು ಪರಿಹರಿಸಿ ಭಾರತೀಯ ೂಲವಾಸಿಗಳು ತಮ್ಮ ಹೋರಾಟ ಸಫಲವಾಗಲು ುಕ್ಕವರೆಲ್ಲರ ಜೊತೆ ಒಟ್ಟಾರೆ ಕಲೆತು ೋರಾಡುವುದು ಅನಿವಾರ್ಯ ಅನ್ನುವ ನೀತಿ ಾರತೀಯ ಮೂಲವಾಸಿಗಳ, ಗಾಂಧೀಜಿಯೇ ಂಸ್ಥಾಪಿಸಿದ್ದ ನಟಾಲ್, ಟ್ರಾನ್ಸ್ವಾಲ್ ಮತ್ತು ದಕ್ಷಿಣ ಫ್ರಿಕಾ ಭಾರತೀಯ ಕಾಂಗ್ರೆಸ್‌ಗಳು ಅನುಸರಿಸು ದರಲ್ಲಿ ದಾದೂನ ಪಾತ್ರ ಬಹಳ ಮಹತ್ವದ್ದಾಗಿತ್ತು. ಒಟ್ಟಾರೆ ಹೋರಾಟ ನಡೆಸುವ ಒಪ್ಪಿಗೆಯ ರಂಭ ದಕ್ಷಿಣ ಆಫ್ರಿಕಾದ ಮುಕ್ತಿ ಸಂಗ್ರಾಮದ ತಿಹಾಸದಲ್ಲಿ ೯ ಮಾರ್ಚ್ ೧೯೪೭ರ ದಾದೂ- ಾಯಕರ್-ಖೂಮ ಒಪ್ಪಂದ ಎಂದು ಖ್ಯಾತವಾಗಿದೆ. ಂತಹ ಒಟ್ಟಾರೆ ಹೋರಾಟ ನಡೆಸುವ ಒಪ್ಪಿಗೆಯ ಪರಿಣಾಮ ತಮ್ಮ ಆಧಿಪತ್ಯಕ್ಕೆ ಅಪಾಯವಾಗ ಬಹುದೆಂಬ ಅನುಮಾನದಿಂದಲೇ ಸರಕಾರ ಕೆಲವು ಕರಿಯರನ್ನು ಉತ್ತೇಜಿಸಿ ಡರ್ಬನ್ನಿನ ಭಾರತೀಯ ಮೂಲದವರ ವಿರುದ್ಧ ಜನವರಿ ೧೯೪೯ರ ದೊಂಬಿ ಪುಂಡಾಟ ಮಾಡಿಸಿದರು ಎನ್ನುವುದು ಈಗ ಸರ್ವಜನವಿದಿತ. ಆದರೂ ಇದರಲ್ಲೂ ಭಾರತೀಯ ಮೂಲದವರು ಅಲ್ಲಿನ ಕರಿಯರೊಡನೆ ಇಟ್ಟುಕೊಂಡಿದ್ದ, ಅಲ್ಲ, ಇಟ್ಟುಕೊಂಡೇ ಇರಲಿಲ್ಲದ, ಸಂಬಂಧಗಳು ಈ ಒಳಗಿನ ವೈಷಮ್ಯತೆ ಹೊರಗೆ ಬರುವುದರಲ್ಲಿ ಒಂದು ರೀತಿ ಸಹಾಯ ಮಾಡಿತು ಅನ್ನುವುದರಲ್ಲೂ ಏನೂ ಸಂದೇಹವಿಲ್ಲ.

ಇದು ದಾದೂ ಜೀವನದ ಕೊನೆಯ ಕಾಲದ ಒಂದು ಘಟನೆಯನ್ನು ಕುರಿತ ಬರವಣಿಗೆ. ಆದರೂ ಸ್ವಲ್ಪ ವಿಶದವಾಗಿರುವ ಈ ಮುಮ್ಮಾತು ಏಕೆಂದರೆ ನಾನು ಚರ್ಚಿಸಬೇಕೆಂದಿರುವ ವಿಷಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಆತನ ಜೀವನದ ಅಮೋಘ ಸಂಗ್ರಾಮದ ಹಿನ್ನೆಲೆ ತಿಳಿದುಕೊಳ್ಳಬೇಕು.

೨೧ ಮಾರ್ಚ್ ೧೯೬೦. ದಕ್ಷಿಣ ಆಫ್ರಿಕಾದ




ಇತಿಹಾಸದಲ್ಲಿ ಕುಖ್ಯಾತವಾಗಿರುವ ಒಂದು ನರಮೇಧದ ದಿನ. ಅಂದು ವರ್ಣದ್ವೇಷೀಯ ಸರಕಾರ ತನ್ನ ಭಾಷಾ ನೀತಿಯನ್ನು ಅನುಸರಿಸಿ ಅಲ್ಲಿನ ಬಹುಸಂಖ್ಯಾತ ಅ-ಶ್ವೇತ ಸ್ಕೂಲ್ ವಿದ್ಯಾರ್ಥಿಗಳು ಕಡ್ಡಾಯವಾಗಿ ಆಫ್ರಿಕಾನ್ಸ್ ಭಾಷೆಯ ಮಾಧ್ಯಮದ ಮೂಲಕ ಕಲಿಯಬೇಕು ಅನ್ನುವ ಸಿದ್ಧಾಂತವನ್ನು ವಿರೋಧಿಸಿ ದೇಶಾದ್ಯಂತ ಪ್ರತಿಭಟಿಸಿದ್ದರು. ಅಂತಹ ಪ್ರತಿಭಟನೆಯ ಅಂಗವಾಗಿ ಶಾಲೆಗಳ ಮಕ್ಕಳು ಮತ್ತು ಜನಸಾಮಾನ್ಯರು ಶಾರ್ಪ್‌ವಿಲ್ ಎಂಬ ತಾಣದಲ್ಲೂ ಒಂದು ವಿರಾಟ್ ಸಮಾವೇಶ, ಮೆರವಣಿಗೆ ನಡೆಸಿದರು. ಆ ಏನೂ ಅಸ್ತ್ರಶಸ್ತ್ರ ಹೊಂದಿರದಿದ್ದ ಜನಸಮುದಾಯದ ಮೇಲೆ ಸರಕಾರ ಗೋಲಿ ಗುಂಡು ಹಾರಿಸಿದುದರ ಪರಿಣಾಮವಾಗಿ ಸರಕಾರ ಒಪ್ಪಿಕೊಂಡಂತೆಯೇ ೬೯ ಮಂದಿ ಸಾವನ್ನು ಅಪ್ಪಿಕೊಂಡರು. ಈ ನರಮೇಧದ ಕೆಲವೇ ದಿನಗಳ ಬಳಿಕ ಸರಕಾರ ಅಲ್ಲಿನ ಗಣತಂತ್ರ ಪದ್ಧತಿಯಲ್ಲಿ ವಿಶ್ವಾಸ ಇಟ್ಟುಕೊಂಡಿದ್ದ ಅ-ಸರಕಾರೀ ಪಕ್ಷ ಗಳೆಲ್ಲವನ್ನೂ ನಿಷೇಧಿಸಿತು. ಆ ಪಕ್ಷಗಳ ಸಕ್ರಿಯ ಸದಸ್ಯರನ್ನು ಬಂಧಿಸಿ ಅಥವಾ ಅವುಗಳ ಮೇಲೆ ಬೇರೆ ಅನೇಕ ರೀತಿಯ ನಿರ್ಬಂಧ ಹೇರಿ ಒತ್ತಡ ತಂದಿತು. ಇದೆಲ್ಲಕ್ಕಿಂತ ಮೀರಿ ದಕ್ಷಿಣ ಆಫ್ರಿಕಾದ ಬಹುಸಂಖ್ಯೀಯರ ಬೆಂಬಲ ಪಡೆದಿದ್ದ ಆಫ್ರಿಕನ್ ನ್ಯಾಶನಲ್ ಕಾಂಗ್ರೆಸ್ ಮತ್ತು ಅದರ ಜೊತೆಯಲ್ಲಿದ್ದ ಕೆಲವಾರು ಸಂಘ ಸಂಸ್ಥೆಗಳನ್ನು ಆ ಅಲ್ಪಸಂಖ್ಯಾತ ಬಿಳಿಯರ ಸರಕಾರ ನಿಷೇಧಿಸಿತು. ಸಾವಿರಾರು ಜನರು ರಾಜಕೀಯ ಬಂದಿಗಳಾದರು. ವಿರೋಧಿ ರಾಜಕೀಯ ಚಟುವಟಿಕೆಗಳು ಅವೈಧ ಎಂದು ಘೋಷಿಸಲ್ಪಟ್ಟವು. ಈ ನರಮೇಧ ಮತ್ತು ಅತ್ಯಾಚಾರಗಳ ಹಿನ್ನೆಲೆಯಲ್ಲಿ ಅದುವರೆಗೂ ವರ್ಣವಿದ್ವೇಷ ಪದ್ಧತಿ ನೀತಿಗಳ ವಿರುದ್ಧ ಶಾಂತಿಪೂರ್ವಕ ಚಳುವಳಿ ನಡೆಸಿದ್ದ ಆಫ್ರಿಕನ್ ರಾಷ್ಟ್ರೀಯ ಕಾಂಗ್ರೆಸ್ ಮತ್ತು ಇತರ ಜನಪರ ರಾಜಕೀಯ ಸಂಸ್ಥೆಗಳು ಇಂತಹ ಅಮಾನವೀಯ ಸರಕಾರದ ನೀತಿಗಳ ವಿರುದ್ಧ ಶಾಂತಿಯುತ ರೀತಿಯಲ್ಲಿ ವಿರೋಧಿಸುವುದು ಅಸಾಧ್ಯ: ಉಳಿದಿರುವ ಒಂದೇ ರಸ್ತೆ, ಸಶಸ್ತ್ರ ಸಂಗ್ರಾಮದ ರಸ್ತೆ, ಅನ್ನುವ ಸಿದ್ಧಾಂತ ತಲುಪಿದವು. ಆ ಹೋರಾಟ ಆರಂಭವಾದ ದಿನ: ೧೬ ಡಿಸೆಂಬರ್ ೧೯೬೧. ಈ ಮಾತನ್ನು ಸಶಸ್ತ್ರ ಪಡೆ ಉಂಖೊಂಟೋ ಇಸಿಝ್ವೆಯ ಅಧಿನಾಯಕ ನೆಲ್ಸನ್ ಮಂಡೇಲ ಸಶಸ್ತ್ರ ಸಂಗ್ರಾಮ ಆರಂಭಿಸಿದ ಮುಹೂರ್ತದಲ್ಲಿ ಹೊರಪಡಿಸಿದ ಹೇಳಿಕೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ:

''ಒಂದು ದೇಶದ ಐತಿಹಾಸಿಕ ಜೀವನದಲ್ಲಿ ಒಂದು ನಿರ್ಧಾರಕ ಸಂದರ್ಭ ಒದಗಿಬರುತ್ತದೆ: ಆಗ ಎರಡು ಆಯ್ಕೆಗಳು ಮಾತ್ರ ಸಾಧ್ಯ; ಶರಣಾಗುವುದು, ಇಲ್ಲವೇ ಹೋರಾಡುವುದು. ದಕ್ಷಿಣ ಆಫ್ರಿಕಾದಲ್ಲಿ ಈಗ ಅಂತಹ ಸಂದರ್ಭ ಬಂದಿದೆ. ನಾವು ಶರಣಾಗು ವುದಿಲ್ಲ; ಆದ್ದರಿಂದ ನಮಗುಳಿದಿರುವುದು ಒಂದೇ ಮಾರ್ಗ: ಹಿಮ್ಮೆಟ್ಟಿಸುವುದು. ಅದಕ್ಕಾಗಿ, ನಮ್ಮ ಜನರ ಸುರಕ್ಷತೆಗಾಗಿ, ನಮ್ಮಲ್ಲಿರುವ ಎಲ್ಲ ಶಕ್ತಿಯನ್ನೂ ಮೀರಿ ನಾವು ಹೋರಾಡುತ್ತೇವೆ. ನಮ್ಮ ಭವಿಷ್ಯ ಮತ್ತು ನಮ್ಮ ಸ್ವಾತಂತ್ರ್ಯಕ್ಕೆ ಇದು ಅನಿವಾರ್ಯ.''

ಆ ಸಶಸ್ತ್ರ ಮುಕ್ತಿ ಸಂಗ್ರಾಮ ಸಕ್ರಿಯವಾಗಿ ದೇಶದ ಒಳಗೂ ಮತ್ತು ಹೊರಗೂ ಕೆಲವಾರು ವರುಷಗಳು ನಡೆಯಿತು. ಅದರಲ್ಲಿ ಆಫ್ರಿಕನ್ ನ್ಯಾಶನಲ್ ಕಾಂಗ್ರೆಸ್ ಜೊತೆಯಲ್ಲಿ ಸಮ ಸಮಾನವಾಗಿ ದಕ್ಷಿಣ ಆಫ್ರಿಕಾದ ಕಮ್ಯುನಿಸ್ಟ್ ಪಕ್ಷ ಭಾಗವಹಿಸಿತ್ತು. ಎರಡೂ ಪಕ್ಷಗಳ ಅನೇಕ ನಾಯಕರು ಮತ್ತು ಕರ್ಮಿಗಳು ನಾಯಕತ್ವದ ನಿರ್ದೇಶವನ್ನು ಅನುಸರಿಸಿ ದೇಶದಾಚೆ ಹೋದರು. ಅನೇಕರು ಅದೇ ನಿರ್ದೇಶವನ್ನು ಅನುಸರಿಸಿ ದೇಶಕ್ಕೆ ವಾಪಸೂ ಆದರು. ಈ ಹೊರಪಯಣ ಒಳಪಯಣ ಅನವರತವಾಗಿ ಮುಂದಿನ ಮೂವತ್ತು ವರುಷಗಳ ಪರ್ಯಂತ ನಡೆಯಿತು.

ಆ ಹೊರಪಯಣದಲ್ಲಿ ತನ್ನ ದಳದ ನಿರ್ದೇಶದ ಪ್ರಕಾರ ೧೯೬೧ರಲ್ಲಿ ದೇಶ ಬಿಟ್ಟು ಹೋದ ದಾದೂ ಸ್ವದೇಶಕ್ಕೆ ವಾಪಸಾಗಲೇ ಇಲ್ಲ. ೨೨ ವರುಷಗಳ ಕಾಲ ಇಂಗ್ಲೆಂಡ್‌ನಲ್ಲಿ ಪರದೇಶಿಯಾಗಿದ್ದು ಆ ಸುದೂರ ಇಂಗ್ಲೆಂಡ್‌ನಲ್ಲೇ ಕೊನೆಯುಸಿರು ಎಳೆದ. ಆ ೨೨ ವರುಷಗಳಲ್ಲಿನ ಆತನ ರಾಜಕೀಯ ಚಟುವಟಿಕೆಗಳು ಈಗ ಸ್ವಾಧೀನ ದಕ್ಷಿಣ ಆಫ್ರಿಕಾದ ಇತಿಹಾಸದಲ್ಲಿ

ವಿಶೇಷ ಮಾನ್ಯತೆ ದೊರಕಿಸಿಕೊಂಡಿವೆ. ಆಫ್ರಿಕನ್ ನ್ಯಾಶನಲ್ ಕಾಂಗ್ರೆಸ್ ತನ್ನ ಅತ್ಯುನ್ನತ ಸನ್ಮಾನ – ಇಸಿತ್ವಲಾಂದ್ವೆ ಸೆಪರಾಂಕೋಯೆ – ಅಂದರೆ, ಅತ್ಯಂತ ಅಪರೂಪವಾದ ಪಕ್ಷಿಯೊಂದರ ಗರಿಗಳನ್ನು ಧರಿಸಿರುವ ಯೋಧ – ಕೊಟ್ಟು ಗೌರವಿಸಿದ ಮೊದಲ ಮೂರು ವ್ಯಕ್ತಿಗಳಲ್ಲಿ ದಾದೂ ಒಬ್ಬ. ಆಫ್ರಿಕಾದ ಪರಂಪರೆಯಲ್ಲಿ ಈ ಗೌರವ ಮಿಕ್ಕೆಲ್ಲವರಿಗಿಂತಲೂ ಧೀರ ಪರಾಕ್ರಮಿ ಎಂದು ಕೀರ್ತಿ ಪಡೆದ ಯೋಧನಿಗೆ ಮೀಸಲಾಗಿತ್ತು. ಸಂಕ್ಷಿಪ್ತವಾಗಿ ಹೇಳಬೇಕೆಂದರೆ ದಾದೂ ಒಬ್ಬ ಅದ್ಭುತ ದೇಶಪ್ರೇಮಿ ಕಮ್ಯುನಿಸ್ಟ್. ದೇಶಪ್ರೇಮ ಮತ್ತು ಕಮ್ಯುನಿಸಂ ನಿಷ್ಠೆ, ಇವುಗಳ ಮಧ್ಯೆ ಏನೇನೂ ದ್ವಂದ್ವ ಇರಬೇಕಾಗಿಲ್ಲ ಅನ್ನುವುದು ಆತನ ಜೀವನ ಮತ್ತು ರಾಜಕೀಯ ಚಟುವಟಿಕೆಗಳಿಂದ ಸ್ಪಷ್ಟವಾಗುತ್ತದೆ. ಇಂತಹ ಮಹಾನ್ ವ್ಯಕ್ತಿ ತನ್ನ ಜೀವನದ ಕೊನೆಯ ದಿನಗಳಲ್ಲಿ ಸಾಧಾರಣವಾಗಿ ಕಮ್ಯುನಿಸ್ಟ್ ನಾಯಕರು ಮಾಡದ, ಅಥವಾ ಮಾಡಿದರೂ ಗುಟ್ಟಾಗಿ ಮಾಡುವ, ಎರಡು ಕೆಲಸಗಳನ್ನು ಮಾಡಿದ. ಒಂದು, ಹಜ್ ಯಾತ್ರೆ; ಮತ್ತು ಎರಡು, ತನ್ನ ಮರಣದ ನಂತರ ಮುಸಲ್ಮಾನ ಸಂಪ್ರದಾಯದ ಪದ್ಧತಿಗಳನ್ನು ಅನುಸರಿಸಿ ಆತನ ಅಂತ್ಯಕ್ರಿಯೆಗಳನ್ನು ನಡೆಸಬೇಕು ಎನ್ನುವ ನಿರ್ದೇಶ. ಈ ಎರಡೂ ಸಿದ್ಧಾಂತಗಳು ಅವನು ಇನ್ನೂ ಬದುಕಿದ್ದಾಗಲೇ ವಾದ ವಿವಾದಗಳನ್ನು ಉಂಟುಮಾಡಿದ್ದವು. ದೇವರು ಧರ್ಮಗಳಲ್ಲಿ ನಂಬಿಕೆ ಇರದ ಕಮ್ಯುನಿಸ್ಟ್ ನಾಯಕನೊಬ್ಬ ಹಜ್ ಯಾತ್ರೆ ಮಾಡುವುದು ಉಚಿತವೇ? ಅದೇ ಚಿಂತಾಧಾರೆಯನ್ನು ಅನುಸರಿಸಿ ಇನ್ನೊಂದು ಪ್ರಶ್ನೆ: ಮರಣಾನಂತರ ಅಂತ್ಯಕ್ರಿಯೆಗಳು ಒಂದು ಧರ್ಮೀಯ ಪದ್ಧತಿಯನ್ನು ಅನುಸರಿಸಬೇಕೆಂದು ಒಬ್ಬ ಕಮ್ಯುನಿಸ್ಟ್ ನಾಯಕ ನಿರ್ದೇಶಿಸಬಹುದೇ? ಇಂತಹ ಪ್ರಶ್ನೆಗಳಿಗೆ ಖಡಾಖಂಡಿತ ಉತ್ತರ ಅಸಾಧ್ಯ. ಆದರೂ ಇಂತಹ ಅನುಮಾನ ಸಂದೇಹಗಳನ್ನು ನಿರಾಕರಿಸದೆ ಎದುರಿಸಿ ಉತ್ತರಿಸಲು ದಾದೂನ ಸಹಕರ್ಮಿ ಜೋ ಸ್ಲೋವೋ ಯತ್ನಿಸಿದ್ದಾರೆ. ಈ ಬಗ್ಗೆ ಆತ ಬರೆದಿರುವುದನ್ನು ಕೆಳಗೆ ಉಲ್ಲೇಖಿಸಿದ್ದೇನೆ. ದಾದೂ ತನ್ನ ಕಮ್ಯುನಿಸ್ಟ್ ಸಿದ್ಧಾಂತ ಮತ್ತು ಕಾರ್ಯಪದ್ಧತಿಯಲ್ಲಿನ ವಿಶ್ವಾಸ, ನಂಬಿಕೆ ಮತ್ತು ಶ್ರದ್ಧೆ, ಅದರ ಜೊತೆಯಲ್ಲೇ ತನಗೆ ಗಾಂಧೀಜಿಯ ಬಗ್ಗೆ ಇದ್ದ ಅಪಾರ ಗೌರವವನ್ನು, ತನ್ನ ಹಿನ್ನೆಲೆಯ ಮುಸಲ್ಮಾನ ಜನಸಾಧಾರಣರಿಂದ ಎಂದೂ ಮುಚ್ಚಿಡಲು ಯತ್ನಿಸಲಿಲ್ಲ ಎಂದು ನೆನೆಸಿಕೊಂಡು ಸ್ಲೋವೋ ಈ ರೀತಿ ಬರೆದಿದ್ದಾನೆ:

''ತನ್ನ ನಿಚ್ಚಳ ಬದ್ಧತೆಗಳನ್ನು ಮುಚ್ಚಿಡಲು ಆತ ಯಾವಾಗಲೂ ತಾತ್ವಿಕವಾಗಿ ನಿರಾಕರಿಸಿದ್ದ. ಅದೊಂದು ರೀತಿಯ ಒಗಟಾಗಿ ಕಾಣುತ್ತದೆ. ಏಕೆಂದರೆ, ಈ ರೀತಿಯ ಒಗಟಿನ ನಡೆವಳಿಕೆಯಿಂದಾಗಿ ತನ್ನ ಸುತ್ತಣ ಜನರಿಂದ ದೊರಕಿದ ಗೌರವಕ್ಕೆ ಎಂದೂ ಚ್ಯುತಿಯುಂಟಾಗಲಿಲ್ಲ. ಬದಲಾಗಿ ಆತನ ಬಗ್ಗೆ ಒಂದು ರೀತಿಯ ಪೂಜ್ಯಭಾವ ಅನೇಕ ವೇಳೆ ಪ್ರದರ್ಶಿತವಾಗುತ್ತಿತ್ತು. ಈ ಬಗೆಯ ಮಿಶ್ರಣವು ಅಂದು ಸೂಕ್ತವಾಗಿ ಕಾಣುತ್ತಿರಲಿಲ್ಲ; ಈಗಂತೂ ಅದು ಇನ್ನೂ ಹೆಚ್ಚು ಪ್ರಶ್ನಾರ್ಹವಾಗಿ ಕಾಣಬರಬಹುದು... ಬೇರಾವುದೇ ಭಾರತೀಯ ಮೂಲದ ನಾಯಕನಿಗಿಂತಲೂ ಮಿಗಿಲಾಗಿ ಯೂಸುಫ್ ಜನರ ಭರವಸೆಗಳ ಕಿರಣವಾಗಿದ್ದ, ಅಂತೆಯೇ ಅವರ ಒಪ್ಪಿಗೆಗೂ ಪಾತ್ರನಾಗಿದ್ದ. ಎಲ್ಲ ಕರಿಯರ ಭವಿಷ್ಯವೂ ಸಮಾನವಾಗಿರುತ್ತದೆಂಬ ಅಂತಿಮ ಸತ್ಯ ಆತನಿಂದ ಪ್ರತೀಕಿಸಲ್ಪಟ್ಟಿತ್ತು. ಭಾರತೀಯ ಮೂಲದ ಜನರಿಗೆ ಸಂಬಂಧಿಸಿದಂತೆ ಇದು ಸಾಧ್ಯವಾದದ್ದು ದಾದೂ ಐಕ್ಯತೆಗಾಗಿ ನಿರಂತರ ರಾಜಕೀಯ ಪ್ರಕ್ರಿಯೆಯಲ್ಲಿ ತೊಡಗಿದ್ದುದರಿಂದ ಮಾತ್ರವೇ ಅಲ್ಲ; ಅದಕ್ಕಿಂತಲೂ ಪ್ರಮುಖವಾಗಿ

## ಏ... ಕರಿಹೈದ

ಯಾರು ನೀನು ?
ಕರಿಹೈದ...
ಹೀಗೇಕೆ ಕಾಡುತ್ತೀಯೆ ?
ಬೆನ್ನು ಹತ್ತಿ , ನೆರಳಿನಂತೆ, ಹಿಂಬಾಲಿಸುತ್ತೀಯೆ.
ನಸುಕಿನಿಂದ, ಸಂಜೆಯವರೆಗೂ ತಲೆ ತಿನ್ನುತ್ತೀಯೆ.

ರಾಕ್ಷಸನಂತೂ ಅಲ್ಲ,
ಅವರಿಗೆ ಸಾವಿದೆ.
ತೊಂದರೆ ಕೊಟ್ಟಿದ್ದಾರೆ ನಿಜ.
ಆದರೂ... ನಮ್ಮ ದೇವರುಗಳ ಮುಂದೆ
ಅವರೇನೂ ಅಲ್ಲ ತೆಗಿ.

ರಾಹು, ಕೇತುಗಳಂತು ಅಲ್ಲವೇ ಅಲ್ಲ
ಅವರೆಲ್ಲ ಕ್ಷಣಿಕ.
ಮುಷ್ಟಿಗೆ ಸಿಗದ ಛಾಯೆಗಳು.
ಆಗೊಮ್ಮೆ ಈಗೊಮ್ಮೆ
ಇಣುಕಿ ಹೋಗಿಬಿಡುತ್ತಾರೆ.
ಎಲ್ಲರನ್ನೂ ಕಾಡುವುದಿಲ್ಲ

ನನ್ನಪಾಲಿನ ಶನಿಯೆ ನೀನು ?
ಆಗಿರಲಿಕ್ಕಿಲ್ಲ ಬಿಡು
ನೀನು ಶನಿಯಲ್ಲ

ಅವ, ಪಾಪದವ
ಯಾವಾಗ ಬಂದರೂ
ನೋವು ನಲಿವುಗಳೆರಡನ್ನೂ
ತರುತ್ತಾನೆಂದು ಹೇಳುತ್ತಾರೆ.
ಹೋದ ಮೇಲೂ
ಕೀರ್ತಿ ಕರುಣಿಸುತ್ತಾನಂತೆ.

ಮತ್ಯಾರು ನೀನು ?
ಎಲ್ಲಿಂದಲೋ ಬಂದು
ಆವರಿಸಿಬಿಡುತ್ತೀಯಂತೆ.
ಎಂತೆಂಥವರೋ ಗೋಣು ಚಲ್ಲಿದ್ದಾರಂತೆ.
ನಿನ್ನೆದುರು
ನೆಲಕಚ್ಚಿ ಚಿತ್ತಾಗಿದ್ದಾರಂತೆ
ತಪ್ಪಿಸಿಕೊಂಡವರು
ಬೆರಳೆಣಿಕೆಯಷ್ಟು ಮಂದಿಯಂತೆ.

ನೀನು ಯಾರಾದರೂ ಆಗಿರು ಸಧ್ಯ
ದೂರ ಇರು ಮಾರಾಯ.
ನನ್ನ ಬಳಿ ಸುಳಿಯುತ್ತಿರಬೇಡ.
ಇನ್ನೂ ಬಹಳಷ್ಟು ಬಾಕಿ ಇದೆ
ಸವೆಸಬೇಕಾದ ಕರ್ಮ
ಸರಿಯಾಚೆ...
ಗೆರೆಹಾಕದೆ, ಕಾಲಾವಕಾಶ ಕೊಡು.

**ನಾಗರಾಜ ರಾಯ್ಕರ್**
ಸಿ - ೧೩೨, 'ನಂದನ'
೨ನೇ ತಿರುವು, ಅಗ್ರಹಾರ
ಸಾಗರ - ೫೭೭೪೦೧
ಶಿವಮೊಗ್ಗ ಜಿಲ್ಲೆ

ತನ ಜೀವನಾದರ್ಶಗಳ ವೈಯಕ್ತಿಕ ಪಾಲನೆ ಯಿಂದಾಗಿ ಆತನನ್ನು ಜನ ಹೇಗೆ ಕಾಣುತ್ತಿದ್ದರೆಂಬುದು ದ್ಯತೆ ಪಡೆಯುತ್ತದೆ. ತನಗಿಂತಲೂ ಮುಂಚೆ ಇದ್ದ ಾಂಧಿಯಂತೆ, ಭಯಭೀತರಾಗಿದ್ದ ಅಲ್ಪಸಂಖ್ಯಾತರ ಹಜ ಅಸಹಾಯಕತೆಯನ್ನು ದಾದೂ ಕಡಿದು ಾಕಿದ. 'ಕ್ರಾಂತಿಕಾರಿ' ಹೋರಾಟವು ನಿಜವಾಗಿಯೂ ಯಾವ ಸ್ವರೂಪದ್ದೆಂದು ಸಾಮಾನ್ಯವಾಗಿ, ಾಂಪ್ರದಾಯಿಕವಾಗಿ, ಪ್ರತಿಪಾದಿಸಲಾಗುತ್ತದೋ ದರಿಂದ ದೂರ ಸರಿದು, ದಾದೂ ನಮ್ಮ ವಾಸ್ತವಿಕ ಂಗತಿಗಳ ದೇಶಿ ಪರಂಪರೆಗಳನ್ನು ಮೈಗೂಡಿಸಿ ಂಡ: ಗಾಂಧೀಜಿ ಕಲ್ಪನೆಯ 'ಭಂಗ' ಅದು. ೯೨೦ರ ದಶಕದಿಂದಲೂ ಪ್ರಸಿದ್ಧನಾಗಿದ್ದ ಪಕ್ಷದ ರಿಷ್ಠ ಬುಯಿರ್ಸ್ಕಿ ಮತ್ತು ಯೂಸುಫ್ ದಾದೂ ಡುವೆ ಒಂದು ಚರ್ಚೆ ನಡೆದಿತ್ತು ... 'ಗಾಂಧೀಜಿಯತ್ತ ಾಲುವ' ನಿಲುವಿನವನೆಂದು ದಾದೂವನ್ನು ಟೀಕಿಸಿ ೇವಡಿ ಮಾಡುತ್ತಿದ್ದ ಸಂಗಾತಿ ಬುಯಿರ್ಸ್ಕಿ ದಾದೂ ೇತೃತ್ವದ ಒಂದು ಆಂದೋಲನವನ್ನು 'ಒಂದು ಾಗದಲ್ಲಿ ಹೋಗಿ ಸ್ಥಾಪಿಸಿಕೊಳ್ಳುವುದು' ಎಂದು ಣ್ಣಿಸಿದ್ದ. ಅದಕ್ಕೆ ಯೂಸುಫ್ ನೀಡಿದ ಉತ್ತರ: 'ನಮ್ಮ ಂಗಾತಿ ಒಂದು ಜಾಗದಲ್ಲಿ ಹೋಗಿ ತನ್ನನ್ನು ತಾನು ಥಾಪಿಸಿಕೊಳ್ಳಬೇಕಾಗಿಲ್ಲ; ಆ ಜಾಗದ ಮಾಲಿಕ ಅವನು'. . ಯೂಸುಫ್ ದಾದೂ ಇನ್ನೊಂದು ಅಮೋಘ ುಣವನ್ನು ಹೊಂದಿದ್ದರು; ಅದರಿಂದಾಗಿ ತನ್ನ ುತಸ್ತರಲ್ಲಿ ಕೆಲವರ ಪ್ರತಿಕ್ರಿಯೆಯನ್ನು ಹಸನು ೂಳಿಸಲು ಅವರಿಗೆ ಸಾಧ್ಯವಾಯಿತು. ಅಂತಹ ಲವರು ತಮ್ಮ ಆರ್ಥಿಕ ಸ್ಥಾನಮಾನದಿಂದಾಗಿ ಮಾಜವಾದದ ನಿಶ್ಚಿತ ಭವಿಷ್ಯದ ಬಗ್ಗೆ ದಾದೂ ಇರಿಸಿ ೊಂಡಿದ್ದ ಬಹಿರಂಗ ಬದ್ಧತೆಯನ್ನು ಆತಂಕದಿಂದ ೋಡುತ್ತಿದ್ದರು. ಆದರೆ ದಾದೂನ ವೈಯಕ್ತಿಕ ಆದರ್ಶಮಯ ಜೀವನವು ಆತಂಕವನ್ನು ಹೋಗಲಾಡಿ ುತ್ತಿತ್ತು. ದಾದೂ ಖಂಡಿತವಾಗಿಯೂ ಒಬ್ಬ ಭಾವುಕ ಂತರರಾಷ್ಟ್ರೀಯವಾದಿ; ಆದರೆ ತಮ್ಮ ಸಾಂಸ್ಕೃತಿಕ ೇರುಗಳ ಬಗೆಗಿನ ಹೆಮ್ಮೆ ಮತ್ತು ಗೌರವದಲ್ಲೂ ಅವರು ಅಷ್ಟೇ ಭಾವನಾಪರವಶರಾಗಿರುತ್ತಿದ್ದರು.

"ಅವರ ಮತಧರ್ಮೀಯ ಬಣದ ಭಾಷೆಗಳು ುತ್ತು ಧಾರ್ಮಿಕ ಪರಂಪರೆಗಳ ಬಗ್ಗೆ ದಾದೂ ಅವರಿಗೆ ಅವಿಚಲಿತವಾದ ಗೌರವವಿದ್ದಿತು. ಅದರಲ್ಲಿ ಯಾವ ್ವಂದ್ವವನ್ನೂ ಅವರು ಕಾಣಲಿಲ್ಲ ... ಲಂಡನ್ನಿನಲ್ಲಿ ದ್ದಾಗ ಮೆಕ್ಕಾ ಯಾತ್ರೆಗೆ ಹೋಗಬೇಕೆಂಬ ಅವರ ್ರಬಲವಾದ ಬಲವಂತಿಕೆಯನ್ನು ಇದರಿಂದ ವರಿಸಬಹುದು. (ಬೇರಾವುದೇ ಒಂದು ಕಮ್ಯುನಿಸ್ಟ್ ಕ್ಷದ ಅಧ್ಯಕ್ಷನಿಗೆ ಹಾಜಿಯೆಂಬ ಅಂಕಿತವಿದೆಯೋ ಲ್ಲವೋ ನನಗೆ ತಿಳಿಯದು!) ಮೆಕ್ಕಾದಿಂದ ಿಂದಿರುಗಿದಾಗ ನಾನು ಆತನನ್ನು ಲಂಡನ್ನಿನ ೇತ್‌ರೋ ವಿಮಾನ ನಿಲ್ದಾಣದಲ್ಲಿ ಸಂಧಿಸಿದ ನಪಿದೆ: ಬೋಳುತಲೆ, ಕೈಯಲ್ಲೊಂದು ಕೆಟಲ್ ಮತ್ತು ಿಳಿಯ ಬಟ್ಟೆಗಳು.

"ತನ್ನ ಜನರ ನಂಬಿಕೆಗಳಿಗೆ ನೈಜ ಗೌರವ ್ಲಿಸುವುದು ಉಚಿತವೆಂಬ ಗಾಢ ಭಾವನೆ ಆದೂರಲ್ಲಿ ಇದ್ದುದರಿಂದಲೇ ತನ್ನ ಅಂತಿಮ ಸಂಸ್ಕಾರವನ್ನು ಮುಸಲ್ಮಾನ ಸಂಪ್ರದಾಯದಂತೆ ಆಚರಿಸಬೇಕೆಂದು ಅವರು ಆಗ್ರಹಿಸಿದ್ದು."

(ಇಂಗ್ಲಿಷ್ ಮೂಲವನ್ನು ಇಲ್ಲಿ ಭಾಷಾಂತರಿಸ ಲಾಗಿದೆ. ಭಾಷಾಂತರದಲ್ಲಿ ಕೊರತೆಗಾಗಿ ಕ್ಷಮೆ ಇರಲಿ. ಆಸಕ್ತರು ಇಂಗ್ಲಿಷ್ ಮೂಲವನ್ನು ನೋಡಬಹುದು.)

ಥಿಯರಿಗಳಿಗೆ ಕೊನೆಮೊದಲಿಲ್ಲ. ಭಾರತದ ಮತ್ತು ದಕ್ಷಿಣ ಆಫ್ರಿಕಾದ ಕಮ್ಯುನಿಸ್ಟ್ ಪಕ್ಷಗಳು ಹೆಚ್ಚು ಕಮ್ಮಿ ಒಂದೇ ಸಮಯದಲ್ಲಿ ಜನ್ಮತಾಳಿದವು. ಭಾರತ ಕಮ್ಯುನಿಸ್ಟ್ ಪಕ್ಷ ಉತ್ಥಾಪಿತವಾಗಿದ್ದು ಸಿಪಿಐ ಪ್ರಕಾರ ಸನ್ ೧೯೨೫ರ ಡಿಸೆಂಬರ್ ತಿಂಗಳಲ್ಲಿ, ಮತ್ತು ಸಿಪಿಎಂ ಪ್ರಕಾರ ಸನ್ ೧೯೨೦ರ ಅಕ್ಟೋಬರಿನಲ್ಲಿ, ಅಂದಿನ ಸೋವಿಯೆತ್ ಒಕ್ಕೂಟದ ತಾಶ್ಕೆಂಟ್ ನಗರದಲ್ಲಿ, ದಕ್ಷಿಣ ಆಫ್ರಿಕಾದ ಕಮ್ಯುನಿಸ್ಟ್ ಪಕ್ಷ ಉತ್ಥಾಪಿತವಾಗಿದ್ದು ಸನ್ ೧೯೨೧ರ ಜುಲೈ ತಿಂಗಳಲ್ಲಿ. ಹೆಚ್ಚು ಕಮ್ಮಿ ಎಂಭತ್ತು ವರುಷಗಳಿಗೂ ಮೀರಿದ ಇತಿಹಾಸ ಈ ಎರಡೂ ಪಕ್ಷಗಳದ್ದು. ಈ ಸುದೀರ್ಘ ಇತಿಹಾಸದಲ್ಲಿ ಎರಡೂ ಪಕ್ಷಗಳು ಅನೇಕ ರೀತಿಯ ಒತ್ತಡಗಳು, ಪೀಡನೆಗಳು, ಸರಕಾರಗಳ ಹಿಂಸೆ – ಕ್ರೌರ್ಯಗಳನ್ನು ಅನುಭವಿಸಿವೆ. ಅನೇಕ ತಪ್ಪು ಗಳನ್ನೂ, ಮಾಡಬಾರದಾಗಿದ್ದಂತಹ ಅಪರಾಧ ಗಳನ್ನೂ, ಮಾಡಿವೆ; ಅವುಗಳಲ್ಲಿ ಕೆಲವಾರು ತಪ್ಪು ಅಪರಾಧಗಳನ್ನು ಒಪ್ಪಿಕೊಂಡೂ ಇವೆ. ಈಗ, ಇಪ್ಪತ್ತೊಂದನೆಯ ಶತಮಾನದ ಮೊದಲ ದಶಕದ ಕೊನೆಯಲ್ಲಿ – ಈ ದಳಗಳ ಪರಿಸ್ಥಿತಿ ಹೇಗಿದೆ?

ತುಲನಾತ್ಮಕವಾಗಿ ನೋಡಿದರೆ ದಕ್ಷಿಣ ಆಫ್ರಿಕಾದ ಕಮ್ಯುನಿಸ್ಟ್ ಪಕ್ಷ ತನ್ನ ಕಾರ್ಯಸೂಚಿಯಲ್ಲಿ ಏನು ಸಾಧಿಸಬೇಕೆಂದು ನಿರ್ಧರಿಸಿತ್ತೋ ಮತ್ತು ಉಲ್ಲೇಖಿಸಿತ್ತೋ ಅದಕ್ಕಿಂತ ಮೀರಿ ಸಾಫಲ್ಯ ಗಳಿಸಿದೆ. ಸುದೀರ್ಘ ದಿನಗಳಿಂದ ಸರ್ವವರ್ಗೀಯ ದಳ ಅನ್ನಬಹುದಾದ ಆಫ್ರಿಕನ್ ನ್ಯಾಶನಲ್ ಕಾಂಗ್ರೆಸ್ ಜೊತೆ ಒಟ್ಟಾರೆ ನಡೆಸಿದ ಸಂಗ್ರಾಮದ ಪರಿಣಾಮ ಈಗಿನ ಈ ಎರಡು ದಳಗಳೊಳಗಿನ ಅತ್ಯಂತ ಘನಿಷ್ಠ ಮಿತ್ರತೆ, ಒಳಸಂಬಂಧ. ಆಹುದು, ಈ ಕೆಲವು ತಿಂಗಳುಗಳಲ್ಲಿ ನಡೆದಿರುವ, ನಡೆಯುತ್ತಿರುವ ಆಫ್ರಿಕನ್ ನ್ಯಾಶನಲ್ ಕಾಂಗ್ರೆಸ್‌ನಲ್ಲಿನ ಒಳದ್ವಂದ್ವ ಮತ್ತು ಭಿನ್ನಾಭಿಪ್ರಾಯ ಗಳು ಕೆಲವು ಸಮೀಕ್ಷಕರ ದೃಷ್ಟಿಯಲ್ಲಿ ಆಫ್ರಿಕನ್ ನ್ಯಾಶನಲ್ ಕಾಂಗ್ರೆಸ್ ಮತ್ತು ಕಮ್ಯುನಿಸ್ಟ್ ಪಕ್ಷಗಳ ನಡುವಿನ ಅತಿ ಹತ್ತಿರ ಸಂಬಂಧವನ್ನು ಪ್ರಶ್ನಿಸುತ್ತದೆ, ಆ ಹತ್ತಿರ ಸಂಬಂಧದ ಬಗ್ಗೆ ತಮ್ಮ ಅನುಮಾನ ಸಂದೇಹಗಳನ್ನು ವ್ಯಕ್ತಪಡಿಸುತ್ತವೆ. ಆದರೆ ಅಂತಹ ಟೀಕೆಗೆ ಈಗಲೂ ಎರಡೂ ಪಕ್ಷಗಳ ಮೆಜಾರಿಟಿ ಸದಸ್ಯ ರಲ್ಲಾಗಲೀ, ಅದಕ್ಕೂ ಮಿಕ್ಕಿ ದೇಶದ ಜನಸಾಮಾನ್ಯ ರಲ್ಲಾಗಲೀ, ಯಾವ ರೀತಿಯ ಸಂಕೋಚ ಮುಜುಗರ ಕಂಡುಬರುವುದಿಲ್ಲ. ಒಂದು ರೀತಿ ಇದನ್ನೂ ಹೇಳಬಹುದು: ಈ ಎರಡು ಪಕ್ಷಗಳೊಳಗಿನ ಅತಿ ಹತ್ತಿರ, ಹೆಚ್ಚುಕಮ್ಮಿ ಒಂದೇ ಮನೋಭಾವನೆಗಳನ್ನು ಟೀಕಿಸಿರುವವರು ಈ ಎರಡು ದಳಗಳ ಸಮನ್ವಯ ಪ್ರಾಯಶಃ ದೇಶದ ಆರ್ಥಿಕ ಸಾಮಾಜಿಕ ವ್ಯವಸ್ಥೆಗಳನ್ನು ಸಮಾಜವಾದದ ರಸ್ತೆಯಲ್ಲಿ ಅಥವಾ ಕಮ್ಮಿಯಾದರೂ ಒಂದು ರೀತಿ ಮಧ್ಯಕೇಂದ್ರದ ಎಡ ದಾರಿಯಲ್ಲಿ ಕೊಂಡೊಯ್ಯಬಹುದು ಅನ್ನುವ ಭಯದಿಂದ ಬೆದರಿದ್ದಾರೆ. ಯಾವ ರೀತಿಯಲ್ಲಿ ಪರಿಗಣಿಸಿದರೂ ದಕ್ಷಿಣ ಆಫ್ರಿಕಾದಲ್ಲಿ ಇಂದು ಅಲ್ಲಿನ ಕಮ್ಯುನಿಸ್ಟ್ ಪಕ್ಷ ಯಾರೂ ತೆಗೆದುಹಾಕುವಂತಹ ಪಕ್ಷವಲ್ಲ. ಸರಕಾರ ಮತ್ತು ರಾಜಕೀಯ ಮಾತ್ರವಲ್ಲ, ದೇಶದ ಇನ್ನೂ ಅನೇಕ ಅಂಶಗಳಲ್ಲಿ, ಅಂದರೆ, ಕಲೆ, ಸಾಹಿತ್ಯ ಮತ್ತು ಸಂಸ್ಕೃತಿ, ಆಡಳಿತ ಪದ್ಧತಿ, ವಿದ್ಯಾಸಂಸ್ಥೆಗಳು, ಇನ್ನೂ ಎಣಿಸಲಾರದಂತಹ ಎಲ್ಲ ಅಂಶಗಳಲ್ಲಿ ದಕ್ಷಿಣ ಆಫ್ರಿಕಾದ ಕಮ್ಯುನಿಸ್ಟರು ಹಾಸುಹೊಕ್ಕಾಗಿ ತುಂಬಿಕೊಂಡಿದ್ದಾರೆ.

ನಮ್ಮಲ್ಲಿನ ಚಿತ್ರ? ಈ ಬಗ್ಗೆ ಹೇಳಬೇಕಾಗಿರುವುದು ಏನಿದೆ? ಅಹುದು, ಈ ವಿಶಾಲ ರಾಷ್ಟ್ರದ ಮೂರು ರಾಜ್ಯಗಳಲ್ಲಿ ದೇಶದ ಅತಿ ಬಲಿಷ್ಠ ಅಲ್ಲ ಅಂದರೂ ಅತಿ ದೊಡ್ಡ ಕಮ್ಯುನಿಸ್ಟ್ ಪಕ್ಷ ಅನ್ನಿಸಿಕೊಳ್ಳಬಹುದಾದ ಸಿಪಿಐಎಂ ತನ್ನ ಜೊತೆಪಕ್ಷಗಳೊಡನೆ ಸರಕಾರ ಚಲಾಯಿಸಿದೆ. ಈ ಕಳೆದ ಕೆಲವು ತಿಂಗಳುಗಳಲ್ಲಿ ಕೇಂದ್ರ ಸರಕಾರದಲ್ಲಿನ ತನ್ನ ಪ್ರಾಮುಖ್ಯತೆಯನ್ನು ಕಳೆದು ಕೊಂಡಿದ್ದರೂ, ಸಿಪಿಐಎಂ ದೇಶಾದ್ಯಂತ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡಿದೆ. ಇಂದಿನ ಸಂವಿಧಾನ ಮತ್ತು ಆಡಳಿತ ಪದ್ಧತಿಯಲ್ಲಿ ವಿಶ್ವಾಸ ಇಟ್ಟುಕೊಂಡಿರುವ ಇತರ ಎಡಪಕ್ಷಗಳು ತಕ್ಕಮಟ್ಟಿಗೆ ತಾವು ಸಂಪಾದಿಸಿಕೊಂಡಿರುವ ಠಾಣಗಳನ್ನು, ತಮ್ಮ ಬೆಂಬಲಿಗರನ್ನು ರಕ್ಷಿಸಿಕೊಳ್ಳುವುದರಲ್ಲಿ, ಉಳಿಸಿ ಕೊಳ್ಳುವುದರಲ್ಲಿ ವ್ಯಸ್ತವಾಗಿದ್ದಾರೆ. ವರ್ಗ ಸಂಗ್ರಾಮ, ರಾಷ್ಟ್ರ ಶಕ್ತಿಯನ್ನು ತಮ್ಮದೇ ಆಗಿ ಅಳವಡಿಸಿ ಕೊಳ್ಳುವುದು, ಸಾಮಾಜಿಕ ಪರಿವರ್ತನೆ, ಸಮಾಜವಾದ, ಇವುಗಳು ಈ ನಡುವೆ ಸ್ಲೋಗನ್‌ಗಳಾಗಿಯೂ ಕೇಳಿಬರುತ್ತಿಲ್ಲ, ಕಾಣಬರುತ್ತಿಲ್ಲ.

ದಕ್ಷಿಣ ಆಫ್ರಿಕಾದ ಕಮ್ಯುನಿಸ್ಟ್ ಪಕ್ಷ ಮೊದಲಿನಿಂದಲೇ ನಿರ್ಧರಿಸಿತ್ತು. ದೇಶದ ಜನರ, ಮತ್ತು ಜೊತೆಗೇ ದಳದ ಮುಖ್ಯ ಗುರಿ ದೇಶದ ಅತಿಸಂಖ್ಯಾತ ಅ-ಶ್ವೇತವರ್ಣ ಜನಾಂಗಗಳ ಮುಕ್ತಿ, ಮಿಕ್ಕೆಲ್ಲ ಗುರಿಗಳೆಲ್ಲದರ ಸಾಧನೆ ಆ ರಾಷ್ಟ್ರೀಯ ಮುಕ್ತಿಯ ನಂತರ. ನಮ್ಮಲ್ಲಿ ಪ್ರಾಯಶಃ ಹಳೆಯ ದಕ್ಷಿಣ ಆಫ್ರಿಕಾದಲ್ಲಿನ ದಾರುಣೀಯ ಪರಿಸ್ಥಿತಿ ಇಲ್ಲದಿದ್ದ ಕಾರಣ ಅಲ್ಲಿನ ಕಮ್ಯುನಿಸ್ಟ್ ಪಕ್ಷದ ಏಕಲಕ್ಷ್ಯೀಯ ಏಕಾಗ್ರತೆ ಸಾಧ್ಯವಾಗಲಿಲ್ಲ. ಅದಲ್ಲದೆ ದಕ್ಷಿಣ ಆಫ್ರಿಕಾದ ಆಫ್ರಿಕನ್ ನ್ಯಾಶನಲ್ ಕಾಂಗ್ರೆಸ್ ಮತ್ತು ನಮ್ಮಲ್ಲಿನ ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ ಮೇಲೆ ಮೇಲೆ ಒಂದೇ ರೀತಿ ಕಂಡರೂ ಅವುಗಳಲ್ಲಿನ ಪೃಥಕ್ತ್ವಗಳು ಅನೇಕ, ಅತಿ ಗುರುತ್ವಮಯ. ಆದರೆ ಇವುಗಳೆಲ್ಲವನ್ನೂ ಚರ್ಚಿಸಲು ಹೊರಟರೆ ಈಗಾಗಲೇ ಅತಿ ಉದ್ದವಾಗಿರುವ ಮತ್ತು ಸ್ವಲ್ಪ ಅಸಂಬದ್ಧವೂ ಆಗಿರುವ ಈ ಪ್ರಬಂಧ ಇನ್ನೂ ಉದ್ದ, ಇನ್ನೂ ಅಸಂಬದ್ಧ ಆಗಬಹುದು. ಆದಕಾರಣ ಇಲ್ಲಿಗೇ ನಿಲ್ಲಿಸುವೆ.

ಎಂ. ಎಸ್. ಪ್ರಭಾಕರ
ಫ್ಲಾಟ್ ನಂ. ೩೩೩, ಎಂಬಿಸಿ ಹೆರಿಟೇಜ್, ೬೨/೨-೧
೮ನೇ ಮುಖ್ಯರಸ್ತೆ, ಮಲ್ಲೇಶ್ವರಂ ವೆಸ್ಟ್, ಬೆಂಗಳೂರು - ೫೬೦೦೫೫

# We Build Animation Careers

**Advanced Diploma in Animation Film Making**
(18 months-Full time)

**Diploma in Digital Animation**
(9 months-Full time)

**Eligibility: 17 years & above**



**"When it comes to Animation Education Never Compromise"**

The smartest students in the country today join WIZTOONZ because it provides extensive, realistic, progressive, practical, responsive and Industry relevant training and helps you turn your skill and talent into a promising creative career.

**WIZTOONZ ANIMATION ACADEMY**, a training division of **WIZTOONZ ANIMATIONS PRIVATE LIMITED**, was founded to bridge the gap between academic institutions and the animation industry by providing relevant skills for aspiring animators and visual effects artists. **WIZTOONZ**'s mission is to create top notch creative professionals and animation specialists for the ever growing 2D and 3D animation industry.

**WIZTOONZ Placement Support**
**CrystalDreamz**

100% Placement support for students will be provided through **CRYSTAL DREAMZ**, a human resource division of **WIZTOONZ ANIMATIONS PRIVATE LIMITED**

**Franchisee Enquiries Solicited Across India Contact:**
E-Mail: franchisee@wizmultimedia.com
Mob: 9972555851 (For North India)
9845020296 (For South India)

# WIZTOONZ
*The Animation Academy*



No. 8, 27th Cross, 6th Block, Jayanagar, Bangalore - 560 082,
Ph: 080 - 41664561/62/63/64,
E-mail: info@wiztoonz.com, WWW.WIZTOONZ.COM

# ಖಗೋಳವಿಜ್ಞಾನದ ಅಂತರರಾಷ್ಟ್ರೀಯ ವರ್ಷ (ಐವೈಎ ೨೦೦೯)

ಇಟಲಿಯ ಖ್ಯಾತ ಖಗೋಳ ಹಾಗೂ ಭೌತ ವಿಜ್ಞಾನಿ ಗೆಲಿಲಿಯೋ ತಾನೇ ರ್ಮಿಸಿದ ದೂರದರ್ಶಕದ ಮೂಲಕ ಅಂತರಿಕ್ಷ ವೀಕ್ಷಣೆ ನಡೆಸಿದ ಯುಗ ್ರವರ್ತಕ, ಕ್ರಾಂತಿಕಾರಿ ಪ್ರಯೋಗದ ೪೦೦ನೆಯ ವರ್ಷದ ಸ್ಮರಣಾರ್ಥ ೨೦೦೯ನೆಯ ರ್ಷವನ್ನು 'ಖಗೋಳ ವಿಜ್ಞಾನದ ಅಂತರರಾಷ್ಟ್ರೀಯ ವರ್ಷ'ವನ್ನಾಗಿ ಆಚರಿಸ ೇಕೆಂದು ವಿಶ್ವ ಸಂಸ್ಥೆಯು ಘೋಷಿಸಿದೆ. ಗೆಲಿಲಿಯೋ ಈ ಪ್ರಯೋಗ ನಡೆಸಿದ ಂತರ ಜಗತ್ತು ಎಂದೂ ಹಿಂದಿದ್ದಂತೆ ಇರದಾಯಿತು. ಅವರು ನಡೆಸಿದ ವೀಕ್ಷಣೆ ತ್ಯದ್ಭುತವಾಗಿದ್ದಿತು. ಅದು ಅಂದು ಬೇರೂರಿದ್ದ ಅನೇಕ ನಂಬಿಕೆಗಳ ಬಗೆಗೆ ಸಂಶಯ ನ್ನುಂಟುಮಾಡಿತು. ಗೆಲಿಲಿಯೋ ಜೀವನ ಕುರಿತ ತಮ್ಮ ಸುಪ್ರಸಿದ್ಧ ನಾಟಕದಲ್ಲಿ ರ್ಟೋಲ್ಟ್ ಬ್ರೆಖ್ಟ್ ಹೇಳಿದಂತೆ ''ವೈಚಾರಿಕ ಯುಗ ಪ್ರಾರಂಭವಾಗಬಹುದಿದ್ದಿತು.'' ೌದು, ''ಆಗಬಹುದಿದ್ದಿತು.'' ಅದೇನೂ ತನ್ನಷ್ಟಕ್ಕೆ ತಾನೇ ಗಲಿಲ್ಲ. ವೈಚಾರಿಕತೆ ಹಾಗೂ ವಿಜ್ಞಾನದ ವಿಜಯೋತ್ಸವವನ್ನು ಗು ಮಾಡಲು ದೀರ್ಘ ಹೋರಾಟವನ್ನೇ ನಡೆಸಬೇಕಾಯಿತು.

**ಡಾ|| ಎಸ್. ಚಟರ್ಜಿ**

**ರವ್ಯದೃಷ್ಟಿ**

ಐವೈಎ-೨೦೦೯ ಕಾರ್ಯಕ್ರಮ ಹೇಳುತ್ತದೆ: ''ಖಗೋಳ ವಿಜ್ಞಾನದ ಂತರರಾಷ್ಟ್ರೀಯ ವರ್ಷ-೨೦೦೯ ಎಂಬುದು ಒಂದು ವಿಶ್ವವ್ಯಾಪಿ ಕಾರ್ಯಕ್ರಮ. ದನ್ನು 'ಅಂತರರಾಷ್ಟ್ರೀಯ ಖಗೋಳ ವಿಜ್ಞಾನ ಒಕ್ಕೂಟ' ಹಾಗೂ 'ಯುನೆಸ್ಕೊ' ೊತೆಗೂಡಿ ಆರಂಭಿಸಿವೆ. ಜಗತ್ತಿನ ಜನರು ಈ ಬ್ರಹ್ಮಾಂಡದಲ್ಲಿ ಹಗಲು - ಹಾಗೂ ರಾತ್ರಿ ಅಂತರಿಕ್ಷ ವೀಕ್ಷಣೆಯ ಮೂಲಕ ಬೆರಗಿನೊಂದಿಗೆ ತಮ್ಮ ಸ್ಥಾನ ಕಂಡುಕೊಳ್ಳಲು ಹಾಯ ಮಾಡುವುದು ಇದರ ಉದ್ದೇಶ. ಖಗೋಳವಿಜ್ಞಾನ ಮತ್ತಿತರ ಮೂಲಭೂತ ಜ್ಞಾನಗಳು ನಮ್ಮ ದೈನಂದಿನ ಜೀವನದ ಮೇಲೆ ಪ್ರಭಾವ ಬೀರುತ್ತವೆಂಬುದನ್ನು ್ರತಿಯೊಬ್ಬರೂ ಮನಗಾಣಬೇಕು; ವೈಜ್ಞಾನಿಕ ಜ್ಞಾನವು ಹೇಗೆ ೆಚ್ಚು ಸಮಾನತೆಯ ಹಾಗೂ ಶಾಂತಿಯುತ ಸಮಾಜ ರ್ಮಾಣಕ್ಕೆ ನೆರವಾಗುತ್ತದೆ ಎಂಬುದನ್ನು ಅರ್ಥ ಾಡಿಕೊಳ್ಳಬೇಕು.''

**ುತ್ತ ಗೆಲಿಲಿಯೋ (೧೫೬೪-೧೬೪೨) ಿಷಯಕ್ಕೆ ಹಿಂದಿರುಗೋಣ**

ಗೆಲಿಲಿಯೋ ಮುನ್ನಡೆಯ ಒಂದು ಹೊಸ ಾರ್ಗವನ್ನೇ ತೋರಿಸಿಕೊಟ್ಟರೆಂಬುದನ್ನು ಅರ್ಥಮಾಡಿ ೊಳ್ಳುವುದೂ ಈ ವಾರ್ಷಿಕಾಚರಣೆಯ ಒಂದು ಮೂಲೋದ್ದೇಶ. ಗೆಲಿಲಿಯೋ ಪೀಸಾ ಹಾಗೂ ಫ್ಲಾರೆನ್ಸ್ ಳಲ್ಲಿ ವ್ಯಾಸಂಗ ಮಾಡಿದರು. ಅವರು ತಂದೆಯ ಒತ್ತಾಯ ್ಕಾಗಿ ತಮ್ಮ ಇಚ್ಛೆಗೂ ವಿರುದ್ಧವಾಗಿ ವೈದ್ಯಕೀಯ ಅಧ್ಯಯನ ಮಾಡಬೇಕಾಗಿ ಬಂದಿತು. (ಇಂತಹ ್ರಸಂಗಗಳು ಈಗಲೂ ಅಪರೂಪವೇನಲ್ಲ!) ಾಲಕನಾಗಿದ್ದಾಗ ಅವರು ಕ್ರೈಸ್ತ ಸಂನ್ಯಾಸಿ ಮಠ ಲ್ಲಿ ಆರಂಭಿಕ ವ್ಯಾಸಂಗ ನಡೆಸಿದರು. ಅಲ್ಲಿ ಅವರಿಗೆ ಅರಿಸ್ಟಾಟಲನ ತತ್ತ್ವಶಾಸ್ತ್ರದ ರಿಚಯವಾಯಿತು. ವೈದ್ಯಶಾಸ್ತ್ರ ಅಧ್ಯಯನ ಾಡುತ್ತಿದ್ದಾಗ ತಮಗೆ ಗಣಿತ ಶಾಸ್ತ್ರದಲ್ಲಿ ಶೇಷ ಆಸಕ್ತಿ ಹಾಗೂ ಪ್ರತಿಭೆ ಇದೆಯೆಂದು ೆಲಿಲಿಯೋ ಕಂಡುಕೊಂಡರು. ೨೧ನೆಯ ವಯಸ್ಸಿನಲ್ಲಿ ಅವರು ವೈದ್ಯಶಾಸ್ತ್ರ ಅಧ್ಯಯನವನ್ನು ಬಿಟ್ಟುಕೊಟ್ಟು ತಮಗೆ ಅತ್ಯಂತ ಪ್ರೀತಿ ಪಾತ್ರವಾದ ವಿಷಯದ, ಗಣಿತಶಾಸ್ತ್ರದ ಅಧ್ಯಯನ ಕೈಗೊಂಡರು. ಈ ಕಾಲದಲ್ಲಿಯೇ ಅವರ ಮನಸ್ಸಿನಲ್ಲಿ ಅರಿಸ್ಟಾಟಲ್‌ನ ತತ್ತ್ವಶಾಸ್ತ್ರದ ಬಗೆಗೆ ಸಂದೇಹಗಳು ನುಸುಳಿದವು. ಆದರೆ ಆ ತತ್ವಶಾಸ್ತ್ರಕ್ಕೆ ಸವಾಲು ಹಾಕುವ ಸಮಯ ಇನ್ನೂ ಬಂದಿರಲಿಲ್ಲ.

ಖಗೋಳ ವಿಜ್ಞಾನಕ್ಕೆ ನೀಡಿದ ಕೊಡುಗೆಗಳಿಗಾಗಿ ಗೆಲಿಲಿಯೋ ತುಂಬ ಹೆಸರುವಾಸಿಯಾದರೂ ಸಾರತಃ ಯಂತ್ರಶಾಸ್ತ್ರವು ಅವರ ಅತೀವ ಆಸಕ್ತಿಯ ವಿಷಯವಾಗಿದ್ದಿತು. ಮೇಲಿನಿಂದ ಬೀಳುತ್ತಿರುವ ವಸ್ತುಗಳಿಗೆ ಸಂಬಂಧಿಸಿದ ನಿಯಮಗಳು, ಲೋಲಕದ ನಿಯಮಗಳು ಇತ್ಯಾದಿ ಅವರ ಪ್ರಧಾನ ಕೊಡುಗೆಗಳಾಗಿದ್ದವು. ತೇಲುತ್ತಿರುವ ವಸ್ತುಗಳ ಅಧ್ಯಯನಕ್ಕಾಗಿ ಅವರು ಖ್ಯಾತನಾಮರಾದರು. ಅವರನ್ನು ಪೀಸಾ ವಿಶ್ವವಿದ್ಯಾಲಯದಲ್ಲಿ ಗಣಿತಶಾಸ್ತ್ರದ ಪ್ರಾಧ್ಯಾಪಕರನ್ನಾಗಿ ನೇಮಕ ಮಾಡಲಾಯಿತು. ಅಲ್ಲಿ ಅವರು ಬ್ರಹ್ಮಾಂಡಕ್ಕೆ ಸಂಬಂಧಿಸಿ ಟಾಲೆಮಿಯ ಮಾದರಿಯ ಬೋಧನೆ ಮಾಡಬೇಕಿದ್ದಿತು. ಟಾಲೆಮಿ ನೀಡಿದ್ದ ಈ ಮಾದರಿಯು ತುಂಬ ತೊಡಕಿನದಾಗಿದ್ದಿತು, ತಿಳಿವಳಿಕೆ ಅಸಮರ್ಪಕವಾಗಿದ್ದುದರಿಂದ ಗಣಕ ವಿಧಾನಗಳು ತಾತ್ಪೂರ್ವಿಕವಾಗಿದ್ದವು. ೧೫೯೨ರಲ್ಲಿ ಗೆಲಿಲಿಯೋ ವೆನಿಸ್ ಹತ್ತಿರದ ಪದೋವ ವಿಶ್ವವಿದ್ಯಾಲಯಕ್ಕೆ ಗಣಿತಶಾಸ್ತ್ರದ ಪ್ರಾಧ್ಯಾಪಕರಾಗಿ ಬಂದರು. ಅಲ್ಲೇ ಅವರು ಮುಂದೆ ೧೮ ವರ್ಷಗಳವರೆಗಿದ್ದರು. ಅಲ್ಲೇ ಅವರು ಪೋಲೆಂಡಿನ ಖಗೋಳ ವಿಜ್ಞಾನಿ ನಿಕೋಲಸ್ ಕೊಪರ್ನಿಕಸ್ (೧೪೭೩-೧೫೪೩)ರ ಕೃತಿಗಳ ಪರಿಚಯ ಪಡೆದುದು. ಕೊಪರ್ನಿಕಸ್‌ರು ಗ್ರಹಗಳ ಚಲನೆಯನ್ನು ಸೌರಕೇಂದ್ರಿತ ಮಾದರಿಯ ಆಧಾರದ ಮೇಲೆ, ಅಂದರೆ ಗ್ರಹಗಳು ಸೂರ್ಯನ ಸುತ್ತ ವೃತ್ತೀಯ ಕಕ್ಷೆಗಳಲ್ಲಿ ಸುತ್ತುತ್ತವೆ ಎಂಬ ಗ್ರಹಿಕೆಯ ಮೇಲೆ, ವಿವರಿಸಿದ್ದರು.

**ದೂರದರ್ಶಕ...**

ಡಚ್ ಕನ್ನಡಕ ತಯಾರಕ ಹ್ಯಾನ್ಸ್ ಲಿಪರ್‌ಷೇ ದೂರದರ್ಶಕವನ್ನು ಆವಿಷ್ಕರಿಸಿದುದು ಎಂದು ಹೆಚ್ಚಿನ ಇತಿಹಾಸಕಾರರು ನಿರೂಪಿಸಿದ್ದಾರೆ. ಲಿಪರ್‌ಷೇರವರು ಅನಕ್ಷರಸ್ಥ ಯಂತ್ರಚಾಲಕನಾಗಿದ್ದರೂ ಅವರು ಆವಿಷ್ಕರಿಸಿದ ದೂರದರ್ಶಕವು ತಕ್ಷಣವೇ ದೊರೆಯ ಹಾಗೂ ಸೈನ್ಯದ ಅನುಗ್ರಹ ಪಡೆಯಿತು – ಆಗ ಹಾಲೆಂಡ್ ಸ್ಪೈನ್‌ನೊಂದಿಗೆ ಯುದ್ಧದಲ್ಲಿ ತೊಡಗಿದ್ದಿತು.

ಲಿಪರ್‌ಷೇಯವರ ಆವಿಷ್ಕರಣೆಯ ಬಗೆಗೆ ಗೆಲಿಲಿಯೋ ಸುಮಾರು ಒಂದು ವರ್ಷದನಂತರ ೧೬೦೯ರ ಮೇ ತಿಂಗಳಿನಲ್ಲಿ ತಿಳಿದರು. ಅದಾದ ಕೇವಲ ೨೪ ಗಂಟೆಗಳೊಳಗೇ ಗೆಲಿಲಿಯೋ ತಮ್ಮದೇ ಮಾದರಿ ದೂರದರ್ಶಕ ನಿರ್ಮಿಸಿದರು. ಅದರ ಮಿಲಿಟರಿ ಪ್ರಾಮುಖ್ಯತೆ ಅವರಿಗೆ ತಿಳಿದಿದ್ದಿತು. ಅವರು ಅದನ್ನು ಸರಕಾರಕ್ಕೆ ಒಪ್ಪಿಸಿದರು. ವೆನಿಸ್ ಒಂದು ರೇವು ಪಟ್ಟಣವಾಗಿದ್ದು ಸತತವಾಗಿ ಕಡಲುಗಳ್ಳರ, ದಾಳಿಕೋರ ಶತ್ರುದಳಗಳ ಭೀತಿಗೊಳಗಾಗಿದ್ದಿತು. ಹಾಗಾಗಿ ರಾಜ್ಯವು ತಕ್ಷಣವೇ ಈ ''ಗೂಢಚಾರ ಗಾಜಿ''ನ (ಗೆಲಿಲಿಯೋ ರವರೇ ಆಗ ತಮ್ಮ ದೂರದರ್ಶಕವನ್ನು



ಗೆಲಿಲಿಯೋ ಗೆಲಿಲಿ (೧೫೬೪-೧೬೪೨)

ೀಗೆ ಕರೆದಿದ್ದರು) ಪ್ರಾಮುಖ್ಯತೆಯನ್ನು ಮನಗಂಡಿತು. ಅದು ಅವರಿಗೆ 'ಜೀವನ ರ್ಯಂತ ಪ್ರಾಧ್ಯಾಪಕ'ನ ಸ್ಥಾನಮಾನ ನೀಡಿ, ಸಂಬಳವನ್ನು ಬಹುಪಾಲು ಹೆಚ್ಚಿಸಿ ೌರವಿಸಿತು. ಇದು ಗೆಲಿಲಿಯೋರವರಿಗೆ ಮತ್ತೊಂದು ರೀತಿಯ ವಿಮೋಚನೆ ೀಡಿತು. ಅರಿಸ್ಟಾಟಲ್‌ರ ವಿಚಾರಗಳನ್ನು ವಿರೋಧಿಸುತ್ತಿದ್ದ ಕಾರಣ ರಾಜ್ಯವು ಅವರನ್ನು ಂಶಯದಿಂದ ನೋಡುತ್ತಿದ್ದಿತು. ಈಗ ರಾಜ್ಯಕ್ಕೆ ಅವರ ನಿಷ್ಠೆ ಸಂದೇಹಾತೀತವಾಯಿತು.

**ೂಮಿಯಿಂದ ಆಗಸದತ್ತ...**

ಗೆಲಿಲಿಯೋರವರು ತಮ್ಮ ದೂರದರ್ಶಕವನ್ನು ಆಗಸದತ್ತ ತಿರುಗಿಸಿದರು. ಹೆಚ್ಚು ಸ್ಪಷ್ಟ ವೀಕ್ಷಣೆಗಳಿಗಾಗಿ ಆ ಸಾಧನವನ್ನು ಸುಧಾರಿಸುತ್ತ ಹೋದರು. ೩೦ಪಟ್ಟು ರ್ಧನ ಸಾಮರ್ಥ್ಯದ ದೂರದರ್ಶಕ ನಿರ್ಮಿಸಿದರು. ಅದರ ಸಹಾಯದಿಂದ ೬೧೦ರ ಮಾರ್ಚ್ ತಿಂಗಳಲ್ಲಿ ಅವರು ಗುರುಗ್ರಹಕ್ಕೆ ನಾಲ್ಕು ಉಪಗ್ರಹಗಳಿರುವುದನ್ನು ತ್ತೆಹಚ್ಚಿದರು. ಚಂದ್ರನ ಮೇಲ್ಮೈ ಮೇಲೂ ಭೂಮಿಯ ಮೇಲಿರುವಂತೆ ರ್ವತಗಳೂ ಕಣಿವೆಗಳೂ ಇವೆ; ಸೂರ್ಯನ ಮೇಲ್ಮೈ ಮೇಲೆ ಕಪ್ಪು ಚುಕ್ಕೆಗಳಿವೆ; ೀರಪಥದಲ್ಲಿ ಅಸಂಖ್ಯಾತ ನಕ್ಷತ್ರಗಳು ತುಂಬಿವೆ; ಶನಿಗ್ರಹದ ಬಳಿ ಕೆಲವು ನಿಗೂಢ ಸ್ತುಗಳಿವೆ – ಎಂದು ಮುಂತಾದ ಅನೇಕ ಖಗೋಳ ಲಕ್ಷಣಗಳನ್ನು ಅವರು ಪತ್ತೆ ಾಡಿದರು. ನಲವತ್ತು ವರ್ಷಗಳನಂತರ ಶನಿಗ್ರಹದ ಸುತ್ತ ಇರುವ ವಸ್ತುಗಳು ಆ ಹದ ಬಳೆಗಳೆಂದು ಸಮರ್ಥನೆಗೊಂಡವು.

**ಾಳಿ ಹಾಗೂ ರಕ್ಷಣೆ**

ಗೆಲಿಲಿಯೋರವರು ೧೬೧೦ರ ಮಾರ್ಚ್ ತಿಂಗಳಲ್ಲಿ ತಮ್ಮ ಹೊಸ ಶೋಧಗಳನ್ನು ಕಟಿಸಿದರು. ಅಂದಿನಿಂದ ಅರಿಸ್ಟಾಟಲ್ ಪಂಥೀಯರು ಅವರ ಮೇಲೆ ದಾಳಿ ಡೆಸತೊಡಗಿದರು. ಅವರನ್ನು ಪಾಷಂಡಿ ಎಂದು ಕರೆದರು. "ನೀವೇ ಬಂದು ನನ್ನ ೂರದರ್ಶಕದ ಮೂಲಕ ನೋಡಿ" ಎಂದು ಗೆಲಿಲಿಯೋ ಅವರ ಟೀಕಾಕಾರರಿಗೆ ಹ್ವಾನ ನೀಡಿದರು. ಅವರು ಅದಕ್ಕೆ ನಿರಾಕರಿಸಿದರು. ಆದರೆ ಗೆಲಿಲಿಯೋರವರಿಗೆ ೀರೆ ಕಡೆಗಳಿಂದ ಬೆಂಬಲ ದೊರಕಿತು. ಜರ್ಮನ್ ವಿಜ್ಞಾನಿ ಜೊಹಾನ್ಸ್ ಕೆಪ್ಲರ್ ೧೫೭೧-೧೬೩೦) ಗುರುಗ್ರಹದ ಉಪಗ್ರಹಗಳ ಬಗೆಗೆ ಗೆಲಿಲಿಯೋರವರ ವೀಕ್ಷಣೆ ಳನ್ನು ಸಮರ್ಥಿಸಿದರು. ಗೆಲಿಲಿಯೋರವರು ಒಂದಾದ ಮೇಲೊಂದರಂತೆ ಪತ್ತೆ ಾಡಿದ ಹೊಸ ಹೊಸ ವಿಷಯಗಳು ಅರಿಸ್ಟಾಟಲ್‌ರ ತತ್ತ್ವಶಾಸ್ತ್ರದ ಅಡಿಪಾಯಗಳನ್ನು ದಲಿಸಿದವು. ಚರ್ಚ್‌ನೊಂದಿಗೆ ಗೆಲಿಲಿಯೋರವರ ಸಂಘರ್ಷ ಅನಿವಾರ್ಯ ಾಯಿತು. ಕೊಪರ್ನಿಕಸ್‌ರ ವಿಚಾರಗಳನ್ನು ಬೋಧಿಸಕೂಡದೆಂದು ಅವರಿಗೆ ರ್ಚು ೧೬೧೬ರಲ್ಲಿ ಆಜ್ಞಾಪಿಸಿತು.

ಆದರೆ ಗೆಲಿಲಿಯೋರವರು ಚರ್ಚ್ ಅಧಿಕಾರಿಗಳಿಗೆ ಗಮನಕ್ಕೆ ಬಾರದಂತೆಯೇ ೊಪರ್ನಿಕಸ್‌ರ ವಿಚಾರಗಳನ್ನು ಪ್ರತಿಪಾದಿಸುತ್ತಲೇ ಹೋದರು. ೧೬೩೨ರಲ್ಲಿ ಅವರ ೃ "ಬ್ರಹ್ಮಾಂಡದ ಎರಡು ಪದ್ಧತಿಗಳ ಕುರಿತು ಸಂವಾದ" ಪ್ರಕಟವಾಯಿತು. ಅದು ರಡು ಪಂಥಗಳ ಪ್ರತಿಪಾದಕರ ನಡುವಿನ ಸಂವಾದ ರೂಪದಲ್ಲಿದ್ದಿತು. ಅದರಲ್ಲಿನ ಲ್ವಿಯಾತಿ ಗೆಲಿಲಿಯೋ - ಕೊಪರ್ನಿಕಸ್ ಪ್ರತಿಪಾದಕನಾಗಿದ್ದ; ಸಗ್ರೆದೋ ಒಬ್ಬ ಮಾನ್ಯ ಮನುಷ್ಯನಾಗಿದ್ದ; ಸಿಂಪ್ಲೀಸಿಯಸ್ ಅರಿಸ್ಟಾಟಲ್ -ಪ್ರತಿಪಾದಕನಾಗಿದ್ದ. ಮಾನ್ಯ ಮನುಷ್ಯ ಹಾಕಿದ ಪ್ರಶ್ನೆಗಳಿಗೆ ಈ ಎರಡೂ ಪಕ್ಷಗಳು ಉತ್ತರ ನೀಡುತ್ತಿದ್ದವು. ಲ್ವಿಯಾತಿಯು ಅರಿಸ್ಟಾಟಲ್ ಪ್ರತಿಪಾದಕರ ದಾಳಿಗಳಿಂದ ಕೊಪರ್ನಿಕಸ್‌ರನ್ನು ತ್ಯುಜ್ವಲವಾಗಿ ಸಮರ್ಥಿಸುತ್ತಿದ್ದ. ಗೆಲಿಲಿಯೋರವರನ್ನು ತಕ್ಷಣವೇ ಚರ್ಚ್‌ನ ವಿಶೇಷ ಯಾಲಯದಲ್ಲಿ ವಿಚಾರಣೆಗೆ ಗುರಿಪಡಿಸಲಾಯಿತು. ೧೬೧೬ರಲ್ಲಿ ಹೊರಡಿಸಿದ್ದ ಜ್ಞೆಗಳನ್ನು ಪಾಲಿಸಿಲ್ಲವೆಂದು ಅವರ ಮೇಲೆ ತಪ್ಪಿತಸ್ಥರ ಆರೋಪ ಹೊರಿಸಲಾಯಿತು.

**ಪ್ಪೊಪ್ಪಿಗೆ (ಅಥವಾ ಹಿಂಜರಿತ ?)**

ಗೆಲಿಲಿಯೋ ತಪ್ಪೊಪ್ಪಿಕೊಂಡರು. ತಾವು ಹಾಗೆ ಮಾಡದಿದ್ದರೆ ತಮ್ಮನ್ನೂ ೬೦೦ರಲ್ಲಿ ಗಿಯೋರ್ದನೊ ಬ್ರೂನೋರವರನ್ನು ಮಾಡಿದಂತೆ ಜೀವಂತವಾಗಿ ಟ್ಟುಹಾಕಲಾಗುವುದೆಂದು ಅವರು ತಿಳಿದಿದ್ದರು. ತಪ್ಪೊಪ್ಪಿಗೆಯಿಂದ ಗೆಲಿಲಿಯೋ ವರ ಜೀವವೇನೋ ಉಳಿಯಿತು, ಆದರೆ ಅವರಿಗೆ ಏಕಾಂತ ಜೀವನ ನಡೆಸುವ ಶಿಕ್ಷೆ ಧಿಸಲಾಯಿತು. ಅವರು ೧೬೪೨ರಲ್ಲಿ ಅಸು ನೀಗಿದರು. ಆದರೆ ಅದಕ್ಕೂ ಮುನ್ನವೇ ವರು ಮೇಲ್ವಿಚಾರಕರ ಗಮನಕ್ಕೆ ಬಾರದಂತೆಯೇ "ಹೊಸ ವಿಜ್ಞಾನ ಸಂವಾದ" ಬ ಗ್ರಂಥದ ಹಸ್ತಪ್ರತಿಯನ್ನು ಸಿದ್ಧಗೊಳಿಸಿದ್ದರು. ಅದನ್ನು ಅಧಿಕಾರಿಗಳ ಕಣ್ಣುತಪ್ಪಿಸಿ ಾರಸಾಗಿಸಿ, ೧೬೩೮ರಲ್ಲಿ ಲೈಡೆನ್‌ನಲ್ಲಿ ಪ್ರಕಟಿಸಲಾಯಿತು. ಇದು ಹೊಸ ಯಂತ್ರ ಸ್ತ್ರದ ವಿಶ್ಲೇಷಣಾತ್ಮಕ ವಿಧಾನಗಳಿಗೆ ಆಧಾರ ಒದಗಿಸಿಕೊಟ್ಟಿತು. ಅದಿಲ್ಲದಿದ್ದರೆ ವೈಚಾರಿಕತೆಯ ಯುಗದ ಆರಂಭ ಆಗುತ್ತಿರಲಿಲ್ಲವೆಂದೇ ಹೇಳಬಹುದು.

**ಸಾಮಾನ್ಯ ಮನುಷ್ಯನೊಂದಿಗೆ ಸಂವಾದ...**

ಸ್ವರ್ಗದಲ್ಲಿರುವಂತೆ ಭೂಮಿಯ ಮೇಲೂ ದೈವೀ ವ್ಯವಸ್ಥೆ ಇದೆ, ಅದರ ಕುರಿತ ಎಲ್ಲ ಮಾಹಿತಿಗಳೂ ತನ್ನಲ್ಲಷ್ಟೆ ಒಂದುಗೂಡಿವೆ, ಮತ್ತು ತಾನೇ ಹೊಣೆಗಾರ ಎಂದು ಚರ್ಚ್ ಹೇಳಿಕೊಳ್ಳುತ್ತಿದ್ದಿತು. ಆದರೆ ಪೋಪ್ ಅಧಿಕಾರ ಆಜ್ಞಾಪಿಸುತ್ತಿದ್ದಂಥ ದೈವೀ ವ್ಯವಸ್ಥೆಯು ಸ್ವರ್ಗದಲ್ಲಿ (ಆಕಾಶದಲ್ಲಿ) ಅನುಸರಣೆಯಲ್ಲಿಲ್ಲವೆಂದೇ ಗೆಲಿಲಿಯೋರವರ ಆವಿಷ್ಕಾರಗಳು ತೋರಿಸಿಕೊಟ್ಟವು ! ಇದು ಹಾಕಿದ ಭೀತಿ ಎಂದರೆ – ಹಾಗಿದ್ದರೆ ಆ ದೈವೀ ವ್ಯವಸ್ಥೆಯನ್ನು ಭೂಮಿಯ ಮೇಲೂ ಕಿತ್ತೊಗೆಯಲಾಗುವುದೇ ? ಗೆಲಿಲಿಯೋರವರು ಪರಂಪರೆಯಿಂದ ದೂರ ಸರಿದು ತಮ್ಮ ಆವಿಷ್ಕಾರಗಳ ವಿವರಗಳನ್ನು ಶ್ರೀಮಂತ ಜನರ ಭಾಷೆಯಾದ ಲ್ಯಾಟಿನ್‌ನಲ್ಲಿ ಬರೆಯದೆ ಜನಸಾಮಾನ್ಯರ ಭಾಷೆಯಾದ ಇಟಾಲಿಯನ್ ಭಾಷೆಯಲ್ಲಿ ಬರೆಯುತ್ತಿದ್ದುದು ಮೇಲಿನ ಭೀತಿಯನ್ನು ಹೆಚ್ಚು ಪ್ರಬಲವನ್ನಾಗಿ ಮಾಡಿದ್ದಿತು. ಅಲ್ಲದೆ ಈ "ಅಸಂಪ್ರದಾಯಿಕ (ಪಾಷಂಡಿ)" ವಿಚಾರಗಳನ್ನು ಜನರ ಮಧ್ಯೆ ಸಾಮೂಹಿಕವಾಗಿ ಪ್ರಚಾರಮಾಡುವ ಸಾಧ್ಯತೆಯೂ ಈಗ ಇದ್ದಿತು. ಗುಟೆನ್‌ಬರ್ಗ್‌ರು ಆವಿಷ್ಕರಿಸಿದ ಹೊಸ ಮುದ್ರಣ ವ್ಯವಸ್ಥೆಯು



*ಗೆಲಿಲಿಯೋ ಉಪಯೋಗಿಸಿದ ದೂರದರ್ಶಕದ ಒಂದು ಮಾದರಿ*

ಆಚರಣೆಗೆ ಬಂದು ಆಗಲೇ ನೂರಕ್ಕೂ ಹೆಚ್ಚು ವರ್ಷಗಳಾಗಿದ್ದವು. ಈ ಮುದ್ರಣ ವಿಧಾನವನ್ನು ಮೊದಲು ಬೈಬಲ್ ಮುದ್ರಿಸಲು ಬಳಸಲಾಗುತ್ತಿದ್ದುದು, ಈಗ ಪಾಷಂಡಿ ವಿಚಾರಗಳನ್ನು ಮುದ್ರಿಸಲು ಬಳಸಬಹುದಿದ್ದಿತು ಮತ್ತು ಸಾಮಾನ್ಯ ಮನುಷ್ಯರ ಭಾಷೆಯಲ್ಲಿ ಬರೆಯಲಾಗಿದ್ದಲ್ಲಿ ಅವು ಸಾಮೂಹಿಕ ಪ್ರಚಾರಕ್ಕೂ ಅನುವಾಗುತ್ತಿದ್ದವು. ಗೆಲಿಲಿಯೋರವರು ಮಾಡುತ್ತಿದ್ದುದು ಅದನ್ನೇ. ಆ ಭೀತಿ ಇನ್ನೂ ಹೆಚ್ಚು ಗಹನವಾಗಿದ್ದಿತು. ಏಕೆಂದರೆ, ಈ ಪಾಷಂಡಿಗಳು ಬೋಧಿಸುತ್ತಿದ್ದ ವಿಚಾರಗಳನ್ನು ಜನರು ದೂರದರ್ಶಕದ ಮೂಲಕ ತಮ್ಮ ಸ್ವಂತ ಕಣ್ಣುಗಳಿಂದಲೇ "ನೋಡಲೂ"ಬಹುದಿದ್ದಿತು. ಸ್ವತಃ ಸನ್ಯಾಸಿಯಾಗಿದ್ದು ತಮ್ಮ ಕೃತಿಗಳನ್ನು ರಹಸ್ಯವಾಗಿ ರಚಿಸಿ ಅವನ್ನು ಪ್ರಕಟಿಸಲೂ ಸಾಧ್ಯವಾಗದಿದ್ದ ಕೋಪರ್ನಿಕಸ್‌ರಿಗೆ ಗೆಲಿಲಿಯೋರವರಿಗಿದ್ದ ಅವಕಾಶವು ಲಭ್ಯವಿರಲಿಲ್ಲ. ವೈಚಾರಿಕತೆಯ ಯುಗದ ಪ್ರಾರಂಭ ಬಹುಶಃ ತಡವಾಗಿದ್ದಿತು, ಆದರೆ ಅದನ್ನು ತಪ್ಪಿಸಲು ಸಾಧ್ಯವಿರಲಿಲ್ಲ.

**ಆಧುನಿಕ ವಿಜ್ಞಾನದ ಉಗಮ...**

ಗೆಲಿಲಿಯೋರವರನ್ನು ಆಧುನಿಕ ವಿಜ್ಞಾನದ ಪಿತಾಮಹನೆಂದೇ ಪರಿಗಣಿಸಲಾಗಿದೆ, ಏಕೆಂದರೆ, ಅವರ ಕೃತಿಗಳು ಹೊಸ ವಿಶ್ಲೇಷಣಾತ್ಮಕ ವಿಧಾನಗಳಿಗೆ ಅಡಿಪಾಯ ಹಾಕಿಕೊಟ್ಟವು. ಆ ಹೊತ್ತಿಗೆ ಮಾನವ ಅನುಭವ ಒಂದಿಷ್ಟು ಪರಿಪಕ್ವತೆಯ ಹಂತ ತಲುಪಿದ್ದಿತು. ಪ್ರಕೃತಿಯ ಏಕೀಕಾರಕ ನಿಯಮಗಳು ಆವಿಷ್ಕರಣೆಗಾಗಿ ಪರಿತಪಿಸುತ್ತಿದ್ದವು. ಗೆಲಿಲಿಯೋರವರ ಪ್ರಮುಖ ಕಾಣಿಕೆಗಳು ಎರಡು ವಿಶಿಷ್ಟ ರೂಪಗಳಲ್ಲಿ ಪ್ರಕಟಗೊಳ್ಳುತ್ತವೆ: (೧) ಪ್ರಕೃತಿಯನ್ನು ಅರ್ಥಮಾಡಿಕೊಳ್ಳಲು ಆ ಚಿಂತನ

ಪ್ರಕ್ರಿಯೆಯು ಪುನಃ ಪುನಃ ಮಾಡಬಹುದಾದ ಮತ್ತು ತನಿಖೆಗೆ ಒಳಪಡಿಸಬಹುದಾದ ಪ್ರಯೋಗಗಳಿಂದ ಬೆಂಬಲಿತವಾಗಿರಬೇಕು; (೨) ನಿಸರ್ಗ ನಿಯಮಗಳು ವೀಕ್ಷಕನಿಂದ ಸ್ವತಂತ್ರವಾಗಿರುತ್ತವೆ. ಮಾನವ ಚಿಂತನೆಯ ಮೇಲೆ ಅವುಗಳ ಪ್ರಭಾವ ಹಿಂದೆಂದೂ ಆಗದಿದ್ದಷ್ಟು ಅಪರಿಮಿತವಾಗಿರುತ್ತವೆ. ೧೫೦೦ ವರ್ಷಗಳ ಕಾಲ ಪ್ರಚಲಿತದಲ್ಲಿದ್ದ ಟೋಲೆಮಿಯರ ಬ್ರಹ್ಮಾಂಡ ಮಾದರಿಯು ನಶಿಸಲಿದ್ದಿತು. ಗೆಲಿಲಿಯೋರವರ ಮೂಲಭೂತ ವಿಚಾರಗಳು ನಿಸರ್ಗದ ಬಗೆಗೆ ತಿಳುವಳಿಕೆಯನ್ನು ವಿಸ್ತರಿಸಲು ದಾರಿ ಮಾಡಿಕೊಟ್ಟವು; ಪ್ರಯೋಗಗಳ ಮೂಲಕ ಜ್ಞಾನ ಸಂಪಾದನೆಗೆ ಉಪಕ್ರಮ ಹಾಕಿಕೊಟ್ಟವು. ಪ್ರಯೋಗ, ವೀಕ್ಷಣೆ, ಅನುಮಿತ – ಇವು ಬೇಗನೆಯೇ ನೈಸರ್ಗಿಕ ತತ್ತ್ವಶಾಸ್ತ್ರಕ್ಕೆ ಅನಿವಾರ್ಯವಾಗಲಿದ್ದವು. ಇದು ಖಗೋಳ ವಿಜ್ಞಾನಕ್ಕಷ್ಟೆ ಸೀಮಿತವಾಗಿದ್ದಿದ್ದರೆ ಅದನ್ನು ಕ್ರಾಂತಿ ಎಂದು ಕರೆಯಲಾಗುತ್ತಿರಲಿಲ್ಲ. ಬದಲಾವಣೆಯು ಸರ್ವತೋಮುಖವಾಗಿದ್ದಿತು. ವಿಜ್ಞಾನವು ವಿಶ್ವಪರಿಕಲ್ಪನೆಯ ಆಗರವಾಯಿತು.

ಇದಾದ ಕೂಡಲೇ ಜರುಗಿದ ಘಟನೆಗಳ ಕಡೆಗೆ ದೃಷ್ಟಿ ಹರಿಸೋಣ. ಅತ್ಯಂತ ಮುಖ್ಯವಾದ ಹಾಗೂ ತಕ್ಷಣದ ಪರಿಶೋಧನೆಯೆಂದರೆ – ಯೊಹಾನ್ ಕೆಪ್ಲರ್‌ರವರು ಕಂಡುಹಿಡಿದ ಗ್ರಹಗಳ ಚಲನೆಯ ನಿಯಮಗಳು. ಅವರು ತಮ್ಮ ಜ್ಞಾನಸಂಪತ್ತನ್ನು ತಮ್ಮ ಗುರು ಡೇನಿಷ್ ಖಗೋಳ ವಿಜ್ಞಾನಿ ಟೈಕೊ ಬ್ರಾಹೆ (೧೫೪೬-೧೬೦೧) ಯವರಿಂದ ಪಡೆದಿದ್ದರು. ಟೈಕೊ ಬ್ರಾಹೆಯವರು ೧೫೭೨ರಲ್ಲಿ ಸೂಪರ್‌ನೋವಾ ವಿಸ್ಫೋಟವನ್ನು ಗುರುತಿಸಿದರು. ಇದು ಅವರಿಗೆ ಅದುವರೆವಿಗೂ ಚಾಲನೆಯಲ್ಲಿದ್ದ ಚಂದ್ರನ ಗ್ರಹಪಥಕ್ಕೂ ಆಚೆ ಬ್ರಹ್ಮಾಂಡದಲ್ಲಿ ಯಾವ ಬದಲಾವಣೆಗಳೂ ಆಗಲು ಸಾಧ್ಯವಿಲ್ಲ ಎಂಬ ಮಿಥ್ಯೆಯನ್ನು ಅಲ್ಲಗಳೆಯಲು ಸಹಾಯವಾಯಿತು. ಅದೇ ಹೊತ್ತಿನಲ್ಲಿ ಅವರು ಕೊಪರ್ನಿಕಸರು ಪ್ರತಿಪಾದಿಸಿದ್ದ ವ್ಯವಸ್ಥೆಯನ್ನು ನಂಬಲು ನಿರಾಕರಿಸಿದ್ದರು. ಕೆಪ್ಲರ್‌ರು ನಿರೂಪಿಸಿದ ಗ್ರಹ ಚಲನೆ ನಿಯಮಗಳು ದೂರದರ್ಶಕಕ್ಕೂ ಮುನ್ನಿನ ದಿನಗಳಲ್ಲಿ ಕಾಣಲು ಸಾಧ್ಯವಿದ್ದಂಥ ಅತ್ಯಂತ ನಿಖರ ನಿಯಮಗಳಾಗಿದ್ದವು. ಗೆಲಿಲಿಯೋರವರ ವೀಕ್ಷಣಗಳು ಅವರ ಮೇಲೆ ತುಂಬ ಪ್ರಭಾವ ಬೀರಿ ಗ್ರಹಗಳ ಚಲನೆಯನ್ನು ಕೊಪರ್ನಿಕಸ್‌ರ ರೀತಿಯಲ್ಲಿ ನೋಡುವಂತೆ ಮಾಡಿದ್ದಿತು. ಈ ನಿಯಮಗಳನ್ನೂ ಅವರು ಗ್ರಹಗಳ ಸೂರ್ಯಕೇಂದ್ರಿತ ವೃತ್ತೀಯ ಪಥಗಳಿಗೆ ಸರಿಹೊಂದಿಸ ಯತ್ನಿಸಿದರು. ಆದರೆ ಅಂಥ ವಿನ್ಯಾಸ ಸಾಧ್ಯವಿಲ್ಲವೆಂದು ಬಹು ಬೇಗನೆಯೇ ಅರಿತರು. ಹಾಗಾಗಿ ಅವರು ಅವನ್ನು ದೀರ್ಘವೃತ್ತೀಯ (ಅಂಡಾಕಾರದ) ಗ್ರಹ ಪಥಗಳಿಗೆ ಹೊಂದಿಸಲು ಯತ್ನಿಸಿದರು. ಈ ದೀರ್ಘವೃತ್ತೀಯ ಗ್ರಹಪಥಗಳು ತುಂಬ ಪರಿಪೂರ್ಣವಾಗಿ ಸರಿಹೊಂದುತ್ತವೆಂದು ಬೇಗನೆಯೇ ಕಂಡುಕೊಂಡರು. ಇದು ಭೂಮಿ-ಕೇಂದ್ರಿತ ವೃತ್ತೀಯ ಗ್ರಹಪಥ ಪ್ರತಿಪಾದಿಸಿದ ಅರಿಸ್ಟಾಟಲ್‌ರ ವಿಚಾರಗಳಿಗೆ ನೀಡಿದ ಬಹುಭಾರಿ ಹೊಡೆತವಾಗಿದ್ದಿತು. ಭೂಮಿಯು ಕೇಂದ್ರದಲ್ಲಿಲ್ಲವಷ್ಟೆ ಅಲ್ಲ; ಗ್ರಹ ಪಥಗಳು ಪರಿಪೂರ್ಣ ವೃತ್ತಗಳೂ ಅಲ್ಲ ಎಂಬುದು ಸಾಧಿತವಾಯಿತು. ಅಷ್ಟೆ ಅಲ್ಲ, ಪ್ರಕೃತಿಯು ಸಾಮರಸ್ಯಕ್ಕೆ ಹಾಗೂ ಪರಿಪೂರ್ಣ ಆಕಾರಗಳಿಗೆ ಆದ್ಯತೆ ನೀಡುತ್ತದೆ ಎಂಬ ಅರಿಸ್ಟಾಟಲ್‌ರ ವಿಚಾರಕ್ಕೂ ಮಾರಕ ಪೆಟ್ಟು ಬಿದ್ದಿತು. ಕೆಪ್ಲರ್‌ರು ಇನ್ನೂ ಮುಂದೆ ಹೋಗಿ, ಗ್ರಹಗಳ ಗ್ರಹಪಥೀಯ ವೇಗಗಳೂ ಅವುಗಳ ಪರಿಭ್ರಮಣ ಕಾಲಾವಧಿಗಳೂ ಅವು ಸೂರ್ಯನಿಂದ ಎಷ್ಟು ದೂರದಲ್ಲಿವೆ ಎಂಬುದನ್ನು ಅವಲಂಬಿಸಿರುತ್ತವೆ ಎಂಬುದನ್ನು ತಿಳಿಸುವ ನಿಯಮಗಳನ್ನು ಪತ್ತೆ ಹಚ್ಚಿದರು. ಗ್ರಹ ಚಲನೆಯ ಸಾಮಾನ್ಯೀಕೃತ ನಿಯಮಗಳಿಂದ ಈ ನಿಯಮಗಳನ್ನು ವಿವರಿಸುತ್ತ ನ್ಯೂಟನ್ (೧೬೪೨-೧೭೨೭)ರು ಗುರುತ್ವಾಕರ್ಷಣೆಯ ಸಾರ್ವತ್ರಿಕ ನಿಯಮಗಳನ್ನು ಪತ್ತೆ ಮಾಡಿದರು. ಅವು ಕೆಪ್ಲರರ ನಿಯಮಗಳೊಂದಿಗೆ ಪರಿಪೂರ್ಣವಾಗಿ ಸರಿಹೊಂದುತ್ತಿದ್ದವು. ನ್ಯೂಟನ್‌ರ ಈ ವಿಚಾರಗಳಿಗೆ ಅವರ ನಿಕಟ ಸ್ನೇಹಿತ ಎಡ್ಮಂಡ್ ಹ್ಯಾಲೀ (೧೬೫೬-೧೭೪೨)ಯವರ ಲೆಕ್ಕಾಚಾರಗಳಿಂದ ಬೆಂಬಲ ಲಭಿಸಿತು. ೧೫೩೧ ಹಾಗೂ ೧೬೦೭ರಲ್ಲಿ ಕಂಡ ಕೆಲವು ಧೂಮಕೇತುಗಳ ಪಥಗಳು ೧೬೮೨ರಲ್ಲಿ ಕಂಡ ಧೂಮಕೇತುವೊಂದರ ಪಥದೊಂದಿಗೆ ಸರ್ವಸಮನಾಗಿದ್ದವು ಎಂದು ಎಡ್ಮಂಡ್ ಹ್ಯಾಲೀ ಲೆಕ್ಕಾಚಾರ ಮಾಡಿದ್ದರು. ಅಂದರೆ, ಈ ಮೂರೂ ಧೂಮಕೇತುಗಳು ಬೇರೆಬೇರೆಯಲ್ಲ, ಅವು ಒಂದೇ ಆಗಿದ್ದವು ಮತ್ತು ಈ ಧೂಮಕೇತು ಮತ್ತೆ ೧೭೫೮ರಲ್ಲಿ ಕಾಣಿಸಿಕೊಳ್ಳಲಿರುವುದು ಎಂದು ಹ್ಯಾಲೀ ಮುನ್ನುಡಿದಿದ್ದರು. ಅವರ ಭವಿಷ್ಯವಾಣಿ ನಿಜವಾಯಿತು. ಅಷ್ಟೇ ಅಲ್ಲ, ಈ ಹ್ಯಾಲೀ -


## ನಮ್ಮ ಇತ್ತೀಚಿನ ಪ್ರಕಟಣೆಗಳು

‘ಶಿಸ್ತಿನ’ ಪಾಠ ಸಾಕು,
‘ಅಶಿಸ್ತು ಬದ್ಧ’
ಬದುಕು ಬೇಕು



ಸಾಧನೆ ಎಂದರೆ ಏನನ್ನಾದರೂ
‘ಮಾಡುವುದಲ್ಲ’,
ಏನನ್ನೂ ಮಾಡದೆ ‘ಸುಮ್ಮನಿರುವುದು’




ಸುಮ್ಸುಮ್ನೆ ಪ್ರಕಾಶನ

ನೊಣವಿನಕೆರೆ – 572 224
ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ
ಮೊಬೈಲ್ : 97310 76213




ಬೆಲೆ : ರೂ. 100 ✶ ಬೆಲೆ : ರೂ. 85

ೂಮಕೇತು ಅಂದಿನಿಂದ ಮತ್ತೆ ಮೂರುಬಾರಿ ಣಿಸಿಕೊಂಡಿತು ಮತ್ತು ಪ್ರತಿ ೭೬ ವರ್ಷಗಳಿಗೊಮ್ಮೆ ಣಿಸಿಕೊಳ್ಳುತ್ತಿದೆ. ವಿಜ್ಞಾನವು ಹೀಗೆ ವಿವರಣೆ ೀಡುವ ಹಾಗೂ ತನಿಖೆ ಮಾಡಬಹುದಾದ ಸಂಗತಿ ಳನ್ನು ಮುನ್ನುಡಿಯುವ ಶಕ್ತಿ ಪಡೆದುಕೊಂಡಿತು. ್ಯೂಟನ್‌ರು ಚಲನೆಯ ಹಾಗೂ ಸಾರ್ವತ್ರಿಕ ಗುರುತ್ವಾ ರ್ಷಣೆಯ ನಿಯಮಗಳನ್ನು ನಿರೂಪಿಸಿದುದು ಜ್ಞಾನಕ್ಕೆ ನೀಡಿದ ಮಹತ್ವಾಣಿಕೆಯಾಗಿದ್ದಿತು. ್ಯೂಟನ್‌ರು ನಿಜಕ್ಕೂ ಗೆಲಿಲಿಯೋ ಪರಂಪರೆಯ ಒಬ್ಬ ಪಾನ್ ಪ್ರಯೋಗಶೀಲರೂ ಸಾಧನ ಸಲಕರಣೆ ರ್ಮಾಪಕರೂ ಆಗಿದ್ದರು. ಅವರು ಪ್ರತಿಫಲನ ೂರದರ್ಶಕದ ಆವಿಷ್ಕರ್ತೃವಾಗಿದ್ದರು. ಭವಿಷ್ಯತ್ತಿನ ಲ್ಲ ದೂರದರ್ಶಕಗಳೂ ಇವರ ಮೂಲ ನ್ಯಾಸವನ್ನೇ ಆಧರಿಸಿವೆ. ಸೂರ್ಯನ ಕಿರಣಗಳನ್ನು ಶ್ರಗ (ಪ್ರಿಸಮ್)ದ ಮೂಲಕ ಏಳು ವರ್ಣಗಳನ್ನಾಗಿ ೀಳಲು ಸಾಧ್ಯವೆಂದೂ ಅವರು ತೋರಿಸಿಕೊಟ್ಟರು. ವಿಧಾನವು ಭವಿಷ್ಯತ್ತಿನ ವಿಜ್ಞಾನಕ್ಕೆ, ಅದರಲ್ಲೂ ಶೇಷವಾಗಿ ಖಗೋಳ ವಿಜ್ಞಾನಕ್ಕೆ, ಒಂದು ಅನಿವಾರ್ಯ ುಪಕರಣವಾಯಿತು. ಪರಸ್ಪರ ಸಂಬಂಧವಿಲ್ಲದ ಂದು ಕಾಣಬರುವ ಅನೇಕಾನೇಕ ವಿದ್ಯಮಾನಗಳನ್ನು ಲವು ನಿಯಮಗಳ ಮೂಲಕ ಅರ್ಥಮಾಡಿಕೊಳ್ಳಲು ಾಧ್ಯವಿದೆ ಎಂದು ನ್ಯೂಟನ್ ತೋರಿಸಿಕೊಟ್ಟರು ಮತ್ತು ಜ್ಞಾನದಲ್ಲಿ ಮೊತ್ತಮೊದಲ ಬಾರಿಗೆ ಸಾರ್ವತ್ರೀಕರಣದ ಕಲ್ಪನೆಯನ್ನು ಜಾರಿಗೆ ತಂದರು. (ಇದು ನಿಸರ್ಗವನ್ನು ಂದು ಮಿತಿ ರಹಿತ ಯಂತ್ರವನ್ನಾಗಿ ಪರಿಭಾವಿಸುವ ೀನೆ ಡೇಕಾರ್ಟ್‌ರವರ ಕಾಣ್ಕೆಗೆ ಸಮನಾಗಿದೆ). ಲಿಯಂ ಹೆರ್ಷೆಲ್ (೧೭೩೮-೧೮೨೨)ರು ಯುರೇನಸ್ ಗ್ರಹವನ್ನು ಕಂಡುಹಿಡಿದರು. ಇದರ ಥವೂ ಕೆಪ್ಲರ್ ನಿಯಮಗಳಿಗೆ ಅನುಗುಣವಾಗಿಯೇ ದ್ದಿತು. ಸೌರವ್ಯೂಹದ ಹೊರಗೂ ದ್ವಿ-ನಕ್ಷತ್ರಗಳು ಂದರ ಸುತ್ತ ಇನ್ನೊಂದು ಕೆಪ್ಲರ್ ನಿಯಮಗಳು ಿಸುವ ರೀತಿಯಲ್ಲಿಯೇ ಸುತ್ತುತ್ತವೆಂಬುದನ್ನು ಅವರು ತ್ತೆಹಚ್ಚಿದರು. ಅಂದರೆ ಭೂಮಿ ಮೇಲಿನ ನಿಯಮಗಳು ರ್ಗದಲ್ಲೂ ಕಾರ್ಯ ಜರುಗಿಸುತ್ತವೆ ಎಂದಾಯಿತು!

ಇದರ ಪ್ರಭಾವ ಖಗೋಳ ವಿಜ್ಞಾನಕ್ಕಷ್ಟೆ ಸೀಮಿತ ಾಗಿರಲಿಲ್ಲ. ಜಗತ್ತನ್ನು ಅರ್ಥ ಮಾಡಿಕೊಳ್ಳಲು ಚಿಂತನೆಯಷ್ಟೆ ಸಾಲದು, ಪ್ರಯೋಗಗಳೂ ನಿವಾರ್ಯ ಎಂಬ ಪಾಠವನ್ನು ಇದು ಕಲಿಸಿತು. ಲಿಯಮ್ ಗಿಲ್ಬರ್ಟ್ (೧೫೪೦-೧೬೦೩)ರು ದ್ಯುಚ್ಛಕ್ತಿ ಹಾಗೂ ಕಾಂತತ್ವದ ಬಗೆಗೆ ಮೊದಲ ನುಭವಾತ್ಮಕ ವಿಚಾರಗಳನ್ನು ತಿಳಿಸಿದರು. ಖಗೋಳ ಜ್ಞಾನದಿಂದ ಅತಿದೂರದಲ್ಲಿರುವ ಶರೀರವಿಜ್ಞಾನವೂ ಪ್ರಭಾವದಿಂದ ಹೊರಗುಳಿಯಲಿಲ್ಲ. ವಿಲಿಯಮ್ ಾರ್ವೇ (೧೫೭೮-೧೬೫೭) ಸುದೀರ್ಘ ಹಾಗೂ ್ರಯಾಸಪೂರ್ಣ ಪ್ರಯೋಗಗಳ ಮೂಲಕ ಹೃದಯವು ಂದು ಯಾಂತ್ರಿಕ ಪಂಪ್‌ನಂತೆ ರಕ್ತವನ್ನು ಶರೀರ ಾದ್ಯಂತ ಹರಿಸುತ್ತದೆ. ಎಂದು ಸಾಧಿಸಿ ತೋರಿಸಿದರು. ೊಸ ಯಂತ್ರವಿಜ್ಞಾನವು ಹಲವಾರು ಜ್ಞಾನವಲಯ ಳಲ್ಲಿ ಬೌದ್ಧಿಕ ಚಟುವಟಿಕೆಗಳ ಮೇಲೆ ಪ್ರಭಾವ ೀರಿತು. ಜಗತ್ತು ನಿಗೂಢವೇನಲ್ಲ, ಅದನ್ನು




ಅರಿಯಲು ಸಾಧ್ಯವಿದೆ ಎಂಬುದೀಗ ದೃಢಪಟ್ಟಿತು.

ಹತ್ತೊಂಬತ್ತನೆಯ ಶತಮಾನದ ಆದಿಯವರೆಗೆ ಖಗೋಳ ವಿಜ್ಞಾನವು ಯಂತ್ರ ವಿಜ್ಞಾನ ಹಾಕಿಕೊಟ್ಟ ಮಾರ್ಗವನ್ನೇ ಅನುಸರಿಸುತ್ತಿದ್ದಿತು. ಕೈಗಾರಿಕಾ ಕ್ರಾಂತಿಯು ವಿಜ್ಞಾನದಲ್ಲಿ ಹೊಸ ವಿದ್ಯಾವಿಭಾಗಗಳನ್ನು, ಗಮನಾರ್ಹವಾಗಿ ಪರಮಾಣು ವಿಜ್ಞಾನ, ರಸಾಯನ ವಿಜ್ಞಾನ, ರೋಹಿತ ಅಧ್ಯಯನ ವಿಜ್ಞಾನ, ವಿದ್ಯುಚ್ಛಕ್ತಿ ಹಾಗೂ ಕಾಂತತ್ವ ಶಾಖೆಗಳನ್ನು, ಜಾರಿಗೆ ತಂದಿತು. ವಿಜ್ಞಾನ ಮಾರ್ಗ ಈಗ ಏಕ ಆಯಾಮದ್ದಾಗಿರಲಿಲ್ಲ. ಖಗೋಳವಿಜ್ಞಾನವೂ ಇದಕ್ಕೆ ಹೊರತಾಗಲಿಲ್ಲ. ಬಹು ಶಾಖೆಗಳ ಈ ವಿಜ್ಞಾನದ ಬೆಳವಣಿಗೆಗೆ ಸಂಬಂಧಿಸಿ ಭಾರತೀಯ ಖಭೌತವಿಜ್ಞಾನ ಸಂಸ್ಥೆಯು (www.iiap.res.in) ಖಗೋಳವಿಜ್ಞಾನದ ಅಂತರರಾಷ್ಟ್ರೀಯ ವರ್ಷದಲ್ಲಿ ಹೊಸ ಪರಸ್ಪರ ಪರಿಣಾಮಕಾರಿ ಅಡಕ ಮುದ್ರೆ (ಸಿ.ಡಿ.)ಯೊಂದನ್ನು ಹೊರತರಲಿದೆ. ಕಳೆದ ಒಂದು ನೂರು ವರ್ಷಗಳಲ್ಲಿ ನಮ್ಮ ಅನೇಕ ವಿಚಾರಗಳು ಬಹುಮಟ್ಟಿಗೆ ಬದಲಿವೆ. ಗ್ಯಾಲಕ್ಸಿ (ಆಕಾಶಗಂಗೆ)ಗಳ ಉದ್ದಳತೆಗಳನ್ನು ಪುನರ್ ನಿರ್ಧರಿಸಲಾಗಿದೆ. ಗ್ಯಾಲಕ್ಸಿಗಳ ಪರಸ್ಪರ ಹಿನ್‌ಸರಿತವು ಈ ಬ್ರಹ್ಮಾಂಡದ ಹುಟ್ಟಿನ ಬಗೆಗೆ ನಮಗೆ ವಿಷಯ ತಿಳಿಸುತ್ತದೆ. ಗುರುತ್ವಾಕರ್ಷಣೆಯು ಬೆಳಕಿನ ಪಥವನ್ನೂ ಒರೆಯಾಗಿಸುತ್ತದೆ. ನಕ್ಷತ್ರಗಳ ನಡುವಿನ ಸ್ಥಳವೂ ಖಾಲಿಯಾಗೇನಿಲ್ಲ. ಭೌತದ್ರವ್ಯ ಹಾಗೂ ವಿಕಿರಣಗಳು ಎಲ್ಲೆಲ್ಲೂ ಇವೆ. ಸದಾ ಚಲನೆಯಲ್ಲಿವೆ. ಪರಸ್ಪರ ವರ್ತಿಸುತ್ತ ಪರಸ್ಪರ ಪ್ರಭಾವ ಬೀರುತ್ತಿರುತ್ತವೆ ಹೀಗೆ ಇದೀಗ ಒಂದು ಬಹುಶಾಖೀಯ ಪ್ರಯಾಣ ವಾಗಿದೆ. ಇದರಲ್ಲಿ ಮೇಘನಾದ ಸಹಾ ಮತ್ತು ಎಸ್. ಚಂದ್ರಶೇಖರ್‌ರವರಂಥ ಭಾರತೀಯ ವಿಜ್ಞಾನಿಗಳ ಕೃತಿಗಳು ಎಂದಿಗೂ ಅಳಿಯದ ಕಾಣಿಕೆಗಳಾಗಿ ಉಳಿಯಲಿವೆ, ಎಂಬ ಅಂಶವನ್ನಿಲ್ಲಿ ಹೇಳಬೇಕಾಗಿದೆ. ಇವರು ವೈಚಾರಿಕತೆ, ಶಾಂತಿ ಹಾಗೂ ಪ್ರಗತಿಗೆ ಬೆಂಬಲವಾಗಿ ನೀಡಿರುವ ಹೇಳಿಕೆಗಳನ್ನೂ, ವಿಜ್ಞಾನ ಹಾಗೂ ಸಮಾಜದ ನಡುವಿನ ಅಂತರಕ್ರಿಯೆಯ ಬಗೆಗೆ ಸಹಾರವರ ಹೇಳಿಕೆಗಳನ್ನೂ ಈ ಸಮಯದಲ್ಲಿ ನೆನಪಿಗೆ ತಂದುಕೊಳ್ಳುವುದು ಅತಿ ಮುಖ್ಯ. ಇವೆಲ್ಲವೂ ಐವೈಎ-೨೦೦೯ಕ್ಕೆ ನೇರವಾಗಿ ಸಂಬಂಧಿತವಾಗಿವೆ ಮತ್ತು ಅವನ್ನು ಮುಖ್ಯ ಸಾಧನಸಂಪತ್ತುಗಳನ್ನಾಗಿ ಪರಿಗಣಿಸಬೇಕಾಗಿದೆ. ಭಾರತೀಯ ಖಗೋಳ ವಿಜ್ಞಾನಿಗಳೂ ಅನೇಕ ನವೋದ್ದೀಪ್ತ ಕ್ಷೇತ್ರಗಳಲ್ಲಿ ಸವಾಲುಗಳ ಪರಿಶೀಲನೆಯನ್ನು ಕೈಗೊಂಡಿದ್ದಾರೆ. ಬರಲಿರುವ ವರ್ಷಗಳಲ್ಲಿ ಭೂಮಿಯ ಮೇಲೂ ಅಂತರಿಕ್ಷದಲ್ಲೂ ಹೊಸ ಸೌಲಭ್ಯಗಳನ್ನು ನಿರ್ಮಿಸಲಾಗುವುದು.

**ಐವೈಎ-೨೦೦೯: ಗುರಿಗಳು ಹಾಗೂ ಮೂಲಾಧಾರ ಚಟುವಟಿಕೆಗಳು: ವಿಶ್ವವನ್ನು ಸರ್ವಮಾನ್ಯೀಕರಿಸುವುದು**

ಬ್ರಹ್ಮಾಂಡದ ಬಗೆಗೆ ತಿಳಿವಳಿಕೆಯು ಎಲ್ಲರಿಗೂ ಎಟುಕುವಂತೆ ಮಾಡುವುದು; ಆಕಾಶ ವೀಕ್ಷಣೆ ಚಟುವಟಿಕೆಗಳಲ್ಲೂ ಚರ್ಚೆಗಳಲ್ಲೂ ಜನರು ಸಾಮೂಹಿಕವಾಗಿ ಭಾಗವಹಿಸುವಂತೆ ಮಾಡುವ ಮೂಲಕ ಅವರಲ್ಲಿ ಖಗೋಳ ವಿಜ್ಞಾನದಲ್ಲಿ ಆಸಕ್ತಿ ಕೆರಳಿಸುವುದು; ಇದರಲ್ಲಿ ರಾಷ್ಟ್ರೀಯತೆ, ಧರ್ಮ, ಜಾತಿ, ಪಂಗಡ, ಲಿಂಗ ಇವಾವುಗಳ ಭೇದವೂ ಇರದಂತೆ ನೋಡಿಕೊಳ್ಳುವುದು – ಹೀಗೆ ವಿಶ್ವವನ್ನು ಸರ್ವಮಾನ್ಯೀಕರಿಸುವುದು ಐವೈಎ-೨೦೦೯ರ ಗುರಿಯಾಗಿರುತ್ತದೆ. ಇದರ ಭಾಗವಾಗಿ ಬೆಂಗಳೂರಿನ ಖಭೌತವಿಜ್ಞಾನ ಸಂಸ್ಥೆಯು ೨೦೦೮ರ ಏಪ್ರೀಲ್ ೪ರಂದು ಒಂದು ವಿಚಾರಗೋಷ್ಠಿಯನ್ನು ಸಂಘಟಿಸಿದ್ದಿತು. ಇದರಲ್ಲಿ ಒಂದೇ ವೇದಿಕೆಯ ಮೇಲೆ ವಿಜ್ಞಾನಿಗಳು, ವಿಜ್ಞಾನವನ್ನು ಜನಪ್ರಿಯಗೊಳಿಸುವವರು, ವಿಜ್ಞಾನ ಲೇಖಕರು, ಶಿಕ್ಷಕರು, ವಿದ್ಯಾರ್ಥಿಗಳು, ಸಾಮಾಜಿಕ ಕಾರ್ಯಕರ್ತರು, ಕಲಾವಿದರು, ರಂಗಭೂಮಿ ಪರಿಣತರು, ಎಲ್ಲರೂ ಒಟ್ಟಾಗಿ ಉಪಸ್ಥಿತರಿದ್ದು ಐವೈಎ-೨೦೦೯ರ ಗುರಿ ಸಾಧನೆಗೆ ತಮ್ಮಲ್ಲಿ ಪ್ರತಿಯೊಬ್ಬರೂ ಹೇಗೆ ಕಾಣಿಕೆ ಸಲ್ಲಿಸಬಲ್ಲರು ಎಂಬುದನ್ನು ತೋರಿಸಿಕೊಟ್ಟರು. ಐವೈಎ-೨೦೦೯ ಒಂದು ಸಾಮೂಹಿಕ ಸಂಘಟನೆಯಾಗಲಿರುವುದು ಮತ್ತು ಅದರಲ್ಲಿ ದೇಶದ ಎಲ್ಲ ಪ್ರಜಾಸತ್ತಾತ್ಮಕ ಹಾಗೂ ಜಾತ್ಯತೀತ ಶಕ್ತಿಗಳೂ ಕೈಗೂಡಿಸಲಿರುವುವು ಎಂಬುದು ಶ್ರುತಪಟ್ಟಿತು. ''ಸಂಖ್ಯೆ ಹೆಚ್ಚಿದಷ್ಟೂ ಪ್ರಭಾವವೂ ಹೆಚ್ಚುವುದು'' ಎಂಬುದನ್ನು ಮನಗಾಣಲಾಯಿತು.

ನಾನಾ ಮಟ್ಟಗಳಲ್ಲಿ ಹಲವಾರು ಕಾರ್ಯಕ್ರಮಗಳನ್ನೂ ಯೋಜಿಸಲಾಗಿದೆ. ಭಾರತೀಯ ಖಭೌತ ವಿಜ್ಞಾನ ಸಂಸ್ಥೆಯು ಶಾಲಾ ಕಾಲೇಜುಗಳಿಗೂ ಆಸಕ್ತ ವ್ಯಕ್ತಿಗಳಿಗೂ ಮಾರಲೆಂದು ಸುಮಾರು ೨,೦೦೦ರೂ.ಗಳಷ್ಟು ಅಗ್ಗದ ಬೆಲೆಯ ದೂರದರ್ಶಕಗಳನ್ನು ತಯಾರಿಸಲು ನಿರ್ಧರಿಸಿದೆ. ಗೆಲಿಲಿಯೋಸ್ಕೋಪ್ (೨ ಇಂಚ್ - ೩ ಇಂಚ್ ಬೆಳಕು-ಕಿಂಡಿ ಇರುವ ಅಗ್ಗದ



*ಕವಲೂರ್‌ನಲ್ಲಿರುವ ೨.೩ ಮೀಟರ್ ಉದ್ದದ ವೈನು ಬಾಪು ದೂರದರ್ಶಕ*
*(ಭಾರತೀಯ ಖಭೌತವಿಜ್ಞಾನ ಸಂಸ್ಥೆಯು ಸ್ಥಳೀಯವಾಗಿ ನಿರ್ಮಿಸಿದುದು)*

ದೂರದರ್ಶಕ) ಬಳಸಿಕೊಂಡು ನಾನಾ ಗುಂಪುಗಳು ಆಕಾಶವೀಕ್ಷಣೆ ಮಾಡುವಂತೆ ಏರ್ಪಡಿಸಿ, ಇದರಲ್ಲಿ ಆಸಕ್ತಿ ಇಲ್ಲದವರೂ ರಾತ್ರಿ ಆಕಾಶದ ಚೆಲುವಿನ ವೀಕ್ಷಣೆಯಲ್ಲಿ ಆಸಕ್ತಿ ತಳೆಯುವಂತೆ ಮಾಡಲಾಗುವುದು. ಈ ಆಕಾಶ ವೀಕ್ಷಣೆಯ ಜೊತೆಗೆ ಜ್ಯೋತಿಷದ ಬಗೆಗೆ ಪ್ರಶ್ನೋತ್ತರಗಳನ್ನು ನಡೆಸಿ ಕಾರ್ಯಕ್ರಮವನ್ನು ಮೂಢ ನಂಬಿಕೆಯ ವಿರುದ್ಧ ತಿಳುವಳಿಕೆಯ ವೇದಿಕೆಯನ್ನಾಗಿಯೂ ಮಾಡಲಾಗುವುದು.

'ಖಗೋಳ ವಿಜ್ಞಾನದ ನೂರು ಗಂಟೆಗಳು' ಎಂಬುದು ಇನ್ನೊಂದು ಮೂಲಾಧಾರ ಚಟುವಟಿಕೆ. ಇದು ನಮ್ಮ ವೈಜ್ಞಾನಿಕ ಶಿಕ್ಷಣ ವ್ಯವಸ್ಥೆಗೆ ಮುಖ್ಯ ಮಹತ್ವದ್ದಾಗಲಿರುವುದು. ಇದರಲ್ಲಿ ಜನಸಾಮಾನ್ಯರು ಬ್ರಹ್ಮಾಂಡ ಕುರಿತು ಕಾರ್ಯಕಾರೀ ಖಗೋಳ ವಿಜ್ಞಾನಿಗಳಿಗೆ ಪ್ರಶ್ನೆ ಹಾಕಲು ಅವಕಾಶ ಕಲ್ಪಿಸಿಕೊಡಲಾಗುವುದು. ಖಗೋಳ ವಿಜ್ಞಾನದ ಬಗೆಗೆ ಚರ್ಚಿಸುವಾಗ ಸೂರ್ಯನು ನಮಗೆ ಅತ್ಯಂತ ಹತ್ತಿರವಾದ ನಕ್ಷತ್ರ ಎಂಬುದನ್ನು ಆಗಾಗ್ಗೆ ಮರೆಯಲಾಗುತ್ತದೆ. ಇದನ್ನು ಸರಿಪಡಿಸಲು ಮುಂಬಯಿಯ 'ನವ ನಿರ್ಮಿತಿ' ಸಂಸ್ಥೆಯು 'ಸನ್‌ಡರ್ ಸ್ಟಾಂಡಿಂಗ್' ಎಂಬ ಸೂರ್ಯ ವೀಕ್ಷಣೆಯ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ (www.navnirmiti.org.0-9822614682). ಮುಂದಿನ ಸಾಮೂಹಿಕ ಚಟುವಟಿಕೆಗಳ ಬಗೆಗೆ ವಿವರ ಬೇಕಾದರೆ 'ಪಾಂಡಿಚೇರಿ ವಿಜ್ಞಾನ ವಿಚಾರ ವೇದಿಕೆ'ಯನ್ನು ಸಂಪರ್ಕಿಸಬಹುದು (www.psftcerd.org. 0-9443262773). ವಿದ್ಯಾರ್ಥಿಗಳಿಗೆ ಖಗೋಳವಿಜ್ಞಾನದ ಪರಿಚಯ ಮಾಡಿಕೊಡಲು ಮುಖ್ಯ ಹಗಲು ಹೊತ್ತಿನ ಕಾರ್ಯಕ್ರಮವನ್ನು ಯೋಜಿಸಲಾಗಿದೆ. ''ಗೆಲಿಲಿಯೋ ಬೋಧಕರ ತರಬೇತು ಕಾರ್ಯಕ್ರಮ'' ಇದು ಐವೈಎ-೨೦೦೯ರ ಮತ್ತೊಂದು ಮೂಲಾಧಾರ ಚಟುವಟಿಕೆ. ಜನರ ಮಧ್ಯೆ ವೈಜ್ಞಾನಿಕ ಮನೋಭಾವವನ್ನು ಪ್ರೋತ್ಸಾಹಿಸು ವುದರಲ್ಲಿ ಭಾರತ ಸರಕಾರವು ತನ್ನ ಕರ್ತವ್ಯವನ್ನು ಮರೆಯಲಾಗದು (ಭಾರತೀಯ ಸಂವಿಧಾನದ ಆರ್ಟಿಕಲ್ ೫೧ಎ) ಎಂದು ರಾಜ್ಯದ ಮೇಲೆ ಒತ್ತಡ ತರಲು ತುಂಬ ಅವಕಾಶ ಒದಗಿಸಿಕೊಡುವುದೂ ಐವೈಎ-೨೦೦೯ರ ಒಂದು ಮೂಲಾಧಾರ ಚಟುವಟಿಕೆ. ''ಅವಳೊಬ್ಬ ಖಗೋಳ ವಿಜ್ಞಾನಿ'' ಎಂಬುದು ವೈಜ್ಞಾನಿಕ ವೃತ್ತಿಯಲ್ಲಿ ಲೈಂಗಿಕ ಅಸಮಾನತೆ ಇರಕೂಡದು, ಅದನ್ನು ಸರಿಪಡಿಸಬೇಕು, ಕೂಡಲೇ ಸರಿಪಡಿಸಬೇಕು – ಎಂಬುದು ಐವೈಎ -೨೦೦೯ರ ಮತ್ತೊಂದು ಮೂಲಾಧಾರ ಚಟುವಟಿಕೆ. ಇದನ್ನು ಸ್ವಲ್ಪ ವಿಸ್ತರಿಸಿ ಅಲ್ಪಸಂಖ್ಯಾತರು ಮತ್ತು ದಲಿತರನ್ನೂ ಒಳಗೊಂಡಂತೆ ಮುಖ್ಯರಲ್ಲದ ಜನರನ್ನೂ ಇದರಲ್ಲಿ ಸೇರಿಸಬೇಕೆಂದು ಅನೇಕರು ಅಭಿಪ್ರಾಯಪಟ್ಟಿದ್ದಾರೆ. ಅಂದರೆ ಲೈಂಗಿಕ ಸಮಾನತೆಯ ಪ್ರಶ್ನೆಯನ್ನು ವಿಸ್ತರಿಸಿ ಎಲ್ಲರಿಗೂ ಸಮಾನತೆ ಲಭಿಸುವಂತೆ ಮಾಡುವ ಮೂಲಕ ಐವೈಎ - ೨೦೦೯ ಅಂತರರಾಷ್ಟ್ರೀಯ ಕಾರ್ಯಕ್ರಮಕ್ಕೆ ಭಾರತೀಯ ರಂಗು ನೀಡಿದಂತಾಗುತ್ತದೆ. ಆಗ ಇದು ವಿಶ್ವಸಂಸ್ಥೆಯ ಸಾವಿರ ವರ್ಷಗಳ ವಿಕಾಸ ಗುರಿಗಳಿಗೆ ಅನುಗುಣವಾಗಿರುವಂತೆಯೂ ಆಗುತದೆ. ಈ ಗುರಿಗಳಲಿ ಕೆಲವು ಇಂತಿವೆ. (೧) ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣ ಸಾಧಿಸಲು ನೆರವಾಗುವುದು; (೨) ತೀವ್ರತರ ಬಡತನ ಹಸಿವುಗಳನ್ನು ತೊಡೆದುಹಾಕಲು ನೆರವಾಗುವುದು; (೩) ಲೈಂಗಿಕ ಸಮಾನತೆಗೆ ಪ್ರೋತ್ಸಾಹಿಸಿ ಸ್ತ್ರೀಯರನ್ನು ಸಶಕ್ತಗೊಳಿಸುವುದು; (೪) ಸಾರ್ವತ್ರಿಕ ಬೆಳವಣಿಗೆಯಲ್ಲಿ ಇಡೀ ಜಗತ್ತಿನ ಸಹಭಾಗಿತ್ವವನ್ನು ವಿಕಾಸ ಗೊಳಿಸುವುದು

ಕೊನೆಯದಾಗಿ, ''ಸಂಖ್ಯೆ ಹೆಚ್ಚಾದಷ್ಟು ಪ್ರಭಾವ ಹೆಚ್ಚುತ್ತದೆ'' ಎಂಬ ಸಂದೇಶವನ್ನು ಕಡೆಗಣಿಸಲಾಗದು. ಸಾರ್ವತ್ರಿಕ ಗುರಿಸಾಧನೆಗಾಗಿ ಹೆಚ್ಚು ಜನರನ್ನು ಆಕರ್ಷಿಸಲು ಮೇಲೆ ತಿಳಿಸಿರುವ ಮೂಲಾಧಾರ ಚಟುವಟಿಕೆಗಳ ಜೊತೆಗೆ ''ತಾರಾಸಮರ (ಸ್ಟಾರ್ ವಾರ್ಸ್)ಗಳಲ್ಲಿ ನಕ್ಷತ್ರ ವೀಕ್ಷಣೆ (ಸ್ಟಾರ್ ವಾಚ್)'' ಎಂಬ ವಿಶ್ವಾದ್ಯಂತ ಎಲ್ಲ ಜನರ ಆಕಾಂಕ್ಷೆಯ ಮತ್ತೊಂದು ಮೂಲಾಧಾರ ಚಟುವಟಿಕೆಯನ್ನೂ ಸೇರಿಸುವುದು ತುಂಬ ಉಚಿತ. ಇದಕ್ಕೆ ಜಗತ್ತಿನಾದ್ಯಂತ ಎಲ್ಲ ಜನರೂ ಪ್ರತಿಕ್ರಿಯಿಸುವುದು ಖಂಡಿತ. ಭಾರತದಲ್ಲಿ ನಾವು ಇದಕ್ಕೆ ಮಾರ್ಗ ತೋರಬಲ್ಲೆವೇ ?

**ಡಾ॥ ಎಸ್. ಚಟರ್ಜಿ**
ಭಾರತೀಯ ಖಭೌತವಿಜ್ಞಾನ ಸಂಸ್ಥೆ, ಬೆಂಗಳೂರು
ಕನ್ನಡಕ್ಕೆ : **ಕೆ. ಎಲ್. ಗೋಪಾಲಕೃಷ್ಣರಾವ್**
೨೬೧, ೨ನೇ ಅಡ್ಡರಸ್ತೆ, ಪಿ. ಟಿ. ಬೆಡ್, ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್, ತ್ಯಾಗರಾಜನಗರ, ಬೆಂ. - ೨೮

With Best Compliments From

UNIVERSAL INK FACTORY

Mfg : Fine Quality Offset Printing Ink

# 25 (Old C-03), HMT Industrial Estate
I.A.F. Main Road, Jalahalli
BANGALORE - 560 013
Phone : 080-23309670



# ಮಾಹಿತಿ ಹಕ್ಕು : ಸಾಧಕ ಬಾಧಕಗಳು

ವೈ. ಜಿ. ಮುರಳೀಧರ

ಬಡತನ ರೇಖೆಗಿಂತ ಕೆಳಗಿನ ಮಹಿಳೆಯೊಬ್ಬಳು ತನ್ನ ಪಡಿತರ ಚೀಟಿಯನ್ನು ಒಂದು ನ್ಯಾಯ ಲೆ ಅಂಗಡಿಯಿಂದ ಮತ್ತೊಂದು ಅಂಗಡಿಗೆ ವರ್ಗಾಯಿಸಲು ಸ್ಥಳೀಯ ಆಹಾರ ಕಚೇರಿಗೆ ಅರ್ಜಿ ಲ್ಲಿಸುತ್ತಾಳೆ. ಆರು ತಿಂಗಳಾದರೂ ಈ ವರ್ಗಾವಣೆ ನಡೆಯುವುದಿಲ್ಲ. ಬೆಂಗಳೂರಿನ ಸ್ವಯಂ ಸೇವಾ ಂಸ್ಥೆಯ ಸಲಹೆ ಮೇರೆಗೆ ಮಾಹಿತಿ ಹಕ್ಕು ಕಾನೂನಿನ ಅನುಸಾರ ಕಚೇರಿಗೆ ಅರ್ಜಿ ಸಲ್ಲಿಸಿ ತಾನು ಯಸಿದ್ದ ಪಡಿತರ ಚೀಟಿ ವರ್ಗಾವಣೆ ಯಾವ ಹಂತದಲ್ಲಿದೆ ಎಂದು ಕೇಳುತ್ತಾಳೆ. ಯಾವುದೆ ಂಚವಿಲ್ಲದೆ ಎರಡೇ ದಿನದಲ್ಲಿ ಪಡಿತರ ಚೀಟಿಯನ್ನು ಮಹಿಳೆ ಕೇಳಿದ್ದ ನ್ಯಾಯ ಬೆಲೆ ಅಂಗಡಿಗೆ ರ್ಗಾಯಿಸಲಾಗುತ್ತದೆ.

ಸರ್ಕಾರಿ ಆಸ್ಪತ್ರೆಯಲ್ಲಿ ದೊರೆಯುವ ಸೌಲಭ್ಯಗಳು ಯಾವುವು ಹಾಗೂ ಅದಕ್ಕೆ ರೋಗಿಗಳು ೀಡಬೇಕಾದ ಶುಲ್ಕದ ಮೊತ್ತ ಎಷ್ಟು ಎಂಬ ಮಾಹಿತಿಯನ್ನು ನಾಮಫಲಕದಲ್ಲಿ ಪ್ರಕಟಿಸಬೇಕೆಂಬ ಯಮವಿದ್ದರೂ ಹಾಗೆ ಮಾಡಿರುವ ಆಸ್ಪತ್ರೆಗಳು ಬೆರಳೆಣಿಕೆಯಷ್ಟು. ಈ ಮಾಹಿತಿ ಕೇಳಿದರೂ ಅದನ್ನು ಯಾರೂ ಹೇಳುವುದಿಲ್ಲ. ಆದರೆ ರಾಣೇಬೆನ್ನೂರಿನ ಸಾಮಾಜಿಕ ಕಾರ್ಯಕರ್ತನೊಬ್ಬ ಮಾಹಿತಿ ಹಕ್ಕು ಕಾನೂನು ಅನ್ವಯ ಅರ್ಜಿ ಸಲ್ಲಿಸಿದ ಕೂಡಲೆ ಮಾಹಿತಿ ಬಹಿರಂಗವಾಗುತ್ತದೆ.

ಬೆಂಗಳೂರಿನ ಕಚೇರಿಯೊಂದರಲ್ಲಿ ಗುತ್ತಿಗೆ ಆಧಾರದ ಮೇಲೆ ಕೆಲಸಮಾಡುತ್ತಿರುವ ಕೆಲವು ನೌಕರರು ಮ್ಮ ಸಂಬಳದಲ್ಲಿ ಮುರಿದುಕೊಂಡು ಭವಿಷ್ಯ ನಿಧಿಗೆ ಪಾವತಿ ಮಾಡಿರುವ ಹಣದ ಮೊತ್ತ ಎಷ್ಟು ಎಂದು ಕೇಳಿದರೆ ಗುತ್ತಿಗೆದಾರ ಹೇಳುವುದಿಲ್ಲ. ಕಚೇರಿಯೂ ಈ ಮಾಹಿತಿ ನೀಡುವುದಿಲ್ಲ. ನೌಕರರು ಸ್ಥಳೀಯ ಭವಿಷ್ಯ ನಿಧಿ ಕಚೇರಿಗೆ ಮಾಹಿತಿ ಹಕ್ಕು ಕಾನೂನಿನ ಪ್ರಕಾರ ಅರ್ಜಿ ಸಲ್ಲಿಸಿದಾಗ ಗುತ್ತಿಗೆದಾರ ನೌಕರರ ಸಂಬಳದಿಂದ ಮುರಿದುಕೊಂಡ ಹಣದಲ್ಲಿ ಒಂದು ಪೈಸೆಯನ್ನೂ ನಿಧಿಗೆ ಪಾವತಿಸಿಲ್ಲ ಎಂಬ ಮಾಹಿತಿ ದೊರೆಯುತ್ತದೆ. ನೌಕರರೆಲ್ಲಾ ಸೇರಿ ಗುತ್ತಿಗೆದಾರನ ವಿರುದ್ಧ ದೂರು ಸಲ್ಲಿಸುತ್ತೇವೆಂದು ಕೇಳಿದಾಗ ಸಂಪೂರ್ಣ ಮೊತ್ತವನ್ನು ಕೂಡಲೆ ಭವಿಷ್ಯ ನಿಧಿಗೆ ಪಾವತಿಸಲು ಒಪ್ಪುತ್ತಾನೆ.

ರಾಜಕಾರಣಿಗಳ ಹಾಗೂ ಮಂತ್ರಿಗಳ ಸಾರ್ವಜನಿಕ ಸಮಾರಂಭಗಳಲ್ಲಿ ಜನಸಾಮಾನ್ಯರು ಭಾಗವಹಿಸುವುದು ಅಪರೂಪವಾದ್ದರಿಂದ ಶಾಲೆಯ ಮಕ್ಕಳನ್ನು ಕರೆತರುವಂತೆ ಅಧಿಕಾರಿಗಳಿಗೆ ಹಾಗೂ ಶಿಕ್ಷಕರಿಗೆ ಆದೇಶ ನೀಡಲಾಗುತ್ತದೆ. ಯಾವುದೇ ಸಂಬಂಧವಿಲ್ಲದಿದ್ದರೂ ಪುಟಾಣಿ ಮಕ್ಕಳು ಬಿಸಿಲಿರಲಿ ಮಳೆಯಿರಲಿ ಈ ನೇತಾರರ ಆಗಮನಕ್ಕೆ ಕಾಯಬೇಕು. ಅವರ ಕೆಟ್ಟ ಭಾಷಣ ಕೇಳಬೇಕು. ಈ ಸಭೆಗಳಲ್ಲಿ ಅದೆಷ್ಟೋ ಮಕ್ಕಳು ಬಳಲಿ ಆಯಾಸ ತಡೆಯಲಾಗದೆ ಆಸ್ಪತ್ರೆ ಸೇರಿರುವ ಪ್ರಸಂಗವೂ ಇದೆ. ಶಿರ್ಸಿಯ ಗ್ರಾಹಕ ಹಕ್ಕು ಕಾರ್ಯಕರ್ತರೊಬ್ಬರು ಮಾಹಿತಿ ಹಕ್ಕು ಕಾನೂನು ಅನ್ವಯ ಅರ್ಜಿ ಸಲ್ಲಿಸಿ ಶಾಲೆಯ ಮಕ್ಕಳನ್ನು ಸಭೆ ಸಮಾರಂಭಗಳಿಗೆ ಕರೆತರುವ ಯಾವುದಾದರೂ ನಿಯಮ ಅಥವಾ ಸರ್ಕಾರಿ ಆದೇಶ ಇದೆಯೇ ಎಂದು ಮಾಹಿತಿ ಹಕ್ಕು ಕಾನೂನಿನ ಪ್ರಕಾರ ಕೇಳಿದ ಕೂಡಲೆ ಉತ್ತರ ದೊರೆಯದಿದ್ದರೂ ಮಕ್ಕಳನ್ನು ಸಭೆಗೆ ಕರೆತರುವ ಪರಿಪಾಠ ನಿಲ್ಲುತ್ತದೆ.

ಇದು ಮಾಹಿತಿ ಹಕ್ಕು ಕಾನೂನು ನಿಧಾನವಾಗಿ ಸದ್ದುಗದ್ದಲವಿಲ್ಲದೆ ಮಾಡುತ್ತಿರುವ ಸಾಮಾಜಿಕ ಇಲ್ಲವೆ ಆಡಳಿತಾತ್ಮಕ ಸುಧಾರಣೆ. ಸರ್ಕಾರಿ ಕಚೇರಿಗಳಲ್ಲಿ ಹಾಗೂ ಸಾರ್ವಜನಿಕ ಪ್ರಾಧಿಕಾರಗಳಲ್ಲಿ ತಾಂಡವವಾಡುತ್ತಿರುವ ಭ್ರಷ್ಟಾಚಾರ, ಅದಕ್ಷತೆ, ಅನಾವಶ್ಯಕ ಗೌಪ್ಯತೆ, ವಿಳಂಬ, ಸಾರ್ವಜನಿಕ ಹಣದ ದುರುಪಯೋಗ ಮುಂತಾದ ಅನೇಕ ರೀತಿಯ ಸಮಸ್ಯೆಗಳನ್ನು ತೊಡೆದುಹಾಕಲು ಮಾಹಿತಿ ಹಕ್ಕು ಸಹಾಯಕವಾಗಿದೆ. ಆದರೆ ಮಾಹಿತಿ ಕಾನೂನಿನ ಉದ್ದೇಶ ಇಷ್ಟಕ್ಕೆ ಸೀಮಿತವಾಗಬಾರದು. ಈ ಸೀಮಿತ ರೇಖೆಯನ್ನು ಮೀರಿ ಬೆಳೆಯಬೇಕಾಗಿದೆ. ಒಟ್ಟಾರೆ ಸಮಾಜದ ಅಭ್ಯುದಯಕ್ಕೆ ಈ ಕಾನೂನನ್ನು ಬಳಸಬೇಕಾಗಿದೆ. ಪದೇ ಪದೇ ಸಮಸ್ಯೆಗಳು ಬಾರದಂತೆ ಆಡಳಿತವನ್ನು ಸುಧಾರಿಸುವ ನಿಟ್ಟಿನಲ್ಲಿ ಈ ಕಾನೂನನ್ನು ಬಳಸಬೇಕಿದೆ.

ಸ್ವತಂತ್ರ ಭಾರತ ಕಂಡ ಅನೇಕ ಕಾನೂನುಗಳಲ್ಲಿ ಮಾಹಿತಿ ಹಕ್ಕು ಕಾನೂನು ಬಹುಮುಖ್ಯವಾದ ಹಾಗೂ ನಾಗರಿಕ ಸ್ನೇಹಿಯಾದ ಕಾನೂನು ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಸಾರ್ವಜನಿಕ ಆಡಳಿತದಲ್ಲಿ ಪಾರದರ್ಶಕತೆ ಉಂಟುಮಾಡುವುದು, ಭ್ರಷ್ಟಾಚಾರಕ್ಕೆ ಕಡಿವಾಣ ಹಾಕುವುದು, ನಾಗರಿಕರಿಗೆ ಸುಲಭವಾಗಿ ಮಾಹಿತಿ ದೊರೆಯುವ ವ್ಯವಸ್ಥೆ ಕಲ್ಪಿಸುವುದು ಹಾಗೂ ನಾಗರಿಕರು ಆಡಳಿತದಲ್ಲಿ ಸಕ್ರಿಯವಾಗಿ ಭಾಗವಹಿಸಲು ಅನುವು ಮಾಡಿಕೊಡುವುದು ಮಾಹಿತಿ ಹಕ್ಕು ಕಾನೂನಿನ ಉದ್ದೇಶ. ಜಾರಿಗೆ ಬಂದ ಕೆಲವೆ ದಿನಗಳಲ್ಲಿ ಈ ಕಾನೂನು ಜನಪ್ರಿಯತೆ ಗಳಿಸಿ ಶ್ರೀಸಾಮಾನ್ಯನ ಅನೇಕ ಸಂಕಷ್ಟಗಳಿಗೆ ಪರಿಹಾರ ನೀಡುವಲ್ಲಿ ಯಶಸ್ವಿಯಾಗಿದೆ. ಹಾಗೆಯೇ ಕಾನೂನಿನ ಅನುಷ್ಠಾನದಲ್ಲಿ ಸಾಕಷ್ಟು ಲೋಪದೋಷಗಳು ಕಂಡುಬಂದಿವೆ.

ಮಾಹಿತಿ ಹಕ್ಕು ಕಾನೂನು ನಾಗರಿಕರಿಗೆ ಎರಡು ರೀತಿಯಲ್ಲಿ ಮಾಹಿತಿ ಒದಗಿಸುವ ವ್ಯವಸ್ಥೆ ಹೊಂದಿದೆ. ಯಾವ ಇಲಾಖೆ, ಸಂಸ್ಥೆ

ಮಾಹಿತಿ ಹಕ್ಕು ಈಗ ಜನರ ಕೈಸೇರಿದೆ. ಇದೊಂದು ಪ್ರಬಲವಾದ ಅಸ್ತ್ರ ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ ಇದನ್ನು ಹೇಗೆ, ಎಲ್ಲಿ, ಯಾವ ಕಾರಣಕ್ಕೆ ಬಳಸಬೇಕು ಎಂಬುದರ ಬಗ್ಗೆ ನಾಗರಿಕರಲ್ಲಿ ಅರಿವು ಮೂಡಿಸುವ ಕೆಲಸ ಆಗಬೇಕಿದೆ. ಜೊತೆಗೆ, ಪಡೆದ ಮಾಹಿತಿಯನ್ನು ಹೇಗೆ ಬಳಸಿಕೊಳ್ಳಬೇಕು ಎಂಬುದರ ಬಗ್ಗೆಯೂ ಜನರಿಗೆ ತಿಳಿಸುವ ಅಗತ್ಯವಿದೆ. ಆಗ ಮಾತ್ರ ಮಾಹಿತಿ ಕಾನೂನಿನ ಫಲ ಸಮಾಜಕ್ಕೆ ದೊರೆಯಲಿದೆ.

ಕಚೇರಿ ಇತ್ಯಾದಿಗೆ ಕಾನೂನು ಅನ್ವಯವಾಗುತ್ತದೋ ಅದನ್ನು ಸಾರ್ವಜನಿಕ ಪ್ರಾಧಿಕಾರ ಎಂದು ಕರೆಯಲಾಗಿದೆ. ಪ್ರತಿಯೊಂದು ಸಾರ್ವಜನಿಕ ಪ್ರಾಧಿಕಾರವೂ ಸ್ವಯಂಪ್ರೇರಿತವಾಗಿ ಕೆಲವೊಂದು ಮಾಹಿತಿ ಪ್ರಕಟಿಸಬೇಕು. ನಾಗರಿಕರು ಅರ್ಜಿ ಸಲ್ಲಿಸದಿದ್ದರೂ ಈ ಕನಿಷ್ಠ ಮಾಹಿತಿ ಅವರಿಗೆ ದೊರೆಯುವಂತಿರಬೇಕು. ಉದಾಹರಣೆಗೆ, ಪ್ರಾಧಿಕಾರದ ಹೆಸರು, ವಿಳಾಸ, ಅದರ ಕೆಲಸ, ಅಧಿಕಾರಿಗಳ ಅಧಿಕಾರ ಹಾಗೂ ಜವಾಬ್ದಾರಿ, ಅವರಿಗೆ ದೊರೆಯುತ್ತಿರುವ ಸಂಬಳ, ಭತ್ಯೆ ಇತ್ಯಾದಿ, ಯೋಜನೆಗಳ ಅನುಷ್ಠಾನ, ಅದಕ್ಕೆ ಸರ್ಕಾರದಿಂದ ಬಂದಿರುವ ಸಹಾಯ ಧನ, ನಿರ್ಧಾರ ಕೈಗೊಳ್ಳುವ ರೀತಿ, ಮಾಹಿತಿ ಅಧಿಕಾರಿಗಳ ಹೆಸರು, ಹುದ್ದೆ, ದೂರವಾಣಿ ಇತ್ಯಾದಿ ಪ್ರಕಟಿಸಬೇಕು. ಜೂನ್ 15, 2005ರಿಂದ 120 ದಿನಗಳಲ್ಲಿ ಈ ಮಾಹಿತಿ ಪ್ರಕಟವಾಗಬೇಕಿತ್ತು ಹಾಗೂ ಅದನ್ನು ವೆಬ್‌ಸೈಟ್‌ನಲ್ಲಿ ಅಳವಡಿಸಬೇಕಿತ್ತು. ಆದರೆ ಮೂರು ವರ್ಷವಾದರೂ ಬಹುತೇಕ ಪ್ರಾಧಿಕಾರಗಳು ಈ ಕೆಲಸ ಮಾಡಿಲ್ಲ. ಈ ಬಗ್ಗೆ ಸಾಕಷ್ಟು ದೂರುಗಳು ದಾಖಲಾಗಿದ್ದರೂ ಸುಧಾರಣೆ ಕಂಡುಬಂದಿಲ್ಲ.

ಕಾನೂನಿನ ನಿಯಮದ ಪ್ರಕಾರ ಸಾರ್ವಜನಿಕ ಪ್ರಾಧಿಕಾರಗಳು ಸಾರ್ವಜನಿಕ ಮಾಹಿತಿ ಅಧಿಕಾರಿಗಳು, ಸಹಾಯಕ ಮಾಹಿತಿ ಅಧಿಕಾರಿಗಳು ಹಾಗೂ ಮೇಲ್ಮನವಿ ಅಧಿಕಾರಿಗಳನ್ನು ನೇಮಕ ಮಾಡಬೇಕು. ಅಲ್ಲದೆ ಇವರ ವಿವರವನ್ನು ಕಚೇರಿಯ ನಾಮಫಲಕದಲ್ಲಿ ಪ್ರದರ್ಶಿಸಬೇಕು. ಈ ಕೆಲಸವೂ ಸಮರ್ಪಕವಾಗಿ ನಡೆದಿಲ್ಲ. ಬೆಂಗಳೂರಿನ ಕ್ರಿಯೇಟ್ ಎಂಬ ಸಂಸ್ಥೆ ಅಕ್ಟೋಬರ್ 2007ರಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ 400 ಪ್ರಾಧಿಕಾರಗಳಲ್ಲಿ 290 ಪ್ರಾಧಿಕಾರಗಳು ನಾಮಫಲಕದಲ್ಲಿ ವಿವರ ಪ್ರದರ್ಶಿಸಿರಲಿಲ್ಲ. ಈಗಲೂ ಪರಿಸ್ಥಿತಿ ಸುಧಾರಿಸಿಲ್ಲ. ಇದು ಕರ್ನಾಟಕದ ಕಥೆಯಲ್ಲ. ಇಡೀ ದೇಶದ ಕಥೆ.

ಕಾನೂನಿನ ಪ್ರಕಾರ ಮಾಹಿತಿ ಪಡೆಯುವುದು ಬಹಳ ಸುಲಭದ ಕೆಲಸ. ಮಾಹಿತಿ ಅಗತ್ಯವಿರುವವರು ಬಿಳಿ ಹಾಳೆಯ ಮೇಲೆ ಅರ್ಜಿ ಬರೆದು, ಹತ್ತು ರೂಪಾಯಿ ಅರ್ಜಿ ಶುಲ್ಕ ಪಾವತಿಸಿದರೆ ಮೂವತ್ತು ದಿನದಲ್ಲಿ ಕೇಳಿದ ಮಾಹಿತಿ ನೀಡಲಾಗುತ್ತದೆ. ಆದರೆ ವಾಸ್ತವ ಪರಿಸ್ಥಿತಿ ಹಾಗಿಲ್ಲ. ಪ್ರಥಮವಾಗಿ ಕಚೇರಿಯಲ್ಲಿ ಮಾಹಿತಿ ಅಧಿಕಾರಿ ಯಾರು, ಯಾರಿಗೆ ಅರ್ಜಿ ಸಲ್ಲಿಸಬೇಕು ಇತ್ಯಾದಿ ವಿವರ ಸಾರ್ವಜನಿಕರಿಗೆ ತಿಳಿಸುವ ಕೆಲಸ ಆಗಿಲ್ಲ. ಒಂದು ವೇಳೆ ಮಾಹಿತಿ ಅಧಿಕಾರಿ ಇದ್ದರೂ ಅರ್ಜಿದಾರರು ಹೋದ ಸಮಯದಲ್ಲಿ ಅವರು ಅಲ್ಲಿರುವುದಿಲ್ಲ. ಅರ್ಜಿಯನ್ನು ತಿರಸ್ಕರಿಸಿರುವ ಪ್ರಕರಣಗಳೂ ಇವೆ. ಮಾಹಿತಿ ನೀಡುವುದು ತಮ್ಮ ಕರ್ತವ್ಯ ಎಂದು ತಿಳಿದಿರುವ ಅಧಿಕಾರಿಗಳು ವಿರಳ. ಮಾಹಿತಿ ನೀಡುವುದರಿಂದ ನಾಗರಿಕರಿಗೆ ತಾವು ಸಹಾಯ ಮಾಡುತ್ತಿದ್ದೇವೆ ಎಂಬ ಧೋರಣೆ ಇರುವವರೆ ಹೆಚ್ಚು. ಅರ್ಜಿ ಶುಲ್ಕದ ವಿಷಯದಲ್ಲೂ ನಾಗರಿಕರು ಇದೇ ರೀತಿ ಅಡೆತಡೆಗಳನ್ನು ಎದುರಿಸಬೇಕಾಗಿದೆ. ಶುಲ್ಕವನ್ನು ನಗದು, ಡಿಡಿ, ಪೋಸ್ಟಲ್ ಆರ್ಡರ್, ಅಥವಾ ಎಂ.ಓ. ಮೂಲಕ ಪಾವತಿಸಬಹುದೆಂಬ ನಿಯಮವಿದ್ದರೂ ಅಧಿಕಾರಿಗಳು ನಗದು ಹಣದ ಮೂಲಕವೇ ಪಾವತಿಸಬೇಕೆಂದು ಒತ್ತಾಯಿಸುವ ಅನೇಕ ದೂರುಗಳು ಮಾಹಿತಿ ಆಯೋಗದಲ್ಲಿ ದಾಖಲಾಗಿವೆ. ರಾಜ್ಯ, ಜಿಲ್ಲೆ, ತಾಲ್ಲೂಕು ಹಾಗೂ ಗ್ರಾಮ ಮಟ್ಟದಲ್ಲಿರುವ ಎಲ್ಲ ಮಾಹಿತಿ ಅಧಿಕಾರಿಗಳ ಪಟ್ಟಿ (ಡೈರೆಕ್ಟರಿ) ಅವಶ್ಯಕವಾಗಿದ್ದು ಕೂಡಲೆ ಸರ್ಕಾರ ಅದರ ಪ್ರಕಟಣೆಗೆ ಕ್ರಮ ಕೈಗೊಳ್ಳಬೇಕು.

ಮಾಹಿತಿ ಹಕ್ಕು ಕಾನೂನಿನ ಪ್ರಕಾರ ಅರ್ಜಿ ಶುಲ್ಕ ದುಬಾರಿಯಾಗಿರಬಾರದು. ಬಹುತೇಕ ರಾಜ್ಯಗಳಲ್ಲಿ ಅರ್ಜಿ ಶುಲ್ಕ ರೂ.10 ಎಂದು ನಿಗದಿಪಡಿಸಲಾಗಿದೆ. ಆದರೆ ಕೆಲವೊಂದು ರಾಜ್ಯಗಳ ಹೈಕೋರ್ಟುಗಳು ರೂ.400-500 ಎಂದು ನಿಗದಿಗೊಳಿಸಿವೆ. ಇದರಿಂದ ಹಲವಾರು ನಾಗರಿಕರು ಮಾಹಿತಿ ಹಕ್ಕು ಕಾನೂನು ಬಳಸದೆ ವಂಚಿತರಾಗಿದ್ದಾರೆ. ದೇಶಾದ್ಯಂತ ಏಕರೂಪ ಶುಲ್ಕ ವಿಧಿಸುವ ಅಗತ್ಯವಿದೆ. ಇದಕ್ಕಾಗಿ ಸೂಕ್ತ ತಿದ್ದುಪಡಿ ತರಬೇಕಿದೆ. ಬಡತನ ರೇಖೆಗಿಂತ ಕೆಳಗಿರುವ ನಾಗರಿಕರು ಮಾಹಿತಿ ಪಡೆಯಲು ಯಾವುದೇ ಶುಲ್ಕ ಅಥವಾ ಹೆಚ್ಚುವರಿ ಶುಲ್ಕ ನೀಡಬೇಕಿಲ್ಲ ಎಂದು ಕಾನೂನು ಹೇಳುತ್ತದೆ. ಆದರೆ ಕೆಲವು ನಾಗರಿಕರು ಈ ಸೌಲಭ್ಯವನ್ನು ದುರುಪಯೋಗಪಡಿಸಿಕೊಂಡ ಕಾರಣ ಕರ್ನಾಟಕವೂ ಸೇರಿದಂತೆ ಕೆಲವು ರಾಜ್ಯಗಳು ನಿಯಮಕ್ಕೆ ತಿದ್ದುಪಡಿ ಮಾಡಿ, ಕೇಳುವ ಮಾಹಿತಿ 100 ಪುಟಗಳಿಗಿಂತ ಹೆಚ್ಚಾಗಿದ್ದಲ್ಲಿ


With Best Compliments From



VINAYAKA BOOK DISTRIBUTORS

Wholesalers of Best Selling fiction,
Non-fiction, Furniture, Cookery, Comics,
Fashion, Children's & General Books

# 49, 1st Floor, St. John's Road, Bangalore - 560 042 © 25574184 Fax : 25574420

ದಕ್ಕೆ ಇತರೆ ಸಾಮಾನ್ಯ ನಾಗರಿಕರಂತೆ ಶುಲ್ಕ
ಾವತಿಸಬೇಕೆಂದು ಆದೇಶ ನೀಡಿದೆ.

ಕಾನೂನಿನ ಪ್ರಕಾರ ನಾಗರಿಕರು ಒಂದು ರ್ಜಿಯಲ್ಲಿ ಇಂತಿಷ್ಟು ಮಾಹಿತಿ ಕೇಳಬೇಕೆಂಬ ರ್ಬಂಧ ಹೇರುವಂತಿಲ್ಲ. ಅಥವಾ ಕೇಳುವ ್ರಶ್ನೆಯನ್ನು ಪದಗಳಿಗೆ ಮಿತಿಗೊಳಿಸುವಂತಿಲ್ಲ. ಆದರೆ ಲವೇ ನಾಗರಿಕರು ಪುಟಗಟ್ಟಲೆ ಮಾಹಿತಿ ಕೇಳಿದ ಧಾರದ ಮೇಲೆ ಕರ್ನಾಟಕ ಸರ್ಕಾರವು ಆಯೋಗದ ೂಚನೆಯ ಮೇರೆಗೆ ನಿಯಮವನ್ನು ಬದಲಿಸಿದೆ. ಈಗ ಾಜ್ಯದಲ್ಲಿ ನಾಗರಿಕರು ಒಂದು ಅರ್ಜಿಯಲ್ಲಿ ಒಂದು ್ರಶ್ನೆಗಿಂತ ಹೆಚ್ಚಿನ ಪ್ರಶ್ನೆ ಕೇಳುವಂತಿಲ್ಲ. ಹಾಗೂ ಕೇಳುವ ್ರಶ್ನೆ 150 ಪದಗಳಿಗೆ ಮೀರುವಂತಿಲ್ಲ. ನಾಗರಿಕರ ಮಾಹಿತಿ ಹಕ್ಕಿಗೆ ಹಾಕಿರುವ ತಡೆ ಇದು.

ಕೇಳಿರುವ ಮಾಹಿತಿ ವಿನಾಯಿತಿ ಪಡೆಯದಿದ್ದಲ್ಲಿ ದನ್ನು ಅರ್ಜಿದಾರರಿಗೆ ನೀಡಲು ಇರುವ ವಾಯ್ದೆ ) ದಿನಗಳು. ಜೀವಕ್ಕೆ ಅಪಾಯವಿರುವ ಮಾಹಿತಿ ಯಾದರೆ ಅದನ್ನು 48 ಗಂಟೆಗಳಲ್ಲಿ ಒದಗಿಸಬೇಕು. ೂರನೆ ವ್ಯಕ್ತಿಗೆ ಸಂಭಂದಪಟ್ಟ ಮಾಹಿತಿಯಾದರೆ ದನ್ನು ಒದಗಿಸಲು ಇರುವ ಕಾಲಾವಕಾಶ 40 ದಿನಗಳು. ಸಹಾಯಕ ಮಾಹಿತಿ ಧಿಕಾರಿಗೆ ಅರ್ಜಿ ಸಲ್ಲಿಸಿದ್ದರೆ ಮಾಹಿತಿ ಒದಗಿಸಲು 35 ದಿನಗಳ ಕಾಲಾವಕಾಶವಿದೆ. ಮಾಹಿತಿ ಅಧಿಕಾರಿಗಳು ಈ ವೇಳಾಪಟ್ಟಿ ಅನುಸರಿಸದಿದ್ದರೆ ಅವರಿಗೆ ದಂಡ ಧಿಸುವ ನಿಯಮವೂ ಕಾನೂನಿನಲ್ಲಿದೆ. ಮಾಹಿತಿ ನೀಡುವಲ್ಲಿ ಅನಾವಶ್ಯಕ ಳಂಬವಾದರೆ ಪ್ರತಿ ದಿನದ ವಿಳಂಬಕ್ಕೆ ರೂ. 250 ದಂಡ ತೆರಬೇಕಾಗುತ್ತದೆ. ಲ್ಲಿ ಗಮನಿಸಬೇಕಾದ ವಿಷಯವೆಂದರೆ ದಂಡದ ಮೊತ್ತವನ್ನು ಮಾಹಿತಿ ಧಿಕಾರಿ ತನ್ನ ಸ್ವಂತ ಹಣದಿಂದ ನೀಡಬೇಕು. ಇಲ್ಲವೆ ಅವರ ಸಂಬಳದಿಂದ ುರಿದುಕೊಳ್ಳಲಾಗುತ್ತದೆ. ದಂಡದ ಗರಿಷ್ಠ ಮೊತ್ತ ರೂ. 25000. ಇದರ ಜೊತೆಗೆ ಮಾಹಿತಿ ನೀಡದಿದ್ದಲ್ಲಿ ಶಿಸ್ತಿನ ಕ್ರಮಕ್ಕೆ ಒಳಗಾಗುವ ಸಾಧ್ಯತೆಯೂ ಇದೆ. ಮಾಹಿತಿ ನೀಡುವಲ್ಲಿ ವಿಳಂಬವಾದರೆ ಯಾವುದೆ ಶುಲ್ಕ ಕಟ್ಟಿಸಿಕೊಳ್ಳದ ಮಾಹಿತಿಯನ್ನು ಉಚಿತವಾಗಿ ನೀಡಬೇಕಾಗುತ್ತದೆ. ಈಗಾಗಲೆ ಹಲವಾರು ಮಾಹಿತಿ ಧಿಕಾರಿಗಳು ದಂಡ ತೆತ್ತಿದ್ದಾರೆ. ಇತ್ತೀಚಿನ ಪ್ರಕರಣವೊಂದರಲ್ಲಿ ಸಿಐಜಿಯ ಮಾಹಿತಿ ಧಿಕಾರಿಯೊಬ್ಬರು ಒಂದೇ ತಿಂಗಳಲ್ಲಿ ಎರಡು ಬಾರಿ ರೂ.25000 ದಂಡ ಕಿಸಿಕೊಂಡಿದ್ದಾರೆ. ಕರ್ನಾಟಕದಲ್ಲಿ ಇಲ್ಲಿಯವರೆಗೆ ಸುಮಾರು 120 ಅಧಿಕಾರಿಗಳು ಂಡ ಪಾವತಿಸಿದ್ದಾರೆ.

ಮಾಹಿತಿ ಅಧಿಕಾರಿ ಯಾವುದೆ ಜವಾಬು ನೀಡದಿದ್ದರೆ, ಮಾಹಿತಿ ನೀಡುವಲ್ಲಿ ಳಂಬವಾದರೆ, ಸುಳ್ಳು ಮಾಹಿತಿ ನೀಡಿದರೆ, ಅಪೂರ್ಣ ಮಾಹಿತಿ ನೀಡಿದರೆ ಅಥವಾ ಸಮರ್ಪಕ ಶುಲ್ಕ ಕೇಳಿದರೆ, ಅರ್ಜಿದಾರರು ಎರಡು ರೀತಿಯಲ್ಲಿ ತಮ್ಮ ಸಮಸ್ಯೆಗೆ ರಿಹಾರ ಕಂಡುಕೊಳ್ಳಬಹುದು. ಪ್ರಥಮವಾಗಿ ಪ್ರಾಧಿಕಾರದಲ್ಲಿ ನೇಮಕ ೂಂಡಿರುವ ಮೊದಲನೆ ಹಂತದ ಮೇಲ್ಮನವಿ ಅಧಿಕಾರಿಯಲ್ಲಿ ಅಪೀಲ್ ಲ್ಲಿಸಬಹುದು. ಅಥವಾ ನೇರವಾಗಿ ರಾಜ್ಯ ಇಲ್ಲವೆ ಕೇಂದ್ರ ಮಾಹಿತಿ ಆಯೋಗದಲ್ಲಿ ೂರು ಸಲ್ಲಿಸಬಹುದು. ಸಾಧ್ಯವಾದ ಮಟ್ಟಿಗೆ ಇಲಾಖೆಯ ಅಪೀಲ್ ಅಧಿಕಾರಿ ುವರಲ್ಲಿ ಅಪೀಲ್ ದಾಖಲಿಸುವುದು ಉತ್ತಮ. ಕೆಲವೊಂದು ದೂರುಗಳಿಗೂ ಮಾಹಿತಿ ಆಯೋಗದ ಮೊರೆ ಹೋಗಬಹುದು. ಉದಾಹರಣೆಗೆ ಅರ್ಜಿ ್ವೀಕರಿಸಲು ಅಧಿಕಾರಿಗಳು ನಿರಾಕರಿಸಿದರೆ, ಅರ್ಜಿ ಪಡೆಯಲು ಕಚೇರಿಯಲ್ಲಿ ಯಾರೂ ಇಲ್ಲದಿದ್ದರೆ ಅಥವಾ ನಿಯಮಕ್ಕಿಂತ ಹೆಚ್ಚಿನ ಶುಲ್ಕ ಕೇಳಿದರೆ, ರ್ಜಿದಾರರು ಆಯೋಗದಲ್ಲಿ ದೂರು ಸಲ್ಲಿಸಬಹುದು. ಮೇಲ್ಮನವಿ ಪ್ರಾಧಿಕಾರ ಾಗೂ ಮಾಹಿತಿ ಆಯೋಗ ಇಂತಿಷ್ಟು ದಿನಗಳಲ್ಲಿ ಅರ್ಜಿ ಇತ್ಯರ್ಥ ಮಾಡ ೇಕೆಂದು ನಿಯಮ ಹೇಳುತ್ತದೆ. ಆದರೆ ಈಗಾಗಲೆ ಮಾಹಿತಿ ಆಯೋಗಗಳು ಿಲ್ ನ್ಯಾಯಾಲಯದಂತೆ ಪರಿವರ್ತನೆಗೊಂಡಿವೆ. ಮೇಲ್ಮನವಿ ವಿಚಾರಣೆಗೆ ಂದು ಅರ್ಜಿದಾರರಿಗೆ ಮಾಹಿತಿ ಸಿಗುವ ವೇಳೆಗೆ 5ರಿಂದ 6 ತಿಂಗಳಾಗುತ್ತಿದೆ. ಲವಾರು ಪ್ರಕರಣಗಳಲ್ಲಿ ಮಾಹಿತಿ ಅಧಿಕಾರಿಗಳು ವಿಚಾರಣೆಗೆ ಹಾಜರಾಗುತ್ತಿಲ್ಲ.



ಇದು ನಮ್ಮ ಪ್ರಸಂಗ ಕಣ್ರೀ! ಬಾಂಬ್, ಪಿಸ್ತೂಲ್‌ಗಳೇ ನಮಗೆ ಆಯುಧಗಳು!

ಬದಲಾಗಿ ಕಚೇರಿಯ ಗುಮಾಸ್ತರನ್ನು ಕಳುಹಿಸುತ್ತಿದ್ದಾರೆ. ಆಯೋಗದ ಆದೇಶ ಪಾಲನೆ ಮಾಡದಿದ್ದರೆ ಅದರ ಪರಿಣಾಮ ಏನು ಎಂಬುದು ಇನ್ನೂ ಇತ್ಯರ್ಥವಾಗಿಲ್ಲ. ಹೀಗಾಗಿ ಹಲವಾರು ಮೇಲ್ಮನವಿಗಳು ನೆನೆಗುದಿಗೆ ಬಿದ್ದಿವೆ.

ಮಾಹಿತಿ ಕಾನೂನನ್ನು ಬಳಸಿ ಎಲ್ಲ ಮಾಹಿತಿಯನ್ನೂ ಪಡೆಯಲಾಗುವುದಿಲ್ಲ. ಕೆಲವೊಂದು ವಿನಾಯಿತಿಯನ್ನು ಕಾನೂನಿನಲ್ಲೇ ಉಲ್ಲೇಖಿಸಲಾಗಿದೆ. ಅದರಂತೆ ಯಾವ ಮಾಹಿತಿಗೆ ವಿನಾಯಿತಿ ಇದೆಯೋ ಅದನ್ನು ನೀಡಲಾಗುವುದಿಲ್ಲ. ಉದಾಹರಣೆಗೆ ದೇಶದ ಸುಭದ್ರತೆಗೆ ಧಕ್ಕೆ ತರುವ ಮಾಹಿತಿ, ಬೌದ್ಧಿಕ ಆಸ್ತಿ ಹಕ್ಕು, ವ್ಯವಹಾರದ ಗುಟ್ಟು, (ಟ್ರೇಡ್ ಸೀಕ್ರೆಟ್), ವೈಯಕ್ತಿಕ ಮಾಹಿತಿ ಇತ್ಯಾದಿ ನೀಡಲಾಗುವುದಿಲ್ಲ. ಯಾವ ಮಾಹಿತಿಯನ್ನು ನೀಡುವುದರಿಂದ ತನಿಖಾ ಪ್ರಕ್ರಿಯೆಗೆ ಧಕ್ಕೆ ಉಂಟಾಗುತ್ತದೋ ಅದನ್ನು ಸಹ ನೀಡಲಾಗುವುದಿಲ್ಲ. ಹಾಗೆಯೇ ಯಾವ ಮಾಹಿತಿ ನೀಡುವುದರಿಂದ ಮತ್ತೊಬ್ಬರ ಜೀವಕ್ಕೆ ಅಪಾಯ ಹಾಗೂ/ಇಲ್ಲವೆ ಸಾರ್ವಜನಿಕ ಆಸ್ತಿಪಾಸ್ತಿಗೆ ಹಾನಿ ಉಂಟಾಗುತ್ತದೋ ಆ ಮಾಹಿತಿಯನ್ನು ನಿರಾಕರಿಸಬಹುದಾಗಿದೆ. ನಾಗರಿಕರು ಕೇಳುವ ಮಾಹಿತಿಯಿಂದ ಯಾವುದೆ ಸಾರ್ವಜನಿಕ ಹಿತ ಸಾಧಿಸಲಾಗುವುದಿಲ್ಲ ಎಂದಾದರೆ ಆ ಮಾಹಿತಿಯನ್ನೂ ನಿರಾಕರಿಸಬಹುದಾಗಿದೆ. ಕೆಲವೊಮ್ಮೆ ಮಾಹಿತಿ ನೀಡುವುದಕ್ಕಾಗಿ ಸಾರ್ವಜನಿಕ ಪ್ರಾಧಿಕಾರದ ಸಂಪನ್ಮೂಲ ವ್ಯರ್ಥವಾಗುತ್ತದೆ ಎಂದಾದರೆ ಅದನ್ನೂ ನಿರಾಕರಿಸಬಹುದಾಗಿದೆ. ಆದರೆ ಯಾವ ಕಾರಣಕ್ಕಾಗಿ ಮಾಹಿತಿ ನಿರಾಕರಿಸಲಾಗಿದೆ ಎಂಬುದನ್ನು ಸ್ಪಷ್ಟಪಡಿಸುವುದು ಮಾಹಿತಿ ಅಧಿಕಾರಿಯ ಜವಾಬ್ದಾರಿ. ಹಾಗೂ ಇದರ ಬಗ್ಗೆ ವಿಚಾರಣೆ ಸಮಯದಲ್ಲಿ ಅದನ್ನು ಸಮರ್ಥಿಸಿಕೊಳ್ಳುವುದು ಮಾಹಿತಿ ಅಧಿಕಾರಿಗೆ ಬಿಟ್ಟಿದ್ದು.

ಮಾಹಿತಿ ಕಾನೂನಿನ ವೈಶಿಷ್ಟ್ಯವೆಂದರೆ ಅದು ಸರ್ಕಾರದಿಂದ ಹಣ ಪಡೆದ ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳಿಗೆ ಅನ್ವಯಿಸುವುದು. ಸರ್ಕಾರದ ಹಲವಾರು ಇಲಾಖೆಗಳು ನಾನಾ ರೀತಿಯ ಕಾರ್ಯಕ್ರಮಗಳನ್ನು ಸರ್ಕಾರೇತರ ಸಂಸ್ಥೆಗಳ ಮೂಲಕ ಕೈಗೊಳ್ಳುತ್ತವೆ. ಆದಕ್ಕಾಗಿ ಹಣ, ಅನುದಾನ ಇತ್ಯಾದಿ ಬಿಡುಗಡೆ ಮಾಡುತ್ತವೆ. ಸಂಸ್ಥೆಯು ಸಾರ್ವಜನಿಕ ಹಣ ವೆಚ್ಚ ಮಾಡುವುದರಿಂದ ಅದರ ಬಗ್ಗೆ ಮಾಹಿತಿ ಕೇಳುವುದು ನಾಗರಿಕರ ಹಕ್ಕು. ಯಾವ ಇಲಾಖೆ ಹಣ ನೀಡುತ್ತದೋ ಆ ಇಲಾಖೆ ಹಣ ಪಡೆದಿರುವ, ಇಲ್ಲಾ ಸರ್ಕಾರೇತರ ಸಂಸ್ಥೆಗಳ ಪಟ್ಟಿಯನ್ನು ಬಿಡುಗಡೆ ಮಾಡಿ ಮಾಹಿತಿ ಅಧಿಕಾರಿಯನ್ನು ನೇಮಕ ಮಾಡಬೇಕೆಂದು ಸಂಸ್ಥೆಗೆ ತಿಳಿಸಬೇಕು. ಆದರೆ ಯಾವ ಇಲಾಖೆಯೂ ಈ ಕೆಲಸ ಮಾಡಿಲ್ಲ.

ಕೆಲವೊಂದು ಸಂಸ್ಥೆಗಳಿಗೆ ಮಾಹಿತಿ ಹಕ್ಕು ಕಾನೂನಿನಿಂದ ವಿನಾಯಿತಿ ನೀಡಲಾಗಿದೆ. ಕಾನೂನಿಗೆ ಸೇರಿಸಿರುವ ಪರಿಚ್ಛೇದ 2ರಲ್ಲಿ ಈ ಸಂಸ್ಥೆಗಳ ಪಟ್ಟಿ ನೀಡಲಾಗಿದೆ. ಭದ್ರತಾ ಪಡೆ, ಬಾರ್ಡರ್ ಸೆಕ್ಯೂರಿಟಿ ಫೋರ್ಸ್, ಅಸ್ಸಾಂ ರೈಫಲ್ಸ್ ಇತ್ಯಾದಿ ಸಂಸ್ಥೆಗಳಿಗೆ ಮಾಹಿತಿ ಕಾನೂನು ಅನ್ವಯಿಸುವುದಿಲ್ಲ. ಆದರೆ ಈ ಸಂಸ್ಥೆಗಳಲ್ಲಿ ನಡೆದಿದೆ ಎನ್ನಲಾದ ಭ್ರಷ್ಟಾಚಾರ ಹಾಗೂ ಮಾನವ ಹಕ್ಕು ಉಲ್ಲಂಘನೆಯ ಬಗ್ಗೆ ಮಾಹಿತಿ ನೀಡಬೇಕಾಗುತ್ತದೆ. ಈ ಸಂಸ್ಥೆಗಳು ಸಹ ಮಾಹಿತಿ ಅಧಿಕಾರಿಯನ್ನು ನೇಮಕ ಮಾಡಬೇಕೆಂದು ಸರ್ಕಾರ ತಿಳಿಸಿದೆ.

ಮಾಹಿತಿ ಹಕ್ಕು ಈಗ ಜನರ ಕೈಸೇರಿದೆ. ಇದೊಂದು ಪ್ರಬಲವಾದ ಅಸ್ತ್ರ ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ ಇದನ್ನು ಹೇಗೆ, ಎಲ್ಲಿ, ಯಾವ ಕಾರಣಕ್ಕೆ ಬಳಸಬೇಕು ಎಂಬುದರ ಬಗ್ಗೆ ನಾಗರಿಕರಲ್ಲಿ ಅರಿವು ಮೂಡಿಸುವ ಕೆಲಸ ಆಗಬೇಕಿದೆ. ಜೊತೆಗೆ, ಪಡೆದ ಮಾಹಿತಿಯನ್ನು ಹೇಗೆ ಬಳಸಿಕೊಳ್ಳಬೇಕು ಎಂಬುದರ ಬಗ್ಗೆಯೂ ಜನರಿಗೆ ತಿಳಿಸುವ ಅಗತ್ಯವಿದೆ. ಆಗ ಮಾತ್ರ ಮಾಹಿತಿ ಕಾನೂನಿನ ಫಲ ಸಮಾಜಕ್ಕೆ ದೊರೆಯಲಿದೆ.

ವೈ. ಜಿ. ಮುರಳೀಧರ
೨೩೯, ೫ನೇ 'ಸಿ' ರಸ್ತೆ, ರಂಕೋ ಬಡಾವಣೆ, ಹಂಪಿನಗರ, ಬೆಂಗಳೂರು - ೫೬೦ ೧೦೪

ಕ್ರಿಸ್ತಪೂರ್ವದ ಇತಿಹಾಸದಲ್ಲಿಯೇ ಭಾರತ ಪಟ್ಟಣಗಳನ್ನು ನಿರ್ಮಿಸಿತ್ತು ಎಂಬ ಸತ್ಯವನ್ನು ಹರಪ್ಪಾ ಮೊಹೆಂಜೊದಾರೋ ಸಂಸ್ಕೃತಿಯ ಪಳೆಯುಳಿಕೆಗಳು ಹೇಳುತ್ತವೆ. ಕ್ರಿ.ಪೂ. ೩ನೆಯ ಶತಮಾನದ ಅಶೋಕನ ಆಳ್ವಿಕೆಯ ಕಾಲದಲ್ಲಿಯೂ ನಗರಗಳ ವರ್ಣನೆಯೆ ಹೆಚ್ಚಾಗಿ ಬರುತ್ತದೆ. ಸುವ್ಯವಸ್ಥಿತ ಗ್ರಾಮಗಳು ಹುಟ್ಟಿಕೊಂಡದ್ದು ಬೌದ್ಧಧರ್ಮದ ಅವಸಾನಾನಂತರ, ವೈದಿಕ ಧರ್ಮದ ಪುನರುತ್ಥಾನ ಕಾಲದಲ್ಲಿ. ವರ್ಣಾಶ್ರಮ ಮತ್ತು ಜಾತಿ ಪದ್ಧತಿ ಸುಭದ್ರವಾಗಿ ನೆಲೆಯೂರಲು ಸಹಾಯಕವಾಗುವಂತೆ ಸ್ವಯಂ ಸಂಪೂರ್ಣ ಗ್ರಾಮಗಳನ್ನು ಹುಟ್ಟುಹಾಕಲಾಯಿತು. ಜಾತಿಗಳು ವೃತ್ತಿ ಮೂಲವಾಗಿದ್ದ ಕಾರಣ ಪರಾವಲಂಬನೆ ಅತ್ಯಂತ ಕನಿಷ್ಠ ಮಟ್ಟದಲ್ಲಿತ್ತು. ಚಪ್ಪಲಿ ಮಾಡುವವರಿಂದ ಹಿಡಿದು ಕ್ಷೌರ ಮಾಡುವವ, ಉಳುವಾತ, ವ್ಯಾಪಾರಿ ಮತ್ತು ಪೂಜಾರಿ ಎಲ್ಲರೂ ಒಂದು ಗ್ರಾಮದಲ್ಲಿ ಅಡಕವಾಗಿರುತ್ತಿದ್ದರು. ವಿದ್ಯೆಯ ಹಂಗಿಲ್ಲದಿದ್ದ ಕಾರಣ ಜನರು ವಂಶಪಾರಂಪರ್ಯ ವೃತ್ತಿಗಳನ್ನು ಖಂಡಿಸುವ ಗೋಜಿಗೆ ಹೋಗುತ್ತಿರಲಿಲ್ಲ. ಹುಟ್ಟು, ಸಾವಷ್ಟೇ ಅಲ್ಲದೆ ಅವರ ನಡೆ-ನುಡಿ ಬಡತನ ಎಲ್ಲವೂ ದೈವಪ್ರಣೀತವಾಗಿದ್ದವು.

'ಕೆಟ್ಟು ಪಟ್ಟಣ ಸೇರು' ಎಂಬ ಪ್ರಚಲಿತವಾದ ಒಂದು ಗಾದೆ ಮಾತಿದೆ. ಸೂಕ್ಷ್ಮವಾಗಿ ಗಮನಿಸಿದರೆ ಈ ಗಾದೆ ಪಟ್ಟಣೀಕರಣ ಅನಿವಾರ್ಯವೆಂಬುದನ್ನು ಬೊಟ್ಟು ಮಾಡುತ್ತಿದೆ. ಪಟ್ಟಣದಲ್ಲಿ ಉಳಿಗಾಲವಿದೆ ಎಂಬುದನ್ನು ಹೇಳುತ್ತಿದೆ. ಹಾಗಾದರೆ, ಗ್ರಾಮದಲ್ಲಿರುವ ಕೆಡಕು ಏನು ಎಂಬುದನ್ನು ತಿಳಿಯುವುದರ ಮೂಲಕ, ವಲಸೆ ಹೋಗುವ ಕಾರಣಗಳನ್ನು ಹಾಗೂ ಅದನ್ನು ತಡೆಯುವ ಕ್ರಮವನ್ನು ಹುಡುಕಬಹುದು ಎಂದು ತೋರುತ್ತದೆ. ಆದ್ದರಿಂದ ಸ್ಥೂಲವಾಗಿ ಈ ಎರಡು ಆಯಾಮಗಳಲ್ಲಿ ಈ ಸಮಸ್ಯೆಯನ್ನು ಚರ್ಚಿಸಬಹುದು: (೧) ಗ್ರಾಮ ಸಮಾಜದ ಪಾರಂಪರಿಕ ಕೊರತೆಗಳು (೨) ಪಟ್ಟಣಗಳು ನಂಬಿಸುವ ಅಸ್ತಿತ್ವದ ಸುರಕ್ಷತೆ.

**೧. ಗ್ರಾಮ ಸಮಾಜದ ಪಾರಂಪರಿಕ ಕೊರತೆಗಳು**

**(ಅ) ಜಾತಿ ಪದ್ಧತಿ , ಅವಿದ್ಯೆ, ಮೌಢ್ಯ ಇತ್ಯಾದಿ**

ಈ ಗ್ರಾಮ ಸಮಾಜ ಎನ್ನುವುದು ಘೋರಾಂಧಕಾರದ ಕೂಪ, ಪಾತಾಳದ ಬಿಲಕ್ಕೆ ಬಾಗಿಲು ಎಂದು ಡಾ|| ಬಿ. ಆರ್. ಅಂಬೇಡ್ಕರ್ ಒಂದು ಕಡೆ ಹೇಳುತ್ತಾರೆ. ಜಾತಿ ಪದ್ಧತಿ ಕೆಲವು ವರ್ಗದ ಜನರನ್ನು ವಿದ್ಯೆಯಿಂದ ಹೊರಗಿಟ್ಟಿತು ಎಂಬುದನ್ನು ಯಾರೂ ಅಲ್ಲಗಳೆಯಲಾರರು. ಅವಿದ್ಯೆಯಿಂದ ಮೌಢ್ಯ, ಮೌಢ್ಯದಿಂದ ಅತಿಯಾದ ಜನಸಂಖ್ಯೆ, ತನ್ಮೂಲಕ ನಿರಂತರತೆಯನ್ನು ಪಡೆದುಕೊಂಡ ಬಡತನ, ರೋಗ ರುಜಿನ, ಕ್ಷುದ್ರ ದೇವತಾರಾಧನೆಯೊಂದಿಗೆ ಮೂಢನಂಬಿಕೆಗಳ ಆಚರಣೆ ಇವೆಲ್ಲವೂ ಸ್ವಾತಂತ್ರ್ಯ ಬಂದು ೫೯ ವರ್ಷಗಳಾದರೂ ಗ್ರಾಮ ಸಮಾಜವನ್ನು ಸಡಿಲಗೊಳಿಸಲು ಸಾಧ್ಯವಾಗಿಲ್ಲ. ಈಗಲೂ ಬಿಹಾರ, ಉತ್ತರ ಪ್ರದೇಶದಂತಹ ರಾಜ್ಯಗಳಲ್ಲಿ ಅನ್ಯಜಾತಿಯ ಹುಡುಗ/ಹುಡುಗಿ ಪ್ರೇಮದಲ್ಲಿ ಸಿಲುಕಿದರೆಂದರೆ ಮದುವೆಗೆ ಮುನ್ನ ಪಂಚಾಯ್ತಿ ಕಟ್ಟೆಗೆ ಎಳೆದು ತಂದು ಮುಖಂಡರುಗಳ ಸಮ್ಮುಖದಲ್ಲಿ ಕೊಲ್ಲಲ್ಪಡುವುದನ್ನು ಪತ್ರಿಕೆಗಳಲ್ಲಿ ಓದುತ್ತೇವೆ. ಕರ್ನಾಟಕ, ಗುಜರಾತ್ ಮುಂತಾದ ಮುಂದುವರೆದ ರಾಜ್ಯಗಳಲ್ಲಿಯೂ ಗ್ರಾಮಗಳಲ್ಲಿ ಜಾತಿ ಜಗಳ ಶುರುವಾಗುವುದೇ ಟೆಂಟ್ ಸಿನಿಮಾದಲ್ಲಿ ಒಂದು ಜಾತಿಯ ಹುಡುಗ ಬೇರೊಂದು ಜಾತಿಯ ಹುಡುಗಿಯನ್ನು ಕೆಣಕಿದನೆನ್ನುವ ಕಾರಣಕ್ಕಾಗಿ. ಸಮಾನತೆ ಮತ್ತು ಒಂದುಗೂಡುವಿಕೆ ಅಸಾಧ್ಯವಾಗಿರುವ ಗ್ರಾಮ ಸಮಾಜ ಆದರ್ಶವಾಗುವುದು ಮತ್ತು ಶಾಶ್ವತ ಜೀವನತಾಣವಾಗಿ ಪರಿಣಮಿಸುವುದು Utopian ಚಿಂತನೆ ಎಂಬುದು ಅತಿಶಯವೇನಲ್ಲ. ಆದರೂ ಗಾಂಧೀಜಿ ಗ್ರಾಮ ಸ್ವರಾಜ್ಯದ ಕನಸು ಕಂಡಿದ್ದರು. ವರ್ಣಾಶ್ರಮವನ್ನು ಅವರು ಸಮರ್ಥಿಸಿಕೊಳ್ಳುತ್ತಿದ್ದರು. ವೃತ್ತಿ ಗೌರವದ ಬಗ್ಗೆ ಹೇಳುತ್ತಿದ್ದರು ಹಾಗೂ ತಾವೇ ಮಾಡಿ ತೋರಿಸುತ್ತಿದ್ದರು (ಉದಾಹರಣೆಗೆ, ಮಲಗುಡಿಸುವುದು ಮತ್ತು ನೇಯುವುದು) ಆದರೆ ಅವುಗಳಿಂದ ಆರ್ಥಿಕ ಸಮಾನತೆಯನ್ನು ತರುವುದು ಹೇಗೆ ಎಂಬುದನ್ನು ಹೇಳಿಕೊಡಲಿಲ್ಲ. ಬಡತನವನ್ನು ದೈವೀಕರಿಸಿ ತಮ್ಮ ಪ್ರವಾದಿತನವನ್ನು ಮೆರೆದರು. ಅವು ಕಾರ್ಯಗತವಾಗಲಾರವೆಂಬ ವಾಸ್ತವವನ್ನು ನಾವಿಂದು ಕಾಣುತ್ತಿದ್ದೇವೆ.

**(ಆ) ಬೇಸಾಯವೆಂಬ ಮೂಲ ವೃತ್ತಿ, ಅವೈಜ್ಞಾನಿಕ ಭೂ ಹಂಚಿಕೆ, ಅವಕಾಶವಂಚಿತ ಜಾತಿಗಳ ಪಲಾಯನ**

ರೈತ ಭಾರತದ ಬೆನ್ನೆಲುಬು ಎಂಬ ಕ್ಲೀಷೆಯ ಮಾತೊಂದಿದೆ. ಶೇ. ೭೦ರಷ್ಟು

# ಗ್ರಾಮೀಣ ಜನರ ಪಟ್ಟಣ ವಲಸೆ

## ಒಂದು ಚಿಂತನೆ



ಡಾ|| ಮೂಡ್ನಾಕೂಡು ಚಿನ್ನಸ್ವಾಮಿ

ನಸಂಖ್ಯೆ ಇನ್ನೂ ಹಳ್ಳಿಗಳಲ್ಲಿಯೆ ವಾಸಿಸುವುದರಿಂದ ಈ ಹೇಳಿಕೆ ಈಗಲೂ ಸ್ತುತವಾಗುತ್ತದೆ. ಆದರೆ ಎಲ್ಲ ಹಳ್ಳಿಗರು ರೈತರಲ್ಲ ಎಂಬ ಕಟು ಸತ್ಯವೂ ರತೀಯ ಗ್ರಾಮಗಳಲ್ಲಿದೆ. ಭೂ ಒಡೆತನ ಪಾರಂಪರಿಕವಾಗಿ ಕೆಲ ಜಾತಿಗಳ ಯಲ್ಲಿದೆ. ಅದು ಅವೈಜ್ಞಾನಿಕ ಹಂಚಿಕೆಯೆಂಬುದನ್ನರಿತೇ ಪ್ರಗತಿಪರ ಸರಕಾರಗಳು ೂ ಸುಧಾರಣಾ ಕಾಯ್ದೆಯನ್ನು ಜಾರಿಗೊಳಿಸಿದವು. ಕೆಲವೇ ಮಂದಿ ಒಡೆಯರಿಗೆ ಲವಾರು ಕುಟುಂಬಗಳು ಹೊಲದಲ್ಲಿ ಕೂಲಿ ಮಾಡಿ ಬೆಳೆ ಬೆಳೆದು ಕೊಡಲು ಟಿಬದ್ಧವಾಗಿದ್ದವು. ಅಂಥ ಶ್ರಮಿಕ ವರ್ಗದ ದಂಡು ಇಂದು ಪಟ್ಟಣಗಳತ್ತ ಪುಗಾಲಿಟ್ಟುಬರುತ್ತಿವೆ.

ಬ್ರಿಟಿಷರಿಂದ ಸ್ವಾತಂತ್ರ್ಯವನ್ನು ಪಡೆದ ಭಾರತ ಸರ್ವತಂತ್ರ ಸ್ವತಂತ್ರ ಣರಾಜ್ಯವಾಗಿ ರೂಪುಗೊಂಡಿತು. ಸಂವಿಧಾನ ರಚನಕಾರರು ಭಾರತಕ್ಕೆ ಂಸದೀಯ ಪ್ರಜಾಪ್ರಭುತ್ವವನ್ನು ದಯಪಾಲಿಸಿದರು. ಅನಕ್ಷರಸ್ಥ ಮತ್ತು ೌಢ್ಯಪ್ರಿಯ ದೇಶವೊಂದಕ್ಕೆ ಇದು ದುಬಾರಿಯಾಗಿ ಒಂದು ದೊಡ್ಡ ಸವಾಲಾಗಿ ರಿಣಮಿಸಿತು. ಈಗಲೂ ಭಾರತದಲ್ಲಿ ಪ್ರಜಾತಂತ್ರ ತಾಂತ್ರಿಕವಾಗಿ ಪ್ರಚಲಿತವಿದೆ. ದರೆ ತನ್ನ ಆತ್ಮಸಾಕ್ಷಿಯನ್ನು ನಾಶಮಾಡಿಕೊಂಡಿದೆ. ಓಟುಗಳ ಮುದ್ರೆಯಿಂದ ರ್ಕಾರ ರಚಿತವಾದರೂ ಈ ಮುದ್ರೆಗಳನ್ನು ಕೆಲವೇ ಹಣವಂತರು ಮತ್ತು ೋಳ್ಬಲವುಳ್ಳವರು ಖರೀದಿಸಿ ಹಿತಾಸಕ್ತ ಜನರನ್ನು ಗದ್ದುಗೆಯ ಮೇಲೆ ೂರಿಸುತ್ತಿದ್ದಾರೆ. ಇದರಿಂದ ಗ್ರಾಮೀಣ ಕೆಳವರ್ಗ ತನ್ನ ಪೂರ್ವ ಸ್ಥಿತಿಯಲ್ಲಿಯೇ ಯಂದುವರೆದಿದೆ. ಸರ್ಕಾರ ತನ್ನ ಜೀವಂತಿಕೆಯನ್ನು ಚುರಪಡಿಸಲೆನ್ನುವಂತೆ ಗ್ರಾಮಗಳಿಗೂ ತನ್ನ ಂಗವನ್ನು ಚಾಚಿದೆ. ಪಂಚಾಯತ್ ರಾಜ್ ಾಲ್ತಿಯಲ್ಲಿದೆ. ೧೯೬೦ರ ದಶಕದಲ್ಲಿ ಚಾಲ್ತಿಯಲ್ಲಿದ್ದ ಟೇಲ, ಶಾನುಭೋಗರ ಪದವಿಯನ್ನು ಸರ್ಕಾರ ನೂರ್ಜಿತಗೊಳಿಸಿತು. ಆ ಜಾಗದಲ್ಲೀಗ ಗ್ರಾಮ ಕ್ಕಿಗನಿದ್ದಾನೆ. ಅಂದು ಊರಿನಲ್ಲಿ ಒಂದು ಬ್ರಾಹ್ಮಣ ಟುಂಬ ಕಡ್ಡಾಯವಾಗಿರುತ್ತಿತ್ತು. ಮನೆಯ ಮುಖಂಡ ಾಮಾನ್ಯವಾಗಿ ಶ್ಯಾನುಭೋಗನೇ ಆಗಿರುತ್ತಿದ್ದ. ರ್ಕಾರಿ ಗ್ರಾಮಲೆಕ್ಕಿಗನ ಆಗಮನದಿಂದ ನಿರುದ್ಯೋಗಿ ಾದ ಶ್ಯಾನುಭೋಗರು ಪಟ್ಟಣಗಳಿಗೆ ಪಲಾಯನ ಯ್ದರು. ಪ್ರಾಯಶಃ ಪಟ್ಟಣಕ್ಕೆ ವಲಸೆ ಇಲ್ಲಿಂದಲೇ ್ರಾರಂಭವಾಗಿರಬೇಕು. ಪಟ್ಟಣದಲ್ಲಿ ಬ್ರಾಹ್ಮಣರಿಗೆ ನಿಲ್ಲದಿದ್ದರೂ ಪೌರೋಹಿತ್ಯವಿತ್ತು. ಎಲ್ಲರಂತೆಯೆ ವರ ನಂತರದ ತಲೆಮಾರು ವಂಶವೃತ್ತಿ ಚಕ್ರವನ್ನು ೇದಿಸಿತು ಎಂಬುದೀಗ ಇತಿಹಾಸ.

ಗ್ರಾಮಗಳಲ್ಲಿ ಆಸ್ತಿಯ ಒಡೆತನ ಪಾರಂಪರಿಕವಾಗಿ ಮೇಲ್ಜಾತಿಯ ಕೈಯಲ್ಲಿದೆ ಂಬುದು ವಾಸ್ತವದ ಸಂಗತಿ. ಭೂ ಸುಧಾರಣಾ ಕಾಯಿದೆಯಿಂದ ಕೆಳಜಾತಿ ಡವರು ಭೂಮಿಯ ಒಡೆಯರಾದರೂ ಉತ್ಪಾದನೆಯಲ್ಲಿ ಮುಂದೆ ಬರಲು ಧ್ಯವಾಗಲಿಲ್ಲ. ಅದಕ್ಕೆ ಜಾತಿ ಸಂಪ್ರದಾಯವೇ ಕಾರಣ. ಆಳಾಗಿ ದುಡಿಯುವಾತ ಂದೇ ಏಟಿಗೆ ಒಡೆಯನಾಗಿ ಪರಿವರ್ತಿತವಾಗುವುದೂ ಗ್ರಾಮ ಸಮಾಜದಲ್ಲಿ ಸಂಭವ. ಬಹಳಷ್ಟು ಜನ ತಮ್ಮ ಜಮೀನುಗಳನ್ನು ಪರಭಾರೆ ಮಾಡಿ, ಒತ್ತೆ ಇಟ್ಟು ಡಿದದ್ದೇ ಹೆಚ್ಚು. ಅವರ ಮುಂದಿನ ತಲೆಮಾರು ಆ ಒಡೆತನ / ವ್ಯವಸಾಯದಿಂದ ್ಣ ಹಿಡುವಳಿದಾರರಾಗಿ ತಮ್ಮ ಆರ್ಥಿಕ ಮುಗ್ಗಟ್ಟನ್ನು ನೀಗಿಸಿಕೊಳ್ಳಲಾರದೇ ಟ್ಟಣದತ್ತ ಮುಖ ಮಾಡುತ್ತಿದೆ. ಹಳ್ಳಿಗನಾದ ಒಬ್ಬ ಬಡವ ಪಟ್ಟಣದ ಮಾರುಕಟ್ಟೆಯಲ್ಲಿ ೂಟೆಹೊರುವವನನ್ನು ನೋಡಿ ಆಕರ್ಷಿತನಾಗುತ್ತಾನೆಯೆ ಹೊರತು, ಬಡಕಲು ತ್ತುಗಳನ್ನು ಮೇಯಿಸುವ ತುಂಡು ಜಮೀನಿನ ಒಡೆಯನಾಗಿರಲು ಇಷ್ಟಪಡುವುದಿಲ್ಲ.

**ಇ) ಮೂಲಭೂತ ಸೌಕರ್ಯಗಳ ಕೊರತೆ**

ಸಮಾನ ಅವಕಾಶಗಳು ಮತ್ತು ಸಮಾನ ಹಕ್ಕುಗಳನ್ನು ಪಡೆದುಕೊಂಡ ಬಡ ೋರೇಗೌಡನ ಎರಡನೇ ತಲೆಮಾರಿನ ಸಂತತಿ ವಿದ್ಯೆಯನ್ನು ಪಡೆದುಕೊಂಡಿದೆ. ದ್ಯೆಗೆ ತಕ್ಕುದಾದ ಉದ್ಯೋಗ ತನ್ನ ಹಕ್ಕು ಎಂಬಂತೆ ಆತ ಈಗ ಪಟ್ಟಣಕ್ಕೆ ುಖಮಾಡುತ್ತಾನೆ. ಯಾಕೆಂದರೆ ವಿದ್ಯೆಯ ಅನಿವಾರ್ಯತೆಯನ್ನು ಬೇಡುವ ರವಾನ್ವಿತ ಉದ್ಯೋಗ ಈಗ ಗ್ರಾಮದಲ್ಲಿ ಇಲ್ಲವಾಗಿದೆ. ಪಟ್ಟಣದಲ್ಲಿ ಉದ್ಯೋಗ ಹೊಂದಿಯೂ ಆತ ಗ್ರಾಮದಲ್ಲಿ ವಾಸ್ತವ್ಯ ಮಾಡಲಾರ. ಕಾರಣ ಮೂಲಭೂತ ಸೌಕರ್ಯಗಳ ಕೊರತೆ. ರಸ್ತೆ, ವಿದ್ಯುತ್, ನೀರು ಸರಬರಾಜು ಇತ್ಯಾದಿ ವಿಷಯಗಳಲ್ಲಿ ಭಾರತ ಇನ್ನೂ ಸಮರ್ಪಕತೆಯನ್ನು ಸಾಧಿಸಿಲ್ಲ.

ಶಿಕ್ಷಿತ ಗ್ರಾಮೀಣ ಜನ ಸಮೂಹಕ್ಕೆ ಒಂದು ದೊಡ್ಡ ಕೊರತೆ ಎಂದರೆ ಶೌಚಾಲಯ. ಎಲ್ಲಿಯವರೆಗೆ ಭಾರತದ ಹಳ್ಳಿಗಳಿಗೆ ಶೌಚಾಲಯದ ಸೌಲಭ್ಯ ಒದಗಿಸಲಾರೆವೊ ಅಲ್ಲಿಯವರೆಗೆ ದೇಶ ಮುಂದುವರಿದಿದೆ ಎಂದು ಹೇಳಲಾಗುವುದಿಲ್ಲವೆಂದು ಗಾಂಧೀಜಿ ಹೇಳಿದ್ದರು. ಈ ವಿಷಯದಲ್ಲಿ ಆಫ್ರಿಕಾಕ್ಕಿಂತಲೂ ಭಾರತ ಹಿಂದುಳಿದಿದೆ ಎಂದರೆ ಆಶ್ಚರ್ಯವಾಗಲಾರದು. ಓದಿದ ಹೆಣ್ಣುಮಕ್ಕಳನ್ನು ಗ್ರಾಮದ ವರಗಳಿಗೆ ಮದುವೆ ಮಾಡಿಕೊಡಲು ತಂದೆ ತಾಯಿಗಳು ಹಿಂದೇಟು ಹಾಕಲು ಇದೂ ಒಂದು ಮುಖ್ಯ ಕಾರಣ.

**೨. ಪಟ್ಟಣಗಳು ನಂಬಿಸುವ ಅಸ್ತಿತ್ವದ ಸುರಕ್ಷತೆ**

**ಅ. ಉದ್ಯೋಗ ಸೃಷ್ಟಿ**

ಗ್ರಾಮೀಣ ಜನತೆಯ ಅತ್ಯಂತ ಪ್ರಮುಖ ಸಮಸ್ಯೆಯೆಂದರೆ ಉದ್ಯೋಗ. ಬೇಸಾಯವನ್ನೇ ಅವಲಂಬಿಸಿರುವ ಅವರಿಗೆ ವರ್ಷಪೂರ್ತಿ ಕಾಯಕ ಅಲಭ್ಯ. ಆಧುನಿಕ ಬೇಸಾಯ ಪದ್ಧತಿಯೂ ಸಹ ವರ್ಷಪೂರ್ತಿ ಉಂಬಳವನ್ನಾಗಲಿ ಅಥವಾ ಸಂಬಳವನ್ನಾಗಲೀ ಕೊಡಲು ಸಾಧ್ಯವಾಗಿಲ್ಲ. ಹೀಗಾಗಿ ಅವರು ಕೈ ತುಂಬ ಕೆಲಸವನ್ನರಸಿ ಗುಳೇ ಹೊರಡುವುದು ಪಟ್ಟಣಗಳಿಗೆಯೆ. ಸಾಂಪ್ರದಾಯಿಕ ಜೀವನಶೈಲಿಯನ್ನು ನಿರಾಕರಿಸಲು ಶುರುಮಾಡಿದ್ದು ವಿದೇಶೀ ಆಕ್ರಮಣದ ನಂತರ. ಜಗತ್ತಿನಲ್ಲಿ ಬೇರೆಯೆ ಆದ ಜೀವನ ಪದ್ಧತಿಗಳಿವೆ ಎಂಬುದು ಜಾತಿಪದ್ಧತಿಯೊಳಗೆ ಬಂಧಿಯಾಗಿದ್ದ ಭಾರತೀಯರಿಗೆ ತಿಳಿದು ಹೋಯಿತು. ಸಮಾನತೆಯ ರುಚಿ ಸಿಕ್ಕಿತು, ವಿದ್ಯೆ ದಕ್ಕತೊಡಗಿತು. ಆಗ ಸಹಜವಾಗಿಯೆ ಜನರು ಪಟ್ಟಣಗಳಿಗೆ ಮುಖ ಮಾಡತೊಡಗಿದರು, ತಮ್ಮ ವಂಶಮೂಲ ವೃತ್ತಿ ಚಕ್ರವನ್ನು ಛೇದಿಸತೊಡಗಿದರು. ವಂಶವೃತ್ತಿಯ ನಿರಾಕರಣೆ ಪಟ್ಟಭದ್ರ ಹಿತಾಸಕ್ತಿಗಳಿರುವ ಗ್ರಾಮದಲ್ಲಿ ಅಸಾಧ್ಯವೆಂಬುದು ಅವರಿಗೆ ಮನವರಿಕೆಯಾಯಿತು. ಹಾಗೆಂದ ಮಾತ್ರಕ್ಕೆ ಗ್ರಾಮಗಳು ನಾಶವಾದವೆಂಬ ಅರ್ಥವಲ್ಲ. ಗ್ರಾಮ ದೊಳಗೇ ಇದ್ದುಕೊಂಡು ಅನ್ಯವೃತ್ತಿಯನ್ನು ಹಿಡಿಯಲು ಅಸಾಧ್ಯವಾಗಿತ್ತು. ಸಾಲದ್ದಕ್ಕೆ ಯಂತ್ರ ಮತ್ತು ಸಂಪರ್ಕದ ಸಂಯೋಗದಿಂದ ಹೊಸ ಹೊಸ ವೃತ್ತಿಗಳು ನಗರಗಳಲ್ಲಿಯೆ ಸೃಷ್ಟಿಯಾಗುತ್ತಿದ್ದವು. ಅವು ಕುಶಲಕರ್ಮಿಗಳನ್ನು ಬೇಡುತ್ತಿದ್ದವು. ಅವರು ಎಲ್ಲ ಜಾತಿಗಳಿಂದಲೂ ಆಯ್ಕೆಯಾಗುತ್ತಿದ್ದರು. ಅದು ಅನಿವಾರ್ಯವಾಗಿತ್ತು ಕೂಡ. ಆಧುನಿಕತೆ ಪಟ್ಟಣೀಕರಣವನ್ನು ಪುಷ್ಟೀಕರಿಸುತ್ತಿತ್ತು ಮತ್ತು ಗ್ರಾಮೀಣ ಜನರನ್ನು ಆಕರ್ಷಿಸುತ್ತಿತ್ತು.

**ಆ. ಆಧುನಿಕ ಸೌಲಭ್ಯಗಳು, ಅನಾಮಿಕತೆ, ಮನರಂಜನೆ ಇತ್ಯಾದಿ**

ಪಟ್ಟಣವೆಂದರೆ ಆಧುನಿಕತೆಯ ಪ್ರತೀಕ, ಮುಂದುವರಿದ ಸ್ಥಿತಿ ಎಂದು ಈಗ ಕೇವಲ ಭ್ರಮೆಯಾಗಿ ಉಳಿದಿಲ್ಲ. ''ಸಮಾಜ ಅಥವಾ ಅದರೊಳಗಿನ ಒಂದು ಗುಂಪು ತಮ್ಮ ಬಾಳುವೆಗೆ ಅವಶ್ಯಕವಾದ ಸಂಪನ್ಮೂಲಗಳಿಗಿಂತಲೂ ಹೆಚ್ಚಿನದನ್ನು ಹತೋಟಿಗೆ ತಂದುಕೊಂಡಾಗ ಪಟ್ಟಣವು ಬೆಳೆಯತೊಡಗುತ್ತದೆ'' ಎಂದು ಸಮಾಜ ವಿಜ್ಞಾನಿಗಳು ಹೇಳುತ್ತಾರೆ. ಅಂದರೆ ಕೇವಲ ಊಟ, ಬಟ್ಟೆ ಮತ್ತು ವಸತಿಗಳ ಅಗತ್ಯವನ್ನು ಮೀರಿ ಮಿಗುವ ಉತ್ಪಾದನೆ ಅಥವಾ ಮಿಗು ಉಳಿತಾಯ ನಗರಗಳ ಬೆಳವಣಿಗೆಗೆ ಕಾರಣವಾಗುತ್ತವೆ. ಅಂದರೆ, ಮೂಲ ಅಗತ್ಯಗಳನ್ನು ಪೂರೈಸಿ ಮನುಷ್ಯನ ಮೇಲು ಬೇಡಿಕೆಗಳನ್ನು ಒದಗಿಸುತ್ತವೆ. ಅಂತಹ ಕೆಲವು ಮುಖ್ಯ ವಿಚಾರಗಳು ಈ ಕೆಳಕಂಡಂತಿವೆ :

ನಗರದ ಆಕರ್ಷಣೆಯ ಕೇಂದ್ರ ಆಧುನಿಕ ಸವಲತ್ತುಗಳು ಅಂದರೆ ಒಳ್ಳೆಯ ರಸ್ತೆ, ವಿದ್ಯುತ್ ಪೂರೈಕೆ, ಕುಡಿಯುವ ನೀರಿನ ಸೌಲಭ್ಯ, ಟೆಲಿಫೋನ್ ಸಾಧನ, ಸಂಪರ್ಕದ ವ್ಯವಸ್ಥೆ. ಇವುಗಳು ವ್ಯವಸ್ಥಿತವಾಗಿ ಜನರಿಗೆ ಸಿಗುವಂತೆ ನಗರಗಳಲ್ಲಿ ಸಾಮಾನ್ಯವಾಗಿ ಏರ್ಪಾಡು ಮಾಡಲಾಗಿರುತ್ತದೆ. ಇದ ಕಾರಣ ಶಿಕ್ಷಿತ ಜನಸಮೂಹ ಸಾಮಾನ್ಯವಾಗಿ ತಮ್ಮ ಊಟ ಬಟ್ಟೆ ವಸತಿಗಳ ಅಗತ್ಯಕ್ಕೆ ಬೇಕಾದುದಕ್ಕಿಂತಲೂ ಹೆಚ್ಚಾಗಿ

**ನೀರಿನ ಹನಿಗವನ**

ನೀರಡಿಕೆ
ಪುಟ್ಟ ಹಕ್ಕಿಯ ಬಾಯಿಗೆ
ಹಸಿರೆಲೆ ಜಾರಿಸಿದ ಹನಿ
ಆರಿದ ಗಂಟಲಿಗೆ

**ಕೆ. ಎಸ್. ರವಿಕುಮಾರ್**
ಭಾರತೀಯ ಜೀವ ವಿಮಾ ನಿಗಮ
ಹಾಸನ - ೫೭೩ ೨೦೧

ಸಂಪಾದಿಸುತ್ತಾರೆ. ಅಂಥವರು ಈ ಸವಲತ್ತುಗಳನ್ನು ಅನುಭವಿಸಲು ಇಷ್ಟಪಡುತ್ತಾರೆ.

ನಗರಗಳ ಮುಖ್ಯವಾದ ಆಕರ್ಷಣೆಗಳಲ್ಲಿ ಮನರಂಜನೆಯೂ ಒಂದು. ಸಿನಿಮಾ, ಕ್ಲಬ್, ಆಟದ ಮೈದಾನ, ಈಜುಕೋಳ, ಪಾರ್ಕುಗಳು ಮುಂತಾದ ವಿಶಿಷ್ಟ ಪರಿಕರಗಳು ಮನುಷ್ಯನ ಆನಂದಾನುಭವಕ್ಕೆ ಪೂರಕವಾಗಿವೆ. ಮಿಗು ಉಳಿತಾಯ ಹೆಚ್ಚಾಗಿದ್ದ ಜನರು ಖರ್ಚು ಮಾಡುವ ದಾರಿಗಳನ್ನು ಹುಡುಕಿಕೊಳ್ಳಲೇ ಬೇಕಾಗುತ್ತದೆ.

ನಗರದ ಜಂಜಡದಲ್ಲಿ ಸಾಮಾನ್ಯವಾಗಿ ಕುಟುಂಬಗಳು ಪ್ರತ್ಯೇಕತೆಯನ್ನು ಗುರುತಿಸಿಕೊಳ್ಳುತ್ತವೆ. ಒಬ್ಬರಿಗೆ ಇನ್ನೊಬ್ಬರು ಏನು ಮಾಡುತ್ತಾರೆ ಎಂದು ತಿಳಿಯುವುದಿಲ್ಲ, ತಮ್ಮ ಪಾಡಿಗೆ ತಾವು ಇದ್ದು ಬಿಡುವುದೇ ಹೆಚ್ಚು. ಇದರಿಂದ ಅನಾಮಿಕತೆಯ ಅನುಭವವುಂಟಾಗುತ್ತದೆ. ಕೆಳ ಮಧ್ಯಮ ವರ್ಗದ ಜನರಲ್ಲಿ ಅದು ಸ್ವಾಭಿಮಾನವನ್ನು ತಂದುಕೊಡುವುದರಲ್ಲಿ ಅನುಮಾನವಿಲ್ಲ. ಅಲ್ಲಿ ಜಾತಿಗಳನ್ನು ಮೀರಿ ಬೆಳೆಯುವ ಅವಕಾಶವಿದೆ. ಆದ್ದರಿಂದ ಸಾಮಾಜಿಕ ಬಿಡುಗಡೆಗೆ ಅವಕಾಶವಿರುತ್ತದೆ. ಕುಟುಂಬಗಳಿಗೆ ಸ್ವಹಿತಾಸಕ್ತಿ ಮಾತ್ರ ಇರುವುದರಿಂದ ಪ್ರಗತಿ ವೇಗವಾಗಿರುತ್ತದೆ. ತನ್ನ ಊರ್ಜಿತಕ್ಕಾಗಿ ಸಾಮಾಜಿಕ ಮತ್ತು ಆರ್ಥಿಕ ಮುನ್ನಡೆಯನ್ನು ಸಾಧಿಸಲು ಸರ್ವ ಪ್ರಯತ್ನಗಳನ್ನು ಮಾಡಲು ಇಲ್ಲಿ ಅವಕಾಶವಿರುತ್ತದೆ. ಹಾಗಾಗಿ ಪಟ್ಟಣ ಹೆಚ್ಚು ಆಕರ್ಷಣೀಯವೆನಿಸುತ್ತದೆ.

**ಇ. ಜಾಗತೀಕರಣ**

ಜಾಗತೀಕರಣವೆಂಬ ಪೆಡಂಭೂತ ಭಾರತದ ಹಳ್ಳಿಗಳ ಹೆಬ್ಬಾಗಿಲ ಬಳಿ ಬಂದು ನಿಂತಿದೆ. ಬಡ ರೈತನೂ ಈಗ ತನ್ನ ಜಮೀನಿನ ಆರ್. ಟಿ. ಸಿ.ಯನ್ನು ಗಣಕಯಂತ್ರದ ಮೂಲಕವೇ ಪಡೆಯುತ್ತಿದ್ದಾನೆ. ಐಷಾರಾಮಿ ಬದುಕಿನ ಸಾಧನಗಳು ಅಗ್ಗದ ಬೆಲೆಗೆ ಸಿಗತೊಡಗಿವೆ. ಮಾರುಕಟ್ಟೆ ಸಂಸ್ಕೃತಿ ಹಳ್ಳಿಗೂ ಲಗ್ಗೆ ಇಡುತ್ತಿದೆ. ಸಹಜವಾಗಿಯೆ ಗ್ರಾಮ ಸಮಾಜವೂ ತನ್ನ ಕೊಳ್ಳುವ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುತ್ತಿದೆ. ಜಾಗತೀಕರಣದ ಪರಿಣಾಮವಾಗಿ ಇಡೀ ವಿಶ್ವವೇ ಒಂದು ಹಳ್ಳಿಯಾಗಿ ಪರಿಗಣಿಸಲ್ಪಟ್ಟಿದೆ. ಆದ್ದರಿಂದಲೇ 'ವಿಶ್ವಗ್ರಾಮ' ಎಂಬ ನುಡಿಗಟ್ಟು ಹುಟ್ಟಿಕೊಂಡಿದೆ. ಗ್ರಾಮಗಳು ಪಟ್ಟಣಗಳೆಂಬ ಪುಟ್ಟ ವಿಶ್ವದಲ್ಲಿ ಲೀನವಾಗುವ ಕಾಲ ದೂರವಿಲ್ಲವೆಂದು ತೋರುತ್ತದೆ.

ಗ್ರಾಮೀಣ ಜನರ ವಲಸೆಯನ್ನು ತಡೆಯಬೇಕಾದರೆ ಮೇಲಿನ ಅನುಕೂಲಗಳನ್ನು ಅಲ್ಪ ಸ್ವಲ್ಪವಾದರೂ ಒದಗಿಸಿಕೊಡಲೇಬೇಕಾಗುತ್ತದೆ. ಹಾಗೆ ಮಾಡಿದಾಗ ಅವು ಪಟ್ಟಣಗಳೇ ಆಗಿ ಅಥವಾ ಮರಿಪಟ್ಟಣ (Shanty Town)ಗಳಾಗಿ ಮಾರ್ಪಾಡಾಗುತ್ತವೆ. ಆದ್ದರಿಂದ ಖ್ಯಾತ ಸಮಾಜ ಶಾಸ್ತ್ರಜ್ಞ ಕ್ರೋಪ್ಟ್ಕಿನ್‌ನ ಈ ಮಾತಿನೊಂದಿಗೆ ಲೇಖನವನ್ನು ಮುಕ್ತಾಯಗೊಳಿಸುತ್ತೇನೆ : "ಗ್ರಾಮೀಣ ಸಮುದಾಯದ ಒಂದು ಅವಧಿ ಇಲ್ಲದಿದ್ದ ಯಾವುದೇ ಮಾನವ ಜನಾಂಗ ಅಥವಾ ದೇಶ ಇತಿಹಾಸದಲ್ಲಿಲ್ಲೂ ಇಲ್ಲ."

**ಗ್ರಂಥಸೂಚಿ**

1. ಮೋ. ಕ. ಗಾಂಧಿ - ನನ್ನ ಕಲ್ಪನೆಯ ಸಮಾಜವಾದ, ಭಾರತೀಯ ವಿದ್ಯಾಭವನ – ಬೆಂಗಳೂರು 1987.

2. ಡಿ. ಆರ್. ನಾಗರಾಜ್ - ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, 2002

3. Romila Thapar - Early Inida, Penguin Books, 2202

4. A.R.Desai - Rural Society in India, Popular Prakashan, Bombay - 1969

5. Vidyabhavan & D. R. Sachdeva - Introduction to Sociology, Kitab Mahal, Allahabad, 2005.

**ಡಾ|| ಮೂಡ್ನಾಕೂಡು ಚಿನ್ನಸ್ವಾಮಿ**
ಮುಖ್ಯಲೆಕ್ಕಾಧಿಕಾರಿ, ಕೆ.ಎಸ್.ಆರ್.ಟಿ.ಸಿ. ಸೆಂಟ್ರಲ್ ಆಫೀಸ್
ಕೆ. ಎಚ್. ರಸ್ತೆ, ಶಾಂತಿನಗರ
ಬೆಂಗಳೂರು - ೫೬೦ ೦೨೭

ಸ್ಪರ್ಧಾತ್ಮಕ ಪರೀಕ್ಷೆಗಳಿಗಾಗಿ ಕೆಲವು ಪುಸ್ತಕಗಳು


ರೂ. 230/-


ರೂ. 290/-



ರೂ. 310/-



ರೂ. 170/-



ರೂ. 170/-


ರೂ. 360/-


ಪ್ರಕಾಶನ
ಎಸ್. ಎಂ. ವಿ. ಪ್ರಕಾಶನ
ಸ್ಟೂಡೆಂಟ್ಸ್ ಕಾರ್ನರ್, ದೊಡ್ಡಪೇಟೆ
ಕೋಲಾರ – 563 101
ದೂರವಾಣಿ : 08152-220471
ಮೊಬೈಲ್ : 9448181878



ರೂ. 320/-

ಎಲ್ಲಾ ರೀತಿಯ ಸ್ಪರ್ಧಾತ್ಮಕ ಪರೀಕ್ಷೆಗಳ ಪುಸ್ತಕಗಳಿಗಾಗಿ ಸಂಪರ್ಕಿಸಿ.

# ಮಾದರಿಯೊಂದರ ಹುಡುಕಾಟದಲಿ

ಅಂದಿನ ಕಾಲಘಟ್ಟವನ್ನು ಗಮನಿಸಿದರೆ, ಈ ಭಕ್ತೆಯರು ತುಳಿದ ಬಿಡುಗಡೆಯ ಹಾದಿ ಯಾವೊಬ್ಬ ಸಾಮಾನ್ಯ ಮಹಿಳೆಯೂ ಕಾಲಿಡುವುದಕ್ಕೆ ಹೆದರುವ ಒಂದು ಹಾದಿ ಎನ್ನುವುದಂತೂ ಸ್ಪಷ್ಟ. ಆ ದಾರಿ ಹಿಡಿಯುವುದಕ್ಕೆ ಮೊದಲನೆಯದಾಗಿ ತುಂಬಾ ಗಂಭೀರವಾದ ಆಧ್ಯಾತ್ಮಿಕ ತುಡಿತ ಬೇಕೇ ಬೇಕು ಮತ್ತು ಸಮಾಜಕ್ಕೆ ಒಪ್ಪಿತವಾದ ಎಲ್ಲವನ್ನೂ ತಿರಸ್ಕರಿಸುವ ಎದೆಗಾರಿಕೆಯೂ ಬೇಕು. ಜೊತೆಗೆ ಹೀಗೆ ಒಪ್ಪಿತವಾದ್ದೆಲ್ಲವನ್ನೂ ತಿರಸ್ಕರಿಸುವಾಗ ಅದಕ್ಕೆ ಪರ್ಯಾಯವಾದ್ದನ್ನು ನೀಡುವಂಥ ಸೃಜನಶೀಲತೆಯೂ ಅನಿವಾರ್ಯ. ಮನುಷ್ಯನಿಗೆ ಸಹಜವಾಗಿದ್ದಂತಹ ಲೈಂಗಿಕತೆಯನ್ನು ತಾವು ಮೀರಿಕೊಂಡಿದ್ದೇವೆ ಎನ್ನುವುದನ್ನು ಹೆಂಗಸರು ತೋರಿಸುವುದು ಅನಿವಾರ್ಯವಾಗಿತ್ತು. ಏಕೆಂದರೆ, ಅದು ಕೌಟುಂಬಿಕ ನಿರೀಕ್ಷೆಗಳಿಗೆ ಸೆಡ್ಡುಹೊಡೆಯುವ ಉಪಾಯವೂ ಆಗಿತ್ತು. ಇಂತಹ ಅಸಾಧಾರಣವಾದದ್ದು ಹಾಗೂ ಅಪೂರ್ವವಾದ್ದನ್ನು ಬೇಡುವ ಕ್ರಮ ಯಾವೊಬ್ಬ ಸಾಮಾನ್ಯ ಮಹಿಳೆಗೂ ಸ್ವಲ್ಪ ದೂರವೇ.

**ಶೈಲಜಾ**

**ಪ್ರ**ತಿ ಸಮಾಜದೊಳಗಿರುವ ಸಂಪ್ರದಾಯಶೀಲತೆಯನ್ನು ಲ್ಲಾ ಕಾಲಕ್ಕೂ ಸಂವೇದನಾಶೀಲರಾದ ವ್ಯಕ್ತಿಗಳೆಲ್ಲರೂ – ಮಹಿಳೆ ಮತ್ತು ಪುರುಷ ಎನ್ನುವ ಭೇದವಿಲ್ಲದೆ ಕಾಲದಿಂದ ಲಕ್ಕೆ ಪ್ರಶ್ನಿಸುತ್ತಲೇ ಬಂದಿದ್ದಾರೆ. ಮಹಿಳೆಯರು ನಮ್ಮ ಮಾಜದಲ್ಲಿ ಪ್ರಮುಖ ಸ್ಥಾನದಲ್ಲಿ ಇದ್ದಿರುವ ಸಾಧ್ಯತೆ ಕಡಿಮೆ ನ್ನಿಸುತ್ತದೆ. ಈ ದೇಶದಲ್ಲಿ ಮಾತೃಮೂಲ ಸಮಾಜಗಳು ತುಂಬಾ ್ಯಾಪಕವಾಗಿ ಇತ್ತು ಎನ್ನುವುದು ಕೂಡ ಒಪ್ಪಿಕೊಳ್ಳುವುದು ಕಷ್ಟ. ಲೆಕ್ಕದಲ್ಲಿ ನೋಡಿದಾಗ ಅವರು ತುಂಬಾ ಗಂಭೀರವಾದ ೀರ್ಮಾನಗಳನ್ನು ತೆಗೆದುಕೊಳ್ಳಬಹುದಾದ ಸ್ಥಾನದಲ್ಲಿ ಇದ್ದಿರ ಹುದಾದ ಸಾಧ್ಯತೆಗಳು ಕಡಿಮೆಯೇ ಎನ್ನಬಹುದು. ಆದರೆ ವರು ಅಂಥದ್ದೊಂದು ಸ್ಥಿತಿಯಲ್ಲಿ ಇಲ್ಲದೇ ಇದ್ದಾಗ್ಯೂ ತಮ್ಮದೇ ದ ಕ್ರಮದಲ್ಲಿ ತಮಗಾಗಿ ಒಂದು ಅವಕಾಶವನ್ನು ಪಡೆದು ೊಳ್ಳಲು ಮತ್ತು ಈಗಾಗಲೇ ಇರುವ ಅವಕಾಶವನ್ನು ವಿಸ್ತರಿಸಿ ೊಳ್ಳಲು ಪ್ರಯತ್ನಿಸಿದ್ದಾರೆ. ಈ ಸಂಪ್ರದಾಯಶೀಲತೆಯನ್ನು ಶ್ನಿಸುವ ಪ್ರಕ್ರಿಯೆಯಲ್ಲಿ ಅವರು ಕೇವಲ ಗಂಡಸರನ್ನು ಮಾತ್ರ ಶ್ನಿಸಿಲ್ಲ, ಬದಲಾಗಿ ಮಹಿಳೆಯರನ್ನೂ ಪ್ರಶ್ನಿಸಿದ್ದಾರೆ. ಜೊತೆಗೆ ಇಡೀ ಮೌಲ್ಯವ್ಯವಸ್ಥೆಯನ್ನೇ ಪ್ರಶ್ನಿಸಿ ಆ ಮೂಲಕ ಅದನ್ನು ೀರಿಕೊಳ್ಳಲು ಪ್ರಯತ್ನಿಸಿದ್ದಾರೆ. ಒಂದು ವ್ಯವಸ್ಥೆಯ ಒಳಗೆ ದ್ದುಕೊಂಡಾಗಲಿ ಅಥವಾ ಅದನ್ನು ತಿರಸ್ಕರಿಸಿ ಹೊರಗೆ ೋಗಿಯಾಗಲೀ ಪರ್ಯಾಯ ಮಾರ್ಗವೊಂದನ್ನು ಹುಡುಕಲು ಣಗಾಡಿದ ಕೆಲವರನ್ನು ಮಾತ್ರ ಇಲ್ಲಿ ಚರ್ಚೆಗೆ ಆರಿಸಿಕೊಂಡಿದ್ದೇನೆ.



ಬೆಂಗಳೂರು ನಾಗರತ್ನಮ್ಮ

ಬಿಡುಗಡೆಯ ಹಾದಿಗಾಗಿ ಪ್ರಯತ್ನಿಸಿದವರನ್ನು ಗಮನಿಸಿದಾಗ, ಅಕ್ಕ ಮಹಾದೇವಿ, ಮೀರಾ ಬಾಯಿ ಹಾಗೂ ಹಲವಾರು ಭಕ್ತೆಯರು ಬಿಡುಗಡೆಗಾಗಿ ಅನುಸರಿಸಿದ ಆಧ್ಯಾತ್ಮಿಕ ಮಾರ್ಗವೊಂದು ಸ್ಪಷ್ಟವಾಗಿ ಗೋಚರಿಸುತ್ತದೆ. ಇದಲ್ಲದೆ ಬೆಂಗಳೂರು ನಾಗರತ್ನಮ್ಮ ಅಥವಾ ಇತರ ಕಲಾವಿದೆಯರು, ಲೇಖಕಿಯರು ಹಿಡಿದ ಸೃಜನಶೀಲ ಹಾದಿಯೊಂದು ಎದ್ದುಕಾಣುತ್ತದೆ. ಇನ್ನು ತುಂಬಾ ಓದಿಕೊಂಡು, ನಮ್ಮ ಧರ್ಮಶಾಸ್ತ್ರಗಳು ಮತ್ತು ಧರ್ಮರಹಸ್ಯಗಳ ಒಳಹೊರಗುಗಳನ್ನು ಚೆನ್ನಾಗಿ ತಿಳಿದುಕೊಂಡು ಅದನ್ನು ತೀವ್ರವಾಗಿ ಪ್ರಶ್ನಿಸಿಕೊಂಡು ಪರ್ಯಾಯ ಮಾರ್ಗಗಳನ್ನು ಆಲೋಚಿಸುತ್ತಾ ಸಾಮಾಜಿಕ ಬದುಕಿನಲ್ಲಿ ಕ್ರಿಯಾಶೀಲರಾಗಿದ್ದ ಪಂಡಿತಾ ರಮಾಬಾಯಿಯಂಥವರು ತುಳಿದ ಹಾದಿಯೊಂದು ಕಾಣಸುತ್ತದೆ. ಇದಲ್ಲದೆ, ಹಲವಾರು ಸಾಮಾನ್ಯ ಮಹಿಳೆಯರು, ತಮ್ಮ ದೈನಂದಿನ ಬದುಕಿನ ಒದ್ದಾಟಗಳ ಮತ್ತು ಜಂಜಾಟಗಳ ನಡುವೆ, ಸಂಸಾರದೊಳಗಿದ್ದೇ ತಮ್ಮನ್ನು ಬಂಧಿಸಿರುವ ಸಂಕೋಲೆಗಳನ್ನು ನಿಧಾನವಾಗಿ ಸಡಿಲಗೊಳಿಸುತ್ತಾ ಆ ಪ್ರಕ್ರಿಯೆಯೊಳಗೆ ತಮ್ಮಂಥ ಇನ್ನೊಂದಿಷ್ಟು ಹೆಣ್ಣುಮಕ್ಕಳನ್ನು ಸೇರಿಸಿಕೊಳ್ಳುತ್ತಾ, ಸಣ್ಣತೊರೆಯೊಂದು ತನ್ನ ಪಾತ್ರವನ್ನು ಹಿಗ್ಗಿಸಿಕೊಂಡು ದೊಡ್ಡ ನದಿಯಾಗುವ ರೀತಿಯಲ್ಲಿ ಹಲವು ವರುಷಗಳ ಕಾಲ ನಿಧಾನವಾಗಿ ತೆವಳಿಕೊಂಡು ಕಟ್ಟಿ ಬೆಳೆಸಿದ ಮಹಿಳಾ ಚಳುವಳಿಯ ಮಾದರಿಯೂ ಒಂದಿದೆ.

ಭಾರತದ ಭಕ್ತಿ ಚಳುವಳಿಯ ಹಿನ್ನೆಲೆಯಲ್ಲಿ ರೂಪುಗೊಂಡ ಭಕ್ತೆಯರು ಅಸಾಮಾನ್ಯ ಧೈರ್ಯ ಮತ್ತು ದಿಟ್ಟತನದ ವ್ಯಕ್ತಿತ್ವವುಳ್ಳವರು. ತಾವು ವ್ಯಾಖ್ಯಾನಿಸಿಕೊಂಡ ರೀತಿಯಲ್ಲೇ ಬದುಕಬೇಕೆಂಬ ಛಲ ಹೊಂದಿದ್ದವರು. ಅವರು ಅಂದು ಪ್ರಚಲಿತದಲ್ಲಿದ್ದ ಸಾಮಾಜಿಕ ಕಟ್ಟುಪಾಡುಗಳನ್ನು ಧಿಕ್ಕರಿಸಿಕೊಂಡು, ಮಹಿಳೆಯರಿಗೆಂದು ರೂಪಿಸಿದ್ದ ನೀತಿ ನಿಯಮಗಳನ್ನು ಗಾಳಿಗೆ ತೂರಿ, ತಾವು ಆಯ್ದುಕೊಂಡ ಬದುಕಿಗೆ ನಿಷ್ಠರಾಗಿ ಬದುಕಿದರು.

ದೇವರ ದೃಷ್ಟಿಯಲ್ಲಿ ಎಲ್ಲಾ ಆತ್ಮಗಳೂ ಒಂದು, ಅಲ್ಲಿ ಯಾವ ತಾರತಮ್ಯಕ್ಕೂ ಜಾಗವಿಲ್ಲ ಎಂದು ಪ್ರತಿಪಾದಿಸಿದರೂ ಕೂಡ ಭಕ್ತಿ ಎನ್ನುವುದು ಮಹಿಳೆಯರಿಗೆ ಮತ್ತು ಪುರುಷರಿಗೆ ಬೇರೆ ಬೇರೆಯೇ ಆಗಿತ್ತು. ಅಲ್ಲಿ ತುಂಬಾ ಮುಖ್ಯವಾಗಿದ್ದ ವ್ಯತ್ಯಾಸವೆಂದರೆ, ಭಕ್ತರಲ್ಲಿ ಪುರುಷರು ಗೃಹಸ್ಥರಾಗಿದ್ದುಕೊಂಡೂ ತಮಗೆ ಬೇಕಾದಂತೆ ಬದುಕಬಹುದಾಗಿತ್ತು. ಆದರೆ ಭಕ್ತೆಯರಿಗೆ ಇದು ನಿಜವಾಗಿಯೂ ಅಸಾಧ್ಯವಾಗಿತ್ತು.

ಭಕ್ತೆಯರು ಅವಿವಾಹಿತೆಯರಾಗಿದ್ದರೆ ಪರವಾಗಿಲ್ಲ ಅಥವಾ ಅವರ ಗಂಡಂದಿರೂ ಭಕ್ತರಾಗಿದ್ದರೆ ಸಮಸ್ಯೆ ಇರಲಿಲ್ಲ. ಆದರೆ ಗಂಡಂದಿರ ಉದ್ದೇಶ ಮತ್ತು ಮನಃಸ್ಥಿತಿ ಬೇರೆಯಾದಾಗ ಅವರು ಸಾಕಷ್ಟು ಕಠಿಣವಾದ ಸವಾಲನ್ನು ಎದುರಿಸಬೇಕಾಗುತ್ತಿತ್ತು. ಹಾಗಾಗಿ ಬಹುತೇಕ ಭಕ್ತೆಯರು ವೈವಾಹಿಕ ಬದುಕು ಮತ್ತು ಗೃಹಿಣಿಯ ಪಟ್ಟವನ್ನು ಬಿಟ್ಟು ಆಚೆಗೆ ನಡೆದರು ಮತ್ತು ತಾಯ್ತನದಿಂದ ದೂರವೇ ಉಳಿದರು. ವಿವಾಹದ ಚೌಕಟ್ಟಿನೊಳಗೆ ತಾವು ಅಂದು ಕೊಂಡಿದ್ದನ್ನು ಸಾಧಿಸಿಕೊಳ್ಳುವುದು ಅವರಿಗೆ ನಿಜವಾಗಿಯೂ ತುಂಬಾ ಕಷ್ಟವಾಗಿತ್ತು, ಹೆಚ್ಚಿನ ಬಾರಿ ಅವರು ತುಂಬಾ ತೀವ್ರತರವಾದ ಮಾನಸಿಕ ಮತ್ತು ದೈಹಿಕ ಕ್ರೌರ್ಯವನ್ನು ಎದುರಿಸಬೇಕಾಗುತ್ತಿತ್ತು. ಮಹಾದೇವಿ ಅಕ್ಕ, ಮೀರಾ, ಲಾಲ್ ಡೆಡ್ ಇನ್ನೂ ಮುಂತಾದವರ ಬದುಕನ್ನು ಗಮನಿಸಿದಾಗ ಅವರಿಗೆ ಕುಟುಂಬದೊಳಗೇ ಇದ್ದುಕೊಂಡು ತಮ್ಮ ಗಂಡ, ಅತ್ತೆ, ಮಾವ ಇವರನ್ನೆಲ್ಲಾ ಸಂಪೂರ್ಣವಾಗಿ ಕಡೆಗಾಣಿಸಿಕೊಂಡು, ಸಮಾಜ ವಿಧಿಸಿದ ಹೆಣ್ತನದ ಅಳತೆಗೋಲುಗಳಿಗೆ ಸರಿಯಾಗಿ ತಮ್ಮನ್ನು ತಾವು ಹೊಂದಿಸಿಕೊಂಡು ಬದುಕುವುದು ಸಾಧ್ಯವಾಗಲೇ ಇಲ್ಲ. ಹಾಗಾಗಿ ಅವರೆಲ್ಲರೂ ಬೇರೆ ಬೇರೆ ರೀತಿಯಲ್ಲಿ ಇದನ್ನು ಪ್ರತಿಭಟಿಸಿ ಹೊರಬಂದರು. ಅಕ್ಕಮಹಾದೇವಿ ಮತ್ತು ಲಾಲ್ ಡೆಡ್ ಅವರು ತಾವು ತೊಟ್ಟ ಬಟ್ಟೆಯನ್ನು ಕಳಚಿಹಾಕಿ, ಸಮಾಜದಲ್ಲಿ ಹೆಣ್ಣಿಗೆ ಅನಿವಾರ್ಯವಾಗಿದ್ದ ಮಾನ ಮರ್ಯಾದೆಯ ಕಲ್ಪನೆಯನ್ನೇ ಬುಡಮೇಲು ಮಾಡಿದರು. ಮೀರಾಬಾಯಿ, ಕುಲೀನ ಹೆಂಗಸರಿಗೆ ನಿಷಿದ್ಧವಾದ ಗೆಜ್ಜೆಗಳನ್ನು ಕಾಲಿಗೆ ಕಟ್ಟಿ, ಸಾರ್ವಜನಿಕವಾಗಿ ನರ್ತಿಸುತ್ತಾ, ಕುಲೀನ ಮನೆತನದ ಹೆಣ್ತನದ ಕಲ್ಪನೆಯನ್ನು ಕಿತ್ತೊಗೆದಳು. ಹೀಗೆ ಅಧ್ಯಾತ್ಮದ ಹುಡುಕಾಟಕ್ಕೆ ಕೊಟ್ಟುಕೊಂಡ ಇವರೆಲ್ಲರೂ ಅವಹೇಳನದ ವಸ್ತುಗಳಾಗುವ ಬದಲು ಪೂಜನೀಯರು ಹಾಗೂ ಗೌರವಾನ್ವಿತರು ಎನಿಸಿ ಕೊಂಡರು. ಅವರು ತಾವು ಲೈಂಗಿಕತೆಯನ್ನು ಸಂಪೂರ್ಣ ತ್ಯಜಿಸಿದ್ದೇವೆ ಎನ್ನುವುದನ್ನೂ ಸ್ಥಾಪಿಸಲು ಪ್ರಯತ್ನಿಸಿದರು. ಏಕೆಂದರೆ, ಮಹಿಳೆಯ ಬಿಡುಗಡೆಯ ಪ್ರಶ್ನೆಗೂ ಲೈಂಗಿಕತೆಗೂ ಎಲ್ಲಾ ಸಮಾಜದಲ್ಲೂ ತುಂಬಾ ಹತ್ತಿರದ ಸಂಬಂಧವಿತ್ತು. ಅದನ್ನು ಮೀರಿಕೊಂಡಿದ್ದೇವೆ ಎನ್ನುವುದನ್ನು ಸಾಬೀತುಗೊಳಿಸುವುದು ತುಂಬಾ ಅನಿವಾರ್ಯವಾಗಿತ್ತು. ಲೈಂಗಿಕತೆಯನ್ನು ಕಳಚಿಕೊಳ್ಳುವುದು ಹೆಚ್ಚು ಕಡಿಮೆ ಹೆಣ್ತನದಿಂದ ಬಿಡುಗಡೆಹೊಂದುವುದೇ ಆಗಿತ್ತು ಎನಿಸುತ್ತದೆ. ಇದು ಅಕ್ಕನ ಮಾತುಗಳಲ್ಲಿ ಸ್ಪಷ್ಟವಾಗುತ್ತದೆ. ''ಬಟ್ಟ ಮೊಲೆಯ ಭರದ ಜವ್ವನದ ಚೆಲುವನ ಕಂಡು ಬಂದಿರಣ್ಣ! ಅಣ್ಣಾ ನಾನು ಹೆಂಗೂಸಲ್ಲ! ಅಣ್ಣಾ ನಾನು ಸೂಳೆಯಲ್ಲ!'' ಎನ್ನುತ್ತಾಳೆ.

ಈ ಭಕ್ತೆಯರು ಅಂದಿನ ಸಾಮಾಜಿಕ ಧೋರಣೆಯನ್ನು, ಈ ಸಮಾಜ ಮಹಿಳೆಯರಿಗಾಗಿ ಸಿದ್ಧಪಡಿಸಿದ್ದ, ಒಪ್ಪಿತ ಮೌಲ್ಯಗಳನ್ನೇನೂ ಬುಡಮೇಲು ಮಾಡಿ, ಕಿತ್ತೊಗೆಯುವ ಪ್ರಯತ್ನ ಮಾಡಲಿಲ್ಲ. ಬದಲಾಗಿ ಅದೇ ವ್ಯವಸ್ಥೆಯನ್ನು ಇನ್ನೊಂದು ರೀತಿಯಲ್ಲಿ ಪುನರ್‌ಸೃಷ್ಟಿ ಕೊಂಡು ಬಿಡುಗಡೆಯ ಹಾದಿಯನ್ನು ಸುಗಮಗೊಳಿಸಿ ಕೊಂಡರು. ಲೌಕಿಕ ಗಂಡಂದಿರನ್ನು ಒಲೆಯೊಳಗಿಟ್ಟರೂ, ಗಂಡ, ಮಿಲನ ಈ ಕಲ್ಪನೆಗಳನ್ನು ಒಲೆಯೊಳಗಿಡಲಿಲ್ಲ. ''ಚೆನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿದ ಪುರುಷರು ನಮಗಾಗದ ಮೋರೆ ನೋಡಣ್ಣ!'' ಎನ್ನುತ್ತಾಳೆ ಮತ್ತು ''ಚೆನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿಹ ಪುರುಷರೆನಗೆ ಸಹೋದರ'' ಎನ್ನುತ್ತಾಳೆ. ಚೆನ್ನಮಲ್ಲಿಕಾರ್ಜುನನಿಗಾಗಿ, ಕನ್ಹಯ್ಯನಿಗಾಗಿ, ಕೃಷ್ಣನಿಗಾಗಿ ಪರಿತಪಿಸಿ ಅವನನ್ನು ಸೇರುವ ಬಯಕೆಯನ್ನು ಈ ಭಕ್ತೆಯರು ವ್ಯಕ್ತಪಡಿಸಿದರು. ಇದು ಸಮಾಜವನ್ನು ಎದುರುಹಾಕಿಕೊಳ್ಳದಿರಲು ಅವರು ಉದ್ದೇಶಪೂರ್ವಕವಾಗಿ ರೂಪಿಸಿಕೊಂಡ ತಂತ್ರವೋ ಅಥವಾ ಅವರಿಗೆ ಅಂದಿನ ಸಾಮಾಜಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಕೃಷ್ಣ ಅಥವಾ ಚೆನ್ನಮಲ್ಲಿಕಾರ್ಜುನನ ಜೊತೆಯ ಸಾಂಗತ್ಯವನ್ನು ಗ್ರಹಿಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತಿದ್ದುದೇ ಹಾಗೋ ಏನೋ ಗೊತ್ತಿಲ್ಲ. ಆದರೆ ಅದರ ಫಲಶ್ರುತಿ ಎಂದರೆ ಕೊನೆಯ ಪಕ್ಷ ವೈಯಕ್ತಿಕ ನೆಲೆಯಲ್ಲಿ ಉದ್ದೇಶ ಸಫಲವಾಗಿತ್ತು.

ಅಕ್ಕ ಮಹಾದೇವಿ, ಮೀರಾ ಮುಂತಾದವರು ಲೌಕಿಕ ಬಂಧನಗಳನ್ನು ಮತ್ತು ಅದರ ಜೊತೆಯಲ್ಲಿ ಉಳಿದೆಲ್ಲಾ ಸಂಬಂಧಿತ ಮೌಲ್ಯಗಳನ್ನೂ ತಿರಸ್ಕರಿಸಿದರು. ಅವರು ಇಲ್ಲಿ ಯಾವ ಬದಲಾವಣೆಗೂ ಹೋರಾಡದೆ, ಇಲ್ಲಿನ ವ್ಯವಸ್ಥೆ ಹಾಗೂ ಅದರ ಮೌಲ್ಯಗಳನ್ನು ಹಾಗೆಯೇ


# ಶೃಂಗಾರ ಪ್ರಕಾಶನ

ಚಿಕ್ಕನಾಯಕನಹಳ್ಳಿ - 572 214, ತುಮಕೂರು ಜಿಲ್ಲೆ
ದೂರವಾಣಿ : 08133 - 267116, 267416

ಹೈಸ್ಕೂಲು, ಕಾಲೇಜು, ಟಿಸಿಎಚ್, ಬಿಎಡ್ ವಿದ್ಯಾರ್ಥಿಗಳಿಗೆ ಸ್ಕೂಲ್ ಪ್ರಾಜೆಕ್ಟ್ ತಯಾರಿಸಲು ವಿದ್ಯಾಭ್ಯಾಸದ ಸಲಕರಣೆಯಾಗಿ ರಾಷ್ಟ್ರನಾಯಕರು, ಸ್ವಾತಂತ್ರ್ಯ ಹೋರಾಟಗಾರರು, ವಿಜ್ಞಾನಿಗಳು, ನೊಬೆಲ್ ಪ್ರಶಸ್ತಿ ವಿಜೇತರು, ಶಿಕ್ಷಣ ತಜ್ಞರು, ಸಾಹಿತಿಗಳು, ಮಹಾಪುರುಷರು, ದಾಸವರೇಣ್ಯರು, ಕರ್ನಾಟಕದ ಇತಿಹಾಸ ಪ್ರಸಿದ್ಧ ಪ್ರೇಕ್ಷಣೀಯ ಸ್ಥಳಗಳು ಮುಂತಾದ ಅತ್ಯುಪಯುಕ್ತ ಹಾಗೂ ಆಕರ್ಷಕ ವರ್ಣ ಭಾವಚಿತ್ರಗಳು. 130 GSM ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಮಾಹಿತಿ. 9" x 11" ಆರ್ಟ್ ಪೇಪರ್‌ನಲ್ಲಿ ಗಾತ್ರದಲ್ಲಿ ಲಭ್ಯ.

ಬೆಂಗಳೂರು ಶಾಖಾ ವಿಳಾಸ

# ಶೃಂಗಾರ ಪ್ರಕಾಶನ

164, 'ನಂದನ', 4ನೇ ಅಡ್ಡರಸ್ತೆ, ಗುರುದತ್ತ ಬಡಾವಣೆ
ಹೊಸಕೆರೆಹಳ್ಳಿ, ಬನಶಂಕರಿ 3ನೇ ಹಂತ
ಬೆಂಗಳೂರು - 560 085, ಮೊಬೈಲ್ : 98454 64886

ತೆದುಕೊಂಡುಹೋಗಲು ಬಿಟ್ಟರು. ಅಷ್ಟೇ ಅಲ್ಲದೆ ಮ್ಮ ವೈಯಕ್ತಿಕ ಬಿಡುಗಡೆಯ ಹಾದಿ ಅವರಿಗೆ ಮುಖ್ಯ ಯಿತು. ಅವರು ಆಯ್ದುಕೊಂಡ ಅನುಭಾವದ ದಿ ತೀರಾ ವೈಯಕ್ತಿಕವಾದದ್ದು. ಅಲ್ಲಿ ಮೀರುವಿಕೆ ತ್ತು ಸಾಕ್ಷಾತ್ಕಾರ ಸಾಧ್ಯವಾಗುವುದು ವೈಯಕ್ತಿಕ ಲೆಯಲ್ಲಿ ಮಾತ್ರ. ಈ ಎಲ್ಲಾ ಭಕ್ತೆಯರ ಕಾವ್ಯವು ಭ್ರಮಿಸುವುದೂ ಕೂಡ ಒಂದು ವೈಯಕ್ತಿಕ ಯ್ಕೆಯನ್ನೇ ಹೊರತು ಅದರಲ್ಲಿ ಸಾಮಾಜಿಕವಾಗಿ ಂಗ ಸಮಾನತೆಯನ್ನು ಸಾಧಿಸಬೇಕೆಂಬ ಉದ್ದೇಶ ವರಿಗಿತ್ತೆಂದು ಅನ್ನಿಸುವುದಿಲ್ಲ. (ಲಿಂಗ ಸಮಾನತೆ ನ್ನುವುದು ಸಾಮಾಜಿಕವಾಗಿ ಸ್ಥಾಪಿತವಾಗಬೇಕಾದ ಂದು ಮೌಲ್ಯ ಎನ್ನುವುದೇ ಬಹುಶಃ ತೀರ ಇತ್ತೀಚಿನ ಲ್ಪನೆ). ಆದರೆ ಇಲ್ಲಿ ಮಹಿಳಾವಾದದ ಮೂಲ ದುಗುಡ ನ್ನು ಗುರುತಿಸಿಕೊಳ್ಳುವುದು ಸಾಧ್ಯವಾಯಿತು ನ್ನುವುದು ತುಂಬಾ ಮುಖ್ಯವಾದ ಅಂಶ. ಂದರ್ಭದಲ್ಲಿ ಇದು ಸಾಕಷ್ಟು ದೊಡ್ಡ ಕೊಡುಗೆಯೇ.

ಅಂದಿನ ಕಾಲಘಟ್ಟವನ್ನು ಗಮನಿಸಿದರೆ, ಈ ಕ್ತೆಯರು ತುಳಿದ ಬಿಡುಗಡೆಯ ಹಾದಿ ಯಾವೊಬ್ಬ ಮಾನ್ಯ ಮಹಿಳೆಯೂ ಕಾಲಿಡುವುದಕ್ಕೆ ಹೆದರುವ ಂದು ಹಾದಿ ಎನ್ನುವುದಂತೂ ಸ್ಪಷ್ಟ. ಆ ದಾರಿ ಡಿಯುವುದಕ್ಕೆ ಮೊದಲನೆಯದಾಗಿ ತುಂಬಾ ಂಭೀರವಾದ ಆಧ್ಯಾತ್ಮಿಕ ತುಡಿತ ಬೇಕೇ ಬೇಕು ಮತ್ತು ಮಾಜಕ್ಕೆ ಒಪ್ಪಿತವಾದ ಎಲ್ಲವನ್ನೂ ತಿರಸ್ಕರಿಸುವ ದೆಗಾರಿಕೆಯೂ ಬೇಕು. ಜೊತೆಗೆ ಹೀಗೆ ಒಪ್ಪಿತ ದ್ದೆಲ್ಲವನ್ನೂ ತಿರಸ್ಕರಿಸುವಾಗ ಅದಕ್ಕೆ ಪರ್ಯಾಯ ದ್ದನ್ನು ನೀಡುವಂಥ ಸೃಜನಶೀಲತೆಯೂ ನಿವಾರ್ಯ. ಮನುಷ್ಯರಿಗೆ ಸಹಜವಾಗಿದ್ದಂತಹ ಂಗಿಕತೆಯನ್ನು ತಾವು ಮೀರಿಕೊಂಡಿದ್ದೇವೆ ಎನ್ನುವು ನ್ನು ಹೆಂಗಸರು ತೋರಿಸುವುದು ಅನಿವಾರ್ಯ ಗಿತ್ತು. ಏಕೆಂದರೆ, ಅದು ಕೌಟುಂಬಿಕ ನಿರೀಕ್ಷೆಗಳಿಗೆ ಡ್ಡುಹೊಡೆಯುವ ಉಪಾಯವೂ ಆಗಿತ್ತು. ಇಂತಹ ಸಾಧಾರಣವಾದದ್ದು ಹಾಗೂ ಅಪೂರ್ವವಾದ್ದನ್ನು ೀಡುವ ಕ್ರಮ ಯಾವೊಬ್ಬ ಸಾಮಾನ್ಯ ಮಹಿಳೆಗೂ ಲ್ಪ ದೂರವೇ. ಈ ಎಲ್ಲಾ ಭಕ್ತೆಯರು ನೂರಾರು ಜನ ಹಿಳೆಯರು ಬದುಕುತ್ತಿದ್ದ ಬದುಕಿನ ಕ್ರಮವನ್ನು ರಸ್ಕರಿಸಿದರು ಮತ್ತು ಸಮಾಜಮುಖಿಯಾಗುವ ಬದಲು ಕಾಂತವನ್ನು ಹುಡುಕಿಕೊಂಡು ಅಂತರ್ಮುಖಿಗಳಾಗಿ ಮಾಜದಿಂದ ದೂರವೇ ಉಳಿದರು. ಅವರ ಬದುಕಿನಲ್ಲಿ ಡೆಯಿತು ಎಂದು ನಂಬಲಾಗಿರುವ ಪವಾಡಗಳಿಂದಾಗಿ ಂದು ಬಗೆಯ ದೈವಿಕತೆ ಅವರಿಗೆ ಅಂಟಿಕೊಂಡಿದೆ. ಗಾಗಿ ಈ ಚೌಕಟ್ಟಿನಲ್ಲಿ ಸಾಧಾರಣ ಮಹಿಳೆಯರು ನುಷ್ಯ ಸಹಜವಾದ ಎಲ್ಲಾ ಆಸೆಗಳನ್ನು ಉಳಿಸಿ ಂಡೇ ತಮ್ಮ ಬದುಕಿನ ಮೂಲಭೂತ ಹಕ್ಕುಗಳನ್ನು ಡೆದುಕೊಳ್ಳಬಹುದಾದ ಸಾಧ್ಯತೆಗಳು ತೀರಾ ಕಡಿಮೆ. ದು ಸಾಧ್ಯವಾಗಬಹುದಾದ ಇನ್ಯಾವುದಾದರೂ ಾದರಿಯೊಂದು ಇತ್ತೆ?

೧೯ನೇ ಶತಮಾನದ ಕೊನೆಯಲ್ಲಿ ತಾನು ಬದುಕಿದ್ದ ಕೀರ್ಣ ಹಾಗೂ ಸ್ಥಿತ್ಯಂತರದ ಕಾಲದೊಡನೆ ವಹರಿಸಿದ ಮಹಿಳೆಯ ಕ್ರಮವೊಂದು ನಮ್ಮ ುಂದಿದೆ. ಪಂಡಿತಾ ರಮಾಬಾಯಿ ಭಾರತ ಕಂಡ ಅಪರೂಪವಾದ ಮಹಿಳೆಯರಲ್ಲಿ ಒಬ್ಬಳು. ಪಂಡಿತಾ ಎನ್ನುವ ವಿಶೇಷಣವೇ ಸೂಚಿಸುವಂತೆ ಆಕೆ ತುಂಬ ದೊಡ್ಡ ವಿದ್ವಾಂಸಳು, ಹಾಗೂ ಮಹಾನ್ ಮೇಧಾವಿ. ತುಂಬಾ ಆತ್ಮ ವಿಶ್ವಾಸ, ದಿಟ್ಟತನದ ಹಾಗೂ ವಾಕ್‌ಚಾತುರ್ಯವಿದ್ದ ಮಹಿಳೆ. ಅವಳು ವೇದ, ಧರ್ಮಶಾಸ್ತ್ರಗಳು, ಪುರಾಣ, ಉಪನಿಷತ್ತುಗಳು, ಮುಂತಾದವುಗಳಲ್ಲಿ ಪಾರಂಗತಳು ಎನ್ನುವ ಕಾರಣಕ್ಕೆ ಆ ಕಾಲದ ವಿದ್ವಾಂಸರು ಅವಳಿಗೆ ಸರಸ್ವತಿ ಎನ್ನುವ ಬಿರುದನ್ನು ನೀಡಿದ್ದರು.

ಭಾರತದ ಉದ್ದಗಲಕ್ಕೂ ಸುತ್ತಾಡಿದ್ದ ರಮಾಬಾಯಿ, ಕಲ್ಕತ್ತೆಯಲ್ಲಿ ಉನ್ನತಮಟ್ಟದ ಬುದ್ಧಿಜೀವಿಗಳನ್ನು ಭೇಟಿಯಾದಳು. ಅವರೆಲ್ಲರೂ ಭಾರತೀಯ ಸಮಾಜದ ಸುಧಾರಣೆಯಲ್ಲಿ ತೊಡಗಿಕೊಂಡಿದ್ದವರು. ಅವರಿಗಂತೂ ರಮಾಬಾಯಿ ದೇವರೇ ಕಳಿಸಿದ ವರದ ಹಾಗೆ ಕಂಡಳು. ಅವರ ಕಣ್ಣಿಗೆ ರಮಾಬಾಯಿ ಪ್ರಾಚೀನ ಭಾರತದ




ಸ್ತ್ರೀತ್ವದ ಸಜೀವ ಮಾದರಿಯಾಗಿ ಕಂಡಳು. ಗಾರ್ಗಿ ಮತ್ತು ಮೈತ್ರೇಯಿಯೇ ಮೈದಳೆದಂತೆ ಅನ್ನಿಸಿದಳು. ಪ್ರಾಚೀನ ಭಾರತೀಯ ಸಂಸ್ಕೃತಿಯಲ್ಲಿ ಭಾರತೀಯ ಮಹಿಳೆಯ ಶಿಕ್ಷಣ ಹಾಗೂ ವಿಮೋಚನೆಯ ವಿಚಾರವಾಗಿ ಮಾತನಾಡಬಲ್ಲಂಥ ಏಕೈಕ ವ್ಯಕ್ತಿ ಆಕೆ ಎಂದೆನಿಸಿತ್ತು. ಈ ಬಗ್ಗೆ ಮಾತನಾಡಲು ಅವಳು ಮೊದಲು ಧರ್ಮಶಾಸ್ತ್ರಗಳನ್ನು ಅಧ್ಯಯನ ಮಾಡಬೇಕಿತ್ತು. ಮಹಿಳೆಯರಿಗೆ ನಿಷಿದ್ಧವಾದ ಧರ್ಮಶಾಸ್ತ್ರಗಳ ಅಧ್ಯಯನಕ್ಕೆ ಅವಳಿಗೆ ಅವರು ಅವಕಾಶ ಮಾಡಿಕೊಟ್ಟರು. ಆದರೆ ಈ ಅಧ್ಯಯನ, ಧರ್ಮಶಾಸ್ತ್ರಗಳು ಎಲ್ಲಾ ಜಾತಿಯ ಮಹಿಳೆಯರನ್ನು ಮತ್ತು ಕೀಳ್ಜಾತಿಯ ಗಂಡಸರನ್ನು ಅತ್ಯಂತ ತಿರಸ್ಕಾರದಿಂದ ಕಾಣುತ್ತಿದ್ದವು ಮತ್ತು ಅವರನ್ನು ಅಪವಿತ್ರರೆಂದು ಭಾವಿಸುತ್ತಿತ್ತು ಎನ್ನುವುದು ಅವಳಿಗೆ ಅರಿವಾಯಿತು. ಕಲ್ಕತ್ತೆಯ ಬುದ್ಧಿಜೀವಿ ಸುಧಾರಕರ ನಿರೀಕ್ಷೆಗೆ ವ್ಯತಿರಿಕ್ತವಾಗಿ ಅವಳು ಭಾರತೀಯ ಪರಂಪರೆಯನ್ನು, ಅದರಲ್ಲಿ ಮಹಿಳೆಯ ಸ್ಥಾನವನ್ನು ವೈಭವೀಕರಿಸುವುದಕ್ಕೆ ಬದಲಾಗಿ ಅವಳು ಅದರ ಹುಳುಕುಗಳನ್ನು ಬಯಲಿಗೆಳೆದು ಅದನ್ನು ಪ್ರಶ್ನಿಸಲಾರಂಭಿಸಿದಳು. ಜೊತೆಗೆ ಭಾರತೀಯ ಸಮಾಜವು ವ್ಯಾಖ್ಯಾನಿಸಿದ್ದ ಸ್ತ್ರೀತ್ವದ ಕಲ್ಪನೆಯನ್ನೂ ರಮಾಬಾಯಿ ಹತ್ತು ಹಲವು ಬಗೆಗಳಲ್ಲಿ ಪ್ರಶ್ನಿಸಿದರು, ಅಷ್ಟೇ ಅಲ್ಲ. ಅದನ್ನು ತಿರಸ್ಕರಿಸಿದರು ಕೂಡ.

ಮೊದಲನೆಯದಾಗಿ, ಅಂತರ್ಜಾತೀಯ ವಿವಾಹವಾಗುವುದರ ಮೂಲಕ ಹೆಣ್ಣಿನ ಶೋಷಣೆಯ ಮೂಲವಾಗಿದ್ದ ವರ್ಣಾಶ್ರಮ ಧರ್ಮವನ್ನು ಪ್ರಶ್ನಿಸಿದರು. ಬಿಪಿನ್ ಬಿಹಾರಿ ಮೇಧಾವಿ ಎನ್ನುವ ಬಂಗಾಲಿ ಶೂದ್ರನನ್ನು ಸಿವಿಲ್ ವಿವಾಹ ಕಾಯಿದೆಯ ಪ್ರಕಾರ ಮದುವೆಯಾದಳು. ಆದರೆ ಎರಡೇ ವರ್ಷಗಳಲ್ಲಿ ೨೭ರ ಹರೆಯದಲ್ಲಿ ವಿಧವೆಯಾದಳು. ಎರಡನೆಯದಾಗಿ, ವಿಧವೆಯಾದ ಮೇಲೆ ಭಾರತೀಯ ಸಂಸ್ಕೃತಿ ನಿರೀಕ್ಷಿಸುವಂತೆ ರಮಾಬಾಯಿ ಸಾರ್ವಜನಿಕ ಬದುಕಿಗೆ ಬೆನ್ನು ತಿರುಗಿಸದೆ, ತನ್ನಂತೆ ಸಂಕಷ್ಟಕ್ಕೆ ಮತ್ತು ದಬ್ಬಾಳಿಕೆಗೆ ಒಳಗಾದ ಹೆಣ್ಣುಮಕ್ಕಳ ಸೇವೆಗೆ ಟೊಂಕ ಕಟ್ಟಿ ನಿಲ್ಲುತ್ತಾಳೆ. ವಿಧವೆಯರು ಅಂತರ್ಮುಖಿಗಳಾಗಿದ್ದು ಸಮಾಜದ ಕಣ್ಣಿನಿಂದ ದೂರವಿರಬೇಕೆಂಬ ಸಾಂಪ್ರದಾಯಿಕ ಕಟ್ಟಳೆಯನ್ನು ಗಾಳಿಗೆ ತೂರುತ್ತಾರೆ. ಅಪಾರವಾದ ಒತ್ತಡ, ದಬ್ಬಾಳಿಕೆ ಮತ್ತು ಶೋಷಣೆಯನ್ನು ಅನುಭವಿಸುತ್ತಿದ್ದ ಮೇಲ್ಜಾತಿಯ ವಿಧವೆಯರಿಗಾಗಿ ಒಂದು ಆಶ್ರಯತಾಣದ ವ್ಯವಸ್ಥೆಯನ್ನು ಮಾಡಬೇಕೆಂಬ ಆಸೆಯಿಂದ ತುಂಬಾ ಕೆಲಸ ಮಾಡುತ್ತಾಳೆ.

ಪುಣೆಯನ್ನು ತನ್ನ ಕಾರ್ಯಕ್ಷೇತ್ರವಾಗಿ ರಮಾಬಾಯಿ ಆರಿಸಿಕೊಳ್ಳುತ್ತಾರೆ. ಮಹಿಳೆಯರ ಉದ್ಧಾರಕ್ಕೆಂದು ಆರ್ಯ ಮಹಿಳಾ ಸಮಾಜಗಳನ್ನು ಸ್ಥಾಪಿಸಿ ಕಾರ್ಯನಿರತರಾಗಿದ್ದ ಪ್ರಾರ್ಥನಾ ಸಮಾಜದ ಮಂದಗಾಮಿ ಸುಧಾರಕರಾಗಿದ್ದ ರಾನಡೆ ಮತ್ತು ಭಂಡಾರ್ಕರ್ ರಮಾಬಾಯಿಗೆ ಬೆಂಬಲ ನೀಡುತ್ತಾರೆ. ಆದರೆ ಮಹಿಳೆಯ ಉದ್ಧಾರದ ಬಗ್ಗೆ ಮಹತ್ವಾಕಾಂಕ್ಷೆ ಹೊಂದಿದ್ದ ರಮಾಬಾಯಿಗೆ ಅವರ ಕಾರ್ಯಚಟುವಟಿಕೆ ಮತ್ತು ಅವರ ಉದ್ದೇಶದ ಸೀಮಿತತೆ ನಿರಾಶೆಯನ್ನುಂಟುಮಾಡುತ್ತದೆ. ಹಾಗಾಗಿ ನಂತರದಲ್ಲಿ ಅವರಿಂದ ಬೇರ್ಪಟ್ಟು ಶಾರದಾ ಸದನವನ್ನು ತೆರೆಯುತ್ತಾರೆ.

ತಾನು ಬೆಂಬಲಿಸಲು ಹೊರಟ ವಿಧವೆಯರನ್ನು ಸಮಾಜಮುಖಿಗಳನ್ನಾಗಿ ಮಾಡಲು ಪ್ರಯತ್ನಿಸುತ್ತಾಳೆ. ವಿಧವೆಯರು ಸಂತೋಷರಹಿತವಾದ ನಿಸ್ಸತ್ವವಾದ ಜೀವನವನ್ನು ನಡೆಸಬೇಕು ಮತ್ತು ಸಮಾಜದಿಂದ ದೂರವಿರಬೇಕೆಂಬ ಕಲ್ಪನೆಯನ್ನೇ ಕಿತ್ತುಹಾಕಲು ಪ್ರಯತ್ನಿಸಿದರು. ಹಂಟರ್ ಸಮಿತಿಯ ಮುಂದೆ ಹಾಜರಾಗಿ ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡಬೇಕು ಮತ್ತು ಅವರಿಗೆ ಶಿಕ್ಷಕರು ಮತ್ತು ವೈದ್ಯರು ಆಗಲು ಬೇಕಾದ ತರಬೇತಿ ನೀಡಬೇಕೆಂದು ಕೇಳಿಕೊಳ್ಳುತ್ತಾರೆ. ಮುಕ್ತಿಸದನದಲ್ಲಿ ಹುಡುಗಿಯರಿಗೆ ತೋಟಗಾರಿಕೆ, ನೇಯ್ಗೆ, ಹೈನುಗಾರಿಕೆ, ಅಡುಗೆಮಾಡುವುದು, ಶುಶ್ರೂಷೆ ಮಾಡುವುದು, ಮುದ್ರಣ ಮಾಡುವುದು, ಮುಂತಾದ ಕೆಲಸಗಳನ್ನೆಲ್ಲಾ ಕಲಿಸಿ ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡಲು ಪ್ರಯತ್ನಿಸಿದರು. ವಿಧವಾ ವಿವಾಹವನ್ನು ಅವರು ಗ್ರಹಿಸಿದ ರೀತಿ ಕೂಡ ಅವರ ಸಮಕಾಲೀನ ಪುರುಷರಿಗಿಂತ ಭಿನ್ನವಾಗಿತ್ತು. ಅವರ ದೃಷ್ಟಿಯಲ್ಲಿ ವಿಧವೆಯರನ್ನು ಸಾಮಾಜಿಕ ಬದುಕಿಗೆ ಮತ್ತೆ

ಹೋಗುವಂತೆ ಮಾಡುವ ಹಲವಾರು ವಿಧಾನಗಳಲ್ಲಿ ವಿವಾಹವೂ ಒಂದಾಗಿತ್ತು. ವಿಧವೆಯರನ್ನು ಸಮಾಜಕ್ಕೆ ಸೇರ್ಪಡೆಯಾಗುವಂತೆ ಮಾಡಲು ಯತ್ನಿಸುತ್ತಿದ್ದ ರಮಾಬಾಯಿಯು ಹೆಣ್ತನ ಮತ್ತು ವೈಧವ್ಯ ಎರಡನ್ನೂ ತನ್ನ ಕಾಲದ ಪುರುಷ ಸುಧಾರಕರಿಗಿಂತ ಭಿನ್ನವಾಗಿ ನೋಡಲು ಪ್ರಯತ್ನಿಸುತ್ತಿದ್ದರು.

ಶಾರದಾ ಸದನದೊಳಗೆ ಮತ್ತು ನಂತರ ಮುಕ್ತಿಸದನದಲ್ಲಿ ಎಲ್ಲಾ ಜಾತಿಯ ಮಹಿಳೆಯರಿಗೂ ರಮಾಬಾಯಿ ಆಶ್ರಯ ನೀಡಿದರು. ಜಾತಿಯ ಪ್ರಶ್ನೆಯನ್ನು ಮುಟ್ಟದೆ ಲಿಂಗಸಮಾನತೆಯ ಪ್ರಶ್ನೆಯನ್ನು ಮತ್ತು ಮಹಿಳಾ ವಿಮೋಚನೆಯ ಪ್ರಶ್ನೆಯನ್ನು ಆಲೋಚಿಸುವುದು ನಿಜವಾಗಿಯೂ ಸಾಧ್ಯವಿಲ್ಲವೆನ್ನುವುದು ರಮಾಬಾಯಿಯ ಅರಿವಿಗೆ ಬಂದಿತ್ತು. ಮೇಲ್ನೋಟಕ್ಕೆ ಮಹಿಳೆಯರೆಲ್ಲರೂ ಒಂದೇ ಎಂದು ಮಾತನಾಡುವುದು ಸಾಧ್ಯವಾದರೂ ಪ್ರಾಯೋಗಿಕವಾಗಿ ಹಾಗೂ ತಾತ್ವಿಕವಾಗಿ ಅದು ಸಾಧ್ಯವಿಲ್ಲ. ಏಕೆಂದರೆ, ಜಾತಿ ಮತ್ತು ಅಂತಸ್ತುಗಳೂ ಕೂಡ ಮಹಿಳೆಯರನ್ನು ವಿಭಜಿಸುತ್ತಲೇ ಇರುತ್ತವೆ ಮತ್ತು ಅವು ಕೂಡ ಲಿಂಗ ಸಮಾನತೆಯನ್ನು ಅಸಾಧ್ಯಗೊಳಿಸುತ್ತಾ ಹೋಗುತ್ತಿರುತ್ತದೆ ಎನ್ನುವುದನ್ನು ಅವರು ಗ್ರಹಿಸಿದ್ದರು. ಹಾಗಾಗಿ ಪ್ರಾರಂಭದಿಂದಲೂ ಅವರು ತಮ್ಮ ಸಂಸ್ಥೆಯನ್ನು ಒಂದು ಧರ್ಮನಿರಪೇಕ್ಷ, ಜಾತ್ಯತೀತ ಸಂಸ್ಥೆಯಾಗಿಯೇ ರೂಪಿಸಲು ಪ್ರಯತ್ನಿಸಿದ್ದರು.

ರಾಜಕೀಯ ಮಹಿಳೆಗೆ ನಿಷಿದ್ಧ ಎನ್ನುವ ಆ ಕಾಲದ ಚಿಂತನೆಗಿಂತ ರಮಾಬಾಯಿಯ ಆಲೋಚನೆ ಭಿನ್ನವಾಗಿತ್ತು. ರಾಜಕೀಯವಾಗಿಯೂ ಮಹಿಳೆಯರ ಅಭಿಪ್ರಾಯವನ್ನು ಅಭಿವ್ಯಕ್ತಿಸುವ ಒಂದು ಅವಕಾಶ ಎನ್ನುವುದು ರಮಾಬಾಯಿ ಅಭಿಪ್ರಾಯವಾಗಿತ್ತು. ೧೮೮೯ರಲ್ಲಿ ಬಾಂಬೆಯಲ್ಲಿ ನಡೆದ ಕಾಂಗ್ರೆಸ್ಸಿನ ವಾರ್ಷಿಕ ಸಭೆಯಲ್ಲಿ ರಾನಡೆಯವರೊಡನೆ ರಮಾಬಾಯಿಯೂ ಭಾಗವಹಿಸಿದ್ದರು. ಆಗ ರಾನಡೆಯವರು ಮಹಿಳೆಯರು ರಾಜಕೀಯಕ್ಕೆ ಬರುವುದರ ಬಗ್ಗೆ ಅಂತಹ ಒಲವನ್ನು ಹೊಂದಿರಲಿಲ್ಲ. ಆ ಸಭೆಯಲ್ಲಿ ರಮಾಬಾಯಿಯು, ಮಹಿಳೆಯರನ್ನು ಪುರುಷರು ಮೂಲೆಗುಂಪು ಮಾಡಿರುವುದರ ಬಗೆಗೆ ಸಭೆಯ ಗಮನ ಸೆಳೆದರು, ಜೊತೆಗೆ, ''ನನ್ನ ದೇಶಬಂಧುಗಳೇ, ನನ್ನ ಧ್ವನಿ ತೀರಾ ಕ್ಷೀಣವಾದುದು ಎನ್ನುವುದರಲ್ಲಿ ಅಚ್ಚರಿಯೇನಿಲ್ಲ; ಏಕೆಂದರೆ, ಒಬ್ಬ ಮಹಿಳೆಯ ಧ್ವನಿ ಬಲಗೊಳ್ಳುವುದಕ್ಕೆ ತಾವು ಅವಕಾಶವನ್ನೇ ನೀಡಿಲ್ಲವಲ್ಲ'' ಎಂದಳು. ಆ ಸಭೆಯಲ್ಲಿ ಅವಳು ಮಹಿಳೆಯರಿಗೆ ತಮ್ಮ ಬದುಕನ್ನು ತಾವೇ ನಿರ್ಧರಿಸಿಕೊಳ್ಳುವ ಅವಕಾಶವನ್ನು ಮಾಡಿಕೊಡಬೇಕು; ಆಗ ಅವರೂ ಕೂಡ ಸ್ಪಾರ್ಟಾದ ಮಹಿಳೆಯರಂತೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪುರುಷರ ಜೊತೆಗೂ ನಿಂತು ಹೋರಾಡುತ್ತಾರೆ ಎಂದರು ಮತ್ತು ವಿಧವೆಯರಿಗೆ ತಲೆಬೋಳಿಸಿಕೊಳ್ಳುವ ಅಥವಾ ಬೋಳಿಸಿಕೊಳ್ಳದಿರುವ ಆಯ್ಕೆಯನ್ನು ಅವರಿಗೇ ನೀಡಬೇಕು ಎಂದರು.

ಮಹಿಳೆಯರು ಪುರುಷರ ಹಿಡಿತ ಹಾಗೂ ದಬ್ಬಾಳಿಕೆಯಿಂದ ಹೊರಬರಬೇಕು ಎಂದು ಭಾಷಣ ಮಾಡುತ್ತಿದ್ದರು. ಇದು ಸಾಂಪ್ರದಾಯಿಕ ಮನೋಭಾವವಿದ್ದ ಪುರುಷರು ಹಾಗೂ ಮಹಿಳೆಯರಿಬ್ಬರಿಗೂ ಗಾಬರಿಯನ್ನು ಹುಟ್ಟಿಸಿತು. ಇದರಿಂದಾಗಿ ಬಹುತೇಕ ಜನರು, ಸಾಕಷ್ಟು ಪ್ರಗತಿಪರರಾಗಿದ್ದ ರಾನಡೆಯ ಪತ್ನಿ ರಮಾಬಾಯಿಯೂ ಸೇರಿದಂತೆ ಹೆಚ್ಚಿನ ಮಹಿಳೆಯರು ಪಂಡಿತಾ ರಮಾಬಾಯಿಯ ಸಹವಾಸದಿಂದ ದೂರ ಉಳಿಯಲು ಪ್ರಯತ್ನಿಸುತ್ತಿದ್ದರು. ಇದೇ ಹೊತ್ತಿನಲ್ಲಿ ತೀವ್ರವಾದ ಒಂದು ಆಧ್ಯಾತ್ಮಿಕ ಹುಡುಕಾಟದಲ್ಲಿ ತೊಡಗಿಕೊಂಡಿದ್ದ ರಮಾಬಾಯಿಗೆ ಹಿಂದೂ ಧರ್ಮ, ಬ್ರಹ್ಮ ಸಮಾಜ ಅಥವಾ ಪ್ರಾರ್ಥನಾ ಸಮಾಜ ಇವುಗಳು ತೃಪ್ತಿಯನ್ನು ನೀಡಲಿಲ್ಲ. ಈ ಹುಡುಕಾಟದಲ್ಲಿ ಅವರು ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡರು. ಅಲ್ಲಿ ಕೂಡ ರಮಾಬಾಯಿಗೆ ಭ್ರಮನಿರಸನ ಉಂಟಾಯಿತು. ಈ ಎಲ್ಲಾ ಅನುಭವಗಳೂ ಹೆಣ್ಣಿಗೆ ಸಂಬಂಧಪಟ್ಟಂತೆ ರಮಾಬಾಯಿಯ ಗ್ರಹಿಕೆಯನ್ನು ತುಂಬಾ ಚುರುಕುಗೊಳಿಸಿತ್ತು. ಒಂದು ಸಾಮಾಜಿಕ ವ್ಯವಸ್ಥೆಯೊಳಗೆ ಧರ್ಮ, ಜಾತಿ ಹಾಗೂ ಕಟ್ಟಳೆಗಳ ಮೂಲಕ ಪುರುಷಪ್ರಾಧಾನ್ಯತೆಯು ಕಾರ್ಯ ನಿರ್ವಹಿಸುವ ರೀತಿ ರಮಾಬಾಯಿಗೆ ಈಗ ತುಂಬಾ ನಿಚ್ಚಳವಾಗಿತ್ತು.

ಆದರೆ ಈ ಮತಾಂತರ ಒಂದು ತಳಮಳವನ್ನೇ ಉಂಟುಮಾಡಿತು. ವಸಾಹತು ಆಳ್ವಿಕೆಯ ಆ ಸಂದರ್ಭದಲ್ಲಿ ತಿಲಕ್, ವಿವೇಕಾನಂದ ಮುಂತಾದವರು ಭಾರತೀಯ ಹಿರಿಮೆ ಗರಿಮೆಗಳನ್ನು ಹೆಣ್ತನದ ಮೂಲಕ ಕಟ್ಟಲು ಪ್ರಯತ್ನಿಸುತ್ತಿದ್ದರು. ವಿಧವೆಯರು ಭಾರತೀಯ ಸಮಾಜದಲ್ಲಿ ಅತ್ಯುಚ್ಚವಾದ ಆಧ್ಯಾತ್ಮಿಕ ಮತ್ತು ನೈತಿಕ ಮೌಲ್ಯಗಳ ಪ್ರತೀಕ ಮತ್ತು ಅವರು ಇಲ್ಲಿ ಅತ್ಯಂತ ಪೂಜನೀಯರು ಎಂದು ವಿವೇಕಾನಂದ ಅಮೇರಿಕಾದಲ್ಲಿ ಪ್ರಚಾರಮಾಡುತ್ತಿದ್ದರು. ಅವರ ಜಗತ್ಪ್ರಸಿದ್ಧ ಚಿಕಾಗೋ



ಪಂಡಿತಾ ರಮಾಬಾಯಿ

ಭಾಷಣದಲ್ಲೂ ಇದೇ ಶ್ರುತಿ ಇತ್ತು. ವಿಧವೆಯರು ಭಾರತೀಯ ಸಮಾಜದ ಸನ್ಯಾಸಿನಿಯರು ಎಂದು ಪ್ರತಿಬಿಂಬಿಸುತ್ತಿದ್ದರು. ಹೀಗೆ ಅವರು ಭಾರತೀಯ ಹೆಣ್ಣನ್ನು ಕುರಿತು ರಮಾಬಾಯಿಗಿಂತ ಭಿನ್ನವಾದ ಮತ್ತು ಹೆಚ್ಚುಕಡಿಮೆ ಅದಕ್ಕೆ ವ್ಯತಿರಿಕ್ತವಾದ ಕಥನವನ್ನು ಮುಂದಿಟ್ಟರು. ಇವೆಲ್ಲವೂ ತಿಲಕ್, ವಿವೇಕಾನಂದ ಹಾಗೂ ಇತರ ರಾಷ್ಟ್ರೀಯವಾದಿಗಳು ಕಟ್ಟುತ್ತಿದ್ದ ರಾಷ್ಟ್ರೀಯತೆಯ ಕಲ್ಪನೆಗೆ ವಿರುದ್ಧವಾಗಿತ್ತು. ಹಾಗಾಗಿ ತಿಲಕ್, ವಿವೇಕಾನಂದ ಮುಂತಾದವರು ರಮಾಬಾಯಿಯನ್ನು ತಿರಸ್ಕರಿಸಿದರು. ರಾಮಕೃಷ್ಣ ಪರಮಹಂಸರು ರಮಾಬಾಯಿಯನ್ನು ಅತಿ ಆಸೆಯ, ಅಹಂಕಾರಿ ಹೆಣ್ಣುಮಗಳು ಎಂದು ತಿರಸ್ಕರಿಸಿದರು. ಅವಳ ಹುಡುಕಾಟ ಕೇವಲ ಹೆಸರು ಮತ್ತು ಕೀರ್ತಿಯ ಹುಡುಕಾಟ ಎಂದರು.

ಒಂದರ್ಥದಲ್ಲಿ ಭಾರತದಲ್ಲಿ ನಂತರದ ದಿನಗಳಲ್ಲಿ ರೂಪುಗೊಂಡ ಮಹಿಳಾ ಚಳುವಳಿಯು ಕೈಗೆತ್ತಿಕೊಂಡ ಪ್ರಶ್ನೆಗಳೆಲ್ಲವನ್ನೂ ಪಂಡಿತಾ ರಮಾಬಾಯಿ ಕೈಗೆತ್ತಿಕೊಂಡಿದ್ದರು. ಹೀಗೆ ಧರ್ಮ, ಜಾತಿ, ರಾಷ್ಟ್ರೀಯತೆಯ ಕಲ್ಪನೆ, ರಾಜಕೀಯ ಸ್ತ್ರೀತ್ವದ ಕಲ್ಪನೆ ಇವೆಲ್ಲದರೊಳಗೆ ಅಂತರ್ಗತವಾಗಿದ್ದ ಪುರುಷಪ್ರಾಧಾನ್ಯವನ್ನು ಪ್ರಶ್ನಿಸುವ ಮೂಲಕ ರಮಾಬಾಯಿಯು ಒಂದು ಬಹು ಆಯಾಮಗಳ ಹೋರಾಟವನ್ನೇ ಘೋಷಿಸಿದ್ದಳು. ಏಕೆಂದರೆ ಅವಳು ಎತ್ತಿದ ಪುರುಷಪ್ರಧಾನತೆಯ ಪ್ರಶ್ನೆ ಪ್ರಾಚೀನ ಭಾರತದ ಭವ್ಯಪರಂಪರೆ, ಸ್ತ್ರೀತ್ವ, ಭಾರತದಲ್ಲಿ ವಿಧವೆಯರ ಸ್ಥಾನಮಾನ, ಜಾತಿ ಮತ್ತು ಹೆಣ್ಣಿನ ಸಂಬಂಧವನ್ನು ಕುರಿತ ರಾಷ್ಟ್ರೀಯವಾದಿ ಕಥನ ಇವೆಲ್ಲವನ್ನೂ ಪ್ರಶ್ನಿಸುತ್ತಿತ್ತು. ಇದು ನಮ್ಮ ರಾಷ್ಟ್ರೀಯ ನಾಯಕರೆಲ್ಲರ ಹಾಗೂ ಆ ಕಾಲದ ಬಹುಸಂಖ್ಯಾತರ ಗ್ರಹಿಕೆಗೆ ಇರಸುಮುರಸು ಉಂಟುಮಾಡಿತ್ತು. ಹಾಗಾಗಿ ಆ ಸಾಮಾಜಿಕ ಘಟ್ಟದಲ್ಲಿ ರಮಾಬಾಯಿ ಎಷ್ಟೇ ಪ್ರಭಾವಶಾಲಿಯಾಗಿದ್ದರೂ ಕೂಡ ಆ ಸಂದರ್ಭದ ಭಾರತೀಯ ಸಮಾಜ ಅವರನ್ನು ಒಳಗೊಳ್ಳುವುದು ಸಾಧ್ಯವಿರಲೇ ಇಲ್ಲ, ಏಕೆಂದರೆ ಅವರು ಆ ಕಾಲದ ಬಹುತೇಕ ಜನರ ಮೂಲಭೂತ ಗ್ರಹೀತಗಳು ಮತ್ತು ನಂಬಿಕೆಗಳ ಬುಡಕ್ಕೇ ಕೊಡಲಿ ಬೀಸಿದ್ದರು. ಆ ಕಾಲದ ಮಹಿಳೆಯರು ಆ ಕಾಲದ ಒಟ್ಟಾರೆ ಮನಃಸ್ಥಿತಿಗಿಂತ ತುಂಬಾ ಬೇರೆಯಾಗಿರುವುದು ಸಾಧ್ಯವಿರಲಿಲ್ಲ. ಹಾಗಾಗಿ ರಮಾಬಾಯಿ ಎತ್ತಿದಂತಹ ಪ್ರಶ್ನೆಗಳು ಮತ್ತು ಆಕ್ಷೇಪಗಳು ಮತ್ತು ಮುಂದಿಟ್ಟ ವಾದಗಳು ಆ ಕಾಲಕ್ಕೆ ಅವರ ಪಾಲಿಗೆ ಕ್ರಾಂತಿಕಾರಕವಾಗಿದ್ದವು; ಅಷ್ಟೇ ಅಲ್ಲ ಅವರಿಗೆ ದಿಗಿಲು ಹುಟ್ಟಿಸುವಷ್ಟು ಹೊಸತಾಗಿದ್ದವು. ರಮಾಬಾಯಿ ಭಾಷಣ ಮಾಡುತ್ತಿದ್ದ ಎಷ್ಟೋ ಸಭೆಗಳಲ್ಲಿ ಅವರನ್ನು ಹೆಂಗಸರು ''ಹಾಗಾದರೆ ನಮ್ಮ ಅಳಿಯಂದಿರನ್ನು

ಲಿಗೆ ಕಳುಹಿಸಬೇಕು ಎನ್ನುತ್ತೀರಾ ?'' ಎನ್ನುವ ಪ್ರಶ್ನೆಯನ್ನು ಕೇಳಿದ್ದರು. ಬಹುಶಃ
ವರಿಗೆ ಬೇಕಾದ ಬದಲಾವಣೆಗಳು ಏರಿಳಿತಗಳಿಲ್ಲದ, ಸಾಮಾನ್ಯವಾಗಿದ್ದ ಅವರ
ನಂದಿನ ಬದುಕಿನ ಕ್ರಮದೊಳಗೇ ಮೂಡಿ ಅಲ್ಲೇ ಗುದ್ದಾಡಿಕೊಳ್ಳುತ್ತಾ ಸ್ವಲ್ಪ
ಲ್ಪವಾಗಿ ಜಾಗ ಮಾಡಿಕೊಂಡು ವಿಸ್ತಾರಗೊಳ್ಳುತ್ತಾ ಹೋಗಬೇಕಿತ್ತು. ಈ ಕ್ರಮ
ರಿಯೋ ತಪ್ಪೋ ಎನ್ನುವುದು ಬೇರೆ ಪ್ರಶ್ನೆ. ಆದರೆ ಬದಲಾವಣೆಗಳು ಅವರ
ೇರುಗಳನ್ನು ಕಿತ್ತುಹಾಕದೆ, ಅಸ್ಥಿರತೆಯನ್ನು ಉಂಟುಮಾಡದೆ ನಿಧಾನವಾಗಿ
ಂತಹಂತವಾಗಿ ಆಗುತ್ತಾ ಹೋಗಬೇಕು ಎನ್ನುವುದು ಸಾಮಾನ್ಯ ಮಹಿಳೆಯರ
ಯಕೆಯಾಗಿದ್ದಿರಬಹುದು. ಇನ್ನು ಕೆಳ ಹಾಗೂ ಮಧ್ಯಮ ಜಾತಿಯ
ಹಿಳೆಯರಿಂದ ರಮಾಬಾಯಿಗೆ ದೊಡ್ಡ ಪ್ರಮಾಣದ ಬೆಂಬಲ ಸಿಗುವುದು
ಧ್ಯವಿರಲಿಲ್ಲ. ಏಕೆಂದರೆ, ಆ ಜಾತಿಗಳಲ್ಲಿ ಮರುಮದುವೆ ಮತ್ತು ಕೂಡಿಕೆಗೆ
ವಕಾಶಗಳಿದ್ದವು, ಹಾಗಾಗಿ ವೈಧವ್ಯ ಅವರಿಗೆ ತುಂಬಾ ದೊಡ್ಡ ಪ್ರಶ್ನೆಯಾಗಿರಲಿಲ್ಲ.

೧೯ನೇ ಶತಮಾನದ ಕೊನೆ ಹಾಗೂ ೨೦ನೇ ಶತಮಾನದ ಆದಿಭಾಗ ಹೆಣ್ತನದ
ರ್ವಚನಗಳು, ಶೀಲ ಮತ್ತು ಅಶ್ಲೀಲತೆಯ ಪ್ರಶ್ನೆ, ಲಿಂಗ ತಾರತಮ್ಯದ ಪ್ರಶ್ನೆ
ವುಗಳು ತೀವ್ರ ಚರ್ಚೆಗೊಳಗಾಗುತ್ತಿದ್ದ ಕಾಲ. ಅಂತಹ ಸಂದರ್ಭದಲ್ಲಿ ತಾನು
ದುಕಿದ್ದ ಸಂಕೀರ್ಣ ಸಮಾಜದೊಂದಿಗೆ, ಗಂಭೀರವಾದ ವಾದ-ವಿವಾದ, ಚರ್ಚೆ
ವುಗಳಲ್ಲಿ ನಿರಂತರವಾಗಿ ತೊಡಗಿಕೊಂಡ ಬೆಂಗಳೂರು ನಾಗರತ್ನಮ್ಮನವರು
ಮಾಜದೊಂದಿಗೆ ವ್ಯವಹರಿಸಿದ ಕ್ರಮದಲ್ಲಿ ಸೂಕ್ಷ್ಮ ಸಂವೇದಿಯಾದ ಮಹಿಳಾಪರ
ಾಗೂ ಜೀವಪರ ಕಾಳಜಿಯುಳ್ಳ ಮಹಿಳೆಯೊಬ್ಬಳ ಸಂವಾದದ ಮತ್ತೊಂದು
ಾದರಿಯನ್ನು ಕಾಣಬಹುದೆನಿಸುತ್ತದೆ. ಪಂಡಿತಾ ರಮಾಬಾಯಿಯಂತೆಯೇ
ಾಗರತ್ನಮ್ಮ ಕೂಡ ಒಂದರ್ಥದಲ್ಲಿ ಪ್ರತಿಕೂಲ ಪರಿಸ್ಥಿತಿಯಲ್ಲಿದ್ದವಳು –
ವಳೊಬ್ಬಳು ದೇವದಾಸಿ ಹಾಗೂ ಒಬ್ಬ ಮಹಿಳೆ.

ಕರ್ನಾಟಕ ಸಂಗೀತ ತ್ರಿಮೂರ್ತಿಗಳಲ್ಲಿ ಒಬ್ಬರಾದ ತ್ಯಾಗರಾಜಸ್ವಾಮಿಗಳ
ಮಾಧಿ ತಿರುವೈಯ್ಯಾರಿನಲ್ಲಿದೆ. ಅದು ತೀರ ದುಸ್ಥಿತಿಯಲ್ಲಿ ಇತ್ತು. ತ್ಯಾಗರಾಜರ
ರಮ ಭಕ್ತೆಯಾಗಿದ್ದ ಬೆಂಗಳೂರು ನಾಗರತ್ನಮ್ಮ ತನ್ನ ಸರ್ವಸ್ವವನ್ನೂ ತ್ಯಾಗಮಾಡಿ
ಗರಾಜರ ಸಮಾಧಿಯನ್ನು ಪುನರ್‌ನಿರ್ಮಿಸಿ, ಅದಕ್ಕೆ ಜೀವ ನೀಡುತ್ತಾರೆ.
ಗಿದ್ದಾಗ್ಯೂ ಕೂಡ, ಅಲ್ಲಿನ ದೊಡ್ಡ ವಿರೋಧಾಭಾಸವೆಂದರೆ, ತ್ಯಾಗರಾಜರ
ೇವಾಲಯದೊಳಗೆ ಹೆಂಗಸರು ಪ್ರವೇಶಮಾಡುವಂತಿರಲಿಲ್ಲ ಹಾಗೂ ಸಂಗೀತ
ೇವೆಯನ್ನೂ ಮಾಡುವಂತಿರಲಿಲ್ಲ. ನಾಗರತ್ನಮ್ಮನವರ ಪ್ರತಿಭಟನೆಯಿಂದ ನಂತರ
ದಕ್ಕೆ ಅವಕಾಶವಾಗುತ್ತದೆ. ೧೯೩೩ರ ಹೊತ್ತಿಗೆ ಹೆಂಗಸರು ಆರಾಧನೆಯ
ವಿಭಾಜ್ಯ ಭಾಗವಾಗಿಬಿಟ್ಟಿದ್ದರು. ಆದರೆ ''ಹೆಂಗಸರು ಏನು ಮಾಡಿದರೇನು
ಗರಾಜರ ಶ್ರಾದ್ಧವನ್ನು ಮಾಡುವುದಕ್ಕೆ ಆಗುತ್ತದೆಯೇ ?'' ಎಂದು ಅಲ್ಲಿನ
ಂಡಸರು ಸಮಾಧಾನಮಾಡಿಕೊಂಡು ನೆಮ್ಮದಿಯಾಗಿ ಇದ್ದರು. ಇದು ಏಕೆ
ಧ್ಯವಿಲ್ಲ ಎನ್ನುವ ಛಲದಿಂದ ನಾಗರತ್ನಮ್ಮನವರು ಬ್ರಾಹ್ಮಣರನ್ನು ಕರೆಸಿ
ಾತನಾಡುತ್ತಾರೆ. ಧರ್ಮಶಾಸ್ತ್ರಗಳಲ್ಲಿ ಯಾರ ಪರವಾಗಿ ಯಾರು ಬೇಕಾದರೂ
ರಾದ್ಧಮಾಡಿ ನಂತರ ಆ ಶ್ರಾದ್ಧದ ಫಲವನ್ನು ಯಾರಿಗೆ ಬೇಕೋ ಅವರಿಗೆ ಧಾರೆ
ರೆಯಬಹುದು ಎಂದಿದೆ. ಯಾರು ಧಾರೆ ಎರೆಸಿಕೊಳ್ಳುತ್ತಾರೋ ಅವರೇ ಶ್ರಾದ್ಧ
ಾಡಿದಂತೆ ಎಂದು ಧರ್ಮಶಾಸ್ತ್ರಗಳು ಭಾವಿಸುತ್ತವೆ ಎನ್ನುವುದು ಅವರಿಗೆ ಅರಿವಾಗುತ್ತದೆ.
ರಾಹ್ಮಣರಿಂದ ಶ್ರಾದ್ಧ ಮತ್ತು ಅಡುಗೆ ಎರಡನ್ನೂ ಮಾಡಿಸಿ ನಂತರ ಶ್ರಾದ್ಧದ ಫಲವನ್ನು
ಾಗರತ್ನಮ್ಮ ಧಾರೆ ಎರೆಸಿಕೊಳ್ಳುತ್ತಾರೆ. ಒಂದು ಜಾತಿ ಮತ್ತು ಧರ್ಮ ನಿರ್ಮಿಸುವ
ಟ್ಟಳೆಗಳನ್ನು ನಾಗರತ್ನಮ್ಮ ತಿರಸ್ಕರಿಸುವುದಿಲ್ಲ. ಅಷ್ಟೇ ಅಲ್ಲ ಅದನ್ನು ನಂಬಿ
ಪ್ಪಿಕೊಳ್ಳುತ್ತಾರೆ ಕೂಡ. ಆದರೆ ಅದನ್ನು ಒಪ್ಪಿಕೊಂಡು ಆಚರಿಸುವ ಸಂದರ್ಭದಲ್ಲೇ
ದರ ಪೊಳ್ಳುತನವನ್ನು ಬಯಲುಮಾಡುತ್ತಾ, ಧಾರ್ಮಿಕತೆ ಮತ್ತು ಆಧ್ಯಾತ್ಮಿಕತೆ
ನ್ನುವುದು ಜಾತಿ ಹಾಗೂ ಲಿಂಗಾಧಾರಿತ ಕಟ್ಟುಪಾಡುಗಳನ್ನು ಮೀರಿದ ಉನ್ನತ ತತ್ವಗಳು
ನ್ನುವುದನ್ನೂ ಸಾಬೀತುಗೊಳಿಸುತ್ತಾರೆ. ಈ ಸಂದರ್ಭದಲ್ಲಿ ನಾಗರತ್ನಮ್ಮನನ್ನು
ಲವಾರು ಬ್ರಾಹ್ಮಣರು, ಪುರುಷರು ಮತ್ತು ಮಹಿಳೆಯರು ಬೆಂಬಲಿಸುತ್ತಾರೆ.

'ರಾಧಿಕಾ ಸಾಂತ್ವನಮು' ಎಂಬುದು ೧೮ನೇ ಶತಮಾನದ ಆದಿ ಭಾಗದಲ್ಲಿ
ಂಜಾವೂರಿನ ದೊರೆ ಪ್ರತಾಪಸಿಂಹನ ಆಸ್ಥಾನದಲ್ಲಿ ಗಣಿಕೆಯಾಗಿದ್ದ ಮುದ್ದುಪಳನಿ
ಂಬ ಕವಯಿತ್ರಿಯ ಕೃತಿ. ಇದು ರಾಧೆಯ ದೃಷ್ಟಿಯಿಂದ ರಾಧಾ ಕೃಷ್ಣರ
ಂಬಂಧವನ್ನು ಗ್ರಹಿಸಿಕೊಳ್ಳುವ ಒಂದು ಅಪರೂಪದ ಪ್ರಣಯಕಾವ್ಯ. ಮುದ್ದುಪಳನಿ
ಸ್ವಕಾಲದ ಪುರುಷರೊಡನೆ ಸಮಾನಸ್ತರದಲ್ಲಿ, ಅತ್ಯಂತ ಆತ್ಮವಿಶ್ವಾಸದಿಂದ ಬದುಕಿ

## ಪ್ರೀತಿಯ ಹಾದಿ

ಬಹಳ ದೂರ
ಸಾಗಿ ಬಂದಿದ್ದೇನೆ
ಪ್ರೀತಿಯ ಹಾದಿಯಲ್ಲಿ
ಇನ್ನು ಹಿಂದಿರುಗುವುದು
ಸಾಧ್ಯವೇ ಇಲ್ಲ
ಸಾವಷ್ಟೇ ನನ್ನನ್ನು
ನಿಲ್ಲಿಸಬೇಕು

ಕಾಲುದಾರಿಯ ಈ ಹಾದಿಯಲ್ಲಿ
ಜೊತೆಯವರು
ನಿಂತುಬಿಟ್ಟರೂ
ಒಬ್ಬಳೇ ಮುಂದುವರಿಯುತ್ತಿದ್ದೇನೆ
ನಿಂತರೆ ಜೀವನವೆಲ್ಲಿದೆ ?

ನಡೆಯುತ್ತ ನಡೆಯುತ್ತ
ನಾನೊಬ್ಬಳೇ
ಒಂಟಿಯಾಗಿಬಿಟ್ಟಿದ್ದೇನೆ
ಹಿಂದಿರುಗಿ ನೋಡಿದರೂ
ಜೊತೆಯ ಅವರು ಕಾಣುತ್ತಿಲ್ಲ
ನನ್ನ ಕೂಗು ಅವರಿಗೆ ಕೇಳಿಸುತ್ತಿಲ್ಲ
ಬಳಲಿಕೆಯಿಂದ ಬಾಯಾರಿದ್ದೇನೆ
ಆದರೂ ನಿಲ್ಲುವುದಿಲ್ಲ
ಭೂಮಿ ತಿರುಗುವುದನ್ನು ನಿಲ್ಲಿಸಲು ಸಾಧ್ಯವೇ ?
ನಿಂತರೆ ಪ್ರಳಯ
ಅದು ಆಗಬೇಕಷ್ಟೆ!...

**ಜ್ಯೋತಿ ಗುರುಪ್ರಸಾದ್**
'ಕಾವೇರಿ', ತೆಳ್ಳಾರು ರಸ್ತೆ, ಹದಿನಾರನೇ ತಿರುವು, ಕಾರ್ಕಳ - ೫೭೪೧೦೪

ಬಾಳಿದವಳು. ಆ ಕೃತಿಗೆ ಅವಳು ಬರೆದಿದ್ದ ಮುನ್ನುಡಿ ಹಲವಾರು ಕಾರಣಕ್ಕೆ ತುಂಬಾ ವಿಶಿಷ್ಟವಾಗಿತ್ತು. ಅದರಲ್ಲಿ ಅವಳು ತುಂಬಾ ಹೆಮ್ಮೆಯಿಂದಲೇ ತನ್ನ ಪರಂಪರೆಯನ್ನು ಮತ್ತು ಕುಲವನ್ನು ತನ್ನ ತಾಯಿ ಮತ್ತು ತನ್ನ ಅಜ್ಜಿಯ ಮೂಲಕ ಕಟ್ಟಿಕೊಳ್ಳುತ್ತಾಳೆ ಮತ್ತು ಹಲವಾರು ಸಮಕಾಲೀನ ಘನವಿದ್ವಾಂಸರು ತನ್ನನ್ನು ಗೌರವಿಸಿ ತಮ್ಮ ಕೃತಿಯನ್ನು ತನಗೆ ಅರ್ಪಿಸಿದ್ದರು ಎನ್ನುವುದನ್ನು ದಾಖಲಿಸುತ್ತಾಳೆ. ತಾನೊಬ್ಬ ಸ್ತ್ರೀ ಹಾಗೂ ಗಣಿಕೆ ಎಂಬ ಯಾವ ಕೀಳರಿಮೆಯೂ ಆಕೆಗಿರಲಿಲ್ಲ. ೧೭ ಮತ್ತು ೧೮ನೇ ಶತಮಾನಗಳಲ್ಲಿ ಭಾರತದಲ್ಲಿ ಇದ್ದಿರಬಹುದಾದ ವಿಭಿನ್ನ ಹಾಗೂ ಸಂಕೀರ್ಣ ಸಾಂಸ್ಕೃತಿಕ, ಸಾಮಾಜಿಕ ಸಂಬಂಧಗಳು, ಸನ್ನಿವೇಶಗಳು ಮತ್ತು ಚಿಂತನಾಕ್ರಮಗಳ ಪ್ರತೀಕವಾಗಿ ಆಕೆ ಕಂಡುಬರುತ್ತಾಳೆ.

ಆ ಕೃತಿಯ ಸಾಹಿತ್ಯಕ ಮತ್ತು ಭಾಷಾ ಉತ್ಕೃಷ್ಟತೆಯನ್ನು ಮೆಚ್ಚಿ ೧೮೮೭ರಲ್ಲಿ ಅದನ್ನು ಹಿರಿಯ ಓರಿಯಂಟಲಿಸ್ಟ್ ವಿದ್ವಾಂಸರು ಪ್ರಕಟಿಸಿದರು. ನಂತರದಲ್ಲಿ ವಸಾಹತು ಆಡಳಿತದ ಪ್ರಭಾವ, ಕ್ರೈಸ್ತ ಮಿಷನರಿಗಳ ಪ್ರಭಾವ ಮತ್ತು ಭಾರತದೊಳಗೇ ಬಿರುಸಾಗಿ ಪ್ರಾರಂಭವಾದ ಸಮಾಜ ಸುಧಾರಣೆಯ ಪ್ರಕ್ರಿಯೆಯಿಂದಾಗಿ ಇಡೀ ವ್ಯವಸ್ಥೆಯ ಗ್ರಹಿಕೆಯೇ ಬದಲಾಗಲಾರಂಭಿಸಿತು. ಅದಕ್ಕೆ ಆನುಷಂಗಿಕವಾಗಿ ಮುಖ್ಯವಾಗಿ ಹೆಣ್ತನ, ಸ್ತ್ರೀ ಲೈಂಗಿಕತೆ, ಅಶ್ಲೀಲತೆ, ನೈತಿಕತೆ, ಸಾಹಿತ್ಯ , ಸಂಗೀತ ಇವೆಲ್ಲದರ ಗ್ರಹಿಕೆಯೂ ಬದಲಾಗಲಾರಂಭಿಸಿತು. ಈ ಹಿನ್ನೆಲೆಯಲ್ಲಿ ಸಾಕಷ್ಟು ಹಿಂದೆಯೇ ಪ್ರಕಟವಾಗಿದ್ದ ರಾಧಿಕಾ ಸಾಂತ್ವನಮು ಕೃತಿಯು ಅಶ್ಲೀಲ ಎಂದು ಆಂಧ್ರದ ಸಾಹಿತಿ ಮತ್ತು ಸಮಾಜಸುಧಾರಕ ಕಂದುಕೂರಿ ವೀರೇಶಲಿಂಗಂ ಪಂತುಲು ಈ ಕೃತಿಯನ್ನು ಅವಹೇಳನ ಮಾಡುತ್ತಾರೆ. ಇದರಿಂದ ಪ್ರಚೋದಿತರಾದ ನಾಗರತ್ನಮ್ಮ ಆ ಕೃತಿಯನ್ನು ಹುಡುಕಿಕೊಂಡು ಓದುತ್ತಾರೆ ಮತ್ತು ಆ ಪರಂಪರೆಯ ಮುಂದುವರಿಕೆಯಾಗಿಯೇ ತನ್ನನ್ನು ತಾನು ಗುರುತಿಸಿಕೊಳ್ಳಲು ಬಯಸುತ್ತಾರೆ. ಅದನ್ನು ಮತ್ತೆ ಪ್ರಕಟಿಸಲು ತೀರ್ಮಾನಿಸುತ್ತಾರೆ. ಅದನ್ನು ಮದ್ರಾಸಿನ ಅತ್ಯಂತ ಘನತೆವೆತ್ತ 'ವಾವಿಳ್ಳ ರಾಮಸ್ವಾಮಿ ಶಾಸ್ತ್ರಿಗಳು ಮತ್ತು ಮಕ್ಕಳು' ಎನ್ನುವ ಪ್ರಕಾಶನ ಸಂಸ್ಥೆಯು ಪ್ರಕಟಿಸಿತು. ಆ ಕೃತಿ ಅಶ್ಲೀಲ ಎನ್ನುವ ಗ್ರಹಿಕೆಯನ್ನು ತಮ್ಮ ಮುನ್ನುಡಿಯಲ್ಲಿ ಪ್ರಶ್ನಿಸುತ್ತಾರೆ. ''ಇದು ಅಶ್ಲೀಲ ಎನ್ನುವುದಾದರೆ, ಇದಕ್ಕಿಂತಲೂ ಅಶ್ಲೀಲವಾದ, ಪುರುಷರು ಬರೆದಿರುವ ಕೃತಿಯನ್ನು ಸಂಪಾದಿಸಿ ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ಪಠ್ಯವಾಗಿ ನಿಗದಿಗೊಳಿಸಿರುವ'' ವೀರೇಶಲಿಂಗಂ ಅವರ ಕ್ರಮವನ್ನು ಪ್ರಶ್ನಿಸುತ್ತಾರೆ. ''ಮಾನ ಮರ್ಯಾದೆ ಎನ್ನುವುದು ಕೇವಲ ಹೆಂಗಸರಿಗೆ ಮಾತ್ರವೇ ? ಅದು ಗಂಡಸರಿಗೆ ಬೇಕಾಗಿಲ್ಲವೇ ?'' ಎಂದು ನಾಗರತ್ನಮ್ಮ ಕೇಳುತ್ತಾರೆ. ಈ ಕೃತಿಗೆ ಸಂಬಂಧಿಸಿದಂತೆ ಬಹಳ ದೊಡ್ಡ ಕಾನೂನು ಸಮರವೇ ನಡೆದುಹೋಗುತ್ತದೆ. ಆಗ ನಾಗರತ್ನಮ್ಮ ಮತ್ತು ಅವರ ಬೆಂಬಲಿಗರು ಸಾಹಿತ್ಯ ಮತ್ತು ಸಮಾಜಕ್ಕೆ ಸಂಬಂಧಿಸಿದಂತೆ ಎಲ್ಲಾ ಕಾಲಕ್ಕೂ ಪ್ರಸ್ತುತವಾದ ಗಂಭೀರವಾದ ಪ್ರಶ್ನೆಗಳನ್ನು ಎತ್ತುತ್ತಾರೆ.

ಈ ಸಂದರ್ಭದಲ್ಲಿ ಧಾರ್ಮಿಕವಾಗಿ ಅತ್ಯಂ ಸನಾತನಿಗಳು ಎನ್ನಿಸಿಕೊಂಡ ಹಲವು ಹಿಂದುಗ ನಾಗರತ್ನಮ್ಮನ ವಾದವನ್ನು ಬೆಂಬಲಿಸಿದರು ಎನ್ನುವು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶ.

ಈ ಸಂದರ್ಭದಲ್ಲಿ ಭಾರತೀಯ ಸಮಾಜಕ್ಕೆ ಮ ಸಂಸ್ಕೃತಿಗೆ ಹೊರತಾದ ಮತ್ತು ಹೊಸದಾದ ಒಂದ ನೈತಿಕತೆಯ ಪರಿಭಾಷೆಯನ್ನು ವಸಾಹತು ಸರ್ಕಾರದ ಜೊತೆಗೆ, ಕ್ರೈಸ್ತಮಿಷನರಿಗಳು, ರಾಮಕೃಷ್ಣ ಮಿಷನ್, ಥಿಯಾಸಾಫಿಕಲ್ ಸೊಸೈಟಿ, ಪಾಶ್ಚಿಮಾತ್ಯ ಶಿಕ್ಷಣದಿಂದ ಪ್ರಭಾವಿತವಾದ ಸುಶಿಕ್ಷಿತ ಮೇಲ್ಜಾತಿಯ ಮಧ್ಯಮ ವರ್ಗಗಳೆಲ್ಲವೂ ಮಾತನಾಡತೊಡಗಿದವು. ಈ ಹಿನ್ನೆಲೆಯಲ್ಲಿ ನಾಚ್ ವಿರೋಧಿ ಚಳುವಳಿ ಹುಟ್ಟಿ ಕೊಂಡಿತು. ಮೇಲೆ ಹೇಳಿದ ಗ್ರಹಿಕೆಯ ಪ್ರಭಾವ ತುಂಬಾ ವ್ಯಾಪಕವಾಗದೇ ಇದ್ದಾಗ ಸರ್ಕಾರ ಹಾಗೂ ನ್ಯಾಯಾಲಯಗಳು ದೇವದಾಸಿಯರನ್ನು ಎಂದೂ ವೇಶ್ಯೆಯರೆಂದು ಪರಿಗಣಿಸಿರಲಿಲ್ಲ. ಅವರನ್ನು ಸಾಮಾಜಿಕವಾಗಿ ಒಂದು ವಿಶಿಷ್ಟ ಗುಂಪೆಂದೇ ಪರಿಗಣಿಸಿತ್ತು. ಈ ನಾಚ್ ವಿರೋಧಿ ಚಳುವಳಿಯ ಹಿನ್ನೆಲೆಯಲ್ಲಿ ಪುರುಷಪ್ರಧಾನ ಧೋರಣೆಗಳಿದ್ದವು. ಪಾಶ್ಚಿಮಾತ್ಯರ ನೈತಿಕ ಅಳತೆಗೋಲಿನಲ್ಲಿ ಭಾರತ ಮತ್ತದರ ಸಂಸ್ಕೃತಿಯು ತುಂಬಾ ಶುಭ್ರ ಎಂದು ತೋರಿಸಬೇಕೆಂಬ ಕಾತರಹೊಂದಿದವರಿದ್ದರು ಮತ್ತು ರಾಷ್ಟ್ರೀಯವಾದಿ ಮನೋಭಾವದವರಿದ್ದರು. ಈ ಸಂದರ್ಭದಲ್ಲಿ ನಾಗರತ್ನಮ್ಮನವರು ಮುಂದಿಡುವ


National Referral Centre for Lead Poisoning
with
Quality Council of India

*In order to create awareness about LEAD poisoning among Students and General Public regularly conducts Nation wide Programmes.*

**LAP - Lead Awareness Programmes**
**LEADER - Lead Educator Programmes**
**LEADY's Clubs**

***working towards leadsafe society in India***

For more details visit : elinksonlead.blogspot.com
contact : leadinf@gmail.com
www.qcin.org

ಲವಾರು ಸಲಹೆಗಳು ಗಂಭೀರ ಚಿಂತನೆಗೆ ಅರ್ಹ
ಂದವು. ಅವರು ದೇವದಾಸಿಯರು ಮತ್ತು
ೇಶ್ಯೆಯರು ಬೇರೆ ಬೇರೆ ಎನ್ನುವುದನ್ನು ಸ್ಪಷ್ಟಪಡಿಸು
ತ್ತಿರೆ ಮತ್ತು ವೇಶ್ಯಾವೃತ್ತಿಯಂತಹ ಸಮಸ್ಯೆಯನ್ನು
ರ್ವಜನಿಕ ನೈತಿಕತೆಯನ್ನು ಉತ್ತಮಪಡಿಸುವುದರ
ೂಲಕ ಸರ್ಕಾರ ಪರಿಹರಿಸಬಹುದೇ ಹೊರತು
ೇವದಾಸಿ ಪದ್ಧತಿಯನ್ನು ನಿಷೇಧಿಸುವುದರಿಂದ
ಾಧ್ಯವಿಲ್ಲ ಎನ್ನುವ ಬಹುಮುಖ್ಯ ಅಂಶವನ್ನು
ೇಳುತ್ತಾರೆ. ತಲೆತಲಾಂತರದಿಂದ ಕಲಾಪೋಷಕಿ
ಾಗಿರುವ ದೇವದಾಸಿಯರಿಗೆ ದೇವಾಲಯವು
ೀಡುತ್ತಿರುವ ಆರ್ಥಿಕ ಸಹಾಯವನ್ನು ಹಿಂತೆಗೆದು
ೊಳ್ಳುವುದು ಅವರನ್ನು ಪರೋಕ್ಷವಾಗಿ ವೇಶ್ಯಾವೃತ್ತಿಗೆ
ಳ್ಳಿದಂತಾಗುತ್ತದೆ. ಆ ಮೂಲಕ ಅದು ವೇಶ್ಯಾವೃತ್ತಿಗೆ
ೋಗುವ ಹೆಣ್ಣುಮಕ್ಕಳ ಸಂಖ್ಯೆಯಲ್ಲಿ ಹೆಚ್ಚಳ
ಂಟುಮಾಡುತ್ತದೆ ಮತ್ತು ಅದು ಸುಧಾರಕರ ಇಡೀ
ುದ್ದೇಶವನ್ನೇ ತಿರುಗುಮುರುಗು ಮಾಡುತ್ತದೆ
ನ್ನುವುದನ್ನೂ ನಾಗರತ್ನಮ್ಮ ಗುರುತಿಸಿದ್ದರು. ಈ
ಂದರ್ಭದಲ್ಲಿಯೂ ಅವರನ್ನು ತುಂಬಾ ಸಂಪ್ರದಾಯ
ೀಲರು, ಸನಾತನಿಗಳು, ಬ್ರಾಹ್ಮಣರು, ದೇವದಾಸಿ
ಯರಲ್ಲದ ಹೆಂಗಸರು ಬೆಂಬಲಿಸುತ್ತಾರೆ. ಆದರೆ
ಧಿಕಾರಶಾಹಿ ಮತ್ತು ಅದನ್ನು ಬೆಂಬಲಿಸುತ್ತಿದ್ದವರು
ದನ್ನು ವಿರೋಧಿಸುತ್ತಾರೆ ಮತ್ತು ಅದನ್ನು ನಿಷೇಧಿಸಿ
ಾನೂನು ಜಾರಿಗೆ ಬರುತ್ತದೆ. ಜೊತೆಗೆ ಅಷ್ಟು ಹಿಂದೆಯೇ
ವಾಹೇತರ ಸಂಬಂಧವನ್ನು ಮಾನ್ಯ ಮಾಡುವಂತೆ
ಾಗರತ್ನಮ್ಮ ಒಂದು ಸಲಹೆಯನ್ನು ಮುಂದಿಟ್ಟರು.
ಕೆಂದರೆ, ಆಗ ಮದುವೆಗೂ ಮತ್ತು ಈ ಸಂಬಂಧಕ್ಕೂ
ತ್ಯಾಸವಿರುವುದಿಲ್ಲ ಎನ್ನುವ ಕ್ರಾಂತಿಕಾರಕ ಸಲಹೆ
ಯನ್ನು ನಾಗರತ್ನಮ್ಮ ಮುಂದಿಡುತ್ತಾರೆ. ಆದರೆ, ಅದನ್ನು
ಯಾರೂ ತುಂಬಾ ಗಂಭೀರವಾಗಿ ಪರಿಗಣಿಸುವುದಿಲ್ಲ.

ಈ ಸಂದರ್ಭದಲ್ಲಿ ನನಗೆ ಮುಖ್ಯವಾಗುವ ಅಂಶ
ೇರೆ. ಇಷ್ಟೆಲ್ಲಾ ಕ್ರಾಂತಿಕಾರಕ ಪ್ರಶ್ನೆಗಳನ್ನು ಎತ್ತುತ್ತಾ
ಮತ್ತು ಆ ಕಾಲದ ಜನ ಯೋಚಿಸಲೂ ಸಾಧ್ಯವಿಲ್ಲ
ದಂತಹ ಸಲಹೆಗಳನ್ನು ಮುಂದಿಟ್ಟ ನಾಗರತ್ನಮ್ಮ ತನ್ನ
ಕಾಲದ ಸಮಾಜಕ್ಕೆ ಪರಕೀಯಳು ಎಂದೆನಿಸಲಿಲ್ಲ ಮತ್ತು
ಆವಳು ಬದುಕಿದ್ದ ಸಮಾಜ ಅವರನ್ನು ದೂರ
ಮಾಡಲಿಲ್ಲ. ಅವರ ನಿಲುವನ್ನು ಕುರಿತು ವಿರೋಧ
ವಿದ್ದರೂ ಕೂಡ ಮಹಿಳಾ ಸಮುದಾಯ ಹೆದರಿಕೆ
ಮತ್ತು ಗಾಬರಿಯಿಂದ ಅವರಿಂದ ದೂರ ಸರಿಯಲಿಲ್ಲ.
ಅವರಿಗೆ ತನ್ನ ವಿರೋಧಿಗಳ ನಡುವೆಯೇ ಇದ್ದು
ಪರಕೀಯಳಾಗದೆ ಸ್ನೇಹದಿಂದಲೇ ಅವರೊಡನೆ
ಅನುಸಂಧಾನ ಮಾಡುವುದಕ್ಕೆ ಸಾಧ್ಯವಾಯಿತು. ಇದು
ಗಮನಿಸಬೇಕಾದ ಅಂಶ. ಇದು ನಾಗರತ್ನಮ್ಮನನ್ನು
ಸಮಾಧಿ ಮಾಡುವ ಸನ್ನಿವೇಶದಲ್ಲಿ ಅರಿವಾಗುತ್ತದೆ.
ಏಕೆಂದರೆ, ಇಡೀ ಊರಿನ ಜನ ಅವಳನ್ನು ಸಂತಳೆಂದು
ಪರಿಗಣಿಸಿ ತ್ಯಾಗರಾಜರ ಸಮಾಧಿಯ ಬದಿಯಲ್ಲೇ
ಆಕೆಯನ್ನು ಮಣ್ಣು ಮಾಡುವ ಅಭೂತಪೂರ್ವ
ನಿರ್ಮಾನವನ್ನು ಕೈಗೊಳ್ಳುತ್ತಾರೆ. ಆ ಸ್ಥಳದಲ್ಲಿ ಸಮಾಧಿ
ಯಾದ ಏಕೈಕ ಮಹಿಳೆ ನಾಗರತ್ನಮ್ಮ.

ಇಂಥ ಒಂದು ಬೆಳವಣಿಗೆಯ ಹಿಂದೆ ನಾಗರತ್ನಮ್ಮ
ತನ್ನ ಸಮಕಾಲೀನ ಮಹಿಳೆಯರು ಮತ್ತು ಪುರುಷರ

ಪಂಡಿತಾ ರಮಾಬಾಯಿ ಮತ್ತು ನಾಗರತ್ನಮ್ಮ ಇವರಿಬ್ಬರು ತಮ್ಮ ತಮ್ಮ ವೈಯಕ್ತಿಕ ಬದುಕಿನ ತುರ್ತಿನಿಂದ ಹೊರಟವರು. ಹಾಗಾಗಿ ತಮ್ಮ ಬದುಕಿನ ಸಂದರ್ಭಗಳಿಂದ ರೂಪುಗೊಂಡವರು. ಒಂದು ವೈಯಕ್ತಿಕ ಹಿನ್ನೆಲೆಯಲ್ಲಿ ರೂಪುಗೊಂಡ ಅವರ ಪ್ರತಿಭಟನೆಯೂ ಕ್ರಮವೂ ಕೂಡ ತುಂಬಾ ವಿಶಿಷ್ಟವಾಗಿತ್ತು ಮತ್ತು ಒಂದು ಸಾಮಾನ್ಯ ಸಮುದಾಯಕ್ಕೆ ಅದನ್ನು ಕಾರ್ಯಗತಗೊಳಿಸುವುದು ಅಸಾಧ್ಯವೂ ಆಗಿತ್ತು. ನಾಗರತ್ನಮ್ಮನಿಗೆ ದೇವದಾಸಿ ಪದ್ಧತಿಯ ರದ್ಧತಿ ಮತ್ತು ಅಶ್ಲೀಲತೆಯ ಪ್ರಶ್ನೆಗಳು. ಪಂಡಿತಾ ರಮಾಬಾಯಿಗೆ ಬ್ರಾಹ್ಮಣ ವಿಧವೆ ಹೆಣ್ಣು ಮಗಳ ನೋವು ಹಾಗೂ ಒದ್ದಾಟಗಳು ತುಂಬಾ ತುರ್ತಿನದಾಗಿದ್ದವು. ಹಾಗಾಗಿ ಅವರ ಹೋರಾಟ, ಪ್ರತಿಭಟನೆ ಇವೆಲ್ಲವೂ ಆ ನೆಲೆಯಿಂದಲೇ ಹೊಮ್ಮಿದವಾಗಿದ್ದವು. ಅವರಿಬ್ಬರೂ ಮಹಿಳೆಯರಿಗೆ ಸಂಬಂಧಪಟ್ಟಂತೆ ಸಾಕಷ್ಟು ಗಂಭೀರವಾದ ಪ್ರಶ್ನೆಗಳನ್ನು ಎತ್ತಿದರೂ ಕೂಡ ಅವರ ಹೋರಾಟ ತುಂಬಾ ವಿಭಿನ್ನ ಹಿನ್ನೆಲೆಗಳಿಂದ ಬಂದ ಮಹಿಳೆಯರ ಸಮಸ್ಯೆಗಳನ್ನು ಒಳಗೊಳ್ಳಬಹುದಾದಷ್ಟು ವಿಶಾಲವಾದ ವ್ಯಾಪ್ತಿಯನ್ನು ಹೊಂದಿರಲಿಲ್ಲ.

ಜೊತೆ ವ್ಯವಹರಿಸಿದ ಕ್ರಮ ಮುಖ್ಯವಾಗುತ್ತದೆ ಎಂದು ಕಾಣುತ್ತದೆ. ಆಕೆ ತಾನು ಇದ್ದ ವ್ಯವಸ್ಥೆಯನ್ನು ತಿರಸ್ಕರಿಸದೆ, ಆದರಿಂದ ಹೊರನಡೆಯದೆ, ಆ ವ್ಯವಸ್ಥೆಯೊಳಗೇ ಇದ್ದು ಅದನ್ನು ಒಪ್ಪಿಕೊಳ್ಳುತ್ತಲೇ ಅದನ್ನು ಪ್ರಶ್ನಿಸಿ ತಿರುಗುಮುರುಗು ಮಾಡಲು ಪ್ರಯತ್ನಿಸುತ್ತಾರೆ. ತನ್ನ ನೆಲದ ಜೊತೆಗಿನ ಕರುಳ ಸಂಬಂಧವನ್ನು ಅವರು ಎಂದೂ ಕಡಿದುಕೊಳ್ಳಲೇ ಇಲ್ಲ. ತನ್ನ ಜೊತೆಯ ಹೆಂಗಸರಲ್ಲಿ ತನ್ನ ಅಭಿಪ್ರಾಯಗಳನ್ನೂ ಹೇಳಿಕೊಂಡು, ಅವರೊಡನೆ ಸಂವಹನವನ್ನು ಕಡಿದುಕೊಳ್ಳದೆ ಅವರ ನಡುವೆಯೇ ಬದುಕುವುದು ಆಕೆಗೆ ಸಾಧ್ಯವಾಗಿತ್ತು. ತನ್ನ ಕಾಲದಲ್ಲಿ, ತನ್ನ ಸಮಕಾಲೀನ ಮಹಿಳೆಯರನ್ನು ಒಂದು ದೊಡ್ಡ ಪ್ರಮಾಣದಲ್ಲಿ ಸಂಘಟಿಸಿ ಬದಲಾವಣೆಯನ್ನು ತರುವುದಕ್ಕೆ ಅವರಿಗೆ ಸಾಧ್ಯವಾಗದೇ ಇರಬಹುದು. ಆದರೆ ತಮ್ಮ ನಿಲುವುಗಳಿಂದಾಗಿ ಹೆಂಗಸರು ತಮ್ಮಿಂದ ದೂರ ಹೋಗದಂತೆ ಮಾಡುವುದಂತೂ ಅವರಿಗೆ ಸಾಧ್ಯವಾಗಿತ್ತು. ಒಂದರ್ಥದಲ್ಲಿ ಅದು ಸಾಕಷ್ಟು ದೊಡ್ಡ ಸಾಧನೆಯೇ ಆಗಿತ್ತು.

ಪಂಡಿತಾ ರಮಾಬಾಯಿ ಮತ್ತು ಬೆಂಗಳೂರು ನಾಗರತ್ನಮ್ಮ ಇಬ್ಬರೂ ಗಂಭೀರವಾದ ಸ್ತ್ರೀಪರ ಕಾಳಜಿಯನ್ನು ಹೊಂದಿದ್ದರು ಮತ್ತು ಸಮಾಜಮುಖಿಯಾಗಿ ಇದ್ದರು ಹಾಗೂ ತಮ್ಮ ಸಮಕಾಲೀನ ಸಮಾಜಕ್ಕಿಂತ ಭಿನ್ನವಾದ ಮತ್ತು ಅದನ್ನು ಪ್ರಶ್ನಿಸುವ ಪ್ರತಿಭಟನೆಯ ನಿಲುವುಗಳನ್ನು ತುಂಬಾ ಸ್ಪಷ್ಟವಾಗಿಯೇ ಧ್ವನಿಸಿದ್ದರು. ಆದರೆ, ವೈಯಕ್ತಿಕ ನೆಲೆಯಲ್ಲಿ ಇವರಿಬ್ಬರ ಧೋರಣೆ ಮತ್ತು ವ್ಯವಹರಿಸುವ ಕ್ರಮ ಎರಡೂ ಬೇರೆಯೇ ಆಗಿತ್ತು. ಅವರಿಬ್ಬರೂ ತಾವು ಕಾರ್ಯಪ್ರವೃತ್ತರಾಗಿದ್ದ ಕಾಲದಲ್ಲಿ ಒಂದು ಸಮಾನವಾದ ಸಮಸ್ಯೆಯನ್ನು ಎದುರಿಸುತ್ತಿದ್ದರು. ಅವರಿಬ್ಬರೂ ಬದುಕಿದ್ದ ಕಾಲಘಟ್ಟ ಭಾರತದ ಪಾಲಿಗೆ ಒಂದು ಸಂಕ್ರಮಣದ ಕಾಲವಾಗಿತ್ತು. ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆಯುವುದು ಮತ್ತು ರಾಷ್ಟ್ರ ನಿರ್ಮಾಣ ಆ ಕಾಲದ ತುಂಬಾ ಮುಖ್ಯ ಕಾಳಜಿಗಳಾಗಿದ್ದವು. ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆಯುವಷ್ಟೇ ಮುಖ್ಯವಾಗಿದ್ದುದು ರಾಷ್ಟ್ರದ ನಿರ್ಮಾಣ ಮತ್ತು ರಾಷ್ಟ್ರದ ಅಸ್ಮಿತೆಯನ್ನು ರೂಪಿಸುವುದು. ಅವರು ರೂಪಿಸಬಯಸಿದ್ದು ತಮ್ಮೆದುರಿಗಿದ್ದ ವಸಾಹತು ಮಾದರಿಗಿಂತ ಭಿನ್ನವಾದ ಒಂದು ಅಸ್ಮಿತೆಯನ್ನು. ಹಾಗಾಗಿ ಇಲ್ಲಿನ ಎಲ್ಲವೂ ಅಲ್ಲಿಗಿಂತ ಬೇರೆಯಾಗಿರಬೇಕಿತ್ತು. ಅದನ್ನು ತಿಲಕ್, ವಿವೇಕಾನಂದ ಮುಂತಾದವರು ರೂಪಿಸಿದರು. ಅದೇ ಕಾಲದಲ್ಲಿ ಅದಕ್ಕಿಂತ ಭಿನ್ನವಾದ ಮತ್ತು ಹೆಚ್ಚು ಮಾನವೀಯವಾದ ಮತ್ತು ಪ್ರಗತಿಪರವಾದ ಹಲವಾರು ವಾದಗಳು, ಧ್ವನಿಗಳು ಇದ್ದವು. ಆದರೆ ಅವು ಯಾವುವೂ ಮುಖ್ಯವಾಗಲಿಲ್ಲ ಮತ್ತು ಮುಖ್ಯವಾಗಲು ಬಿಡಲೂ ಇಲ್ಲ. ಹಾಗಾಗಿಯೇ, ದಲಿತರ ಪ್ರಶ್ನೆ, ಮಹಿಳೆಯ ಪ್ರಶ್ನೆ ಮತ್ತು ತುಂಬಾ ದಿನಗಳ ಕಾಲ ಮುಸ್ಲಿಮರ ಪ್ರಶ್ನೆ ಇವುಗಳ್ಯಾವುವೂ ಮುಖ್ಯವಾಗಲೇ ಇಲ್ಲ ಮತ್ತು ಈ ಸಮಸ್ಯೆಗಳನ್ನು ಚರ್ಚಿಸಲು ಪೂರಕವಾದ ಒಂದು ಸಾಮಾಜಿಕ ವಾತಾವರಣವಾಗಲೀ ಅಥವಾ ಮನಃಸ್ಥಿತಿಯಾಗಲೀ ಇರಲೇ ಇಲ್ಲ. ಹಾಗಾಗಿಯೇ ಬೆಂಗಳೂರು ನಾಗರತ್ನಮ್ಮನ ಜೊತೆಗೆ ಮಹಿಳೆಯರು ಉಳಿದರೂ ಕೂಡ, ಬಹುದೊಡ್ಡ ಪ್ರಮಾಣದ ಬದಲಾವಣೆ ಸಾಧ್ಯವಾಗಲಿಲ್ಲ, ಏಕೆಂದರೆ ಗಾಳಿಯು ಬೀಸುತ್ತಿದ್ದ ದಿಕ್ಕು ಸಂಪೂರ್ಣ ಬೇರೆಯೇ ಆಗಿತ್ತು.

ಇಲ್ಲಿ ಇನ್ನೂ ಒಂದು ಮುಖ್ಯವಾದ ಅಂಶವಿದೆ. ಪಂಡಿತಾ ರಮಾಬಾಯಿ ಮತ್ತು ನಾಗರತ್ನಮ್ಮ ಇವರಿಬ್ಬರು ತಮ್ಮ ತಮ್ಮ ವೈಯಕ್ತಿಕ ಬದುಕಿನ ತುರ್ತಿನಿಂದ ಹೊರಟವರು. ಹಾಗಾಗಿ ತಮ್ಮ ಬದುಕಿನ ಸಂದರ್ಭಗಳಿಂದ ರೂಪುಗೊಂಡವರು. ಒಂದು

ವೈಯಕ್ತಿಕ ಹಿನ್ನೆಲೆಯಲ್ಲಿ ರೂಪುಗೊಂಡ ಅವರ ಪ್ರತಿಭಟನೆಯೂ ಕ್ರಮವೂ ಕೂಡ ತುಂಬಾ ವಿಶಿಷ್ಟವಾಗಿತ್ತು ಮತ್ತು ಒಂದು ಸಾಮಾನ್ಯ ಸಮುದಾಯಕ್ಕೆ ಅದನ್ನು ಕಾರ್ಯಗತಗೊಳಿಸುವುದು ಅಸಾಧ್ಯವೂ ಆಗಿತ್ತು. ನಾಗರತ್ನಮ್ಮನಿಗೆ ದೇವದಾಸಿ ಪದ್ಧತಿಯ ರದ್ದತಿ ಮತ್ತು ಅಶ್ಲೀಲತೆಯ ಪ್ರಶ್ನೆಗಳು, ಪಂಡಿತಾ ರಮಾಬಾಯಿಗೆ ಬ್ರಾಹ್ಮಣ ವಿಧವೆ ಹೆಣ್ಣುಮಗಳ ನೋವು ಹಾಗೂ ಒದ್ದಾಟಗಳು ತುಂಬಾ ತುರ್ತಿನದಾಗಿದ್ದವು. ಹಾಗಾಗಿ ಅವರ ಹೋರಾಟ, ಪ್ರತಿಭಟನೆ ಇವೆಲ್ಲವೂ ಆ ನೆಲೆಯಿಂದಲೇ ಹೊಮ್ಮಿದವಾಗಿದ್ದವು. ಅವರಿಬ್ಬರೂ ಮಹಿಳೆಯರಿಗೆ ಸಂಬಂಧಪಟ್ಟಂತೆ ಸಾಕಷ್ಟು ಗಂಭೀರವಾದ ಪ್ರಶ್ನೆಗಳನ್ನು ಎತ್ತಿದರೂ ಕೂಡ ಅವರ ಹೋರಾಟ ತುಂಬಾ ವಿಭಿನ್ನ ಹಿನ್ನೆಲೆಗಳಿಂದ ಬಂದ ಮಹಿಳೆಯರ ಸಮಸ್ಯೆಗಳನ್ನು ಒಳಗೊಳ್ಳಬಹುದಾದಷ್ಟು ವಿಶಾಲವಾದ ವ್ಯಾಪ್ತಿಯನ್ನು ಹೊಂದಿರಲಿಲ್ಲ ಎನ್ನುವುದೂ ಕೂಡ ಅಷ್ಟೇ ವಾಸ್ತವ.

ಇನ್ನು ಸಮಾಜದ ಯಾವುದೇ ಕ್ಷೇತ್ರದಲ್ಲಾಗಲಿ ಬದಲಾವಣೆಯನ್ನು ಮತ್ತು ಪರಿವರ್ತನೆಯನ್ನು ತರುವಲ್ಲಿ ಹಲವು ವರ್ಷಗಳು ನಿಧಾನವಾಗಿ ರೂಪುಗೊಂಡು ಗಟ್ಟಿಯಾಗುತ್ತಾ ಹೋಗುವ ಸಾಮಾಜಿಕ ಚಳುವಳಿಗಳ ಪಾತ್ರ ತುಂಬಾ ಹಿರಿದು. ಈ ಬಗೆಯ ಎಲ್ಲ ಸಾಮಾಜಿಕ ಚಳುವಳಿಗಳಿಗೂ ಒಂದು ಧನಾತ್ಮಕ ಅಂಶವಿದೆ. ಅವು ತುಂಬಾ ನಿಧಾನವಾಗಿ ರೂಪುಗೊಂಡು ಹಲವು ವರುಷಗಳ ಕಾಲ, ಹಲವಾರು ಬದಲಾವಣೆಗಳನ್ನು ಒಳಗೊಂಡು ಸ್ವತಃ ತಾವೂ ಬದಲಾಗುತ್ತಾ ಹೋಗುತ್ತವೆ. ಆ ಮೂಲಕ ಸಾಮಾಜಿಕ ಬದಲಾವಣೆಗಳನ್ನು ಹಂತ ಹಂತವಾಗಿ ತರುತ್ತಾ ಹೋಗುತ್ತವೆ. ಆ ಪ್ರಕ್ರಿಯೆಯಲ್ಲಿ ಸಾಮಾನ್ಯ ಜನರ ಕಣ್ಣಿಗೇ ಕಾಣದಂತಹ ಕಾರ್ಯಾಚರಣೆಗಳ ಸರಣಿಗಳು ಅವರ ನಡುವೆಯೇ ಕಾರ್ಯಪ್ರವೃತ್ತವಾಗಿರುತ್ತವೆ. ಈ ಚಳುವಳಿಗಳು ದೈನಂದಿನ ಬದುಕಿನ ನೀತಿ ನಿಯಮಗಳನ್ನು ಪ್ರಶ್ನಿಸುತ್ತಲೇ ಇರುತ್ತವೆ, ಆದರೆ ಅದೊಂದು ನಿರಂತರ ಪ್ರಕ್ರಿಯೆಯಾಗಿ ಸಾಗುತ್ತಿರುತ್ತದೆ. ಅದು ನಿರಂತರವಾಗಿ ಅರಿವನ್ನು ಮೂಡಿಸುವ ಒಂದು ಪ್ರಕ್ರಿಯೆಯಾಗಿರುತ್ತದೆ. ತನ್ನ ನಿರಂತರತೆಯಿಂದಾಗಿಯೇ ಅದು ಪ್ರಚಲಿತ ಮಾದರಿಗಳನ್ನು ನಿಧಾನವಾಗಿ ತಿರುಗುಮುರುಗು ಮಾಡುತ್ತಿರುತ್ತವೆ. ಈ ಹೋರಾಟಗಳು ಸಾರ್ವಜನಿಕ ಮತ್ತು ವೈಯಕ್ತಿಕ ವಲಯಗಳಲ್ಲಿ ಏಕಕಾಲಕ್ಕೆ ಅಸ್ತಿತ್ವದಲ್ಲಿ ಇರುತ್ತವೆ. ಹಾಗಾಗಿ ಅಲ್ಲಿ ವೈಯಕ್ತಿಕ ಬದುಕಿನಲ್ಲಿ ನಡೆಯುತ್ತಿರುವ ಹೋರಾಟಗಳು ಹೆಚ್ಚುಕಡಿಮೆ ಸಾರ್ವಜನಿಕ ಬದುಕಿನಲ್ಲಿ ನಡೆಯುತ್ತಿರುವ ಹೋರಾಟದ ಒಂದು ಸಣ್ಣ ಅಭಿವ್ಯಕ್ತಿಯಾಗಿರುತ್ತದೆ. ಹೀಗೆ ಒಂದು ಇನ್ನೊಂದನ್ನು ಪ್ರಭಾವಿಸುತ್ತಾ ಮತ್ತು ಗಟ್ಟಿಗೊಳಿಸುತ್ತಾ ಹೋಗುತ್ತಿರುತ್ತವೆ.

ಈ ಯಾವ ಚಳುವಳಿಗಳೂ ತುಂಬಾ ದಿಢೀರ್ ಎಂದು ರೂಪುಗೊಂಡು ಜನರಲ್ಲಿ ದಿಗಿಲು ಹುಟ್ಟಿಸುವುದಿಲ್ಲ. ಇವು ತುಂಬಾ ನಿಧಾನವಾಗಿ ಹಲವಾರು ವರುಷಗಳ ಕಾಲ ರೂಪುಗೊಳ್ಳುವುದರಿಂದ, ಜನರಿಗೇ ಅರಿವಿಲ್ಲದೆ, ಅದರ ಹಲವಾರು ಅಂಶಗಳು ಅವರ ಪ್ರಜ್ಞೆಯ ಮತ್ತು ಅರಿವಿನ ಭಾಗವಾಗುತ್ತಾ ಹೋಗಿರುತ್ತವೆ. ಹಾಗಾಗಿ ಬದಲಾವಣೆಗಳನ್ನು ಒಪ್ಪಿಕೊಳ್ಳುವುದು ಸಾಮಾನ್ಯ ಜನರಿಗೆ ಸಲೀಸಾಗುತ್ತದೆ. ಇದೇ ಕಾರಣಕ್ಕಾಗಿ ಹೆಚ್ಚೆಚ್ಚು ಜನಸಾಮಾನ್ಯರು ಇದರ ಭಾಗವಾಗುತ್ತಾ ಹೋಗುತ್ತಿರುತ್ತಾರೆ. ಇದು ಇಷ್ಟು ನಿಧಾನವಾದ ಪ್ರಕ್ರಿಯೆಯಾಗಿರುವುದರಿಂದ ಪ್ರತಿಭಟನೆಯ ವಿಧಾನಗಳು ಹತ್ತು ಹಲವಾರು ಬಗೆಗಳಲ್ಲಿ ಮತ್ತು ರೂಪಗಳಲ್ಲಿ ಇರುತ್ತವೆ. ಅದರಿಂದಾಗಿ ಅದು ಹಲವಾರು ಆಯಾಮಗಳನ್ನು ಪಡೆದುಕೊಳ್ಳುತ್ತದೆ. ಹೀಗೆ ಇದು ಬೇರೆ ಬೇರೆ ರೀತಿಗಳಲ್ಲಿ ಜನರ ಬದುಕನ್ನು ಸ್ಪರ್ಶಿಸುವುದರಿಂದ ಇದರ ವ್ಯಾಪ್ತಿ ಸಾಕಷ್ಟು ವಿಶಾಲವಾಗಿರುತ್ತದೆ. ವಿಭಿನ್ನ ವರ್ಗ, ಜಾತಿ, ಧರ್ಮ, ಸಮುದಾಯ ಮತ್ತು ವೃತ್ತಿಯ ಜನ ಇದರೊಳಗೆ ಸೇರುತ್ತಾ ಹೋಗುತ್ತಾರೆ ಮತ್ತು ಆ ಮೂಲಕ ಹೊಸ ಹೊಸ ಸವಾಲುಗಳು, ಪ್ರಶ್ನೆಗಳೂ ಸೇರುತ್ತಾ ಹೋಗುತ್ತವೆ. ಹಾಗಾಗಿ ಚಳುವಳಿಯಲ್ಲಿ ಹುಡುಕಾಟವೂ ನಿರಂತರವಾಗುತ್ತಾ ಹೋಗುತ್ತದೆ. ಇದರಿಂದಾಗಿ ಚಳುವಳಿಯ ವ್ಯಾಪ್ತಿ ವಿಶಾಲವಾಗಿ ಹೆಚ್ಚಿನ ಜನರನ್ನು ಒಳಗೊಳ್ಳುವುದು ಸಾಧ್ಯವಾಗುತ್ತದೆ. ಇದು ಚಳುವಳಿಗಳನ್ನು ಸಂಕೀರ್ಣಗೊಳಿಸಿ ಅದರ ಒಳಗೊಳ್ಳುವಿಕೆಯನ್ನು ಹೆಚ್ಚಿಸುತ್ತದೆ.

ಮಹಿಳಾ ಚಳುವಳಿಯ ಇತಿಹಾಸ ನೋಡಿದಾಗ ಇದು ಸ್ಪಷ್ಟವಾಗುತ್ತದೆ. ತುಂಬಾ ಸಣ್ಣದಾಗಿ ಒಂದಿಷ್ಟು ಬೇಡಿಕೆಗಳಿಗಾಗಿ ಪ್ರಾರಂಭವಾದ ಮಹಿಳಾ ಚಳುವಳಿ ಕ್ರಮೇಣವಾಗಿ ವಿಸ್ತಾರಗೊಳ್ಳುತ್ತಾ ವಿವಿಧ ಸ್ತರಗಳ ಹೆಂಗಸರನ್ನು ಒಳಗೊಳ್ಳುತ್ತಾ, ಹೀಗೆ ಒಳಗೊಳ್ಳುವ ಪ್ರಕ್ರಿಯೆಯಲ್ಲಿ ಅವರು ಎತ್ತಿದ ಪ್ರಶ್ನೆಗಳು ಮತ್ತು ಸಮಸ್ಯೆಗಳೊಡನೆ ಮುಖಾಮುಖಿಯಾಗುತ್ತಾ, ಅವುಗಳಿಗೆ ಪರಿಹಾರವನ್ನು ಹುಡುಕುತ್ತಾ ಮಾನವನ ಬದುಕನ್ನೇ ನೋಡುವ ಒಂದು ದೃಷ್ಟಿಕೋನವಾಗಿ ಬೆಳೆದದ್ದು ಇಂದು ಇತಿಹಾಸ. ನಿರಂತರ ಚಲನೆಯಲ್ಲಿದ್ದ ಮಹಿಳಾ ಚಳುವಳಿ, ತಾನು ಎಡವಿದ್ದನ್ನು, ಜಾರಿದ್ದನ್ನು ಸೋತಿದ್ದನ್ನೂ ಒಪ್ಪಿಕೊಳ್ಳುತ್ತಾ, ತನ್ನನ್ನೇ ತಾನು ಬದಲಿಸಿಕೊಂಡು ತನ್ನ ಉದ್ದೇಶಗಳನ್ನು ಮತ್ತು ಧೋರಣೆಗಳನ್ನು ಮಾರ್ಪಡಿಸಿಕೊಳ್ಳುತ್ತಾ ಹೋಯಿತು. ಹಾಗಾಗಿಯೇ ಹಲವಾರು ವೈರುಧ್ಯಗಳೂ ಭಿನ್ನಮತಗಳೂ ಇದ್ದಾಗ್ಯೂ ಕೂಡ ಬೇರೆ ಬೇರೆ ಬಗೆಯ ಮಹಿಳೆಯರನ್ನು ಒಳಗೊಳ್ಳುವುದಕ್ಕೆ ಚಳುವಳಿಗೆ ಸಾಧ್ಯವಾಗಿದ್ದು, ದಲಿತ ಮಹಿಳೆಯರು, ಮುಸ್ಲಿಂ ಮಹಿಳೆಯರು, ಬುಡಕಟ್ಟಿನ ಮಹಿಳೆಯರು, ಲೈಂಗಿಕ ಕಾರ್ಯಕರ್ತೆಯರು, ಸಲಿಂಗಕಾಮಿಗಳು, ಏಡ್ಸ್ ಪೀಡಿತರು ಹೀಗೆ ಹತ್ತು ಹಲವಾರು ಬಗೆಯ ಹೆಣ್ಣುಮಕ್ಕಳನ್ನು ಅದು ಒಳಗೊಳ್ಳುತ್ತಾ ಬದಲಾವಣೆಗಳನ್ನು ತರಲಾರಂಭಿಸಿತು. ಜೊತೆಗೆ ಅದು ಮನುಷ್ಯರೆಲ್ಲರ ಮೇಲೆ ಪರಿಣಾಮ ಬೀರುವ ಪರಿಸರ, ಆರ್ಥಿಕ ಬದಲಾವಣೆಗಳು, ಶಿಕ್ಷಣ, ಕೃಷಿ ಮುಂತಾದ ಹಲವಾರು ಪ್ರಶ್ನೆಗಳನ್ನೂ ಮಹಿಳೆಯ ದೃಷ್ಟಿಯಿಂದ ನೋಡುವ ಕ್ರಮವನ್ನೂ ರೂಢಿಸಿಕೊಂಡಿತು. ಇದು ನೇರವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ಎಲ್ಲಾ ಮಹಿಳೆಯರ ಬದುಕಿನಲ್ಲಿ ಮತ್ತು ಅವರು ಬದುಕುತ್ತಿರುವ ಇಡೀ ಸಮಾಜದ ಚಿಂತನೆಯಲ್ಲಿ ಸಾಕಷ್ಟು ಬದಲಾವಣೆಗಳನ್ನು ತಂದಿತು.

ಇವೆಲ್ಲವೂ ಸಾಕಷ್ಟು ನಿಧಾನಗತಿಯಲ್ಲಿ ಆದ ಬದಲಾವಣೆಗಳಾದ್ದರಿಂದ ಒಟ್ಟು ಸಮಾಜಕ್ಕೆ ಮಹಿಳೆಯರೂ ಸೇರಿದಂತೆ ಎಲ್ಲರೂ ಅದನ್ನು ಒಪ್ಪಿಕೊಂಡು, ಜೀರ್ಣಿಸಿಕೊಂಡು ಅವರ ಅರಿವಿನ ಭಾಗವನ್ನಾಗಿ ಮಾಡಿಕೊಳ್ಳಲು ಸಾಕಷ್ಟು ಸಮಯ ದೊರಕಿತು. ಇದರಿಂದಾಗಿ ಹಲವಾರು ಬದಲಾವಣೆಗಳು ಬದುಕಿನ ಗತಿಯಲ್ಲಿ ಬೆರೆತು ಸಮುದಾಯದ ಪ್ರಜ್ಞೆಯ ಭಾಗವಾಗುವುದಕ್ಕೆ ಸಾಧ್ಯವಾಯಿತು. ಬಹುಶಃ ಈ ವಿಧಾನವೇ ಹೆಚ್ಚಿನ ಮಹಿಳೆಯರನ್ನು ಒಳಗೊಂಡು ಅವರ ಬದುಕಿನಲ್ಲಿ ಬದಲಾವಣೆಗಳನ್ನು ತರುತ್ತಾ ಮತ್ತು ಅವರ ಮೂಲಕ ತಾನು ಬದಲಾವಣೆಗೊಳ್ಳುತ್ತಾ ಒಂದು ನಿರಂತರತೆಯನ್ನು ಪಡೆದುಕೊಳ್ಳುವ ಸಾಧ್ಯತೆಯನ್ನು ಹೊಂದಿದೆ ಎನಿಸುತ್ತದೆ.

ಶೈಲಜಾ
ಸಿ. ಎಚ್. ೭೩, ೭ನೇ ಮುಖ್ಯ ರಸ್ತೆ, ಸರಸ್ವತಿಪುರಂ, ಮೈಸೂರು - ೫೭೦ ೦೦೯

With Best Compliments From



IMPORTERS OF

SUMITOMO PRINTING BLANKETS, JAPAN
UNDER CALIBRATED PAPER FOR BLANKETS
SELF ADHESIVE FILM FOR PLATES
ROYAL G & ROYAL M/C PROCESS INKS, S. KOREA
AND OTHER CONSUMABLES

RAMAS INKS & CHEMICALS
#11, S. M. Lane, Akkipet
Bangalore - 560 053
Ph: 26702685 Telefax : 26702695

RAMAS REPROGRAPHICS
No. 466, Mundaga Nadar Street
Sivakasi - 626 1123
Ph: (04562) 278350, 274461 Fax: 277374

# ನನ್ನ ತಂದೆಯ ಹೆಬ್ಬೆರಳಿನ ಉಗುರು

ಸುಗತ ಶ್ರೀನಿವಾಸರಾಜು



ವೃತ್ತಿ ನಿಮಿತ್ತವಾಗಿ ಇತ್ತೀಚೆಗೆ ನಾನು ಮಣಿಪಾಲ ಶ್ವವಿದ್ಯಾನಿಲಯಕ್ಕೆ ಭೇಟಿ ಕೊಟ್ಟಿದ್ದೆ. ಈ ವಿಶ್ವವಿದ್ಯಾ ಲಯದ ವ್ಯಾಪ್ತಿಯೊಳಗೆ ಬರುವ ಹಲವು ಸಂಸ್ಥೆಗಳಿಗೆ ನ್ನನ್ನು ಕರೆದುಕೊಂಡು ಹೋಗಿ, ಅವುಗಳ ಸ್ಥೂಲ ರಿಚಯ ಮಾಡಿಕೊಟ್ಟವರು ಅಲ್ಲಿನ ಸಾರ್ವಜನಿಕ ಂಪರ್ಕ ಅಧಿಕಾರಿ ಶ್ರೀಮತಿ ವಿದ್ಯಾ ಪ್ರತಾಪ್. ಂದೆರಡು ವೈದ್ಯಕೀಯ ಕಾಲೇಜುಗಳು, ತಾಂತ್ರಿಕ ಲೇಜುಗಳು, ಮಾಹಿತಿ ಮತ್ತು ಸಂವಹನ ಶಾಲೆ, ೀವ ವಿಜ್ಞಾನ ಶಾಲೆ ಇವುಗಳೆಲ್ಲ ನನ್ನ ಭೇಟಿಯ ಾಗವಾಗಿದ್ದವು. ಒಬ್ಬ ಪತ್ರಕರ್ತನ ನಿತ್ಯ ವರ್ತಮಾನ ಂತಿದ್ದ ಈ ಭೇಟಿಗಳ ಬಗ್ಗೆ ವಿಶೇಷವಾದುದು ಏನೂ ರಲಿಲ್ಲ. ಆದರೆ, ಈ ವಿಶ್ವವಿದ್ಯಾನಿಲಯದಲ್ಲಿ ನಾನು ೀಟಿ ಮಾಡಿದ ಒಂದು ಸ್ಥಳ ಮಾತ್ರ ನನ್ನನ್ನು ದಿನಗಟ್ಟಲೆ, ಗಲು ರಾತ್ರಿಯೆನ್ನದೆ ಕಾಡಿತು. ಅದರ ಬಗ್ಗೆ ನಾನು ಗ ಬರೆಯಲು ಕುಳಿತಾಗ ಕೂಡಾ ನನ್ನೊಳಗಿನ ವನೆಗಳು ಒಂದು ಅತಾರ್ಕಿಕ ಗುಂಗಿಗೆ ಸಿಲುಕಿ, ಚಿತ್ರ ಪಾತ್ರಗಳಲ್ಲಿ ಹರಿಯುತ್ತವೆ. ನಾನಿಲ್ಲಿ ಪ್ರಸ್ತಾಪಿಸು ರುವುದು ಐವತ್ತೈದು ವರ್ಷ ಹಳೆಯ, ವೈದ್ಯಕೀಯ ದ್ಯಾರ್ಥಿಗಳಿಗೆ ಮಾನವ ದೇಹದ ಸೂಕ್ಷ್ಮಗಳನ್ನು ರಿಯಲು ನಿರ್ಮಿಸಿರುವ ಕಸ್ತೂರ್ಬಾ ಮೆಡಿಕಲ್ ಲೇಜಿನ ಅನಾಟೋಮಿ ಮ್ಯೂಸಿಯಮ್‌ನ ಬಗ್ಗೆ.

ಶ್ರೀಮತಿ ವಿದ್ಯಾ ಪ್ರತಾಪ್ ಅವರು ನನಗೆ ತೋರಿಸ ೀಕೆಂದಿದ್ದ ಹಲವಾರು ಸಂಸ್ಥೆಗಳ ಪಟ್ಟಿಯಲ್ಲಿ ಈ ಂಗ್ರಹಾಲಯ ಒಂದಾಗಿದ್ದರಿಂದ ಅಂದು ಮಧ್ಯಾಹ್ನ ವರು ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋದರು. ಳಗೆ ಹೋಗುತ್ತಿದ್ದಂತೆಯೇ ಅಲ್ಲಿಯ ಮೇಲ್ವಿಚಾರಕರು ಲ್ಲಿ ಎಂದು ವಿಚಾರಿಸಿದಾಗ 'ಅವರಿನ್ನೂ ಊಟದಿಂದ ಹಿಂದಿರುಗಿಲ್ಲ' ಎಂಬ ಉತ್ತರ ಸಿಕ್ಕಿತು. ಹಾಗಾಗಿ, ಆ ಸಂಗ್ರಹಾಲಯದಲ್ಲಿದ್ದ ಒಂದು ಸಾವಿರಕ್ಕೂ ಹೆಚ್ಚು ಮಾನವ ದೇಹದ ಭಾಗಗಳೊಂದಿಗೆ ಮೌನವಾಗಿ ಸಂವಾದಿಸುವ ಅವಕಾಶ ನಮಗೆ ದೊರೆಯಿತು. ಈಗ ನನಗೆ ಅನ್ನಿಸುತ್ತಿದೆ ಆ ಮೇಲ್ವಿಚಾರಕರು ಏನಾದರೂ ಇದ್ದಿದ್ದರೆ ಅವರ ನಿರಂತರ ವಿವರಣೆ ನನ್ನ ಸಂವಾದದ ಗಾಢತೆಯನ್ನು ಘಾಸಿಗೊಳಿಸುತ್ತಿತ್ತೇನೋ ಎಂದು. ಅಲ್ಲಿ ದೇಹದ ಅವಯವಗಳನ್ನು ಮೆದುಳು, ತಲೆ, ಕತ್ತು, ದೇಹದ ಮೇಲಿನ ಭಾಗ, ಹೊಟ್ಟೆ, ಸೊಂಟ ಮತ್ತು ಕೈ ಕಾಲುಗಳೆಂದು ವಿಂಗಡಿಸಲಾಗಿತ್ತು. ದೊಡ್ಡ ದೊಡ್ಡ ಜಾಡಿಗಳಲ್ಲಿ, ಫಾರ್‌ಮಲಿನ್ ದ್ರಾವಣದಲ್ಲಿ ಸಂಸ್ಕರಿಸಿ ಇಟ್ಟ ಈ ಭಾಗಗಳನ್ನು ನೋಡಲು ಮೇಜುಗಳ ನಡುವಿನ ಓಣಿಯಲ್ಲಿ ನಡೆಯಬೇಕಾಗಿತ್ತು. ದೇಹದ ಪ್ರತಿಯೊಂದು ಭಾಗವನ್ನು ತುಂಡರಿಸಿ, ಸಂಸ್ಕರಿಸಿ ಇಟ್ಟಿರುವ ಈ ಸಂಗ್ರಹಾಲಯ ಏಷ್ಯಾದಲ್ಲಿಯೇ ಅತ್ಯಂತ ದೊಡ್ಡದು ಮತ್ತು ಇದನ್ನು ಪ್ರಾರಂಭಿಸಿ, ಪೋಷಿಸಿದವರು ಡಾ॥ ಗೋಡ್ಬೋಲೆ.

ಒಂದು ಕಾಲಕ್ಕೆ ಜೀವಂತಿಕೆಯಿಂದ ಪುಟಿಯುತ್ತಿದ್ದ ಈ ಮಾನವ ದೇಹದ ಭಾಗಗಳನ್ನು ಈಗ ಒಂದು ಕಲಾಕೃತಿಯಂತೆ ನೋಡುವಾಗ ಮನಸ್ಸಿನಲ್ಲಿ ಉಂಟಾಗುವ ಕೋಲಾಹಲ ಹೇಳತೀರದ್ದು. ಅವುಗಳನ್ನು ನೋಡುತ್ತಿದ್ದಂತೆಯೇ ಅವು ನಮ್ಮದೇ ಚಲನಶೀಲ ಮೆದುಳಿನ, ಚಲಿಸುವ ಕೈ-ಕಾಲುಗಳ, ಡರ್ ಅಂತ ತೇಗಿ- ತೊಳಸುವ ಹೊಟ್ಟೆಯ, ನೋಡುವ ಕಣ್ಣುಗಳ, ಸೆಟೆಯುವ ಬೆನ್ನಿನ ಮೂಳೆಯ ಪ್ರತಿಫಲನವೇನೋ ಎಂದನ್ನಿಸಲು ಶುರುವಾಗುತ್ತದೆ. ಮನುಷ್ಯನ ಮೋಸ ಮತ್ತು ದಗಲ ಬಾಜಿತನಗಳು, ದುಃಖ ಮತ್ತು ನಿರಾಶೆಗಳು, ಉತ್ಕಟ ಸಂತೋಷ ಮತ್ತು ನಿರಾತಂಕ ಸುಖಗಳು, ನಮ್ಮ ಎದುರು ಕಾಣುವ ಮೆದುಳಿನ ಪದರಗಳಲ್ಲಿ, ನಮ್ಮ ಜೀವಂತ ಮೆದುಳಿನಲ್ಲಿ ಅಡಗಿರುವಂತೆ, ಅಡಗಿವೆಯೇನೋ ಅಥವಾ ಪ್ರದರ್ಶನಕ್ಕಿಟ್ಟ ಈ ಭಾಗಗಳಲ್ಲಿ ಹರಡಿರುವ ನರಗಳ ಉದ್ದಗಲಗಳಲ್ಲಿ ಬೆಸೆದುಕೊಂಡಿವೆಯೇನೊ ಎಂದು ಅನ್ನಿಸತೊಡಗುತ್ತದೆ. ಈ ಸಂಗ್ರಹಾಲಯದ ಮೇಲ್ವಿಚಾರಕರು ಕೆಲವು ಮುಖ್ಯವಾದ ನರ ಸಂಚಾರದ ದಾರಿಗಳನ್ನು ಕೆಂಪು, ನೀಲಿ, ಹಳದಿ ಬಣ್ಣದಲ್ಲಿ ಗುರುತಿಸಿಟ್ಟಿದ್ದಾರೆ. ನರಗಳಿಗೆ ಬಣ್ಣ ತೊಡಿಸುವುದು ಅದೆಂಥ ವಿಚಿತ್ರ ಪ್ರಕ್ರಿಯೆ! ನಮ್ಮ ಭಾವನೆಗಳಿಗೇ ಬಣ್ಣ ಹಚ್ಚಿದಂತೆ. ಬಹಳ ಬೇಗ ನೀವು ಆ ಬಿಡಿ ಭಾಗಗಳೊಂದಿಗೆ ಮಾತನಾಡಲು, ಅವುಗಳನ್ನು ಪ್ರಶ್ನಿಸಲು ಪ್ರಾರಂಭಿಸುತ್ತೀರಿ ಮತ್ತು ಅವುಗಳು ನಿಮಗೆ ಉತ್ತರವನ್ನು ಪಿಸುಗುಡಲಾರಂಭಿಸುತ್ತವೆ.

ವಿಚಿತ್ರವೆಂದರೆ, ಈ ಸಂಗ್ರಹಾಲಯದಲ್ಲಿ ನೀವು ಆಗಾಗ 'ಇದು ವಿಜ್ಞಾನದ ಪ್ರಯೋಗಾಲಯ, ಕಲಾಮಂದಿರ ಅಲ್ಲ' ಎಂದು ನಿಮಗೆ ನೀವೇ ಎಚ್ಚರಿಸಿಕೊಳ್ಳುತ್ತಿರಬೇಕು. ಇಲ್ಲಿ ಜಯಿಸುವುದು ವಿಧಾನ, ವಿವೇಚನೆ ಮತ್ತು ತರ್ಕ. ಈ ಸಂಗ್ರಹಾಲಯದಲ್ಲಿ ಪ್ರಕೃತಿ ಸಹಜ ನಶಿಸುವಿಕೆ ಜೀವದ ಪರ್ಯಾಯವಾದರೆ, ಇದಕ್ಕೆ ಒಂದು ಅಚಲತೆಯನ್ನು ತಂದು, ಈ ಎರಡು ಸ್ಥಿತಿಗಳ ನಡುವಿನ ಒಂದು ಸ್ತರದಲ್ಲಿ ಹಿಡಿದಿಡಲು ಫಾರ್ಮಲ್ ಡಿ ಹೈಡ್ರೇಟ್ ದ್ರಾವಣವಿದೆ. ಈ ದೇಹದ ನಮೂನೆಗಳ ಮುಂದೆ ಗಂಟೆಗಟ್ಟಲೆ ಕುಳಿತು ಟಿಪ್ಪಣಿ ಮಾಡಿಕೊಳ್ಳುವ ಒಬ್ಬ ವೈದ್ಯಕೀಯ ವಿದ್ಯಾರ್ಥಿಗೆ ಇರಬಹುದಾದದ್ದು ಒಂದು ಸರಳ ಉಪಯುಕ್ತತೆಯ ಸಂಬಂಧ ಮಾತ್ರ. ಬದುಕಿದ್ದಾಗ ಈ ಕೈ ಎಷ್ಟು ಬೆಚ್ಚಗಿತ್ತು, ಆ ಮೆದುಳು ಎಷ್ಟು ಚುರುಕಾಗಿತ್ತು ಎಂಬುದನ್ನಾಗಲಿ ಅಥವಾ ಒಂದು ಜಾನಪದ ಕಥಾನಕದಲ್ಲಿ ಸಾಧ್ಯವಾಗುವ ಹಾಗೆ ದೇಹದ ಈ ತುಂಡುಗಳನ್ನು ಒಟ್ಟುಗೂಡಿಸಿ ಜೀವತುಂಬಿದರೆ ಏನಾಗಬಹುದೆಂಬ ಕಲ್ಪನೆಯಾಗಲಿ ವೈದ್ಯಕೀಯ ವಿದ್ಯಾರ್ಥಿಗೆ ಮುಖ್ಯವಾಗುವುದಿಲ್ಲ. ಚಿತ್ರ ಸಂಗ್ರಹಾಲಯದಲ್ಲಿ ನೀವು ಒಂದು ಕಲಾಕೃತಿಯ ಸೂಕ್ಷ್ಮಗಳನ್ನು ಹೆಕ್ಕುವಂತೆ, ಈ ಜಾಡಿಗಳಲ್ಲಿ ಕಾಣುವ ವಸ್ತುಗಳ ಆಕಾರ ಮತ್ತು ಬಣ್ಣಗಳಲ್ಲಿ ಭಾವನಾತ್ಮಕವಾಗಿ ತೊಡಗಿಕೊಳ್ಳುವುದು ನಿಷಿದ್ಧ. ಹಾಗೆ ತೊಡಗಿಕೊಳ್ಳಲಾಗುವುದಿಲ್ಲ ಎಂದನಿಸುತ್ತಿದ್ದಂತೆ, ಏಕಾಗಬಾರದು ಎಂಬ ವಾದ ನನ್ನೊಳಗೆ ಹುಟ್ಟಿತು. ಸಿದ್ಧಾಂತಗಳಿಗೆ ಇರುವಷ್ಟೇ ಗೊಡ್ಡು ಹಠ ತರ್ಕಬದ್ಧ ತಿಳುವಳಿಕೆಗೂ, ವಿಜ್ಞಾನದ ವಿಧಾನಕ್ಕೂ ಇದೆ ಎಂದನಿಸಿತು. ವಿಜ್ಞಾನವೂ ಒಂದು ಸಿದ್ಧಾಂತವೇ. ಕಾರ್ಯ-ಕಾರಣಗಳ ತರ್ಕವನ್ನು ಮೀರಿ, ಭಾವನಾಸ್ಫುರಿತರಾಗಿ ಬಂದಾಗ ಮಾತ್ರ ಈ ವಿಶಿಷ್ಟ ಸಂಗ್ರಹಾಲಯವನ್ನು ಯಾರಾದರೂ ಇನ್ನೂ ಚೆನ್ನಾಗಿ ಅರಿಯಬಹುದು ಅನ್ನಿಸಿತು. ಹೀಗೆ ಆಲೋಚಿಸುತ್ತಿದ್ದಂತೆ, ನನಗರಿಯದೆಯೇ ನನ್ನ ಮನಸ್ಸು ನನ್ನ ತಂದೆಯ ಸಾವಿನ ಕಡೆಗೆ ಹೊರಳಿತ್ತು.

ಅಲ್ಲಿ ಜಾಡಿಯಲ್ಲಿ ಇದ್ದ ಒಂದು ಕೈಗೆ ನನ್ನ ತಂದೆಗಿದ್ದಂತಹ ದುಂಡನೆಯ ಹೆಬ್ಬೆರಳಿತ್ತು. ಆ ಹೆಬ್ಬೆರಳಿನಲ್ಲಿ ದಪ್ಪನೆಯ ಗಟ್ಟಿ ಉಗುರು ಬೆಳೆದಿತ್ತು. ನನ್ನ

ತಂದೆಯ ಉಗುರಿನ ಹಾಗೆಯೇ. ನನ್ನ ತಂದೆಯ ಉಗುರು ಎಷ್ಟು ಗಟ್ಟಿ ಇತ್ತೆಂದರೆ ಅದನ್ನು ನೈಲ್‌ಕಟ್ಟರಿನಲ್ಲಿ ಹಿಡಿದು ತುಂಡರಿಸಲು ಆಗುತ್ತಿರಲಿಲ್ಲ. ಇದಕ್ಕಾಗಿ ಅವರು ಬಳಸುತ್ತಿದ್ದದ್ದು ಅವರ ಎರಡಲಗಿನ ಸೆವೆನ್-ಓ-ಕ್ಲಾಕ್ ಶೇವಿಂಗ್ ಬ್ಲೇಡ್. ನಿಮಗೆ ಉಗುರು ತೆಗೆಯಲು ಬ್ಲೇಡು ಸಾಲುವುದಿಲ್ಲ, ಗರಗಸ ಬೇಕು ಎಂದು ಮನೆಯಲ್ಲಿ ನಾವು ಹಾಸ್ಯ ಮಾಡುತ್ತಿದ್ದೆವು. ಈ ಉಗುರು ಕತ್ತರಿಸುವ ಶಾಸ್ತ್ರ ನಮ್ಮ ಮನೆಯಲ್ಲಿ ಯಾವತ್ತೂ ನಡೆಯುತ್ತಿದ್ದುದು ಭಾನುವಾರ ಬೆಳಿಗ್ಗೆ ಸ್ನಾನದ ನಂತರ, ತಿಂಡಿ ತಿನ್ನುವ ಮೊದಲು. ಅದಕ್ಕೆ ಅವರು ಕೊಡುತ್ತಿದ್ದ ಕಾರಣ, ಸ್ನಾನದ ನಂತರ ಉಗುರುಗಳು ಮೆತ್ತಗಾಗುವುದರಿಂದ ಅವುಗಳನ್ನು ಕತ್ತರಿಸುವುದು ಒಂದು ರಣ ಕಾರ್ಯವಾಗುವುದಿಲ್ಲ ಎಂದು. ಅವರು ಉಗುರು ಕತ್ತರಿಸುವುದನ್ನು ನೋಡುವುದು ನನಗೆ ಆತಂಕದ ಕ್ಷಣಗಳು; ಯಾಕೆಂದರೆ ಎರಡಲಗಿನ ಬ್ಲೇಡ್ ಮೊದಲೇ ಅಪಾಯಕಾರಿ; ಜೊತೆಗೆ ನಮ್ಮ ತಂದೆಯವರಿಗೆ ಕೊಂಚ ಮಧುಮೇಹ ಬೇರೆ. ಆದರೆ ಈ ಬ್ಲೇಡ್ ಅವರಿಗೆ ಎಂದೂ ಗಾಯಮಾಡಿದ್ದು ನನಗೆ ನೆನಪಿಲ್ಲ. ಅವರು ತಮ್ಮ ಉಗುರುಗಳನ್ನು ಎಷ್ಟು ನಾಜೂಕಾಗಿ, ದುಂಡಗೆ ಕತ್ತರಿಸುತ್ತಿದ್ದರೆಂದರೆ, ಅದನ್ನು ಮತ್ತೆ ನುಣುಪುಗೊಳಿಸಬೇಕಾದ ಅವಶ್ಯಕತೆಯೇ ಇರುತ್ತಿರಲಿಲ್ಲ. ಅದು ಅವರಿಗೇ ಸಿದ್ಧಿಸಿದ್ದ ಕಲೆ. ಅವರು ಸಾಯುವ ಒಂದು ದಿನದ ಮೊದಲು, ಅಂದರೆ ಗುರುವಾರ, 'ಭಾನುವಾರ ಉಗುರು ಕತ್ತರಿಸುವುದು ಅಗತ್ಯವಾಗಿ ಮಾಡಲೇಬೇಕು' ಅಂತ ಹೇಳಿದ್ದರು. ಆದರೆ ಅವರ ಉಗುರುಗಳು ಕತ್ತರಿಸದೇ ಉಳಿದವು. ಅವರ ದೇಹವನ್ನು ಕೂಡಾ ವೈದ್ಯಕೀಯ ಆಸ್ಪತ್ರೆಗೆ ದಾನ ಮಾಡಿದ್ದರಿಂದ ಬಹುಶಃ ಅವರ ಕೈಯಿ, ಅದರ ದುಂಡಗಿನ ಹೆಬ್ಬೆರಳು, ಅದರ ಬೆಳೆದ ಉಗುರಿನೊಂದಿಗೆ, ಹೀಗೆ, ಒಂದು ಫಾರ್ಮಲಿನ್ ದ್ರಾವಣದ ಜಾಡಿಯಲ್ಲಿ ಸಂಸ್ಕರಿಸಿಟ್ಟಿರಬೇಕು ಅನ್ನುವ ಸಂಶಯ ನನ್ನಲ್ಲಿ ಹುಟ್ಟಿತು. 'ಫಾರ್ಮಲಿನ್‌ನಲ್ಲಿ ಅದ್ದಿಟ್ಟ ಉಗುರುಗಳು ಎಷ್ಟು ಮೆತ್ತಗಿರುತ್ತವೆ?' ಎಂದು, ನನ್ನ ತೊಳಲಾಟ ಯಾವುದನ್ನೂ ಅರಿಯದ ವಿದ್ಯಾ ಪ್ರತಾಪರನ್ನು ನಾನು ಕೇಳಿದ ಏಕೈಕ ಪ್ರಶ್ನೆ.

ಮುಗಿಸುವ ಮೊದಲು ಸಂಗ್ರಹಾಲಯದ ಕಥೆಯನ್ನು ಪೂರ್ಣಗೊಳಿಸುತ್ತೇನೆ. ಈ ಮಾನವ ಅಂಗಗಳ ಸಂಗ್ರಹಾಲಯಕ್ಕೆ ಅಂಟಿಕೊಂಡಂತೆ ರೋಗಗಳಿಗೆ ತುತ್ತಾದ ಅಂಗಗಳ ಸಂಗ್ರಹಾಲಯವಿದೆ (ಪೆಥಾಲಜಿ ಮ್ಯೂಸಿಯಮ್) ಮತ್ತು ಅಲ್ಲಿ ಇನ್ನೂ ಹೆಚ್ಚಿನ ಮಾದರಿಗಳಿವೆ, ಸುಮಾರು ೨೬೦೦ಕ್ಕೂ ಹೆಚ್ಚು. ನಾನು ಅದರೊಳಗೆ ಹೋಗಿ ಘಾಸಿಗೊಂಡ ಹೃದಯಗಳ ಸಾಲಿನಲ್ಲಿ ಮಯೋಕಾರ್ಡಿಯಲ್ ಇನ್‌ಫಾರ್ಕ್ಷನ್‌ಗೆ ತತ್ತರಿಸಿದ್ದ ಹೃದಯದ ಜಾಡಿಯ ಮುಂದೆ ನಿಂತೆ. ಅಲ್ಲಿ ಬೇರೆ ಏನೂ ನನಗೆ ಆಸಕ್ತಿಯನ್ನು ಉಂಟುಮಾಡಲಿಲ್ಲ. ಕೆಲವೊಮ್ಮೆ ವೃತ್ತಿ ನಿಮಿತ್ತ ಭೇಟಿಗಳು ವೃತ್ತಿಗತ ನೆಲೆಯಲ್ಲಷ್ಟೇ ಉಳಿಯುವುದಿಲ್ಲ.

ಸುಗತ ಶ್ರೀನಿವಾಸರಾಜು
'ದಿ ವೀಕ್' ರಾಷ್ಟ್ರೀಯ ವಾರಪತ್ರಿಕೆಯ ಸಹ ಸಂಪಾದಕರು
ಬೆಂಗಳೂರು




ಮರ ಬಳ್ಳಿ ಗಿಡ ಪೊದರು ಹುಲ್ಲು ಹೂವಿನ
ಜಾಡು;
ಕೊಂಬೆ ರೆಂಬೆಯ ಮೇಲೆ ಹಕ್ಕಿಗಳ ಗೂಡು;
ಸೀಟಿಯೂದಿದೆ ಕುಳಿತು ಕಾಜಾಣ ಜೋಡು;
ನನ್ನೂರ ತಲೆಯಲ್ಲಿ ಹೀಗುಂಟು ಕಾಡು.

ಬಣ್ಣ ಬಣ್ಣದ ಹೂವು, ಬಣ್ಣ ಬಣ್ಣದ ಹಕ್ಕಿ,
ಬಣ್ಣ ಬಣ್ಣದ ಕೀಟ, ಗಾಯನದ ನಂಟು;
ಇರುಳು ಮರಗಳ ಮೇಲೆ ಆರಿ ಮಿನುಗುವ
ಬೆಳಕು;
ಮಿಣುಕುಹುಳುಗಳ ದೀಪಮಾಲೆಯುಂಟು!

ವರ್ಷ ವರ್ಷವು ಇಲ್ಲಿ ಅಬ್ಬರದ ಗಾಳಿ ಮಳೆ;
ಕಾಡನೀರಿಗು ಇದುವೆ ಕೆಂಪುದಾರಿ.
ಕಾಡುಕುರಿ ಜಿಂಕೆಮರಿ ಕಡವೆಗಳ ಓಡಾಟ;
ಚಿರತೆ ಕಣ್ಣಲಿ ಬೆಂಕಿ; ಹಸಿದ ಮಾರಿ!

ಓಡಿ ಅಡಗುವ ಮೊಲವ ನೋಡಿ ಹಾರುವ
ಹದ್ದು;
ನಿದ್ರಿಸುವ ಹೆಬ್ಬಾವು ಬೇಟೆಗಾರ.

ಊರುಕೇರಿಯ ಕೋಳಿ ಕಾಡ
ಸೇರುವುದುಂಟು;
ಆಯಕಟ್ಟಿನೊಳುಂಟು ನರಿ, ಮಾಟಗಾರ!

ಹೆಜ್ಜೆ ಹೆಜ್ಜೆಗೆ ಇಲ್ಲಿ ಮುಳ್ಳುಗಂಟಿಗಳುಂಟು;
ಅಲೆಯುತಿವೆ ಜಿಗಣೆಗಳು ಕಾಡದಾರಿ!
ತೆರೆದ ಹಾಸುಗೆಯಂತೆ ತರಗಲೆಯ
ತಂಗುಮನೆ;
ವಿಶ್ರಾಂತಿ ಪಡೆಯುತಿವೆ ರಕ್ತಹೀರಿ.

ಉಬ್ಬುತಿದೆ ದಿನದಿನವು ಇಂಬುಳದ
ಮೈಚೀಲ;
ಪತ್ತೆಯಾಗದು ಕುಡಿದ ನೆತ್ತರಿನ ಮೂಲ!
ಇಲ್ಲೀಗ ನರಿ ತೋಳ ಕರಡಿ ಹುಲಿಗಳ ಸ್ನೇಹ;
ಹಸಿವಾದರಿದ್ದೇ ಇದೆ ಸ್ನೇಹಿತರ ಜಾಲ

ನನ್ನೂರ ತಲೆಯಲ್ಲಿ ಹೀಗುಂಟು ಕಾಡು;
ತಲೆಯೆತ್ತಿ ನೋಡುತಿದೆ ಹೆಬ್ಬಂಡೆ ಕೋಡು;
ಇದರೊಳಗೆ ಇರಬಹುದೆ ಹಗಲಿರುಳ
ಪಾಡು!

ಕುತ್ಯಾಳ ನಾಗಪ್ಪ ಗೌಡ 'ಕಿರಣ'
ಕಿರಣ ಕುಟೀರ, ಸುಳ್ಯ (ದಕ್ಷಿಣ ಕನ್ನಡ) ೫೭೪ ೨೩೯




# Quality Council of India

## Working For "The National Well Being"











QCI was set up in 1997 as an autonomous body by the Government of India jointly with the Indian industry to establish and operate the National Accreditation Structure for conformity assessment bodies. Indian industry is represented in QCI by three premier industry associations ASSOCHAM, CII and FICCI. QCI is also assigned the task of monitoring & administering the National Quality Campaign and to oversee effective function of the National Information and Enquiry Services and RTI.

Quality Council of India is facilitating different ministries/departments/regulators, both at centre as well as at state level, to make use of conformity assessment structure, where appropriate. These initiatives would enable government/regulators to deliver public services based on transparency, objectivity, competency and thereby assuring consumers of quality services. We have two major ongoing initiatives in the field of Education and Helath.









- QCI have launched two major initiatives aimed at improving quality of two of the most important services i.e. Education & Health.
- QCI has launched accreditation for quality school governance for the first time in the country. The accreditation provides framework for effective governance and delivery of holistic education program, aimed at overall development of students. We apply a universally applicable framework standard, helping schools to achieve excellence.
- QCI through National Accreditation Board for Hospitals and Healthcare Providers (NABH), instituted under it, offers accreditation for healthcare providers including hospitals, blood-banks and wellness centres. The accreditation standards have received approval from International Society for Quality in Healthcare (ISQua) for the period 2008-12. This would mean that hospitals accredited by NABH would have global/international recognition. This will provide boost to medical tourism. As of now 24 hospitals have been granted with accreditation and 99 are in different stages of evaluation. All major corporate groups including APOLLO, FORTIS, MAX, WOCKHARDT etc have decided to adopt NABH Standards.

**Institution of Engineers Building, 2nd Floor, Bahadur Shah Zafar Marg, New Delhi - 110002, India. Tel: 91-11-2337 9321, 2337 9260, 2337 0567, 2337 8057 Fax: 91-11-2337 9621.
Email: sg@qcin.org , nrbpt@qcin.org , nabcb@qcin.org , nabh@qcin.org , info@qcin.org**

# ಬದಲಿ ತಾಯಿಯೋ, ಬಾಡಿಗೆ ತಾಯಿಯೋ...!

● ಹೇಮಲತಾ ಮಹಿಷಿ

"ಸರೋಗೇಟ್" ಎಂಬ ಇಂಗ್ಲಿಷ್ ಪದಕ್ಕೆ ನಿಘಂಟಿನಲ್ಲಿ 'ಬಿಷಪ್ಪಿನ ಅಥವಾ ವನ ನ್ಯಾಯಾಧಿಕಾರಿಯ ಪ್ರತಿನಿಧಿ / ಬದಲಿ' ಎನ್ನುವ ಅರ್ಥವಿದೆ. ಆದರೆ ಪದಗಳು ಲ ಕ್ರಮೇಣ ಪಡೆದುಕೊಳ್ಳುವ ಅರ್ಥವಿಸ್ತಾರ ಯಾವತ್ತಿಗೂ ಕುತೂಹಲಕಾರಿ ಾಗಿರುತ್ತದೆ. ಈಗ ಈ ಪದವು ಹೆಚ್ಚಾಗಿ ಪ್ರಚಾರದಲ್ಲಿರುವುದು 'ಬದಲಿ ತಾಯಿ' ನ್ನುವ ಅರ್ಥದಲ್ಲಿ, ಎಂದರೆ, ಒಬ್ಬ ಮಹಿಳೆಯ ಬದಲಿಗೆ ಇನ್ನೊಬ್ಬಳು ಮಗುವನ್ನು ್ನ ಗರ್ಭದಲ್ಲಿ ಹೊತ್ತು, ನವಮಾಸದ ನಂತರ ಹೆತ್ತು, ನಂತರ ಆ ಮಗುವನ್ನು ಾದಲ ಮಹಿಳೆಗೆ ಅವಳ ಗಂಡನಿಗೆ ಒಪ್ಪಿಸುವುದು. ಕಾರಣಾಂತರಗಳಿಂದ ್ನ ಮಗುವನ್ನು ತಾನು ಗರ್ಭದಲ್ಲಿ ಹೊತ್ತು ಹೆರಲಾಗದ ಮಹಿಳೆ ಇಂದು ತನಗೆ ಗು ಬೇಕೆಂಬ ಸ್ವಾಭಾವಿಕ ಹಂಬಲವನ್ನು ಪೂರೈಸಿಕೊಳ್ಳಲು ಕಂಡುಕೊಂಡ ದಲಿ ವ್ಯವಸ್ಥೆ ಇದು. ಮಾನವ ಸಂತತಿಯ ಉಳಿವಿಗೆ, ಕುಟುಂಬದ ನಿರಂತರತೆಗೆ ಕ್ಕಳ ಅವಶ್ಯಕತೆ ಇರುವಂತೆ, ಪ್ರತಿವ್ಯಕ್ತಿಯೂ ತನ್ನ ಮರಣಾನಂತರ ತನ್ನ ೇಹದ ಭಾಗವಾದ ಪ್ರತಿನಿಧಿಯನ್ನು ಭೂಮಿಯ ಮೇಲೆ ಬಿಟ್ಟುಹೋಗಲು ಚ್ಛಿಸುತ್ತಾನೆ. ಹಾಗೆಯೇ ಪರಸ್ಪರ ಪ್ರೀತಿಸುವ ಗಂಡು-ಹೆಣ್ಣುಗಳು ಕೂಡ ತಮ್ಮ ೀತಿಯ ಸಂಕೇತವಾಗಿ ತಮ್ಮದೇ ಆದ ಮಗುವನ್ನು ಪಡೆಯಲು ಬಯಸುತ್ತಾರೆ.



ದೆಯಾಗಿ / ತಾಯಿಯಾಗಿ ಮಗುವಿನ ಲಾಲನೆ - ಪಾಲನೆ ಮಾಡಿ ಆ ಒಂದು ತೋಷದ ಅನುಭವವನ್ನು ಪಡೆಯಲು ಹಾತೊರೆಯುತ್ತಾರೆ. ಇದು ಸಹಜ. ಆ ಹಜ ಇಚ್ಛೆ ಬತ್ತಿಹೋದರೆ ಬಹುಶಃ ಅದೇ ಮಾನವ ಸಂತತಿಯ ಅಳಿವಿಗೆ ಂದಿಯಾಗುತ್ತದೆ.

ಭಾರತದ ಸಂದರ್ಭದಲ್ಲಿ, ಹಿಂದೆ ಸಹಜವಾಗಿ ತಮ್ಮದೇ ಆದ ಮಕ್ಕಳನ್ನು ಡೆಯಲಾಗದ ಪರಿಸ್ಥಿತಿಯಲ್ಲಿ ಹಿಂದೂ ಸಮಾಜ ಕಂಡುಕೊಂಡ ಉತ್ತರವೆಂದರೆ ತ್ತು ಪದ್ಧತಿ ಮತ್ತು ನಿಯೋಗ ಪದ್ಧತಿ. ಬೇರೆಯವರ ಮಕ್ಕಳನ್ನು ದತ್ತುಪಡೆದು ತಮ್ಮ ಗುವಾಗಿ ಪತಿ-ಪತ್ನಿಯರು ಸ್ವೀಕರಿಸುವುದು ಹಿಂದೂ ಕಾನೂನಿನಲ್ಲಿ ಬಹಳ ಂದಿನಿಂದ ಒಪ್ಪಿಕೊಂಡ ವಿಷಯ. ಆಸ್ತಿಹಕ್ಕು, ಪಿತೃಗಳಿಗೆ ಪಿಂಡದಾನ, ಕುಟುಂಬದ ುಂದುವರಿಕೆ ಇತ್ಯಾದಿ ಎಲ್ಲಾ ಲೌಕಿಕ, ಧಾರ್ಮಿಕ ವಿಷಯಗಳಲ್ಲಿ ಈ ದತ್ತುಮಗುವಿಗೆ ಹಜ ಮಗುವಿನ ಸ್ಥಾನಮಾನ ಇರುತ್ತದೆ. ಮೊದಲು, ಕೇವಲ ಗಂಡುಮಗುವನ್ನು ತ್ತು ಪಡೆಯಲು ಅವಕಾಶವಿದ್ದರೆ ೧೯೫೬ರ ನಂತರ ಹೆಣ್ಣುಮಗುವನ್ನೂ ದತ್ತು ಡೆಯಲು ಅವಕಾಶವಿದೆ. 'ನಿಯೋಗ ಪದ್ಧತಿ'ಯಲ್ಲಿ, ಪತ್ನಿಗೆ ತನ್ನ ಪತಿಯ ಮೂಲಕ ಗುವನ್ನು ಪಡೆಯಲು ಸಾಧ್ಯವಿಲ್ಲದಿದ್ದಲ್ಲಿ, ಪತಿಯ ಒಪ್ಪಿಗೆಯಿಂದ ಬೇರೆ ಪುರುಷನ ೂಲಕ ಮಗುವನ್ನು ಪಡೆಯಲು ಅವಕಾಶವಿತ್ತು. ಆ ಮಗು ಮುಂದೆ ಆ ತಿ-ಪತ್ನಿಯರ ಮಗುವಾಗಿಯೇ ಗುರುತಿಸಲ್ಪಡುತ್ತಿತ್ತು. ಆದರೆ, ಅದನ್ನು ುಮಾಡಿಕೊಡಲು ಕಾರಣನಾದ ಪುರುಷನಿಗೆ ಆ ಮಗುವಿನ ಮೇಲೆ ಯಾವುದೇ ಅಧಿಕಾರವಿರುತ್ತಿರಲಿಲ್ಲ. ತನ್ನ ವೀರ್ಯಾಣುವಿನಿಂದ ಆ ಮಹಿಳೆ ಗರ್ಭ ಧರಿಸಿದ ನಂತರ ಆ ಪುರುಷನಿಗೆ ಆ ಮಹಿಳೆಯೊಂದಿಗಾಗಲಿ, ಮಗುವಿನೊಂದಿಗೆ ಆಗಲಿ ಏನೂ ಸಂಬಂಧವಿರುತ್ತಿರಲಿಲ್ಲ. ಇದು ನಮ್ಮ ಅಂದಿನ ಸಮಾಜ ಒಪ್ಪಿಕೊಂಡಿದ್ದ 'ಬದಲಿ ತಂದೆ' ಪದ್ಧತಿ. 'ಬದಲಿ ತಾಯಿ'ಯ ಉದಾಹರಣೆ ಯಾವುದೂ ಇದ್ದಂತಿಲ್ಲ. ಆದರೆ, ತಮ್ಮದೇ ಆದ ಮಗುವೊಂದು ಬೇಕೆಂಬ ಹಂಬಲ ಇಂದಿನ 'ಬದಲಿ ತಾಯಿ' ವ್ಯವಸ್ಥೆಯನ್ನು ಹುಟ್ಟುಹಾಕಿದೆ.

'ಬದಲಿ ತಾಯಿ' ವ್ಯವಸ್ಥೆಯಲ್ಲಿ ಅನೇಕ ರೀತಿಗಳಿವೆ. ಆರಂಭದಲ್ಲಿ, ಪತ್ನಿಯಲ್ಲಿ ಏನೂ ದೋಷವಿಲ್ಲದೇ ಪತಿಯಲ್ಲಿರುವ ದೋಷದಿಂದಾಗಿ ಅವರಿಬ್ಬರ ನಡುವಿನ ಸಹಜ ಲೈಂಗಿಕ ಕ್ರಿಯೆಯಿಂದ ಪತ್ನಿ ಗರ್ಭ ಧರಿಸಲು ಸಾಧ್ಯವಾಗದ ಪರಿಸ್ಥಿತಿಯಲ್ಲಿ ಪತಿಯ ಅಥವಾ ಬೇರೊಬ್ಬ ಪುರುಷನ ವೀರ್ಯಾಣುವನ್ನು ಶೇಖರಿಸಿ ಆ ಮೂಲಕ ಪತ್ನಿ ಗರ್ಭ ಧರಿಸಲು ಅವಕಾಶ ಮಾಡಲಾಯಿತು. ನಂತರದ ಬೆಳವಣಿಗೆಯಲ್ಲಿ ಪತಿ-ಪತ್ನಿಯರ ಅಥವಾ ಬೇರೊಬ್ಬರ ಅಂಡಾಣು/ವೀರ್ಯಾಣುವನ್ನು ದೇಹದ ಹೊರಗೆ ಸಂಪರ್ಕಿಸಿ ರೂಪುಗೊಂಡ ಭ್ರೂಣವನ್ನು ಪತ್ನಿಯ ಗರ್ಭದಲ್ಲಿಟ್ಟು ಬೆಳೆಸುವ ತಾಂತ್ರಿಕತೆಯ (ಪ್ರಣಾಳಶಿಶು) ಬೆಳವಣಿಗೆಯಾಯಿತು. ಆದರೆ, ಈ ಎರಡೂ ರೀತಿಯಲ್ಲಿ ಆ ಭ್ರೂಣ ಸಹಜ ತಾಯಿಯ ದೇಹದ ಭಾಗವಾಗಿ ಬೆಳೆಯುತ್ತಿತ್ತು ಮತ್ತು ಜನಿಸುತ್ತಿತ್ತು. ಆದರೆ, ಇಂದಿನ 'ಬದಲಿ ತಾಯಿ' ವ್ಯವಸ್ಥೆಯಲ್ಲಿ ತಾಯಿಯೇ ಬದಲಾಗಿರುತ್ತಾಳೆ. ತನ್ನ ಗರ್ಭದಲ್ಲಿ ಹೊತ್ತು ಒಂದು ಮಗುವಿಗೆ ಜನ್ಮ ಕೊಡುವ ತಾಯಿ ಆ ಮಗುವಿನ ತಾಯಿಯಾಗಿರುವುದಿಲ್ಲ, ಅವಳ ನಿಜ ತಾಯಿಯ ಪ್ರತಿನಿಧಿಯಾಗಿ ಅವಳಿಗೆ ಬದಲಿಯಾಗಿ ಮಗುವಿಗೆ ಜನ್ಮ ಕೊಟ್ಟಿರುತ್ತಾಳೆ. ನಂತರ ಮಗುವಿಗೂ ಅವಳಿಗೂ ಸಂಬಂಧವಿರುವುದಿಲ್ಲ. ಯಾರ ಪರವಾಗಿ ಮಗುವಿನ ತಾಯಿಯಾಗಲು ಒಪ್ಪಿರುತ್ತಾಳೊ ಆ ದಂಪತಿಗಳಿಗೆ ಅವಳು ಆ ಮಗುವನ್ನು ಒಪ್ಪಿಸಬೇಕಾಗುತ್ತದೆ. ಇದರಲ್ಲಿ ಅವಳು ತನ್ನ ಅಂಡಾಣುವನ್ನು ಕೊಟ್ಟು ಹೊರಗಿನಿಂದ ವೀರ್ಯಾಣುವನ್ನು ಪಡೆದು ಗರ್ಭ ಧರಿಸಬಹುದು, ಇಲ್ಲವೇ ಎರಡನ್ನೂ ಹೊರಗಿನಿಂದ ಪಡೆದ ಭ್ರೂಣವನ್ನು ಪಡೆದು ಗರ್ಭ ಧರಿಸಬಹುದು. ಮೊದಲನೆಯ ಸ್ಥಿತಿಯಲ್ಲಿ ಕನಿಷ್ಠ ತಂದೆಯ ದೇಹದ ಒಂದು ಭಾಗ ಮಗುವಿನಲ್ಲಿರುತ್ತದೆ. ಎರಡನೆಯ ಸ್ಥಿತಿಯಲ್ಲಿ ನಿಜ ತಂದೆ-ತಾಯಿಯರ ಇಬ್ಬರ ದೇಹದ ಭಾಗವೂ ಇರಬಹುದು, ಇಲ್ಲವೇ ಒಬ್ಬರದೇ ಕಾಣಿಕೆ ಇರಬಹುದು.

ಯಾವುದೇ ರೀತಿಯಲ್ಲಿದ್ದರೂ 'ಬದಲಿ ತಾಯಿ' ಮಗುವಿನ ತಂದೆ-ತಾಯಿಯಾಗ ಬೇಕೆಂದು ಬಯಸುವವರೊಂದಿಗೆ, ತಾನು ಗರ್ಭಧರಿಸಿ, ಮಗುವನ್ನು ಹೆತ್ತು, ಆ ನಂತರ ಮಗುವನ್ನು ಅವರಿಗೆ ಒಪ್ಪಿಸುವುದಾಗಿ ಒಪ್ಪಂದ/ಕರಾರು ಮಾಡಿಕೊಂಡಿರುತ್ತಾಳೆ. ಇಲ್ಲಿ ಎರಡು ವಿಧಗಳ ಒಪ್ಪಂದವಿರುತ್ತದೆ. ಮೊದಲನೆಯ

ವಿಧದಲ್ಲಿ 'ಬದಲಿ ತಾಯಿ' ಯಾವುದೇ ಹಣದ ಪ್ರತಿಫಲವಿಲ್ಲದೇ ಮಗುವನ್ನು ಹಡೆದುಕೊಡಲು ಒಪ್ಪಿರುತ್ತಾಳೆ. ಕೇವಲ ಖರ್ಚಿನ ಹಣವನ್ನಷ್ಟೇ ಪಡೆದಿರುತ್ತಾಳೆ. ಎರಡನೆಯ ವಿಧದಲ್ಲಿ ಇಡೀ ಒಪ್ಪಂದವು ವ್ಯವಹಾರದ ರೂಪದಲ್ಲಿರುತ್ತದೆ. ಎಂದರೆ, ಖರ್ಚಿನ ಹಣವನ್ನಲ್ಲದೇ ತನ್ನ ಈ ಶ್ರಮಕ್ಕೆ ಅವಳು ಬಾಡಿಗೆ ಹಣವನ್ನೂ ಪಡೆಯುತ್ತಾಳೆ, ಹಾಗಾಗಿ 'ಬದಲಿ ತಾಯಿ'ಯನ್ನು 'ಬಾಡಿಗೆ ತಾಯಿ' ಎಂದು ತಿರಸ್ಕಾರದಿಂದ ಕರೆಯುವುದುಂಟು. ಶ್ರೀಮಂತರಿಗೇ ಇದು ಸಾಧ್ಯ. ಇಲ್ಲವಾದರೆ, ತಮ್ಮದೇ ಆದ, ಕನಿಷ್ಠ ತಮ್ಮಲ್ಲಿ ಒಬ್ಬರ ದೇಹದ ಭಾಗವನ್ನು ಹೊಂದಿದ ಮಗುವನ್ನು ಪಡೆಯಬೇಕೆಂದು ಹಂಬಲಿಸುವ ಪತಿ-ಪತ್ನಿಯರು ಕಷ್ಟಪಟ್ಟು ಹಣವನ್ನು ಉಳಿಸಿ, ಸಾಲ-ಸೋಲ ಮಾಡಿ ಈ ರೀತಿ ಮಗುವನ್ನು ಪಡೆಯಲು ಸಾಧ್ಯವಿದೆ.

ಈ ರೀತಿಯ ಬದಲಿತಾಯಿಯ ವ್ಯವಸ್ಥೆ ಈಗಿರುವ ಕೌಟುಂಬಿಕ ವ್ಯವಸ್ಥೆ, ಸಂಬಂಧಗಳು, ನೈತಿಕ-ಸಾಮಾಜಿಕ ಮೌಲ್ಯಗಳು ಎಲ್ಲವನ್ನೂ ಬುಡಮೇಲು ಮಾಡಿವೆ, ಅಲ್ಲೋಲ ಕಲ್ಲೋಲಗೊಳಿಸಿವೆ; ಅನೇಕ ನೈತಿಕ, ಸಾಮಾಜಿಕ, ಧಾರ್ಮಿಕ, ಕಾನೂನಾತ್ಮಕ ಪ್ರಶ್ನೆಗಳಿಗೆ ಎಡೆಮಾಡಿಕೊಟ್ಟಿವೆ. ಇತರರ ವೀರ್ಯಾಣುವನ್ನು/ ಭ್ರೂಣವನ್ನು ತನ್ನ ದೇಹದಲ್ಲಿ ಧರಿಸಿ ಮಗುವಿನ ಜನನಕ್ಕೆ ಕಾರಣವಾಗುವುದು ಸರಿಯೆ? ತನಗೆ ಜನಿಸಿದ ಮಗುವನ್ನು ಬೇರೆಯವರಿಗೆ ಹಣಕ್ಕಾಗಿ ಒಪ್ಪಿಸುವುದು ತರವೇ? ಆ ಮಗುವಿಗೆ ನಿಜವಾದ ತಾಯಿ ಯಾರು, ತಂದೆ ಯಾರು? ಕುಟುಂಬದ ವ್ಯಾಖ್ಯಾನ ಏನು? ಕೆಲವೊಮ್ಮೆ ತಾಯಿಯೇ ತನ್ನ ಮಗಳಿಗೆ ಈ ರೀತಿ ಮಗುವನ್ನು ಹೆತ್ತುಕೊಟ್ಟಾಗ ಸಂಬಂಧಗಳು ಯಾವ ರೀತಿ ಇರುತ್ತವೆ? ಪ್ರಕೃತಿಯ ಸೃಷ್ಟಿ ವಿಧಾನದಲ್ಲಿ ಮಾನವ ಈ ರೀತಿ ಕೈಹಾಕುವುದು ಸರಿಯೆ? ಒಂದು ಅನಾಥ ಮಗುವನ್ನು ತನ್ನ ಮಗುವಾಗಿ ಬೆಳೆಸಿದಾಗಲೂ ಆನಂದ-ಸಂತೋಷ ಸಿಗಬಹುದಲ್ಲವೇ, ಇಷ್ಟು ದಿನ ಸಿಗುತ್ತಿರ ಲಿಲ್ಲವೇ, ಈಗ ತನ್ನದೇ ಆದ ಮಗು ಬೇಕೆಂದು ಬಾಡಿಗೆ ತಾಯಿಯ ಮೂಲಕ ಮಗು ಪಡೆದರೆ, ಈವರೆಗೆ ಅನಾಥ ಮಕ್ಕಳಿಗೆ ಸಿಗುತ್ತಿದ್ದ ಆಶ್ರಯ-ಪ್ರೀತಿ ತಪ್ಪುವುದಿಲ್ಲವೇ ಎಂಬಂತಹ ಹಲವಾರು ಸಂದೇಹಗಳು ತಲೆ ಎತ್ತುತ್ತವೆ.

ಮುಖ್ಯವಾಗಿ, ಎಲ್ಲವೂ ಸುಸೂತ್ರವಾಗಿ ನಡೆದಾಗ ಯಾವುದೇ ಸಮಸ್ಯೆ ತಲೆದೋರದೇ ಇರಬಹುದು. ಆದರೆ, ಯಾವುದಾದರೊಂದು ಪ್ರಕರಣದಲ್ಲಿ ಏರು-ಪೇರಾದರೆ ಆಗ ಅದು ಕಾನೂನಿನ ಸಮಸ್ಯೆಯಾಗುತ್ತದೆ. ಈಗಾಗಲೇ ಅಂತಹ ಹಲವಾರು ಪ್ರಕರಣಗಳು ನ್ಯಾಯಾಲಯದ ಮೆಟ್ಟಲೇರಿವೆ. ತನ್ನ ಅಂಡಾಣುವನ್ನು ಕೊಟ್ಟು, ಮಗುವಿನ ತಂದೆಯಾಗಬಯಸುತ್ತಿದ್ದ ಪುರುಷನ ವೀರ್ಯಾಣುವಿನಿಂದ ಗರ್ಭ ಧರಿಸಿದ ಅಮೆರಿಕಾದ ಮಹಿಳೆಯೊಬ್ಬಳು ಗರ್ಭ ಧರಿಸುವ ಮೊದಲು ಹಾಗೂ ಜನನದ ನಂತರ ಮಗುವನ್ನು ಆ ಪುರುಷ ಮತ್ತು ಆತನ ಪತ್ನಿಗೆ ಒಪ್ಪಿಸುವುದಾಗಿ ಕರಾರು ಮಾಡಿಕೊಂಡಿದ್ದರೂ, ಮಗು ಜನಿಸುವ ವೇಳೆಗೆ ತನ್ನ ಗರ್ಭದಲ್ಲಿದ್ದ ಮಗುವಿನ ಬಗ್ಗೆ ಸ್ವಾಭಾವಿಕವಾಗಿ ಮಮತೆ ಬೆಳೆದು, ಜನಿಸಿದ ಮಗುವನ್ನು ಕರಾರಿನಂತೆ ಒಪ್ಪಿಸಲು ನಿರಾಕರಿಸುತ್ತಾಳೆ. ಇಲ್ಲಿ ಅವಳು ಹಣ ಪಡೆದಿರುವುದಿಲ್ಲ, ಆಗ ಅಮೆರಿಕಾದ ನ್ಯಾಯಾಲಯ ಮಗುವನ್ನು ಹೆತ್ತ ತಾಯಿಯೇ ಅದನ್ನು ತನ್ನ ಬಳಿ ಉಳಿಸಿಕೊಳ್ಳಲು ತೀರ್ಪು ನೀಡಿದೆ. ಅದೇ ರೀತಿ, ಇನ್ನೊಂದು ಪ್ರಕರಣದಲ್ಲಿ ಒಂದು ಮಗುವಿಗೆ ಕರಾರು ಮಾಡಿಕೊಂಡಿದ್ದು, ಗರ್ಭದಲ್ಲಿ ಎರಡು, ಮೂರು ಭ್ರೂಣಗಳು ಬೆಳೆಯುತ್ತಿವೆ ಎಂದು ಗೊತ್ತಾದಾಗ ಏನಾಗಬಹುದು? ಹಣ ಕೊಟ್ಟ ತಂದೆ-ತಾಯಿಯರು ತಮಗೆ ಒಂದೇ ಮಗು ಸಾಕೆಂದರೆ ಗರ್ಭಿಣಿ ಮಹಿಳೆ ಒಂದು ಮಗುವನ್ನು ಮಾತ್ರ ಉಳಿಸಿಕೊಳ್ಳಲು ಗರ್ಭಪಾತ ಮಾಡಿಸಿಕೊಳ್ಳಬೇಕೆ? ಗರ್ಭಪಾತದಿಂದ ಅವಳ ಆರೋಗ್ಯಕ್ಕೆ ಹಾನಿಯಾಗುವುದಾದರೆ ಏನು ಮಾಡಬೇಕು? ಗರ್ಭಿಣಿಯಾದ ಸಂದರ್ಭದಲ್ಲಿ ಅನೇಕ ವೈದ್ಯಕೀಯ ಸಮಸ್ಯೆಗಳು, ಖರ್ಚಿನ ಪ್ರಶ್ನೆಗಳು ತಲೆದೋರಬಹುದು. ಅದೆಲ್ಲದರ ಖರ್ಚು ಯಾರು ಕೊಡಬೇಕು? ಎಲ್ಲ ಬಗೆಯ ಎಚ್ಚರಿಕೆ ಕ್ರಮ ತೆಗೆದುಕೊಂಡಾಗಲೂ ಮಗು ಗರ್ಭದಲ್ಲಿ ಹುಟ್ಟಿದ ಮೇಲೆ ಸತ್ತುಹೋದರೆ ಏನಾಗುತ್ತದೆ? ಖರ್ಚಿನ - ಹಣದ ವ್ಯವಸ್ಥೆ ಯಾವ ರೀತಿ ಮಾಡಬೇಕು? ಮೊದಲೇ ಹಣ ತೆಗೆದುಕೊಂಡು ಖರ್ಚುಮಾಡಿ, ಮಗು ಹುಟ್ಟಿದ ನಂತರ ಬಿಟ್ಟುಕೊಡಲು ಬಾಡಿಗೆ ತಾಯಿ ನಿರಾಕರಿಸಬಹುದು ಅಥವಾ ಹುಟ್ಟಿದ ಮೇಲೆ ಆ ಮಗುವನ್ನು ತೆಗೆದುಕೊಂಡು ಹೋಗಲು ಕರಾರು ಮಾಡಿಕೊಂಡ ತಂದೆ-ತಾಯಿ


**ಮನೋಹರ ಗ್ರಂಥ ಮಾಲಾ**

ಲಕ್ಷ್ಮೀಭವನ, ಸುಭಾಸ ರಸ್ತೆ, ಧಾರವಾಡ - ೫೮೦ ೦೦೧
ಫೋನ್ : ೦೮೩೬-೨೪೪೧೮೨೨, ೨೪೪೧೮೨೩




**MANOHARA GRANTHA MALA**

Laxmi Bhavan, Subhas Road, Dharwad-580001
Ph : 0836-2441822, 2441823

**ಹೊಸ ಪ್ರಕಟಣೆಗಳು**



ಸಮಗ್ರ ನಾಟಕ
ಗಿರೀಶ ಕಾರ್ನಾಡ
ಆಕಾರ : 1/8 ಡೆಮಿ
ಪುಟಗಳು : x + 858
ವರ್ಷ : 2007
ಬೆಲೆ : ರೂ.500/-



ಗಿರೀಶ ಕಾರ್ನಾಡ ಹಾಗೂ ಭಾರತೀಯ ರಂಗಭೂಮಿ
ಜಿ. ಎಸ್. ಆಮೂರ
ಆಕಾರ : 1/8 ಡೆಮಿ
ಪುಟಗಳು : x + 182
ವರ್ಷ : 2008
ಬೆಲೆ : ರೂ.120/-



ಆಗೊಮ್ಮೆ ಈಗೊಮ್ಮೆ
(ಗದ್ಯ ಲೇಖನಗಳು)
ಗಿರೀಶ ಕಾರ್ನಾಡ
ಆಕಾರ : 1/8 ಡೆಮಿ
ಪುಟಗಳು : x + 216
ವರ್ಷ : 2008
ಬೆಲೆ : ರೂ.150/-



ಶೂರ್ಪಾಲಿಯ ಆಚಾರ್ಯರು
(ಕಾದಂಬರಿ)
ಕಟ್ಟಿ ಶೇಷಾಚಾರ್ಯರು
ಆಕಾರ : 1/8 ಡೆಮಿ
ಪುಟಗಳು : x + 96
ವರ್ಷ : 2008
ಬೆಲೆ : ರೂ.60/-




ಗಡಿ ದಾಟಿದವರು
(ಕಾದಂಬರಿ)
ಶ್ರೀ. ಜಿ. ಸರದೇಶಪಾಂಡೆ
ಆಕಾರ : 1/8 ಡೆಮಿ
ಪುಟಗಳು : viii + 198
ವರ್ಷ : 2008
ಬೆಲೆ : ರೂ.130/-




ಕೃಷ್ಣವೇಣಿ
(ಕಾದಂಬರಿ)
ವೆಂಕಟಗಿರಿ ಕಡೇಕಾರ್
ಆಕಾರ : 1/8 ಡೆಮಿ
ಪುಟಗಳು : xvi + 170
ವರ್ಷ : 2008
ಬೆಲೆ : ರೂ.100/-

Visit us at www.granthmala.com

ಾಕರಿಸಬಹುದು. ಕರಾರಿನ ಎರಡೂ ಪಕ್ಷದವರು ಒಂದೇ ದೇಶದವರಾದರೆ ಲ್ಲಿನ ಸ್ಥಳೀಯ ನ್ಯಾಯಾಲಯಕ್ಕೆ ಆ ಕುರಿತು ತೀರ್ಪು ನೀಡಲು ಅಧಿಕಾರವಿರುತ್ತದೆ. ವರೆ, ಅವರು ಬೇರೆ ಬೇರೆ ದೇಶದವರಾದರೆ ಸ್ಥಳೀಯ ನ್ಯಾಯಾಲಯಕ್ಕೆ ದೇಶೀಯರ ಮೇಲೆ ಅಧಿಕಾರ ವ್ಯಾಪ್ತಿ ಇರುವುದಿಲ್ಲ. ಇದಕ್ಕಾಗಿ ಅಂತರರಾಷ್ಟ್ರೀಯ ನೂನಿನ ಅಗತ್ಯವಿದೆ. ಆದ್ದರಿಂದ ಆ ದೇಶದೊಂದಿಗೆ ವಿಶೇಷ ಒಪ್ಪಂದವಿರ ೇಕಾಗುತ್ತದೆ. ಈಗ ಸದ್ಯದ ಪರಿಸ್ಥಿತಿಯಲ್ಲಿ ಅನೇಕ ದೇಶಗಳಲ್ಲಿ ಈ ಬಗ್ಗೆ ನೂನುಗಳಿಲ್ಲ. ಇನ್ನು ಅಂತರರಾಷ್ಟ್ರೀಯ ಕಾನೂನು ಹೇಗೆ ತಾನೆ ಇರಲು ಸಾಧ್ಯ ?

ಭಾರತದಲ್ಲಿ, ಇತ್ತೀಚೆಗೆ ನಮ್ಮ ಸರ್ವೋಚ್ಚ ನ್ಯಾಯಾಲಯದ ಮುಂದೆ ಬಂದಿದ್ದ ಗು ಮಂಜಿ ಪ್ರಕರಣ ಕಾನೂನಿನ ಈ ತೊಡಕನ್ನು ಎತ್ತಿ ತೋರಿಸಿದೆ. ಜಪಾನಿ ಂಪತಿಗಳಿಬ್ಬರಿಗೆ ಪತ್ನಿಯ ದೈಹಿಕ ಸಮಸ್ಯೆಯಿಂದಾಗಿ ಮಗುವಾಗುವ ಸಾಧ್ಯತೆ ರಲಿಲ್ಲ. ಆಗ ಜಪಾನ್ ಮೂಲದ ಪತಿಯ ವೀರ್ಯಾಣು ಹಾಗೂ ಮತ್ತೊಬ್ಬ ಹಿಳೆಯ ಅಂಡಾಣುವಿನಿಂದ ಲಿತಗೊಳಿಸಿದ ಭ್ರೂಣವನ್ನು ನಮ್ಮ ೇಶದ ಗುಜರಾತಿನ ಆನಂದ್ ಲ್ಲಿದ್ದ ಭಾರತೀಯ ಮಹಿಳೆಯೊಬ್ಬಳ ಬದಲಿ ತಾಯಿ) ಗರ್ಭದಲ್ಲಿ ಬೆಳೆ ುವಂತೆ ಮಾಡಿ, ೨೦೦೮ ಜುಲೈ ೇರಂದು ಮಗುವಿನ ಜನನ ಯಿತು. ಆದರೆ, ಆ ವೇಳೆಗೆ ಆ ಪಾನಿ ಪತಿ-ಪತ್ನಿಯರು ಕೌಟುಂಬಿಕ ಲಹದಿಂದಾಗಿ ಬೇರೆ ಬೇರೆಯಾಗಿ ಿಂದ ಆ ಮಗು ಅವರಿಗೆ ಬೇಕಾಗ ಲ್ಲ. ಅದಕ್ಕೆ ಜನನ ಕೊಟ್ಟ ತಾಯಿಗೂ ಮಗುವನ್ನು ಇಟ್ಟುಕೊಳ್ಳುವುದು ೇಕಾಗಿರಲಿಲ್ಲ. ಆಗ, ಸಂಸ್ಥೆಯೊಂದು ರ್ವಜನಿಕ ಹಿತಾಸಕ್ತಿಯ ಮೊಕದ್ದಮೆ ಲ್ಲಿ ಈ ಬದಲಿತಾಯಿಯ ವಸ್ಥೆಯ ಕಾನೂನಾತ್ಮಕತೆಯನ್ನು ಜರಾತ್ ಉಚ್ಚ ನ್ಯಾಯಾಲಯದಲ್ಲಿ ಶ್ನಿಸಿತು. ನಂತರ ಪ್ರಕರಣ ಸರ್ವೋಚ್ಚ ್ಯಾಯಾಲಯದ ಮುಂದೆ ಬಂದಿತು.

ವೇಳೆಗೆ ಮಗುವಿನ ಅದೃಷ್ಟ ಂದಾಗಿ ಆ ಮಗುವಿನ ಅಜ್ಜಿ ಜಪಾನಿ ತಂದೆಯ ತಾಯಿ) ಮಗುವನ್ನು ಪಡೆಯಲು ಆಸಕ್ತಿ ತೋರಿಸಿ, ಭಾರತಕ್ಕೆ ಂದಳು. ನಮ್ಮಲ್ಲಿ ಈ ಬದಲಿ ತಾಯಿ ವ್ಯವಸ್ಥೆಯ ಬಗ್ಗೆ ಯಾವುದೇ ಕಾನೂನು ಲ್ಲದಿರುವುದರಿಂದ ಅದು ಕಾನೂನುಬಾಹಿರ ಎಂದು ಸಂಸ್ಥೆ ವಾದಿಸಿತು. ಆದರೆ, ದನ್ನು ಕಾನೂನಿಗೆ ವಿರುದ್ಧ ಎಸಗಿದ ಅಪರಾಧ ಎಂದು ಹೇಳುವ ಯಾವ ಕಾನೂನು ಲ್ಲದಿರುವುದರಿಂದ ಅದು ಕಾನೂನಿಗೆ ವಿರುದ್ಧವಲ್ಲ, ಅಪರಾಧವಲ್ಲ ಎಂದು ರ್ವೋಚ್ಚ ನ್ಯಾಯಾಲಯ ತೀರ್ಪು ನೀಡಿತು. ಜೊತೆಗೆ ಮಗುವಿನ ಅಜ್ಜಿ ಮಗುವನ್ನು ಪಾನಿಗೆ ಕೊಂಡೊಯ್ಯಲು ವೀಸಾ ಇತ್ಯಾದಿಗಳನ್ನು ಪಡೆಯಲು ಅವಕಾಶ ಾಡಿಕೊಟ್ಟಿತು. ಹಾಗಾಗಿ ಯಾವುದೇ ತೊಡಕಿಲ್ಲದೆ ಈ ಪ್ರಕರಣ ಕೊನೆಗೊಂಡಿತು. ದರೆ, ಬದಲಿ ತಾಯಿಗಾಗಲೀ, ಜಪಾನಿ ತಂದೆ-ತಾಯಿಯರಿಗಾಗಲೀ ಆ ಗು ಬೇಡದಿದ್ದರೆ, ಆಗ ಆ ಮಗುವಿನ ಹಕ್ಕಿನ ಪ್ರಶ್ನೆ ಹೇಗೆ ಬಗೆಹರಿಯುತ್ತಿತ್ತು, ಆ ಗುವಿನ ಗತಿ ಏನಾಗುತ್ತಿತ್ತು ಅಥವಾ ಬದಲಿ ತಾಯಿ ಮಗುವನ್ನು ಜಪಾನಿ ಂಪತಿಗಳಿಗೆ ಕೊಡಲು ಒಪ್ಪದಿದ್ದರೆ ಆಗ ನಮ್ಮ ನ್ಯಾಯಾಲಯ ಏನು ಹೇಳುತ್ತಿತ್ತು ನ್ನುವುದು ಕುತೂಹಲಕರವಾದ ಅಂಶ. ಏಕೆಂದರೆ ಇಲ್ಲಿ ಬದಲಿ ತಾಯಿ ಹಾಗೂ ಪಾನಿ ತಾಯಿ-ತಂದೆಯರ ನಡುವಿನ ಪ್ರಶ್ನೆಯಾಗಿ ನ್ಯಾಯಾಲಯದ ಮುಂದೆ ಈ ಕರಣ ಬಂದಿರಲಿಲ್ಲ. ಮೂರನೆಯ ಸಂಸ್ಥೆಯೊಂದು ಇದು ಕಾನೂನು-ನೈತಿಕತೆಗೆ ರುದ್ಧ ಎಂದು ಪ್ರಶ್ನಿಸಿತ್ತು. ಆದರೆ, ಒಪ್ಪಂದದ ಉಲ್ಲಂಘನೆಯಾಗಿ, ಒಪ್ಪಂದದ ರಿಯನ್ನು ಇಬ್ಬರಲ್ಲಿ ಯಾರಾದರೊಬ್ಬರು ನ್ಯಾಯಾಲಯದ ಮೂಲಕ ಮಾಡಲು ಬಯಸಿದ್ದರೆ, ಆಗ ಬೇರೊಂದು ರೀತಿಯಲ್ಲಿ ನ್ಯಾಯಾಲಯ ಅದನ್ನು ಉತ್ತರಿಸ ಬೇಕಾಗುತ್ತಿತ್ತು. ಏಕೆಂದರೆ, ಕಾನೂನು ಇಂತಹ ಒಪ್ಪಂದಕ್ಕೆ ಮಾನ್ಯತೆ ಕೊಡದಿದ್ದರೆ, ಅದನ್ನು ನ್ಯಾಯಾಲಯದ ಮೂಲಕ ಜಾರಿಗೊಳಿಸುವುದು ಸಾಧ್ಯವಿಲ್ಲ. ಈ 'ಬದಲಿ ತಾಯಿ ವ್ಯವಸ್ಥೆ' ಕಾನೂನಿಗೆ ವಿರುದ್ಧವಲ್ಲ; ಆದ್ದರಿಂದ ಕಾನೂನುಬಾಹಿರವಲ್ಲ, ಅಪರಾಧವಲ್ಲ ಎಂದು ಹೇಳುವುದು, ನೀವು-ನೀವು ಮಾಡಿಕೊಂಡ ಖಾಸಗಿ ಒಪ್ಪಂದದಲ್ಲಿ ನಾವು ತಲೆಹಾಕುವುದಿಲ್ಲ ಎಂದು ನ್ಯಾಯಾಲಯ ಹೇಳುವುದು ಬೇರೆ, ಅದನ್ನು ಜಾರಿಗೊಳಿಸಲು ನ್ಯಾಯಾಂಗ ತನ್ನ ಅಧಿಕಾರ ಚಲಾಯಿಸುವುದು ಬೇರೆ. ಹಾಗಾಗಿ ಮಂಜಿಯ ಪ್ರಕರಣ ಈ ಕುರಿತು ನಮ್ಮ ದೇಶದಲ್ಲಿ ಕಾನೂನು ಮಾಡುವ ಅವಶ್ಯಕತೆ ಇದೆಯೇ ಎಂಬ ಅಂಶದತ್ತ ಎಲ್ಲರ ಗಮನವನ್ನು ಸೆಳೆದಿದೆ. ಕಾನೂನು ಮಾಡಲು ಇಂತಹ ಒಂದೆರಡು ಪ್ರಕರಣಗಳಿದ್ದರೆ ಸಾಲದು. ನಮ್ಮ ದೇಶದಲ್ಲಿ ಇಂತಹ ಬದಲಿ ತಾಯಂದಿರ ಪ್ರಕರಣಗಳು ಹೆಚ್ಚಿವೆಯೇ ಎಂಬುದರ ಬಗ್ಗೆ ಮಾಹಿತಿ ಇಲ್ಲ. ಈ ಬಗ್ಗೆ ಸರಿಯಾದ ಮಾಹಿತಿ ಸಂಗ್ರಹಣೆ ಆಗಬೇಕಾದ ಅಗತ್ಯವಿದೆ. ಅಮೆರಿಕಾ, ಇಂಗ್ಲೆಂಡ್, ಆಸ್ಟ್ರೇಲಿಯಾ ಮುಂತಾದ ಶ್ರೀಮಂತ ರಾಷ್ಟ್ರಗಳಲ್ಲಿ ಬಾಡಿಗೆ ತಾಯಿಯಿಂದ ಮಗು ಪಡೆಯಲು ೫೫,೦೦೦-೬೫,೦೦೦ ಡಾಲರ್‌ಗಳಷ್ಟು ಹಣ ಖರ್ಚು ಮಾಡಬೇಕಾಗುತ್ತದೆ. ನಮ್ಮ ದೇಶದಲ್ಲಿ ಇದರ ಅರ್ಧದಷ್ಟು ಹಣಕ್ಕೆ ಈ ಕೆಲಸ ಸಾಧ್ಯ. ಇದಕ್ಕೆ ಮುಖ್ಯ ಕಾರಣ ಬಡತನ. ಅದರೊಂದಿಗೆ ವೈದ್ಯಕೀಯ ಸೌಲಭ್ಯಗಳೂ ಇಲ್ಲಿ ಚೆನ್ನಾಗಿರುವುದರಿಂದ ಬದಲಿ ತಾಯಂದಿರು ಇಲ್ಲಿ ಸಾಕಷ್ಟು ಜನರಿದ್ದಾರೆ ಎಂಬ ಅಂದಾಜಿದೆ. ಆದರೆ, ತೆರೆಮರೆಯಲ್ಲೇನೋ ಈ ಕೆಲಸ ನಡೆಯುತ್ತಿದೆ. ಎಲ್ಲಾ ಸಮಾಜಗಳೂ ಮಾನವೀಯ ನೆಲೆಯಲ್ಲಿ, ಮಕ್ಕಳಿಲ್ಲದ ದಂಪತಿಗಳ ಬಗ್ಗೆ ಅನುಕಂಪ ಹೊಂದಿ ಮಾಡುವ ಈ ಕೆಲಸಕ್ಕೆ ಬೆಂಬಲ ಸೂಚಿಸಬಹುದಾದರೂ, ಹಣಕ್ಕಾಗಿ, ಒಂದು ವಾಣಿಜ್ಯೋದ್ಯಮವಾಗಿ ಮಾಡುವುದನ್ನು ತಿರಸ್ಕಾರದಿಂದ ನೋಡುತ್ತವೆ. ಅಲ್ಲದೇ, ಇದರಲ್ಲಿ ಬಡ ಮಹಿಳೆಯನ್ನು ಹಣಕ್ಕಾಗಿ ಶೋಷಿಸಬಹುದಾದ, ದುರುಪಯೋಗಪಡಿಸಿಕೊಳ್ಳಬಹುದಾದ ಸಾಧ್ಯತೆಯೂ ಇರುತ್ತದೆ. ಹಣಕ್ಕಾಗಿ ತನ್ನ ಹೆಂಡತಿಯನ್ನೇ ವೇಶ್ಯಾವೃತ್ತಿಗೆ ತಳ್ಳುವ ಗಂಡನಿರುವ ಬಡದೇಶದಲ್ಲಿ, ಇಂತಹ ಬಾಡಿಗೆ ತಾಯಿಗೆ ಹಣ ಸಿಗುವ ಸಾಧ್ಯತೆ ಮತ್ತಷ್ಟು ಬಡಮಹಿಳೆಯರನ್ನು ಶೋಷಣೆಗೀಡುಮಾಡುತ್ತದೆ. ಅವಳಿಗೆ ಇಷ್ಟವಿಲ್ಲದಿದ್ದರೂ ತಮ್ಮ ದೇಹವನ್ನು ಈ ಕೆಲಸಕ್ಕೆ ಬಾಡಿಗೆಗೆ ಒಡ್ಡಬೇಕಾಗುತ್ತದೆ. ಹಣವಿದ್ದಲ್ಲಿ ಮಧ್ಯವರ್ತಿಗಳ ಪ್ರವೇಶವಾಗುತ್ತದೆ, ಬದಲಿ ತಾಯಿಯ ವಿಷಯದಲ್ಲೂ ಹಾಗೆಯೇ ಆಗಿದೆ. ಇಲ್ಲಿ ಹೆಚ್ಚಿನ ಹಣ ಇರುವುದರಿಂದ ಸಹಜವಾಗಿಯೇ ಮಧ್ಯವರ್ತಿಗಳು ತಾವು ಹೆಚ್ಚಿನ ಹಣ ಪಡೆದು ಬದಲಿ ತಾಯಿಗೆ ಕಡಿಮೆ ಹಣ ಕೊಡುತ್ತಾರೆ. ಇಲ್ಲಿ ಮೂತ್ರಪಿಂಡ ದಾನದ ಬಗ್ಗೆ ನಡೆಯುತ್ತಿದ್ದ ಅಕ್ರಮಗಳನ್ನು ನೆನಪಿಸಿಕೊಳ್ಳಬಹುದು. ಹಾಗಾಗಿ, ಅದನ್ನು ನಿಯಂತ್ರಿಸುವ ಕಾನೂನು ಮಾಡಬೇಕಾಯಿತು. ಅದೇ ರೀತಿ, ರಕ್ತದಾನದ ಬಗ್ಗೆಯೂ ದೂರುಗಳಿವೆ. ಹಣದ ಅವಶ್ಯಕತೆ ಮನುಷ್ಯನನ್ನು ದುಸ್ಸಾಹಸಗಳಿಗೆ, ಅಪಾಯದ ಕೆಲಸಗಳಿಗೆ ಕೈಹಾಕುವಂತೆ ಮಾಡುತ್ತದೆ, ಅಸಹಾಯಕತೆಯನ್ನು ಸೃಷ್ಟಿಸುತ್ತದೆ. ಕಾನೂನು ಮಾಡುವಾಗ ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ.



ಸಮಾಜವಲ್ಲದೆ ಸ್ತ್ರೀವಾದಿಗಳೂ ಈ ಬಗ್ಗೆ ತಮ್ಮ ಪ್ರತಿಭಟನೆಯನ್ನು ಸೂಚಿಸಿದ್ದಾರೆ. ಮೊದಲನೆಯದಾಗಿ ಇದು ಮಹಿಳೆಯರನ್ನು ಶೋಷಣೆಗೀಡುಮಾಡುತ್ತದೆ. ಹಣಕ್ಕಾಗಿ

ತನ್ನ ದೇಹವನ್ನು ಬಾಡಿಗೆಗೆ ಕೊಡುವಂತೆ ಮಾಡುತ್ತದೆ. ಎರಡನೆಯದಾಗಿ, ಮಹಿಳೆ ತನ್ನ ಸ್ತ್ರೀತ್ವದ ಪರಿಪೂರ್ಣತೆಗಾಗಿ ತಾಯಿಯಾಗಲೇಬೇಕೆಂಬ ಸಮಾಜದ ನಿರೀಕ್ಷೆಯನ್ನು ಗಟ್ಟಿಗೊಳಿಸುತ್ತದೆ ಎಂಬುದು ಅವರ ವಾದವಾಗಿದೆ. ಇದರೊಂದಿಗೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಸಲಿಂಗಕಾಮಿ ಪುರುಷರೂ ಏಕಾಂಗಿ ಸ್ತ್ರೀ ಪುರುಷರೂ, ಮಕ್ಕಳಿಗಾಗಿ ಈ ಕ್ರಮ ಅನುಸರಿಸಲು ಬಯಸಿದ್ದಾರೆ. ಅದು ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸುತ್ತದೆ. ಈವರೆಗಿನ ಎಲ್ಲಾ ಕೌಟುಂಬಿಕ-ವೈವಾಹಿಕ ವ್ಯವಸ್ಥೆಗಳನ್ನು, ಸಂಬಂಧಗಳನ್ನು, ವ್ಯಾಖ್ಯಾನಗಳನ್ನು ಅದು ತಲೆಕೆಳಗು ಮಾಡುತ್ತದೆ. ಇಲ್ಲಿ ಮಕ್ಕಳ ಹಕ್ಕಿನ ಬಗ್ಗೆಯೂ ಯೋಚಿಸಬೇಕಾಗುತ್ತದೆ. ಮಕ್ಕಳು ಆಟದ ಗೊಂಬೆಗಳಲ್ಲ, ಅವರಿಗೂ ಭಾವನೆಗಳಿರುತ್ತವೆ. ಸರಿಯಾಗಿ ಬೆಳೆಯಲು ಸೂಕ್ತ ಕೌಟುಂಬಿಕ ವಾತಾವರಣ ಬೇಕಾಗುತ್ತದೆ. ಕಾನೂನು ಈ ಎಲ್ಲ ಕಾಳಜಿಗಳನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ.

ಅಮೆರಿಕಾ ಸಂಸ್ಥಾನ ಈ ಬದಲಿ ತಾಯಿ ವ್ಯವಸ್ಥೆಯಲ್ಲಿ ಮುಂಚೂಣಿಯಲ್ಲಿದೆ. ಹಾಗಾಗಿ ಅಲ್ಲಿನ ಅನೇಕ ರಾಜ್ಯಗಳು ಈ ಬಗ್ಗೆ ಕಾನೂನು ಮಾಡಿವೆ. ಕೆಲವು ರಾಜ್ಯಗಳ ಕಾನೂನಿನಲ್ಲಿ ಹಣದ ಪ್ರತಿಫಲಕ್ಕಾಗಿ ಬದಲಿ ತಾಯಿಯಾಗುವ ಒಪ್ಪಂದವನ್ನು ಕಾನೂನುಬದ್ಧಗೊಳಿಸಿದ್ದರೆ, ಮತ್ತೆ ಕೆಲವು ರಾಜ್ಯಗಳಲ್ಲಿ ಅವನ್ನು ಕಾನೂನುಬಾಹಿರಗೊಳಿಸಲಾಗಿದೆ, ಎಂದರೆ ಈ ವ್ಯವಸ್ಥೆ ಕಾನೂನುಬದ್ಧವೆಂದಾದರೂ ಹಣಕ್ಕಾಗಿ ಅದನ್ನು ಮಾಡುವಂತಿಲ್ಲ ಮತ್ತು ನ್ಯಾಯಾಲಯ ಅದನ್ನು ಜಾರಿಗೊಳಿಸುವುದಿಲ್ಲ. ಏನೂ ತೊಂದರೆಯಾಗದಿದ್ದಾಗ ಕಾನೂನುಬದ್ಧವಾದರೂ, ತೊಂದರೆಯಾದಾಗ ನ್ಯಾಯಾಲಯದ ಮೂಲಕ ಪರಿಹಾರ ಪಡೆಯಲು ಸಾಧ್ಯವಿಲ್ಲ. ಅಮೆರಿಕಾದಲ್ಲಿ ಈಗಾಗಲೇ ವಿವಾಹವಾದವರು ಲೈಂಗಿಕ ಸಂಬಂಧದಲ್ಲಿರುವ, ಮಕ್ಕಳನ್ನು ಹೊಂದಿರುವ ಮಹಿಳೆಯರು ಮಾತ್ರ ಬದಲಿ ತಾಯಿಯರಾಗಲು ಸಾಧ್ಯ. ತಮ್ಮದೇ ಆದ ಮಕ್ಕಳನ್ನು ಹೊಂದಿದ್ದರೆ ಆ ಬದಲಿ ತಾಯಿಯರು ಬೇರೆಯವರಿಗೆ ಒಪ್ಪಿಸಬೇಕಾದ ಮಕ್ಕಳನ್ನು ತಮ್ಮ ಬಳಿ ಇಟ್ಟುಕೊಳ್ಳಲು ಬಯಸುವುದಿಲ್ಲ ಎನ್ನುವುದು ಇದರ ಹಿಂದಿರುವ ತರ್ಕ. ಆದರೆ, ಇಸ್ರೇಲಿನಲ್ಲಿ ಅವಿವಾಹಿತ ಮಹಿಳೆಯರು ಮಾತ್ರ ಬದಲಿ ತಾಯಿಯಾಗುವ ಕರಾರು ಮಾಡಿಕೊಳ್ಳಬಹುದು. ವಿವಾಹಿತ ಮಹಿಳೆಯರು ಮಾಡಿಕೊಳ್ಳುವ ಬದಲಿ ತಾಯಿಯ ವ್ಯವಸ್ಥೆ ತಮ್ಮ ಸಾಂಸ್ಕೃತಿಕ ಮೌಲ್ಯಗಳಿಗೆ, ಕೌಟುಂಬಿಕ ವ್ಯವಸ್ಥೆ ಮೌಲ್ಯಗಳು, ಸಂಬಂಧಗಳಿಗೆ, ಮಗುವಿನ ಸ್ಥಾನಮಾನಕ್ಕೆ ಧಕ್ಕೆ ತರುತ್ತದೆ ಎನ್ನುವುದು ಅದರ ವಾದ. ಬ್ರಿಟನ್ ವಾಣಿಜ್ಯ ಬದಲಿ ತಾಯಿ ವ್ಯವಸ್ಥೆಯನ್ನು, ಎಂದರೆ ಹಣಕ್ಕಾಗಿ ಮಗು ಹೆತ್ತುಕೊಡುವುದನ್ನು ನಿಷೇಧಿಸಿದೆ. ಆಸ್ಟ್ರೇಲಿಯಾದಲ್ಲಿಯೂ ಇದೇ ರೀತಿ ವಾಣಿಜ್ಯ ರೂಪದ ಬದಲಿ ತಾಯಿ ವ್ಯವಸ್ಥೆಯನ್ನು ನಿಷೇಧಿಸಲಾಗಿದೆ. ಎಂದರೆ ಬದಲಿ ತಾಯಿ ವ್ಯವಸ್ಥೆಯನ್ನು ಖಾಸಗಿಯಾಗಿ ಮಾಡಿಕೊಳ್ಳುವುದು ಕಾನೂನಿಗೆ ವಿರುದ್ಧವಲ್ಲ, ಆದರೆ, ನ್ಯಾಯಾಲಯ ಹಣದ ಕರಾರನ್ನು ಜಾರಿಗೊಳಿಸುವುದಿಲ್ಲ. ತಂಗಿಯೊಬ್ಬಳು ಅಕ್ಕನಿಗೆ ಬದಲಿ ತಾಯಿಯಾಗಿ ಮಗುವನ್ನು ಹೆತ್ತುಕೊಟ್ಟ ಪ್ರಕರಣ ಆಸ್ಟ್ರೇಲಿಯಾದಲ್ಲಿ ದೊಡ್ಡ ರಾದ್ಧಾಂತವಾಗಿ ಅಲ್ಲಿಯ ರಾಜ್ಯಗಳು ಈ ಬಗ್ಗೆ ಕಾನೂನು ಮಾಡಬೇಕಾಯಿತು.

ಬದಲಿ ತಾಯಿಯ ಕರಾರು ಬಹಳ ಸಂಕೀರ್ಣವಾದ ಒಂದು ಒಪ್ಪಂದ. ಎಲ್ಲಾ ಹಂತಗಳಲ್ಲಿ ಆಗುವ ಸಾಧ್ಯತೆಗಳಿಗೆ ಅದರಲ್ಲಿ ಉತ್ತರವಿರಬೇಕಾಗುತ್ತದೆ. ಹಣವನ್ನು ಯಾವ ಯಾವ ಹಂತದಲ್ಲಿ, ಎಷ್ಟು ಕೊಡಬೇಕು, ಗರ್ಭಧರಿಸಲು ತಡವಾದರೆ, ಗರ್ಭಪಾತವಾದರೆ, ಒಂದಕ್ಕಿಂತ ಹೆಚ್ಚಿನ ಭ್ರೂಣಗಳಿದ್ದರೆ, ಮಗು ಹುಟ್ಟುವಾಗ ಅಥವಾ ಹುಟ್ಟಿದ ನಂತರ ಸತ್ತರೆ, ಮಹಿಳೆಯ ಆರೋಗ್ಯಕ್ಕೆ ಅಥವಾ ಪ್ರಾಣಕ್ಕೆ ಹಾನಿಯಾದರೆ, ಗರ್ಭಿಣಿ ಮಹಿಳೆಗೆ ತೊಂದರೆಯಾದರೆ, ಇವೇ ಮೊದಲಾದ ಸಂದರ್ಭಗಳಲ್ಲಿ ಎಲ್ಲ ಸಹಜ ಅಸಹಜ ವಿಷಯಗಳ ಬಗ್ಗೆ ಒಪ್ಪಂದವಿರಬೇಕಾಗುತ್ತದೆ. ಅದರಲ್ಲಿ ಅನೇಕ ರೀತಿಯ ಖರ್ಚು ವೆಚ್ಚಗಳಿರುತ್ತವೆ. ಯಾವ ವೈದ್ಯರ ಹತ್ತಿರ, ಎಷ್ಟು ಬಾರಿ ಗರ್ಭಿಣಿ ತಪಾಸಣೆ ಮಾಡಿಸಬೇಕು, ಏನು ಆಹಾರ ತೆಗೆದು ಕೊಳ್ಳಬೇಕು ಇತ್ಯಾದಿ ಯಾವುದೂ ಅವಳ ಇಚ್ಛಾನುಸಾರವಿರುವುದಿಲ್ಲ, ಕರಾರಿನ ಅನುಸಾರವಿರುತ್ತದೆ. ಎಷ್ಟೇ ಸೂಕ್ಷ್ಮವಾಗಿ ಎಲ್ಲಾ ವಿಷಯಗಳ ಬಗ್ಗೆ ಒಪ್ಪಂದ ಮಾಡಿಕೊಂಡಿದ್ದರೂ ಕೊನೆಯಲ್ಲಿ ಮಗು ಹುಟ್ಟಿದ ಮೇಲೆ ಏನು ಬೇಕಾದರೂ ಆಗಬಹುದು, ಮಂಜಿ ಪ್ರಕರಣದಂತೆ ಯಾರಿಗೂ ಬೇಡದ ಮಗುವಾಗಬಹುದು, ಬದಲಿತಾಯಿ ಮಗು ಕೊಡಲು ನಿರಾಕರಿಸಬಹುದು. ಈಗ ಅಮೆರಿಕಾದ ನ್ಯಾಯಾಲಯದ ಮುಂದೆ ಬಂದಿರುವ ಪ್ರಕರಣಗಳಲ್ಲಿ ತನ್ನ ಅಂಡಾಣುವಿನ ದಾನದಿಂದ ಗರ್ಭ ಧರಿಸಿ, ಬದಲಿ ತಾಯಿಯಾಗಿರುವ ಮಹಿಳೆ ಕೊನೆಯಲ್ಲಿ ಹಣವನ್ನು ತೆಗೆದುಕೊಳ್ಳದೇ ಮಗುವನ್ನು ಇಟ್ಟುಕೊಳ್ಳಲು ಬಯಸಿದರೆ ನ್ಯಾಯಾಲಯ ಒಪ್ಪುತ್ತದೆ. ಏಕೆಂದರೆ, ಆ ಮಗುವಿನಲ್ಲಿ ಅವಳ ಅಂಶವಿದೆ, ಆದರೆ, ಅಂಡಾಣು ಮತ್ತು ವೀರ್ಯಾಣು ಬೇರೆಯ ವರಿಂದ ಪಡೆದಿದ್ದರೆ, ಕರಾರಿನಂತೆ ಆಕೆ ಮಗುವನ್ನು ಕರಾರುದಾರರಿಗೆ ಒಪ್ಪಿಸಬೇಕಾಗುತ್ತದೆ. ಮಗುವನ್ನು ನೋಡಲು ನ್ಯಾಯಾಲಯ ಅವಳಿಗೆ ಅವಕಾಶ ಕಲ್ಪಿಸಬಹುದು. ಆದರೆ, ಮುಂದೆ ಮಗುವಿನ ಮೇಲೆ ಅದರ ಪರಿಣಾಮ ಹೇಗೆ ಆಗುವುದೋ ತಿಳಿಯದು. ಕರಾರು ಮಾಡಿಕೊಂಡ ತಂದೆ-ತಾಯಿಯರೂ ಅದನ್ನು ಒಪ್ಪಿಕೊಳ್ಳಲು ಕಷ್ಟವಾಗುತ್ತದೆ.

ಭಾರತವೂ ಈ ಬಗ್ಗೆ ಪರ್ಯಾಲೋಚಿಸುವ ಕಾಲ ಬಂದಿದೆ. ಕಾನೂನಿನ ಅವಶ್ಯಕತೆಯ ಬಗ್ಗೆ ಮೊದಲು ನಿರ್ಧಾರ ತೆಗೆದುಕೊಳ್ಳಬೇಕು. ಈಗಿರುವಂತೆಯೇ ಕರಾರುಮಾಡಿಕೊಳ್ಳುವುದನ್ನು ಖಾಸಗಿ ವ್ಯವಸ್ಥೆಗೆ ಬಿಟ್ಟು ಸುಮ್ಮನಿರಬೇಕೇ ಅಥವಾ ಅದನ್ನು ನಿಯಂತ್ರಿಸುವ ಕಾನೂನು ಮಾಡಬೇಕೆ, ಕಾನೂನು ಮಾಡುವಾಗ ವಾಣಿಜ್ಯ ಬದಲಿತಾಯಿ ವ್ಯವಸ್ಥೆಯನ್ನು ನಿಷೇಧಿಸಬೇಕೆ ಇತ್ಯಾದಿಗಳನ್ನು ಯೋಚಿಸುವ ಮೊದಲು, ಈ ವ್ಯವಸ್ಥೆ ನಮ್ಮ ದೇಶದಲ್ಲಿ ಯಾವ ಮಟ್ಟದಲ್ಲಿದೆ ಎನ್ನುವ ಬಗ್ಗೆ ಅಂಕಿ-ಅಂಶ ಸಂಗ್ರಹಣೆಯಾಗಬೇಕು, ಸಾರ್ವಜನಿಕ ಚರ್ಚೆ ನಡೆದು ಅಭಿಪ್ರಾಯ ವ್ಯಕ್ತವಾಗಬೇಕು. ಅನಾವಶ್ಯಕ ಕಾನೂನು ಕೆಲವೊಮ್ಮೆ ಇಲ್ಲ.ಸಲ್ಲದ ಸಮಸ್ಯೆಗಳನ್ನು ಸೃಷ್ಟಿಸುತ್ತದೆ.

ಹೇಮಲತಾ ಮಹಿಷಿ
'ಶಶಿಕಿರಣ್ ಅಪಾರ್ಟ್‌ಮೆಂಟ್'
ನಂ. ೨೦೯, ೧೮ನೇ ಮುಖ್ಯರಸ್ತೆ, ಮಲ್ಲೇಶ್ವರಂ
ಬೆಂಗಳೂರು - ೫೫

-: ಶುಭಾಶಯಗಳೊಂದಿಗೆ :-



ಮುದ್ರಕರು ಮತ್ತು ಪ್ರಕಾಶಕರು -

**ಸಂಕೇಶ್ವರ ಪ್ರಿಂಟರ್ಸ್ ಪ್ರೈವೇಟ್ ಲಿಮಿಟೆಡ್**

**ಪ್ರಧಾನ ಕಛೇರಿ**
ವೀರ ಸಾವರಕರ ಮಾರ್ಗ, ಗದಗ - 582 101
ಫೋನ್ : 277165 276004, ಫ್ಯಾಕ್ಸ್ : 08372-277040

**ಮುದ್ರಣಾಲಯ**
ಪ್ಲಾಟ್ ನಂ. 35, 36, 37 ಗದಗ ಕೋ-ಆಪರೇಟಿವ್ ಇಂಡಸ್ಟ್ರಿಯಲ್ ಎಸ್ಟೇಟ್, ಹುಬ್ಬಳ್ಳಿ ರಸ್ತೆ, ಗದಗ - 582 103, ಫೋನ್ : 235365

**ಮಾರಾಟ ಮಳಿಗೆಗಳು**
ಎಚ್ ಬ್ಲಾಕ್, 8, ಮಧುಬನ್ ಕಾಂಪ್ಲೆಕ್ಸ್, ಜಯಚಾಮರಾಜ ನಗರ
ಹುಬ್ಬಳ್ಳಿ - 580 020, ಫೋನ್ : 2266142
245, ಮೊದಲನೆಯ ಮಹಡಿ, ರಂಗಸ್ವಾಮಿ ಗುಡಿ ಬೀದಿ
ಅವೆನ್ಯೂ ರೋಡ್ ಕ್ರಾಸ್
ಬೆಂಗಳೂರು - 560 053, ಫೋನ್ : 22203946

# ಮಜ್ಜಿಗೆಯೊಳಗಿನ ಬೆಣ್ಣೆಯಂತೆ

ರೇಡಿಯೋ ಹಾಡುತ್ತಿತ್ತು 'ಭಾಗ್ಯದಾ ಲಕ್ಷ್ಮಿ ರಮ್ಮ... ಸಾಧು ಸಜ್ಜನರ ಪೂಜೆಯ ವೇಳೆಗೆ ಜ್ಜಿಗೆಯೊಳಗಿನ ಬೆಣ್ಣೆಯಂತೆ'... ಹಾಡು ಕಿವಿ ಮೇಲೆ ಳುತ್ತಿದ್ದರೂ ಎಲ್ಲೋ ಅಲೆಯುತ್ತಿದ್ದ ಮನಸ್ಸು ಥಟ್ಟನೆ ಸರು ಕಡೆಯಲು ಪ್ರಾರಂಭಿಸಿಬಿಟ್ಟಿತ್ತು. ಒಂದು ವಿಗೆ, ಹಾರುವ ಹಕ್ಕಿಗೆ, ಯಾವುದೋ ವಾಸನೆಗೆ, ್ಯಾವುದೋ ದೃಶ್ಯಕ್ಕೆ, ಪುಟ್ಟ ಶಬ್ದಕ್ಕೆ ಗತ ಘಟನೆಗಳನ್ನು ಪಿಗೆ ತರುವ ಶಕ್ತಿ ಇದೆಯಲ್ಲ ಎಂದು ಅಚ್ಚರಿ ಾಗುತ್ತದೆ. ಹಾಗೆಯೇ ಅದು ಮನಸ್ಸಿನ ಶಕ್ತಿ ೇಷವೋ, ಆ ವಸ್ತುಗಳ ವೈಶಿಷ್ಟ್ಯವೋ ಎಂಬ ಗೊಂದಲ ಗುತ್ತದೆ. ಹೇಗಿದ್ದರೂ ನನ್ನ ಮನಸ್ಸು ಈಗ ಅಜ್ಜಿ - ಅಮ್ಮ ುಕಿನಲ್ಲಿ ಎದ್ದು ಸರ-ಬರ ಮೊಸರು ಕಡೆಯುವ ನಾಲ್ಕು ಕಗಳ ಹಿಂದಿನ ಮಲೆನಾಡಿಗೆ ಹಾರಿದೆ.

ಅಪ್ಪ ಮತ್ತು ನಾವು ನಾಲ್ಕು ಮಕ್ಕಳು ಕುಂಭಕರ್ಣನ ಶಸ್ಥರು, ಅಂದರೆ ನಿದ್ರಾಪ್ರಿಯರು. ಅಮ್ಮನಿಗೂ ನಿದ್ರೆ, ರಲ್ಲೂ ನಸುಕಿನ ಸಕ್ಕರೆ ನಿದ್ರೆ ಇಷ್ಟವೇ! ಆದರೆ ನಾವು ಜವಾಬ್ದಾರಿಯಿಂದ ೭ ಗಂಟೆಯವರೆಗೆ ಮಲಗಿದ ಹಾಗೆ, ್ಮ ಮಲಗುವುದು ಸಾಧ್ಯವಿರಲಿಲ್ಲ. ಪಾಪ! ಮಳೆಗಾಲ- ಗಾಲ- ಬೇಸಿಗೆ ಕಾಲ ಯಾವುದೇ ಇರಲಿ, ಅನಾರೋಗ್ಯ ದ ನರಳುತ್ತಿದ್ದರೂ ಸರಿ, ಅಮ್ಮ ೫ ಗಂಟೆಗೇ ಎದ್ದು ನೆ ಕೆಲಸಕ್ಕೆ ತೊಡಗುತ್ತಿದ್ದಳು. ನಿತ್ಯವಿಧಿಗಳನ್ನು ಮುಗಿಸಿ ್ಮ ಪುಟ್ಟ ಮೊಸರ ಗಡಿಗೆ ಇಟ್ಟುಕೊಂಡು, ಪುಟ್ಟ ಗೋಲಿನಿಂದ ಮೊಸರು ಕಡೆಯುತ್ತಾ ಸುಪ್ರಭಾತ ಡತೊಡಗಿದರೆ ನಮಗೆ ಜೋಗುಳ ಹಾಡಿದಂತೆ ಇನ್ನೂ ್ಮದಿಯ ನಿದ್ರೆ ಬರುತ್ತಿತ್ತು ಬಾಲ್ಯದಲ್ಲಿ. ಮುಗ್ಧತೆಯ ್ಯ ಕಳೆದು ಸಂಸಾರ ತಾಪತ್ರಯದ ಬಿಸಿ ತೊಡಗಿದಾಗ, ನಿದ್ರೆ ಬಾರದಿದ್ದರೂ ಅಮ್ಮನ ಹಾಡು ುತ್ತ, ಅಮ್ಮ ಗದರಿಸಿ ಹೇಳುವವರೆಗೆ ಏಳುತ್ತಿರಲಿಲ್ಲ.

ನಿಧಾನವಾಗಿ ಅಮ್ಮ ಅಕ್ಕನಿಗೆ, ನನಗೆ ಮೊಸರು ಯಲು ಕಲಿಸುತ್ತಿದ್ದಳು. ಹಾಗೆಯೇ ಹಾಲು ಕರೆಯುವು ಂದ ಹಿಡಿದು ತುಪ್ಪ ಮಾಡುವವರೆಗಿನ ವಿಧಾನವನ್ನು ಹೇಳುತ್ತಿದ್ದಳು. ತವರು ಮನೆಯಲ್ಲಿ ಸರ್ವಮಂಗಳೆ ಬ ಆಕಳು ಇತ್ತು. ಅಪ್ಪ-ಅಮ್ಮ ಅದನ್ನು ದೇವತೆ ದೇ ನಂಬಿ ನಡೆದುಕೊಳ್ಳುತ್ತಿದ್ದರು. ಆಕಳಿಂದ ಹಾಲನ್ನು ಂಡುವುದು' ಎಂಬ ಶಬ್ದವೇ ಅವರಿಗೆ ಹಿಡಿಸುತ್ತಿರಲಿಲ್ಲ. ್ಮ ಹಾಲು ಕರೆಯಲು ಹೊರಡುವುದೇ ಒಂದು ಭ್ರಮವಾಗಿತ್ತು. ಶುಭ್ರವಾದ ದೊಡ್ಡ ಚೊಂಬು, ರ ಕಂಠದ ಮೇಲೆ ಪುಟಾಣಿ ಬೆಣ್ಣೆ ಮುದ್ದೆ, ದು ಲೋಟಾ ಹಿಡಿದು ಹೊರಡುತ್ತಿದ್ದಳು. ್ಮನ ಸಹಾಯಕ್ಕೆ ಅಪ್ಪ ಅಣ್ಣ ಕೆಲಸದ ಲಕ್ಷ್ಮಿ.... ರಾದರೂ ಒಬ್ಬರು. ಬೆಳಿಗ್ಗೆ ಅಮ್ಮ ಹಾಲು ಯಲು ಹೋಗುವುದು ಬೇಸಿಗೆಯಲ್ಲಾದರೆ ೭ ಟೆಗೆ, ಚಳಿಗಾಲದಲ್ಲಾದರೆ ೯ ಗಂಟೆಗೆ! ಯಾಕೆಂದರೆ ಗಾಲದಲ್ಲಿ ಆಕಳು ಸೊಡು ಬಿಡುವುದಿಲ್ಲ ಅನ್ನುತ್ತಿದ್ದಳು. ಆಕಳಿಗೆ ಮೊದಲು ಮುರ ಕೊಡುತ್ತಿದ್ದಳು. ನೆನೆಸಿದ ಹತ್ತಿಕಾಳು-ಹಿಂಡಿ-ಸಣ್ಣದಾಗಿ ಹೆಚ್ಚಿದ ಬಾಳೆದಿಂಡುಗಳು, ಹಸಿರು ಹುಲ್ಲು, ಸೊಪ್ಪು ಯಾವುದನ್ನಾದರೂ ತಿನ್ನಲು ನೀಡುತ್ತಿದ್ದಳು. ಅಲ್ಲೇ ಕಟ್ಟಿ ಹಾಕಿದ ಕರುವನ್ನು ಬಿಟ್ಟಾಗ ಅದು ಸ್ವಲ್ಪ ಹಾಲು ಕುಡಿದಾಗ, ಅದನ್ನು ಎಳೆದು ದೂರ ಕಟ್ಟುತ್ತಿದ್ದರು. ಸರ್ವಮಂಗಳೆ ತನ್ನ ಕರುವನ್ನು ನೆಕ್ಕುತ್ತ ಮುದ್ದು ಮಾಡುತ್ತಿತ್ತು. ಆಗ ಅಮ್ಮ ಸರ್ವಮಂಗಳೆಯ ಮೊಲೆ ತೊಟ್ಟುಗಳನ್ನು ಉಗುರು ಬೆಚ್ಚಗಿನ ನೀರಿನಿಂದ ತೊಳೆದು, ಅವುಗಳಿಗೆ ಬೆಣ್ಣೆ ಹಚ್ಚಿ ನಿಧಾನವಾಗಿ ಹಾಲು ಕರೆಯುತ್ತಿದ್ದಳು. ಗೋಮಾತೆಯ ಕೆಚ್ಚಲಿನಿಂದ ಹಾಲನ್ನು ಪಡೆಯುವಾಗ ಅಮ್ಮ ದೇವರ ಪ್ರಸಾದ-ತೀರ್ಥ ಪಡೆಯುವಷ್ಟೇ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದಳು. ದೇವತೆಯನ್ನು ಆಹ್ವಾನಿಸಿದಷ್ಟು ವಿನೀತಭಾವದಿಂದ ಹಾಲು ಪಡೆಯುತ್ತಿದ್ದುದರಿಂದ ''ಕರೆಯುವುದು'' ಶಬ್ದವೇ ''ಹಿಂಡುವುದು'' ಶಬ್ದಕ್ಕಿಂತ ಸರಿಯಾಗಿ ಹೊಂದುತ್ತಿತ್ತು.

ನಸು ಬೆಚ್ಚಗಿನ ಹಾಲನ್ನು ಕರೆದಾದ ಮೇಲೆ ಕರುವಿಗಾಗಿ ಒಂದು ಮೊಲೆ ಹಾಲನ್ನು ಹಾಗೇ ಬಿಡುತ್ತಿದ್ದಳು. ಪುಟ್ಟ ಕರು ತಾಯಿ ಹಾಲನ್ನು ಆತುರದಿಂದ ಕುಡಿಯುವಾಗ ''ಮಗು, ನಿನ್ನ ಪಾಲನ್ನು ನಾವು ಕಸಿದುಕೊಳ್ಳುತ್ತಿದ್ದೇವೆ, ಕ್ಷಮಿಸು'' ಎನ್ನುವಂತೆ ಅದರ ಮೈದಡವಿ ಮುದ್ದುಮಾಡುತ್ತಿದ್ದಳು. ಕೆಲವು ಸಲ ಪುಟ್ಟಕರು (ಆ ಸರ್ವಮಂಗಳೆ ವರ್ಷಗಂದಿ-ಅಂದರೆ ವರ್ಷಕ್ಕೊಂದು ಕರು ಹಾಕುತ್ತಿತ್ತು) ಕಣ್ಣೆಯನ್ನು ಬಿಚ್ಚಿಕೊಂಡು ತಾಯ ಪೂರ್ತಿ ಹಾಲನ್ನು ಕುಡಿದುಬಿಡುತ್ತಿತ್ತು. ಆಗ ಅಪ್ಪ-ಅಮ್ಮ ಸಿಟ್ಟಾಗದೇ, ''ಕಳ್ಳ ಇವತ್ತು ಅಷ್ಟೂ ಹಾಲು ನಿಂಗೆ ಸಿಕ್ತಾ?'' ಎಂದು ಕರುವನ್ನು ಮುದ್ದು ಮಾಡುತ್ತಿದ್ದರು. ಸರ್ವಮಂಗಳೆಯ ಸಂತತಿ, ಒಂದಲ್ಲಾ ಒಂದು ಹಾಲು ಕೊಡುತ್ತಿದ್ದುದರಿಂದ ೨೫ ವರ್ಷಗಳು ನಿರಂತರವಾಗಿ ಅಮ್ಮನ ಸಂಸಾರಕ್ಕೆ ಹಾಲಿನ ತೊಂದರೆಯಾಗಿರಲಿಲ್ಲ. ಅಮ್ಮ-ಅಪ್ಪ ನಿಧನರಾದಾಗ ಭಟ್ಟರಿಗೆ ಗೋದಾನ ಕೊಡಲು ಈ ಸರ್ವಮಂಗಳೆಯ ಸಂತತಿಯೇ ಉಪಯೋಗವಾಗಿತ್ತು. ಉಳಿದ ಹಸು-ಕರುಗಳನ್ನು ಆರೈಕೆ ಮಾಡುವವರಿಲ್ಲದೇ ಅಳುತ್ತಲೇ ಮಾರಾಟ ಮಾಡುವ ಪ್ರಸಂಗ ಬಂದಿತ್ತು.

ಅಮ್ಮ ಕರೆದುತಂದ ಹಾಲಿನಲ್ಲಿ ಸ್ವಲ್ಪ ಭಾಗವನ್ನು ಸಾಕಿದ ಬೆಕ್ಕು ಊರ್ವಶಿಗೆ ಹಾಕಲೇಬೇಕಾಗಿತ್ತು.

**ವಿಜಯಾ ಶ್ರೀಧರ್**



ಎಲ್ಲೆಲ್ಲೋ ಮೀನು, ಹುಳ-ಹುಪ್ಪಡಿ, ಹಕ್ಕಿಗಳ ಬೇಟೆಗಾಗಿ ಅಲೆಯುತ್ತಿದ್ದ ಊರ್ವಶಿ (ಇಲಿ ಹಿಡಿಯುವುದರಲ್ಲಿ ಮಾತ್ರ ಸೋಮಾರಿಯಾಗಿತ್ತು) ಅಮ್ಮ ಹಾಲು ಕರೆಯುವ ವೇಳೆಗೆ ಅಮ್ಮನ ಕಾಲ ಬಳಿಯೇ ಸುತ್ತಾಡುತ್ತಿತ್ತು. ಈ ಊರ್ವಶಿಯ ಬಾಯಿಯಿಂದ ಹಾಲು-ಮೊಸರು-ಬೆಣ್ಣೆ ಕಾಪಾಡುವುದು ತುಂಬ ಕಷ್ಟದ ಕೆಲಸವಾಗಿತ್ತು. ನಾವು ಸ್ವಲ್ಪ ಎಚ್ಚರ ತಪ್ಪಿದರೂ ಹಾಲು-ಮೊಸರು-ಬೆಣ್ಣೆ ಮಾಯವಾಗುತ್ತಿತ್ತು. ಅಡಿಗೆಮನೆಯ ಇನ್ನೊಂದು ಮೂಲೆಯಲ್ಲಿ ಗೋಡೆಗೊಂದು ಗೂಟ ಬಡಿದು ಅದಕ್ಕೆ 'ನೆಲವು' ತೂಗಿ ಹಾಕಲಾಗಿತ್ತು. ನೆಲವು ಅಂದರೆ ನಾರಿನಿಂದ ಹೊಸೆದ ಹಗ್ಗದಿಂದ ಮಾಡಿದ ತೂಗುಬುಟ್ಟಿ ಅನ್ನಬಹುದು. ಅದರಲ್ಲಿ ಹಾಲಿನ ಪಾತ್ರೆ ಇಟ್ಟರೆ ಬೆಕ್ಕಿಗೆ ಹಾರಿ ಹಾಲು ಕುಡಿಯಲು ಆಗುತ್ತಿರಲಿಲ್ಲ. ''ನೆಲವಿಗೆ ಹಾರಲಾರದ ಬೆಕ್ಕು ಮುಗಿಲಿಗೆ ಹಾರಿದಂತೆ'' ಎಂಬ ಗಾದೆ ನೆನಪಿದೆ ತಾನೆ ? ಕಡಿಮೆ ಎತ್ತರವನ್ನೇ ಹಾರಲಾರದ ಬೆಕ್ಕು ಮುಗಿಲಿಗೆ ಹಾರಲು ಸಾಧ್ಯವೇ, ಎಂಬ ಅರ್ಥದಲ್ಲಿ ಸಣ್ಣ-ಪುಟ್ಟ ಸಾಧನೆಯೇ ಸಾಧ್ಯವಿರದಾಗ ದೊಡ್ಡ ಸಾಧನೆ ಸಾಧ್ಯವೇ, ಎಂಬ ಸಾಮರ್ಥ್ಯವನ್ನು ಪ್ರಶ್ನಿಸುವ ಗಾದೆ ಇದು.

ಮನೆಗಳಲ್ಲಿ ಹಸು-ಎಮ್ಮೆ ಸಾಕುವುದೇ ಮಾಯವಾಗಿ, ಕೊಟ್ಟಿಗೆಗಳೇ ಬೇಡವಾಗಿ, ಡೈರಿ ಹಾಲಿಗೆ ನಾವು ವಶವಾಗಿರುವಾಗ ಬೆಕ್ಕುಗಳೂ ಅಪರೂಪವಾಗಿ 'ನೆಲವು' ಮೂಲೆಗುಂಪಾಗಿ ಮಾಯವಾಗಿದೆ. ಈ ಗಾದೆಯೂ ಜನಮಾನಸದಿಂದ ಅಳಿದೇ ಹೋಗಬಹುದು. ಇರಲಿ, ಇದು ಬೇರೆಯದೇ ಮಾತು.

ರಾತ್ರಿಯ ನೀರವ ಮೌನದಲ್ಲಿ ಹಸುಗಳು ಮೆಲುಕು ಹಾಕುವುದು ಎಷ್ಟು ಮಜವಾಗಿರುತ್ತದೆ. ಹಸುಗಳು ಹುಲ್ಲು, ಹಸಿರುಕಾಯಿಗಳು ಸಿಕ್ಕಾಗ ಬೇಗ ಬೇಗ ನುಂಗಿ ಬಿಡುತ್ತವೆ. ಸಂಜೆ ಕೊಟ್ಟಿಗೆಗೆ ಮರಳಿದ ಮೇಲೆ, ವಿಶ್ರಾಂತಿ ಗಾಗಿ ಕುಳಿತಾಗ, ಹೊಟ್ಟೆಯಲ್ಲಿ ಕೂಡಿಟ್ಟ ಆಹಾರವನ್ನು ಬಾಯಿಗೆ ತಂದುಕೊಂಡು ಗರಗಸದಂಥ ಹಲ್ಲುಗಳಿಂದ ಅರೆದರೆದು ತಿನ್ನುತ್ತವೆ. ನಮ್ಮ ಸರ್ವಮಂಗಳೆಯಂತೂ ಬೆಟ್ಟದಲ್ಲಿ ತಾರೆಕಾಯಿಗಳನ್ನು ತಿಂದುಬಂದು, ರಾತ್ರಿಯಿಡೀ ಅದರ ಸಿಪ್ಪೆ ತಿಂದು ಗಟ್ಟಿ ಬೀಜವನ್ನು ಕೊಟ್ಟಿಗೆ ತುಂಬಾ ಚೆಲ್ಲಿರುತ್ತಿತ್ತು. ಬೆಟ್ಟದಲ್ಲಿ ಕಾಸರಕನ ಕಾಯಿ ತಿಂದ ಮರುದಿನ ಮಾತ್ರ ಹಾಲು ಕಹಿ ಅಂದರೆ ಕಹಿ. ಆದರೂ ಅದು ಆರೋಗ್ಯಕ್ಕೆ ಒಳ್ಳೆಯದು, ಕುಡಿಯಿರಿ ಅಂತ ಅಮ್ಮ ಹೇಳುತ್ತಿದ್ದಳು. ಆದರೆ ಒಂದೆರಡು ದಿನ ಸರ್ವಮಂಗಳೆಯನ್ನು ಹೊರಗೆ ಬಿಡುತ್ತಿರಲಿಲ್ಲ. ನಂತರ ದನ ಕಾಯುವ ಬಸವ ನಿಗೆ ಎಚ್ಚರಿಕೆ ಹೇಳಿ, ಹುಲ್ಲು ಮೇಯಿಸಲು ಕಳಿಸುತ್ತಿದ್ದಳು.

ಅದೇ ನಮ್ಮ ಮನೆ ಮುದ್ದು ಬೆಕ್ಕು ಊರ್ವಶಿಗೆ ಹಾಲು ಹಾಕಿದ ಮೇಲೆ ಅಮ್ಮನ ಸಂಸಾರಕ್ಕೆ ಉಳಿಯುತ್ತಿದ್ದುದು ಸ್ವಲ್ಪವೇ ಹಾಲು. ಆದರೆ ದಿನವೂ ಅಜ್ಜಿ ಹಳ್ಳಿಯಿಂದ ಹಾಲು ಅಥವಾ ಕಡೆದ ಮಜ್ಜಿಗೆ ಕಳಿಸುತ್ತಿದ್ದುದರಿಂದ ತೊಂದರೆ ಇರಲಿಲ್ಲ. ಈ ಹಾಲು ಕಾಯಿಸುವುದು ತುಂಬ ಸುಲಭವಾಗಿ ಕಾಣಿಸುವ ಆದರೆ ಕಷ್ಟದ ಕೆಲಸ. ದಪ್ಪ ತಳದ ಪಾತ್ರೆ ಹಾಲನ್ನು ಸೋಸಿ ಕಾಯಲು ಇಡಬೇಕಾಗಿತ್ತು. ಅದನ್ನು ಕಾಯಲು ಯಾರಾದರೂ ಅಲ್ಲೇ ಕೂಡ್ರ ಬೇಕಾಗಿತ್ತು. ಆಗಿನ ಕಾಲದಲ್ಲಿದ್ದುದು ನೆಲದ ಮೇಲಿನ ಒಲೆ. ಸೌದೆ ಹಾಕಿ ಉರಿಸುವಂತಹದು. ಒಂದು ಕ್ಷಣ ಎಚ್ಚರ ತಪ್ಪಿದರೆ ಹಾಲು ಉಕ್ಕಿ, ಬೆಂಕಿ ಆರಿ ಮನೆ ತುಂಬಾ ಕೆಟ್ಟ ವಾಸನೆ ಬರುತ್ತಿತ್ತು. ಹಾಲನ್ನೇ ನೋಡುತ್ತಿದ್ದರೆ ಎಷ್ಟು ಹೊತ್ತಾದರೂ ಮೇಲೆ ಬರುತ್ತಲೇ ಇರಲಿಲ್ಲ. ಪಾತ್ರೆ ತುಂಬ ಸ್ವಚ್ಛವಾಗಿ[illegible] ಬೇಕಾಗಿತ್ತು. ಇಲ್ಲದಿದ್ದರೆ ಹಾಲು ಒಡೆದುಹಾಳಾಗುತ್ತಿತ್ತು. ಯಾರೇ ಹಾಲು ಉಕ್ಕಿಸಿದರೂ ಅಪ್ಪನಿಗೆ ತುಂಬಾ ಸಿಟ್ಟು ಬರುತ್ತಿತ್ತು. ''ಬೇರೆ ಅರ್ಜೆಂಟ್ ಕೆಲಸ ಏನಿತ್ತು, ಅಲ್ಲಿರದೆ ಎಲ್ಲಿ ಹೋಗಿದ್ದೆ?'' ಎಂತಲೋ ''ಗಮನ ಎಲ್ಲಿತ್ತು?'' ಅಂತೋ ಬೈಯುತ್ತಿದ್ದರು. ಬೆಳಿಗ್ಗೆ ಹಾಲು ಉಕ್ಕಿದರೆ ಕಡಿಮೆ ಬೈಗುಳ. ''ಹೋಗಲಿ, ಕೃಷ್ಣಾರ್ಪಣ ಎಂದುಬಿಡೋಣ, ದೇವತೆಗಳು ಈಗ ಹಾಲು ಕುಡಿಯುತ್ತಾರೆ'' ಎನ್ನುತ್ತಿದ್ದರು. ರಾತ್ರಿ ಹಾಲು ಉಕ್ಕಿದರೆ ಮಾತ್ರ ''ರಾಕ್ಷಸರು ಹಾಲು ಕುಡಿಯುತ್ತಾರೆ'' ಅಂತ ರೇಗುತ್ತಿದ್ದರು.

ಅಂತೂ ಹದವಾಗಿ ಹಾಲು ಕಾಯಿಸಿ ಚಹಾಕ್ಕೆ, ಹಾಗೇ ಕುಡಿಯಲು ಬಳಸಿದ ಮೇಲೆ ರಾತ್ರಿ ಅಮ್ಮನಿಗೆ ಅದನ್ನು ಹೆಪ್ಪು ಹಾಕುವ ಕೆಲಸ ಇರುತ್ತಿತ್ತು. ಹದವಾಗಿ ಕಾಯ್ದ ಹಾಲಿಗೆ ತುಸು ಹೆಪ್ಪು ಬೆರೆಸಿ ಸರಿಯಾಗಿ ಮುಚ್ಚಿ ಮಲಗಿದರೆ ಬೆಳಗಾಗುವ ಸಮಯ ಸಿಹಿಯಾದ ಗಟ್ಟಿ ಮೊಸರು ತಯಾರಾಗುತ್ತಿತ್ತು. ಮನೆಯಲ್ಲಿ ಕಡಿಮೆ ಜನರಿದ್ದಾಗ ತಿಂಡಿಗೆ, ಊಟಕ್ಕೆ ಮೊಸರನ್ನೇ ಉಪಯೋಗಿಸುತ್ತಿದ್ದೆವು. ಜನ ಜಾಸ್ತಿ ಇದ್ದಾಗ ಬೆಳಿಗ್ಗೆಯೇ ಅಮ್ಮ ಮೊಸರು ಕಡೆಯುತ್ತಿದ್ದಳು. ಮೂಲೆಯ ಗೂಟಕ್ಕೆ ಎರಡು ಹಗ್ಗಗಳ ಕುಣಿಕೆ ಹಾಕಿ, ಅದರಲ್ಲಿ ಕಡೆಗೋಲು ತರಿಸಿ, ಕಡೆಗೋಲಿಗೆ ದಪ್ಪ ಹಗ್ಗ ಸುತ್ತಿ ಅದರ ಎರಡೂ ತುದಿ ಒಂದೊಂದು ಕೈಲಿ


ಪ್ರಿಸಮ್

ಹೊಸ ಪ್ರಕಟಣೆಗಳು

ಬೆಲೆ ರೂ.120.00

ಬೆಲೆ ರೂ.165.00

ಬೆಲೆ ರೂ. 70.00

ಪ್ರಮುಖ ಪುಸ್ತಕ ಮಳಿಗೆಗಳಲ್ಲಿ ಲಭ್ಯ

THE PYGMALION MANAGER

KOCHI

Rs. 595/-

ಬೆಲೆ ರೂ.295.00

ಎರಡು ಸಂಪುಟಗಳಲ್ಲಿ ಲಭ್ಯ

ಬೆಲೆ ರೂ. 795.00

Rs. 295/-

Discover

Rs. 195/-

ಬೆಲೆ ರೂ. 425/-

ಬೆಲೆ ರೂ.245/-

ಪ್ರಿಸಮ್ ಬುಕ್ಸ್ ಪ್ರೈ. ಲಿ.

# 1865, 32ನೇ ಅಡ್ಡ ರಸ್ತೆ, 10ನೇ ಮುಖ್ಯ ರಸ್ತೆ

ಬನಶಂಕರಿ 2ನೇ ಹಂತ, ಬೆಂಗಳೂರು – 560 070 ದೂ : 2671 41 08

ಡಿದು ಮೊಸರು ಕಡೆಯುವುದು ಒಂದು ಕಲೆ. ಆಗಾಗ ೂಸರ ಗಡಿಗೆಗೆ ಸ್ವಲ್ಪ ನೀರು ಸೇರಿಸುತ್ತ, ಕಡೆಗೋಲು ೇಲೆ ಎತ್ತುತ್ತ, ಬೆಣ್ಣೆ ಬಂದಿದೆಯೇ ಅಂತ ಪರೀಕ್ಷಿಸ ೇಕಾಗಿತ್ತು. ಮೊಸರು ನೀರಾದ ಮಜ್ಜಿಗೆಯಾಗಿ ಬೆಣ್ಣೆಯ ಕಣಗಳು ತೇಲುತ್ತ ಮೇಲೆ ಬರುವುದೇ ಒಂದು ಸೊಗಸು. ಗ ಬಿಸಿನೀರಿನಲ್ಲಿ ಕೈ ಅದ್ದುತ್ತ ಬೆಣ್ಣೆಯನ್ನು ಒಟ್ಟು ಮಾಡಿ, ಂದು ಮುದ್ದೆಯಂತೆ ಮಾಡಿದಾಗ ಒಂಥರಾ ಖುಶಿ. ುಣ್ಣಿಮೆಯ ರಾತ್ರಿ ಗಗನದಲ್ಲಿ ತೇಲುತ್ತ ಚಂದ್ರ ಮೊಸರ ತಲಲ್ಲಿ ತೇಲುವ ಬೆಣ್ಣೆಯಂತೆ ಕವಿಗೆ ಕಂಡದ್ದು ಸಹಜವೇ!

ಈ ಬೆಣ್ಣೆಯಲ್ಲೂ ಎರಡು ರೀತಿ ಇತ್ತು. ಆಕಳ ಹಾಲಿನ ದರೆ ನಸು ಹಳದಿಯ ಬೆಣ್ಣೆ. ಅದನ್ನು ಕಾಸಿದರೂ ನಸು ಳದಿಯದೇ ತುಪ್ಪ ದೊರೆಯುತ್ತಿತ್ತು. ಅದೇ ಎಮ್ಮೆ ಾಲಿನ ಮೊಸರನ್ನು ಕಡೆದಾಗ ಹೆಚ್ಚು ಗಟ್ಟಿಯಾದ ಬಿಳಿ ಣ್ಣೆ, ಅದನ್ನು ಕಾಸಿದಾಗ ಬಿಳಿ, ಬಿಳಿ ತುಪ್ಪ ಸಿಗುತ್ತಿತ್ತು. ಜೆಯಲ್ಲಿ ಹೂವಳ್ಳಿಯ ಅಜ್ಜನ ಮನೆಗೆ ಹೋದರೆ ಈ ಾಲು-ಮೊಸರಿನ ಹೊಸ-ಹೊಸ ಅನುಭವ ಸಿಗುತ್ತಿತ್ತು.

ಹೂವಳ್ಳಿಯ ಅಜ್ಜನ ಮನೆಯ ದರೆಯ ಮೇಲೆ ೂಡ್ಡ ಕೊಟ್ಟಿಗೆಯಿತ್ತು. ಅದರ ತುಂಬ ಆಕಳು, ಎತ್ತು, ಮ್ಮೆ, ಕೋಣ, ಕರುಗಳು ತುಂಬಿದ್ದವು. ಪ್ರತಿ ದಿನ ರಡು-ಮೂರು ಎಮ್ಮೆಗಳು ಹಾಲು ಕರೆಯುತ್ತಿದ್ದವು. ಾಗಾಗಿ ಅಜ್ಜನ ಮನೆಯಲ್ಲಿ ಹಾಲು-ಮೊಸರು-ಬೆಣ್ಣೆ ಮೃದ್ಧವಾಗಿತ್ತು. ಎಮ್ಮೆಯ ಹಾಲು ಕರೆಯಲು ಆಳುಗಳು ದ್ದರು. ಅಮ್ಮನ ಮನೆಯಲ್ಲಿ ಆಕಳು ಕರೆಯುವ ಕೆಲಸ ಹು ಸೂಕ್ಷ್ಮವಾಗಿದ್ದರೆ, ಇಲ್ಲಿ ಎಮ್ಮೆ ಕರೆಯಲು ಶಕ್ತಿವಂತ ಳುಗಳೇ ಬೇಕಿತ್ತು. ಎಮ್ಮೆಯ ಕರುಗಳು ಬದುಕಿ ುಳಿಯುವುದು ಅಪರೂಪವಾಗಿತ್ತು. ಹಾಗಾಗಿ ಹಾಲು ರೆಯುವಾಗ ಒಂದು ಹುಲ್ಲಿನ ಬೊಂಬೆಯನ್ನು ಮಾಡಿ ಮ್ಮೆಯನ್ನು ಮರುಳು ಮಾಡಿ ಹಾಲು ಕರೆಯುತ್ತಿದ್ದರು. ಪ್ಪ ಚರ್ಮದ ಎಮ್ಮೆಗೆ ಹೊಡೆತವೂ ಬೀಳುತ್ತಿದ್ದವು. ಈ ಲ್ಲ ಕಾರಣಗಳಿಂದ ಅಜ್ಜನ ಮನೆಯಲ್ಲಿ ಹಾಲು ಕರೆಯುವ ಶ್ಯ ನನ್ನ ಸೂಕ್ಷ್ಮ ಮನಸ್ಸಿಗೆ ಮುದ ನೀಡುತ್ತಿರಲಿಲ್ಲ.

ಆದರೆ ಚೀನಿ ಮಣ್ಣಿನ ದೊಡ್ಡ ಭರಣಿಯಲ್ಲಿ ಮೊಸರು ಡೆಯುವುದು ಅಜ್ಜಿಯ ಕೆಲಸವಾಗಿತ್ತು. ಬೆಳಿಗ್ಗಿನ ಚಹಾ-ಿಂಡಿಯ ನಂತರ ಅಜ್ಜಿ ಈ ಕೆಲಸಕ್ಕೆ ತಯಾರಾಗುತ್ತಿದ್ದಳು. ಡಿಗೆ ಮನೆಯ ಮೂಲೆಯಲ್ಲಿ ಹುದುಗಿದ ದೊಡ್ಡ ಕಂಬ. ದರ ಮುಂದೆ ದೊಡ್ಡದೊಂದು ಸಿಂಬಿ ಇಟ್ಟು ಅದರ ೇಲೆ ಭರಣಿ ಇಟ್ಟು ದೊಡ್ಡ ಕಡೆಗೋಲಿನಿಂದ ಮೊಸರು ಡೆಯಬೇಕಾಗಿತ್ತು. ಅಮ್ಮ ಮೊಸರು ಕಡೆಯುವಾಗ ಹಾಡು ೇಳುತ್ತಿದ್ದರೆ, ಅಜ್ಜಿ ಮೊಸರು ಕಡೆಯುತ್ತಾ ಮೊಮ್ಮಕ್ಕಳಿಗೆ ೆ ಹೇಳುತ್ತಿದ್ದಳು. ಅಜ್ಜಿ ಅಂದರೆ ಕತೆ, ಕತೆ ಅಂದರೆ ಅಜ್ಜಿ.

ಹಾಲು, ಮೊಸರು, ಬೆಣ್ಣೆ ಅಂದ ಕೂಡಲೇ ಮೊದಲಿಗೆ ನಪಿಗೆ ಬರುತ್ತಿದ್ದುದೇ ಕಳ್ಳ ಕೃಷ್ಣನ ಕಥೆಗಳು. ಕೃಷ್ಣ ಕದ್ದು ಣ್ಣೆ ತಿನ್ನುತ್ತಿದ್ದುದು, ಗೋಪಿಯರ ದೂರು, ಹಾಲು-ೂಸರು ಮಾರುವ ಗೋಪಿಕೆಯರ ಮಡಕೆಗೆ ಅಡಗಿ ತು ಕಲ್ಲು ಹೊಡೆಯುವ ತುಂಟಾಟ, ಎಲ್ಲವೂ ಅಜ್ಜಿ ೂಸರು ಕಡೆಯುವ ಸರ-ಬರದ ಹಿಮ್ಮೇಳದೊಂದಿಗೆ ಡಿ 'ಗೋಕುಲ'ವನ್ನೇ ಸೃಷ್ಟಿಸುತ್ತಿದ್ದವು. ಒಂದೊಂದು ಸ ಕೋತಿ ಬೆಣ್ಣೆ ತಿಂದು, ನಿದ್ರೆ ಮಾಡುತ್ತಿದ್ದ ಮೇಕೆ ಯಿಗೆ ಬೆಣ್ಣೆ ಒರೆಸಿದ ಕಥೆ ಅಥವಾ ಎರಡು ಬೆಕ್ಕುಗಳ ಧ್ಯೆ ಬೆಣ್ಣೆ ಮುದ್ದೆಗಾಗಿ ಜಗಳವಾಗಿ, ಪಾಲು ಮಾಡಿಕೊಡಲು ಬಂದ ಜಾಣ ಕೋತಿ ತಾನೇ ಎಲ್ಲಾ ಬೆಣ್ಣೆ ಮುಕ್ಕಿದ ಕತೆ. ಅಮ್ಮನೂ ನಮ್ಮ ಜೊತೆ ಹಳ್ಳಿಗೆ ಬಂದಿದ್ದರೆ ಅಜ್ಜಿಯ ಕತೆಗಳು ಮುಗಿದು, ಇನ್ನೂ ಬೆಣ್ಣೆ ಬಂದಿರದಿದ್ದರೆ ''ಕಡಗೋಲು ತಾರೆನ್ನ ಚಿನ್ನವೇ, ಮೊಸರೊಡೆದರೆ ಬೆಣ್ಣೆ ಬಾರದು ರನ್ನವೇ'' ಎಂದು ಹಾಡತೊಡಗುತ್ತಿದ್ದಳು. ಅಜ್ಜಿಯ ಕಥೆಯಿಂದ ನಮ್ಮ ಮುಂದೆ ನಂದಗೋಕುಲ ಸೃಷ್ಟಿಯಾಗಿದ್ದರೆ, ಅಮ್ಮನ ಹಾಡಿನಿಂದ ಯಶೋದೆ-ಕೃಷ್ಣರು ನಮ್ಮ ಮುಂದೆ ಪ್ರತ್ಯಕ್ಷರಾಗುತ್ತಿದ್ದರು.

ಅಜ್ಜಿ ಮೊಸರು ಕಡೆದು ಬೆಣ್ಣೆಯ ೪-೬ ಮುದ್ದೆಗಳನ್ನು ಮಾಡಿ ನೀರಿನಿಂದ ತುಂಬಿದ ಪಾತ್ರೆಯಲ್ಲಿ ಹಾಕಿಡುತ್ತಿದ್ದಳು. ಈ ಕಡೆದ ಮಜ್ಜಿಗೆ ನಮಗೆ, ಆಳುಗಳಿಗೆ, ಅತಿಥಿಗಳಿಗೆ ಬಿಸಿಲಿನಿಂದ ದಣಿದು ಬಂದಾಗ ಕುಡಿಯಲು ಅಮೃತದಷ್ಟು ರುಚಿಯಾಗಿರುತ್ತಿತ್ತು. ದಿನವೂ ಬೆಣ್ಣೆ ತುಂಬಿದ ಪಾತ್ರೆಯ ನೀರು ಚೆಲ್ಲಿ ಹೊಸ ನೀರು ಹಾಕಬೇಕಾಗಿತ್ತು. ವಾರದ ನಂತರ ಎಲ್ಲಾ ಬೆಣ್ಣೆ ಮುದ್ದೆಗಳನ್ನು ಚೆನ್ನಾಗಿ ತೊಳೆದು, ತುಪ್ಪ ಮಾಡುವ ಸಂಭ್ರಮ ಪ್ರಾರಂಭವಾಗುತ್ತಿತ್ತು. ದೊಡ್ಡ ಕಡಾಯಿಯೊಂದರಲ್ಲಿ ಬೆಣ್ಣೆ ಕಾಯಿಸಿದಾಗ ಮುದ್ದೆ ನಿಧಾನವಾಗಿ ಕರಗುತ್ತ, ದ್ರವವಾಗಿ ಕೊನೆಗೊಮ್ಮೆ ಸಪ್ಪಳ ಮಾಡುತ್ತ ಗುಳ್ಳೆ ಗುಳ್ಳೆ ಏಳುತ್ತ ಸುಮ್ಮನಾಗುತ್ತಿತ್ತು. ''ಈಗ ತುಪ್ಪವಾಯ್ತು'' ಅಂತ ಚಿಟಿಕೆ ಉಪ್ಪು ಹಾಕಿ, ಅದನ್ನು ಕೆಳಗಿಳಿಸುತ್ತಿದ್ದಳು ಅಜ್ಜಿ.

ತಿಳಿಯಾದ ತುಪ್ಪ ಸ್ವಲ್ಪ ಆರಿದ ಬಳಿಕ ಭರಣಿಗಳಲ್ಲಿ, ಬಾಟ್ಲಿಗಳಲ್ಲಿ ಹಾಕುತ್ತಿದ್ದಳು. ಒಂದು ದಿನದ ನಂತರ ಹರಳು-ಹರಳಾದ ಬಿಳಿ ಬಿಳಿ ತುಪ್ಪ ತಯಾರಾಗುತ್ತಿತ್ತು. ಈ ಮೊದಲೇ ಬೆಣ್ಣೆ ಕಾಯಿಸುವಾಗ ಮನೆ ತುಂಬಾ ಪಸರಿಸಿದ ಪರಿಮಳ ನಮ್ಮನ್ನು ಅಡಿಗೆಮನೆಗೇ ಕಟ್ಟಿ ಹಾಕುತ್ತಿತ್ತು. ತುಪ್ಪ ಕಾಸಿದ ಪಾತ್ರೆಯ ತಳಭಾಗದ ಜಿಡ್ಡಿಗೆ ಸಕ್ಕರೆ ಹಾಕಿ ಮೊಮ್ಮಕ್ಕಳಿಗೆ ತಿನ್ನಲು ಕೊಡುತ್ತಿದ್ದಳು ಅಜ್ಜಿ ಅಥವಾ ಅಂಗಳದಲ್ಲಿ ಅರಳಿದ ಬಿಳಿ ದಾಸವಾಳದ ಹೂವು, ಮೊಗ್ಗಗಳನ್ನು ತಂದು ಈ ಉಳಿದ ತುಪ್ಪದ ಜಿಡ್ಡಿನಲ್ಲಿ ಹುರಿದುಕೊಡುತ್ತಿದ್ದಳು. ತುಂಬ ರುಚಿಯಾದ ಈ ಹುರಿದ ದಾಸವಾಳ, ಆರೋಗ್ಯಕ್ಕೆ ತುಂಬ ಒಳ್ಳೆಯದು ಅಂತ ಅಜ್ಜಿ ಹೇಳುತ್ತಿದ್ದಳು. ಸ್ವಲ್ಪ ತಿಳಿಯಾದ ತುಪ್ಪದಲ್ಲಿ ಹೂಬತ್ತಿಗಳನ್ನು ಅದ್ದಿ, ಒಂದು ಬಾಳೆ ಎಲೆಯ ಮೇಲೆ ಸಾಲಾಗಿ ನಾನು ಅಕ್ಕ ಜೋಡಿಸಿ ಇಡುತ್ತಿದ್ದೆವು. ೨-೩ ಗಂಟೆಯ ನಂತರ ಗಟ್ಟಿಯಾದ ಹೂಬತ್ತಿಗಳನ್ನು ಒಂದು ಡಬ್ಬದಲ್ಲಿ ಹಾಕಿ ದೇವರ ಕೋಣೆಯಲ್ಲಿ ಇಡುತ್ತಿದ್ದೆವು. ಅಜ್ಜ ದಿನವೂ ದೇವರ ಪೂಜೆಗೆ ಎರಡು ಹೂಬತ್ತಿ ಬೆಳಗುತ್ತಿದ್ದ.

ಆ ದಿನ ಮಧ್ಯಾಹ್ನ ಊಟಕ್ಕೆ ಬಿಸಿ ಅನ್ನಕ್ಕೆ ಮೆಂತೆ ಹಿಟ್ಟು, ಹೊಸ ತುಪ್ಪ, ಲಿಂಬೆ ರಸ ಇರುತ್ತಿತ್ತು. ಅಜ್ಜನಿಗಂತೂ ಹೊಸ ತುಪ್ಪವಿದ್ದಾಗ ಸಿಹಿ ಹೋಳಿಗೆ ಇದ್ದರೆ ತುಪ್ಪದಲ್ಲಿ ಅದ್ದಿ ಅದ್ದಿ ತಿನ್ನುತ್ತಿದ್ದ. ಹೋಳಿಗೆ ತಿಂದ ದೋಷ ತುಪ್ಪ ತಿಂದರೆ ಪರಿಹಾರವಾಗುತ್ತದೆ ಎಂದು ನಗುತ್ತಿದ್ದ. ಈಗಿನ ವೈದ್ಯವಿಜ್ಞಾನ ಏನು ಹೇಳುತ್ತದೋ ಗೊತ್ತಿಲ್ಲ. ಅಜ್ಜ ಮಾತ್ರ ೯೦ ವರ್ಷ ಗಟ್ಟಿಮುಟ್ಟಾಗಿಯೇ ಬದುಕಿದ್ದ. ಹೈಸ್ಕೂಲ್‌ನಲ್ಲಿ ಸಂಸ್ಕೃತ ಪಂಡಿತರು ''ಸಾಲ ಮಾಡಿಯಾದರೂ ತುಪ್ಪ ತಿನ್ನಬೇಕು, ಭಸ್ಮೀಭೂತವಾಗುವ ಈ ದೇಹ ತಿರುಗಿ ಬರಲಾರದು'' ಎಂದು ವಿವರಿಸುವಾಗ ಅಜ್ಜನ ನೆನಪಾಗಿ ನಗು ಬರುತ್ತಿತ್ತು.

ಯಾವ ದಿನ ಎಮ್ಮೆ ಅಥವಾ ಆಕಳು ಕರು

## ಸಾದರ ಸ್ವೀಕಾರ

**ಬೆಲ್ಲ ಬುಟ್ಟಿ** ಮಹದೇವಸ್ವಾಮಿ,
ಪಿ. ವೀರಭದ್ರ ನಾಯಿಕಾ ಮತ್ತು ಸಿ. ವೀರೇಂದ್ರ
**ಪುಟ :** ೫೪ **ಬೆಲೆ :** ರೂ. ೨೫

**ಚಂದ್ರಯಾನ** ಪ್ರೊ// ಎಚ್. ಆರ್. ರಾಮಕೃಷ್ಣರಾವ್
**ಪುಟ :** ೩೨ **ಬೆಲೆ :** ರೂ. ೧೦

**ಚಿಟ್ಟೆಗಳು** (ಪದ್ಯಗಳು) ವೀರಭದ್ರ ನಾಯಿಕಾ
**ಪುಟ :** ೩೨ **ಬೆಲೆ :** ರೂ. ೧೦

**ಪ್ರವಾಸಿಗರಿಗೆ ಒಂದು ಪತ್ರ** ಶಿವನಂಜು, ಸಿ. ವೀರೇಂದ್ರ
**ಪುಟ :** ೫೮ **ಬೆಲೆ :** ರೂ. ೨೫

**ಬಿಗ್ ಬ್ಯಾಂಗ್ !?** ಪ್ರೊ// ಎಚ್. ಆರ್. ರಾಮಕೃಷ್ಣರಾವ್
**ಪುಟ :** ೩೬ **ಬೆಲೆ :** ರೂ. ೧೦

ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಭಾರತ ಜ್ಞಾನ ವಿಜ್ಞಾನ ಸಮಿತಿ,** ಭಾರತೀಯ ವಿಜ್ಞಾನ ಸಂಸ್ಥೆಯ ಆವರಣ, ಬೆಂಗಳೂರು - ೫೬೦ ೦೧೨

**ಒಂದು ಚೂರು ಆಕಾಶ** (ಕವನ ಸಂಕಲನ)
ಡಾ// ಕೆ. ಸರೋಜಾ
**ಪುಟ :** ೬೦ **ಬೆಲೆ :** ರೂ. ೩೦
**ಅವನಿ ರಸಿಕರ ರಂಗ ಪ್ರಕಾಶನ,** ನಾರಾಯಣಪುರ, ಧಾರವಾಡ-೮

**ಅನುಭವ ಮಂಟಪ ಪ್ರಶಸ್ತಿ ಪುರಸ್ಕೃತರು**
ಮಾಣಿಕ ಆರ್. ಭುರೆ
**ಪುಟ :** ೩೬ **ಬೆಲೆ :** ರೂ. ೩೦
**ಶ್ರಮಜೀವಿ ಪ್ರಕಾಶನ,** ಬಸವಕಲ್ಯಾಣ, ಬೀದರ ಜಿಲ್ಲೆ

**ಒಂದು ಹಿಡಿ ಮುತ್ತು** (ಸಂದರ್ಶನಗಳು)
ವಿಜಯಕಾಂತ ಪಾಟೀಲ
**ಪುಟ :** ೬೦ **ಬೆಲೆ :** ರೂ. ೪೦
**ಸುಮುಖ ಪ್ರಕಾಶನ,** ೧೭೪೩/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಬೆಂಗಳೂರು - ೨೩

**ನೆನಪಿನ ಮೆಲುಕು** (ಪದ್ಯ ಸಂಕಲನ) ಎಂ. ಎಸ್. ಭಾಸ್ಕರ್
**ಪುಟ :** ೭೨ **ಬೆಲೆ :** ರೂ. ೫೦
**ರಾಘವ ಪ್ರಕಾಶನ,** 'ಅರ್ಚನ', ೧ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಹೊಸಕೆಂಪೇಗೌಡ ಬಡಾವಣೆ, ಕತ್ರಿಗುಪ್ಪೆ, ಬನಶಂಕರಿ ೩ನೇಹಂತ, ಬೆಂಗಳೂರು-೮೫

**ಅನುದಾನರಹಿತ ಪ್ರಾಥಮಿಕ/ಪ್ರೌಢ ಶಿಕ್ಷಣ ಸಂಸ್ಥೆಗಳು – ಒಂದು ಒಳನೋಟ** ಎಸ್. ಜಿ. ಕೃಷ್ಣ
**ಪುಟ :** ೬೪ **ಬೆಲೆ :** ರೂ. ೪೦
**ಚೈತನ್ಯ ಅಭಿವ್ಯಕ್ತಿ ವೇದಿಕೆ,**
ಪೆರ್ಲಂಪಾಡಿ-೫೭೪೨೧೨, ಪುತ್ತೂರು, ದಕ್ಷಿಣ ಕನ್ನಡ

**ಶರೀರ ಸೌಂದರ್ಯ v/s ಆತ್ಮ ಸೌಂದರ್ಯ**
ಡಾ// ಶಿವಮೂರ್ತಿ ಶಿವಾಚಾರ್ಯ
ಮಹಾಸ್ವಾಮಿಗಳವರು, ಸಿರಿಗೆರೆ
**ಪುಟ :** ೧೩೧ **ಬೆಲೆ :** ರೂ. ೩೦
**ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ,**
ಸಿರಿಗೆರೆ - ೫೭೭ ೫೪೧, ಚಿತ್ರದುರ್ಗ ಜಿಲ್ಲೆ

**ವಿಜ್ಞಾನಿಗಳ ವಿಸ್ಮಯ ಜೀವನ** (ನುಡಿಚಿತ್ರಗಳ ಸಂಕಲನ)
ಹುರುಕಡ್ಲಿ ಶಿವಕುಮಾರ
**ಪುಟ :** ೯೮ **ಬೆಲೆ :** ರೂ. ೫೦
**ವಾಸ್ತವ ಗ್ರೂಪ್ಸ್,** ಹಳೇ ಹಗರಿಬೊಮ್ಮನಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ

ಹಾಕಿದೆಯೋ ಆ ದಿನವನ್ನು 'ಜನ್ನೆ' ಎಂದು ಮೊಸರು ಕಡೆಯುತ್ತಿರಲಿಲ್ಲ. 'ಜನ್ನೆ' ಎಂದರೆ ಕರು ಜನನವಾದ ದಿನ ಅಂತಿರಬೇಕು. ಕರು ಹಾಕಿದ ನಾಲ್ಕಾರು ದಿನವಂತೂ ಗಿಣ್ಣು ತಿನ್ನುವುದೇ ಕೆಲಸ. ಗಿಣ್ಣದ ಹಾಲಿಗೆ ಬೆಲ್ಲ ಕದಡಿ ಏಲಕ್ಕಿ ಪುಡಿ ಹಾಕಿ, ಡಬ್ಬದಲ್ಲಿ ಮುಚ್ಚಿ ಆವಿಯಲ್ಲಿ ಬೇಯಿಸಿದಾಗ ಇಡ್ಲಿಯಂತಹ ಗಿಣ್ಣು ತಯಾರಾಗುತ್ತಿತ್ತು. ಮೊದಲು ಒಂದೆರಡು ದಿನ ತುಂಬ ಗಟ್ಟಿಯಾಗಿರುತ್ತಿದ್ದ ಗಿಣ್ಣು ನಂತರ ತೆಳುವಾಗುತ್ತ ಬರುತ್ತಿತ್ತು. ಎಂಟು ದಿನದ ನಂತರ ಗಿಣ್ಣು ಮಾಡುತ್ತಿರಲಿಲ್ಲ. ಗಿಣ್ಣದ ಹಾಲು ಬಹಳವಿದ್ದರೆ ತುಂಬ ಹೊತ್ತು ಬೆಲ್ಲ ಹಾಕಿ ಕಾಯಿಸಿ ಗಟ್ಟಿ ಮಾಡಿ ಪುಡಿ ಗಿಣ್ಣ ಮಾಡುತ್ತಿದ್ದರು. ಈಗಿನ ಮಕ್ಕಳಿಗೆ ಕ್ಯಾಡ್‌ಬರಿಸ್ ಆದರೆ ನಮಗೆ ಪುಡಿ ಗಿಣ್ಣವಾಗಿತ್ತು.




ಹಳ್ಳಿಗಳಲ್ಲಿ ಅದರಲ್ಲೂ ಹವ್ಯಕರಲ್ಲಿ ಹಾಲು-ಮೊಸರು ತುಂಬ ಬಳಸುತ್ತಾರೆ. ಹಸಿ ತಂಬುಳಿ, ಪಳದ್ಯ, ಮಜ್ಜಿಗೆ ಮೆಣಸು,... ಹೀಗೆ ಮಜ್ಜಿಗೆ ನಾನಾ ರೀತಿ ಉಪಯೋಗವಾಗುತ್ತಿತ್ತು. ಮನೆಯಲ್ಲಿ ಮೊಸರು ಬಹಳ ಇದ್ದಾಗ ಶ್ರೀಖಂಡದ ತಯಾರಿನಡೆಯುತ್ತಿತ್ತು. ಮೊದಲು ಒಂದು ಸ್ವಚ್ಛವಾದ ಬಿಳಿಯ ನೀರು ಪಂಚೆಯಲ್ಲಿ ಮೊಸರು ಕಟ್ಟಿ ಅದನ್ನು ಒಂದು ಗೂಟಕ್ಕೆ ನೇತು ಹಾಕುತ್ತಿದ್ದರು. ೩-೪ ಗಂಟೆಯಲ್ಲಿ ಮೊಸರಿನ ನೀರೆಲ್ಲಾ ಬಸಿದು ಹೋಗಿ ಗಟ್ಟಿಮೊಸರು ಮಾತ್ರ ಉಳಿಯುತ್ತಿತ್ತು. ನಂತರ ಅಮ್ಮ ಒಂದು ಅಗಲ ಬಾಯಿಯ ಪಾತ್ರೆಗೆ ತೆಳು ಬಟ್ಟೆಯನ್ನು ಕಟ್ಟುತ್ತಿದ್ದಳು. ಅದರ ಮೇಲೆ ಒಂದು ಸೌಟು ಗಟ್ಟಿ ಮೊಸರು, ಒಂದು ಸೌಟು ಸಕ್ಕರೆ ಹಾಕಿ ಸೌಟಿನ ಹಿಂಭಾಗದಿಂದ ತಿಕ್ಕುತ್ತಿದ್ದಳು. ಮೊಸರು-ಸಕ್ಕರೆಯ ಮಿಶ್ರಣವಾಗಿ ಹನಿ-ಹನಿಯಾಗಿ ಪಾತ್ರೆಗೆ ಬೀಳುತ್ತಿತ್ತು. ತುಂಬ ಹೊತ್ತು ಈ ಕೆಲಸವಾದ ಮೇಲೆ ಪಾತ್ರೆಗೆ ಕಟ್ಟಿದ ಬಟ್ಟೆ ಬಿಚ್ಚಿದರೆ ತುಂಬ ನಯವಾದ ಸಿಹಿ-ಸಿಹಿ ಮೊಸರು ಇರುತ್ತಿತ್ತು. ಅದಕ್ಕೆ ತೇಯ್ದ ಜಾಯಿಕಾಯಿ, ಹುರಿದ ಗೋಡಂಬಿ, ದ್ರಾಕ್ಷಿ ಸೇರಿಸಿದರೆ ಶ್ರೀಖಂಡ ರೆಡಿಯಾಗಿ ಇರುತ್ತಿತ್ತು. ಜಾಯಿಕಾಯಿ ರಸ ಸೇರಿಸಿದರೆ ನಿದ್ರೆ ಜಾಸ್ತಿ ಬರುತ್ತದೆ ಎಂದು ಕೆಲಬಾರಿ ಅದರ ಬದಲು ಹಾಲಿನಲ್ಲಿ ಅರೆದ ಕೇಸರಿ ಸೇರಿಸುತ್ತಿದ್ದರು. ಹೇಗಿದ್ದರೂ ಶ್ರೀಖಂಡ ಬಲುರುಚಿ. ಜೊತೆಗೆ ಪೂರಿ ಮಾಡಿಬಿಟ್ಟರೆ ಅಂದು ಅಜ್ಜನ ಮನೆಯಲ್ಲಿ ದೊಡ್ಡ ಹಬ್ಬದ ವಾತಾವರಣ.

ಹುಳಿ ಮೊಸರು ಜಾಸ್ತಿ ಉಳಿದರೂ ಅದು ಹಾಳಾಗುತ್ತಿರಲಿಲ್ಲ. ಬೆಳಗಿನ ತಿಂಡಿಗೆ ಮೊಸರು ಹಾಕಿ ಅಕ್ಕಿಹಿಟ್ಟಿನಿಂದ ಮಾಡುವ ತಾಲಿಪಟ್ಟು ಮಾಡುತ್ತಿದ್ದರು. ಮತ್ತೂ ಹೆಚ್ಚಾದರೆ ಹಿತ್ತಲಿನ ಕರಿಬೇವಿನ ಬುಡಕ್ಕೆ ಸುರಿದುಬಿಟ್ಟರೆ ಗಿಡ ಚೆನ್ನಾಗಿ ಬೆಳೆಯುತ್ತಿತ್ತು. ಇನ್ನೂ ತುಂಬಾ ಮಜ್ಜಿಗೆ ಉಳಿದರೆ ಹಸು-ಎತ್ತುಗಳ ಅಕ್ಕಚ್ಚಿಗೆ ಸುರಿದುಬಿಡುತ್ತಿದ್ದರು. ಒಂದು ದಿನವೂ ಹಾಲು-ಮೊಸರು ಇಲ್ಲದೇ ಕಳೆಯುವುದು ಸಾಧ್ಯವೇ ಇರಲಿಲ್ಲ. ಬೆಳಿಗ್ಗೆ ಚಹಾದಿಂದ ಪ್ರಾರಂಭಿಸಿ ರಾತ್ರಿ ಮಲಗುವಾಗ ಒಂದು ಕಪ್ ಬಿಸಿ ಹಾಲು ಕುಡಿದು ಮಲಗಿದಾಗಲೇ ತೃಪ್ತಿ. ಅಜ್ಜನ ಮನೆಗೆ ಹೋದಾಗ ಎಮ್ಮೆ ಹಾಲು, ಮೊಸರು, ಬಿಳಿ ತುಪ್ಪ ತಿನ್ನುತ್ತ, ಅಮ್ಮನ ಮನೆಯಲ್ಲಿ ಆಕಳ ಹಾಲು ತುಪ್ಪ ಸೇರುತ್ತಿರಲಿಲ್ಲ. ಎಮ್ಮೆ ಹಾಲು-ಮೊಸರು ತುಪ್ಪ ತುಂಬ ಬಿಳಿ, ಅಷ್ಟು ರುಚಿಯಾಗಿರುತ್ತಿರಲಿಲ್ಲ. ಆದರೆ ಅಮ್ಮ ''ಆಕಳ ಹಾಲು ಕುಡಿದರೆ ಬುದ್ಧಿವಂತರಾಗುತ್ತೀರಿ, ಎಮ್ಮೆ ಹಾಲು ದಿನಾ ಕುಡಿದರೆ ಎಮ್ಮೆ ಚರ್ಮದವರಾಗುತ್ತೀರಿ'' ಎಂದು ನಂಬಿಸುತ್ತಿದ್ದಳು. ಅದಾಗಲೇ ಹೈಸ್ಕೂಲ್‌ನಲ್ಲಿ ಕನ್ನಡ ಪಂಡಿತರು ಕೃಷ್ಣನ ಬಾಲಲೀಲೆಗಳನ್ನು ವರ್ಣಿಸುತ್ತ, ರುದ್ರಭಟನ ಜಗನ್ನಾಥ ವಿಜಯದ ಪದ್ಯ

*ಹೇಮಘಂಟಿಕೆಯೆಂಬ ಗಣಿಲೆಯ ಪಾಲಿದೆ*
*ನೀ ಕುಡಿಯಲ್ಕೆ ನಿನ್ನ ಚಂಡಿಕೆ ಬೆಳೆದಪ್ಪುದೆಂದು*
*ಅಬಲೆ ನಂಬಿಸೆ, ಪಾಲಗುಡಿದೀಗಳಬ್ಬೆ*
*ಎನ್ನ ಚಂಡಿಕೆ ಉದ್ದಮಾದುದೆನಿತು*
*ಬೆಸಗೊಳ್ಳ ಮುಕುಂಡನೊಪ್ಪಿದಂ*

ಎಂದು ಪಾಠ ಮಾಡುವಾಗ ಅಮ್ಮನ ಮಾತುಗಳೇ ನೆನಪಿಗೆ ಬರುತ್ತಿದ್ದವು.

ಹೈಸ್ಕೂಲ್ ದಾಟಿ ಕಾಲೇಜಿಗೆ ಬಂದೆವು. ಕಾಲೇಜಿನ ಕನ್ನಡ ಉಪನ್ಯಾಸಕರು ಕುವೆಂಪು ಅವರ ಬೃಂದಾವನಕೆ ಹಾಲನು ಮಾರಲು ಹೋಗುವ ಗೋಪಿಯರ ಹಾಡನ್ನು ವಿವರಿಸುತ್ತಿದ್ದರು. ''ಹಾಲನು ಮಾರುವ ನೆವದಿಂದ ಹರಿಯನ್ನೇ ಕದಿಯುವ'' ಪರಿ ಹಾಲಿನ ಬಗ್ಗೆ ಉನ್ನತ ಭಾವವನ್ನು ಪ್ರಚೋದಿಸಿತ್ತು. ಕ್ಷೀರಸಾಗರವನ್ನು ಸುರಾಸುರರು ಕಡೆದರಂತೆ. ಮಂದರಗಿರಿಯೇ ಕಡೆಗೋಲು, ವಾಸುಕಿಯೇ ಹಗ್ಗ, ತಲೆಯನ್ನು ಅಸುರರು, ಬಾಲವನ್ನು ಸುರರು ಹಿಡಿದು ಕಡದೇ ಕಡೆದರು. ಈ ಸಮುದ್ರ ಮಂಥನದಲ್ಲಿ ಅಮೃತ ಬಂತು, ಹಾಲಾಹಲವೂ ಬಂತು, ಅಮೃತಕ್ಕಾಗಿ ಸುರಾಸುರರಲ್ಲಿ ಗಲಾಟೆ ಪ್ರಾರಂಭವಾಯ್ತು. ಹಾಲಾಹಲವನ್ನು ಹರ ನುಂಗಿ ನೀಲಕಂಠನಾದ, ಲೋಕಕಂಟಕವನ್ನು ನಿವಾರಿಸಿದ. ವಿಷ್ಣು ಮೋಹಿನಿಯಾಗಿ ಸುರರಿಗೆ ಅಮೃತ ಸಿಗುವಂತೆ ಮಾಡಿದ. ಮೋಸದಿಂದ ಅಮೃತ ಪಡೆಯಲು ಬಂದ ಅಸುರನನ್ನು ಗುರುತು ಹಿಡಿದರು ಸೂರ್ಯ ಚಂದ್ರರು. ಹರಿಯ ಚಕ್ರ ಅಸುರನ ಕತ್ತು ಕತ್ತರಿಸಿತು. ಅದಾಗಲೇ ಅಮೃತಪಾನ ಮಾಡಿದ ಅಸುರನ ರುಂಡ-ಮುಂಡ ರಾಹು-ಕೇತುಗಳಾದವು. ಆಗಾಗ ಸೂರ್ಯ-ಚಂದ್ರರಿಗೆ ಗ್ರಹಣ ಹಿಡಿಸಿ ಸೇಡು ತೀರಿಸಿಕೊಳ್ಳುತ್ತಾರಂತೆ. ಎಂಥ ಅದ್ಭುತ ರಮ್ಯ ಕಥಾನಕ ಅಲ್ಲವೇ ?

ಮಾತು-ಮನಸ್ಸು ಹಾಲಿನಂತೆ! ಸ್ವಲ್ಪ ಹಾಳಾದರೂ ಕೆಡುತ್ತದೆ. ಹಾಲಾಹಲ ಸೃಷ್ಟಿಯಾಗುತ್ತದೆ. ಬೇಂದ್ರೆಯಂಥ ಗಾರುಡಿಗರ ಮಾತು, ಮಾತು ಮಥಿಸಿ ಬಂದಾಗ ನವನೀತ ಹುಟ್ಟುತ್ತದೆ. ಅರೆ ಬೆಂದವರ ಮಾತು, ನವ ನಾತ ಬೀರುತ್ತದೆ. ಬಾಳಿನಲ್ಲಿ ನ್ಯಾಯ-ಅನ್ಯಾಯ, ಸತ್ಯ-ಅಸತ್ಯ, ಒಳ್ಳೆಯದು-ಕೆಟ್ಟದು ಎರಡೂ ಇವೆ. ಹಂಸಕ್ಷೀರ ನ್ಯಾಯದಂತೆ ಹಾಲನ್ನು ಮಾತ್ರ ಹೀರುವ ಪರಮಹಂಸರು ನಾವಾಗುವಂತೆ ಪ್ರಯತ್ನಿಸುವುದರಲ್ಲೇ ಜೀವನದ ಸಾರ್ಥಕತೆ ಅಡಗಿದೆ. ಮನಸ್ಸಿನಲ್ಲಿ ಮಂಥನ ನಡದೇ ಇದೆ.

ವಿಜಯಾ ಶ್ರೀಧರ್
W/O ಡಾ|| ಕೆ. ಆರ್. ಶ್ರೀಧರ್, ೧ನೇ ಮುಖ್ಯ ರಸ್ತೆ, ರಾಜೇಂದ್ರ ನಗರ, ಶಿವಮೊಗ್ಗ - ೫೭೭ ೨೦೪

ರಾಜ್ ವೈಚಾರಿಕ ವೇದಿಕೆ, ಬೆಂಗಳೂರು ಪ್ರಕಾಶನದ
ವಿಚಾರವಾದಿ ಶ್ರೀ ಎ. ಎಸ್. ನಟರಾಜ್ ಅವರ

**ದೇವರು : ಸಮಗ್ರ ಚಿಂತನೆ**

ಜಗತ್ತಿನ ದೇವರು, ಧರ್ಮ, ದೈವತ್ವ, ಆರಾಧನೆ, ತತ್ವ ದರ್ಶನಗಳ ಪರಿಚಯ, ವೈಜ್ಞಾನಿಕ ವಿಮರ್ಶಾ ಗ್ರಂಥ.

ಭೌತ ಸಂಶೋಧಕ ನಿರೂಪಣೆ, ಪ್ರಾಮಾಣ್ಯಗಳಿಂದ ಸಮರ್ಥ ಪ್ರತಿಪಾದನೆ, ವೈಜ್ಞಾನಿಕ, ವೈಚಾರಿಕ, ತಾರ್ಕಿಕ, ವಸ್ತುನಿಷ್ಠ ವಿಮರ್ಶೆಯಿಂದ ಸ್ಪಷ್ಟವಾದ ಚಿತ್ರಣಗಳನ್ನು ಅದ್ಭುತ, ಅಪೂರ್ವ, ಅನನ್ಯವಾಗಿ ಓದುಗರ ಮುಂದಿಡುವುದೇ ಈ ಗ್ರಂಥದ ಉದ್ದೇಶವಾಗಿದೆ. ಓದಿದಷ್ಟೂ ವಿಷಯಗಳ, ವಿಚಾರಗಳ, ತಾರ್ಕಿಕ, ವೈಚಾರಿಕ, ವೈಜ್ಞಾನಿಕ ಸತ್ಯದ ಆಳಕ್ಕೆ ಕೊಂಡೊಯ್ಯುವುದೇ ಈ ಕೃತಿಯ ಹಿರಿಮೆ ಮತ್ತು ವೈಶಿಷ್ಟ್ಯವಾಗಿದೆ.

'ಸಂಶೋಧನೆಯ ಆಳ, ವಿದ್ವತ್ತಿನ ಪ್ರಖರತೆ, ತೀಕ್ಷ್ಣ ವಿಶ್ಲೇಷಣೆಯ ಅಪರೂಪದ ಪುಸ್ತಕ' ಎಂದು ವಿಮರ್ಶಕರಿಂದ ಮೆಚ್ಚುಗೆ ಪಡೆದ ಗ್ರಂಥ.

**ಪುಟಗಳು : 408 + 16** **ಬೆಲೆ : ರೂ. 250**

**ಜ್ಯೋತಿಷಕ್ಕೆ ಸವಾಲು**

ಸಮಗ್ರ ಜೋತಿಷ, ವಾಸ್ತು, ಆತ್ಮ ಪುನರ್ಜನ್ಮ ಪೂರ್ವಕರ್ಮ, ಭೂತಪ್ರೇತಗಳ ಮೇಲಿನ ಸತ್ಯಶೋಧಕ, ವೈಜ್ಞಾನಿಕ, ವೈಚಾರಿಕ, ತಾರ್ಕಿಕ, ಶಾಸ್ತ್ರೀಯ ವಿಮರ್ಶಾ ಗ್ರಂಥ.

**ಪುಟಗಳು : 408 + 8** **ಬೆಲೆ : ರೂ. 250**




ಈ ಎರಡೂ ಪುಸ್ತಕಗಳು
ನವಕರ್ನಾಟಕ ಪಬ್ಲಿಕೇಷನ್ಸ್‌ನ
ಎಲ್ಲ ಪುಸ್ತಕ ಮಳಿಗೆ
ಹಾಗೂ ಪ್ರದರ್ಶನಗಳಲ್ಲಿ
ದೊರೆಯುತ್ತವೆ



# ಆದರ್ಶ ಬದುಕಿನ ಜನತಾ ಸಾಹಿತಿ ದಿನಕರ ದೇಸಾಯಿ

■ ಮ. ಶ್ರೀ. ಮುರಳಿಕೃಷ್ಣ

**ಈ** ವರ್ಷ ಕನ್ನಡದ ಕೆಲವು ಹೆಸರಾಂತ ಸಾಹಿತಿಗಳ ಶತಾಬ್ದಿಯನ್ನು ಕಾಣುತ್ತಿದೆ. ಅಂತಹ ಧೀಮಂತ ಚೇತನ ಲ್ಲಿ ದಿನಕರ ದೇಸಾಯಿಯವರೂ ಸೇರಿದ್ದಾರೆ. ಕವಿ, ಹಗಾರ, ಪ್ರತಿಕೋದ್ಯಮಿ, ರೈತ-ಕಾರ್ಮಿಕರ ನಾಯಕ, ಪ್ರತಿನಿಧಿ, ಶಿಕ್ಷಣ ತಜ್ಞರಾಗಿ ಅವರು ಸಾರ್ವಜನಿಕ ವನಕ್ಕೆ ಹಲವು ಗಮನಾರ್ಹ ಕೊಡುಗೆಗಳನ್ನು ಡಿದರು. ನುಡಿದಂತೆ ನಡೆದರು. ಅನುಕರಣೀಯ ುಕಿಗೆ ಉತ್ತಮ ಉದಾಹರಣೆಯಾದರು.

ದಿನಕರ ದೇಸಾಯಿ ಸೆಪ್ಟೆಂಬರ್ ೧೦, ೧೯೦೯ರಂದು ತ್ತರ ಕನ್ನಡ ಜಿಲ್ಲೆಯ ಅಂಕೋಲದ ಸಮೀಪದ ನ್ನೆಕೇರಿಯಲ್ಲಿ ಜನಿಸಿದರು. ಅವರ ತಂದೆ ದತ್ತಾತ್ರೇಯ ಬ ದೇಸಾಯಿ ಒಬ್ಬ ಆದರ್ಶ ಶಿಕ್ಷಕರೆಂದು ಗುರುತಿಸ ದ್ದರು. ಒಂಬತ್ತು ವರ್ಷದ ಪ್ರಾಯದಲ್ಲೇ ತಮ್ಮ ಯಿ ಅಂಬಿಕಾರನ್ನು ಕಳೆದುಕೊಂಡರು. ಪ್ರಾಥಮಿಕ ಣವನ್ನು ಅಲಗೇರಿ, ಮಾಧ್ಯಮಿಕ ಶಿಕ್ಷಣವನ್ನು ಕೋಲ ಹಾಗೂ ಪ್ರೌಢಶಾಲಾ ಶಿಕ್ಷಣವನ್ನು ವಾರದಲ್ಲಿ ಮುಗಿಸಿದರು. ಇಂಟರ್‌ಮೀಡಿಯಟ್ ಪಡೆಯಲು ಬೆಂಗಳೂರಿನತ್ತ ಪಯಣ ಬೆಳೆಸಿದರು. ರ ಬಿ.ಎ. ಓದು ಮೈಸೂರಿನಲ್ಲಿ ಸಾಗಿತು. ಕನ್ನಡ, ್ಯಶಾಸ್ತ್ರ ಹಾಗೂ ಚರಿತ್ರೆಯನ್ನು ಮುಖ್ಯ ವಿಷಯ ನ್ನಾಗಿ ಆರಿಸಿಕೊಂಡಿದ್ದರು. ಆ ಅವಧಿಯಲ್ಲಿ ರಿಗೆ ಗುರುಗಳಾಗಿದ್ದವರು ಟಿ. ಎಸ್. ವೆಂಕಣ್ಣಯ್ಯ, ಸೀತಾರಾಮಯ್ಯ, ಬಿ. ಎಂ. ಶ್ರೀಕಂಠಯ್ಯರಂಥ ಂತ್ಯ ದಿಗ್ಗಜರು. ಅಂತಿಮ ಬಿ.ಎ. ಪರೀಕ್ಷೆಯಲ್ಲಿ ವಿದ್ಯಾನಿಲಯಕ್ಕೇ ಪ್ರಥಮರಾಗಿ, ಇತಿಹಾಸದ ಯದಲ್ಲಿ ಪ್ರಖ್ಯಾತ ಕ್ಯಾಂಡಿ ಪಾರಿತೋಷಕವನ್ನು ದರು. ನಂತರ ಮುಂಬೈಗೆ ಸ್ಥಳಾಂತರಿಸಿ, ಅಲ್ಲಿ ಎಂ.ಎ. ಗೂ ಎಲ್‌ಎಲ್.ಬಿ. ಪದವಿ ಶಿಕ್ಷಣವನ್ನು ಮೂರು ್ಷಗಳ ಅವಧಿಯಲ್ಲಿ ಮುಗಿಸಿದರು. ತಮ್ಮ ಉನ್ನತ ಸಂಗದ ಸಮಯದಲ್ಲಿ 'ಕಲ್ಯಾಣ ಚಾಲುಕ್ಯರ ೀನದ ಮಹಾಮಂಡಲೇಶ್ವರರು' ಎಂಬ ವಿಷಯದ ಗೆ ಮಹಾ ಪ್ರಬಂಧವನ್ನು ಮಂಡಿಸಿದರು. ಸಾಹಿತ್ಯ, ಹಾಸ ಇತ್ಯಾದಿಗಳಲ್ಲಿ ಆಸಕ್ತಿಯಿದ್ದರೂ, ಅವರು ್ಯಾಪನ ವೃತ್ತಿಗೆ ಪದಾರ್ಪಣೆ ಮಾಡಲಿಲ್ಲ. ನಂತರ ಗಾವಿಯಲ್ಲಿ ವಕೀಲಿ ವೃತ್ತಿಯಲ್ಲಿ ತೊಡಗಿದರು.

ಅವರು ಮುಂಬೈನಲ್ಲಿ ಒಮ್ಮೆ ಪತ್ರಿಕೆ ಓದುತ್ತಿದ್ದಾಗ, ರತ ಸೇವಕ ಸಮಾಜ ಪೂರ್ಣಾವಧಿ ಕಾರ್ಯಕರ್ತ ಬಯಸುವ ತರುಣರಿಗಾಗಿ ಕರೆ ನೀಡಿದ ಟನೆಯನ್ನು ಕಂಡರು. ಆ ಕಾಲದಲ್ಲೇ ಅವರಲ್ಲಿ ಾಜ ಸೇವಾಸಕ್ತಿ ಅಂಕುರಿಸಿತ್ತು. ಅವರು ಈ ದಿಶೆಯಲ್ಲಿ ನ್ನಡೆಯಲು ನಿರ್ಧರಿಸಿ ಭಾರತ ಸೇವಕ ಾಜದಲ್ಲಿ ಖ್ಯಾತನಾಮರಾಗಿದ್ದ ಹಾಗೂ ಕಾರ್ಮಿಕ ಖಂಡರಾಗಿದ್ದ ಎನ್. ಎಂ. ಜೋಶಿಯವರನ್ನು ಟಿ ಮಾಡಿದರು. ಸೆಂಟ್ರಲ್ ಅಸೆಂಬ್ಲಿಯ ಸದಸ್ಯ ಿದ್ದ ಜೋಶಿ, ದೇಸಾಯಿಯವರನ್ನು ದೆಹಲಿಗೆ ದುಕೊಂಡು ಹೋದರು. ಅಲ್ಲಿ ದೇಸಾಯಿ ಂಬ್ಲಿಯ ಆಗು-ಹೋಗುಗಳ ಕುರಿತು ವರದಿ ಡಿದರು. ಅವು 'ಅಸೆಂಬ್ಲಿಯ ಗ್ಯಾಲರಿಯಿಂದ' ಬ ಶೀರ್ಷಿಕೆಯಡಿ ಹುಬ್ಬಳ್ಳಿಯ ಸಂಯುಕ್ತ ್ಣಟಕ ದೈನಿಕದಲ್ಲಿ ಪ್ರಕಟವಾಯಿತು. ಹೀಗೆ



ಪ್ರಾರಂಭವಾಯಿತು ಅವರ ಪತ್ರಕರ್ತನ ಜೀವನ. ಅವರು ೧೯೩೫ರಲ್ಲಿ ಭಾರತ ಸೇವಕ ಸಮಾಜದ ಪೂರ್ಣಾವಧಿ ಕಾರ್ಯಕರ್ತರಾದರು.

ನಂತರ ಜೋಶಿಯವರು ದೇಸಾಯಿಯವರನ್ನು ಗೋಕಾಕ್‌ಗೆ ಕಳುಹಿಸಿದರು. ಅಲ್ಲಿ ಗಿರಣಿ ಕಾರ್ಮಿಕರು ಒಂದು ಬೃಹತ್ ಆಂದೋಲನದಲ್ಲಿ ನಿರತರಾಗಿದ್ದರು. ಆ ಹೋರಾಟದಲ್ಲಿ ಜೋಶಿಯವರ ಪ್ರತಿನಿಧಿಯಾಗಿ ದೇಸಾಯಿ ಕಾರ್ಮಿಕರ ಬವಣೆಗಳನ್ನು ಹತ್ತಿರದಿಂದ ಕಂಡುಕೊಂಡರು. ತರುವಾಯ, ಮುಂಬೈಗೆ ಹಿಂದಿರುಗಿ ಒಬ್ಬ ಕಾರ್ಮಿಕ ರಂಗದ ಕಾರ್ಯಕರ್ತನಾಗಿ ಸಾರ್ವಜನಿಕ ಜೀವನವನ್ನು ಪ್ರವೇಶಿಸಿದರು. ಕಡಲ ಕೆಲಸಗಾರರನ್ನು ಸಂಘಟಿಸಿದರು. ಅಖಿಲ ಭಾರತ ಮಟ್ಟದ ಒಂದು ಸಂಘಟನೆಗೆ ನಾಂದಿ ಹಾಡಿದರು. ಶ್ರಮವಹಿಸಿ ಸಂಘವನ್ನು ಕಟ್ಟಿ, ಅದರ ಪ್ರತಿನಿಧಿಯಾಗಿ ಅಂತರರಾಷ್ಟ್ರೀಯ ವೇದಿಕೆಗಳಲ್ಲಿ ಕಡಲ ನೌಕರರ ಧ್ವನಿಯಾದರು. ಇವೆಲ್ಲದರ ಅನುಭವಗಳನ್ನು 'ನಾ ಕಂಡ ಪಡುವಣ' ಎಂಬ ಅವರ ಕೃತಿಯಲ್ಲಿ ಕಾಣಬಹುದು.

ಅವರು ಮುಂಬೈಯಲ್ಲಿ ನೆಲೆಸಿದರೂ, ತಮ್ಮ ಬೇರುಗಳನ್ನು ಮರೆಯಲಿಲ್ಲ. ಆಗ ಉತ್ತರ ಕನ್ನಡ ಜಿಲ್ಲೆಯಲ್ಲಿ ಭೂಮಾಲೀಕರು ಸಿಂಹಸ್ವಪ್ನರಾಗಿದ್ದರು. ರೈತರ ಜೀವನ ದುಸ್ತರವಾಗಿತ್ತು. ಹಾಲಕ್ಕಿ ಒಕ್ಕಲಿಗರಂತೂ ಜೀತ ಸೇವಕರಂತೆ ಬಾಳನ್ನು ನಡೆಸಿದ್ದರು. ದೇಸಾಯಿ ರೈತಾಪಿ ಜನರ ಶೋಷಣೆಯ ವಿರುದ್ಧ ತಮ್ಮ ದನಿ ಎತ್ತಿದರು. ಹಳ್ಳಿಗಳಿಗೆ ಪಾದ ಬೆಳೆಸಿದರು. ತಮ್ಮಲ್ಲಿದ್ದ ಕಾವ್ಯಾಭಿವ್ಯಕ್ತಿ ಶಕ್ತಿಯನ್ನು ಉಳಿಸಿ ಹಲವು ಕವನಗಳನ್ನು ಹಾಡುಗಳನ್ನ ರಚಿಸಿದರು. ಉಳುವವನೇ ಭೂಮಿಯ ಒಡೆಯನಾಗ ಬೇಕೆಂಬ ವಿಚಾರಕ್ಕೆ ಒತ್ತನ್ನು ಕೊಟ್ಟರು. ಈ ತರಹದ ಜನಪರ ಕಾರ್ಯಗಳಿಂದ ಬ್ರಿಟಿಷರ ಕೆಂಗಣ್ಣಿಗೆ ತುತ್ತಾದರು. ಸರ್ಕಾರ ೧೯೪೦ರಲ್ಲಿ ಅವರು ಐದು ವರ್ಷಗಳ ಕಾಲ ಜಿಲ್ಲೆಗೆ ಕಾಲಿಡಬಾರದೆಂದು ಗಡಿಪಾರು ಆಜ್ಞೆಯನ್ನು ಜಾರಿ ಮಾಡಿತು. ಕಾಲೇಜು ದಿನಗಳಲ್ಲೇ ಅವರಲ್ಲಿದ್ದ ಕವಿ ಜಾಗೃತನಾಗಿದ್ದ. ಬಿ.ಎಂ.ಶ್ರೀ. ಸಂಪಾದಿಸಿದ 'ತಳಿರು' ಎಂಬ ಕವನ ಸಂಕಲನದಲ್ಲಿ ದೇಸಾಯಿಯವರ ನಾಲ್ಕು ಪದ್ಯಗಳಿದ್ದವು. ಅವರು ೧೨ ಕೃತಿಗಳನ್ನು ರಚಿಸಿದರು. 'ಕವನ ಸಂಗ್ರಹ', 'ಹೂಗೊಂಚಲು', 'ದಾಸಾಳ', 'ಮಕ್ಕಳ ಗೀತೆಗಳು' ಹಾಗೂ 'ಮಕ್ಕಳ ಪದ್ಯಗಳು' ಅವರ ಭಾವಗೀತೆಗಳ ಮತ್ತು ಶಿಶುಕವನಗಳ ಸಂಕಲನಗಳಾಗಿವೆ. ಗದ್ಯ-ಪದ್ಯಗಳಲ್ಲಿ ಸೈ ಎನಿಸಿಕೊಂಡಿದ್ದರೂ, ಅವರನ್ನು ಸಾಮಾನ್ಯ ಓದುಗರು ಗುರುತಿಸಿದ್ದು ಚೌಪದಿ ಕವಿಯೆಂದೇ. ೧೯೮೦ರಲ್ಲಿ 'ದಿನಕರನ ಚೌಪದಿ' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿತು. 'ಆಡು ಮುಟ್ಟದ ಸೊಪ್ಪಿಲ್ಲ' ಎಂಬ ನಾಣ್ಣುಡಿಯಂತಿದ್ದವು ಅವರ ಚೌಪದಿಗಳು. ಅವುಗಳಲ್ಲಿ ಹಾಸ್ಯ, ಶ್ಲೇಷೆ, ವಿಡಂಬನೆ, ಕಾಳಜಿ, ಮಾನವೀಯತೆ ಮುಂತಾದವು ಹಾಸುಹೊಕ್ಕಾಗಿದ್ದವು.

ದಿನಕರ ದೇಸಾಯಿಯವರನ್ನು ಕನ್ನಡದ ಪ್ರಥಮ ಬಂಡಾಯ ಕವಿ ಎನ್ನಬಹುದು. ಬಂಡಾಯ ಸಾಹಿತ್ಯ ಒಂದು ಚಳವಳಿಯ ರೂಪದಲ್ಲಿ ಹೊರಹೊಮ್ಮಿದ್ದು ೧೯೭೦ರ ದಶಕದ ಅಂತ್ಯದಲ್ಲಿ, ಇದಕ್ಕೆ ಸುಮಾರು ನಾಲ್ಕುವರೆ ದಶಕಗಳ ಹಿಂದೆಯೇ ಅಂದರೆ

೧೯೩೧ರಲ್ಲಿ ಬಾರ್ಡೋಲಿಯ ಸತ್ಯಾಗ್ರಹದ ಬಗೆಗೆ

ಹಾಳಾಗಲಿ ಮನೆ ಮಠ ಹೊಲವೆಲ್ಲ
ಹಾಳಾಗಲಿ ಆ ಜೋಳವು ಬೆಲ್ಲ
ದಾಸ್ಯದಿ ಬೆಳೆದ ಬೆಳೆ ನಮದಲ್ಲ
ಸ್ವರಾಜ್ಯ ತಾಯಿ ಭಾರತ ಭೂ

ಎಂಬ ಚುಟುಕು ಪದ್ಯವನ್ನು ಬರೆದರು. ಅವರು ನಂಬಿದ್ದ ಸಮಾಜವಾದದ ತತ್ವದ ಎಳೆಗಳನ್ನು ಅವರ ಕಾವ್ಯಗಳಲ್ಲಿ ಕಾಣಬಹುದು. 'ಕೆಂಪು ಬಾವುಟ' ಪದ್ಯದಲ್ಲಿ

ಕೂಲಿಕಾರ ಒಕ್ಕಲಿಗರ ಒಲವು
ಮೀನುಗಾರ ಶ್ರಮಜೀವಿಯ ಕುಲವು
ಒಂದೆಡೆ ಸೇರಲು ಜನತೆಯ ಗೆಲವು

ಎಂಬ ಸಾಲುಗಳು ದುಡಿಯುವ ವರ್ಗದ ಆಶಯವನ್ನು ವ್ಯಕ್ತಪಡಿಸುತ್ತವೆ. ದೀನ-ದಲಿತರ ಬಗೆಗೆ ಕೂಡ ಅವರ ಹೃದಯ ಮಿಡಿದಿತ್ತು ಎಂಬುದಕ್ಕೆ ಹಾಲಕ್ಕಿ ಜನಾಂಗದವರ ಕುರಿತು ಬರೆದ ಈ ಕವನ ಒಂದು ಸಾಕ್ಷಿ.

ಇವನ ಮನೆಯೊಳಗಿಲ್ಲ ಸಾಕಷ್ಟು ಅಕ್ಕಿ
ಆದರೂ ಈತನಿಗೆ ಹೆಸರು ಹಾಲಕ್ಕಿ
ಹಾಲು ಅಕ್ಕಿಗಳೆರಡೂ ಹೆಸರೊಳಗೆ ಮಾತ್ರ,
ಹಸಿವೆಯೆಂಬುದು ಇವನ ಹಣೆಯ ಕುಲಗೋತ್ರ.

ಅವರ ಕಾವ್ಯ ರಚನೆ ನೇರ ಹಾಗೂ ಸರಳವಾಗಿತ್ತು. ತಮ್ಮ ಭಾವನಾಭಿವ್ಯಕ್ತಿಯ ಮೂಲಕ ಓದುಗರನ್ನು ತಲುಪುತ್ತಿದ್ದರು. ಕಾವ್ಯದ ತಂತ್ರ, ಶಿಲ್ಪದ ಬಗೆಗೆ ಅವರಿಗೆ ವಿಶೇಷವಾದ ಒಲವಿರಲಿಲ್ಲ. ತಾವು ನಂಬಿದ್ದ ಮೌಲ್ಯಗಳು ಹಾಗೂ ವಿಚಾರಗಳನ್ನು ಜನರಿಗೆ ತಲುಪಿಸುವುದೇ ಅವರ ಗುರಿಯಾಗಿತ್ತು. ಅವರು ಗದ್ಯದಲ್ಲೂ ಸಿದ್ಧಹಸ್ತರೆನ್ನಿಸಿಕೊಂಡಿದ್ದರು. ಸತತವಾಗಿ ೧೭ ವರ್ಷಗಳ ಕಾಲ ತಮ್ಮ 'ಜನಸೇವಕ' ಪತ್ರಿಕೆಗೆ ಮುಖಪುಟ ಲೇಖನ ಹಾಗೂ ಸಂಪಾದಕೀಯವನ್ನು ಬರೆದರು.

ಅವರಿಗೆ ಆಂಗ್ಲ ಹಾಗೂ ಕೊಂಕಣಿ ಭಾಷೆಗಳ ಮೇಲೂ ಪ್ರಭುತ್ವವಿತ್ತು. ಕೊಂಕಣಿಯಲ್ಲಿ ಶಿಶುಗೀತೆಗಳು ಹಾಗೂ ಕಥನ ಕವನಗಳನ್ನು ಬರೆದರು. 'ಪಾಳಣೊ' ಎಂಬ ಕೊಂಕಣಿಯ ಜೋಗುಳದ ಹಾಡು ರಾರಾಜಿಸಿತು. ಕರ್ನಾಟಕ ವಿಶ್ವವಿದ್ಯಾನಿಲಯವು ೧೯೭೫ರಲ್ಲಿ ಅವರಿಗೆ ಗೌರವ ಡಾಕ್ಟರೇಟ್ ನೀಡಿ ಗೌರವಿಸಿತು.

ಪತ್ರಿಕಾರಂಗದ ಮೇಲೆ ಅವರು ತಮ್ಮ ಛಾಪನ್ನು ಮೂಡಿಸಿದರು. ೧೯೫೫ರಲ್ಲಿ 'ಜನಸೇವಕ' ಎಂಬ ಕನ್ನಡ ವಾರಪತ್ರಿಕೆಯನ್ನು ಶುರುಮಾಡಿದರು. ಅಂಕೋಲದಿಂದ ಪ್ರಕಟವಾಗುತ್ತಿದ್ದ ಈ ಪತ್ರಿಕೆ ಹಲವು ಸಣ್ಣ ಪತ್ರಿಕೆಗಳು ಮತ್ತು ನಿಯತಕಾಲಿಕೆಗಳಿಗೆ ಮಾದರಿಯಾಗಿತ್ತು. ಕನ್ನಡ ವೈಚಾರಿಕ ಸಾಹಿತ್ಯದ ದೊಡ್ಡ ಹೆಸರಾಗಿದ್ದ ಗೌರೀಶ ಕಾಯ್ಕಿಣಿ ಅವರು ಈ ಪತ್ರಿಕೆಗೆ ವಿಪುಲವಾಗಿ ಬರೆದರು. ದಿನಕರರು ಮನ ಮುಟ್ಟುವ ಲೇಖನಗಳನ್ನು ಹಾಗೂ ಚೌಪದಿಗಳನ್ನು ಬರೆದರು. ಈ ಪತ್ರಿಕೆ ೧೯೭೨ರಲ್ಲಿ ಅಸ್ತಂಗತವಾಯಿತು. ನಮ್ಮ ನಾಡಿನ ಅನೇಕ ಪತ್ರಿಕೆಗಳು ಇದರ ಅವಸಾನಕ್ಕೆ ಕಂಬನಿಗರೆದವು.

ಅವರಿಂದ ಶಿಕ್ಷಣ ಕ್ಷೇತ್ರಕ್ಕೆ ದಾಖಲಿಸಲ್ಪಡಬಹುದಾದ ಕೊಡುಗೆಗಳು ಸಂದಾಯವಾದವು. ಒಂದು ಉತ್ತಮ ಶಿಕ್ಷಣ ವ್ಯವಸ್ಥೆಗೆ ಪ್ರಾಥಮಿಕ ವಿದ್ಯಾಭ್ಯಾಸ ಬೆನ್ನೆಲುಬು ಎಂಬುದು ಅವರ ಖಚಿತ ಅಭಿಮತವಾಗಿತ್ತು. ಈ ದಿಸೆಯಲ್ಲಿ 'ಪ್ರೈಮರಿ ಎಜುಕೇಶನ್ ಇನ್ ಇಂಡಿಯಾ' ಎಂಬ ಗ್ರಂಥವನ್ನು ಆಂಗ್ಲ ಭಾಷೆಯಲ್ಲಿ ರಚಿಸಿದರು. ೧೯೫೩ರಲ್ಲಿ ಕೆನರಾ ವೆಲ್ಫೇರ್ ಟ್ರಸ್ಟನ್ನು (ಕೆನರಾ ಕಲ್ಯಾಣ ಟ್ರಸ್ಟ್) ಸ್ಥಾಪಿಸಿದರು. ಇದರಡಿ ಒಂದು ಪ್ರೌಢಶಾಲೆಯನ್ನು ತೆರೆದರು. ಇದರ ಹಿಂದೆ ಒಂದು ಕುತೂಹಲಕಾರಿ ಕಥೆಯಿದೆ. ದೇಸಾಯಿಯವರ ಮುಂದಾಳತ್ವದ ರೈತ ಸಂಘಟನೆಯಲ್ಲಿ ಶೇಷಗಿರಿ ಪಿಕಳೆ ಎಂಬುವರು ಮುಂಚೂಣಿಯಲ್ಲಿದ್ದರು. ಅವರು ಒಬ್ಬ ಮಾಸ್ತರರಾಗಿದ್ದರು. ಅವರ ಶಾಲೆಯ ಆಡಳಿತ ವರ್ಗದಲ್ಲಿ ಭೂಮಾಲೀಕರದ್ದೇ ಮೇಲುಗೈಯಾಗಿತ್ತು. ಯಾವುದೋ ಕ್ಷುಲ್ಲಕ ಕಾರಣದ ನೆಪದಲ್ಲಿ ಪಿಕಳೆಯವರನ್ನು ಶಾಲೆಯಿಂದ ತೆಗೆದುಹಾಕಲಾಯಿತು. ಇದನ್ನರಿತ ದಿನಕರರು ತಾವೇ ಒಂದು ಪ್ರೌಢಶಾಲೆಯನ್ನು ಪ್ರಾರಂಭಿಸಲು ನಿರ್ಣಯಿಸಿದರು. ಇದಕ್ಕಾಗಿ ಸಾರ್ವಜನಿಕರಿಂದ ದೇಣಿಗೆಗಳನ್ನು ಪಡೆದರು. ಒಂದು ತಿಂಗಳಲ್ಲಿ ಶಾಲೆಯ ಕಟ್ಟಡವೆದ್ದಿತು. ಈ ಕಾರ್ಯದಲ್ಲಿ ರೈತರ ಅಪಾರ ಶ್ರಮವಿದ್ದುದರಿಂದ ಕಟ್ಟಡಕ್ಕೆ 'ರೈತ ಭವನ' ಎಂದೇ ನಾಮಕರಣ ಮಾಡಲಾಯಿತು. ಪಿಕಳೆ ಅದರ ಪ್ರಿನ್ಸಿಪಾಲರಾದರು. ಪ್ರಸ್ತುತ ಕೆನರಾ ಕಲ್ಯಾಣ ಟ್ರಸ್ಟ್ ಒಂದು ಹೆಮ್ಮರವಾಗಿ ಬೆಳೆದಿದೆ. ಅದರಡಿ ೪೦ ವಿದ್ಯಾ ಸಂಸ್ಥೆಗಳಿವೆ.


With Best Compliments From



SINTEX INDUSTRIES LIMITED

Plastics Division

61-C, BOMMASANDRA INDUSTRIAL AREA
HOSURU ROAD, BANGALORE - 560 099
PHONE : 7832288, 7832967, 7832724
E-mail : bharath vm@bsnl.in Website : www.sintex-plastics.com

ರಾಜಕೀಯದಲ್ಲೂ ಅವರು ಗುರುತನ್ನು ಮೂಡಿಸಿ ು. ಭಾರತ ಸೇವಕ ಸಮಾಜದ ಆಜೀವ ಸದಸ್ಯರಾಗಿ ಂದ ಯಾವುದೇ ರಾಜಕೀಯ ಪಕ್ಷದೊಡನೆ ಗುರುತಿಸಿ ಂಡಿರಲಿಲ್ಲ. ಆದರೂ ಒಬ್ಬ ಸ್ವತಂತ್ರ ಅಭ್ಯರ್ಥಿ ಾಗಿ ಮುಂಬೈ ಕಾರ್ಪೊರೇಷನ್‌ನಲ್ಲಿ ೧೩ ವರ್ಷಗಳ ು (೧೯೪೮-೧೯೬೧) ಸದಸ್ಯರಾಗಿ ದುಡಿದರು. ರಿಂದ ಶಹಾಬಾಷ್‌ಗಿರಿಯನ್ನು ಪಡೆದರು. ೧೯೬೭ ಸ್ವತಂತ್ರ ಅಭ್ಯರ್ಥಿಯಾಗಿ ಉತ್ತರ ಕನ್ನಡದ ಕ್ಷೇತ್ರದಿಂದ ೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಸಿ ವಿಜೇತ ದರು. ಆಗ ಕೇಂದ್ರದಲ್ಲಿ ಶಿಕ್ಷಣ ಮಂತ್ರಿಯಾಗಿದ್ದ ತ್ರಿಗುಣ ಸೇನ್‌ರ ನೇತೃತ್ವವಿದ್ದ ಶಿಕ್ಷಣ ಸಮಿತಿಯ ಸ್ಯರಾಗಿದ್ದರು. ಉತ್ತಮ ಸಂಸದೀಯ ಪಟುವಾಗಿ ಮಾನ್ಯ ಜನರ ತಲ್ಲಣವನ್ನು ಬಿಂಬಿಸುವ ದನಿಯಾದರು.

ದಿನಕರ ದೇಸಾಯಿ ಒಬ್ಬ ಸಾಫ್ ಸೀದಾ ವ್ಯಕ್ತಿ ಾಗಿದ್ದರು. ಸಾರ್ವಜನಿಕ ಜೀವನದ ಎತ್ತರಗಳನ್ನು ಡಿದ್ದರೂ ಅವರದ್ದು ಸರಳ ಜೀವನವಾಗಿತ್ತು. ದಿರಾರೊಂದಿಗೆ ವಿವಾಹವಾದಾಗ ಅವರಿಗೆ ವ್ಯಯ ಗಿದ್ದು ಕೇವಲ ಏಳು ರೂಪಾಯಿಗಳು! ಅದೂ ದುವೆಯ ನೋಂದಣಿಗೆ! ಸಂಸದರಾಗಿದ್ದಾಗಲೂ ರಕುತ್ತಿದ್ದ ಪಗಾರದ ಹೆಚ್ಚಿನ ಭಾಗವನ್ನು ಸ್ವಂತಕ್ಕಾಗಿ ಸಿಕೊಳ್ಳುತ್ತಿರಲಿಲ್ಲ. ಅವರು ಹೆಚ್ಚಾಗಿ ಪ್ರಯಾಣ ಡುತ್ತಿದ್ದದ್ದು ಬಸ್ಸುಗಳಲ್ಲಿ. ಪ್ರಚಾರದಿಂದ ದೂರ ಳಿದಿದ್ದರು. ಷಷ್ಟ್ಯಬ್ದಿಪೂರ್ತಿ ಸಮಾರಂಭದಲ್ಲಿ ಅವರೇ ಗೈರುಹಾಜರಾಗಿದ್ದರು! ಆ ಸಂದರ್ಭದಲ್ಲಿ ಅವರು ಿದ ಒದು ಚೌಪದಿ ಅರ್ಥಗರ್ಭಿತವಾಗಿದೆ.

ನನಗೇಕೆ ಷಷ್ಟ್ಯಬ್ದಿ ಸಾಕು ಬರವಣಿಗೆ
ಕವಿಗೆ ಬೇಕಾಗಿಲ್ಲ ಯಾವ ಮೆರವಣಿಗೆ
ಮೂಲೆಯಲ್ಲಿ ಕುಳಿತು ಬರೆದರೆ ಒಂದು ಪದ್ಯ
ತಾಯ್ನುಡಿಗೆ ಅರ್ಪಿಸಿದ ಹಾಗೆ ನೈವೇದ್ಯ

ಬ ಅದರ ಸಾಲುಗಳು ಅವರ ಮನೋಧರ್ಮವನ್ನು ಷ್ಟವಾಗಿ ಸಾರುತ್ತವೆ.

ಸಾರ್ವಜನಿಕ ರಂಗಕ್ಕೆ ಹಾಗೂ ಸಾಹಿತ್ಯಕ್ಕೆ ಅನುಪಮ ವೆ ಸಲ್ಲಿಸಿದ ದಿನಕರ ದೇಸಾಯಿ ಮುಂಬೈನಲ್ಲಿ ೆಂಬರ್ ೬, ೧೯೮೨ರಂದು ನೇಪಥ್ಯಕ್ಕೆ ಸರಿದರು. ದು ಅವರು ಭೌತಿಕವಾಗಿ ನಮ್ಮ ನಡುವೆ ಇಲ್ಲ. ಆದರೆ ರು ಮಾಡಿದ ಘನಕಾರ್ಯಗಳಿಗೆ ಮರಣವಿಲ್ಲ. ರು ನಂಬಿದ್ದ ತತ್ವಗಳು, ವಿಚಾರಗಳು ಹಾಗೂ ೌಲ್ಯಗಳನ್ನು ಪರಿಗಣಿಸಿ ಸಮಂಜಸ ಕಾರ್ಯಕ್ರಮ ನ್ನು ರೂಪಿಸಿ, ಅನುಷ್ಠಾನಗೊಳಿಸಿದರೆ, ಅವೇ ಡು ನೀಡಬಹುದಾದ ಬಹುದೊಡ್ಡ ಆದರ.

**ನಕರ ದೇಸಾಯಿಯವರ ವೈಯಕ್ತಿಕ ಜೀವನಕ್ಕೆ ಬಂಧಿಸಿದ ಕೆಲವು ಘಟನೆಗಳು/ ವಿವರಗಳು**

೧) ದಿನಕರರು ತಮ್ಮ ಒಂಬತ್ತನೇ ವರ್ಷದಲ್ಲಿ ಿಯನ್ನು ಕಳೆದುಕೊಂಡರು. ಅವರ ಪ್ರಾಣವನ್ನು ದುಕೊಂಡಿದ್ದು ಇನ್‌ಫ್ಲೂಯೆಂಜಾ ವ್ಯಾಧಿ.

೨) ದಿನಕರರ ಅಜ್ಜ ಸಾಂಬ ದೇಸಾಯಿಯವರಿಗೆ ು-ಬರಹ ಬರುತ್ತಿರಲಿಲ್ಲ. ಅವರ ತಂದೆಗೋ ಮಗ ್ಯಾವಂತನಾಗಬೇಕೆಂಬ ಹೆಬ್ಬಯಕೆ. ಅವರು ವಾಸ ಡುತ್ತಿದ್ದ ಹೊಂಡದಕ್ಕಲಿನಲ್ಲಿ ಶಾಲೆ ಇರಲಿಲ್ಲ. ುದರಿಂದ ಮನೆ ಪಾಠ ಹೇಳಿಕೊಡುವ ಉಪಾಧ್ಯಾಯ




ರೊಬ್ಬರನ್ನು ಹುಡುಕಿ, ಅವರಿಗೆ ಬಾಲಕ ಸಾಂಬರಿಗೆ ಶಿಕ್ಷಣ ನೀಡುವ ಜವಾಬ್ದಾರಿಯನ್ನು ವಹಿಸಲಾಯಿತು. ಆದರೆ ತುಂಟ ಸಾಂಬ ಆ ಉಪಾಧ್ಯಾಯರಿಗೆ ಕಪಾಳ ಸೇವೆ ಮಾಡಿದ್ದರಿಂದ ಅವರ ಓದಿಗೆ ಅರ್ಧಚಂದ್ರವಾಯಿತಂತೆ.

೩) ದಿನಕರ ದೇಸಾಯಿಯವರು ಅನೇಕ ಬಾರಿ ತಮ್ಮ ಅಜ್ಜ-ಅಜ್ಜಿಯರ ವಿವಾಹದಲ್ಲಿ ಜರುಗಿದ ಮೋಜಿನ ಪ್ರಸಂಗವೊಂದನ್ನು ನೆನೆದು, ನೆಗೆಗಡಲಿನಲ್ಲಿ ಮೀಯುತ್ತಿದ್ದರು. ಅವರ ಅಜ್ಜಿ ಕಾರವಾರ ತಾಲ್ಲೂಕಿನ ಮಾಜಾಳಿಯಲ್ಲಿ ನೆಲೆಸಿದ್ದರು. ಹೊಂಡದಕ್ಕಲಿನಿಂದ ಹೊರಟ ಸಾಂಬರ ಮದುವೆ ದಿಬ್ಬಣದಲ್ಲಿ ನೆರೆಹೊರೆಯ ಹಾಲಕ್ಕಿ ಒಕ್ಕಲಿಗರೂ ಇದ್ದರಂತೆ. ಹೆಣ್ಣಿನ ಮನೆಯಲ್ಲಿ ಅವಲಕ್ಕಿ ಮಾಡುವ ಲಾಟಿಯನ್ನು (ಇದನ್ನು 'ಅವಲಾಟಿ' ಎಂದು ಕರೆಯುತ್ತಿದ್ದರು) ಕಂಡ ಹಾಲಕ್ಕಿಗಳು ಮದುವೆಯ ಮನೆಯಿಂದ ಊಟ ಮಾಡದೆ ನಿರ್ಗಮಿಸಲು ಶುರು ಮಾಡಿದರಂತೆ. ದೊಡ್ಡ ಜಮೀನ್ದಾರಿ ಮನೆತನದ ದೇಸಾಯಿ ಅವಲಾಟಿಯಿರುವ ಬಡ ಕುಟುಂಬದ ಹೆಣ್ಣನ್ನು ಸೊಸೆಯಾಗಿ ಏಕೆ ತರಬೇಕಿತ್ತು ಎಂಬುದು ಅವರ ತಕರಾರಾಗಿತ್ತಂತೆ.

೪) ದಿನಕರರು ಒಂದನೇ ತರಗತಿಯಲ್ಲಿ ಓದುತ್ತಿದ್ದಾಗ, ಫರ್ನಾಂಡೀಸ್ ಎಂಬ ಇನ್‌ಸ್ಪೆಕ್ಟರರು ಆಗಾಗ್ಗೆ ಶಾಲೆಗೆ ಭೇಟಿ ನೀಡುತ್ತಿದ್ದರಂತೆ. ಒಮ್ಮೆ ಅವರು 'ಮಗಳು', 'ಆನಂದ', 'ಕನಸು' ಎಂಬ ಮೂರು ಶಬ್ದಗಳನ್ನು ಬರೆಯಲು ಹೇಳಿದರಂತೆ. ಬಾಲಕ ದಿನಕರ 'ಆನಂದ' ಶಬ್ದವನ್ನು 'ಆನದ' ಎಂದು ಬರೆದಿದ್ದರಂತೆ. ಆದರೆ ಮಿಕ್ಕ ವಿದ್ಯಾರ್ಥಿಗಳು ಹೆಚ್ಚು ತಪ್ಪುಗಳನ್ನು ಮಾಡಿದ್ದರಿಂದ ದಿನಕರರೂ ಪ್ರಶಂಸೆಗೆ ಭಾಜನರಾದರಂತೆ.

೫) ಉಳುವವನೇ ಭೂಮಿಯ ಒಡೆಯ ಎಂಬ ತತ್ವವನ್ನು ಬಹಳ ಹಿಂದೆಯೇ ದಿನಕರ ದೇಸಾಯಿಯವರು ಪ್ರತಿಪಾದಿಸಿದ್ದರು. ಅವರು ರೈತ ಸಭೆಗಳಲ್ಲಿ ಗರ್ಜಿಸುತ್ತಿದ್ದದ್ದು ಹೀಗೆ – ''ಉಳುವವನೇ ಹೊಲದೊಡೆಯ. ರೈತನಿಗೂ ಹೊಟ್ಟೆತುಂಬ ಉಣ್ಣುವ ಹಕ್ಕಿದೆ. ನಮ್ಮ ಹೋರಾಟದ ಬೇಡಿಕೆಗಳೆಂದರೆ- ಹೊಟ್ಟೆತುಂಬ ಅನ್ನ, ತಲೆಯ ಮೇಲೆ ಸೂರು ಹಾಗೂ ಮೈ ಮುಚ್ಚಲು ಬಟ್ಟೆ. ರೈತ ಬಂಧುಗಳೇ, ನೀವು ಉಳುತ್ತಿರುವ ಭೂಮಿ ಸರ್ಕಾರದ್ದೂ ಅಲ್ಲ; ಒಡೆಯನದ್ದೂ ಅಲ್ಲ. ಅದು ನಿಮ್ಮದೇ. ಈ ಸರ್ಕಾರ ಜಾರಿ ಮಾಡಿರುವ ಹೊಲಸಾಗುವಳಿ ಕಾನೂನು ಹೊಲಸು ಸಾಗುವಳಿ ಕಾನೂನಾಗಿದೆ! ಇದನ್ನು ಹಿಮ್ಮೆಟ್ಟಿಸಬೇಕು. ಈ ಕುಂಭಕರ್ಣ ಸರ್ಕಾರದ ಕಣ್ಣು ತೆರೆಸಬೇಕು.''

೬) ಇಂದಿರಾರನ್ನು ವಿವಾಹವಾದಾಗ, ಅವರು ''ಕುಟುಂಬ ನಡೆಸುವುದಕ್ಕೆ ಎಷ್ಟು ಬೇಕೋ ಅಷ್ಟು ಮಾತ್ರ ಖರ್ಚುಮಾಡು. ನಾನು ಸಾರ್ವಜನಿಕ ಜೀವನದಲ್ಲಿರುವವ. ನನಗೆ ವರಮಾನವಿಲ್ಲ. ಆದುದರಿಂದ ನಮ್ಮ ಬಾಳಿನಲ್ಲಿ ಬಡತನ ಇದ್ದೇ ಇರುತ್ತದೆ. ಇದ್ದುದರಲ್ಲೇ ಜೀವನ ನಡೆಸಬೇಕು. ಅದಕ್ಕೆ ನಿನ್ನ ಸಹಾಯ, ಸಹಕಾರ ಅತ್ಯಗತ್ಯ'' ಎಂಬ ಕಿವಿ ಮಾತುಗಳನ್ನು ದಿನಕರರು ನುಡಿದರಂತೆ. ಪತಿಯ ಹಾದಿಯಲ್ಲೇ ನಡೆದರು ಇಂದಿರಾ.

೭) ದಿನಕರ ದೇಸಾಯಿಯವರ ರೈತ ಆಂದೋಳನದಲ್ಲಿ ಹಾಲಕ್ಕಿ ಸಮುದಾಯದ ರಾಕುಗೌಡ ಎಂಬ ಆಜಾನುಬಾಹು ವ್ಯಕ್ತಿ ಸುಮಾರು ಮೂರುವರೆ ದಶಕಗಳ ಕಾಲ ಸಕ್ರಿಯವಾಗಿ ಭಾಗವಹಿಸಿದ್ದ. ಒಮ್ಮೆ ಮರ ಕಡಿಯಲು ಹೋದಾಗ, ಮೇಲಿನಿಂದ ಬಿದ್ದು ತನ್ನ ಕಾಲನ್ನು ಕಳೆದುಕೊಂಡ. ದೈತ್ಯದೇಹಿಯಾಗಿದ್ದ ರಾಕು ದಿನೇ ದಿನೇ ಕೃಶನಾಗತೊಡಗಿದ. ಒಮ್ಮೆ ದೇಸಾಯಿಯವರನ್ನು ಕಾಣಲು ಹೋದ. ಇವನ ಪರಿಸ್ಥಿತಿಯನ್ನು ಕಂಡ ಅವರು ಮಮ್ಮಲ ಮರುಗಿದರು. ಅವಘಡದ ವಿವರಗಳನ್ನು ತಿಳಿದುಕೊಂಡರು. ಅವನಿಗೆ ಜೀವನ ನಡೆಸಲು ಜೋಡಿ ಎತ್ತಿನ ಅವಶ್ಯಕತೆಯಿತ್ತು. ಅದನ್ನರಿತ ದಿನಕರರು ಖರೀದಿಗೆ ಸೂಕ್ತ ವ್ಯವಸ್ಥೆ ಮಾಡಿದರು.

೮) ದಿನಕರರ ಷಷ್ಟ್ಯಬ್ದಿಪೂರ್ತಿ ಸಮಾರಂಭದ ವಿಷಯದಲ್ಲಿ ಒಂದು ಸಮಿತಿಯನ್ನು ರಚಿಸಲಾಯಿತು. ಪ್ರಚಾರಕ್ಕೆ ಸಂಬಂಧಿಸಿದಂತೆ ಅವರ ಭಾವಚಿತ್ರದ ಅವಶ್ಯಕತೆ ಇತ್ತು. ಆದರೆ ದೇಸಾಯಿಯವರು ಛಾಯಾಚಿತ್ರ ತೆಗೆಸಿಕೊಳ್ಳಲು ಬಿಲ್‌ಕುಲ್ ಒಪ್ಪಲಿಲ್ಲ. ಸಮಾರಂಭದಲ್ಲಿ ರಾಜ್ಯದ ಅನೇಕ ಭಾಗಗಳಿಂದ ಬಂದ ಸಾಹಿತಿಗಳು, ಶಿಕ್ಷಣ ತಜ್ಞರು, ಪತ್ರಕರ್ತರು, ಕಾರ್ಮಿಕ ನಾಯಕರು, ರೈತ ಸಂಘಟನೆಗಳ ಧುರೀಣರು ಹಾಗೂ ಸಾಮಾನ್ಯ ಜನರು ಅಧಿಕ ಸಂಖ್ಯೆಯಲ್ಲಿ ಜಮಾಯಿಸಿದ್ದರು. ಆದರೆ ನಾಪತ್ತೆಯಾಗಿದ್ದವರು ದಿನಕರರೇ! ತನ್ನ ಸಮ್ಮುಖದಲ್ಲೇ ಇತರರು ತಮ್ಮನ್ನು ಹಾಡಿ ಹೊಗಳುವುದನ್ನು ಕೇಳಲು ತಮಗೆ ತೀರ ಸಂಕೋಚವಾಗುತ್ತದೆಯೆಂದು ಪತ್ರದಲ್ಲಿ ತಿಳಿಸಿ, ಅವರು ಮುಂಬೈನಲ್ಲೇ ಉಳಿದರು!

೯) ಅದು ೧೯೭೧ರ ಸಮಯ. ಕರ್ನಾಟಕ ರಾಜ್ಯ ಸರ್ಕಾರದ ಸಾರಥ್ಯವನ್ನು ದೇವರಾಜ ಅರಸರು ವಹಿಸಿದ್ದರು. ಅವರು ದಿನಕರರಿಗೆ ಕಾಂಗ್ರೆಸ್ ಪಕ್ಷ ಸೇರಲು ಆಮಂತ್ರಿಸಿದರು. ಒಪ್ಪಿಕೊಂಡಿದ್ದರೆ ದೇಸಾಯಿಯವರು ಕೇಂದ್ರದಲ್ಲಿ ಶಿಕ್ಷಣ ಸಚಿವರಾಗುವ ಸಾಧ್ಯತೆಗಳಿದ್ದವು. ಆದರೆ ಅವರು ವಿಚಲಿತರಾಗಲಿಲ್ಲ. ಕೊನೆಯವರೆಗೂ ಸಮಾಜವಾದಿಯಾಗಿಯೇ ಉಳಿದರು. ಇಂದಿನ ಪಕ್ಷಾಂತರದ ಭರಾಟೆ ಕಂಡರೆ ದಿನಕರರ ತತ್ವಬದ್ಧತೆ ಎಷ್ಟು ಆಳವಾಗಿತ್ತು ಎಂಬುದು ಮನದಟ್ಟಾಗುತ್ತದೆ.

*(ಆಧಾರ: ಹಲವು ಮೂಲಗಳು)*

ಮ. ಶ್ರೀ. ಮುರಳಿಕೃಷ್ಣ

# ಗ್ರಾಮೀಣ ಪ್ರದೇಶಗಳಲ್ಲಿ ರಂಗ ಚಳುವಳಿ – ಒಂದು ನೋಟ

ಕಲಾಸಕ್ತಿ ಮತ್ತು ಪ್ರತಿಭೆಗಳು ಮನುಷ್ಯನಲ್ಲಿ ಹುಟ್ಟಿನಿಂದಲೇ ರಕ್ತಗತವಾಗಿ ಂದಿರುತ್ತವೆ ಮತ್ತು ಯಾವುದಾದರೊಂದು ದಾರಿಯಿಂದ ಹೊರಬರಲು ಸೂಕ್ತ ವಕಾಶಕ್ಕಾಗಿ ಕಾದುಕೊಂಡಿರುತ್ತವೆ. ಕಲೆಯ ಅಭಿವ್ಯಕ್ತಿಗೆ ಗ್ರಾಮ-ನಗರಗಳೆಂಬ ೀದವಿಲ್ಲ, ನಗರಗಳಲ್ಲಿ ಸೌಲಭ್ಯಗಳು ಮತ್ತು ಅವಕಾಶಗಳು ಹೆಚ್ಚಿರಬಹುದು. ಳ್ಳಿಗಳಲ್ಲಿ ನಾಯಕತ್ವ ವಹಿಸುವವರು ಕಡಿಮೆ ಇರಬಹುದು. ಆದರೆ ನಮ್ಮ ನಪದ ಬದುಕಿನ ಇತಿಹಾಸದತ್ತ ಒಮ್ಮೆ ಕಣ್ಣುಹಾಯಿಸಿ ನೋಡಿದರೆ ವಿಧ್ಯಮಯವಾದ ಕಲೆಗಳಿಂದ ಅದು ಎಷ್ಟೊಂದು ಶ್ರೀಮಂತವಾಗಿದೆ ಂಬುದು ನಮ್ಮ ಗಮನಕ್ಕೆ ಬರುತ್ತದೆ. ಕರ್ನಾಟಕದಾದ್ಯಂತ ವಿವಿಧ ಪ್ರದೇಶಗಳಲ್ಲಿ ಂದಿಗೂ ಕಂಡುಬರುವ ಅನೇಕ ಜನಪದ ಕಲಾಪ್ರಕಾರಗಳೇ ಇದಕ್ಕೆ ಕ್ಷಿ. ರಾಮಾಯಣ, ಮಹಾಭಾರತ, ಭಾಗವತಗಳಂಥ ಪುರಾಣದ ಥೆಗಳನ್ನಾಧರಿಸಿದ ಈ ಜನಪದ ಕಲಾಪ್ರಕಾರಗಳು ತೀರಾ ಅನಕ್ಷರಸ್ಥರಿಗೂ ಂಗಭೂಮಿಯ ಭಾಷೆಯ ಪರಿಚಯ ಮಾಡಿಕೊಟ್ಟಂಥವು. ಆದ್ದರಿಂದಲೇ ೦ನೇ ಶತಮಾನದ ಉತ್ತರಾರ್ಧದಲ್ಲಿ ವೃತ್ತಿನಾಟಕ ತಂಡಗಳು ಹುಟ್ಟಿಕೊಂಡು ಜ್ಯದ ಮೂಲೆಮೂಲೆಯ ಹಳ್ಳಿಗಳಿಗೆ ಹೋಗಿ ಟೆಂಟ್ ಹಾಕಿದಾಗ ಬಾಲವೃದ್ಧರಾದಿಯಾಗಿ ಎಲ್ಲರೂ ನಾಟಕಾಭಿರುಚಿಯನ್ನು ಬೆಳೆಸಿಕೊಂಡರು. ಪೆನಿ ನಾಟಕಗಳನ್ನು ಅನುಕರಿಸಿ ಹಳ್ಳಿ ಹಳ್ಳಿಗಳಲ್ಲೂ ಆಸಕ್ತರ ಸಂಘಟನೆಯಲ್ಲಿ ರ್ಷಕ್ಕೊಂದೋ ಎರಡೋ ನಾಟಕಗಳು ತಯಾರಾದವು.

ಗ್ರಾಮೀಣ ಪ್ರದೇಶಗಳಲ್ಲಿ ಎಲ್ಲರೂ ಹೀಗೆ ನಾಟಕಗಳಿಂದ ಮನರಂಜನೆ ಡೆಯುತ್ತಿದ್ದುದು ನಿಜ. ನೇರ ನಿರೂಪಣೆಯನ್ನು ಹೊಂದಿದ್ದ, ಚಿಂತನೆಗೆ ಸವಾಗುವ ವಿಚಾರಗಳಿಲ್ಲದ ಅಂದಿನ ನಾಟಕಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಾವುದೇ ಕಷ್ಟವಿರಲಿಲ್ಲ. ಆಧುನಿಕತೆಯ ಪೂರ್ವಭಾಗದ ಈ ಕಾಲಘಟ್ಟದಲ್ಲಿ ಶ್ಚಾತ್ಯ ದೇಶಗಳಲ್ಲಿ ನಡೆದಂತೆ ಕೈಗಾರಿಕೀಕರಣ ಮತ್ತು ಆಧುನಿಕೀಕರಣದ ಶಕೆ ರತಕ್ಕೆ ತಟ್ಟಲು ಪ್ರಾರಂಭವಾಗಿತ್ತು. ಇದರ ಪರಿಣಾಮವಾಗಿ ಭಾರತವು ತ್ಮಾಭಿಮಾನ ಮತ್ತು ಆತ್ಮಾವಹೇಳನದ ಮೂಲಕ ಒಟ್ಟೊಟ್ಟಿಗೇ ತನ್ನ ನೆಲೆಯನ್ನು ಡುಕೊಳ್ಳಲು ಚಡಪಡಿಸುತ್ತಿತ್ತು. ಭಾರತದ ದೀರ್ಘ ಇತಿಹಾಸ-ಸಂಸ್ಕೃತಿ-ತಿಗಳ ಬಗ್ಗೆ ಪ್ರಜ್ಞಾಪೂರ್ವಕವಾಗಿ ಯೋಚಿಸುವ ಚಿಂತಕರ, ಸಾಹಿತಿಗಳ ಒಂದು ರ್ಗವು ಭಾರತವನ್ನು ರೋಮಾಂಚನದಿಂದ ಮತ್ತು ಅಭಿಮಾನದಿಂದ ೋಡಿದರೆ ಇನ್ನೊಂದು ಅದನ್ನು ಹಸಿವು, ರೋಗ-ರುಜಿನ, ಅಂಧಶ್ರದ್ಧೆಗಳ ಪವೆಂದು ಅಸಹ್ಯಪಟ್ಟುಕೊಂಡಿತು. ಈ ದ್ವಂದ್ವವು ಎಲ್ಲ ಮಹಾನ್ ಸಾಹಿತಿ ನ್ನೂ ಚಿಂತನಶೀಲರನ್ನೂ ಕಾಡುತ್ತಿತ್ತು. ಈ ಕಾಲದಲ್ಲಿ ನಡೆದ ತೀವ್ರವಾದ ಆರ್ಥಿಕ ದಲಾವಣೆ, ಸಾಮಾಜಿಕ-ಸಾಂಸ್ಕೃತಿಕ ಚಳುವಳಿ, ಸ್ವದೇಶಿ ಚಳುವಳಿ, ರಷ್ಯಾದ ಮ್ಯುನಿಸ್ಟ್ ಕ್ರಾಂತಿ, ಕೈಗಾರಿಕೀಕರಣ ಮತ್ತು ತಾಂತ್ರಿಕ ಪ್ರಗತಿ ಮುಂತಾದ ಯುಗ ರಿವರ್ತಕ ಬದಲಾವಣೆಗಳಿಗೆ ಎಲ್ಲ ಚಿಂತನಶೀಲರೂ ತೀವ್ರವಾಗಿ ಸ್ಪಂದಿಸುತ್ತ ಂದರು. ಈ ಬದಲಾವಣೆಗಳಿಂದ ಸ್ವತಃ ತಾವು ಪ್ರಭಾವಿತರಾಗುತ್ತ ದೇಶದ ಜಕೀಯ, ಸಾಹಿತ್ಯ, ಆರ್ಥಿಕ ಚಿಂತನೆ ಮತ್ತು ಅಕಾಡೆಮಿಕ್ ಪರಿಸರದ ದಲಾವಣೆಗಳಿಗೆ ಕಾರಣರಾದರು. ಆಧುನಿಕತೆಯಲ್ಲಿನ ದ್ವಂದ್ವ ಮತ್ತು ವಾಗ್ವಾದ ನ್ನು ಒಟ್ಟಾಗಿ ಗ್ರಹಿಸುವ ಅನಿವಾರ್ಯತೆಯು ಆ ಕಾಲಘಟ್ಟಕ್ಕಿದ್ದುದರಿಂದಲೇ ತ್ಮರತಿ ಮತ್ತು ಆತ್ಮಾವಹೇಳನಗಳನ್ನು ಜತೆಜತೆಯಾಗಿಯೇ ಆ ಸಾಹಿತಿಗಳು ಹಿಸಿದರು. ೨೦ನೇ ಶತಮಾನದ ಮಧ್ಯದಿಂದ, ಅಂದರೆ ಎರಡನೇ ಲೋಕ ಹಾಯುದ್ಧದ ನಂತರದ ೫೦ ವರ್ಷಗಳನ್ನು ನಾವು ಸ್ಪಷ್ಟವಾಗಿ ಆಧುನಿಕತೆಯ ವ್ರತೆಯ ವಿಶಿಷ್ಟ ಕಾಲಘಟ್ಟವೆಂದು ಗುರುತಿಸುತ್ತೇವೆ. ಬಂಡವಾಳಶಾಹಿ ವ್ಯವಸ್ಥೆಯ ತೀಕವಾದ ಅಮೆರಿಕಾವು ಅತ್ಯಂತ ಪ್ರಬಲವಾದ ರಾಷ್ಟ್ರವಾಗಿ ಇಡೀ ಜಗತ್ತಿನ ರ್ಥಿಕ ಪ್ರಭುತ್ವವನ್ನು ಸಾಧಿಸಿದಾಗ ಮತ್ತು ರಷ್ಯಾವು ಒಂದು ಕಮ್ಯುನಿಸ್ಟ್ ಷ್ಟ್ರವಾಗಿ ದೈತ್ಯಾಕಾರವಾಗಿ ಬೆಳೆದಾಗ, ಈ ಎರಡು ರಾಷ್ಟ್ರಗಳ ನಡುವೆ ನಡೆದ ರ್ಥಿಕ ಪ್ರಗತಿಯ ಪೈಪೋಟಿಗೆ ಇಡೀ ಜಗತ್ತೇ ಒಳಪಡುವಂತಾಯಿತು. ದರಿಂದಾಗಿ ತಾಂತ್ರಿಕ ಪ್ರಗತಿ, ಏಕಮುಖ ಆರ್ಥಿಕ ಪ್ರಗತಿ, ಪರಿಣಾಮವಾಗಿ ಮಾಜಿಕ ಬದಲಾವಣೆ, ಕೊಳ್ಳುಬಾಕ ಸಂಸ್ಕೃತಿಯ ಜಾಗತಿಕ ಪ್ರಸರಣ ದೆಲ್ಲಕ್ಕೂ ವೇಗ ಮತ್ತು ಬಲ ಬಂದುಬಿಟ್ಟಿತು. ಈ ರಭಸದ ಬದಲಾವಣೆಗಳನ್ನು ತ್ತು ಆಧುನಿಕತೆಯು ಕಂಡ ಎಲ್ಲ ಸಂಕೀರ್ಣತೆ ಮತ್ತು ದ್ವಂದ್ವಗಳನ್ನು



ಪಾರ್ವತಿ ಜಿ. ಐತಾಳ್

# ಹೊಸ ಪುಸ್ತಕದ ಪರಿಮಳಕೆ ಮಾರುಹೋದವರು ನಾವು



ಹರಡುತಿರುವೆವು ಅದನು
ಉಸಿರೆಳೆದುಕೊಳ್ಳಿ ನೀವೂ



ಛಂದ ಪುಸ್ತಕ

ಛಂದ ಪುಸ್ತಕ, ಐ-004, ಮಂತ್ರಿ ಪ್ಯಾರಡೈಸ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು-76
ದೂ: 98444 22782 chandapustaka@yahoo.com


ಯಾವುದಾದರೊಂದು ರೀತಿಯಲ್ಲಿ ವಿರೋಧಿಸಬೇಕಾಗಿತ್ತು. ಆಧುನಿಕತೆಯ ಅಹಂಕಾರವು ಈ ನೆಲದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹಾಳುಗೆಡವುತ್ತಿರುವುದನ್ನು ತಡೆಯಬೇಕಾಗಿತ್ತು. ಅದಕ್ಕಾಗಿ ಬರಹಗಾರರು ಮತ್ತು ಕಲಾವಿದರು ಜತೆಗೂಡಿ ಕಂಡುಕೊಂಡ ದಾರಿಯಾಗಿತ್ತು ರಂಗಚಳುವಳಿ.

ಗ್ರಾಮೀಣ ಪರಿಸರದಲ್ಲಿ ರಂಗ ಚಳುವಳಿ ಎಂದಾಕ್ಷಣ ನಮಗೆ ಥಟ್ಟನೆ ನೆನಪಾಗುವುದು ಹೆಗ್ಗೋಡಿನ ನೀನಾಸಂ ಮತ್ತು ಕೆ. ವಿ. ಸುಬ್ಬಣ್ಣ. ಒಂದು ತೀರಾ ಸಾಮಾನ್ಯ ಹಳ್ಳಿಯಾಗಿದ್ದ ಹೆಗ್ಗೋಡು ಇವತ್ತು ರಾಷ್ಟ್ರಮಟ್ಟದಲ್ಲಿ ಜನರ ಗಮನ ಸೆಳೆಯುತ್ತಿದ್ದರೆ ಅದಕ್ಕೆ ಕಾರಣ ಅಲ್ಲಿ ನಡೆಯುವ ಸಾಂಸ್ಕೃತಿಕ ಚಟುವಟಿಕೆಗಳು. ಹೆಗ್ಗೋಡಿನ ನಾಟಕ ಚಟುವಟಿಕೆಗಳಿಗೆ ಸುಮಾರು ಅರುವತ್ತು ವರ್ಷಗಳ ಇತಿಹಾಸವಿದೆ. ಅಲ್ಲಿ ಸ್ಥಳೀಯರ ಉತ್ಸಾಹ-ಆಸಕ್ತಿಗಳಿಂದ ನೀಲಕಂಠೇಶ್ವರ ನಾಟ್ಯ ಸೇವಾ ಸಂಘವು ಹುಟ್ಟಿಕೊಂಡದ್ದು ೧೯೪೯ರಲ್ಲಿ. ಆಗ ಅಲ್ಲಿನ ಜೀವನಶೈಲಿಯು ನಾಟಕದ ಚಟುವಟಿಕೆಗಳಿಗೆ ಪೂರಕವಾಗಿತ್ತು. ಯಾಕೆಂದರೆ ಅಡಿಕೆ ಕೃಷಿಕರಾದ ಅಲ್ಲಿನ ಜನರಿಗೆ ಕೆಲವು ನಿರ್ದಿಷ್ಟ ಕಾಲಗಳಲ್ಲಿ ಕೆಲಸ ಬಿಟ್ಟರೆ ವರ್ಷದ ಉಳಿದ ವೇಳೆಗಳಲ್ಲಿ ಬೇಕಾದಷ್ಟು ವಿರಾಮವಿರುತ್ತಿತ್ತು. ಕಲಾಸಕ್ತ ಮಂದಿಗೆ ಈ ವಿರಾಮ ಕಾಲವನ್ನು ನಾಟಕವಾಡಲು ಯಾಕೆ ಉಪಯೋಗಿಸಬಾರದು ಎಂಬ ಆಲೋಚನೆ ಹುಟ್ಟುವುದರೊಂದಿಗೆ ಬಿಡುವಿನ ವೇಳೆಗಳು ರಂಗಚಟುವಟಿಕೆಗಳಿಗೆ ಮೀಸಲಾದವು. ನಾಟಕ ಒಂದು ಹವ್ಯಾಸವಾಯಿತು. ಈ ಹವ್ಯಾಸವನ್ನು ಬೆಳೆಸಿಕೊಂಡು ಹೋಗಲು ಸ್ಥಳೀಯವಾಗಿ ದೊರೆಯುವ ಅಡಿಕೆಮರ, ಸೋಗೆ, ಮಡಲುಗಳಿಂದಲೇ ಅವರು ರಂಗಮಂದಿರವೊಂದನ್ನು ನಿರ್ಮಿಸಿಕೊಂಡರು. ಆರಂಭದ ವರ್ಷಗಳಲ್ಲಿ ಅವರು ತಯಾರಿಸುತ್ತಿದ್ದ ನಾಟಕಗಳೆಲ್ಲವೂ ಕಂಪೆನಿ ನಾಟಕಗಳಂತೆ ಪೌರಾಣಿಕ ಮತ್ತು ಐತಿಹಾಸಿಕ ಕಥೆಗಳನ್ನು ಆಧರಿಸಿದ್ದವೇ ಆಗಿದ್ದವು. ಆಗ ಬೌದ್ಧಿಕ ಆಸಕ್ತಿಗಿಂತ ನಿತ್ಯದ ಬದುಕಿನ ಏಕತಾನತೆಯಿಂದ ಬಿಡುಗಡೆ ಪಡೆಯುವುದೇ ನಾಟಕವಾಡುವುದರ ಹಿಂದಿನ ಉದ್ದೇಶವಾಗಿತ್ತು.

ಅರುವತ್ತರ ದಶಕವು ದೇಶದ ಎಲ್ಲೆಡೆ ಎಲ್ಲರೂ ಸಾಂಸ್ಕೃತಿಕವಾಗಿ ಆಧುನಿಕ ಸಮೂಹ ಮಾಧ್ಯಮಗಳತ್ತ ಆಕರ್ಷಿತರಾದ ಕಾಲ. ಚಲನಚಿತ್ರ ಮಾಧ್ಯಮವು ಜನಪ್ರಿಯವಾಗುತ್ತಿದ್ದಂತೆ ಕಂಪೆನಿ ನಾಟಕಗಳು ಮೂಲೆ ಸೇರಿದವು. ಅವುಗಳನ್ನು ಅನುಕರಿಸಿ ಹಳ್ಳಿ ಹಳ್ಳಿಗಳಲ್ಲಿ ಹುಟ್ಟಿಕೊಂಡ ನಾಟಕ ಸಂಸ್ಥೆಗಳೂ ತಮ್ಮ ಕಾರ್ಯಗಳನ್ನು ಸ್ಥಗಿತಗೊಳಿಸಬೇಕಾಯಿತು. ಸಹಜವಾಗಿಯೇ ನೀನಾಸಂ ಕೂಡ ತಾತ್ಕಾಲಿಕವಾಗಿ ತಟಸ್ಥವಾಯಿತು. ಇದೇ ಸಮಯದಲ್ಲಿ ಸುಬ್ಬಣ್ಣ ಅವರು ಮೈಸೂರಿನಲ್ಲಿ ತಮ್ಮ ಪದವಿ ಶಿಕ್ಷಣ ಮುಗಿಸಿ ಊರಿಗೆ ಮರಳಿದರು. ಇತರ ಯುವಕರಂತೆ ಉದ್ಯೋಗವನ್ನರಸಿ ಪಟ್ಟಣಗಳಿಗೆ ಹೋಗುವ ಅನಿವಾರ್ಯತೆ ಅವರಿಗಿರಲಿಲ್ಲ. ಆಸಕ್ತಿಯೂ ಇರಲಿಲ್ಲ.

ರಂಗಭೂಮಿ, ಸಾಹಿತ್ಯ, ಸಂಸ್ಕೃತಿಗಳಲ್ಲಿ ಸಮಾನ ಆಸಕ್ತಿಯನ್ನು ಹೊಂದಿದ್ದ ಅವರಿಗೆ ತಮ್ಮ ಊರಿನಲ್ಲೇ ಇದ್ದ ನೀಲಕಂಠೇಶ್ವರ ನಾಟ್ಯಸಂಘವನ್ನು ತಮ್ಮ ಕಾರ್ಯ ಚಟುವಟಿಕೆಗಳ ಕೇಂದ್ರವಾಗಿ ಮಾಡಿಕೊಂಡರೆ ಹೇಗೆ ಎಂಬ ಯೋಚನೆ ಬಂದಿತು. ಆ ದಿಶೆಯಲ್ಲಿ ಅವರು ತಕ್ಷಣವೇ ಕಾರ್ಯಪ್ರವೃತ್ತರಾದರು. ಮೈಸೂರಿನಲ್ಲಿ ಅವರಿಗೆ ದೊರಕಿದ ಸಾಹಿತ್ಯಕ ವಾತಾವರಣ, ಪಾಶ್ಚಾತ್ಯ ರಂಗಭೂಮಿ ಮತ್ತು ರಂಗಸಿದ್ಧಾಂತಗಳ ಕುರಿತಾದ ಜ್ಞಾನ ಮತ್ತು ಕೈಲಾಸಂ ಮತ್ತು ಶ್ರೀರಂಗರು ಆಗಲೇ ಬರೆದಿದ್ದಂತಹ ಹೊಸ ಮಾದರಿಯ ಸಾಮಾಜಿಕ ನಾಟಕಗಳ ಓದು ಅವರ ಚಿಂತನಾಕ್ರಮಕ್ಕೆ ಹೊಸ ಸ್ವರೂಪವನ್ನು ನೀಡಿದವು. ನೀಲಕಂಠೇಶ್ವರ ನಾಟ್ಯಸಂಘಕ್ಕೆ ನೀನಾಸಂ ಎಂದು ಮರುನಾಮಕರಣ ಮಾಡಿದ ಅವರು ಕೀರ್ತಿನಾಥ ಕುರ್ತಕೋಟಿಯವರ 'ಆ ಮನಿ' ಎಂಬ ನಾಟಕವನ್ನು ಹೈಸ್ಕೂಲು ಮಕ್ಕಳಿಗೆ ನಿರ್ದೇಶಿಸಿ ಆಡಿಸುವುದರೊಂದಿಗೆ ಒಂದು ಹೊಸ ಪರಂಪರೆಯನ್ನೇ ಹುಟ್ಟುಹಾಕಿದರು. ಮುಂದಿನ ದಿನಗಳಲ್ಲಿ ಬಿ. ವಿ. ಕಾರಂತರೂ ಅವರೊಂದಿಗೆ ಸೇರಿಕೊಂಡರು.

೧೯೭೪ರಲ್ಲಿ ಅವರು 'ಶಿವರಾಮ ಕಾರಂತ ರಂಗಮಂದಿರ' ಎಂಬ ಒಂದು ಸುಸಜ್ಜಿತ ರಂಗಮಂದಿರವನ್ನೇ ಅಲ್ಲಿ ಕಟ್ಟಿದ್ದು ಒಂದು ಮಹತ್ವದ ಹೆಜ್ಜೆ. ಸುಬ್ಬಣ್ಣ ಅವರು ತಮ್ಮ ಸೃಜನಶೀಲ ಚಿಂತನೆ-ಯೋಜನೆಗಳ ಮೂಲಕ ಒಂದೊಂದೇ ಹೆಜ್ಜೆ ಮುಂದೆ ಸಾಗಿ ಕುಗ್ರಾಮವಾಗಿದ್ದ ಹೆಗ್ಗೋಡನ್ನು ಒಂದು ಸುಂದರ ಸಾಂಸ್ಕೃತಿಕ ಕೇಂದ್ರವನ್ನಾಗಿ ಪರಿವರ್ತಿಸಿದರು.

ಕಾಳಿದಾಸನ 'ಶಾಕುಂತಲಾ' ನಾಟಕದ ಮರುಚಿಂತನೆಯ ಮೂಲಕ ಅದನ್ನು ೋಕ ಶಾಕುಂತಳ' ಎಂದು ರೂಪಾಂತರಿಸಿ, ಕೇವಲ ಒಂದು ಪ್ರೇಮಕಥೆಯೆಂದು ಸಿದ್ಧವಾಗಿದ್ದ ನಾಟಕಕ್ಕೆ ಅನೇಕ ಆಧುನಿಕ ಚಿಂತನೆಗಳನ್ನು ಮತ್ತು ಸಾಮಾಜಿಕ ರಿವರ್ತನೆಯ ಕೂಗನ್ನೂ ಸೇರಿಸಿ, ಅದು ಎರಡು ಸಂಸ್ಕೃತಿಗಳ ನಡುವಣ ುಖಾಮುಖಿ ಎಂಬಂತೆ ಚಿತ್ರಿಸಿದರು. ರಂಗದ ಮೇಲೆ ನಡೆಯುವ ಒಂದೊಂದು ಟಕವೂ ರಂಗ ಚಳುವಳಿಯ ಒಂದೊಂದು ಭಾಗವಾಗುತ್ತದೆ. ಇದರಲ್ಲಿ ಟಕಕಾರನ ಸೃಜನಶೀಲ ಚಿಂತನೆಯಿಂದ ತೊಡಗಿ ನಿರ್ದೇಶಕ, ನಟ, ಂಗೀತಗಾರ, ಪ್ರಸಾದಕ, ಬೆಳಕಿನ ನಿರ್ವಾಹಕ, ಪರಿಕರ ಕಲಾವಿದ – ಹೀಗೆ ತಿಯೊಬ್ಬರೂ ಸಕ್ರಿಯ ಭಾಗಾಳುಗಳಾಗುತ್ತಾರೆ. ನಮ್ಮ ಸುತ್ತಮುತ್ತ ನಾವು ಕಾಣುವ ತ್ತು ಪ್ರಪಂಚದ ಎಲ್ಲೆಡೆಯೂ ಇರಬಹುದಾದ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ತ್ತು ಆ ಮೂಲಕ ಪರಿಹಾರದ ಸಾಧ್ಯತೆಗಳನ್ನು ಕಂಡುಕೊಳ್ಳುವ ಮನಸ್ಸುಗಳು ಷ್ಟಿಯಾಗುವುದು ರಂಗಚಳುವಳಿಯ ಉದ್ದೇಶ. ಆಧುನಿಕ ಕಾವ್ಯದಂತೆ ಅರ್ಥವನ್ನು ಲುಗಳ ನಡುವೆ ಹುದುಗಿಸಿ, ಒಂದಷ್ಟು ಚಿಂತನೆಯ ಒರೆಗೆ ಹಚ್ಚಿದಾಗಲಷ್ಟೇ ರ್ಥವಾಗುವ ನಾಟಕಗಳಾದ್ದರಿಂದ ಬುದ್ಧಿಗೆ ಕಸರತ್ತು ಕೊಡುವುದು ಕೂಡ ಈ ಧುನಿಕ ನಾಟಕಗಳ ಉದ್ದೇಶ.

ಗ್ರಾಮೀಣ ಪರಿಸರದಲ್ಲಿ ಇಂತಹ ನಾಟಕಗಳನ್ನು ಆಡಿಸುವುದರ ಮೂಲಕ ಮತ್ತು ಳ್ಳಿಗರನ್ನು ಹೆಚ್ಚು ಹೆಚ್ಚು ತನ್ನೆಡೆಗೆ ಸೆಳೆಯುವುದರ ಮೂಲಕ ಗ್ರಾಮಗಳಲ್ಲಿ ಂಗಚಳುವಳಿ ಹೇಗೆ ಸಾಧ್ಯ ಅನ್ನುವುದನ್ನು ನೀನಾಸಂ ತೋರಿಸಿಕೊಟ್ಟಿದೆ. ಪರ್ಟರಿಯನ್ನು ಕಟ್ಟಿಕೊಂಡು 'ತಿರುಗಾಟ'ದ ಮೂಲಕ ರಾಜ್ಯದಾದ್ಯಂತದ ್ರಾಮೀಣ ಪ್ರದೇಶಗಳಲ್ಲಿ ತನ್ನ ನಾಟಕಗಳನ್ನು ಯಶಸ್ವಿಯಾಗಿ ಪ್ರದರ್ಶಿಸಿದೆ.

ನೀನಾಸಂ ಮಾತ್ರವಲ್ಲದೆ ರಾಜ್ಯದ ಅನೇಕ ಗ್ರಾಮಗಳಲ್ಲಿ ಮತ್ತು ಗ್ರಾಮೀಣ ರಿಸರವಿರುವ ಪಟ್ಟಣ ಪ್ರದೇಶಗಳಲ್ಲಿ ರಂಗಚಳುವಳಿಯ ಉದ್ದೇಶವನ್ನಿಟ್ಟುಕೊಂಡೇ ವ್ಯಾಸಿ ರಂಗತಂಡಗಳು ಹುಟ್ಟಿಕೊಂಡಿವೆ. ನಾಟಕದ ದೀರ್ಘ ಇತಿಹಾಸ ಮತ್ತು ರಂಪರೆಗಳನ್ನು ಹೊಂದಿರುವ ಉಡುಪಿಯಲ್ಲಿ ರಂಗಭೂಮಿ, ರಥಬೀದಿ ೆಳೆಯರು, ಮುಂತಾದ ತಂಡಗಳು ಹುಟ್ಟಿಕೊಂಡರೆ ಕುಂದಾಪುರದಲ್ಲಿ ಂಡಾರ್‌ಕಾರ್ಸ್ ಕಾಲೇಜು ಆಧುನಿಕ ನಾಟಕಗಳ ಕೇಂದ್ರವಾಗಿ ಅನೇಕ ವರ್ಷಗಳ ಲ ಪ್ರವರ್ತಿಸಿ 'ರಂಗ ಅಧ್ಯಯನ ಕೇಂದ್ರ'ವೆಂಬ ಸಂಸ್ಥೆಯನ್ನೇ ಹುಟ್ಟುಹಾಕಿತು. ೀವನ್‌ರಾಮ್ ಸುಳ್ಯ ಅವರ ನೇತೃತ್ವದಲ್ಲಿ ಸುಳ್ಯದಲ್ಲಿ ಹುಟ್ಟಿಕೊಂಡ 'ರಂಗಮನೆ' ನ್ನೊಂದು ನೀನಾಸಂ ಆಗುವ ಹಾದಿಯಲ್ಲಿದೆ. ಬೈಂದೂರಿನಂತಹ ತೀರಾ ಹಿಂದುಳಿದ ದೇಶದ ಜನರಲ್ಲಿ ಇವತ್ತು ರಂಗಭೂಮಿಯ ಬಗೆಗಿನ ಆಸಕ್ತಿ ಆಳವಾಗಿ ಬೆಳೆದಿದ್ದರೆ ದಕ್ಕೆ ಕಾರಣ ಅಲ್ಲಿನ 'ಲಾವಣ್ಯ' ತಂಡ. ಮೂಡುಬಿದಿರೆಯ ಆಳ್ವಾಸ್ ಕಾಲೇಜಿನ ಾಡುಗೆಯೂ ಸಣ್ಣದಲ್ಲ. ಸುಬ್ರಹ್ಮಣ್ಯ, ಮುದ್ರಾಡಿಗಳಂತಹ ಗ್ರಾಮೀಣ ಪ್ರದೇಶ ಳಲ್ಲೂ ಇಂದು ಆಧುನಿಕ ನಾಟಕಗಳು ತಯಾರಾಗುತ್ತಿವೆಯೆಂಬುದು ರಂಗ ಳುವಳಿಗಳು ಎಷ್ಟರಮಟ್ಟಿಗೆ ಬೆಳೆದಿವೆ ಎಂಬುದಕ್ಕೆ ಸಾಕ್ಷಿ. ಇಂತಹ ಚಳುವಳಿ ಕೇವಲ ುಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮಗಳಲ್ಲಿ ಮಾತ್ರವಲ್ಲದೆ ಾಜ್ಯದಾದ್ಯಂತದ ಗ್ರಾಮೀಣ ಪ್ರದೇಶಗಳಲ್ಲಿ ನಡೆದಿದೆ ಎಂಬುದಕ್ಕೆ ಅಲ್ಲಲ್ಲಿ ಡೆಯುವ ರಾಜ್ಯಮಟ್ಟದ ನಾಟಕ ಸ್ಪರ್ಧೆಗಳಲ್ಲಿ ಪ್ರದರ್ಶಿತವಾಗುವ ನಾಟಕಗಳೇ ಕ್ಷಿ. ಉಡುಪಿಯ 'ರಂಗಭೂಮಿ'ಯು ಪ್ರತಿವರ್ಷ ನಡೆಸುವ ರಾಜ್ಯಮಟ್ಟದ ನಾಟಕ ರ್ಧೆಯಲ್ಲಿ ರಾಜ್ಯದ ಮೂಲೆ ಮೂಲೆಗಳ ಗ್ರಾಮೀಣ ಪ್ರದೇಶಗಳ ತಂಡಗಳು ೂಸ ಹೊಸ ನಾಟಕಗಳನ್ನು ಹೊತ್ತುಕೊಂಡು ಬರುವುದನ್ನು ನೋಡಿದವರಿಗೆ ಈ ಾತು ಸುಳ್ಳೆನಿಸದು.

ಗ್ರಾಮೀಣ ರಂಗಚಳುವಳಿಯ ಬಗ್ಗೆ ಮಾತನಾಡುವಾಗ 'ಸಮುದಾಯ'ವು ಾಡಿದ ಕೆಲಸಗಳ ಬಗ್ಗೆ ಹೇಳಲೇಬೇಕು. ಸಮುದಾಯವು ಪ್ರಸನ್ನರ ನೇತೃತ್ವದಲ್ಲಿ ಾಜ್ಯದ ಅನೇಕ ಕಡೆಗಳಲ್ಲಿ ರಂಗ ನಾಟಕಗಳು, ಬೀದಿ ನಾಟಕಗಳು, ಚರ್ಚೆ, ಚಾರ ಸಂಕಿರಣಗಳು, ರಂಗ ಶಿಬಿರಗಳ ಮೂಲಕ ನಡೆಸಿದ ಚಳುವಳಿ ಗಾಢವಾದ್ದು. ಎಡಪಂಥೀಯ ಸಿದ್ಧಾಂತ ಮತ್ತು ಪ್ರಗತಿಪರ ನಿಲುವುಗಳನ್ನು ೂಂದಿದ ನಾಟಕಗಳ ಮೂಲಕ ಗ್ರಾಮೀಣ ಪರಿಸರದ ಜನತೆಯ ಗಮನವನ್ನು ಾಗತಿಕ ಸಮಸ್ಯೆಗಳತ್ತ ತಿರುಗಿಸಿದ್ದು ಸಮುದಾಯದ ಬಹುದೊಡ್ಡ ಸಾಧನೆ. ಇದರ ರಿಣಾಮವಾಗಿ ಹೆಚ್ಚೇನೂ ಶಿಕ್ಷಣವಿಲ್ಲದ, ಆರ್ಥಿಕವಾಗಿ ತೀರಾ ಹಿಂದುಳಿದ ಕೆಳವರ್ಗದ ಮಂದಿ ಕೂಡ ನಾಟಕ, ನಟನೆ, ನಿರ್ಮಾಣದ ಬಗ್ಗೆ ಆಸಕ್ತಿ ತೆಗೆದುಕೊಳ್ಳುವಂತಾದದ್ದು ನಿಜವಾಗಿಯೂ ಸ್ಮರಣೀಯ. ಎರಡು ವರ್ಷಗಳ ಹಿಂದೆ ಕುಂದಾಪುರದ ಸಮುದಾಯದವರು ಶಾಲಾ-ಕಾಲೇಜುಗಳ ವಿದ್ಯಾರ್ಥಿಗಳ ಒಂದು ತಂಡವನ್ನು ಕಟ್ಟಿಕೊಂಡು 'ಅಸಮಾನತೆಯ ಆಸುರೀ ಮುಖಗಳು' ಎಂಬ ರೂಪಕವನ್ನು ಸಿದ್ಧಪಡಿಸಿ ಉಡುಪಿ ಜಿಲ್ಲೆಯ ಎಲ್ಲ ಗ್ರಾಮೀಣ ಪ್ರದೇಶಗಳಲ್ಲಿ ಸತತ ಹತ್ತು ದಿನಗಳ ಕಾಲ ಪ್ರದರ್ಶನವಿತ್ತದ್ದು ಗ್ರಾಮೀಣ ಪ್ರದೇಶಗಳಲ್ಲಿ ರಂಗಚಳುವಳಿಯ ಮೂಲಕ ಜಾಗೃತಿ ಮೂಡಿಸುವಲ್ಲಿ ಸಮುದಾಯವು ತೋರಿಸಿದ ಕಾಳಜಿಯ ಪ್ರತೀಕ.

ರಂಗಭೂಮಿಯ ಶಕ್ತಿಯ ಅರಿವನ್ನು ನಾವಿಂದು ಮುಖ್ಯವಾಗಿ ಮೂಡಿಸಬೇಕಾಗಿರುವುದು ಮುಂದೆ ನಮ್ಮ ಸಾಂಸ್ಕೃತಿಕ ಉತ್ತರಾಧಿಕಾರಿಗಳಾಗಲಿರುವ ನಮ್ಮ ಮಕ್ಕಳಲ್ಲಿ. ಈ ಉದ್ದೇಶದಿಂದ ನಮ್ಮಲ್ಲಿ 'ಮಕ್ಕಳ ನಾಟಕ' ಎಂಬ ಒಂದು ಪ್ರಕಾರವೇ ಹುಟ್ಟಿಕೊಂಡಿದೆ. ಮಕ್ಕಳ ಪ್ರಕೃತಿ, ಪ್ರವೃತ್ತಿ, ಆಸಕ್ತಿ ಮತ್ತು ಮನೋಭಾವಗಳಿಗೆ ಹೊಂದಿಕೆಯಾಗುವಂಥ ಸುಲಭಗ್ರಾಹ್ಯವಾದ ಕಥೆಗಳನ್ನು ಆಯ್ದುಕೊಂಡು ಅವರಲ್ಲಿ ಸಾಹಸ ಪ್ರವೃತ್ತಿ, ಧೈರ್ಯ, ಆತ್ಮವಿಶ್ವಾಸ, ಪ್ರೀತಿ, ಔದಾರ್ಯ, ಪರಿಸರಪ್ರೇಮ ಮುಂತಾದ ಮೌಲ್ಯಗಳ ಅರಿವನ್ನು ಮೂಡಿಸುವ ನಾಟಕಗಳನ್ನು ಆಡಿಸಿದಾಗ ಅವರು ಸಹಜವಾಗಿ ರಂಗಭೂಮಿಯತ್ತ ಆಕರ್ಷಿತರಾಗುತ್ತಾರೆ. ಸಾಗರದ ತುಮರಿಯಲ್ಲಿ ಹುಟ್ಟಿಕೊಂಡ ಕಿನ್ನರಮೇಳವು ಮಕ್ಕಳ ನಾಟಕಗಳನ್ನು ಮಕ್ಕಳ ಮೂಲಕ ಮಾತ್ರವಲ್ಲದೆ ದೊಡ್ಡವರಿಂದಲೂ ಆಡಿಸುತ್ತ ರಾಷ್ಟ್ರಮಟ್ಟದ ಹೆಸರನ್ನು ಇವತ್ತು ಗಳಿಸಿದೆ. ಗ್ರಾಮೀಣ ಪ್ರದೇಶದ ಈ ತಂಡವು




ಮಾಡಿದ ರಂಗಚಳುವಳಿ ಅನನ್ಯವಾದ್ದು. ಹಾಗೆಯೇ ಸಮುದಾಯದವರು ರಾಜ್ಯದ ಅನೇಕ ಗ್ರಾಮೀಣ ಪ್ರದೇಶಗಳಲ್ಲಿ ಮಕ್ಕಳಿಗಾಗಿ ರಂಗ ತರಬೇತಿ ಶಿಬಿರಗಳನ್ನು ನಡೆಸಿದ್ದಾರೆ. ಹಳ್ಳಿಯ ಶಾಲೆ ಮಕ್ಕಳಲ್ಲಿ ರಂಗಭೂಮಿಯ ಅರಿವು ಮೂಡಿಸುವಲ್ಲಿ ಸಮುದಾಯವು ಕಂಡುಕೊಂಡ ಇನ್ನೊಂದು ಮಾರ್ಗವೆಂದರೆ ಎಲ್ಲ ಪ್ರಾಥಮಿಕ ಶಾಲೆಗಳ ಆಸಕ್ತ ಅಧ್ಯಾಪಕರನ್ನು ಕರೆಸಿ ಅವರಿಗಾಗಿ ಮಕ್ಕಳ ನಾಟಕಗಳ ಕುರಿತಾದ ತರಬೇತಿ ಶಿಬಿರ, ಕಾರ್ಯಾಗಾರ, ಚರ್ಚೆ, ಗೋಷ್ಠಿ, ನಾಟಕ ನಿರ್ಮಾಣ, ಪ್ರದರ್ಶನಗಳನ್ನು ಹಮ್ಮಿಕೊಳ್ಳುವುದರೊಂದಿಗೆ ಮಕ್ಕಳ ನಾಟಕೋತ್ಸವವನ್ನು ನಡೆಸುವುದು. ಕುಂದಾಪುರದ ಸಮುದಾಯ ಈ ಕೆಲಸವನ್ನು ಅನೇಕ ವರ್ಷಗಳ ಕಾಲ ಸತತವಾಗಿ ನಡೆಸಿದೆ. ಇದು ರಂಗಚಳುವಳಿಯ ಒಂದು ಬಹುಮುಖ್ಯ ಅಂಶವಾಗಿ ನನಗೆ ಕಂಡಿದೆ.

ರಂಗಚಳುವಳಿಯ ಎಲ್ಲಾ ಉದ್ದೇಶಗಳೂ ಪೂರೈಕೆಯಾಗಬೇಕಾದರೆ ಒಂದು ಊರಿನ ಎಲ್ಲ ನಾಟಕಾಸಕ್ತ ಮಂದಿ ಒಟ್ಟಾಗಿ ಕೆಲಸಮಾಡಬೇಕು. ನಾಟಕದ ಆಯ್ಕೆಯಿಂದ ತೊಡಗಿ ಕೊನೆಯ ಪ್ರೇಕ್ಷಕನನ್ನು ತಲುಪುವ ತನಕವೂ ಬಹಳ ಎಚ್ಚರಿಕೆಯಿಂದ ಕೆಲಸ ಮಾಡಬೇಕು. ಆಯ್ದುಕೊಳ್ಳುವ ನಾಟಕವು ಯಾವುದಾದರೊಂದು ಹುಡುಕಾಟವಿರುವ, ಸಂಸ್ಕೃತಿಯ ವಿಮರ್ಶೆಯಿರುವ, ವಸ್ತುವಿನಿಂದ ಕೂಡಿದ್ದಾಗಿರಬೇಕು. ಐತಿಹಾಸಿಕ, ಪೌರಾಣಿಕ, ಸಾಮಾಜಿಕ ಯಾವುದೇ ಆದರೂ ಅದರಲ್ಲಿ ಮರುಶೋಧನೆಯಿದ್ದು, ಅದು ಆಧುನಿಕ ಸಮಸ್ಯೆಗಳ ಬಗ್ಗೆ ಸಮಾಂತರವಾಗಿ

ಚರ್ಚಿಸಬೇಕು. ನಾಟಕಕಾರ ಕಾಳಿದಾಸನೋ, ಭಾಸನೋ, ಶೂದ್ರಕನೋ ಆಗಿದ್ದರೂ ಆ ನಾಟಕಗಳು ಇವತ್ತು ಯಾಕೆ ಪ್ರಸ್ತುತ ಎಂಬ ಪ್ರಶ್ನೆಗೆ ಉತ್ತರಿಸುತ್ತ ಎರಡು ಸಂಸ್ಕೃತಿಗಳ ಅಥವಾ ಎರಡು ಕಾಲಘಟ್ಟಗಳ ಮುಖಾಮುಖಿಗೆ ಅವಕಾಶ ಕೊಡುವಂತಿರಬೇಕು. ನಾಟಕಗಳ ನಿರ್ಮಾಣ ಮತ್ತು ಪ್ರದರ್ಶನಗಳ ಜತೆಗೆ ರಂಗ ತರಬೇತಿ ಶಿಬಿರಗಳು, ಚರ್ಚೆ, ವಿಚಾರಗೋಷ್ಠಿ, ಸಂಸ್ಕೃತಿ ಶಿಬಿರಗಳು, ಸಾಹಿತ್ಯ-ನಾಟಕ-ಕಾವ್ಯಗಳ ಸಹೃದಯತಾ ಶಿಬಿರಗಳನ್ನು ಗ್ರಾಮೀಣ ಪ್ರದೇಶಗಳಲ್ಲಿ ಆಗಾಗ ನಡೆಸುತ್ತಿದ್ದರೆ ಜನರ ಮನೋಭಾವ ತಾನಾಗಿಯೇ ಬದಲಾಗುತ್ತದೆ. ರಂಗಭೂಮಿಗೆ ಸಂಬಂಧಿಸಿದ ಎಲ್ಲ ವಿಷಯ-ವಸ್ತುಗಳಿಗೆ ಅವರು ಚಿರಪರಿಚಿತರಾಗುತ್ತಾರೆ. ಮನುಷ್ಯ ಧರ್ಮವನ್ನೇ ಮರೆಸುವಂಥ ಧಾರ್ಮಿಕ ಅಂಧಶ್ರದ್ಧೆಗಳು, ಪ್ರೀತಿಯ ಬೇರುಗಳನ್ನೇ ಕತ್ತರಿಸುವಂಥ ಮತೀಯ ದ್ವೇಷಗಳಿಂದ ದೂರವಾಗಿ ಪರಸ್ಪರ ಸ್ನೇಹ ಸಂಬಂಧಗಳನ್ನು ಸ್ಥಾಪಿಸಿಕೊಳ್ಳಲು ಕಲಿಯುತ್ತಾರೆ. ಇದುವೇ ತಾನೇ ರಂಗಚಳುವಳಿಯ ಉದ್ದೇಶ ?

ಸಾಹಿತ್ಯದಲ್ಲಿ ನವ್ಯೋತ್ತರ ಚಳುವಳಿಯು ದೇಸಿ ಕಲೆಗಳ ಪುನರುತ್ಥಾನಕ್ಕೆ ಅವಕಾಶ ಮಾಡಿಕೊಟ್ಟಿರುವುದು ಎಲ್ಲರಿಗೂ ತಿಳಿದಿರುವ ವಿಚಾರ. ಆಧುನಿಕವಾದ ಅನೇಕ ನಾಟಕಗಳೂ ಇಂದು, ಮರೆಯಾಗಿ ಮೂಲೆ ಸೇರತೊಡಗಿದ ಜನಪದ ಕಲೆಗಳನ್ನೂ, ಮಿಥ್‌ಗಳನ್ನೂ, ರೂಢಿ-ಸಂಪ್ರದಾಯಗಳನ್ನೂ ಬಳಸಿಕೊಳ್ಳುವುದರ ಮೂಲಕ ಅವುಗಳನ್ನು ಜೀವಂತವಾಗಿರಿಸಲು ಪ್ರಯತ್ನಿಸಿವೆ. ಕಂಬಾರ, ಕಾರ್ನಾಡ್ ಮುಂತಾದವರ ನಾಟಕಗಳಲ್ಲಿ ಎದ್ದುಕಾಣುವ ಅಂಶಗಳೇ ಇವು. ಈ ನಾಟಕಗಳನ್ನು ರಂಗದ ಮೇಲೆ ತರುವಾಗ ಗ್ರಾಮೀಣ ಪ್ರದೇಶವೇ ಸಹಜವಾಗಿ ಅಲ್ಲಿಗೆ ಬರುತ್ತದೆ. ಪೌರಾಣಿಕ ಶೈಲಿಯ ಕೆಲವು ಸಂಸ್ಕೃತ ನಾಟಕಗಳ ಪ್ರಸ್ತುತಿಗೆ ಹಿನ್ನೆಲೆಯಾಗಿ ಜನಪದ ಕಲೆಗಳದ್ದೇ ರಂಗತಂತ್ರಗಳನ್ನು ಬಳಸುವುದಿದೆ. ಪ್ರಸಿದ್ಧ ನಿರ್ದೇಶಕರಾದ ಗೋಪಾಲಕೃಷ್ಣ ನಾಯರಿಯವರು ತಾವು ನಿರ್ದೇಶಿಸಿದ ಅನೇಕ ನಾಟಕಗಳಿಗೆ ದೇಸಿ ಕಲೆಗಳ ಹಿನ್ನೆಲೆಯನ್ನೊದಗಿಸಿ ನಾಟಕದ ಸೌಂದರ್ಯವನ್ನು ಹೆಚ್ಚಿಸಿದ್ದಾರೆ. ಅವರು ನಿರ್ದೇಶಿಸಿದ ಸಂಸ್ಕೃತ ಮೂಲದ ಭಾಸನ 'ಕರ್ಣಭಾರ'ವನ್ನು 'ಹಾಡಿಯಾಟ'ವಾಗಿ ತೀರಾ ಗ್ರಾಮೀಣ ಪರಿಸರದಲ್ಲಿ ಸಹಜ ಬೆಳಕಿನ ಬಳಕೆಯೊಂದಿಗೆ ಅವರು ಮಾಡಿದ ಪ್ರಯೋಗ ತುಂಬ ಪರಿಣಾಮಕಾರಿಯಾಗಿತ್ತು. ಅದೇ ರೀತಿ ಇತ್ತೀಚೆಗೆ ಕುಂದಾಪುರದ ರಂಗ ಅಧ್ಯಯನ ಕೇಂದ್ರದ ಡಿಪ್ಲೋಮ ವಿದ್ಯಾರ್ಥಿಗಳ ಮೂಲಕ ಅವರು ಆಡಿಸಿದ 'ಮತ್ತವಿಲಾಸ' ಎಂಬ ನಾಟಕಕ್ಕೆ ವೀರಗಾಸೆಯ ಹಿನ್ನೆಲೆಯನ್ನು ಬಳಸಿಕೊಂಡದ್ದು ನಾಟಕದ ಸಂವಹನಕ್ಕೆ ಬಹಳ ಪೂರಕವಾಗಿತ್ತು. ಇವತ್ತು ಆಧುನಿಕತೆಯ ಭರಾಟೆಯಲ್ಲಿ ಗ್ರಾಮೀಣ ಪ್ರದೇಶಗಳ ಜನರೂ ಆಧುನಿಕತೆಯ ಆಕರ್ಷಣೆಯಲ್ಲಿ ಕೊಚ್ಚಿಕೊಂಡುಹೋಗುತ್ತಿರುವ ಇಂದಿನ ಸಂದರ್ಭದಲ್ಲಿ ಗ್ರಾಮೀಣ ಕಲೆಗಳನ್ನು ಪುನಃ ಜೀವಂತವಾಗಿರಿಸುವ ಮೂಲಕ ರಂಗಚಳುವಳಿಗೆ ಇಂಥವರು ನೀಡುತ್ತಿರುವ ಕೊಡುಗೆಯನ್ನು ಮರೆಯಲಾಗದು. ಆದರೆ ಇಂತಹ ಪ್ರಯೋಗಗಳನ್ನು ಮಾಡುವವರಿಗೆ ಗ್ರಾಮೀಣ ಕಲೆಗಳ ಬಗ್ಗೆ ಅಪಾರವಾದ ಮತ್ತು ಆಳವಾದ ಅನುಭವ ಮತ್ತು ಜ್ಞಾನ ಮಾತ್ರವಲ್ಲದೆ ಪ್ರೀತಿಯೂ ಇರಬೇಕಾಗುತ್ತದೆ. ನಗರವಾಸಿಗಳಿಂದ ಅಥವಾ ಎನ್‌ಎಸ್‌ಡಿಗಳಂತಹ ಸಂಸ್ಥೆಗಳಲ್ಲಿ ಕಲಿತು ಪದವಿ ಪಡೆದವರಿಂದ ಸಾಧ್ಯ ಇದನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಈ ದೃಷ್ಟಿಯಿಂದ ಹೊಸ ರೀತಿಯಲ್ಲಿ ಹಳೆಯದನ್ನು ಬಳಸಿಕೊಳ್ಳುವ ಕಲೆಯನ್ನು ಮೈಗೂಡಿಸಿಕೊಳ್ಳಲು ಗ್ರಾಮೀಣಪ್ರದೇಶದ ಮಂದಿಗೆ ತರಬೇತಿ ಸಿಗುವಂತಾಗಬೇಕು. ಇದು ತರಬೇತಿ ಶಿಬಿರಗಳು, ಪರಸ್ಪರ ಮಾತುಕತೆ, ಚರ್ಚೆ, ವಿಚಾರ ಸಂಕಿರಣಗಳು, ಮುಖಾಮುಖಿ, ನಾಟಕ ನಿರ್ಮಾಣ ಮತ್ತು ಪ್ರದರ್ಶನಗಳ ಮೂಲಕವೇ ನಡೆಯಬೇಕಷ್ಟೆ. ಆಗಲೇ ರಂಗಚಳುವಳಿಯು ನಿಜವಾದ ಅರ್ಥವನ್ನು ಪಡೆದುಕೊಳ್ಳುತ್ತದೆ.

**ಪಾರ್ವತಿ ಜಿ. ಐತಾಳ್**
'ಸುರಗಂಗಾ', ಬಸ್ರೂರು ಅಡ್ಡರಸ್ತೆ, ಕುಂದಾಪುರ, ಉಡುಪಿ ಜಿಲ್ಲೆ - ೫೭೬ ೨೦೧


# SRI SIDDHARTHA EDUCATION SOCIETY

**SIDDHARTHANAGAR, TUMKUR-572 107**
**Phone : 0816-2206458/2278867/2201073**

*The following Institutions are run by the Society in different parts of Karnataka*

| | | | |
|---|---|---|---|
| 1. Medical College | 1 | 8. High School | 23 |
| 2. Engineering College | 1 | 9. Training Institute | 5 |
| 3. Dental College | 1 | 10. Sanskrit School | 9 |
| 4. School of Nursing | 1 | 11. Paḷi School | 1 |
| 5. B.Ed. College | 1 | 12. M.B.A. | 1 |
| 6. First Grade College | 1 | 13. M.C.A. | 1 |
| 7. Junior College | 5 | 14. College of Nursing | 1 |

*In addition there are 21 Student Hostels*

Shri H. M. GANGADHARAIAH
Founder Secretary

Dr. G. SHIVAPRASAD
Secretary

Dr. G. PARAMESHWARA
Joint Secretary

# ವಿಶ್ವಾಸದಿಂದಿರಿ...

ಬಿಇಎಲ್ ನಿಮ್ಮ ಮತ ಎಣಿಕೆಯನ್ನು ಖಾತರಿಗೊಳಿಸುತ್ತದೆ





ಶೀಘ್ರ ಮತ್ತು ಪಾರದರ್ಶಕ ಮತದಾನಕ್ಕಾಗಿ ವಿದ್ಯುನ್ಮಾನ ಮತ ಯಂತ್ರಗಳು

ಭಾರತದ ಪ್ರಧಾನ ರಕ್ಷಣಾ ವಿದ್ಯುನ್ಮಾನ ಸಂಸ್ಥೆಯಾದ ಭಾರತ್ ಎಲೆಕ್ಟ್ರಾನಿಕ್ಸ್ ಲಿಮಿಟೆಡ್ (ಬಿಇಎಲ್) ತನ್ನ ವಿದ್ಯುನ್ಮಾನ ಮತ ಯಂತ್ರಗಳೊಂದಿಗೆ ಭಾರತದಲ್ಲಿ ಮತದಾನಕ್ಕೊಂದು ಹೊಸ ಆಯಾಮ ನೀಡಿದೆ. ನಂಬಲರ್ಹ ಮತ್ತು ಪಾರದರ್ಶಕತೆಯಿಂದ ಕೂಡಿದ ಈ ವಿದ್ಯುನ್ಮಾನ ಮತ ಯಂತ್ರಗಳು ದೇಶದ ಮತದಾನವನ್ನು ನಿಷ್ಪಕ್ಷಪಾತವಾಗಿ ನಿರ್ವಹಿಸಲು ಸಹಕಾರಿಯಾಗಿವೆ.

ಬಿಇಎಲ್, ಬೃಹತ್ ಶ್ರೇಣಿಯ ರಾಡರ್‌ಗಳು, ರಕ್ಷಣಾ ಸಂವಹನ, ನಾವೆಯ ವ್ಯವಸ್ಥೆಗಳು, ವಿದ್ಯುನ್ಮಾನ ಸಂಗ್ರಾಮ, ಎಲೆಕ್ಟ್ರೋ ಆಪ್ಟಿಕ್ಸ್, ಟ್ಯಾಂಕ್ ಎಲೆಕ್ಟ್ರಾನಿಕ್ಸ್, ದೂರಸಂಪರ್ಕ ಮತ್ತು ಬಾನುಲಿ ಪ್ರಸಾರ, ಸೋಲಾರ್ ಫೋಟೊ ವೋಲ್ಟಾಯಿಕ್ಸ್, ವೃತ್ತಿಪರ ವಿದ್ಯುನ್ಮಾನ ಭಾಗಗಳು ಹಾಗೂ ಟರ್ನ್‌ಕೀ ವ್ಯವಸ್ಥೆಯ ಪರಿಹಾರಗಳನ್ನು ರಕ್ಷಣಾ ಮತ್ತು ನಾಗರಿಕ ಉಪಯೋಗಗಳಿಗಾಗಿ ಸಮರ್ಪಿಸುತ್ತಿದೆ.

ಭಾರತ್ ಎಲೆಕ್ಟ್ರಾನಿಕ್ಸ್
भारत इलेक्ट्रॉनिक्स
BHARAT ELECTRONICS
ಗುಣಮಟ್ಟ. ತಂತ್ರವಿಜ್ಞಾನ. ನಾವೀನ್ಯತೆ

www.bel-india.com

ಬಿಇಎಲ್ ಒಂದು ನವರತ್ನ ಸಂಸ್ಥೆ

ಇ-ಮೇಲ್: corpcomn@bel.co.in

# ತಾಳೆಗರಿ ಹಸ್ತಪ್ರತಿಗಳು – ಎಲ್ಲಿಂದೆಲ್ಲಿಗೆ ?



ನಾವು ಸಣ್ಣವರಿದ್ದಾಗ ನಮ್ಮ ತಂದೆ ನಾಲ್ಕೈದು ತಾಳೆಗರಿಗಳನ್ನು ಮನೆಗೆ ತಂದಿದ್ದರು. ಅವನ್ನು ಯಾರಿಗೋ ತಲುಪಿಸಬೇಕು ಎಂದು ತಂದಿದ್ದರು. ಅವುಗಳಲ್ಲಿ ಒಂದನ್ನು ನಾವು ಕೈಗೆತ್ತಿಕೊಂಡು ತಿರುಗಿಸಿ ತಿರುಗಿಸಿ ನೋಡುವಾಗ ಅದು ಪಟಪಟನೆ ಮುರಿದುಹೋಯಿತು. ಧಾವಿಸಿ ಬಂದ ನಮ್ಮ ತಂದೆ ಅವನ್ನು ನಮ್ಮ ಕೈಯಿಂದ ತೆಗೆದುಕೊಂಡು ಜೋಪಾನವಾಗಿ ತೆಗೆದಿಟ್ಟರು. ಒಂದನ್ನು ಹಾಳುಮಾಡಿದುದಕ್ಕಾಗಿ ಚೆನ್ನಾಗಿ ಬೈದರು. ಆಮೇಲೆ ಬಹಳ ವರ್ಷಗಳವರೆಗೂ ಆ ತಾಳೆಗರಿ ಹಾಳಾದುದಕ್ಕಾಗಿ ಪಶ್ಚಾತ್ತಾಪ ಪಡುತ್ತಲೇ ಇದ್ದರು. ಆ ಬಗ್ಗೆ ಕೇಳಲು ನನಗೆ ಧೈರ್ಯವೇ ಇರಲಿಲ್ಲ. ಅವರು ಅಷ್ಟು ನೊಂದುಕೊಂಡದ್ದು ಏಕೆ ಎಂದು ನನಗೆ ಈಗ ಅರ್ಥವಾಗುತ್ತಿದೆ.

ನಮ್ಮಲ್ಲಿ ವಸ್ತು ಸಂಗ್ರಹಾಲಯಗಳಲ್ಲಿ ಅಲ್ಲದೆ ಅನೇಕರ ಮನೆಗಳಲ್ಲಿಯೂ ತಾಳೆಗರಿಗಳಿವೆ. ಬಹಳ ಜೋಪಾನವಾಗಿ ಕಾಪಾಡಿಕೊಂಡು ಬರುತ್ತಿದ್ದಾರೆ. ಅವು ಎಲ್ಲೆಲ್ಲಿವೆ ? ಇರಬಹುದು - ಕರ್ನಾಟಕದುದ್ದಕ್ಕೂ. ಕನ್ನಡ ವಲ್ಲದ್ದು ಭಾರತದಲ್ಲಿ ಬೇರೆಲ್ಲೆಲ್ಲೋ ಇರಬಹುದು. ಆದರೆ ಕನ್ನಡ ತಾಳೆಗರಿಯ ಪ್ರತಿಗಳು ದೂರದ ಜರ್ಮನಿಯಲ್ಲಿವೆ. ಇಲ್ಲಿಂದ ಅಲ್ಲಿಗೆ ಹೇಗೆ ಹೋಯಿತು ? ಗೊತ್ತಿಲ್ಲ. ಸುಮಾರು ನೂರು ವರ್ಷಗಳ ಹಿಂದೆ ನಾಲ್ಕು ಬಾರಿ ಬಂದುಹೋದ ಪ್ರಷ್ಯಾದ ತಂಡಗಳು ಇವನ್ನು ಒಯ್ದವಂತೆ. ಯಾರು ? ಯಾಕೆ ? ಹೇಗೆ ? - ಏನೂ ಗೊತ್ತಿಲ್ಲ.

ಈ ಬಗ್ಗೆ ಮೊದಲು ನನಗೆ ಸುಳಿವು ಸಿಕ್ಕಿದ್ದು ಕನ್ನಡದಲ್ಲಿ ಖಗೋಳ ಜ್ಞಾನದ ಗ್ರಂಥಗಳನ್ನು ಹುಡುಕಲು ಆರಂಭಿಸಿದಾಗ. ಸುಮಾರು ೨೦ ವರ್ಷಗಳ ಹಿಂದೆ ಪ್ರಕಟವಾಗಿದ್ದ ಡಾ|| ಕೆ. ಕೃಷ್ಣಮೂರ್ತಿ ಅವರ ಅಭಿನಂದನ ಗ್ರಂಥದಲ್ಲಿ ಲೇಖನವೊಂದಿತ್ತು. ಬರೆದವರು ಡಾ|| ರಾಮಕೃಷ್ಣ ಐತಾಳ ಎಂಬುವರು. ಅವರು ಜರ್ಮನಿ ದೇಶದುದ್ದಕ್ಕೂ ಯಾವ ಯಾವ ಗ್ರಂಥಾಲಯಗಳಲ್ಲಿ ಎಷ್ಟೆಷ್ಟು ಹಸ್ತಪ್ರತಿಗಳಿವೆ ಎಂಬ ವಿವರ ಕೊಟ್ಟಿದ್ದರು. ಇನ್ನೊಂದು ಲೇಖನದಲ್ಲಿ ಉಳಿದ ಭಾಷೆಗಳ ಹಸ್ತಪ್ರತಿಗಳ ವಿವರಗಳೂ ಇದ್ದವು. ವಿ. ರಾಘವನ್ ಅವರು ಐವತ್ತರ ದಶಕದಲ್ಲಿಯೇ ತಮಿಳು ಹಸ್ತಪ್ರತಿಗಳ ಯಾದಿಯನ್ನು ಸಿದ್ಧಪಡಿಸಿ ಇಟ್ಟಿದ್ದರು. ಕನ್ನಡದ ಯಾದಿ ಇದೆಯೇ ? ಈ ಬಗ್ಗೆ ಸುಳಿವೂ ಸಿಗಲಿಲ್ಲ. ಇಂದಿನ ಇಂಟರ್ನೆಟ್ ಯುಗದಲ್ಲಿ ಇದನ್ನು ಹುಡುಕುವುದು ಕಷ್ಟವಾಗಲಾರದು ಎಂದುಕೊಂಡೆ. ನನ್ನ ಅನಿಸಿಕೆ ಸುಳ್ಳಾಯಿತು. ಈ-ಮೈಲ್ ಮೂಲಕ ಎಸ್. ಆರ್. ಶರ್ಮ ಎಂಬುವರ ಪರಿಚಯವಾಯಿತು. ಭಾರತೀಯ ಖಗೋಳ ವಿಜ್ಞಾನದ ಅನೇಕ ಆಕರ ಗ್ರಂಥಗಳನ್ನು ಅಧ್ಯಯನ ಮಾಡಿರುವ ಇವರು ಅಲಿಘರ ವಿಶ್ವವಿದ್ಯಾಲಯದಿಂದ ನಿವೃತ್ತಿಯಾದ ಮೇಲೆ ಜರ್ಮನಿಯಲ್ಲಿ ನೆಲೆಸಿದ್ದಾರೆ. ಅವರ ಸಹಾಯದಿಂದ ಗ್ರಂಥಾಲಯದೊಡನೆ ಸಂಪರ್ಕ ಏರ್ಪಟ್ಟಿತು. (ಎಲ್ಲ ಈ-ಮೈಲ್ ಮೂಲಕವೇ). ಗ್ರಂಥಪಾಲಕರು ಬರ್ಲಿನ್, ಹ್ಯಾಂಬರ್ಗ್, ಟ್ಯುಬಿಂಗೆನ್, ಸ್ಟುಟ್‌ಗಾರ್ಟ್ ಮತ್ತು ಗೊಟಿಂಗೆನ್‌ಗಳಲ್ಲಿ ಕನ್ನಡ ಹಸ್ತಪ್ರತಿಗಳಿವೆ ಎಂದು ತಿಳಿಸಿದರು. ನೀವು ಹುಡುಕಿ ಯಾವುದು ಬೇಕೆಂದು ಕೇಳಿದರೆ ಅದರ ಪ್ರತಿ ಮಾಡಿಕೊಡುತ್ತೇವೆ ಎಂದು ಬರೆದರು.

**ಅಲ್ಲಿಗೆ ಹೋಗುವುದು ಹೇಗೆ ?**

ಕಳೆದ ವರ್ಷ ಟ್ಯುಬಿಂಗೆನ್‌ಗೆ ಹೋಗುವ ಅವಕಾಶವಿತ್ತು. ಆದರೆ ತಪ್ಪಿಹೋಯಿತು. ನಿರಾಶಳಾಗಿದ್ದಾಗ ಇನ್ನೊಂದು ಆಹ್ವಾನ ಬಂದಿತು. ಹೊರಟು ನಿಂತೆ. ಹ್ಯಾಂಬರ್ಗ್‌ನಲ್ಲಿ ಜ್ಞಾನದ ಇತಿಹಾಸಕ್ಕೇ ಮೀಸಲಾದ ಅಧ್ಯಯನ ಸಂಸ್ಥೆ ಇದೆ. ಅದು ವಿಶ್ವವಿದ್ಯಾಲಯಕ್ಕೆ ಸೇರಿದೆ. ಅಲ್ಲಿಂದ ಒಂದು ಕಿ.ಮೀ. ದೂರದಲ್ಲಿ ಗ್ರಂಥಾಲಯ. ಗ್ರಂಥಾಲಯದ ಪಕ್ಕದಲ್ಲಿ ಏಶಿಯಾ - ಆಫ್ರಿಕಾಗಳ ಅಧ್ಯಯನಕ್ಕಾಗಿ ಇನ್ನೂ ಒಂದು ಸಂಸ್ಥೆ ಇದೆ. ನನ್ನ ಗೋಷ್ಠಿಯ ನಂತರ ಒಂದು ವಾರ ಉಳಿದು ಹಸ್ತಪ್ರತಿಗಳನ್ನು ಹುಡುಕುವ ಯೋಜನೆ ಹಾಕಿಕೊಂಡೆ. ಆ ವಾರದ ವಾಸ್ತವ್ಯ ೩೦ ಕಿ.ಮೀ. ದೂರದ ಬೆರ್ಗೆಡೋರ್ಫ್ ಎಂಬಲ್ಲಿ. ಅಲ್ಲಿ ಒಂದು ಹಳೆಯ ವೀಕ್ಷಣಾಲಯವಿದೆ.

ಹ್ಯಾಂಬರ್ಗ್‌ನಲ್ಲಿ ಕಾಲಿಟ್ಟ ಕೂಡಲೇ ಗ್ರಂಥಾಲಯವನ್ನು ಹುಡುಕಿಕೊಂಡು ಹೊರಟೆ. ಅಲ್ಲಿ ಯಾವುದೇ ಕಟ್ಟಡದ ಮೇಲೂ ದೊಡ್ಡ ಫಲಕಗಳಿಲ್ಲ. ಹೀಗಾಗಿ ಹುಡುಕುವುದು ಕಷ್ಟವೇ ಆಯಿತು. ಬೆರ್ಗೆಡೋರ್ಫ್‌ನಿಂದ ಬಸ್, ರೈಲು ಹಿಡಿದು ವಿಶ್ವವಿದ್ಯಾಲಯ ಮುಟ್ಟಿದಾಗ ಫಲಕಗಳಿಲ್ಲದ ಭವನಗಳನ್ನು ತಡವುತ್ತಾ ನಡೆದಾಗ ಏಶಿಯಾ-ಆಫ್ರಿಕಾ ಅಧ್ಯಯನ ಸಂಸ್ಥೆ ಸಿಕ್ಕಿತು. ಅಲ್ಲಿಯ ಗ್ರಂಥಪಾಲಕರು ಫೆಲಿಕ್ಸ್ ಸಂಸ್ಕೃತ ಬಲ್ಲವರು. ಕನ್ನಡ ಎಂಬ ಶಬ್ದ ಅವರಿಗೆ ಹೊಸದಲ್ಲ. ಅವರ ಗ್ರಂಥಾಲಯದಲ್ಲಿ ಕನ್ನಡದ ಬಗ್ಗೆ ಇಂಗ್ಲಿಷ್ ಪುಸ್ತಕಗಳಿವೆ. ಆ. ನೇ. ಉಪಾಧ್ಯೆ, ಜಿ.ಎಸ್. ಗಾಯಿ ಅವರ ಪುಸ್ತಕಗಳಿದ್ದವು. ನಿಘಂಟುಗಳಿವೆ. ಅವರು ನನ್ನನ್ನು ಮುಖ್ಯ ಗ್ರಂಥಾಲಯಕ್ಕೆ ಕರೆದೊಯ್ದರು. ನಾನು ಅದೇ ಕಟ್ಟಡದ ಮುಂದೆ ಹಾದು ಹೋಗಿದ್ದೆ. ಆದರೆ ಅದೇ ಗ್ರಂಥಾಲಯ ಎಂದು ನನಗೆ ತಿಳಿದಿರಲಿಲ್ಲ.

ಗ್ರಂಥಾಲಯದಲ್ಲಿ ಬಹಳ ಸಹಕಾರ ಸಿಕ್ಕಿತು. ೧೨ ಸಂಪುಟಗಳ ದೊಡ್ಡ ಪಟ್ಟಿಯನ್ನೇ ನನ್ನ ಮುಂದೆ ಇರಿಸಿದರು. ಅದರಲ್ಲಿ ವ್ಯವಸ್ಥಿತವಾಗಿ ವಿಷಯಾನುಕ್ರಮಣಿಕೆಯಲ್ಲಿ ಅಧ್ಯಾಯಗಳಿದ್ದವು. ಹಸ್ತಪ್ರತಿ ಯಾವ ಬೀರುವಿನಲ್ಲಿದೆ ; ಅದರ ಸಂಖ್ಯೆ ಎಷ್ಟು ; ಅದರಲ್ಲಿರುವ ಗ್ರಂಥದ ಹೆಸರು, ಭಾಷೆ - ಇಷ್ಟೂ ತಯಾರಾಗಿತ್ತು. ಆದ್ದರಿಂದ ಒಂದೊಂದು ಸಂಪುಟವನ್ನೂ ಹುಡುಕಿ ಖಗೋಳ ಜ್ಞಾನದ ಗ್ರಂಥಗಳನ್ನು ಪತ್ತೆ ಮಾಡಿದೆ. ಜೊತೆಯಲ್ಲಿಯೇ ಕನ್ನಡದ ಇತರ ಗ್ರಂಥಗಳನ್ನೂ ಗುರುತುಮಾಡಿಕೊಂಡೆ. ಹ್ಯಾಂಬರ್ಗ್‌ನಲ್ಲಿರುವ ಹಸ್ತಪ್ರತಿಗಳು ಮಾತ್ರ ದೊರೆಯುವಂತೆ ಇದ್ದುದರಿಂದ ಮುಖ್ಯವಾಗಿ ಅದನ್ನು ಪಟ್ಟಿ ಮಾಡಿದೆ. ಅವನ್ನು ವಿಶೇಷವಾದ ಕೋಣೆಯಲ್ಲಿ ಇರಿಸಿರುತ್ತಾರೆ. ನನ್ನ ಕೋರಿಕೆಯ ಮೇಲೆ ಒಂದೊಂದೇ ಹಸ್ತಪ್ರತಿಯನ್ನು ತಂದುಕೊಡುತ್ತಿದ್ದರು. ಒಂದನ್ನು ಹಿಂತಿರುಗಿಸಿದ ಮೇಲೆ ಇನ್ನೊಂದು, ಹೀಗೆ. ಅಲ್ಲಿ ಪೆನ್ನು ಉಪಯೋಗಿಸುವಂತಿಲ್ಲ. ಪೆನ್ಸಿಲ್‌ಗಳು ಮಾತ್ರ ಉಪಯೋಗಿಸಬಹುದು. ನನ್ನ ಪರಿಕರಗಳನ್ನೆಲ್ಲಾ ಲೈಬ್ರರಿಯ ಹೊರಗೆ ಕಪಾಟಿನಲ್ಲಿಟ್ಟು ಒಂದು ಯೂರೋ ನಾಣ್ಯ ತೂರಿಸಿ ಬೀಗ ಹಾಕಿ ಬಂದಿದ್ದೆ. ಆದ್ದರಿಂದ ಸೂಕ್ಷ್ಮವಾಗಿ ಟಿಪ್ಪಣಿ ಮಾಡಿಕೊಂಡು ನನ್ನ ಕೋರಿಕೆಗಳ ಪಟ್ಟಿ ಕೊಟ್ಟು ಬಂದೆ. ೩ ಗಂಟೆಗೆ ಗ್ರಂಥಾಲಯ ಮುಚ್ಚುತ್ತದೆ. ಪುನಃ ರೈಲು ಬಸ್ ಹಿಡಿದು ವಾಪಸ್ ಬಂದೆ.

ಗೋಷ್ಠಿ ಮುಗಿದ ಕೂಡಲೇ ಮತ್ತೆ ಗ್ರಂಥಾಲಯಕ್ಕೆ ಹೋದೆ. ನಾನು ಕೇಳಿದ್ದ ಹಸ್ತಪ್ರತಿಗಳಲ್ಲಿ ಒಂದು ಬಹಳ ಶಿಥಿಲವಾಗಿತ್ತು. ಆದ್ದರಿಂದ ಅದರ ಹೊರತು ಉಳಿದವು ಸಿಕ್ಕವು. 'ಕಾಲಜ್ಞಾನ ವಚನೋಪಾಯ' ಎಂದು ಒಂದರ

ಡಾ|| ಬಿ. ಎಸ್. ಶೈಲಜಾ

ಶೀರ್ಷಿಕೆಯಿತ್ತು. ಆದರೆ ಒಳಪುಟದಲ್ಲಿ 'ಕಾಲಜ್ಞಾನ ವಂಚನೋಪಾಯ' ಎಂದಿತ್ತು. ಬಹಳ ಕಷ್ಟಪಟ್ಟು ಮುಂದಕ್ಕೆ ಓದಿದೆ. ಯಾವನಾದರೂ ಮೂಗಿನ ಎಡಹೊಳ್ಳೆಯಲ್ಲಿ ಮಾತ್ರ ಉಸಿರಾಡುತ್ತಿದ್ದರೆ ಅವನ ಆಯುಸ್ಸು ಆರು ತಿಂಗಳು ಮಾತ್ರ; ಯಾವನಾದರೂ ಬಲಗೈಯನ್ನು ವಿಶೇಷವಾಗಿ ತಿರುಚುತ್ತಿದ್ದರೆ ಅವನ ಆಯುಸ್ಸು ಮೂರು ತಿಂಗಳು ಮಾತ್ರ... ಹೀಗೆಲ್ಲಾ ಬರೆದಿತ್ತು. ಇದರಲ್ಲಿ 'ಕಾಲ'ಜ್ಞಾನ' ಏನೂ ದೊರಕುವ ಸೂಚನೆ ಸಿಗಲಿಲ್ಲವಾದ್ದರಿಂದ ಪಕ್ಕಕ್ಕೆ ಇಟ್ಟೆ. ಇನ್ನೊಂದು 'ಅನುಭವಾಮೃತ'. ಇನ್ನೊಂದು 'ಬಭ್ರುವಾಹನ ಕಾಳಗ', ಹೀಗೆ ಶೀರ್ಷಿಕೆಯಲ್ಲಿ ಆಕಾಶಜ್ಞಾನ ಎಂದಿದ್ದರೂ ಒಳಗೆ ಬೇರೇನೊ ಇರುತ್ತಿತ್ತು. ತಾಳೆಯಿಂದ ಹುಡುಕಿದಾಗ ಮೂರು ಹಸ್ತಪ್ರತಿಗಳು ಖಗೋಳ ಜ್ಞಾನಕ್ಕೇ ಸಂಬಂಧಪಟ್ಟದ್ದು ಎಂದು ತಿಳಿಯಿತು. ಮಹಾಸಿದ್ಧಾಂತಿಗಳಾದ ತಾತಾಚಾರ್ಯ ಎಂಬುವರ ಮೊಮ್ಮಗನಾದ ರಘುನಾಥ ದೀಕ್ಷಿತ ಎಂಬುವನು ಬರೆದ ಗ್ರಂಥ ಒಂದು. ಕನಕದಾಸರ ಹರಿಭಕ್ತಿಸಾರ, ಅಲ್ಲದೆ ವಿಷ್ಣುಪುರಾಣ, ಬಸವಚರಿತೆ ಇಂತಹ ಪ್ರತಿಗಳು ಸಿಕ್ಕವು. ಇವೆಲ್ಲವನ್ನೂ ಯಾವಾಗ ಬರೆದರು ? ಮೂಲಗ್ರಂಥಗಳೇ ? ಪ್ರತಿಗಳೇ ? ಈ ವಿವರಗಳನ್ನು ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. (ಈ ಬಗ್ಗೆ ಪ್ರೊಫೆಸರ್ ಜಿ. ವೆಂಕಟಸುಬ್ಬಯ್ಯ ಅವರೊಡನೆ ಪ್ರಸ್ತಾಪಿಸಿದಾಗ ಅವರು ತಮಗೆ ಈ ತಾಳೆಗರಿಗಳನ್ನು ನೋಡಲು ಜರ್ಮನಿಗೆ ಹೋಗುವ (ಸಿಕ್ಕಿ) ತಪ್ಪಿಹೋದ ಅವಕಾಶದ ಬಗ್ಗೆ ಹೇಳಿದರು. ನಮ್ಮಲ್ಲಿರುವ ಮೂಲಪ್ರತಿಗಳ ಪ್ರತಿ ಮಾತ್ರ ಅಲ್ಲಿವೆ ಎಂಬುದು ಕಾರಣವಾಗಿತ್ತು.) ಆದರೆ ಇಲ್ಲಿಲ್ಲದ ಕೆಲವು ಪ್ರತಿಗಳು ಅಲ್ಲಿವೆ ಎಂದು ನನಗನ್ನಿಸಿತು. 'ಗಣಕಾನಂದ' ಎಂಬ ಗಣಿತದ ಪುಸ್ತಕದ ಪ್ರತಿ ಇಲ್ಲೆಲ್ಲೂ ಇಲ್ಲ. 'ಪಾತಗಣಿಸುವ ಪ್ರಕಾರವು' ಎಂಬುದು ಇನ್ನೊಂದು ಹಸ್ತಪ್ರತಿ. ಅದೂ ಪರಿಚಯವಿಲ್ಲದ್ದು (ಮರೆತದ್ದು) ಎಂದು ನನಗನ್ನಿಸಿತು.

ಹೀಗೆ ಈ ಹಸ್ತಪ್ರತಿಗಳನ್ನು ಅಚ್ಚುಕಟ್ಟಾಗಿ ಪಟ್ಟಿಮಾಡಿ ಜೋಡಿಸಿದ ಕನ್ನಡಿಗರು ಯಾರು ಎಂದು ತಿಳಿದುಕೊಳ್ಳಬೇಕೆಂಬ ಕುತೂಹಲ ಮೂಡಿದುದು ಸಹಜವಲ್ಲವೇ ? ಹನ್ನೆರಡು ಸಂಪುಟಗಳನ್ನು ತಯಾರಿಸಿದವರ ಹೆಸರು ಕ್ಲೌಸ್ ಮತ್ತು ನರಸಿಂಹನ್ ಪೋಟಿ ಎಂದಿತ್ತು. ನರಸಿಂಹನ್ ಅವರಿಗೆ ಕನ್ನಡ ಮತ್ತು ತೆಲುಗು ಗೊತ್ತಿತ್ತು ಎಂದು ಫೆಲಿಕ್ಸ್ ಹೇಳಿದರು. ಈಗ ಅವರು ನಿವೃತ್ತರಾಗಿ ಇಟಲಿಯಲ್ಲಿ ಇದ್ದಾರೆ ಎಂದು ತಿಳಿಯಿತು. ಅವರು ಈ-ಮೈಲ್ ಉಪಯೋಗಿಸುವುದಿಲ್ಲ; ವಿಳಾಸವೂ ಸಿಗಲಿಲ್ಲ.

ಏಷ್ಯಾ - ಆಫ್ರಿಕಾ ಸಂಸ್ಥೆಯ ಅನೇಕ ವಿದ್ಯಾರ್ಥಿಗಳು ಭಾರತದ ಬಗ್ಗೆ ಆಸಕ್ತಿ ಹೊಂದಿದ್ದಾರೆ. ಅಲ್ಲಿ ಏಷ್ಯಾ ಅಂದರೆ ಸದ್ಯಕ್ಕೆ ಚೀನಾ ಮಾತ್ರ. ಭಾರತ ಅಂದರೆ ಸಂ ಮುಖ್ಯವಾದದ್ದು. ೫೦ರ ದಶಕದಷ್ಟು ಹಿಂದೆಯೇ ಪಿ. ರಾಘವನ್ ಅವರು ನಡೆ ಅಧ್ಯಯನದ ಕಾರಣ ತಮಿಳು ಗ್ರಂಥಗಳು ಹೇರಳವಾಗಿವೆ. ತಮಿಳು ಹಸ್ತಪ್ರತಿ ಪೂರ್ತಿ ಪಟ್ಟಿ ಇದೆ. ಬಂಗಾಳಿ ಎಂದರೆ ಟಾಗೋರರ ಸಾಹಿತ್ಯವೇ ಹೆಚ್ಚು.

ವಿಜ್ಞಾನದ ಇತಿಹಾಸದ ಸಂಸ್ಥೆಯಲ್ಲಿ ಭಾರತೀಯ ಇತಿಹಾಸ, ವಾಸ್ತುಶಿಲ್ಪ, ಇತ್ಯಾದಿಗಳ ಬಗ್ಗೆ ಅಧ್ಯಯನ ನಡೆಸುತ್ತಿರುವ ವಿದ್ಯಾರ್ಥಿಗಳ ಮತ್ತು ತ ಭೇಟಿಯಾಯಿತು. ಅತ್ಯಂತ ಕುತೂಹಲಕರ ಪ್ರಶ್ನೆಗಳನ್ನು ಕೇಳಿದರಲ್ಲದೆ ಭಾರತೀಯ ಪ ಐರೋಪ್ಯರ ಸಮಕಾಲೀನ ಆಸಕ್ತಿಗಳ ಬಗ್ಗೆ ಚರ್ಚಿಸಿದರು. ದಿಗಂಬರನಾಗಿ ನಿ ಗೊಮ್ಮಟ ಅವರಿಗೊಂದು ಒಗಟು. ಜೈನ ಮತ್ತು ವೀರಶೈವ ಸಾಹಿತ್ಯದ ಬಗ್ಗೆ ಬ ಕುತೂಹಲ. ಜಂತರ್ ಮಂತರ್ ಮತ್ತು ತಾಜ್‌ಮಹಲ್ ಹೊರತಾಗಿ ಉಳಿದವುಗಳ ಹೆಚ್ಚಿನ ತಿಳುವಳಿಕೆ ಇಲ್ಲ. ಅಲ್ಲಿ ಅನೇಕ 'ಭಾರತೀಯ' ಎನ್ನಬಹುದಾದ ಮುಖ ಕಂಡವು. ಅವರಲ್ಲಿ ಹೆಚ್ಚಿನವರು, ಅರೇಬಿಯಾದವರು, ಇರಾನ್, ಟರ್ಕಿ ಮುಂತಾ ದೇಶಗಳವರು. ಏಷಿಯಾ ಎಂದರೆ ಚೀನಾದ ನಂತರದ ಸ್ಥಾನ ಇವರದ್ದೇ. ಆದ್ದರಿ ಅರಾಬಿಕ್ ಗ್ರಂಥಗಳು ಜರ್ಮನರಿಗೆ ನೇರವಾಗಿ ಸಿಗುತ್ತವೆ. ಅನೇಕ ಗ್ರಂಥಗ ಸಂಸ್ಕೃತದಿಂದ ಅರಾಬಿಕ್‌ಗೆ ತರ್ಜುಮೆಯಾಗಿ ಜರ್ಮನರಿಗೆ ಪರಿಚಿತವಾಗಿವೆ. ಮೂಲಕ ಸಂಸ್ಕೃತದ ಕೊಂಡಿ ಇದ್ದರೂ ಇದು ಸುಭದ್ರವಾದದ್ದಲ್ಲ.

ಕನ್ನಡದ ಗತಿ ಇದಕ್ಕಿಂತ ಹೀನಾಯವಾಗಿದೆ. ಅಲ್ಲಿಯ ಗ್ರಂಥಪಾಲಕರೊಬ್ಬ ಹೊರತಾಗಿ ಕನ್ನಡ ಎಂಬ ಶಬ್ದವನ್ನೇ ಉಳಿದವರು ಕೇಳಿಲ್ಲ. ಕನ್ನಡ ತಿಳಿದಿದ್ದ ಇಬ್ಬ (ರಾಮಕೃಷ್ಣ ಐತಾಳ ಮತ್ತು ನರಸಿಂಹನ್ ಪೋಟಿ) ಈಗ ಅಲ್ಲಿಲ್ಲ. ಅಮೆರಿಕದಲ್ಲಿರುವ 'ಅಕ್ಕ'ನ ಜಾಲ ಬಹುಶಃ ಇಲ್ಲಿಲ್ಲ. ಅಲ್ಲಿ ಕನ್ನಡ ಕೇಳುವಂತಾಗಬೇಕಾದರೆ ಏ ಮಾಡಬೇಕು ? ನಾನು ಕೊಟ್ಟ ಒಂದು ಉಪನ್ಯಾಸ ಎಷ್ಟು ದಿನ ನೆನಪಿನಲ್ಲಿ ಉಳಿದೀತು ಕನ್ನಡದ ಬಗ್ಗೆ ಇಲ್ಲಿಯವರ ಕುತೂಹಲವನ್ನು ತಣಿಸುವುದು ಹೇಗೆ ? ಆ ಕೆರಳಿಸುವುದು ಹೇಗೆ ? ಇದಕ್ಕೆ ನಾವೆಲ್ಲರೂ ಉತ್ತರ ಹುಡುಕಬೇಕು.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

With Best Compliments From



Prabhu Lamination

Gloss Lamination ❑ Matte Lamination ❑ Window Lamination
Roll to Roll Lamination

PRABHAKAR T.
No.30, 1st Main, Near Ganesha Temple
Kamalanagar, Bangalore - 560 079
Mobile: 9980179224

# ದೇವರ ಬಸವ



ಪರಂಜ್ಯೋತಿ

**ಯಾ**ವ ಹೊಲದಲ್ಲಿ ಬೆಳೆ ಹುಲುಸಾಗಿದೆ ಎಂದು ಅಂದಾಜು ಮಾಡುವಂತೆ, ದೇವರ ಬಸವ ನಿಧಾನವಾಗಿ ನಡೆದು ಒಂದೆಡೆ ನಿಂತಿತು.

ಕಣ್ಣಿಗೆ ತಂಪೆನಿಸುವಷ್ಟು ಸೊಂಪಾಗಿ ಬೆಳೆದಿದ್ದ ರಾಗಿ ಹೊಲದ ಅಂಚಿನಲ್ಲಿ ನಿಂತು ಆ ಹಸಿರ ಕಂಪನ್ನು ಮೂಗಿನ ಮೂಲಕ ಸೆಳೆದುಕೊಂಡಿತು. ಅದರ ಮೂಗಿನ ಹೊರಳೆಗಳು ಅರಳಿದವು.

ಆಗಲೇ ರಾಗಿ ತೆನೆಗಳು ಕಾಣಿಸಿಕೊಂಡಿದ್ದವು. ಹೊಲದ ಮಧ್ಯೆ ಅಲ್ಲಲ್ಲಿ ಅವರೆ, ತಡಗುಣಿ ಮತ್ತು ಪುಂಡಿ ಗಿಡಗಳ ಸಾಲುಗಳು ಸಹ ದಟ್ಟವಾಗಿ ಬೆಳೆದಿದ್ದವು. ತಡಗುಣಿ ಸೊಪ್ಪು ಮತ್ತು ಪುಂಡಿ ಚಿಗುರನ್ನು ಒಮ್ಮೆ ಮೂಸಿ ನೋಡಿತು. ಅದರ ನಾಲಿಗೆಯಲ್ಲಿ ನೀರೊಡೆಯಿತು. ಬಾಯಿ ತುಂಬಿಸುವಷ್ಟು ತಡಗುಣಿ ಸೊಪ್ಪನ್ನು ನಾಲಿಗೆಯಲ್ಲಿ ಎಳೆದು ಒಂದೆರಡು ಸಲ ದವಡೆಯಲ್ಲಿ ಅರೆಯಿತು.

ಮನೆಯಲ್ಲಿ ಬೆಳಗಿನಿಂದ ಸೊಸೆಯೊಂದಿಗೆ ನಡೆದ ಜಟಾಪಟಿಯಲ್ಲಿ ಸೋತಿದ್ದ ದೇವಮ್ಮ, ತನಗಾದ ಅಪಮಾನವನ್ನು ಮರೆಯಲು, ಮನಸ್ಸಿನ ಒತ್ತಡವನ್ನು ಒಂದಿಷ್ಟು ಕಡಿಮೆಮಾಡಿಕೊಳ್ಳಲು ಕೈಯಲ್ಲೊಂದು ಕುಡುಗೋಲು ಹಿಡಿದು ಹೊಲದ ಕಡೆ ಬಂದಿದ್ದಳು.

ದೇವರ ಬಸವ ತಮ್ಮ ಹೊಲದಲ್ಲಿ ಮೇಯುತ್ತಿರುವುದನ್ನು ದೂರದಿಂದಲೇ ಗಮನಿಸಿದ ಆಕೆಗೆ ಒಂದು ಕ್ಷಣ ಅಳುಕುಂಟಾಯಿತು. ಕಳೆದ ವಾರವಷ್ಟೆ ಕಪನಿಗೌಡನ ಬೆಂಡೆತೋಟವನ್ನು ದೇವರ ಬಸವ ತುಳಿದು ಹಾಕಿತ್ತು. ತಾವು ಕಷ್ಟಪಟ್ಟು ಬೆಳೆಸಿದ ಸುಮಾರು ಅರ್ಧ ಎಕರೆಯಷ್ಟು ಬೆಂಡೆ ತೋಟ ಹೀಗೆ ನಾಶವಾದುದನ್ನು ಕಂಡು ಗಂಡ ಹೆಂಡತಿ ಇಬ್ಬರೂ ಎದೆಬಡಿದುಕೊಂಡು ಅತ್ತು ಗೋಳಾಡಿದ್ದರು. ಆದರೆ ದೇವರ ಬಸವನ ವಿಷಯದಲ್ಲಿ ಅದಕ್ಕಿಂತ ಹೆಚ್ಚಿನದೇನನ್ನೂ ಮಾಡಲು ಸಾಧ್ಯವಿರಲಿಲ್ಲ. ದೇವರ ಬಸವನನ್ನು ಛೀಮಾರಿ ಹಾಕುವಂತಿಲ್ಲ, ಯಾರ ಬಳಿಯೂ ದೂರುವಂತಿಲ್ಲ! ಆ ಊರಿನ ರಿವಾಜಿನಂತೆ ದೇವರ ಬಸವ ತಮ್ಮ ಕಣ್ಣುಮುಂದೆಯೇ ತಮ್ಮ ಹೊಲ-ತೋಟಗಳಲ್ಲಿರುವ ಬೆಳೆಯನ್ನು ಮೇಯುವುದನ್ನು ಕಂಡಾಗ, ಅದಕ್ಕೆ ತೃಪ್ತಿಯಾಗುವಷ್ಟು ಮೇಯ್ದು ಮುಂದೆ ಹೋಗಲಿ ಎಂದು ನೋಡುತ್ತ ನಿಲ್ಲಬೇಕು. ಬಸವನಿಗೆ ಅಡ್ಡಿಮಾಡಬಾರದು! ಬಸವನಿಗೆ ತೃಪ್ತಿಯಾದರೆ ಆ ಹೊಲದ ಬೆಳೆ ಹುಲುಸುತ್ತದೆ – ಎಂಬ ನಂಬಿಕೆ ಅವರದು.

ತಾನು ಹೊಲದ ಬಳಿ ಬಂದಿರುವುದು ಬಸವನ ಗಮನಕ್ಕೆ ಬಂದಾಗ ಅದು ಸೊಪ್ಪು ಮೇಯುವುದನ್ನೂ ನಿಲ್ಲಿಸಬಹುದು ಎಂದುಕೊಂಡು ದೇವಮ್ಮ ಹೆಜ್ಜೆ ನಿಧಾನಗೊಳಿಸಿದಳು. ಆದರೂ ದೇವರ ಬಸವ ಆಕೆಯನ್ನು ಗಮನಿಸಿಬಿಟ್ಟಿತು! ಬಾಯಿಗೆ ತುಂಬಿಸಿದ್ದ ಸೊಪ್ಪನ್ನಷ್ಟೆ ದವಡೆಯಾಡಿಸುತ್ತ ಆಕೆಯನ್ನು ದಿಟ್ಟಿಸಿತು. ಮತ್ತೆ ಬಾಯಿ ಹಾಕುವುದನ್ನು ಬಿಟ್ಟು ತೆವರಿಯ ಮೇಲೆ ಬಂದು ನಿಂತಿತು.

ದೇವಮ್ಮನಿಗೆ ನಿರಾಶೆಯಾಯಿತು, ಬೇಸರವಾಯಿತು. ಜೊತೆಗೆ ಒಳಗೊಳಗೇ ಹೆದರಿಕೆಯಾಯಿತು. ಆಕೆ ಬಸವನತ್ತ ಕೈಮುಗಿದು ನಿಂತಳು.

''ನನ್ನಪ್ಪಾ ತಪ್ಪಾಯ್ತು. ನಾನು ಕೆಟ್‌ಬಾಯಿನ್ ಮುಂಡೆ ನಿಜ, ಒಪ್ಕತೀನಿ. ಆದ್ರೆ ಸುಳ್ಳು ತಟವಟಾ ಆಡೋಳಲ್ಲ. ಕಪನೀಗೌಡ್ನ ಬೆಂಡೆ ತ್ವಾಟಾ ನೆನಸ್ಕಂಡು ಮನಸ್ಗೆ ಒಂದೇ ಒಂದ್ಸಲ ಅಯ್ಯೋ ಅನ್ಸಿದ್ದುಂಟು! ನಿನ್ ದಮ್ಮಯ್ಯ ಬಸಣ್ಣ ನಂದು ತಪ್ಪಾಗಿದ್ರೆ ನಿನ್ ಒಟ್ಟೇಗಾಕಳಪ್ಪ!

''ನೀ ಕಂಡಂಗ್ಯೆ ಮನೇಲಿ ಸಂಗೇನಾರ ಸುಕಾ ಅನ್ನೂದಿದ್ಯಪ್ಪ? ನನ್ ಸ್ವಸೆ ನನ್ನ ಏನೇನಂದ್ಲು, ಏನೇನಾಡಿದ್ಲು! ನೀನೇ ಏಳಪ್ಪ ಅವ್ಳು ಮಾಡ್ತಾ ಇರೂದು ಸರಿಯ ? ಮನೆಗೆ ಸ್ವಸೆ ಅಂತ ತರೂದು ಯಾಕಪ್ಪ? ವಂಸ ಉದ್ಧಾರ ಮಾಡ್ಲಿ, ತಂದ್ ಮನೆಗೆ ಒಳ್ಳೆ ಎಸ್ರು ತರ್ಲಿ ಅಂತಲ್ವ ? ನಾನಾಗ್ಲಿ ನನ್ ಗಂಡ ಆಗ್ಲಿ ಒಂದ್ ನರಪಿಳ್ಳೆ ಕೈಲಿ ಒಂದ್ ಕೆಟ್ಟೆಸ್ರು ತಕ್ಕಂಡಿದ್ದೀವಾ ? ಅಂತಾದ್ರಲ್ಲಿ ನನ್ ಸ್ವಸೆ ನೀನು ಅಂದ್ರೆ ನಿಮ್ಮಪ್ಪ ಅಂತಾಳಲ್ಲ. ಅವಳ್ ಮಾತ್ನೆಲ್ಲ ಕೇಳ್ಕಂಡು ಈ ಮುಂಡೆ ಬದ್ಕಿರ್ಬೇಕಪ್ಪ!

''ನಿಂಗೆ ಈ ಮೂರ್ಲೋಕ್ದಲ್ಲಿ ನಡೆಯೂದೆಲ್ಲ ಗೊತ್ತಾಯ್ತದೆ. ನನ್‌ಮಗ ಬರೀ ಎಮ್ಮೆ ಅಂಗೆ ಬೆಳ್ದವ್ನೆ. ಆದ್ರೆ ನಾಮರ್ದ! ಎಂಡ್ತಿ ಗುಲಾಮ! ನಿಂಗೇನು ಎಲ್ಲಾನೂ ಬಿಚ್ಚಿಬಿಚ್ಚಿ ಏಳ್ಬೇಕಪ್ಪ! ಇಂಗಂತಾಳಲ್ಲ ಈ ದೇವಮ್ಮ ಅನ್ಕತೀಯೇನೋ... ಸ್ವಸೆ ನಡ್ತೇನಾ ನಾನು ಒಪ್ಪೂದಿಲ್ಲ! ಎಂಗ್ಸು ಅಂದ್ರೆ ಗರ್ತಿ ಗೌರಮ್ನಂಗಿರ್ಬೇಕು! ನಾನು ಯಾವತ್ತು ಈ ಬಾಯ್ಬಡ್ಕಿ ಸ್ವಸೇನಾ ಮನೆ ತುಂಬಿಸ್ಕೊಂಡ್ನೋ ಅವತ್ತೇ ಸುರುವಾಯ್ತು ನನ್ ಮನೆಗೆ ಸನೀ ಕಾಟ! ಈ ಪಾಪಿ ಮುಂಡೆ ಬದ್ಕಿರ್ಬೇಕಾ ನೀನೇ ಏಳಪ್ಪ.''

ದೇವಮ್ಮನ ಪುರಾಣ ಕೇಳಿ ಬಸವನ ತಲೆ ಚಿಟ್ಟು ಹಿಡಿದಂತಾಗಿರಬೇಕು. ಅದು ಒಂದೆರಡು ಸಲ 'ಸಾಕಪ್ಪಾ ಇವರ ಕಾಟ' ಎನ್ನುವಂತೆ ತಲೆ ಒಗೆದು ನಿಧಾನವಾಗಿ ಅಲ್ಲಿಂದ ಕಾಲ್ತೆಗೆಯಿತು.

''ಬಸಣ್ಣಾ ತಪ್ಪಾಯ್ತು. ಇದ್ನೆಲ್ಲಾ ನಿಂಗೆ ಏಳ್ಬಾರ್ದಾಗಿತ್ತು...''

ಕಲ್ಲೂರಿನ ಪ್ರತಿಯೊಂದು ಮನೆಯಲ್ಲೂ ಇಂಥ ಹಗರಣಗಳಿಗೇನೂ ಕೊರತೆಯಿಲ್ಲ. ಇವರ ಹಗರಣಗಳನ್ನು ಕೇಳಿಸಿಕೊಳ್ಳಲು ಸಾವಿರ ಕಿವಿಗಳಿದ್ದರೂ ಸಾಲದು! ಅವನ್ನು ಬಗೆಹರಿಸುವುದಂತೂ ಬಸವನ ಮಾತಿರಲಿ ಸಾಕ್ಷಾತ್ ದೇವರೇ ಅಕಸ್ಮಾತ್ ಬಂದರೂ ಆಗುವಂಥದ್ದಲ್ಲ. ಹರುಕುಬಾಯಿ ದೇವಮ್ಮನ ತಕರಾರು ಅರ್ಜಿಯನ್ನು ಕಿವಿಮೇಲೆ ಹಾಕಿಕೊಳ್ಳಲೂ ನಿರಾಕರಿಸುತ್ತ, ದೇವರ ಬಸವ ಬಾಲ ಅಲ್ಲಾಡಿಸಿಕೊಂಡು ಅಲ್ಲಿಂದ ಮತ್ತೊಂದು ಹೊಲದಕಡೆಗೆ ತಿರುಗಿತು.

''ಅಪ್ಪಾ ಬಸಣ್ಣ... ಈ ಪಾಪಿ ಮುಂಡೆ ಮಾತ್ನ ನೀನೂ ಕೇಳಿಸ್ಕಲ್ದೆ ಒಯ್ತಿಯಲ್ಲಪ್ಪ... ನನ್ ಮ್ಯಾಲೆ ನಿಂಗೆ ಕರಣೇನೇ ಇಲ್ವಾ !'' ಎಂದು ದೇವಮ್ಮ ಗೋಗರೆದಳು.

* * *

ಬೀಜ ಒಡೆಸಿಕೊಂಡು ಕೊಬ್ಬಿರುವ ಹೋರಿಗಿಂತ ಸುಮಾರು ಎರಡು ಅಡಿಯಷ್ಟು ಹೆಚ್ಚು ಎತ್ತರದ, ದೃಢಕಾಯದ, ಮಿರಿಮಿರಿ ಮಿಂಚುವ ಬಿಳಿಮೈನ, ದಟ್ಟ ಕಪ್ಪು ಗೊಂಚಲಿನ ಬಾಲದ ದೇವರ ಬಸವನ ಬಗ್ಗೆ ಕಲ್ಲೂರಿನ ಜನರಿಗೆ ವಿಶೇಷ ಭಯ, ಭಕ್ತಿ! ಬಸವ ಎಲ್ಲರ ನಡವಳಿಕೆಗಳನ್ನೂ ಗಮನಿಸುತ್ತದೆ. ಅದಕ್ಕೆ ಮನುಷ್ಯರ ಮಾತುಗಳೂ ಅರ್ಥವಾಗುತ್ತವೆ.

ಅಮಾವಾಸ್ಯೆಯ ಕಗ್ಗತ್ತಲ ರಾತ್ರಿಯಲ್ಲೂ ಅದು ಯಾವ ಮೃಗದ ಭಯವೂ ಇಲ್ಲದೆ ಅಲೆದಾಡುತ್ತದೆ. ರಾತ್ರಿ ಅದು ಮನೆಗಳ ಮುಂದೆ ಹೆಜ್ಜೆ ಹಾಕುವಾಗ ಊರ ನಾಯಿಗಳು ಬಾಲ ಮುದುಡಿಕೊಂಡು ತೆಪ್ಪಗಿರುತ್ತವೆ ಎಂದು ನಂಬುವ ಆ ಜನರು ಒಳಗೊಳಗೇ ಅದರ ಬಗ್ಗೆ ಅಂಜುವುದುಂಟು !

ಊರ ಹೊರಗಿನ ಪಾಳುಗುಡಿಯ ಕಲ್ಲುಮಂಟಪದಡಿಯಲ್ಲಿ ಬಸವನ ವಾಸ. ಮೂಗುದಾರದ, ಕೊರಳ ಅಲಂಕಾರ ಪಟ್ಟಿಯ ಬಂಧನವಿಲ್ಲ. ನೆಲೆಯಿಲ್ಲದ ಜಂಗಮನಂತೆ ಅದು ಹಗಲು ರಾತ್ರಿ ಮನಸ್ಸಿಗೆ ತೋಚಿದ ಕಡೆ ಅಲೆದಾಡುತ್ತದೆ. ಅದಕ್ಕೆ ದೇವರ ಸಾಕಾರವಿದೆ ಎಂದೂ ಜನರು ನಂಬುತ್ತಾರೆ. ತಮ್ಮ ಹೊಲ ತೋಟದಲ್ಲಿ ಅದಕ್ಕೆ ಪ್ರಿಯವಾದ ಯಾವ ಪೈರು, ಗಿಡಕ್ಕೆ ಬಾಯಿ ಹಾಕಿದರೂ ಅದು ದೇವರ ಪ್ರಸಾದವೆಂದೇ ಅವರು ಭಾವಿಸುತ್ತಾರೆ. ದೇವರ ಬಸವ ಊರ ಕಾವಲುಗಾರ ಎಂದೂ ಅವರು ನಂಬುವುದುಂಟು. ಬಸವನ ಕಾರಣದಿಂದ ಊರಿನಲ್ಲಿ ಸಣ್ಣಪುಟ್ಟ ಕಳ್ಳತನಗಳು ನಿಂತುಹೋಗಿವೆ !

ದೇವರ ಬಸವನ ಗುಟುರಿನಿಂದ ಅದರ ಭಾವವನ್ನು ಜನರು ಅರ್ಥಮಾಡಿಕೊಳ್ಳಬಲ್ಲರು ! ಅದರ ಗುಟುರು ಕೆಲವೊಮ್ಮೆ ಸ್ನೇಹಭರಿತ ಸಂವಾದದಂತಿರುತ್ತದೆ, ಎಚ್ಚರಿಕೆ ನೀಡುವಂತಿರುತ್ತದೆ, ಕೆಲವೊಮ್ಮೆ ರೋಷದಿಂದ ತುಂಬಿದ್ದು ಎದೆ ನಡುಗಿಸುವಂತೆ ಇರುತ್ತದೆ. ಅದರ ಕಣ್ಣುಗಳು ಸಾಧಾರಣ ಜನರಿಗೆ ಪ್ರಶಾಂತವಾಗಿ ಕಾಣಿಸಿದರೆ, ತುಡುಗು ಮನಸ್ಸಿನವರಿಗೆ ರಕ್ತರಂಜಿತವಾಗಿ ಭಯ ಹುಟ್ಟಿಸುವಂತೆ ಕಾಣಿಸುತ್ತವೆ. ಒಟ್ಟಿನಲ್ಲಿ ಕಲ್ಲೂರಿನ ಜನರು ದೇವರ ಬಸವನ ನಡವಳಿಕೆಯನ್ನು ಅವರವರ ಭಕುತಿಗೆ, ಅವರವರ ಭಾವಕ್ಕೆ ತಕ್ಕಂತೆ ಅರ್ಥಮಾಡಿಕೊಳ್ಳುತ್ತಾರೆ. ಆತ್ಮೀಯತೆಯಿಂದ ಅದನ್ನು ಬಸಪ್ಪ, ಬಸಣ್ಣ, ಬಸಪ್ಪಾಜಿ ಮುಂತಾಗಿ ಸಂಬೋಧಿಸುವುದುಂಟು.

ತಮ್ಮ ಊರಿನ ದೇವರ ಬಸವ ಎಂದಮೇಲೆ ವಾರಕ್ಕೊಮ್ಮೆ ಅದಕ್ಕೆ ಮಜ್ಜನ ಮಾಡಿಸಿ, ಅದರ ಪಾದಪೂಜೆ ಮಾಡಿ, ಭಕ್ತಿಯಿಂದ ತಯಾರಿಸಿದ ತಿಂಡಿತೀರ್ಥದ ನೈವೇದ್ಯವನ್ನೂ ಅದರ ಮುಂದಿರಿಸಿ ಜನ್ಮ ಸಾರ್ಥಕ ಮಾಡಿಕೊಳ್ಳದಿದ್ದರೆ ಹೇಗೆ ಎಂಬುದು ಊರಿನ ಕೆಲವು ಹಿರಿಯ ತಲೆಗಳಿಗೆ ತೋಚಿತು. ಅದಕ್ಕೆ ಊರಿನವರೆಲ್ಲರೂ ಉತ್ಸಾಹ ತೋರಿಸಿದರು.

ಆದರೆ ಏನೋ ಯಡವಟ್ಟಾಯಿತು. ಮನುಷ್ಯರ ಪ್ರಯತ್ನಗಳಿಗೆ ದೇವರ ಬಸ ಸಮ್ಮತಿಸದೆ ತಲೆ ಒಗೆಯಿತು. ಹೆಂಗಸರು ಮಿಂದು ಮಡಿಯುಟ್ಟು, ಭಕ್ತಿಯಿಂದ ನೈವೇದ್ಯ ತಯಾರಿಸಿ ಬಸವನ ಬಳಿಗೆ ಒಯ್ದರು. ದೇವಮ್ಮನಂಥವರು 'ಒಪ್ಪಿಸಿಕೋ ನನ್ನಪ್ಪಾ. ಎಲ್ಲ ನಿನಗೆ ತಿಳಿದದ್ದೇ! ನಾವು ನರಮನುಸ್ರು...' – ಮುಂತಾಗಿ ಪೂ ಮಾಡಿದರೂ ಬಸವ ಇವರ ಆಮಿಷಕ್ಕೆ ಒಂದಿಷ್ಟೂ ಒಲಿಯದೆ ಕೋಪದಿಂದ ಬು ಗುಡತೊಡಗಿತು. ಹೆಂಗಸರು ತಟ್ಟೆಗಳಲ್ಲಿ ಒಯ್ದಿದ್ದ ಪೂಜಾಸಾಮಗ್ರಿಗಳು, ಹ ಹಂಪಲುಗಳು ಮತ್ತು ನೈವೇದ್ಯವನ್ನು ಕಾಲಿನಲ್ಲಿ ತುಳಿದು ಮಣ್ಣಿಗೆ ಕೆಡವಿತು. ಪೂಜೆ ಬಂದವರು ಸಾಕಪ್ಪಾ ಬಸವಣ್ಣಾ ಎಂದು ಅಂಗಲಾಚುತ್ತ ದಿಕ್ಕಾಪಾಲಾಗಿ ಓಡಿದರು !

ಹಿರಿಯ ತಲೆಗಳು, ದೇವರ ಬಸವನಿಗೆ ಊರಿನವರ ಮೇಲೆ ಏನೋ ಅಸಮಾಧಾ ವಾಗಿದೆ. ಯಾರೋ ಮೈಲಿಗೆ ಮಾಡಿದ್ದಾರೆ. ಸದ್ಯಕ್ಕೆ ಬಸಣ್ಣನನ್ನು ಕೆರಳಿಸುವುದು ಬೇ ಕೋಪ ಇಳಿದು, ಪೂಜಿಸಿಕೊಳ್ಳಲು ಬಯಸಿದಾಗ ಪೂಜೆ, ಪುರಸ್ಕಾರ ಮಾಡೋಣ ಎಂಬ ತೀರ್ಮಾನಕ್ಕೆ ಬಂದು ಆ ಪ್ರಕರಣಕ್ಕೆ ಮುಕ್ತಾಯ ಹಾಡಿದವು.

ಹಿರಿಯರನ್ನು ಹತ್ತಿರಕ್ಕೆ ಸೇರಿಸದೆ ಕಣ್ಣು ಕೆಕ್ಕರಿಸಿ ಮುಸುಗುಡುವ ಬಸವ ಮಕ್ಕಳಿ ರಿಯಾಯಿತಿ ತೋರಿಸುವಾಗ ಊರಿನವರು ಆಶ್ಚರ್ಯಪಡುತ್ತಿದ್ದರು. ಶಾಲೆ ಹೋಗುವ ಮಕ್ಕಳ ನಮಸ್ಕಾರವನ್ನು ಸ್ವೀಕರಿಸುತ್ತಿತ್ತು. ಅದು ಕೆಡೆದಿದ್ದಾಗ ಅದು ಬಾಲವನ್ನೋ ಮೈಯನ್ನೋ ಮುಟ್ಟಿ ಕಣ್ಣಿಗೊತ್ತಿಕೊಂಡರೆ, ತೆಪ್ಪಗೆ ಮೆಲುಕು ಹಾಕು ಮಕ್ಕಳ ಭಕ್ತಿಗೆ ಅನುಮತಿ ನೀಡುತ್ತಿತ್ತು!

'ಮಕ್ಳು ಅಂದ್ರೆ ದೇವ್ರ ಸಮಾನ ತಿಳ್ಕಳಿ. ದೇವರ ಬಸವ ಮಕ್ಕಳ ಮಂಗಾ ಸಹಿಸ್ಕೊಳ್ಳೋದು ಅದಕ್ಕೆ !' – ಎಂದು ಹಿರಿತಲೆಗಳು ಸಮಾಧಾನ ಹೇಳಿಕೊಳ್ಳುತ್ತಿದ್ದವು.

ದೇವರ ಬಸವನ ವಿಷಯದಲ್ಲಿ ಊರಿನ ಹೆಚ್ಚುಮಂದಿ ಭಯಭಕ್ತಿಯಿಂದ ನಡೆದ ಕೊಂಡರೂ, ಕೆಲವು ಚಿಕಿತ್ಸಕ ಬುದ್ಧಿಯ ಜನರು, 'ಅಲ್ಲ, ಈ ಬಸವನಿಗೆ ಕಡಸುಗ ಕನಸು ಬೀಳುವುದಿಲ್ಲವೆ ? ಹಸುಗಳು ಅದರ ದಾರಿಯಲ್ಲಿ ಸಿಕ್ಕಿದಾಗ ಅವನ್ನು ಬೆದರಿ ಓಡಿಸುವ ರೀತಿಯಲ್ಲಿ ಗುಟುರು ಹಾಕುತ್ತದಲ್ಲದೆ, ಅವುಗಳ ಬಗ್ಗೆ ಒಲವನ್ನೋ ಆಸಕ್ತಿಯನ್ನೋ ತೋರಿಸುವುದಿಲ್ಲವಲ್ಲ, ಇದೊಂದು ಸೋಜಿಗವಲ್ಲವೆ ?' – ಎಂದ ಕೊಳ್ಳುತ್ತಿದ್ದರು. ಅದರ ಬೆಳವಣಿಗೆ, ಲಕ್ಷಣದ ಆಧಾರದ ಮೇಲೆ, ಅದು ತ



ರೂ. 225


ರೂ. 300


ರೂ. 500


ರೂ. 110



ರೂ. 120



ರೂ. 290


ರೂ. 90


ರೂ. 120



ಐ.ಬಿ.ಎಚ್. ಪ್ರಕಾಶನ
77, ರಾಮರಾವ್ ಲೇಔಟ್, 2ನೇ ಮುಖ್ಯರಸ್ತೆ
ಬನಶಂಕರಿ ಮೂರನೇ ಹಂತ
ಬೆಂಗಳೂರು - 560 085
ದೂರವಾಣಿ : 26698088, 65598689


ರೂ. 225


Rs. 225

ಶಾಖೆ : ಪುಸ್ತಕ ಲೋಕ, 'ಜನಪದ ಲೋಕ ಆವರಣ', ಬೆಂಗಳೂರು–ಮೈಸೂರು ಹೆದ್ದಾರಿ, ರಾಮನಗರ – 571 511. ಮೊ : 98450 70613

ಗೂಳಿಯಾಗಿ ಬಳಕೆಯಾದರೆ ಅದಕ್ಕೆ ಹುಟ್ಟುವ ಕರುಗಳು ಹೇಗಿರಬಹುದು – ಎಂದು ಸಂಶೋಧನೆಗೆ ತೊಡಗುತ್ತಿದ್ದರು.

ಧರ್ಮಭೀರು ಹಿರಿತಲೆಗಳಿಗೆ ಈ ವಿಷಯ ತಿಳಿದಾಗ 'ಥೂ ಪಾಪಿ ನನ್ಮಕ್ಳ! ಮನಸರ್ ಬುದ್ಧಿ ಅನ್ನೂದು ಸರಿಯಾಗದೆ. ಬಸಣ್ಣಂಗೆ ದೇವ್ರ ಸಾಕಾರ ಅದೆ ಅನ್ನೂದು ಇವಕ್ಕೆ, ಈ ಅಗ್ನ್ಯಾನಿ ಮುಂಡೆ ಮಕ್ಳಿಗೆ ತಿಳಿಯೊಲ್ದಲ್ಲ ಇನ್ನೇನೇಳಾನ! ಕಡ್ಸುಗಳು ಬೆದೆಗ್‌ಬಂದು ಬಾಯ್ಬುಡ್ಕಂಡ್ರೂ ಬಸಣ್ಣ ಅತ್ಲಾಗೆ ಕಿವಿಕೊಡೂದಿಲ್ಲ ಅಂದ್ರೆ ಅದು ದೇವ್ರ ನೇಮ್ಕ ಅಲ್ದೆ ಬೇರೇನು ಅಂತೀನಿ' – ಎಂದು ಹಿರಿತಲೆಗಳು ಸಂದೇಹದ ಪ್ರಾಣಿಗಳಿಗೆ ಛೀಮಾರಿ ನೆಪದಲ್ಲಿ ವಿವೇಕ ಹೇಳುತ್ತಿದ್ದವು.

'ಆ ಮಾದೇವ ಸಿವ್ನಂತೋನೆ ಮದ್ವೆ ಮಾಡ್ಕಂಡು ಮಕ್ಕಳ್ ಉಟ್ಟಿಸ್ಕಂಡು ಸಂತೋಷ್ವಾಗಿ ಇರ್ಬೇಕಾದ್ರೆ, ದೇವ್ರ ವಾನ ಬಸಣ್ಣನ್ನ ನೀನು ಬ್ರಮ್ಚಾರಿಯಾಗಿರು, ಕಡ್ಸಗಳ್ಕಡೆ ಕಣ್ಣೆತ್ ನೋಡ್ಬ್ಯಾಡಾ ಅಂದ್ರೆ ಅದೆಂತ ನ್ಯಾಯ್ವಪ್ಪ!' – ಎಂದು ಆ ಜಿಜ್ಞಾಸುಗಳು ಶಿವನನ್ನೂ ಆತನ ಹೆಂಡತಿ ಮಕ್ಕಳನ್ನೂ ಈ ಹಗರಣಕ್ಕೆಳೆಯುತ್ತಿದ್ದರು.



* * *

ಊರಿನ ಸಾಮಾನ್ಯ ಜನರ ದಿನನಿತ್ಯದ ಸಮಸ್ಯೆಗಳು ಒಂದು ಬಗೆಯವಾದರೆ, ಮಾಳಿಗೆ ಮನೆಯ ಸಾಹುಕಾರ ಗುರುಪಾದಪ್ಪನ ಸಮಸ್ಯೆಗಳೇ ಬೇರೊಂದು ಬಗೆಯವು.

ಗುರುಪಾದಪ್ಪನಿಗೆ ಹೊಟ್ಟೆ ಬಟ್ಟೆಯ ಸಮಸ್ಯೆಯಿಲ್ಲ, ಸಾಲಗಾರರ ಕಾಟವಿಲ್ಲ. ಸಾಕಷ್ಟು ಜಮೀನು ತೋಟ ತುಡಿಕೆ ಇದೆ. ಆ ಊರಿನವರಿಗಲ್ಲದೆ ಪಕ್ಕದ ಊರುಗಳ ಕೆಲವರು ಆತನ ಸಾಲಗಾರರ ಪಟ್ಟಿಯಲ್ಲಿದ್ದಾರೆ. ಜಮೀನು ಮತ್ತು ಹಣದ ಬಲದಿಂದ ಬಂದಿರುವ ದರ್ಪವೂ ಇದೆ.

ಅಂಥ ಗುರುಪಾದಪ್ಪ ತಲೆತಗ್ಗಿಸಿ ನಡೆಯಬೇಕಾದಂಥ ಒಂದು ಘಟನೆ ನಡೆಯಿತು. ಆತನ ಮಗ ನಂಜುಂಡ ಸ್ವಲ್ಪ ತಲೆತಿರುಕ. ಆತನ ಹೆಂಡತಿ ಹೆರಿಗೆಗೆಂದು ತವರಿಗೆ ಹೋಗಿದ್ದಾಗ ಆತ ಮಣ್ಣು ತಿನ್ನುವ ಕೆಲಸ ಮಾಡಿದ. ತೋಟದ ಕೆಲಸಕ್ಕೆ ಬರುತ್ತಿದ್ದ ಹೆಣ್ಣಾಳಿನ ಮೇಲೆ ಅತ್ಯಾಚಾರ ಮಾಡಿದ. ಎರಡು ಮಕ್ಕಳ ತಾಯಿಯಾಗಿದ್ದ ಆಕೆ ಅಪಮಾನ ತಾಳಿಕೊಳ್ಳಲಾರದೆ ಬಾವಿಗೆ ಹಾರಿ ಪ್ರಾಣ ಕಳೆದುಕೊಂಡಳು. ಕಡುಬಡವನಾದ ಆಕೆಯ ಗಂಡ ಮತ್ತು ಮಕ್ಕಳು ಅನಾಥರಾದರು.

ಈ ಪ್ರಕರಣವನ್ನು ಮುಚ್ಚಿಹಾಕಿ ತನ್ನ ವಂಶದ ಮರ್ಯಾದೆ ಕಾಪಾಡಿಕೊಳ್ಳಬೇಕಾದರೆ ಗುರುಪಾದಪ್ಪ ಎಲ್ಲ ಬಗೆಯ ತಂತ್ರಗಳನ್ನೂ ಅನುಸರಿಸಬೇಕಾಯಿತು. ಸಾಕಷ್ಟು ಹಣವೂ ಕೈಬಿಟ್ಟಿತು. ಆ ಬಡವನ ಬಾಯಿ ಮುಚ್ಚಿಸಲಾಯಿತು! ಊರಿನವರ ಬಾಯಿ ಮುಚ್ಚಿಸಲು ಸಾಧ್ಯವಾಗಲಿಲ್ಲ. ಸೊಸೆಗೆ ಹೆರಿಗೆಯಾದ ನಂತರ, ಇಂಥ ಗಂಡನ ಜೊತೆಗೆ ಹೇಸಿಗೆ ಬಾಳು ಬಾಳಲಾರೆ ಎಂದು ತವರು ಮನೆಯಲ್ಲೇ ಉಳಿದಳು. ಅವಳನ್ನು ಒಲಿಸಿ, ಒಪ್ಪಿಸಿ ಮನೆಗೆ ಕರೆತರಲು ಮಾಡಿದ ಯಾವ ಪ್ರಯತ್ನವೂ ಫಲ ನೀಡಲಿಲ್ಲ.

ಗುರುಪಾದಪ್ಪನ ಮಗಳು ಕಾಲೇಜು ಓದು ಮುಗಿಸಿ ಪಟ್ಟಣದಲ್ಲಿ ಒಳ್ಳೆಯ ನೌಕರಿಗೆ ಸೇರಿದ್ದಳು. ಅಣ್ಣನ ದುಸ್ಸಾಹಸದಿಂದ ಆಕೆಗೂ ಅಪಮಾನವಾಗಿತ್ತು. ಒಮ್ಮೆ ರಜೆಗೆ ಬಂದಿದ್ದ ಆಕೆ, ತನ್ನ ಜೊತೆಯಲ್ಲಿ ನೌಕರಿ ಮಾಡುತ್ತಿರುವ ಯುವಕನನ್ನು ಮದುವೆ ಮಾಡಿಕೊಳ್ಳುವುದಾಗಿ ಹೇಳಿ ಗುರುಪಾದಪ್ಪನ ತಲೆಯ ಮೇಲೆ ಮತ್ತೊಂದು ಬಾಂಬು ಹಾಕಿದಳು. ಮೇಲಾಗಿ ಆ ಹುಡುಗ ಕೆಳಜಾತಿಯವನಂತೆ!

ಗುರುಪಾದಪ್ಪನ ಮಾನ ಮೂರು ಕಾಸಿಗೆ ಹರಾಜಾಗುವಂಥ ಪ್ರಕರಣ. ಗುರುಪಾದಪ್ಪ ತನಗೆ ತಿಳಿದಿದ್ದ ಎಲ್ಲ ಬುದ್ಧಿಮಾತು ಹೇಳಿದ. ತಮ್ಮ ಜಾತಿ, ಅಂತಸ್ತು ಮುಂತಾಗಿ ಹಲವು ಬೇಲಿ ಒಡ್ಡಿದ. ಗುರುಹಿರಿಯರಿಂದ ವಿವೇಕ ಹೇಳಿಸಿದ. ಆಕೆ ಯಾರ ಮಾತನ್ನೂ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಬೆದರಿಕೆಗಳಿಗೂ ಮಣಿಯಲಿಲ್ಲ.

ಗುರುಪಾದಪ್ಪನೇ ಕೆಳಗಿಳಿಯಬೇಕಾಯಿತು. ನಮ್ಮ ಜಾತಿ ಅಂತಸ್ತು ಹಾಳಾಗಲಿ. ನಿನ್ನ ಸಂತೋಷವೇ ನಮಗೆ ಮುಖ್ಯ ಮುಂತಾಗಿ ಬೆಲ್ಲದ ಮಾತಾಡಿದ. ಸ್ವಲ್ಪ ಅವಕಾಶ ಕೋರಿದ. ಮುಂದಿನ ವರ್ಷ ಮದುವೆ ಮಾಡೋಣ ಎಂದು ಸಮ್ಮತಿ ಸೂಚಿಸಿದಾಗ ಮಗಳಿಗೇ ಆಶ್ಚರ್ಯ! ಮದುವೆಯನ್ನು ಪಟ್ಟಣದಲ್ಲಿ ಮಾಡುವುದೆಂದು ತೀರ್ಮಾನಿಸಲಾಯಿತು.

ಆ ಹುಡುಗನ ತಂದೆತಾಯಿಗಳಿಗೂ ವಿಷಯ ತಿಳಿಸಿ ಅವರ ಸಮ್ಮತಿಯನ್ನು ಪಡೆಯಲು ಅವರ ವಿಳಾಸ ತಿಳಿದುಕೊಂಡ. ಭಾವಿ ಅಳಿಯನ ಫೋಟೋ ಸಹ ಮಗಳಿಂದ ಪಡೆದ.

ಗುರುಪಾದಪ್ಪನ ತಲೆಗೆ ಸೈತಾನ ಹೊಕ್ಕ.

ಮಕ್ಕಳ ಪ್ರಕರಣಗಳಿಂದಾಗಿ ಮನೆಯಲ್ಲಿ ಗುರುಪಾದಪ್ಪನಿಗೂ ನೀಲವ್ವನಿಗೂ ದಿನನಿತ್ಯ ಮಾತಿನ ಜಟಾಪಟಿ ಪ್ರಾರಂಭವಾಯಿತು. ತಂದೆಯಂತೆ ಮಗ. ಅಪ್ಪನ ಬುದ್ಧಿಯೇ ಮಗನಿಗೂ ಬಂದಿದ್ದರೆ ಅದು ಸಹಜ ಎಂದು ನೀಲವ್ವ ವಾದಿಸಿದರೆ, ತಾಯಿಯಂತೆ ಮಗಳು ಎಂದು ಗುರುಪಾದಪ್ಪನೂ ದಬಾಯಿಸಿದ! ಇಬ್ಬರು ಮಕ್ಕಳೂ ಹೀಗೆ ತಲೆತಿರುಕರಾಗಿರುವುದಕ್ಕೆ ನೀಲವ್ವನ ಅಡ್ಡನಾಡಿ ವಂಶವೇ ಕಾರಣ ಎಂದು ಗುರುಪಾದಪ್ಪ ದೂರಿದರೆ, ನಿನ್ನದೇನು ಸಾಚಾ ವಂಶವೇ ಎಂದು ಆಕೆಯೂ ಸವಾಲು ಹಾಕುತ್ತಿದ್ದಳು.

ಗುರುಪಾದಪ್ಪ ಒಳಗೊಳಗೇ ಒಂದು ಹಂಚಿಕೆ ಹಾಕಿದ್ದ. ಮನೆಯಲ್ಲಿ ಏನೂ ಹೇಳದೆ ಆತ ಎಲ್ಲಿಗೋ ಹೋಗಿ ಮೂರು ನಾಲ್ಕು ದಿನಗಳ ನಂತರ ತಿರುಗಿ ಬಂದ. ಉಳಿದಂತೆ ಮನೆಯಲ್ಲಿ ಮಾತಿಲ್ಲ ಕತೆಯಿಲ್ಲ.

ಒಮ್ಮೆ ಇಪ್ಪತ್ತು ಸಾವಿರದ ಗಂಟು ತೆಗೆದುಕೊಂಡು ಹೋದವನು ಮಾರನೆ ದಿನವೇ ವಾಪಸು ಬಂದ. ತನ್ನ ಮಗಳನ್ನು ಮದುವೆಯಾಗುವಷ್ಟು ಧಾರ್ಷ್ಟ್ಯ ತೋರಿದ ಭಾವಿ ಅಳಿಯನನ್ನು ಯಾರಿಗೂ ಸಂಶಯ ಬಾರದ ರೀತಿಯಲ್ಲಿ ಅದೇನೋ ಆಕಸ್ಮಿಕ ಎನ್ನುವಂತೆ ಮುಗಿಸಿಬಿಡಲು ಸುಪಾರಿ ಹಂತಕರನ್ನು ಗೊತ್ತುಮಾಡಿ ಬಂದಿದ್ದ. ಒಟ್ಟು ಒಂದು ಲಕ್ಷ. ಇಪ್ಪತ್ತು ಸಾವಿರ ಮುಂಗಡ! ಅವರಿಗೆ ಎರಡು ತಿಂಗಳು ಅವಕಾಶ ನೀಡಿಬಂದಿದ್ದ.

ಗುರುಪಾದಪ್ಪನ ಮೌನದ ಹಿಂದೆ ಏನೋ ಭಯಂಕರ ಸಂಚು ನಡೆಯುತ್ತಿರಬಹುದೆಂಬ ಸಣ್ಣ ಅನುಮಾನ ನೀಲವ್ವನ ತಲೆಯಲ್ಲಿ ಸುಳಿದಿತ್ತು.

* * *

ಈ ಮಧ್ಯೆ ಊರಿನಲ್ಲಿ ಉಗಾದಿಯ ಸಂಭ್ರಮದಲ್ಲೇ ಆ ದುರಂತ ನಡೆಯಿತು.

ಹಬ್ಬದ ಹಿಂದಿನ ದಿನ, ಅವಸರವಸರವಾಗಿ ಮನೆಬಿಟ್ಟು ಹೋದ ಗುರುಪಾದಪ್ಪ ಎಂಟು ಹತ್ತು ದಿನಗಳವರೆಗೆ ಹಿಂದಿರುಗಿ ಬರಲಿಲ್ಲ. ನೀಲವ್ವನಿಗೆ ಒಂದು ರೀತಿಯ ಗಾಬರಿ ಪ್ರಾರಂಭವಾಯಿತು. ಕೆಟ್ಟ ವಿಚಾರಗಳು ತಲೆಯಲ್ಲಿ ಸುಳಿಯಲಾರಂಭಿಸಿದವು. ನಂಜುಂಡ ಬೈಕು ತೆಗೆದುಕೊಂಡು ನೆಂಟರಿಷ್ಟರ ಊರುಗಳಿಗೆ ಹೋಗಿ ಅಪ್ಪನನ್ನು ಹುಡುಕಿ ಬಂದ.

ಊರಾಚೆಗಿನ ಪಾಳುಗುಡಿಯ ತೆಂಕಲಿನಲ್ಲಿ ಒಂದು ಪಾಳು ಕೊರಕಲಿದೆ. ಈಚಲು, ಭೂತಾಳೆ, ನೇರಳೆ ಮರಗಳಲ್ಲದೆ ಲಂಟಾನಾದಂಥ ಪೊದೆಗಳು ಬೆಳೆದು ನಿಂತಿರುವ ಅಪಾಯದ ಜಾಗ. ಜೊತೆಗೆ ಹಾವುಗಳ ಕಾಟ. ಮನುಷ್ಯರು ಅಲ್ಲಿ ಇಳಿದು ತಿರುಗಾಡಲು ಅಂಜುತ್ತಿದ್ದರು. ದನಕರುಗಳು ಕೊರಕಲಿಗೆ ಬೀಳಬಹುದೆಂದು ಯಾರೂ ಅತ್ತಕಡೆ ಸುಳಿಯುತ್ತಿರಲಿಲ್ಲ.

ಇದ್ದಕ್ಕಿದ್ದಂತೆ ಅಲ್ಲಿ ರಣಹದ್ದುಗಳ ಗುಂಪು ಕಾಣಿಸಿಕೊಂಡಿತು. ರಣಹದ್ದುಗಳು ಕಾಣಿಸಿಕೊಂಡರೆ ಅದು ಬರಗಾಲದ ಸಂಕೇತವೆಂದು ಜನರ ನಂಬಿಕೆ. ಕೊರಕಲಿನಲ್ಲಿ ಯಾರದೋ ಎಮ್ಮೆಯೋ ದನವೋ ಬಿದ್ದು ಸತ್ತಿರಬೇಕು ಎಂದು ತರ್ಕಿಸಿದರು. ಸತ್ತ ವಾಸನೆ ಎಷ್ಟೋ ದೂರದಲ್ಲಿರುವ ಅವುಗಳ ಮೂಗಿಗೆ ತಲುಪುತ್ತದಂತೆ ಎಂದು ರಣಹದ್ದುಗಳ ಬಗ್ಗೆ ವಿಸ್ಮಯದಿಂದ ಮಾತಾಡಿಕೊಂಡರು.

ಕೆಲವು ಕುತೂಹಲಿಗಳು ಕೊರಕಲಿನ ಅಂಚಿನಲ್ಲಿ ನಿಂತು ಗಮನಿಸಿದಾಗ ರಕ್ತಸಿಕ್ತವಾದ ಒಂದೆರಡು ಬಟ್ಟೆಗಳಿರುವುದು ಕಾಣಿಸಿತು. ಸತ್ತದ್ದು ಎಮ್ಮೆಯೋ ದನವೋ ಅಲ್ಲ, ಮನುಷ್ಯನೇ ಎಂಬುದು ಖಚಿತವಾಯಿತು.

ಅದೇ ಸಂದರ್ಭದಲ್ಲಿ ಗುರುಪಾದಪ್ಪನೂ ಕಾಣೆಯಾಗಿದ್ದನಷ್ಟೆ. ಪೊಲೀಸರಿಗೆ ಸುದ್ದಿ ತಲುಪಿ ಅವರು ತನಿಖೆಗೆ ಬರುವಷ್ಟರಲ್ಲಿ ಹದ್ದುಗಳು ತಮ್ಮ ಕೆಲಸ ಮುಗಿಸಿ ಹಾರಿ ಹೋಗಿದ್ದವು. ಪೊಲೀಸರ ತನಿಖೆಯಿಂದ ಅವು ಗುರುಪಾದಪ್ಪ ತೊಟ್ಟಿದ್ದ ಬಟ್ಟೆಗಳು

ಹಿಡಿದು ಖಚಿತವಾಗಿ, ಊರಿನ ಮೇಲೆ ಭೀತಿಯ ಕರಿ-ನೆರಳಿನ ಛಾಯೆ ಹರಡಿತು.

ಏನು ಗುರುಪಾದಪ್ಪನಿಗೆ ಇಂಥಾ ಗತಿ ಬಂತೆ ಎಂದು ಊರಿಗೆ ಊರೇ ವ್ಯಥೆಪಟ್ಟಿತು. ಗುರುಪಾದಪ್ಪನ ಸಾವಿನ ಹಿಂದೆ ಹಲವು ಊಹಾಪೋಹಗಳು ಕುಡಿಯೊಡೆದವು. ಆತನನ್ನು ಯಾರಾದರೂ ಕೊಂದು ಹೆಣವನ್ನು ಕೊರಕಲಿನಲ್ಲಿ ಬಿಸಾಡಿರಬಹುದು ಎಂಬುದು ಪೊಲೀಸರ ಗುಮಾನಿ. ಊರಿನವರೂ ಅದನ್ನು ನಂಬದೆ ಬೇರೆ ಮಾರ್ಗವಿರಲಿಲ್ಲ.

ಕೊಲೆ ಮಾಡಿದವರು ಯಾರು, ಏನು ಕಾರಣಕ್ಕೆ – ಎಂಬ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಅಷ್ಟು ಸರಳವಾಗಿರಲಿಲ್ಲ.



ಸಾಧಾರಣವಾಗಿ ಉಗಾದಿ ಹಬ್ಬದ ಸಂದರ್ಭದಲ್ಲಿ ಭಾರಿ ಇಸ್ಪೀಟಾಟಗಳು ನಡೆಯುತ್ತವೆ. ಆಟಕ್ಕೆ ಬಂದವರು ಹಗಲು ರಾತ್ರಿ ಕುಳಿತಲ್ಲಿಂದ ಮೇಲಕ್ಕೇಳದೆ ಆಟ ಮುಂದುವರಿಸುತ್ತಾರೆ. ಉಗಾದಿಯ ದಿನ ಜೂಜಿನಲ್ಲಿ ಗೆದ್ದರೆ ಇಡೀ ವರ್ಷ ಗೆಲುವಾಗುತ್ತದೆ ಎಂದು ಜೂಜುಕೋರರು ನಂಬುತ್ತಾರೆ. ಅಲ್ಲದೆ ಉಗಾದಿಯ ಜೂಜಿಗೆ ಪೊಲೀಸರ ಕಾಟವಿರುವುದಿಲ್ಲ. ರಿಯಾಯಿತಿ ಇರುತ್ತದೆ. ಗುರುಪಾದಪ್ಪ ಸಹ ಅಂಥ ಒಂದು ಗ್ಯಾಂಗಿನಲ್ಲಿ ಸೇರಿ ಇಸ್ಪೀಟ್ ಆಡಿರಬಹುದು. ಆಟದಲ್ಲಿ ಸಾಕಷ್ಟು ಹಣ ಗೆದ್ದಿರಬಹುದು. ಉಳಿದವರು ಸಂಚುಮಾಡಿ ಆತನನ್ನು ಕೊಂದು ಕೊರಕಲಿನಲ್ಲಿ ಬಿಸಾಡಿ ಹಣ ದೋಚಿರಬಹುದು ಎಂದು ಪೊಲೀಸಿನವರು ತರ್ಕಿಸಿದರು. ಗುಮಾನಿಯ ಮೇಲೆ, ಇಸ್ಪೀಟ್ ಚಟದ ಕೆಲವರನ್ನು ಕರೆತಂದು ತದುಕಿದರು. ಒಂದಿಷ್ಟು ಚಿಲ್ಲರೆ ಹಣ ಕಕ್ಕಿಸಿ ಜೇಬಿಗಿಳಿಸಿದರು.

ರಣಹದ್ದುಗಳು ಗುರುಪಾದಪ್ಪನ ಮೂಳೆಗಳನ್ನು, ಆತ ತೊಟ್ಟಿದ್ದ ಬಟ್ಟೆಗಳನ್ನು ಮಾತ್ರ ಉಳಿಸಿದ್ದುದರಿಂದ, ಆತನನ್ನು ಯಾರು ಹೇಗೆ ಕೊಲೆ ಮಾಡಿರಬಹುದು, ಯಾವ ಆಯುಧ ಬಳಸಿರಬಹುದು – ಮುಂತಾದ ಪ್ರಶ್ನೆಗಳಿಗೆ ಉತ್ತರ ಸರಳವಾಗಿರಲಿಲ್ಲ. ಅಪರಾಧ ಸಾಬೀತುಪಡಿಸಲು ಬೇಕಾದ ಯಾವ ಸಾಕ್ಷ್ಯವೂ ಇಲ್ಲದೆ ಅವರಾದರೂ ಏನು ಮಾಡಲು ಸಾಧ್ಯ ?

ಪೊಲೀಸರಿಗೆ ನಂಜುಂಡನ ಮೇಲೆ, ಸೀಲಪ್ಪನ ಮೇಲೆ ಸಂಶಯ ಬಾರದೆ ಇರಲಿಲ್ಲ. ತನಿಖೆ ನಡೆಸಿದರು. ಗುರುಪಾದ ಸಾವು ಹೇಗೆ ಸಂಭವಿಸಿರಬಹುದು, ಆತ ಹೇಗೆ ಸತ್ತಿರಬಹ ಎಂಬುದನ್ನು ಊಹಿಸಲೂ ಅವರಿಂದ ಸಾಧ್ಯವಾಗಲಿಲ್ಲ.

ಈ ಪ್ರಕರಣದ ಬಗ್ಗೆ ಪತ್ರಿಕೆಗಳಲ್ಲೂ ವರದಿ ಪ್ರಕಟವಾದವು. ಬಲವಾದ ಸಾಕ್ಷ್ಯಾಧಾರಗಳಿಲ್ಲದ ಕಾ ಅದೊಂದು ಅಸಹಜ ಸಾವು ಎಂದು ತೀರ್ಮಾ ತನಿಖೆಯನ್ನು ಮುಕ್ತಾಯಗೊಳಿಸಿದರು.

ಗುರುಪಾದಪ್ಪನ ದುರಂತ ಸಾವಿನ ವಿಷಯ ತಿ ಸುಪಾರಿ ಕೊಲೆಗಡುಗರು ತಮ್ಮ ಕಾರ್ಯಾಚರಣೆಯನ್ನು ಅ ನಿಲ್ಲಿಸಿ ಸಿಕ್ಕಿದ ಇಪ್ಪತ್ತು ಸಾವಿರವೇ ಸಾಕೆಂದು ತೆಪ್ಪಗಾದರು.

* * *

ಸುಮಾರು ಅದೇ ಸಂದರ್ಭದಲ್ಲಿ, ದೇವರ ಬ ಊರಿನಿಂದ ಕಾಣೆಯಾಗಿರುವ ವಿಷಯ ನಿಧಾನವಾಗಿ ಊರಿನವರ ಗಮ ಬಂದಿತು. ಈ ಬಸಣ್ಣ ಹೋದದ್ದಾದರೂ ಎಲ್ಲಿಗೆ ಎಂದು ಯಾರಿಗೂ ಅರ್ಥವಾಗಲಿ ಎಲ್ಲರ ಮನಸ್ಸಿಗೂ ಒಂದು ಬಗೆಯ ಆತಂಕ ಆವರಿಸಿಕೊಂಡಿತು. ತಮ್ಮೂರಿನಲ್ಲಿ ಹು ಬೆಳೆದ ದೇವರ ಬಸವ ಇದ್ದಕ್ಕಿದ್ದಂತೆ ಹೋದದ್ದಾದರೂ ಎಲ್ಲಿಗೆ ? ಅದ ಕ್ರೂರಮೃಗಗಳು ಕೊಂದಿರಬಹುದೆ ? ಯಾರಾದರೂ ಕದ್ದೊಯ್ದಿರಬಹುದೆ ದೇವರ ಬಸವನನ್ನು ಮುಟ್ಟಲು ಯಾರಿಗೆ ಧೈರ್ಯವಿದೆ ! ಜನರ ಮನಸ್ಸಿನಲ್ಲಿ ಕ ಆಲೋಚನೆಗಳು ಸುಳಿದುಹೋದವು. ಬಸವನಿಲ್ಲದ ತಮ್ಮ ಊರನ್ನು ಕಲ್ಪಿಸಿಕೊಳ್ಳ ಅವರಿಂದ ಸಾಧ್ಯವಾಗಲಿಲ್ಲ.

ಈಚಲು ಬೆಟ್ಟದ ಬುಡದಲ್ಲಿ ಬಸವ ಯಾರ ಕಣ್ಣಿಗೋ ಬಿದ್ದಿತಂತೆ. ಈ ಸು ಕೇಳಿದ ಕೂಡಲೇ ಅನೇಕರು ಬಸವನನ್ನು ಹುಡುಕಿ ಅದರ ಮನ ಒಲಿಸಿ ಊರ ಕರೆತರಲು ಹೊರಟರು. ಬರಿಗೈಯಲ್ಲಿ ಹಿಂದಿರುಗಿದರು !

ದೇವರ ಬಸವನನ್ನು ಸಾಕ್ಷಾತ್ ದೇವರೆಂದೇ ನಂಬಿ ಭಕ್ತಿ, ವಿಶ್ವಾಸ, ಪ್ರೀ ತೋರಿಸುತ್ತ ಬಂದಿದ್ದ ಕೆಲವರು ತಮ್ಮ ಬದುಕಿನ ಏನೋ ಕಳೆದುಹೋದ ಕೊರಗತೊಡಗಿದರು. ದೇವಮ್ಮನಂಥ ಕೆಲವರು ಊರಿನಿಂದ ದೂರದ ಹೊಲ ಅಂಚಿನವರೆಗೆ ಹುಡುಕುತ್ತ ಹೋಗಿ 'ಬಸಣ್ಣಾ ಎಲ್ಲಿದ್ದೀಯೆ ನನ್ನಪ್ಪ, ನಮ್ಮೂರ್ನ ದಿಕ್ಕಿಲ್ದ ಪರದೇಶಿಗಳಂಗ್ ಮಾಡಿದ್ಯಲ್ಲಪ್ಪ' ಎಂದು ಅಂಗಲಾಚಿ ನಾಲಿಗೆ ಒಣ ಕೊಂಡು ನಿಟ್ಟುಸಿರುಬಿಡುತ್ತ ಊರಿಗೆ ಬರುತ್ತಿದ್ದರು.

ಊರಿನವರ ರೀತಿ ನೀತಿಗಳನ್ನು ಕಂಡು ರೋಸಿಹೋಗಿ ಬಸವ ಊರು ಬಿ ಬೇರೆಲ್ಲಿಗಾದರೂ ಹೋಗಿರಬೇಕೆಂದು ಕೆಲವರು ಊಹಿಸಿ, ಬೇರೆ ಬೇರೆ ಊರುಗಳ ತಮ್ಮೂರ ದೇವರ ಬಸವನನ್ನು ಹುಡುಕಾಡಿ ಸೋತರು.

ಸಂದೇಹವಾದಿಗಳು ಕೆಲವರು, ಗುರುಪಾದಪ್ಪನನ್ನು ದೇವರ ಬಸವ ಕೊಂಬಿನಿಂದ ಇರಿದು ಕೊಂದಿರಬಹುದು ಎಂದೂ ತರ್ಕಿಸುತ್ತಿದ್ದರು.

ಈ ವಿಷಯ ಕಿವಿಯಿಂದ ಕಿವಿಗೆ ತಲುಪಿದಾಗ ಕೆಲವರು "ಛೇ ಛೇ, ಅದು ಹೇ ಸಾಧ್ಯ ? ಅದು ಪಾಪಿ ನರಮನುಷ್ಯನೆ ? ಹೇಳಿ ಕೇಳಿ ದೇವರ ಬಸವ ! ಮನುಷ್ಯನ ಇರಿದು ಕೊಲ್ಲುವಷ್ಟು ಕ್ರೂರಿಯಾಗಬಲ್ಲದೆ ?" ಎಂದು ಗುಮಾನಿಯನ್ನು ನಿರಾಕರಿಸುತ್ತಿದ್ದರು.

ದೇವರ ಬಸವ ಆಗಾಗ ಊರಿನ ಕೆಲವರ ಕನಸಿನಲ್ಲಿ ಕಾಣಿಸಿಕೊಳ್ಳತೊಡಗಿತು ಅವರು ಅದನ್ನು ಪೂಸಿ ಮಾಡಿ ಮತ್ತೆ ಕಲ್ಲೂರಿನಲ್ಲಿ ಬಂದು ತಿರುಗಾಡಿಕೊಂಡಿರುವಂ ಕೇಳಿಕೊಳ್ಳುತ್ತಿದ್ದುದುಂಟು.

ದೇವಮ್ಮನಿಗೆ ಬಸವನ ಗುಟುರು ಸಹ ಕೇಳಿಸಿತಂತೆ. ಅದು ಹುಲಿಯ ಗರ್ಜನೆಯಂತೆ ಕೇಳಿಸಿ ದೇವಮ್ಮ ಮಲಗಿದ್ದಲ್ಲಿಯೇ ಬೆವತುಹೋದಳಂತೆ !

ಹುಣ್ಣಿಮೆಯ ದಿನಗಳಲ್ಲಿ ದೇವರ ಬಸವನ ಗುಟುರಿನ ಗರ್ಜನೆ ಕಿ ತೆರೆದುಕೊಂಡಿರುವವರಿಗೆ ಕೇಳಿಸುತ್ತದೆಯಂತೆ. ಊರಿನ ಬೀದಿಯಲ್ಲಿ ದೇವರ ಬಸ ಬಂದು ನಿಂತಿರುವಂತೆಯೂ ಕೆಲವರ ಕಣ್ಣಿಗೆ ಕಾಣಿಸುತ್ತದೆಯಂತೆ !

ಪರಂಜ್ಯೋತಿ
ನಂ. ೧೬೭, ೧೦ನೇ ಮೇನ್, ೩ನೇ ಹಂತ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮

ನಮ್ಮ ಇತ್ತೀಚಿನ ಪ್ರಕಟಣೆಗಳು


ರೂ. 175


ರೂ. 60


ರೂ. 100


ರೂ. 45


ರೂ. 125


ರೂ. 20


ಲೋಹಿಯಾ ಪ್ರಕಾಶನ
'ಕ್ಷಿತಿಜ', ಕಪ್ಪಗಲ್ಲು ರಸ್ತೆ,
ಗಾಂಧಿನಗರ, ಬಳ್ಳಾರಿ – 583 103
ದೂರವಾಣಿ: 08392-257412

# ಈ ಜಗತ್ತೇ ಪ್ರಯೋಗಶಾಲೆ ನಾವೆಲ್ಲ ವಿಜ್ಞಾನಿಗಳೆ!

ಈ ಜಗತ್ತಿನ ಎಲ್ಲ ವಿದ್ಯಮಾನಗಳೂ ಪ್ರಯೋಗಗಳೇ! ಎಲ್ಲ ಜೀವಿಗಳೂ ಇಲ್ಲಿಯ ್ರಯೋಗಪಶುಗಳೇ! ಹಾಗೆಯೇ ಅವೆಲ್ಲವೂ ವಿಜ್ಞಾನಿಗಳೇ! ಎಲ್ಲ ಪ್ರಾಣಿಗಳು, ತಮ್ಮ ತಮ್ಮ ರಿಸರವನ್ನು ಅಳೆದು ತೂಗುವ ಇಂದ್ರಿಯಗಳಂತಹವುಗಳ ಕಾರ್ಯಕ್ಷಮತೆಯ ಮಟ್ಟದಲ್ಲಿ ್ರಯೋಗಗಳನ್ನು ವೀಕ್ಷಿಸಿ, ಇರುವಷ್ಟು (ಇಂದ್ರಿಯಗಳನ್ನು ಸಮನ್ವಯಿಸುವ ಅತ್ಯುತ್ತಮ ಇಂದ್ರಿಯ ಎನ್ನಬಹುದಾದ) ಮೆದುಳಿನ ಮಟ್ಟದಲ್ಲಿ, ತಕ್ಷಣಕ್ಕೆ ಆ ಪರಿಸರದಿಂದ ಒದಗುವ ಾಮಗ್ರಿ ಮತ್ತು ಉಪಯೋಗಗಳಿಗೆ ಅಳವಡುವ ವರ್ತನೆ/ಪ್ರವೃತ್ತಿಗಳನ್ನು ವೃದ್ಧಿಸಿಕೊಂಡು, ್ವೋದ್ಧಾರ (ಎಂದರೆ, ಸಂತತಿವೃದ್ಧಿಯ ಪರಿಣಾಮ)ವನ್ನು ಮಾಡಿಕೊಳ್ಳುವ ವಿಜ್ಞಾನಿಗಳಾಗು ್ತುತ್ತವೆ. ಹಾಗೆಯೆ ಮನುಷ್ಯಪ್ರಾಣಿಗಳೂ ಸಹ, ಅವರವರ ಆಗಾಗಿನ ವಾಸ್ತವಿಕ ಜ್ಞಾನದ ರಿವಿನಲ್ಲಿ, ಅನುಭವದಿಂದ ಕಲಿತ ತರ್ಕವಿಧಾನಗಳ ಮಟ್ಟದಲ್ಲಿ, ತಮ್ಮ ಪರಿಸರದ ಇತರ ್ರಾಣಿಗಳಿಗಿಂತ ಹೆಚ್ಚಿನ ಲಾಭ ಪಡೆಯುತ್ತ, ಹೆಚ್ಚಿನ ಗತಿಯಲ್ಲಿ ವಿಜ್ಞಾನಿಗಳಾಗುತ್ತಿರುತ್ತವೆ. ಗಾಧ ಜಗತ್ತಿನಲ್ಲಿ, ತನ್ನ ನಿಯಂತ್ರಣದೊಳಗಿರುವ ತನ್ನ ದೇಹವಷ್ಟನ್ನೆ ಪ್ರಯೋಗಶಾಲೆ ುನ್ನಾಗಿ ಉಪಯೋಗಿಸಬಲ್ಲ ಯಾವುದೇ ಪ್ರಾಣಿ, ಈ ಶಾಲೆಯ ಸಲಕರಣೆಗಳೆನ್ನಬಹುದಾದ ಇಂದ್ರಿಯಗಳನ್ನು ಬೆಳೆಸಿಕೊಂಡದ್ದೇ ಇಂತಹ ಉಪಯೋಗಕ್ಕಾಗಿ! ಮತ್ತು, ಇನ್ನೂ ಮುಖ್ಯವಾಗಿ, ಉಪಯೋಗದ ಸಾಫಲ್ಯದ ಪರಿಣಾಮವಾಗಿ! (ಯಾವುದೇ ಉಪಯೋಗ ವಿಫಲವಾದಲ್ಲಿ, ಇಂದ್ರಿಯ ಶಕ್ತಿ, ಅಲ್ಪ ಕಾಲದಲ್ಲಿಯೇ ನಶಿಸಿಯೂ ಹೋಗುತ್ತದೆ!) ಈ ಹೆಚ್ಚಿದ ಅರಿವಿನ ಕ್ತಿಯ ಲಾಭವನ್ನು ಹೆಚ್ಚುಹೆಚ್ಚಾಗಿ ಪಡೆಯಲೆಂದೇ, ಆ ಪ್ರಾಣಿ ತನ್ನ ನಿಯಂತ್ರಣದಲ್ಲಿರುವ ಂದೇ ಒಂದು ಕಾರ್ಖಾನೆ, ತನ್ನ ದೇಹದಲ್ಲಷ್ಟೆ, (ಈಗಿನ ಯಾವುದೇ ಯಂತ್ರಗಳೆನ್ನಬಹುದಾದ) ಅಂಗಾಂಗಗಳನ್ನು ಬೆಳೆಸಿಕೊಂಡದ್ದು! ಈ ಅರ್ಥದಲ್ಲಿಯೆ, ಪ್ರಾಣಿಯನ್ನು, ಒಂದು ವಿಜ್ಞಾನಿಯಷ್ಟೆ ಅಲ್ಲದೆ, ಒಂದು ಇಂಜಿನಿಯರ್, ಅಥವಾ ತಂತ್ರಜ್ಞ ಎನ್ನಲೂಬಹುದು. ತನ್ನ ಪ್ರತಿರೂಪಿ ದೇಹಿಗಳನ್ನು, ಅಂದರೆ ಸಂತತಿಯನ್ನು, ಮತ್ತೆ ಮತ್ತೆ ಉತ್ಪನ್ನಗೊಳಿಸುವ ಚೈತನ್ಯ, ಮತ್ತು ಅದಕ್ಕಾಗಿಯೊ ಆಹಾರಕ್ಕಾಗಿಯೊ ಪರಿಸರದ ಸಾಮಗ್ರಿಯನ್ನು ಪರಿವರ್ತಿಸಿಕೊಳ್ಳಬಲ್ಲ ಾಮರ್ಥ್ಯ, ಆದಿಜೀವಿಗಳಲ್ಲಿಯೆ ಇದ್ದವೆನ್ನುವುದು ಜೀವವಿಜ್ಞಾನದ ಮೊದಲ ಪಾಠ!

ಜೀವಿಗಳು, ಪರಿಸರದಲ್ಲಿ 'ಆಗು'(ನಡೆಯು)ತ್ತಿರುವುದರಿಂದ ಪ್ರಚೋದನೆಗೊಂಡು, ಅದಕ್ಕೆ ್ಪಂದನೆಯಾಗಿ (ನಾವು ಪ್ರಯೋಗವೆನ್ನಬಹುದಾದ) ವಿವಿಧ ಚೇಷ್ಟೆಗಳನ್ನು 'ಮಾಡು'ವ ಪ್ರವೃತ್ತಿ ಡೆದಾಗಲೆ, ನಾವು ಈಗ 'ವಿಜ್ಞಾನ' ಎನ್ನುವ ಶಿಸ್ತಿನ ಉದಯ ಆಗಿಹೋಯಿತು. ಈ 'ಆಗು', ಮಾಡು' ಕ್ರಿಯೆಗಳು ವಸ್ತುರೂಪಗಳಲ್ಲಿ ಮಾತ್ರ ಸಾಧ್ಯವಾದ್ದರಿಂದ, ವಿಜ್ಞಾನದ ವಾಸ್ತವಿಕತೆ ಆ ಿಸ್ತಿನ ನಿಯಮವಾಯಿತು. ಪ್ರಯೋಜನವಿಲ್ಲದ ಅಥವಾ ಸ್ಥಿತಿ ಇನ್ನಷ್ಟು ಕೆಡುವ ಚೇಷ್ಟೆಗಳಿಂದ ನಶಿಸಿಹೋಗಿ, ಅನುಕೂಲವಾದ ಚೇಷ್ಟೆಗಳಿಂದ ಲಾಭ ಪಡೆದು ಸಂಖ್ಯಾವೃದ್ಧಿಯಾಗಿ, ಆ ವೃದ್ಧಿ'ಯಿಂದಾಗಿ ಅಂತಹ ಚೇಷ್ಟೆಗಳನ್ನು ಪ್ರವೃತ್ತಿಯಾಗಿ ಮಾಡಿಕೊಳ್ಳುತ್ತಿದ್ದರಿಂದ, ನಾವು ಈಗ ಸತ್ಯಶೋಧೆ', 'ಮಾಹಿತಿಜ್ಞಾನ ಸಂಗ್ರಹಣೆ', ಎನ್ನುವ ವಿಧಾನಗಳು ಆ ಶಿಸ್ತಿನ ಅಂಗಗಳಾಗಿ ಹೋದವು. ಹೀಗೆಯೆ, ವಿಜ್ಞಾನದ ಅನೇಕ ಲಕ್ಷಣಗಳನ್ನು ಜೀವವಿಕಸನದಲ್ಲಿ ಗುರುತಿಸಬಹುದು. ನಾವೆಲ್ಲರೂ ವಿಜ್ಞಾನಿಗಳಾಗಿರುವುದು ಸಹಜವೆ ತಾನೆ!

ಹೀಗೆ ಅತಿ ಉಪಯುಕ್ತ ಸಲಕರಣೆ (ಇಂದ್ರಿಯ)ಗಳು ಮತ್ತು ಉಪಕರಣ (ಅಂಗಾಂಗ) ಗಳನ್ನು ಬಳಕೆ+ಅರಿವು+ಕಲಿಕೆಯ ಸರಣಿಯ ಹಂತಹಂತಗಳಲ್ಲಿ ಬೆಳೆಸುತ್ತ, ಬಳಕೆಯ ಅರಿವನ್ನು ವರ್ತನೆಯೆಂಬ ಕಲಿಕೆಯಲ್ಲಿ (ಮೊದಮೊದಲು ವಸ್ತುರೂಪದಲ್ಲಿ, ಮತ್ತು ಮುಂದೆ ಮುಂದೆ ಅನುಕರಣೆಗಳಲ್ಲಿಯೂ ಸಹ) ಉಳಿಸಿಕೊಡುತ್ತಿದ್ದ ಈ ವಿಜ್ಞಾನ, ನಾವು ಈಗ 'ಜ್ಞಾನ' ಎನ್ನುವುದರ ಮೂಲಸ್ವರೂಪ. ಆಹಾರದ ಲಾಭ ಪಡೆಯುವುದಕ್ಕೆ, ಅದು ಜೀರ್ಣವಾಗುವ ಜ್ಞಾನದ ಅವಶ್ಯಕತೆ ಇದೆಯೆ? ತಿಂದದ್ದು ಲಾಭವೊ, ನಷ್ಟವೊ ಅರಿತರೆ ಸಾಕು. ಹಾಗೆಂದು, ಆಹಾರದ ಜೀರ್ಣಕ್ರಿಯೆಯ ಜ್ಞಾನ ಉಂಟಾದರೂ ಲಾಭವೇ! ಆಗ ಲಾಭವೂ ತ್ವರಿತ ಗತಿಯಲ್ಲಿ ಹೆಚ್ಚುತ್ತದೆ, ಪರ್ಯಾಯ ಲಾಭಗಳೂ ಒದಗುತ್ತವೆ. ಈ ಕ್ರಮದಲ್ಲೆ, ತನ್ನದೇ ಪರಿಸರವನ್ನು ಬಳಸಿ, ಅರಿಯವ ಶಕ್ತಿಯಿಂದ ಅದರ ಬಳಕೆಯ ಲಾಭಗಳಲ್ಲಿ ಸಾಕಷ್ಟು ಸಿದ್ಧಿವೃದ್ಧಿಗಳನ್ನು ಪಡೆಯುತ್ತ, ತನ್ನ ಪ್ರಗತಿಗತಿಯನ್ನು ಒಂದು ಉತ್ತಮ ಪರ್ವ ಘಟ್ಟಕ್ಕೆ ಏರಿಸಿಕೊಂಡ ಮನುಷ್ಯಪ್ರಾಣಿ, ತನ್ನದೇ ಶರೀರದ ವಿಕಸನದ ಅತಿಮಂದಗತಿಗೆ ಮರೆಹೊಗದೆ, ಪರಿಸರದಲ್ಲೆ ಅಳವಡಣೆ ಮಾಡಿ, ಅತಿಶೀಘ್ರಗತಿಯಲ್ಲಿ ಉತ್ತಮಗೊಳಿಸುತ್ತಿರಬಲ್ಲ ಮಾಪಕಗಳು ಮತ್ತು ಯಂತ್ರ ಗಳನ್ನು ನಿರ್ಮಿಸಿಕೊಂಡಿದ್ದಾನೆ! ಹೀಗೆ, ಅವನೊಳಗೆಯೆ ಐಕ್ಯವಾಗಿದ್ದ ವಿಜ್ಞಾನ, ಕ್ರಮೇಣ, ಸ್ವಂತ ಭಾವ (ವರ್ತನೆ, ಪ್ರವೃತ್ತಿ ಇತ್ಯಾದಿ) ನಿಷ್ಠೆಯಿಂದ ಪ್ರತ್ಯೇಕಿತ ವಸ್ತುನಿಷ್ಠೆಯೆಡೆಗೆ, ಸಂತತಿ/ವಂಶಗಳ ಸಾಫಲ್ಯ/ಅಭಿವೃದ್ಧಿಯಿಂದ ಸಾಮೂಹಿಕ ಅಭಿವೃದ್ಧಿಯೆಡೆಗೆ, ಸಾಮೂಹಿಕ ಕಲಿಕೆಯಿಂದ ಸಾಮಾಜಿಕ ವಿದ್ಯೆಯೆಡೆಗೆ, ಆಂತರಿಕ ಪ್ರಜ್ಞೆಯಿಂದ ಸಾಮಾಜಿಕ ಸಮನ್ವಯ (ಕಾನ್‌ಸೆನ್ಸಸ್)ದ ಕಡೆಗೆ, ಬಹಿರ್ಮುಖಿಗೊಂಡು ಸತ್ಯನೆಲೆಗೆ ವಲಸೆಹೋಗಿ 'ಜ್ಞಾನ'ವಾಗಿದೆ. ಈ ಎರಡು ಘಟ್ಟಗಳ ನಡುವೆ, ವಿಕಸನದ ಸರಪಣಿ ಇರುವುದು ನಿಶ್ಚಿತವಾಗಿದ್ದರೂ, ಮಧ್ಯಭಾಗದ ಕೆಲವು ಕೊಂಡಿಗಳ ವಿವರ ಇನ್ನೂ ಶೋಧನೆಗಳಿಗೆ ಸಿಕ್ಕಬೇಕಾಗಿವೆ; ಶೀಘ್ರಗತಿಯಲ್ಲಿ ಸಿಕ್ಕುತ್ತಲೂ ಇವೆ.

ಈ ಹೇಳಿಕೆಗಳೆಲ್ಲ ಕಾವ್ಯವೊಂದರ ರೂಪಕದ, ವಿಸ್ಮಯದ, ಅಥವಾ ವಿಡಂಬನೆಯ ಸಾಲುಗಳಲ್ಲ! ಸಣ್ಣ ಪುಟ್ಟ ಸತ್ಯಗಳಿಗೆ ಸ್ಪಂದಿಸಿ ಕುತೂಹಲ, ಅನುಭವ, ಆನಂದ, ಲಾಭ ಮಾಹಿತಿಗಳನ್ನು ಪಡೆಯುವ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದ ಮನುಷ್ಯ, ಈಚೀಚೆಗಷ್ಟೆ, ವಿಶಾಲವ್ಯಾಪ್ತಿಯ ಸತ್ಯಗಳನ್ನು

ಡಾ॥ ಎಮ್. ಎನ್. ಕೇಶವ ರಾವ್



ಹೊಸ ವರ್ಷದ ಶುಭಾಶಯಗಳೊಂದಿಗೆ

# ಕಣ್ಣನ್ ಬುಕ್ ಸ್ಟಾಲ್

ನಂ. 11-12, ಲಾಲ್ ಬಹದ್ದೂರ್ ಶಾಸ್ತ್ರಿ ಮಾರ್ಕೆಟ್
ಮೊದಲನೇ ಮಹಡಿ, ಬಿಜಾಪುರ - 586 101
ಜಂಗಮವಾಣಿ : 9448645098 (ಅಬ್ದುಲ್ ರಹೀಮ್)



*With Best Compliments From*

**C. BALU GOWDA**

# BALU AND ASSOCIATES

ARCHITECTS AND ENGINEERS

*Facilities Available*

* Plan * Estimate * Project Report * Vastu Consultant * Construction & Consultation

**Office** : B.D.C.C Bank Building
B. B. Road, Gandhinagar
Yelahanka, Bangalore - 64
© 080-28462504, 9980562504

**Residence** : No. 14, Shivakrupa
Someshwaranagar, G.K.V.K. Post
Yelahanka New Town, Bangalore - 65
© 080-28562204, 9902062204

TRUSTEE : Sri Nivaneswara Charitable Trust
DIRECTOR : Sri Nirvaneswara Old Boys' & Employees' Co-op. Society
GENERAL SECRETARY : Old Boys' Association, Sri Degula Mutt, Kanakapura

ಕಾಣಬಲ್ಲ ಶಕ್ತಿ, ಸಾಮರ್ಥ್ಯಗಳನ್ನು ಪಡೆದಿದ್ದಾನೆ; ಮತ್ತು, ಇನ್ನೂ ಪರಿಣಾಮಕಾರಿಯಾಗಲಿಕ್ಕಾಗಿ, 'ಸಾಂಗ್ರಹಿಕತೆ/ ಸಾಮೂಹಿಕತೆ'ಯ ಅನುಕೂಲಗಳನ್ನೂ ಒದಗಿಸಿಕೊಂಡಿದ್ದಾನೆ!

ವೃದ್ಧಿ ಎಂದರೆ ಸಂಖ್ಯಾವೃದ್ಧಿ ಎನ್ನುವ ಸಂಕೇತದಲ್ಲಿ, ಸ್ವ-ವೃದ್ಧಿ, ಸಂತತಿವೃದ್ಧಿ ನಂತರ ಸ್ವ-ಪ್ರಾಣಿಜಾತಿವೃದ್ಧಿ, ಇಂತಹ ಸ್ತರಗಳನ್ನು ದಾಟಿದಾಗ, ಪರಿಸರದಲ್ಲಿ 'ತನ್ನವರು' ಎನ್ನುವ ಅಂಶವೇ ಪ್ರಧಾನವಾಗುತ್ತ ಹೋಯಿತು. ಪರಿಸರದೊಡನೆ ಅಳವಡಣೆ ಎನ್ನುವ ಪ್ರವೃತ್ತಿ ತನ್ನವರೊಡನೆ ಸಂಪರ್ಕ, ಸಹಕಾರಗಳಾದವು. ಈ ಪ್ರವೃತ್ತಿಯೆ ಸಾಮೂಹಿಕ ಸಂವಹನೆಗೆ, ಮುಂದೆಂದೊ ಸಾಮೂಹಿಕ ಸಂವೇದನೆಗೂ, ಮೂಲವಾಯಿತು. ಇಂತಹ ಸಾಮೂಹಿಕತೆಯ ಮೊದಲ ಚೇಷ್ಟೆಗಳಿಂದ ಪ್ರಾರಂಭವಾದ ವಿಜ್ಞಾನದ ಪ್ರಗತಿಪಥ, ಈ 'ಬಳಕೆ-ವರ್ತನೆ-ಲಾಭ-ತನ್ನದೇ ಅಳವಡಣೆ'ಗಳ ಹಂತಗಳ ಮೊದಲ ಘಟ್ಟವನ್ನು ದಾಟಿ, ನಂತರ ಇವೇ 'ವರ್ತನೆ-ಲಾಭ-ವೃದ್ಧಿ-ಸ್ಥಿರಪ್ರವೃತ್ತಿ-ಅಭಿವೃದ್ಧಿ'ಯ ವಿಕಸನಚಕ್ರಗಳಲ್ಲಿ ಕ್ರಮೇಣ ಹೆಚ್ಚುಹೆಚ್ಚು ವೈವಿಧ್ಯಮಯವಾಗಿ ಸಾಮೂಹಿಕಗೊಳ್ಳುತ್ತ ಹೆಚ್ಚು ಹೆಚ್ಚು ಉತ್ತಮ ಘಟ್ಟಗಳನ್ನು ತಲುಪುವುದು ವಿಜ್ಞಾನದ ಹಿಂದಿನ ಸ್ವರೂಪವಾಗಿತ್ತು. ಇದು ಎಲ್ಲ ಪ್ರಾಣಿಗಳ ವಿಕಸನದ ಒಂದು ಮುಖ್ಯ ಲಕ್ಷಣವಾಗಿದ್ದರೂ, ಪರಿಸರದ ಶೋಧನೆ ಮತ್ತು ಅರ್ಥೈಸುವಿಕೆ ಅವುಗಳ ಒಂದು ಮುಖ್ಯ ವರ್ತನೆಯಾಗಿದ್ದರೂ, ಮನುಷ್ಯಪ್ರಾಣಿಗಳು ಆ ವರ್ತನೆಯನ್ನು ಗುರುತಿಸಿ, ವಿಜ್ಞಾನವೆಂದು ಹೆಸರಿಡುವ ಮಟ್ಟಕ್ಕೆ ಬೆಳೆದುಬಂದಿರುವುದು ಈಚೀಚೆಗಷ್ಟೆ! ಸಾಮೂಹಿಕತೆ ಈ ಪರ್ವಘಟ್ಟಕ್ಕೆ ಏರಿದಾಗ, ವಿಜ್ಞಾನದ ವ್ಯಾಪ್ತಿ ಮತ್ತು ತೀಕ್ಷ್ಣತೆಗಳು ಹೆಚ್ಚಿದ್ದರಿಂದ ಹೊಸ ತಿರುವು ಬೇಕಾಯಿತು. ಕಾರ್ಯ ಮತ್ತು ಅದರ ಪರಿಣಾಮಗಳಿಗಿರುವ ಸಂಬಂಧದ ಅರಿವಷ್ಟೆ ವಿಜ್ಞಾನವನ್ನು ಸಾಮೂಹಿಕವಾಗಿ ನಿರ್ವಹಿಸುವುದಕ್ಕೆ ಸಾಲದೇ ಹೋಯಿತು; ಕಾರ್ಯ-ಪರಿಣಾಮ ಸಂಬಂಧವನ್ನು 'ಕಾರ್ಯ-ಕಾರಣ ಸಂಬಂಧ' ಮತ್ತು 'ಕಾರಣ-ಪರಿಣಾಮ ಸಂಬಂಧ' ಎಂದು ವಿಭಜಿಸಿಕೊಂಡಾಗ, ಅನೇಕ ಅನುಕೂಲಗಳು ಒದಗಿದವು. (ವೈಜ್ಞಾನಿಕ 'ತರ್ಕ'ದ, ಗಣಿತದ ಮೂಲಸ್ವರೂಪ ಇದೇ ತಾನೆ!). ಇಂತಹ ವಿಜ್ಞಾನವನ್ನೇ ನಾವೀಗ, 'ಜ್ಞಾನ' ಅಥವಾ 'ಸೈದ್ಧಾಂತಿಕ ಜ್ಞಾನ' ಎಂದೊ, ಮತ್ತಷ್ಟು ಸಮಂಜಸವಾಗಿ 'ಸೈದ್ಧಾಂತಿಕ ವಿಜ್ಞಾನ' ಎಂದೊ ಗುರುತಿಸುತ್ತೇವೆ. ಹಿಂದಿನ ವಿಜ್ಞಾನ, ತತ್‌ಕ್ಷಣದ ವ್ಯಕ್ತಿಗತ ವೃದ್ಧಿಯ ಉಪಯೋಗಕ್ಕಾದರೆ, ಈ ಹೊಸ ವಿಜ್ಞಾನ ಸಾಮೂಹಿಕ ದೀರ್ಘಾಭಿವೃದ್ಧಿಯ ಉತ್ಪಾದನೆಗೆ ಸಾಧಕವಾಗುತ್ತಿದೆ. ಇದರ ಎದುರಿನಲ್ಲಿ, ಹಿಂದಿನ ವಿಜ್ಞಾನವನ್ನು ಒಂದು ಮಟ್ಟ ಕೆಳಗಿಳಿಸಿ, ತಾಂತ್ರಿಕತೆ ಅಥವಾ ಇಂಜನಿಯರಿಂಗ್ ಎನ್ನುವ ಗರ್ವದ ಮಟ್ಟಕ್ಕೆ ಈಗ ನಾವು ಏರಿದ್ದೇವೆ.

ಇಂತಹ ಸಂಗತಿಗಳಿಗೆ ನಿದರ್ಶನಗಳು ಮಾನವ ಇತಿಹಾಸದಲ್ಲಿ ಹೇರಳವಾಗಿವೆ. ಮನುಷ್ಯರ ಪ್ರತಿ ವರ್ತನೆಯು, ಸಾಮೂಹಿಕವಾದಾಗ ಹೀಗೆ ಶೀಘ್ರಗತಿಯಲ್ಲಿ ಬೆಳೆಯುವುದು ಎನ್ನುವುದನ್ನು, ನಾವೆಲ್ಲ ಪ್ರಾಚೀನ ನಾಗರಿಕತೆಗಳ ಇತಿಹಾಸಗಳಲ್ಲಿ ಕಾಣುತ್ತೇವೆ. ಹೆಸರೇ ಸೂಚಿಸುವಂತೆ, ಜ್ಞಾನವೃದ್ಧಿ ನಾಗರಿಕ ಗುಂಪುಗಳಲ್ಲೆ ಕೇಂದ್ರಿತವಾಗಿ ನಡೆಯುತ್ತಿತ್ತು; ಬಹಳ ಹಿಂದೆ ಈಜಿಪ್ಟ್, ಭಾರತ, ಗ್ರೀಸ್, ರೋಮ್‌ಗಳಲ್ಲಿ, ಮುಂದೆಂದೊ ಇಂಗ್ಲೆಂಡ್, ಫ್ರಾನ್ಸ್, ಜರ್ಮನಿಗಳಲ್ಲಿ, ಈಚೀಚೆಗೆ ಅಮೆರಿಕಾ, ಜಪಾನ್‌ಗಳಲ್ಲಿ ಜ್ಞಾನವೃದ್ಧಿಯ ಪರಿಣಾಮವಾಗಿ ಪ್ರಾದೇಶಿಕ ಅಭಿವೃದ್ಧಿಯಾಯಿತು ಎನ್ನುವುದೂ ಈ ವಿಷಯವನ್ನು ಪುಷ್ಟೀಕರಿಸುತ್ತದೆ. ಇವುಗಳಲ್ಲೂ ಜ್ಞಾನದ ವೃದ್ಧಿ ಮತ್ತು ಲಾಭಗಳನ್ನು, ಕೆಲವೇ ವರ್ಗಗಳಿಗಷ್ಟೆ ಸೀಮಿತಗೊಳಿಸಿದ್ದ ನಾಗರಿಕತೆಗಳು, ಬೇಗ ಕ್ಷೀಣವಾದವು; ಇವನ್ನು ಹೆಚ್ಚು ಹೆಚ್ಚು ಜನಗಳಿಗೆ ಕೊಂಡೊಯ್ದು ಹಂಚಿಕೊಂಡವುಗಳು ಹೆಚ್ಚು ಕಾಲ ತಮ್ಮ ಸಂಸ್ಕೃತಿಗಳನ್ನು ಬೆಳೆಸಿ ಉಳಿಸಿಡುವುದರಲ್ಲಿ ಸಫಲವಾದವು. ಸಾಮೂಹಿಕ ಪ್ರವರ್ತನೆಗಳಿಂದ ಮಾನವಕುಲಗಳಿಗೆ ದೊರಕಿದ ಮಹಾನ್ ಅಭಿವೃದ್ಧಿಯೇ ಒಂದು ಮುಖ್ಯ ಕಾರಣವಾಯಿತು. ಅವರ ಪ್ರಗತಿಯ ಕಾರ್ಯಸೂಚಿಯಲ್ಲಿ ಸಾಮೂಹಿಕ ಸಂವಹನವೇ ಒಂದು ಅತಿಮುಖ್ಯ ತಂತ್ರವ್ಯವಸ್ಥೆಯಾಗಿ ಅಳವಡುವುದಕ್ಕೆ



...ಮೊದ್ಲು ಕನ್ನಡಕ್ಕೆ ಶಾಸ್ತ್ರೀಯ ಭಾಷೆಯ ಸ್ಥಾನಮಾನ ಸಿಗಬೇಕು ಸೀನಣ್ಣ... ಆಮೇಲೆ ಏನಿದ್ರು ರಸ್ತೆ, ನೀರು, ವಿದ್ಯುತ್... ವಿಚಾರ...!!

ಭಾಷೆ, ಬರಹ, ಪುಸ್ತಕ, ಪ್ರಸಾರ, ನಂತರ ದೂರಪ್ರಸಾರ, ವಿಶ್ವಮಾಹಿತಿಜಾಲ ಇತ್ಯಾದಿ ಮಾಧ್ಯಮಗಳ ಬಳಕೆ, ಹಾಗೆಯೆ ಕಥನ, ಸಂಗೀತ, ಕಲೆಗಳೂ ಸಹ ಒಂದು ಸಾಮೂಹಿಕ ಅದಮ್ಯ ವರ್ತನೆಯಾಗಿ ಬೆಳೆದು ಬಂದಿರುವುದೂ ಇದೇ ಕಾರಣಕ್ಕಾಗಿಯೆ ಮತ್ತು, ಇನ್ನೂ ಮುಖ್ಯವಾಗಿ ಇವುಗಳಿಂದಾದ ಸಾಮೂಹಿಕ ಅಭಿವೃದ್ಧಿಗಳ ಪರಿಣಾಮವಾಗಿಯೇ!

ತಾವೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ವಿಜ್ಞಾನಿಗಳೆಂಬ ಇನ್ನೊಂದು ಸತ್ಯ, ಎಲ್ಲ ಮನುಷ್ಯರಿಗೂ ಅರಿವಾಗುವುದಕ್ಕೆ ಹೆಚ್ಚು ಕಾಲ, ಇನ್ನು, ಬೇಕಾಗಿಲ್ಲ, ಏಕೆಂದರೆ, ಪ್ರಗತಿಯ ಜೊತೆಗೆ ಅದರ ಗತಿಯೂ ವೇಗವರ್ಧಿತವೇ! ಜ್ಞಾನಾರ್ಜನೆಯಲ್ಲಿ, ಇಪ್ಪತ್ತನೆಯ ಶತಮಾನದಲ್ಲಿನ ಮೊದಲ ಅರ್ಧದಲ್ಲಾದ ಪ್ರಮುಖ ಶೋಧನೆಗಳ ರಾಶಿಯ ಹತ್ತುಪಟ್ಟಿಗೂ ಬಹಳ ಹೆಚ್ಚು ಆಯಿತು, ಎರಡನೆಯ ಅರ್ಧದಲ್ಲಿ! ಜ್ಞಾನರಾಶಿಯಷ್ಟೆ ಅಲ್ಲ, ಅದರ ವ್ಯಾಪ್ತಿ ಮತ್ತು ತೀಕ್ಷ್ಣತೆಗಳೂ, ಜೊತೆಜೊತೆಗೆ ಸಾಮೂಹಿಕ ಅಭಿವೃದ್ಧಿಯೂ ಸ್ಫೋಟದ ವೇಗದಲ್ಲಿ ಹೆಚ್ಚುತ್ತಿರುವುದನ್ನೂ, ಎಲ್ಲವೂ ಜಾಗತಿಕವಾಗುತ್ತಿರುವುದನ್ನೂ, ಎಲ್ಲರೂ ಗಮನಿಸಿರಲೇಬೇಕು.

**ಜಗತ್ತೇ ಒಂದು ಪ್ರಯೋಗಶಾಲೆ**

ಹಣ್ಣಾದ ಸೇಬು ಕೆಳಗೆ ಉದುರುವುದು ಎನ್ನುವ ವಿದ್ಯಮಾನದ ವೀಕ್ಷಣೆಯ ಪ್ರತಿಫಲ, ಸಕಾಲಕ್ಕೆ ಬಂದು ತಿನ್ನುವುದಕ್ಕಿಂತ ಹೆಚ್ಚಾಗಿ, ಯಾರಿಗೆ ತಾನೆ ಏಕೆ ಬೇಕು? ಆದರೆ ನ್ಯೂಟನ್, ಇದೇ ವಿದ್ಯಮಾನದಿಂದ ವಸ್ತುವಿನ ಗುರುತ್ವಾಕರ್ಷಣ ಸಿದ್ಧಾಂತವೆಂಬ ಮಹಾಸತ್ಯವನ್ನು ಕಂಡು, ಕಲಿಸಿಕೊಟ್ಟ. ತತ್‌ಕ್ಷಣದಲ್ಲಿ ಆ ಜ್ಞಾನದ ನೇರ ಉಪಯೋಗ ಸ್ವಲ್ಪವೂ ಇರಲಿಲ್ಲ! ಈ ಮೊದಲ ನಿದರ್ಶನವನ್ನು, ಸ್ವಲ್ಪ ವಿವರವಾಗಿ ಅರಿಯುವುದು ಮುಂದಿನ ನಮ್ಮ ವಿಚಾರಗಳಿಗೆ ಅನುಕೂಲವಾಗಬಹುದೇನೋ! ಅವನ ತೋಟ ಅವನ ಪ್ರಯೋಗಶಾಲೆಯಾಗಿರಲಿಲ್ಲ. ನಮ್ಮ ಶಾಲೆಯ ವಿದ್ಯಾರ್ಥಿಯೊಬ್ಬ, 'ಫಿಸಿಕ್ಸ್‌ನ ಪಾಠ ಹೇಳಿಕೊಡು' ಎಂದು ಅವನನ್ನು ಕೇಳಿದ್ದರೆ, 'ಫಿಸಿಕ್ಸ್ ಅಂದರೆ ಏನು?' ಎಂದು ಕಕ್ಕಾಬಿಕ್ಕಿಯಾಗಿ ಪ್ರಶ್ನೆ ಹಾಕಿರುತ್ತಿದ್ದ! ತಾನು ಅಂತಹ ವೈದ್ಯನಲ್ಲವೆಂದೂ ಹೇಳಿಬಿಡುತ್ತಿದ್ದನೇನೊ! ವಿದ್ಯಾರ್ಥಿಯೆ ಅವನಿಗೆ ತಿಳಿಸಿಕೊಟ್ಟಾಗ, ತತ್ವದರ್ಶನದ ಪಂಡಿತನೆಂದು ಬೀಗುತ್ತಿದ್ದ ಅವನಿಗೆ ಅವಮಾನವಾಗಿರುತ್ತಿತ್ತು; ಏಕೆಂದರೆ, ವಿದ್ಯುಚ್ಛಕ್ತಿಯ ಬಗ್ಗೆ ಮೊದಲ ಪಾಠಗಳನ್ನು ಅವನೇ ಆ ವಿದ್ಯಾರ್ಥಿಯಿಂದ ಕಲಿಯಬೇಕಾಗುತ್ತಿತ್ತು! ತನ್ನ ವೈಜ್ಞಾನಿಕ ಶೋಧನೆ, ಸಿದ್ಧಾಂತಗಳಿಗಿಂತ, ತನ್ನೊಳಗಿನ ನಂಬಿಕೆಗಳ ಆಧಾರವಷ್ಟರಿಂದಲೆ ತಾನು ಬರೆದಿಟ್ಟ ಥಿಯಾಲಜಿಯ (ದೈವಿಕಶಾಸ್ತ್ರದ) ಸಿದ್ಧಾಂತಗಳು ಇನ್ನೂ ಹೆಚ್ಚು ಖ್ಯಾತಿ ತರುವುದೆಂದು ನಂಬಿ ಜಂಬಪಡುತ್ತಿದ್ದ ನ್ಯೂಟನ್, ಅವನ ಭೌತಶಾಸ್ತ್ರಕ್ಕೆ 'ಪ್ರಾಕೃತಿಕ ತತ್ವಶಾಸ್ತ್ರ' (ನ್ಯಾಚುರಲ್ ಫಿಲಾಸಫಿ) ಎಂದು ಹೆಸರಿಟ್ಟಿದ್ದ. ಮುಂದಿನ ವಿಜ್ಞಾನಕ್ಕೆಲ್ಲ ಅತ್ಯವಶ್ಯಕವಾದ ಗಣಿತವೊಂದರ ಜನಕನೂ ಆಗಿದ್ದ ಈ ದೈವಜ್ಞ ಮೇಧಾವಿ ಮಾಡಿದ್ದೆಲ್ಲವೂ, ಮುಂದೆ ಅವನದೇ ದೈವಸಿದ್ಧಾಂತಗಳಿಗೆ ಮಾರಕವಾದವು.

ಈಗ ಇಲ್ಲಿ, "ಸಿದ್ಧಾಂತಗಳಲ್ಲಿಲ್ಲದ ವಿಜ್ಞಾನ, 'ವಿಜ್ಞಾನ'ವೇ?" ಎನ್ನುವ ವಕ್ರಪ್ರಶ್ನೆಯೂ ಏಳುತ್ತದೆ. ಹೌದು, ಅದು ವಿಜ್ಞಾನವೇ! ಕಾರ್ಯಾನುಗತವಾದ ವಿದ್ಯಮಾನಗಳಾಗಿ, ಮತ್ತೆ ಮತ್ತೆ ಸಾಮೂಹಿಕ ಅನುಭವ-ಪ್ರವೃತ್ತಿಗಳಾದ ಆ ಮೂಲ ಸಿದ್ಧಾಂತರಹಿತ ಅನ್ವೇಷಣೆಗಳೇ ಈ ಸೈದ್ಧಾಂತಿಕ ವಿಜ್ಞಾನಕ್ಕೂ ಆದ್ಯವಾದವು; ಆಧಾರವಾದವು. ಬೆಂಕಿ, ಕೃಷಿ, ಔಷಧಿ ಇತ್ಯಾದಿ ಅನ್ವೇಷಣೆಗಳನ್ನೆ ವಿಜ್ಞಾನದ ಹೊರಗಿಡಲು ಸಾಧ್ಯವೇ? ಅಥವಾ, ಥಾಮಸ್ ಅಲ್ವ ಎಡಿಸನ್‌ನ ಶ್ರಮಾಧಾರಿತ (ವಿದ್ಯುತ್ ದೀಪ, ಇತ್ಯಾದಿ) ಅನ್ವೇಷಣೆಗಳನ್ನೋ? ಮೂಲ ಸಿದ್ಧಾಂತಗಳ ವಿಶ್ಲೇಷಣೆ ಮಾಡದೆಯೆ, ಶೋಧನೆಗಳನ್ನು ಅವನು ನಡೆಸಿದನೆಂದು ಮೂಗುಮುರಿದ ಯಃಕಶ್ಚಿತ್ ಸಿದ್ಧಾಂತಿಗಳಿಗೇನೂ ಕಡಿಮೆಯಿರಲಿಲ್ಲ. 'ಕಾರಣ'ವನ್ನೂ ಒಳಗೊಳ್ಳದಿದ್ದರೂ, ವಿದ್ಯಮಾನಗಳಲ್ಲಿನ ಕಾರ್ಯ-ಪರಿಣಾಮ ಸಂಬಂಧಗಳಿಂದಾಗಿ, ಅರಿವಿನ ಯಾವ ವ್ಯವಸ್ಥೆಯಲ್ಲೂ ವಿರೋಧ ತರದ ವಿಷಯಗಳನ್ನು, 'ಎಂಪೆರಿಸಿಸಂ'ನ ಸತ್ಯಗಳು

ಎಂದು ವಿಜ್ಞಾನ ಒಪ್ಪಿಕೊಳ್ಳುತ್ತ ಬಂದಿದೆ. ಮಾಡಿ ತೋರಿಸುವುದೆಲ್ಲವೂ ಪ್ರಯೋಗಗಳೇ ತಾನೆ? ಮುಂದೆಂದೊ ಸಿಕ್ಕುವ ಕಾರಣ – ಸಂಬಂಧ ಸಿದ್ಧಾಂತವು, ಶೋಧನೆ, ವೀಕ್ಷಣೆಗಳಿಂದ ಸಾಬೀತಾಗುವವರೆಗೂ ಪೂರ್ಣ-ಸತ್ಯವೆಂದು ಒಪ್ಪಿಕೊಳ್ಳದ ಪರಿಪಾಠವನ್ನೂ ವಿಜ್ಞಾನ ಹಾಕಿಕೊಂಡಿದೆ.

ಜಗತ್ತೇ ಪ್ರಯೋಗಶಾಲೆಯಾಗಿರುವುದು ಭೌತಿಕ ವಸ್ತುಗಳ ವಿದ್ಯಮಾನಗಳಿಗೆ ಮಾತ್ರ ಸೀಮಿತವಲ್ಲ. ಡಾರ್ವಿನ್ ಜೀವ ವಿಕಾಸದ ಮಹಾಸತ್ಯವನ್ನು ಕಂಡುಕೊಂಡದ್ದು, ಮತ್ತು ಪ್ರಮಾಣಿಸಿದ್ದು, ದಕ್ಷಿಣ ಅಮೆರಿಕಾದ ಈಕ್ವಡಾರ್ ಸಮೀಪದ ಶಾಂತಸಾಗರದ ಗಾಲಪಗೋಸ್ ನಿರ್ಜನ ದ್ವೀಪಗಳಲ್ಲಿ! ಹಾಗೆಯೆ ಇನ್ನಷ್ಟು ವಿಶಾಲ ದೃಷ್ಟಿ ಹರಿಸಿದರೆ, ಈ ಪ್ರಪಂಚ, ಭೌತಿಕ ವಿಜ್ಞಾನದಲ್ಲಿನ ಪ್ರಯೋಗಗಳಿಗಿಂತ ಜೀವ ವಿಜ್ಞಾನದ ಪ್ರಯೋಗಗಳಿಗೆ ಹೆಚ್ಚು ಅಚ್ಚುಕಟ್ಟಾಗಿ ಅನುಕೂಲವಾಗಿರುವ ಸಂಗತಿ ವಿಸ್ಮಯಗೊಳಿಸುತ್ತದೆ. ಬಾಹ್ಯ ಜಗತ್ ಅಷ್ಟೆ ಪ್ರಯೋಗಕ್ಷೇತ್ರವಾಗಿರಬಲ್ಲ ಅನೇಕ ಪರಿಣಾಮಕಾರಿ ವೈಜ್ಞಾನಿಕ ಶೋಧೆಗಳು ಇಂದಿಗೂ ಯಥೇಚ್ಛವಾಗಿವೆ; ನೂರಾರು ಸುಲಭ ಶೋಧೆಗಳು ಕಾಯುತ್ತಿವೆ, ಶೋಧಕರಿಗಾಗಿ!

ಅನೇಕ ವಿದ್ಯಮಾನಗಳು, ಸಂಬಂಧಿತ ಮಾಹಿತಿಗಳ 'ಸಂಗ್ರಹ, ವಿಚಾರ, ವಿಶ್ಲೇಷಣೆ'ಗಳಷ್ಟರಿಂದಲೆ ಉತ್ತಮ ಸಿದ್ಧಾಂತ (ಥಿಯರಿ)ಗಳನ್ನು ಒದಗಿಸುವುವು; ಆದರೆ ಶೋಧಕರು ಪೂರ್ವಗ್ರಹಗಳಿಂದ ಮುಕ್ತ, ವೈಜ್ಞಾನಿಕ ಮನೋಭಾವದವರಾಗಿರಬೇಕು; ಟೀಕೆ, ವಿಮರ್ಶೆಗಳನ್ನು ಮುಕ್ತವಾಗಿ ಕೊಟ್ಟು ತೆಗೆದುಕೊಳ್ಳಬೇಕು, ಅಷ್ಟೆ! ಇಂಗ್ಲಿಷ್ ಬಾರದವರಿಗೆ, ವಿಜ್ಞಾನ ಓದಿರದವರಿಗೆ ಸಂಬದ್ಧ ಮಾಹಿತಿ ಸಂಗ್ರಹಣೆಯಲ್ಲಿ ಅಧಿಕ ಕಾಲ ಬೇಕಾಗಬಹುದು ಅಷ್ಟೆ! (ಒಂದು ವಿಭಾಗದ ವಿಜ್ಞಾನಿಗೆ ಇತರ ಅನೇಕ ವಿಜ್ಞಾನಗಳ ಪರಿಚಯವೇ ಇರುವುದಿಲ್ಲ! ಈ ಶತಮಾನದ ಪ್ರಸಿದ್ಧ ವಿಜ್ಞಾನಿಗಳಲ್ಲಿ ಹೆಚ್ಚು ಜನ, ಅವರಿಗೂ ಪೂರ್ವಪರಿಚಯವಿರದ ವಿಭಾಗಗಳಲ್ಲೇ ಶೋಧನೆ ಮಾಡಿ ಪ್ರಸಿದ್ಧರಾದವರು.) ಹಿರಿಯ ಅನುಭವಿಗಳು (ಬುದ್ಧನಂತಹವರು) ಹೇಳಿದ, ಹೇಳುವ ಸರಳ ಬುದ್ಧಿಮಾತುಗಳಲ್ಲಿ ಹಲವು, ಇಂತಹವು ತಾನೆ? ಐನ್‌ಸ್ಟೈನ್ ತನ್ನ ಸಾಪೇಕ್ಷ ಸಿದ್ಧಾಂತವನ್ನು ಯಾವುದೇ ಪ್ರಯೋಗಗಳ ಆಧಾರದ ಮೇಲೆ ಮಂಡಿಸಲಿಲ್ಲ! ತರ್ಕಬದ್ಧ ಗಣಿತ, ಮತ್ತು ಕೆಲವು 'ಚಿಂತನಾತ್ಮಕ ಪ್ರಯೋಗ'ಗಳ ಮೂಲಕ ಅದನ್ನು ತಲುಪಿದ್ದ. ಭಾರತದ ಪುರಾತನ ಶಾಸ್ತ್ರಗಳ (ಖಗೋಳಶಾಸ್ತ್ರ, ಇತ್ಯಾದಿ) ಕೆಲಭಾಗ ಇಂತಹವೆ.




ಸಾಧಾರಣ ಅನುಭವಗಳೇ ಸಾಕು, ಮುಂದೆ ಬಹು ದೊಡ್ಡದಾಗಿ ಬೆಳೆಯಬಲ್ಲ ಬಹೂಪಯೋಗಿ ಒಂದು ಸಿದ್ಧಾಂತ (ಥಿಯರಿ)ದ ತಳಹದಿ ಹಾಕುವುದಕ್ಕೆ. ಜೀವವಿಜ್ಞಾನಿ ಸ್ಟೋನ್‌ಕಿಂಗ್‌ಗೆ ಮಗನ ಶಾಲೆಯಿಂದ ಒಂದು ನೋಟಿಸ್ ಬಂದಿತು: "ಈ ಮಗುವಿನ ತರಗತಿಯ ಒಬ್ಬನ ಬಟ್ಟೆಗಳಲ್ಲಿ, ಕೂರೆ, (ತಲೆಯ ಹೇನಿನಂತಹುದೆ, ಮೈ ಮತ್ತು ಬಟ್ಟೆಗಳಲ್ಲಿರುವ ಕೀಟ) ಪತ್ತೆಯಾಗಿದೆ. ದೇಹದ ತಾಪದಿಂದ ೨೪ ಗಂಟೆಗಿಂತ ಹೆಚ್ಚು ಹೊತ್ತು ದೂರವಿದ್ದರೆ ಸತ್ತುಹೋಗುವ ಈ ಕೀಟಗಳ ಬಾಧೆಯಿಂದ ನಿಮ್ಮ ಮಗುವನ್ನು ರಕ್ಷಿಸಿಕೊಳ್ಳಿ!" ರೋಮಭರಿತ ವಾನರನ ಮೈಯಲ್ಲಿ ಸುಖವಾಗಿದ್ದ ಹೇನು, ಅವನ ಚರ್ಮದ ಕೂದಲು ಇಲ್ಲವಾದಾಗ ತಲೆಯ ಕೂದಲಲ್ಲಿ ಉಳಿದು, ಅವನು ಬಟ್ಟೆ ಹಾಕಿಕೊಳ್ಳಲು ಆರಂಭಿಸಿದಾಗ, ತನ್ನ ಕೂದಲು-ಹಿಡಿಕೆಯ ಕಾಲುಗಳ ಮುಳ್ಳುಗಳ ರಚನೆಯನ್ನು ಸ್ವಲ್ಪವೆ ಬದಲಾಯಿಸಿಕೊಂಡು, ಬಟ್ಟೆಗೆ ಅಂಟಿಕೊಳ್ಳುವ ಕೂರೆಯಾಯಿತು. ಇವುಗಳ ವಿಕಸನದ ಕಾಲವನ್ನು ಡಿ-ಎನ್-ಎ ವಿಶ್ಲೇಷಣೆಯ ಮಾಹಿತಿಯಿಂದ ತಿಳಿದುಕೊಂಡ ಆ ವಿಜ್ಞಾನಿ, ಆದಿಮಾನವ ಸುಮಾರು ೭೫೦೦೦ ವರ್ಷಗಳಷ್ಟು ಹಿಂದಿನಿಂದ, ಎಂದರೆ ಆಫ್ರಿಕಾಖಂಡವನ್ನು ಬಿಟ್ಟು ವಲಸೆ ಹೊರಡುವ ಮುನ್ನವೇ, ತನ್ನ ಮೈ ಮುಚ್ಚಿಕೊಳ್ಳುವ ಪ್ರವೃತ್ತಿಯನ್ನು ಪ್ರಾರಂಭಿಸಿದ್ದನೆಂಬ ಸಿದ್ಧಾಂತವನ್ನು ಮಂಡಿಸಿ ಯಶಸ್ವಿಯಾದ. ಈ ಸಿದ್ಧಾಂತಕ್ಕೆ ಹಿಂದೆ, ಈ ವಿಷಯದಲ್ಲಿನ ನಂಬಿಕೆ, ಇದಕ್ಕೆ ವ್ಯತಿರಿಕ್ತವಾಗಿಯೆ ಇತ್ತು.

ಹೀಗೆ, ಜಗತ್ತಿನ ಅತಿಸಾಧಾರಣ ವಿದ್ಯಮಾನವನ್ನು ತಿಳಿಯಲಿಕ್ಕೆ ಹೋಗಿ, ಎಣಿಸಿರಲಾರದ ಅತ್ಯುತ್ತಮ ಹೊಸ ಜ್ಞಾನಭಂಡಾರ ತಾನಾಗಿಯೆ ತೆರೆದುಕೊಂಡಾಗ ಯಶಸ್ಸು ಪಡೆದವರ ನಿದರ್ಶನಗಳಿಗೆ ಕೊರತೆಯಿಲ್ಲ. ಪ್ರಸಿದ್ಧ ಭಾರತಕ್ಕೆ ಹೊರಟು ದಾರಿತಪ್ಪಿ ಅಮೆರಿಕಾ ತಲುಪಿದ ಕೊಲಂಬಸ್‌ನ ಕಥೆ, ಆಲ್‌ಫ್ರೆಡ್ ನೊಬೆಲ್‌ನ ಡೈನಾಮೈಟ್ ಆವಿಷ್ಕಾರ, ಅಲೆಕ್ಸಾಂಡರ್ ಫ್ಲೆಮಿಂಗ್‌ನ ಪೆನ್ಸಿಲಿನ್ ಶೋಧನೆ, ಎಲ್ಲವು ಇಂತಹವುಗಳು ತಾನೆ! ಹೀಗೆಯೆ, ಅತಿಸುಲಭದಲ್ಲಿ ದೊಡ್ಡ ಸಫಲತೆ ಪಡೆಯುವ ಶೋಧನೆಗೆ ಇಂಗ್ಲಿಷ್‌ನಲ್ಲಿ ಒಂದು ಬಹಳ ಪ್ರಸಿದ್ಧ ಪದವಿದೆ: 'ಸೆರೆಂಡಿಪಿಟಿ'. ಇದು 'ಶರಣದ್ವೀಪತ್ವ'ದಂತಹ ಸಂಸ್ಕೃತ ಪದಗುಚ್ಛದಿಂದ ಹುಟ್ಟಿದುದೆಂದು ಬಹಳ ಜನಗಳಿಗೆ ತಿಳಿದಿರಲಿಕ್ಕಿಲ್ಲ. ಈ ಪದದ ಅರ್ಥ, ಶ್ರೀಲಂಕಾದ ಹಳೆಯ ಸಾಹಿತ್ಯದ ಕಥೆಯಿಂದ ಬಂದುದಾದ್ದರಿಂದ ಆಂಗ್ಲರು ಅಲ್ಲಿಯವರಿಗೆ ಆಭಾರ ಮನ್ನಿಸುವುದು ಸಹಜವೆ. ಮನ್ನಾರ್ ಪ್ರದೇಶದ ಒಂದು ಚಿಕ್ಕ ದ್ವೀಪದ ಹೆಸರು ಶರಣದ್ವೀಪ. ನಮ್ಮ 'ಪಂಚತಂತ್ರ'ದಂತಹ ಕಥೆಯೊಂದರಲ್ಲಿ, ಅಲ್ಲಿಯ ಮೂವರು ರಾಜಕುಮಾರರು, ಸಣ್ಣಪುಟ್ಟ ವಿಷಯಗಳಲ್ಲಿ ವಿಚಾರಮಾಡಿ, ಬಹೂಪಯೋಗಿ ಸಿದ್ಧಾಂತಗಳನ್ನು ತಲುಪುತ್ತಿರುತ್ತಾರೆ. ಇಲ್ಲಿ ಗಮನಿಸಬೇಕಾದ ಮುಖ್ಯಾಂಶ, ಇವರು, ಹೊಸ ಜ್ಞಾನದ ಬಾಗಿಲು ಕಂಡಾಗ, ತೆರೆದು ನೋಡಿ ಅದರ ಮಹತ್ವವನ್ನು ಗುರುತಿಸುವ ವೈಜ್ಞಾನಿಕ ಮನೋಭಾವ ಉಳ್ಳವರಾಗಿದ್ದದ್ದು. (ಈ ಕಥೆಗಳು ಮನೋರಂಜಕವಾದರೂ, ಇಲ್ಲಿ ಬೇಡ.)

ಹಾಗೆಂದು ಯಾರಿಗೆ ತಾನೆ ವಿಶೇಷ ನಿಯಂತ್ರಿತ ಪ್ರಯೋಗಶಾಲೆ ಏಕೆ ಬೇಕು ಎನ್ನುವ ಪ್ರಶ್ನೆ ಏಳುತ್ತದೆ. ಹಲವಾರು ಕಾರಣಗಳು, ಪರಿಣಾಮ-ಮಾಪನಾವಧಿಯಲ್ಲಿ ಪ್ರಾಯೋಗಿಕ ವಸ್ತು/ಜೀವಿಯ ಮೇಲೆ ಅದೇ ಪರಿಣಾಮ ಉಂಟುಮಾಡುವುದನ್ನು ನಿಯಂತ್ರಣ ಮಾಡಲೇಬೇಕಾದ ಸನ್ನಿವೇಶದಲ್ಲಿ, ಒಂದು ವಿಶೇಷ ಶಾಲೆ ಬೇಕಾಗಬಹುದು. ಆದರೂ, ಈ ವಿಶಾಲ ಮತ್ತು ವೈವಿಧ್ಯಮಯ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಎಲ್ಲಿಯಾದರೂ, ನಿಯಂತ್ರಿತ ಸನ್ನಿವೇಶಗಳೊ, ಪ್ರದೇಶಗಳೊ ಒದಗಿಬರಬಹುದು. ಹಾಗಾದಾಗಲೆ ಡಾರ್ವಿನ್ ಜೀವವಿಕಸನ ಪ್ರಕ್ರಿಯೆಯ ಗಹನ ಸತ್ಯವನ್ನು ಕಾಣಲು ಸಾಧ್ಯವಾಯಿತು. ಬೆಳಕಿನ ಅಲೆಗಳು ತೂಕವಿರುವ ವಸ್ತುವಲ್ಲದಿದ್ದರೂ ಗುರುತ್ವಾಕರ್ಷಣೆಯ ಪ್ರಭಾವಕ್ಕೆ ಮಡಿಚುವುದೆಂಬ ಐನ್‌ಸ್ಟೈನ್‌ನ ಸಿದ್ಧಾಂತವನ್ನು ಸಾಬೀತುಪಡಿಸಲು ಈ ಜಗತ್ತಿನಿಂದ ಬಹುದೂರದಲ್ಲಿ, ಪೂರ್ಣ ಸೂರ್ಯಗ್ರಹಣದ ಸಮಯದಲ್ಲಿ, ಸೂರ್ಯಕಿರಣಗಳಲ್ಲಿ ನಡೆಯುವ ಒಂದು ವಿದ್ಯಮಾನವನ್ನು ವೀಕ್ಷಿಸಬೇಕಾಯಿತು.

**ಕಾಲಗತಿ ಮತ್ತು ಇತಿಹಾಸಗಳ ಸುದೀರ್ಘ ವಾಸ್ತವಿಕ ದಾಖಲೆ, ಡಿ-ಎನ್-ಎ**

ಜಗತ್ತೆಂಬ ಪ್ರಯೋಗಶಾಲೆಯಲ್ಲಿ, ಕಾಲಗತಿಯಲ್ಲಿನ ಎಲ್ಲ ವಿದ್ಯಮಾನಗಳ ದೊಡ್ಡ ಸಮೂಹಗಳೇ ನೆರವಾಗಿ ಅವಶ್ಯಕ ಮಾಹಿತಿಯನ್ನು ಒದಗಿಸಬಹುದು. ಜೊತೆಗೆ ದೀರ್ಘ ಕಾಲಾವಧಿಯಲ್ಲಿನ, ಎಲ್ಲ ಪ್ರಕ್ರಿಯೆಗಳ ಘಟ್ಟಘಟ್ಟಗಳ ಮಾಹಿತಿ ಸಂಗ್ರಹಣೆಯೂ ಅತ್ಯವಶ್ಯಕವಾಗಿರುವಂತಹ ಪ್ರಯೋಗಗಳಂತೂ, ಯಾವುದೇ ಪ್ರತ್ಯೇಕ ಪ್ರಯೋಗಶಾಲೆಗೆ ಅಳವಡದಿರಬಹುದು! ಈ ಘಟ್ಟಗಳಿಗೆ, ಹೊರಗಿನ ಪ್ರಮಾಣಿತ ಮಾಪನದಿಂದ ಕಾಲನಿರ್ಣಯ ಮಾಡುವ ಅವಕಾಶವಿದ್ದರಂತೂ ಜಗತ್ತೇ ಹೆಚ್ಚು ಅನುಕೂಲ. ಡಾರ್ವಿನ್ ಜೀವವಿಕಸನದ ದೀರ್ಘಾವಧಿಯ ಪರಿವರ್ತನೆಗಳ ವೀಕ್ಷಣೆಯನ್ನು ನಡೆಸಲು ಸಾಧ್ಯವಾದದ್ದು ಇಂತಹ ಒಂದು ಸಂದರ್ಭದಲ್ಲಿಯೆ. ಮತ್ತೊಂದು ಸುಪರಿಚಿತ ಉದಾಹರಣೆ: ಜೈವಿಕ ಅವಶೇಷ (ಫಾಸಿಲ್)ಗಳಾಗಿ ಸಿಕ್ಕುತ್ತಿರುವ ಪ್ರಾಣಿ ಕಳೇವರಗಳನ್ನು, 'ಕಾರ್ಬನ್ ಡೇಟಿಂಗ್' ನೆರವಿನಿಂದ ಪ್ರಮಾಣಿತ ಕಾಲಘಟ್ಟಗಳಲ್ಲಿಟ್ಟು, ಜೀವವಿಕಸನದ ಪ್ರಕ್ರಿಯೆಗಳ ರಹಸ್ಯಗಳನ್ನು ಸರಳವಾಗಿ ಸಿದ್ಧಾಂತಗೊಳಿಸುವ ಶೋಧೆಗಳು; ಅವುಗಳಲ್ಲೂ, 'ವಾನರ'ನಿಂದ ನರನಾದುದನ್ನು ಪುಷ್ಟೀಕರಿಸುತ್ತಿರುವ ಶೋಧೆಗಳು. ಆದಿಮಾನವಶಾಸ್ತ್ರ, ಪ್ರಾಚೀನ ಇತಿಹಾಸ, ಬಹುಶಃ, ಎಲ್ಲ ಮಾನವ ಶಾಸ್ತ್ರಗಳ ಶೋಧನೆಗಳೂ ಇಂತಹವೆ ತಾನೆ!

ಶತಕೋಟಿವರ್ಷಗಳಷ್ಟು ದೀರ್ಘಾವಧಿಯ, ಭೂಮಿಯ ಮತ್ತು ಜೀವಿ
ಇತಿಹಾಸಗಳ ಒಂದು ಹ್ರಸ್ವ ಕ್ಷಣಾವಧಿಯಷ್ಟೆಯೆ ನಮ್ಮ ಮಾನವೇತಿಹಾಸ. ಇದರ
ಶೋಧೆಗಳಿಗೆ ಈ ಜಗತ್ ಅಲ್ಲದೆ ಬೇರಾವ ಪ್ರಯೋಗಶಾಲೆ ಸಾಧ್ಯ? ಹೀಗೆ
ಭೂಗರ್ಭಶಾಸ್ತ್ರ, ಜೀವಶಾಸ್ತ್ರ, ಇವುಗಳು ಮಾನವೇತಿಹಾಸದ ಮೂಲಾಧಾರ
ಗಳಾಗುತ್ತವೆ. ಭೌತವಿಜ್ಞಾನದ ಶೋಧೆಗಳು ಜೀವವಿಜ್ಞಾನದ ಅಂತರಾಳ
ಬೆಳಕು ತೋರಿದಂತೆ, ಜೀವವಿಜ್ಞಾನದ ಆಧುನಿಕ ಶೋಧೆಗಳು ಇತಿಹಾಸದ
ಶೋಧೆಗಳಿಗೆ ಬೆನ್ನೆಲುಬಾಗಿವೆ. ಸಾಕ್ಷ್ಯಪುರಾವೆಗಳು ಇಲ್ಲವೇ ಇಲ್ಲವೆನ್ನುವಷ್ಟು
ವಿರಳವಾಗಿರುವ ಪ್ರಾಗಿತಿಹಾಸದಲ್ಲಂತೂ ಇವು ಅತಿಸಮರ್ಥ ವೈಜ್ಞಾನಿಕ
ಸಿದ್ಧಾಂತಗಳನ್ನು ಒದಗಿಸಬಲ್ಲವು. ಈ ಸಂದರ್ಭದಲ್ಲಿ ಫಾಸಿಲ್‌ಗಳಿಗಿಂತ ಬಹುಪಾಲು
ಹೆಚ್ಚು ಪುರಾವೆಗಳನ್ನು, ಡಿ-ಎನ್-ಎ ತಂತ್ರಜ್ಞಾನ, ಇತಿಹಾಸಕ್ಕೆ ನೀಡಬಲ್ಲದು;
ಕ್ರಾಂತಿಯನ್ನೆ ತರಬಲ್ಲದು.

ಡಿ-ಎನ್-ಎ (ಜೀವತಂತುವಾಹಿ)ಯಲ್ಲಿ ಅಂತಹುದೇನಿದೆ? ಫಾಸಿಲ್‌ಗಳ
ಅಧ್ಯಯನ ಮಾಡುವವರೆಲ್ಲ, ದೊರಕಿರುವ ಕೆಲವೇ ಅವಶೇಷಗಳಿಂದ ಅಪಾರ
ಮಾಹಿತಿಗಳನ್ನು ಪಡೆದಿದ್ದರೂ, ಕಾಲಕ್ರಮದಲ್ಲಿ ಅಗಾಧ ತೆರವುಗಳನ್ನು
ಎದುರಿಸುತ್ತಾರೆ. ಘಟ್ಟಮಧ್ಯಗಳ ದಾಖಲೆ ಇರುವ ಫಾಸಿಲ್‌ಗಳಿಗೆ ಪರಿತಪಿಸುತ್ತಾರೆ.
ಇಡೀ ಕಾಲದ ನಿರಂತರ ದಾಖಲೆ ಸಿಕ್ಕಿದರಂತೂ, ಅದು ಸರ್ವೋತ್ತಮ.
ಅಂತಹುದೊಂದು 'ಜೀವಂತ ಫಾಸಿಲ್' ನಮ್ಮಲ್ಲಿ, ಮತ್ತೆಲ್ಲ ಪ್ರಾಣಿಗಳಲ್ಲಿ
ಅಡಕವಾಗಿದೆ; ಅವರವರ ಜೀನೋಮ್‌ಗಳಲ್ಲಿ. ಇಂತಹ ಆದರ್ಶ ಫಾಸಿಲ್‌ನಲ್ಲಿ
ಒಂದು ಸಣ್ಣ ತೊಡಕಿದೆ! ಈ ಜೀವಂತ ಫಾಸಿಲ್‌ಗಳಲ್ಲಿನ ಮ್ಯುಟೇಶನ್‌ಗಳು
ಅಧ್ಯಯನದ ಕಾಲಕ್ಕೆ ತಕ್ಕ ಅನುಕೂಲದ ಫಾಸಿಲ್‌ನಲ್ಲಾಗುವಂತೆ ನಿಲ್ಲದ
ಮುಂದುವರೆದು, ಈ ಆದರ್ಶ ಫಾಸಿಲ್‌ನ ಉಪಯೋಗವನ್ನು ಕಡಿಮೆ ಮಾಡುತ್ತವೆ.
ಆದಷ್ಟು ಉಪಯೋಗ ಪಡೆಯಲಿಕ್ಕೆ, ಕಡಿಮೆ ಬದಲಾದವನ್ನು ಆರಿಸಿ, ಆದ
ಬದಲಾವಣೆಗಳನ್ನು, ಅವುಗಳ ಈಗಿನ ಜೀನೋಮ್‌ಗಳ ನೆರವಿನಿಂದ ಲೆಕ್ಕಾಚಾರ
ಮಾಡಿ, ಬೇಕಾದ ಕಾಲಘಟ್ಟದ ಫಾಸಿಲ್‌ನ ಸ್ವರೂಪವನ್ನು ಎಣಿಸಿಡಬೇಕು. ಹೆಚ್ಚು
ಅರಿವಿರುವ ಇಂದಿನಿಂದ ಹಿಂದಕ್ಕೆ ಗುಡಿಸಿ ಪರಿವೀಕ್ಷಿಸುವುದು, ಹೆಚ್ಚು ಅರಿಯದ
ಹಿಂದಿನಿಂದ ಇಂದಿನವರೆಗೂ ಪರಿವೀಕ್ಷಿಸುವುದಕ್ಕಿಂತ ಹೆಚ್ಚು ಫಲದಾಯಿ ತಾನೆ! ಈ
ವಿಧಾನ, ಮಾನವ ವಿಜ್ಞಾನಗಳಲ್ಲಂತೂ, ಈಗಿನ ಇತರ ಎಲ್ಲ ಸಾಧಕಗಳಿಗಿಂತ ಹೆಚ್ಚು
ಸಮರ್ಪಕವಾದದ್ದಾಗುತ್ತಿದೆ. ಆದರೆ ಇದಕ್ಕೆ ನಾವೇ ಮಹಾಬಾಧಕಗಳಾಗಬಹುದು!
ಏಕೆ? ಮತ್ತು ಅದನ್ನು ತಡೆಯುವುದು ಹೇಗೆ?

**ಇಲ್ಲಿ ನಾವೇ ಪ್ರಯೋಗಪಶುಗಳು**

ನಾವೆಲ್ಲ ವಿಜ್ಞಾನಿಗಳು ಎಂದಾಗಿನ ಹೆಮ್ಮೆ, ನಾವೆಲ್ಲ ಪ್ರಯೋಗಪಶುಗಳು ಎನ್ನುವ
ಸತ್ಯಕ್ಕೆ ಅಡ್ಡಿ ಆಗಬಾರದು. ಮಾನವನ 'ಶ್ರೇಷ್ಠತೆ'ಯ ಭ್ರಮೆಗಳು ಯಾವುದೇ
ಮೂಲದ್ದಾದರೂ, ಪ್ರಕೃತಿಯಲ್ಲಿ ತನ್ನ ನೈಜ ಭೂಮಿಕೆಗಿಂತ ಹೆಚ್ಚಿನದೇನನ್ನೂ
ಪಡೆಯುವ ಹುನ್ನಾರಗಳಾಗಬಾರದು. ಹಾಗೆಯೆ, ಯಾವುದೇ ದೇಶೀಯದ
ಇತಿಹಾಸ, ಇಂತಹವೆ ಶ್ರೇಷ್ಠತೆಯ ಗರ್ವಕ್ಕಾಗಿ ಸತ್ಯವನ್ನು ಮುಚ್ಚಿಡಬಾರದು. ಈಗಿನ
ವಿಶ್ವದಲ್ಲಿ, ಮಾನವನ ನಿಜಭೂಮಿಕೆ ಇಷ್ಟೆ: ಯಾವುದೋ 'ಬಿಗ್ ಬ್ಯಾಂಗ್'
ತರಹೆಯ ಪ್ರಕ್ರಿಯೆಯೊಂದರಲ್ಲಿ ಭೌತಿಕ ಶಕ್ತಿ (ಎನರ್ಜಿ)ಯಿಂದ ಭೌತಿಕ
ವಸ್ತುಗಳಾದವು; ಈ ಕೋಟಿಕೋಟ್ಯಂತರ ವಸ್ತುಗಳಲ್ಲಿ ಕೆಲವು, ಕಾಲಕ್ರಮದಲ್ಲಿ
ಭೂಮಿಯಂತಹ ಅನುಕೂಲ ಪರಿಸರದಲ್ಲಿ, ನಾವು ಈಗ 'ಜೀವಿ'
ಎನ್ನುವುದರಲ್ಲಿರುವ ಕ್ರಿಯೆಗಳಿಗೆ ಮೂಲವಾಗುವ ಗುಣಗಳಿರುವ ಕೆಲವಷ್ಟು
ರಾಸಾಯನಿಕ ವಸ್ತುಗಳನ್ನು, ಈಗ ನಾವು ಗುರುತಿಸಬಲ್ಲ ಪ್ರಕ್ರಿಯೆಗಳ ಮೂಲಕ,
ತಯಾರಿಸಿಟ್ಟವು. ಈ ರಾಸಾಯನಿಕ ವಿಕಾಸದ ನಂತರವೆ ಜೀವವಿಕಾಸದಲ್ಲಿನ
ಘಟ್ಟಗಳು; ಆದಿಜೀವಿಗಳ ಉದಯ ಆಕಸ್ಮಿಕವಾಗಿ ಆಗಿ ಅವುಗಳಿಂದ
ಪರಿಸರಪ್ರಭಾವಿತ ಕೋಟ್ಯಂತರ ಪ್ರಾಣಿಗಳ ವಿಕಸನವಾಯಿತು. ಅವುಗಳಲ್ಲೊಂದು,
ಮಾನವ. ನಾವೆಲ್ಲ, ಹೀಗೆ, ಕಾರ್ಖಾನೆಯೊಂದರ ತಯಾರಿಕಾಸರಣಿ ಸಾಲಿನಲ್ಲಿ
ಹಾದುಬಂದಿರುವ ಈಗಿನವರೆಗಿನ ಒಂದು ಸಿದ್ಧ ಸರಕು. ಕೋಟಿಪ್ರಾಣಿಗಳ
'ಕೂಸುಮರಿ' ಎಂದು ಸಂತೋಷಪಟ್ಟರೆ ತಪ್ಪಿಲ್ಲ! ನಾವೆ ನಮ್ಮನ್ನೆ ಮಾಡಿಕೊಂಡವ
ರೆಂದರೂ, ಅದು ಸುಳ್ಳಲ್ಲ! ಆದರೆ "ಮನುಷ್ಯ ಯಾರದೋ, ಯಾವುದೋ
ಮಹೋದ್ದೇಶಕ್ಕಾಗಿಯೇ ತಯಾರಿಸಲ್ಪಟ್ಟ ಉತ್ಕೃಷ್ಟ ಸರ್ವೋತ್ತಮ ಕೃತಿ"
ಎಂದುಕೊಳ್ಳುವುದು ನಮ್ಮ ಆಶೆಗಳಲ್ಲಷ್ಟೆಯೆ ಹುಟ್ಟುವ ಮಹಾನ್ ಭ್ರಮೆ! ಇಂದಿನ




# ವಾಸವಿ ಪ್ರಕಾಶನ

ನಂ.73, 4ನೇ ಮುಖ್ಯರಸ್ತೆ, ಮೊದಲನೇ ಹಂತ
ಎಂ.ಐ.ಜಿ., ಕೆ.ಹೆಚ್.ಬಿ. ಕಾಲೋನಿ, ಬಸವೇಶ್ವರನಗರ
ಬೆಂಗಳೂರು-560 079. ಮೊಬೈಲ್ : 94486 88086

*ಲಿಂಗಣ್ಣ ಗುಂಡಳ್ಳಿಯವರ :-*




1. ಭೂಪಟಗಳ ಮೂಲಕ ಭಾರತದ ಇತಿಹಾಸ ರೂ. 50/-
2. ಭೂಪಟಗಳ ಮೂಲಕ ಕರ್ನಾಟಕದ ಇತಿಹಾಸ ರೂ. 50/-
3. Karnataka History through Maps Rs. 60/-
4. Indian History through Maps Rs. 60/-

(ಪ್ರತಿಯೊಂದು ರಾಜವಂಶದ ಭೂಪಟ ಮೂಲ ಪುರುಷ, ರಾಜಧಾನಿ, ರಾಜ ಲಾಂಛನ, ನಾಣ್ಯಗಳು, ಪ್ರಮುಖ ಅರಸರು, ಧರ್ಮ, ಶಾಸನಗಳು, ಮುಖ್ಯ ಕೇಂದ್ರಗಳು, ಆಡಳಿತ, ಸಾಹಿತ್ಯ, ಕಲೆ ಮತ್ತು ವಾಸ್ತು ಶಿಲ್ಪ, ಪತನ ಹಾಗೂ ಇತರ ಪ್ರಾಮುಖ್ಯತೆಗಳನ್ನು ಒಳಗೊಂಡಿದೆ.)

*KAS, IAS, PSI, TCH & B.Ed.*
*ಮುಂತಾದ ಎಲ್ಲ ಸ್ಪರ್ಧಾತ್ಮಕ ಪ್ರವೇಶ ಪರೀಕ್ಷೆಗಳಿಗೆ ಉಪಯುಕ್ತ.*
*ದ್ವಿತೀಯ ಪಿ.ಯು.ಸಿ., ಪದವಿ ಮತ್ತು ಸ್ನಾತಕೋತ್ತರ ಪದವಿ*
*ಮುಂತಾದ ಎಲ್ಲ ರೀತಿಯ ಇತಿಹಾಸದ ಅಧ್ಯಯನಕ್ಕೆ ಅತ್ಯುಪಯುಕ್ತ ಕೈಪಿಡಿ.*

*ಸಗಟು ವ್ಯಾಪಾರಿಗಳು ಸಂಪರ್ಕಿಸಬೇಕಾದ ವಿಳಾಸ :-*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – 560 001 © 22872385
5ನೇ ಮುಖ್ಯರಸ್ತೆ, ಗಾಂಧಿನಗರ, ಬೆಂಗಳೂರು – 560 009 © 22251382
ಕೆ. ಎಸ್. ರಾವ್ ರಸ್ತೆ, ಮಂಗಳೂರು – 575 001 © 2441016
ರಾಮಸ್ವಾಮಿ ವೃತ್ತ, ಮೈಸೂರು – 570 024 © 2424094
ಮಿನಿ ವಿಧಾನಸೌಧದ ಎದುರು, ಸ್ಟೇಷನ್ ರಸ್ತೆ, ಗುಲ್ಬರ್ಗಾ – 585102 © 224302



# ಎಸ್. ಕೆ. ನಾಡಿಗ್

## (೧೯೩೮–೨೦೦೮)












ಶಿವಮೊಗ್ಗೆಯಲ್ಲಿ ಜನಿಸಿದ ಎಸ್. ಕೆ. ನಾಡಿಗ್ ತಮ್ಮ ವ್ಯಂಗ್ಯಚಿತ್ರಗಳಿಂದ ಪರಿಚಿತರು. ಅವರ ಮೊದಲ ವ್ಯಂಗ್ಯಚಿತ್ರ ಪ್ರಕಟವಾದದ್ದು ೧೯೪೮ರಲ್ಲಿ. 'ಮಿನಿಮ್ಯಾಗ್', 'ಶಂಕರ್ಸ್ ವೀಕ್ಲಿ' ಮತ್ತು 'ಕಾರವಾನ್' ಮುಂತಾದ ಪತ್ರಿಕೆಗಳಲ್ಲಿ ಇವರ ಚಿತ್ರಗಳು ಪ್ರಕಟವಾಗಿವೆ.

'ಚಿತ್ರಗುಪ್ತ' ಪತ್ರಿಕೆಯಲ್ಲಿ ಸಹಸಂಪಾದಕರಾಗಿ ಕಾರ್ಯ ನಿರ್ವಹಿಸಿದ್ದರು. 'ಬಣ್ಣದ ಚಿಟ್ಟೆ', 'ಕನಸಿನೊಳಗೊಂದು ಕನಸು' ಮತ್ತು 'ಕನ್ನೇಶ್ವರ ರಾಮ' ಮುಂತಾದ ಕಾದಂಬರಿಗಳು ಪ್ರಕಟವಾಗಿವೆ. ಭದ್ರಾವತಿಯಲ್ಲಿರುವ ಮೈಸೂರು ಕಾಗದ ಕಾರ್ಖಾನೆಯ ಡೆಪ್ಯುಟಿ ಅಕೌಂಟ್ಸ್ ಅಧಿಕಾರಿಯಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದರು. ಕರ್ನಾಟಕ ವ್ಯಂಗ್ಯಚಿತ್ರಕಾರರ ಸಂಘದ ಸಂಸ್ಥಾಪಕರಲ್ಲೊಬ್ಬರು. ಕರ್ನಾಟಕ ಪತ್ರಿಕಾ ಅಕಾಡೆಮಿಯ ಪ್ರಶಸ್ತಿ ವಿಜೇತರು.

'ಹೊಸತು' ಸೇರಿದಂತೆ ಕರ್ನಾಟಕದ ಎಲ್ಲ ಪ್ರಮುಖ ಪತ್ರಿಕೆಗಳಲ್ಲಿ ಇವರ ವಿಚಾರ ಪ್ರಚೋದಕ ವ್ಯಂಗ್ಯಚಿತ್ರಗಳು ಪ್ರಕಟವಾಗಿವೆ. ಸಾಮಾಜಿಕ ಕಾಳಜಿಯ ಇವರ ಚಿತ್ರಗಳು ನೋಡುತ್ತಿದ್ದಂತೆ ನಗುವಿನ ಜೊತೆಗೆ ಆಲೋಚನೆಗೆ ತೊಡಗಿಸುತ್ತವೆ. ನವಕರ್ನಾಟಕವು 'ನಾಡಿಗರ ನಗೆ ಕಾರಂಜಿ' ಎಂಬ ಇವರ ವ್ಯಂಗ್ಯಚಿತ್ರಗಳ ಸಂಕಲನವನ್ನು ಪ್ರಕಟಿಸಿದೆ. ಇವರ ನೆನಪಿಗೆ ನವಕರ್ನಾಟಕ ಮತ್ತು 'ಹೊಸತು' ಪತ್ರಿಕೆಯ ಅಂಜಲಿ ಸಲ್ಲುತ್ತದೆ.









ಪರಿಣಾಮಗಳೆಂದೂ ತಮಗೂ ಹಿಂದಿದ್ದ ಎಂದಿನದೊ ಯಾವುದೊ ಪರಿಣಾಮಗಳಿಗೆ ಕಾರಣವಾಗುವುದಿಲ್ಲ; ಎಂದ ಮೇಲೆ, ಉದ್ದೇಶವೂ ಆಗಿರಲಾರದು. ವಿಶ್ವಪ್ರಮಾಣದಲ್ಲಿ, ಭೂಮಿಯ ಪ್ರಮಾಣವೆ ಇಷ್ಟು ಅಲ್ಪ. ಇನ್ನು ಭೂಮಿಯ ಅಖಂಡ ವಸ್ತುಗಳ ಪ್ರಮಾಣದಲ್ಲಿ ಜೀವಗಳಲ್ಲಿನ ರಾಸಾಯನಿಕ ವಸ್ತುಗಳ ಪ್ರಮಾಣ ಎಷ್ಟು? ಜೀವಿಗಳಲ್ಲಿ ಮಾನವನ ಪ್ರಮಾಣ ಎಷ್ಟು? ಮಾನವರೆಲ್ಲರಲ್ಲಿ ಒಬ್ಬ ದೇಶೀಯನ ಪ್ರಮಾಣ ? ಶತಕೋಟಿ ಭಾರತೀಯರಲ್ಲಿ ಒಬ್ಬನ ಪ್ರಮಾಣ ? ಕೆಲವರ ಮಹೋದ್ದೇಶದ ಪರಿಭ್ರಮೆ ಸಹ, ಯಾವನೋ ಪ್ರಮುಖ ರಾಜಕಾರಣಿ, ಪ್ರಪಂಚದ ಉದ್ಧಾರಕ್ಕೆ ತಾನು ಹುಟ್ಟಿರುವನೆಂದು ಭ್ರಮಿಸಿದಂತೆಯೆ. 'ನಾವೂ ಪ್ರಯೋಗಪಶುಗಳೇ', ಎಂದರಿಯಲು ನಾವು ಕಿರಿಮೆ ಅನುಭವಿಸಿದರೆ, ಅದು ನಮ್ಮ ಮಹಾನ್ ಭ್ರಮೆಯಲ್ಲದೆ ಮತ್ತೇನು ? ಇಲ್ಲಿ ಈ ವಿಷಯದ ಪ್ರಸ್ತಾಪದ ಉದ್ದೇಶ ಲಘುವಾಗಿಲ್ಲ. ಇಂತಹ ಚಿಂತನೆಯ ಅವಶ್ಯಕತೆ ಈಗ ಬಹು ಹೆಚ್ಚಿನದಾಗುತ್ತಿದೆ!

### ಭಾರತವೆ ಒಂದು ಅತಿವಿಶಿಷ್ಟ ಪ್ರಯೋಗಶಾಲೆ

ಕ್ರಿಸ್ತಶಕ ೭೦೦ರಷ್ಟು ಹಿಂದಿನ ಜಾಗತಿಕ ಇತಿಹಾಸದಲ್ಲಿಯೂ, ಭಾರತದ ಆಕರ್ಷಣೆ ಯಾವ ಮಟ್ಟದ್ದಿತ್ತೆಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಅದಕ್ಕೂ ಹಿಂದೆಯೂ ಈ ಭೂಪ್ರದೇಶ ಅನೇಕ ಮಾನವಸಂಕುಲಗಳ ವಲಸೆಗಳ ಹಾದಿಯಾಗಿತ್ತು. ಹಾದುಹೋದವೆಲ್ಲ ತಮ್ಮ ಜೈವಿಕ ನಮೂನೆ (ಸ್ಪೆಸಿಮನ್)ಗಳನ್ನು ಉಳಿಸಿಹೋದವು. ಅಂದಿನ ಇಲ್ಲಿಯ ಜನ, ಆಫ್ರಿಕಾದಿಂದ ಹಲವು ದಿಶೆಗಳಿಗೆ ಹೋದ ಆರ್ಯರಿಗೂ ಹಿಂದೆ ಮತ್ತು ಮುಂದೆ ಬಂದ ವಿವಿಧ ಜನಸಂಕುಲಗಳನ್ನು ತನ್ನಲ್ಲಿ ಸಂಗಮಿಸಿ 'ಇಟ್ಟುಕೊಂಡಿದೆ. ಅಲೆಗ್ಸಾಂಡರ್‌ನ ಜೊತೆಗೆ, ಮತ್ತು ನಂತರವೂ ಬಂದ ಜನ ಇಲ್ಲಿ ಬೆರೆತುಹೋಗಿರುವುದು ಇತಿಹಾಸ ಪ್ರಸಿದ್ಧ. ಹೀಗಾಗಿ, ಇಲ್ಲಿಯ ಜನರಲ್ಲಿ ಅಡಕವಾಗಿರುವ ವೈವಿಧ್ಯತೆ ಬಹು ವಿಶಾಲ ವ್ಯಾಪ್ತಿಯದು. ಭಾರತದ ಹೆಮ್ಮೆಯ ಮಾತು, 'ಅನೇಕತೆಯಲ್ಲಿ ಏಕತೆ'ಗೆ ಇವೂ ಕಾರಣಗಳೇ!

ಒಂದು ಉತ್ತಮ ಗಣನೆಯಲ್ಲಿನ ಮುಖ್ಯ ಅಂಕಿ-ಅಂಶಗಳು ಹೀಗಿವೆ. ಶತಕೋಟಿಗೂ ಸ್ವಲ್ಪ ಹೆಚ್ಚಿನ ಇಲ್ಲಿಯ ಜನರಲ್ಲಿ, ೫೦೦೦ ಜಾತಿಕುಲಗಳಿವೆ; ಇವುಗಳಲ್ಲಿ ಇದಕ್ಕೂ ಸಾಕಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಅಂತರ್ಜಾತಿ-ವಿವಾಹ-ಸೀಮಿತ ಪಂಗಡಗಳಿವೆ. ಈ ರೂಢಿಪದ್ಧತಿ ೪೦೦೦-೫೦೦೦ ವರ್ಷಗಳಿಗೂ ಹಳೆಯದು. ಇದರೊಂದಿಗೆ, ಈ ಪಂಗಡಗಳ ರಚನೆಯಾದ ಮೇಲೆ ಬದಲಾಯಿಸಿಲ್ಲ; ಮತ್ತು ಹೆಚ್ಚು ವಲಸೆ ಹೋಗಿಲ್ಲ. ಆದ್ದರಿಂದ ಡಿ-ಎನ್-ಎ, ಜೀನ್‌ಗಳು ಕಾಲಾವಧಿಯ ಮ್ಯುಟೇಶನ್‌ಗಳಿಗೆ ಮಾತ್ರ ಒಳಗಾಗಿವೆ. ಇತಿಹಾಸ ವಿಶ್ಲೇಷಣೆಗೆ ಇದಕ್ಕೂ ಹೆಚ್ಚಿನ ಸೌಕರ್ಯ ಇನ್ನೆಲ್ಲಿ ಲಭ್ಯ ? ಜೊತೆಗೆ, ಇಂತಹ ಪಂಗಡಗಳನ್ನು ಗುರುತಿಸುವುದಕ್ಕೆ ಅನುಕೂಲಕರ ಸುಲಭ ಲಕ್ಷಣಗಳು ಹಲವಿವೆ: ಮುನ್ನೂರಕ್ಕೂ ಹೆಚ್ಚು ಆಡುಭಾಷೆಗಳಿವೆ; ಇಪ್ಪತ್ತೈದಕ್ಕೂ ಹೆಚ್ಚು ಲಿಪಿಗಳಿವೆ. ಅವರವರ ಸಂಸ್ಕೃತಿ, ಚಹರೆ, ಬಣ್ಣ, ಎತ್ತರ ಮುಂತಾದ ದೈಹಿಕಾಂಶಗಳು, ವಿವಿಧ ಜೆನಿಟಿಕ್ ಸಂಬಂಧಿ ರೋಗಗಳ ಅಪಾಯಗಳ ಸಾಧ್ಯತೆಗಳ ಅಂಕಿ-ಅಂಶಗಳು ಇತ್ಯಾದಿ. ಭಾಷೆಗಳ ಮತ್ತು ದೈಹಿಕಾಂಶಗಳ ಪ್ರಾದೇಶಿಕ ಸ್ಥಿರತೆಯೂ ಈ ವಿಶ್ಲೇಷಣೆಗಳಿಗೆ, ಅವುಗಳಿಂದಾಗುವ ಸಿದ್ಧಾಂತಗಳಿಗೂ ಸ್ಥಾಯಿ ಪ್ರಾಮುಖ್ಯತೆಯನ್ನು ಕೊಡುತ್ತದೆ.

ಸಿ.ಎಸ್.ಐ.ಆರ್.ನ ಪ್ರಯೋಗಶಾಲೆಗಳು ಮತ್ತು ಭಾರತೀಯ ವಿಜ್ಞಾನ ಮಂದಿರಗಳಂತಹ ಅನೇಕ ಇತರ ಸಂಘ ಸಂಸ್ಥೆಗಳು, ಈಗಾಗಲೆ, ಜನಾರೋಗ್ಯ ಸಂಬಂಧದ ಅಧ್ಯಯನಗಳಿಗಾಗಿ (ಆದ್ದರಿಂದ ಅಡ್ಡಿ, ಆತಂಕಗಳನ್ನು ಎದುರಿಸಬೇಕಾಗದೆ) ಸಾಕಷ್ಟು ದೊಡ್ಡ ಪ್ರಮಾಣದಲ್ಲಿ ಇಂತಹ ವೀಕ್ಷಣೆಗಳನ್ನು ನಡೆಸಿವೆ. ರೋಗರುಜಿನಗಳನ್ನು ನಿಯಂತ್ರಿಸುವ ನಿಟ್ಟಿನಲ್ಲಿ ಇವುಗಳಿಂದಾಗಬಹುದಾದ ಉಪಯೋಗ ಅಪಾರ. ಆದ್ದರಿಂದಲೂ, ಮುಂದಿನ ವಿಶಾಲತರ ವ್ಯಾಪ್ತಿಯ ಮತ್ತು ತೀಕ್ಷ್ಣತರ ಸರ್ವೇಕ್ಷಣೆಗಳಿಗೆ ಸಹಕಾರ ಇನ್ನೂ ಹೆಚ್ಚಬಹುದು. ಈಗಿನ ಪಾಕಿಸ್ತಾನ, ಬಾಂಗ್ಲಾದೇಶಗಳ ಸಹಕಾರ ಅತ್ಯವಶ್ಯಕವಲ್ಲದಿದ್ದರೂ, ಒದಗಿದಾಗ, ಉಪಯೋಗ ಇನ್ನಷ್ಟು ಹೆಚ್ಚುತ್ತದೆ.

ಪ್ರತಿ ಸ್ತ್ರೀ/ಪುರುಷ ದೇಹದಲ್ಲಿ ಡಿ-ಎನ್-ಎಯ ಎರಡು ಭಿನ್ನ ರಿಕಾರ್ಡುಗಳಿರುತ್ತವೆ: ಒಂದು, ತಾಯಿ ತಂದೆ ಇಬ್ಬರ ಸಮ್ಮಿಲಿತ ಕ್ರೋಮೊಸೋಮ್ ದಾಖಲೆ; ಇನ್ನೊಂದು ದೇಹದ ಎಲ್ಲ ಜೀವಕೋಶಗಳ ಮೈಟೊಕಾಂಡ್ರಿಯದಲ್ಲಿರುವ, ತಾಯಿ-ಅಜ್ಜಿಯರಿಂದ ಮಾತ್ರ ಪಡೆವ, ಪುರುಷರ ವೈ-ಕ್ರೋಮೊಸೋಮ್ ಇರುವುದು ಸಾಧ್ಯವೇ ಇರದ ದಾಖಲೆ; ಜೊತೆಗೆ ಈ

ಪ್ತೀಪರಂಪರೆಯ ಡಿ-ಎನ್-ಎ ಬದಲಾಗದೆ ಬಹಳ ತಲೆಮಾರುಗಳಲ್ಲಿ ಅಚ್ಚಳಿಯದೆ ಉಳಿದಿರಬಲ್ಲದು. ಹೀಗಾಗಿ, ವಂಶ, ಕುಲ, ಜನಾಂಗಗಳಿಗೆ ಸಂಬಂಧಿಸಿದ ಪ್ರಾಚೀನ ಇತಿಹಾಸದಲ್ಲಿನ ವೀಕ್ಷಣೆ, ಶೋಧನೆಗಳಲ್ಲಿ ಇದರ ಮಹತ್ವ ಬಹಳ ಹೆಚ್ಚಿನದು. ಹಾಗೆಯೆ, ಪುರುಷರಲ್ಲಷ್ಟೆಯೆ ಇರುವ ವೈ-ಕ್ರೋಮೋಸೋಮ್‌ಗೆ ಸಂಬದ್ಧ ಜೀನ್‌ಗಳ ವೀಕ್ಷಣೆ, ಶೋಧನೆಗಳಿಂದ ಆದಿಮಾನವರ ವಲಸೆಯ ಇತಿಹಾಸ, ಮತ್ತು ಅನಿಶ್ಚಿತ ಇತಿಹಾಸದ ಭಾಗಗಳಲ್ಲಿ ಕೆಲವು ಆದಿಕುಲಗಳ ಬಗ್ಗೆ ನಿರ್ಣಯಗಳನ್ನು ಸರಿಪಡಿಸುವಲ್ಲಿಯೂ ಉಪಯೋಗಕ್ಕೆ ಬರಬಹುದು. ಇವೆಲ್ಲ ಡಿ-ಎನ್-ಎ ಸರ್ವೇಕ್ಷಣೆಗಳು ಸರಳ, ಸುಲಭ ಮತ್ತು ಮಿತವ್ಯಯದವು; ಹಾಗೂ ನಿರ್ಣಯಕಾರಿ. ಆದ್ದರಿಂದ ಬಹುಮುಖ್ಯವಾಗುತ್ತವೆ.

**ತೆರೆಯಲಿರುವ ಇತಿಹಾಸಗಳ ಸತ್ಯಗಳನ್ನು ಎದುರಿಸುವುದು ಹೇಗೆ ?**

ನಮ್ಮ ವಿಜ್ಞಾನ ಏರಿರುವ ಸತ್ಯಗಳ ಮಟ್ಟಕ್ಕೆ ನಮ್ಮ ಇತಿಹಾಸವೂ ಏರುವುದನ್ನು ಯಾರೂ ನಿಲ್ಲಿಸಲು ಸಾಧ್ಯವಿಲ್ಲ. ನಡೆದುಹೋದ ಇತಿಹಾಸದ ಘಟನೆಗಳನ್ನು; ಆಗಿಹೋದ ಅದರ ಪರಿಣಾಮಗಳನ್ನು ಬದಲಾಯಿಸುವುದು ಅಸಾಧ್ಯ. ದೇಶೀಯರಿಗೆ ಇಷ್ಟವಾಗಲಿ, ಅಥವಾ ಅನಿಷ್ಟವಾಗಲಿ, ಅವರು ದೇಶದ ಭೂಗೋಳವನ್ನು ಬದಲಿಸಬಹುದೆ ಹೊರತು, ಆ ದೇಶದ ಚರಿತ್ರೆಯನ್ನಲ್ಲ, ಕೆಲಕಾಲ ಮುಚ್ಚಿಡಲೂಬಹುದೇನೋ! ಆದರೆ ಅತ್ತಿತ್ತಲಿನ ದೇಶದವರೊ, ಅಥವಾ ಸತ್ಯಕ್ಕೆ ಹೆದರದ ದೇಶೀಯ ವಿಜ್ಞಾನಿಗಳೊ, ಸತ್ಯವನ್ನು ಬಯಲಿಗೆಳೆಯುವವರೆಗೂ ಮಾತ್ರ! ವಿಜ್ಞಾನದ ಇತರ ಸತ್ಯಗಳಂತೆಯೆ ಈ ಸತ್ಯಗಳೂ, ಕೆಲವು ಜನರಿಗೆ ಕೆಲವು ಕಾಲ ಅನವಶ್ಯಕವಾಗಿ ಕೋಪ, ತೊಂದರೆ, ತಿರುಗೇಟುಗಳ ಹಾನಿಗಳನ್ನು ತರಬಹುದು; ಎಲ್ಲ ದೇಶಗಳ ಚರಿತ್ರೆ, ಮತ್ತು ರಾಜಕೀಯಗಳಲ್ಲೂ ಇಂತಹ ನಿದರ್ಶನಗಳ ದೀರ್ಘ ಸರಮಾಲೆಗಳೇ ಇವೆ. ವಿರೋಧಗಳು ಜಾಗತಿಕ ಮಟ್ಟಕ್ಕೇರುತ್ತಿವೆ. ಇಂತಹ ಸಂದರ್ಭದಲ್ಲಿ ನಮ್ಮ ಬಗ್ಗೆಯೆ ನಮ್ಮ ಬಹುಮುಖಿ ಸತ್ಯವನ್ನು ಹೇಗೆ ಗುರುತಿಸಿಕೊಳ್ಳಬೇಕೆಂದು ತಿಳಿಸುತ್ತ, ಅಮರ್ತ್ಯ ಸೆನ್ ಕೆಲವು ಸಲಹೆಗಳನ್ನು ಕೊಡುತ್ತಾರೆ, – ಅವರ ''ಫೇಸಿಂಗ್ ಹಿಸ್ಟರಿ ಅಂಡ್ ಅವರ್ ಸೆಲ್ವ್ಸ್'' (ಇತಿಹಾಸವನ್ನು ಮತ್ತು ನಮ್ಮನ್ನು ನಾವೇ ಎದುರಿಸುವುದು ಹೇಗೆ ?) ಎಂಬ ಲೇಖನದಲ್ಲಿ:

''ನಾನು ಇವೆಲ್ಲವೂ ಆಗಿರಬಲ್ಲೆ: ಏಷ್ಯನ್, ಭಾರತೀಯ, ಅಮೆರಿಕನ್ ನಾಗರಿಕ, ಬ್ರಿಟಿಷ್ ಅಧ್ಯಾಪಕ, ಬಾಂಗ್ಲಾದೇಶದಲ್ಲಿದ್ದ ಬಂಗಾಲಿ, ಎರಡು ಬೇರೆ ಬೇರೆ ದೇಶಗಳ ಬೇರೆ ಬೇರೆ ಕಾಲೇಜುಗಳ ಪದವೀಧರ, ಹಿಂದು ಧರ್ಮದಲ್ಲಿ ಹುಟ್ಟಿ ಬೆಳೆದ ಒಬ್ಬ ನಾಸ್ತಿಕ, ಅಬ್ರಾಹ್ಮಣ, ಅರ್ಥಶಾಸ್ತ್ರಜ್ಞ, ತತ್ವದರ್ಶನಗಳ ಶೋಧಕ ಮತ್ತು ಅಧ್ಯಾಪಕ, ಸಂಸ್ಕೃತದಲ್ಲಿ ಅತ್ಯಾಸಕ್ತ, ವಿವಾಹಿತ, ಸ್ತ್ರೀವಾದಿ, ಯಾವ ಲೈಂಗಿಕ ಸ್ವಾತಂತ್ರ್ಯಕ್ಕೂ ಅಡ್ಡಿ ಬಾರದವನು, ಜನ್ಮ-ಜನ್ಮಾಂತರಗಳಲ್ಲಿ ಅವಿಶ್ವಾಸಿ, ಬಾಹ್ಯಾಕಾಶದ ಅಭ್ಯಾಗತರಲ್ಲಿ ಅವಿಶ್ವಾಸಿ, ಆದರೆ ಅಂಥವರಿದ್ದಲ್ಲಿ, ಅವರ ಬಾಹ್ಯಾಕಾಶವಿಮಾನ ಸುಂದರ ವಾಗಿರಲೆಂದು ಬಯಸುವವನು. ಹೀಗಿರುವಾಗ, ಭಾರತೀಯ ಸಂಸ್ಕೃತಿಯನ್ನು 'ಹಿಂದೂ ನಾಗರಿಕತೆ' ಎನ್ನುವುದು ಸತ್ಯಘಟನೆಯನ್ನೇ ಇಲ್ಲವೆಂದಂತೆ. ಹತ್ತಾರು ಶತಮಾನಗಳಿಂದ ಇಲ್ಲಿರುವವರನ್ನು, ನಾಸ್ತಿಕರನ್ನು, ನಿರೀಶ್ವರವಾದಿಗಳನ್ನು ಬಿಟ್ಟು ಇಲ್ಲಿಯ ಸಂಸ್ಕೃತಿ ಬೆಳೆದಿದೆಯೆ ? ನಮ್ಮೆಲ್ಲರ ಸಂಸ್ಕೃತಿಗಳನ್ನು ಜಾತೀಯ/ದೇಶೀಯ ನಾಗರಿಕತೆಗಳಾಗಿ ಹರಿದು ಹಂಚುವುದು, ಜಗತ್ತಿಗೆ ಬೆಂಕಿ ಇಡುವುದಷ್ಟೇ ಅಲ್ಲ, ಮಾನವೀಯ ಸಂಸ್ಕೃತಿಗಳ ಬಹುಮುಖೀಯ ಮೂಲವನ್ನೇ ಕಳೆದುಕೊಂಡು ದರಿದ್ರರಾಗಿಬಿಡುವುದು ಸಹ.''

ಈಗ ನಮ್ಮ ಪ್ರಪಂಚವನ್ನೆಲ್ಲ ಕದಡುತ್ತಿರುವ ಆರ್ಥಿಕ, ಸಾಮಾಜಿಕ, ಮತೀಯ ಕಲಹಗಳೆಲ್ಲ ಇಂತಹವು ತಾನೆ ? ಡೆಮಾಕ್ರಸಿಯನ್ನು ಮುರಿದು ಬಳಸಿಕೊಳ್ಳುತ್ತ ಅದನ್ನು ಪೂರ್ಣತಃ ಒಪ್ಪದವರು ಇಂತಹವರು ತಾನೆ ? ವಿಜ್ಞಾನದ ಲಾಭವನ್ನು ದೋಚುತ್ತಿದ್ದರೂ, ಅದನ್ನು ಒಪ್ಪದವರು ಇಂತಹವರು ತಾನೆ ? ಜಾಗತಿಕ ಡೆಮಾಕ್ರಸಿ ಮತ್ತು ವಿಜ್ಞಾನಗಳಲ್ಲದೆ ಬೇರೇನು ತಾನೆ ನಮ್ಮನ್ನೆಲ್ಲ ಸೌಹಾರ್ದ, ಶಾಂತಿಗಳತ್ತ ಕರೆದೊಯ್ಯಬಲ್ಲವು ? ವಿಶ್ವಮಾನವ ಎಂದು ಹಾಡಿದರೆ ಸಾಕೆ ? ಆಗುವ ಸೌಭಾಗ್ಯ ನಮಗೆ ಬೇಡವೇನು ?

**ಡಾ|| ಎಮ್. ಎನ್. ಕೇಶವ ರಾವ್**
೩೮೮, ವೆಂಕಟೇಶ ದಾಸ್ ರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦


## ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ
ಮತ್ತು
## ಪ್ರತಿಭಾ ಪ್ರಕಾಶನ

**ಕೆಲವು ಹೊಸ ಪ್ರಕಟಣೆಗಳು**

| | | |
|---|---|---|
| 1. ಕುಮಾರವ್ಯಾಸ ಭಾರತ ನಿಘಂಟು | ತ. ಸು. ಶಾಮರಾಯ | 200-00 |
| 2. ಕನ್ನಡ ನಾಟಕ | ತ. ಸು. ಶಾಮರಾಯ | 210-00 |
| 3. ಶಿವಶರಣ ಕಥಾರತ್ನ ಕೋಶ | ತ. ಸು. ಶಾಮರಾಯ | 300-00 |
| 4. ಕೃಷ್ಣನ ಕಡೆಯ ಸಂದೇಶ | ತ. ಸು. ಶಾಮರಾಯ | 90-00 |
| 5. ಅಣ್ಣನ ಸ್ಮರಣೆ | ಟಿ. ಎಸ್. ಛಾಯಾಪತಿ | 45-00 |
| 6. ಗಾಂಧೀಜಿಯ ಕನಸು ನಜೀರರಿಂದ ನನಸು | ಟಿ. ಎಸ್. ಛಾಯಾಪತಿ | 60-00 |
| 7. ಆಡಳಿತ ಭಾಷೆ ಕನ್ನಡ | ಟಿ. ಎಸ್. ಛಾಯಾಪತಿ | 60-00 |
| 8. ಕನ್ನಡ ಸಾಹಿತ್ಯ ಸಮೀಕ್ಷೆ | ಜಿ. ಎಸ್. ಶಿವರುದ್ರಪ್ಪ | 60-00 |
| 9. ಪರಿಸರ ಶಿಲ್ಪಿ ಪದ್ಮಶ್ರೀ ದೇಜಗೌ | ರಾಮಸ್ವಾಮಿ | 70-00 |
| 10. ಕನ್ನಡ ವೈದ್ಯಕೀಯ ಪದಗಳ ಸಮಸ್ಯೆ ಮತ್ತು ಪರಿಹಾರ | ನಾ. ಸೋಮೇಶ್ವರ | 50-00 |
| 11. ಬುವಿ ಬಾನುಗಳ ಮೇಳ | ಎಚ್. ಜೆ. ಲಕ್ಕಪ್ಪಗೌಡ | 75-00 |
| 12. ಗಣೇಶ ನಮನ | ನಂಜುಂಡ ಸ್ವಾಮಿ | 30-00 |
| 13. ವೇದಾಂತ ಕಥಾವಳಿ | ಟಿ. ಎಸ್. ವೆಂಕಟಯ್ಯ | 60-00 |
| 14. ವಿಜ್ಞಾನ ವಿಶೇಷ ವಿಚಾರ | ಪ್ರೊ|| ವಿ. ನರಹರಿ | 90-00 |
| 15. ವಿಜ್ಞಾನ ಕೌತುಕ | ಜಿ. ಆರ್. ಲಕ್ಷ್ಮಣರಾವ್ | 40-00 |

ನಂ. 9, 'ರಮ್ಯ', ಗೋಕುಲ 3ನೇ ಹಂತ, ಮೈಸೂರು – 570 002
ದೂರವಾಣಿ : 2513821





## ಪ್ರಕಾಶ ಸಾಹಿತ್ಯ
## *Prakasha Sahitya*
**BOOKSELLERS & PUBLISHERS**

*PUC Textbooks*
*Degree Textbooks*
*General Books*
Available

No. 27, Cottonpet (Below City Central Library), Bangalore-560 053
Ph. (Off) : 080-22871030, Fax : 080-22254950, Mob. : 9844028710

# ಬೆರಳಚ್ಚು ಗಾರುಡಿಗ – ಅನಂತಸುಬ್ಬರಾವ್

**ಕ**ರ್ನಾಟಕವು ಆಧುನಿಕತೆಯತ್ತ ವಿಕಾಸ ಹೊಂದುವುದರಲ್ಲಿ ಗಣನೀಯ ಕೊಡುಗೆ ನೀಡಿರುವ ಶ್ರೀ ಕೆ. ಅನಂತಸುಬ್ಬರಾವ್ ಅವರ ಜನ್ಮ ಶತಮಾನೋತ್ಸವದ ವರ್ಷ ೨೦೦೮. ಈ ಸಂದರ್ಭದಲ್ಲಿ ನನ್ನ ಮತ್ತು ಕೆ. ಅನಂತಸುಬ್ಬರಾಯರ ಕೆಲವೇ ದಿನಗಳ ಒಡನಾಟದ ನೆನಪು ಹಂಚಿಕೊಳ್ಳುವ ಆಶಯ ನನ್ನದು.

೧೯೫೮ರಲ್ಲಿ ನಾನು ಉದ್ಯೋಗವನ್ನರಸಿ ಹಾಸನದಿಂದ ಬೆಂಗಳೂರಿಗೆ ಬಂದು ನನ್ನ ಹಿರಿಯ ಅಣ್ಣ ಜಿ. ಹೆಚ್. ರಂಗಪ್ಪನವರ ಮುದ್ರಣಾಲಯದಲ್ಲಿ ಮುದ್ರಣದ ಕೆಲಸವನ್ನು ಕಲಿಯಲು ಅವರ ಜೊತೆಗೂಡಿದೆ. ಇವರು ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ಮುಂಬಯಿಯನ್ನು ತಮ್ಮ ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡು ಇಡೀ ಭಾರತವನ್ನೇ ಸುತ್ತಿದಂತಹ ವ್ಯಕ್ತಿ. ಮುಂದೆ ಭಾರತವು ಸ್ವತಂತ್ರವಾದ ನಂತರ ಹಾಸನಕ್ಕೆ ಬಂದು ಅಲ್ಲಿ ಸ್ವತಂತ್ರವಾಗಿ 'ನೇಗಿಲಯೋಗಿ' ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ಅಲ್ಲಿಂದ ಮುಂದೆ ಇವರು ನೇಗಿಲಯೋಗಿ ರಂಗಪ್ಪ ಎಂದೇ ಸಾರ್ವಜನಿಕ ಮತ್ತು ರಾಜಕೀಯ ವಲಯಗಳಲ್ಲಿ ಪರಿಚಿತರಾದರು. ಈ ಪತ್ರಿಕೆಗೆ ಕೆ. ಅನಂತಸುಬ್ಬರಾಯರು ಮತ್ತು ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು ಸಲಹೆ ನೀಡುತ್ತಿದ್ದುದುಂಟು. ಸುಮಾರು ೮-೯ ವರ್ಷಗಳು 'ನೇಗಿಲಯೋಗಿ' ಮಾಸಪತ್ರಿಕೆ ಅಲ್ಲದೆ 'ಭಾರತ ಕೇಸರಿ' ಎಂಬ ವಾರಪತ್ರಿಕೆಯನ್ನು ಒಂದೆರಡು ವರ್ಷ ನಡೆಸಿ ನಂತರ ಬೆಂಗಳೂರಿಗೆ ಬಂದು ಸ್ವಂತ ಮುದ್ರಣಾಲಯ 'ಶ್ರೀನಿವಾಸ ಪ್ರಿಂಟರ್ಸ್'ನ್ನು ಪ್ರಾರಂಭಿಸಿದರು. ಗಾಂಧಿ ಬಜಾರಿನಲ್ಲಿ ಒಂದು ಸಣ್ಣ ಕೊಠಡಿಯಲ್ಲಿ ವಾಸವಾಗಿದ್ದು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದ ಕೆ. ಅನಂತಸುಬ್ಬರಾಯರು ಪ್ರತಿದಿನ ಪ್ರೆಸ್‌ಗೆ ಬಂದು ರಂಗಪ್ಪನವರನ್ನು ಸುಮಾರು ಹೊತ್ತು ಮಾತನಾಡಿಸಿಕೊಂಡು ವಿಧಾನಸೌಧದ ಕಡೆಗೋ ಅಥವಾ ಹೈಕೋರ್ಟ್ ಕಡೆಗೋ ನಡೆದುಕೊಂಡೇ ಹೋಗುತ್ತಿದ್ದರು. ಅವರ ಮಾತಿನಲ್ಲಿ ಕನ್ನಡದ ಬಗ್ಗೆ, ಕನ್ನಡ ಭಾಷೆಯ ಬಗ್ಗೆ, ಕನ್ನಡದ ಜನತೆಗೆ ತಮ್ಮಿಂದ ಏನು ಅನುಕೂಲವಾಗುತ್ತದೆಂಬ ಬಗ್ಗೆ ಅನೇಕ ಸಂಗತಿಗಳಿರುತ್ತಿದ್ದವು. ಇದರ ಜೊತೆಗೇ ಡೆಮಿ ೧/೧೬ ಆಕಾರದಲ್ಲಿ (ಅಂಗೈಅಗಲ) ಸಣ್ಣ ಪತ್ರಿಕೆಯನ್ನು ಹೊರಡಿಸಿ ಅದರಲ್ಲಿ ಕನ್ನಡ ಜನತೆಯು ಸ್ವಾಭಿಮಾನವುಳ್ಳವರಾಗಬೇಕು, ತಮ್ಮತನವನ್ನು ಉಳಿಸಿಕೊಳ್ಳಬೇಕು, ಇತ್ಯಾದಿ ಧ್ಯೇಯವಾಕ್ಯಗಳನ್ನು ಮುದ್ರಿಸಿ ಉಚಿತವಾಗಿ ಜನತೆಗೆ ಹಂಚುತ್ತಿದ್ದರು. ಇದಕ್ಕೂ ಮುಂಚೆ 'ಹಾಸನ್ ಪತ್ರಿಕೆ'ಯನ್ನು ಚಿಕ್ಕದಾಗಿ ಮುದ್ರಿಸಿ ಜನತೆಗೆ ಹಂಚುತ್ತಿದ್ದರಂತೆ. ಅಪ್ಪಟ ಸ್ವಾತಂತ್ರ್ಯ ಹೋರಾಟಗಾರರಾದ ಕೆ. ಅನಂತಸುಬ್ಬರಾಯರು ತಮ್ಮ ಜೀವನದಲ್ಲೂ ಭಾರಿ ಹೋರಾಟವನ್ನೇ ಮಾಡಿದ್ದಾರೆ. ಅವರ ವೇಷ – ಹೊರಗಡೆ ಹೊರಟಾಗ – ಒಂದು ಖಾದಿ ಪಂಚೆ, ತುಂಬುತೋಳಿನ ಖಾದಿ ಜುಬ್ಬ, ತಲೆಯಮೇಲೆ ಖಾದಿ ಟೋಪಿ, ಹೆಗಲಮೇಲೆ ಖಾದಿ ವಲ್ಲಿ, ಕೈಯಲ್ಲೊಂದು ಬಟ್ಟೆಯ ಚೀಲ. ಚೀಲದಲ್ಲಿ ಕನ್ನಡ ಬೆರಳಚ್ಚನ್ನು ಸಂಶೋಧನೆ ಮಾಡಿದ ಮತ್ತು ಕೋರ್ಟ್‌ಗೆ ಸಂಬಂಧಿಸಿದ ಕಾಗದ ಪತ್ರಗಳು ಇತ್ಯಾದಿಗಳಿರುತ್ತಿದ್ದವು. ಇವರು ಕನ್ನಡ ಬೆರಳಚ್ಚನ್ನು (ನನಗೆ ಪರಿಚಯಕ್ಕಿಂತಲೂ ಮುಂಚೆ) ಯಾವಾಗ ಸಂಶೋಧಿಸಿದ್ದರೋ ತಿಳಿಯದು. ನನಗೆ ಪರಿಚಯವಾದ ಸಂದರ್ಭದಲ್ಲಿ ಕೋರ್ಟ್‌ಗೆ ಹೆಚ್ಚಾಗಿ ಅಲೆಯುತ್ತಿದ್ದರು. ಆ ಕನ್ನಡದ ಬೆರಳಚ್ಚು ಕನ್ನಡಿಗರ ಕೈಗೆ ಸಿಗದೆ ಅಂತರಿಕ್ಷದಲ್ಲಿಯೇ ಹಾರಾಡುತ್ತಿತ್ತೆಂದು ಕಾಣುತ್ತದೆ. ಕಾರಣ ''ಈ ಬೆರಳಚ್ಚು ಸಂಶೋಧನೆ ಅನಂತಸುಬ್ಬರಾಯರದ್ದಲ್ಲ; ನನ್ನ ಸಂಶೋಧನೆಯನ್ನೇ ಪ್ರತಿ ಮಾಡಿದ್ದಾರೆ'' ಎಂದು ಟಿ. ಟಿ. ಶರ್ಮಾ ಅವರು ಕೋರ್ಟ್‌ನಲ್ಲಿ ಅಬ್ಜೆಕ್ಷನ್ ತಂದಿದ್ದರೆಂದು ತಿಳಿಯಿತು. ಹಲವು ವರ್ಷಗಳಿಂದಲೂ ಈ ಕೇಸು ನಡೆಯುತ್ತಿತ್ತೆಂದು ಕಾಣುತ್ತದೆ. ಆದರೆ ಅನಂತಸುಬ್ಬರಾಯರಿಗೆ ರಂಗಪ್ಪನವರು, ಆಗಾಗ ಅಲ್ಲಿಗೆ ಬರುತ್ತಿದ್ದ ಜಿ. ನಾರಾಯಣರು ಇನ್ನೂ ಮುಂತಾದವರು ಧೈರ್ಯದ ಮಾತುಗಳನ್ನಾಡುತ್ತಿದ್ದರು. ಆಗ ಶ್ರೀನಿವಾಸ ಪ್ರಿಂಟರ್ಸ್ ಕುಮಾರ ವೆಂಕಣ್ಣ, ಪಿ. ಎಸ್. ಭಟ್, ಬಿ. ಜಿ. ಎಲ್. ಶಾಸ್ತ್ರಿ ಇಂಥ ಸಾಹಿತಿಗಳ ಮತ್ತು ಪ್ರಮುಖ ರಾಜಕೀಯ ವ್ಯಕ್ತಿಗಳ ಕೇಂದ್ರವಾಗಿತ್ತು. ಮುಂದೆ ಎಷ್ಟೋ ವರುಷಗಳವರೆಗೆ ಕೇಸ್ ನಡೆದು, ಕಡೆಗೂ ಈ ಸಂಶೋಧನೆ ಕೆ. ಅನಂತಸುಬ್ಬರಾಯರದೆಂದೇ ತೀರ್ಮಾನಿಸಿ ಕೋರ್ಟು ತೀರ್ಪು ನೀಡಿತು. (ಇಸವಿ ತಿಳಿಯದು). ಇದರಿಂದ ಕೆ. ಅನಂತಸುಬ್ಬರಾಯರಿಗೆ ಹೆಮ್ಮೆ ಎನಿಸಿದರೂ ಇಲ್ಲಿಂದ ಮುಂದೆ ಕನ್ನಡಿಗರಿಗೆ ಇನ್ನೂ ಯಾವ ರೀತಿ ಸೇವೆ ಮಾಡಬಹುದೆಂಬ ಯೋಚನೆ ಅವರಲ್ಲಿತ್ತು. ಮುಂದೆ ಬಿ. ಡಿ. ಜತ್ತಿ ಅವರು ಮುಖ್ಯಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಕನ್ನಡ ಬೆರಳಚ್ಚು ಯಂತ್ರವನ್ನು ತಯಾರಿಸಿ ಎಲ್ಲಾ ಆಡಳಿತಯಂತ್ರದಲ್ಲಿ, ಸಾರ್ವಜನಿಕ ವ್ಯವಹಾರದಲ್ಲಿ ಕನ್ನಡವನ್ನು ಬಳಸಲು ಅನುಕೂಲ ಕಲ್ಪಿಸಲಾಗುತ್ತದೆಂದು ಹೇಳಿ ಕೆ. ಅನಂತಸುಬ್ಬರಾಯರಿಂದ ಕೇವಲ ಐದು ಸಾವಿರ ರೂಪಾಯಿಗಳಿಗೆ ಎಲ್ಲಾ ಹಕ್ಕುಗಳನ್ನು ಅಂದಿನ ಮೈಸೂರು ಸರ್ಕಾರ ಪಡೆದುಕೊಂಡಿತು. ನಂತರ ಬೆರಳಚ್ಚು ಯಂತ್ರವನ್ನು ತಯಾರಿಸಲು ರೆಮಿಂಗ್‌ಟನ್ ರ‍್ಯಾಂಡ್ ಕಂಪನಿಗೆ ವಹಿಸಲಾಯಿತು. ಅಲ್ಲಿಂದ ತಯಾರಾದ ಮೊದಲನೇ

**ಬಿ. ಡಿ. ಜತ್ತಿ ಅವರು ಮುಖ್ಯಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಕನ್ನಡ ಬೆರಳಚ್ಚು ಯಂತ್ರವನ್ನು ತಯಾರಿಸಿ ಎಲ್ಲಾ ಆಡಳಿತಯಂತ್ರದಲ್ಲಿ, ಸಾರ್ವಜನಿಕ ವ್ಯವಹಾರದಲ್ಲಿ ಕನ್ನಡವನ್ನು ಬಳಸಲು ಅನುಕೂಲ ಕಲ್ಪಿಸಲಾಗುತ್ತದೆಂದು ಹೇಳಿ ಕೆ. ಅನಂತಸುಬ್ಬರಾಯರಿಂದ ಕೇವಲ ಐದು ಸಾವಿರ ರೂಪಾಯಿಗಳಿಗೆ ಎಲ್ಲಾ ಹಕ್ಕುಗಳನ್ನು ಅಂದಿನ ಮೈಸೂರು ಸರ್ಕಾರ ಪಡೆದುಕೊಂಡಿತು. ನಂತರ ಬೆರಳಚ್ಚು ಯಂತ್ರವನ್ನು ತಯಾರಿಸಲು ರೆಮಿಂಗ್‌ಟನ್ ರ‍್ಯಾಂಡ್ ಕಂಪನಿಗೆ ವಹಿಸಲಾಯಿತು. ಅಲ್ಲಿಂದ ತಯಾರಾದ ಮೊದಲನೇ ಯಂತ್ರವನ್ನು ಕೆ. ಅನಂತಸುಬ್ಬರಾಯರಿಗೆ ಗೌರವಪೂರ್ವಕವಾಗಿ ಸರ್ಕಾರ ದಯಪಾಲಿಸಿತು.**



ಬಿ. ಜಿ. ಮಳಲಿಗೌಡ

ಯಂತ್ರವನ್ನು ಕೆ. ಅನಂತಸುಬ್ಬರಾಯರಿಗೆ ಗೌರವ ಪೂರ್ವಕವಾಗಿ ಸರ್ಕಾರ ದಯಪಾಲಿಸಿತು. ಇಷ್ಟಾಗುವ ವೇಳೆಗೆ ಅನಂತಸುಬ್ಬರಾಯರು ಆರ್ಥಿಕವಾಗಿ ತುಂಬ ಕುಗ್ಗಿಹೋಗಿದ್ದರು. ಅಂದು ಸರ್ಕಾರ ೫,೦೦೦ ರೂ.ಗಳಿಗೆ ಹಕ್ಕುಗಳನ್ನು ತೆಗೆದುಕೊಳ್ಳುವುದಿರಲಿ, ಕೇವಲ ೫೦೦ ರೂ. ಇಲ್ಲವೆ ೫೦ರೂ.ಗಳಿಗೂ ಹಕ್ಕುಗಳನ್ನು ಕೇಳಿದರೆ ಕೊಡುತ್ತಿದ್ದರೇನೋ! ಅವರ ಆರ್ಥಿಕ ಸ್ಥಿತಿ ಕುಗ್ಗಿದ್ದರಿಂದಲೋ ಅಥವಾ ಇನ್ನಾದರೂ ಕನ್ನಡಿಗರಿಗೆ ಬೆರಳಚ್ಚುಯಂತ್ರ ಸಿಗುವ ಹಾಗೆ ಆಯಿತಲ್ಲಾ ಎಂಬ ಕಾರಣದಿಂದಲೋ ಏನೋ ಒಪ್ಪಿಗೆಯಿತ್ತಿರಬಹುದು. ಅಲ್ಲಿಯವರೆಗೂ ರಂಗಪ್ಪ ನಂಥವರ ಆತ್ಮೀಯ ಗೆಳೆಯರು ಅವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು. ಮುಂದೆ ತಮಗೆ ಸಂದ "ಅನಂತ ಬೆರಳಚ್ಚು" ಯಂತ್ರವನ್ನು ತಮ್ಮ ಹೆಗಲಮೇಲೆ ತಾವೇ ಹೊತ್ತು ಇಡೀ ಮೈಸೂರು ದೇಶವನ್ನೇ ಸುತ್ತಿದರು. ಒಂದೊಂದು ಊರಿನಲ್ಲಿ ಒಂದು ವಾರ-ಎರಡು ವಾರ, ಅಗತ್ಯವಿದ್ದಲ್ಲಿ ಒಂದು ತಿಂಗಳು, ಇದ್ದು ಅಲ್ಲಿಯ ಜನತೆಗೆ ಅದರ ಪರಿಚಯ ಮಾಡಿಸುತ್ತಿದ್ದರು. ಎಲ್ಲಿ ಹೋದರೂ ಅವರ ಯೋಗಕ್ಷೇಮವನ್ನು– ಅಭಿಮಾನಿಗಳೆಂದರೆ ತಪ್ಪಾಗುತ್ತದೆ – ಆತ್ಮೀಯ ಗೆಳೆಯರು ನೋಡಿಕೊಳ್ಳುತ್ತಿದ್ದರು, ಯಂತ್ರವನ್ನು ಪರಿಚಯಿಸಲು ಬೇಕಾದ ಸೌಕರ್ಯವನ್ನು ಕಲ್ಪಿಸುತ್ತಿದ್ದರು. ಅವರ ಈ ತಿರುಗಾಟದ ಸಂದರ್ಭದಲ್ಲಿ, ಎಂದರೆ ೧೯೬೩ ಇರಬಹುದೆಂದು ಕಾಣುತ್ತದೆ, ಹಾಸನದಲ್ಲಿ ಒಂದು ತಿಂಗಳ ಕಾಲ ಬೆರಳಚ್ಚು ಯಂತ್ರದ ಪರಿಚಯವನ್ನು ಮಾಡಿಕೊಟ್ಟರು. ಆ ಸಂದರ್ಭದಲ್ಲಿ ಒಂದು ದಿನ ನನ್ನ ಅವರ ಭೇಟಿಯಾದಾಗ ನಾನು ಕೇಳಿದೆ "ಸಾರ್, ಯಾಕೆ ನಿಮ್ಮ ಸಂಪೂರ್ಣ ಹಕ್ಕುಗಳನ್ನೆಲ್ಲಾ ಸರ್ಕಾರಕ್ಕೆ ಕೊಟ್ಟಿರಲ್ಲಾ, ನಮ್ಮ ಅಣ್ಣನವರು ಹೇಳಿದ ಹಾಗೆ ಸಂಪೂರ್ಣ ಹಕ್ಕುಗಳನ್ನು ಕೊಡಬಾರದಿತ್ತು" ಎಂದೆ. ಅದಕ್ಕವರು ಒಂದೇ ಉತ್ತರ ಕೊಟ್ಟರು :

"ಬಿಡಯ್ಯಾ ಗೌಡ, ಈ ಹಕ್ಕುಗಳನ್ನು ಕಟ್ಟಿಕೊಂಡು ನನಗೇನಾಗಬೇಕಾಗಿದೆ. ಮೊದಲಿನಿಂದಲೂ ನನ್ನ ಸ್ವಾರ್ಥಕ್ಕಾಗಿ ಏನೂ ಮಾಡಿಕೊಂಡಿಲ್ಲ, ಅದಕ್ಕಾಗಿ ನನ್ನ ಜೀವನವೆಲ್ಲಾ ವ್ಯಯಿಸಿದೆ. ಕೊನೆಗೂ ಅದರಲ್ಲಿ ಯಶಸ್ವಿಯಾದೆ. ಇದರಿಂದ ನಾಲ್ಕು ಕೋಟಿ ಕನ್ನಡಿಗರಿಗೆ ಅನುಕೂಲವಾಯಿತಲ್ಲ, ಅದೇ ಸಂಪೂರ್ಣ ತೃಪ್ತಿಯಿದೆ. ಇರಲಿ ಬಾ, ಕಾಫಿ ಕುಡಿಯೋಣ." ನಾನು ಅವರನ್ನು ಹಿಂಬಾಲಿಸಿದೆ. ಜೊತೆಗೆ ಪ್ರಜಾವಾಣಿ ಪತ್ರಿಕಾ ವರದಿಗಾರರೊಬ್ಬರಿದ್ದರು. (ಹೆಸರು ಜ್ಞಾಪಕವಿಲ್ಲ). ರಾಯರು ಮರಣ ಹೊಂದುವ ಕೆಲವೇ ವರ್ಷಗಳ ಹಿಂದೆ ಕರ್ನಾಟಕ ಸರ್ಕಾರವು ಮಾಸಾಶನ ೫೦೦ ರೂ. ಗಳನ್ನು ಕೊಡಮಾಡಿತು. ಆದರೂ ನನಗೆ ಮನಸ್ಸು ತಡೆಯಲಿಲ್ಲ, ಅಂದೇ ಅವರನ್ನು ಕುರಿತು ಒಂದು ಸಣ್ಣ ಲೇಖನವನ್ನು ಬರೆದೆ: ಸರ್ಕಾರ ಕೆ. ಅನಂತಸುಬ್ಬರಾಯರನ್ನು ಹೇಗೆ ದುರುಪಯೋಗ ಪಡಿಸಿಕೊಂಡಿತು ಎಂಬ ವಿಚಾರ. ಅದು ಆಗ ಹಾಸನದಲ್ಲಿ ಕೃ. ನಾ. ಮೂರ್ತಿಯವರು ನಡೆಸುತ್ತಿದ್ದ 'ಜನಮಿತ್ರ' ಪತ್ರಿಕೆಯಲ್ಲಿ ಪ್ರಕಟವಾಯಿತು. ಒಂದು ಪ್ರತಿಯನ್ನು ಸೆಕ್ರೆಟೇರಿಯಟ್‌ಗೆ ಕಳಿಸುತ್ತೇನೆಂದು ಹೇಳಿದ ಕೃ. ನಾ. ಮೂರ್ತಿಯವರು ಕಳುಹಿಸಿರ ಬಹುದು. ಕೃ. ನಾ. ಮೂರ್ತಿಯವರು ಈಗ ಇಲ್ಲ.

ಕನ್ನಡಕ್ಕೊಂದು ಬೆರಳಚ್ಚುಯಂತ್ರ ಇಲ್ಲದ ಸಂದರ್ಭದಲ್ಲಿ ಅದನ್ನೇ ತಮ್ಮ ಸಂಶೋಧನೆಯನ್ನಾಗಿ ಮಾಡಿಕೊಂಡು ಕರ್ನಾಟಕದಲ್ಲಿ ಹುಟ್ಟಿ ಕನ್ನಡಿಗರ ಋಣ ತೀರಿಸಿದ ಕಟ್ಟಾ ಕನ್ನಡಾಭಿಮಾನಿ, ಕನ್ನಡಿಗರ ಏಳ್ಗೆಯನ್ನೇ ತಮ್ಮ ಏಳ್ಗೆಯೆಂದು ಮನಃಪೂರ್ವಕವಾಗಿ ಶ್ರಮಿಸಿದ ನಿಷ್ಠಾವಂತ ಸ್ವಾಭಿಮಾನಿ ಸ್ವಾತಂತ್ರ್ಯ ಹೋರಾಟಗಾರರಾದ ಕೆ. ಅನಂತಸುಬ್ಬರಾಯರಂತಹ ಒಬ್ಬ ವ್ಯಕ್ತಿ ಈಗ ಇದ್ದಾರೆಯೇ ಹುಡುಕಿ ನೋಡಬೇಕಾಗಿದೆ. ಇಂತಹ ಎಷ್ಟೋ ಜೀವಿಗಳು ಕನ್ನಡಕ್ಕಾಗಿ ದುಡಿದು ನಿರ್ಗತಿಕರಾಗಿ ಹೇಳಹೆಸರಿಲ್ಲವಾಗಿದ್ದಾರೆ. ಕನ್ನಡಿಗರಿಂದ ಮರೆಯಾಗಿದ್ದ ಕೆ. ಅನಂತಸುಬ್ಬರಾಯರ ನೆನಪನ್ನು ಅವರ ಜನ್ಮಶತಮಾನೋತ್ಸವದ ಸಂದರ್ಭದಲ್ಲಿ ಮಾಡಿಕೊಳ್ಳಬೇಕಾದ್ದು ನಮ್ಮ ಕರ್ತವ್ಯ.

ಇನ್ನು ಮುಂದಾದರೂ ಕನ್ನಡ ಬೆರಳಚ್ಚುಯಂತ್ರದ ಜನಕ ಕೆ. ಅನಂತಸುಬ್ಬರಾಯರ ಋಣವನ್ನು ಕನ್ನಡದ ಜನತೆ ಯಾವ ರೀತಿ ತೀರಿಸುತ್ತದೆಯೋ ಕಾದು ನೋಡಬೇಕು.

ಬಿ. ಜಿ. ಮಳಲಿಗೌಡ
'ಇಳಾ ಪ್ರಿಂಟರ್ಸ್', ನಂ.೩೬, ರಾಘವನಗರ, ಮುನೇಶ್ವರ ಬ್ಲಾಕ್
ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು - ೫೬೦ ೦೨೬.

With Best Compliments from :

**THE MANJESHWAR SERVICE CO-OP.BANK LTD., C.323.**

**HEAD OFFICE : MANJESHWAR - 671 323** ☎ 04998 - 272122
04998 - 275222

Main Branch : Hosabettu, Manjeshwar, ☎ 04998 - 272222

*Branches*

Hosangadi ☎ 04998 - 272622
Kunjathur ☎ 04998 - 279381
Udyawar ☎ 04998 - 230046

Class I
Special Grade
Bank

- All Members are covered by Accident Insurance Scheme of Rs. 25,000/-
- All agricultural borrowers are additionally covered by accident Insurance Scheme Rs. 50,000/-
- Locker facility is available at our Udyawar Branch at reasonable rate of Rs.300, Rs. 600, Rs. 900/- per annum as per the capacity of the lockers.

| | |
|---|---|
| **Deposits** | **Rs. 26 Crores** |
| **Advances** | **Rs. 25 Crores** |
| **Working Capital** | **Rs. 28 Crores** |

*All Banking Facilities Offered.*
*Render Quick, Prompt and Courteous Service*

B. M. ANANTHA
President

S. RAMACHANDRA
Secretary in Charge

# ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ

## ಕರ್ನಾಟಕದ ಸಂಪರ್ಕ ಸೇತುವೆ







ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮವು ಪ್ರಯಾಣಿಕರ ಬೇಡಿಕೆ ಹಾಗೂ ಅಗತ್ಯಗಳಿಗೆ ಪೂರಕವಾಗಿ ಹಲವಾರು ವಿನೂತನ ಕಾರ್ಯಯೋಜನೆಗಳನ್ನು ಪ್ರಯಾಣಿಕಸ್ನೇಹಿ ಯೋಜನೆಗಳನ್ನು ರೂಪಿಸಿದೆ.

**ರಾಜ್ಯ ಹಾಗೂ ಹೊರ ರಾಜ್ಯದ ಮುಖ್ಯ ಸ್ಥಳಗಳಿಗೆ ನಿಗಮದಿಂದ ವೋಲ್ವೋ ಬಸ್‌ಗಳ ಸೇವೆ**

ಐರಾವತ - ವೋಲ್ವೋ ಸೇವೆ - ಪೂರ್ಣ ಹವಾನಿಯಂತ್ರಿತ ಅಂತರರಾಷ್ಟ್ರೀಯ ದರ್ಜೆಯ ಪ್ರಯಾಣ, ಸುಖಾಸೀನ, ಉತ್ತಮ ಸೇವಾವ್ಯವಸ್ಥೆ, ವಿಡಿಯೋ ಹಾಗೂ ಆಡಿಯೋ ಸೌಲಭ್ಯ, ಉತ್ತಮ ಹಾಗೂ ಆರಾಮದಾಯಕ ಆಸನಗಳು, ಪ್ರಯಾಣದ ಸಾಮಾನುಗಳನ್ನಿಡಲು ಸಾಕಷ್ಟು ಸ್ಥಳಾವಕಾಶ ಇತ್ಯಾದಿ ಸೌಲಭ್ಯಗಳನ್ನು ಹೊಂದಿದೆ.

**ಒಪ್ಪಂದದ ಮೇರೆಗೆ ಬಸ್ ಸೇವೆಗಳು**

ಮದುವೆ, ಮುಂಜಿ, ಪ್ರವಾಸ ಮತ್ತಿತರ ಸಮಾರಂಭಗಳಿಗೆ ಬಸ್‌ಗಳು ದಿನ ಮತ್ತು ಗಂಟೆಗಳ ಆಧಾರದ ಮೇಲೆ ಲಭ್ಯ. ಶಾಲಾ ಕಾಲೇಜುಗಳಿಗೆ ರಿಯಾಯಿತಿ ಉಂಟು.

**ಚಾರ್ಟರ್ಡ್ ಕಾಂಟ್ರಾಕ್ಟ್ ಬಸ್ ಸೇವೆಗಳು**

ಕಾರ್ಖಾನೆ/ಕಂಪನಿ/ವಿದ್ಯಾಸಂಸ್ಥೆ/ಕಛೇರಿಗಳಿಗೆ ತಮ್ಮ ಸಿಬ್ಬಂದಿಗಳನ್ನು ಕರೆದುಕೊಂಡುಬರಲು, ಬಿಡಲು ವಿಶೇಷ ದರಗಳಲ್ಲಿ ಬಸ್‌ಗಳು ಲಭ್ಯ.

**ಮಾಸಿಕ ಬಸ್ ಪಾಸ್‌ಗಳು**

ಪ್ರತಿದಿನ ಪ್ರಯಾಣಿಸುವ ಪ್ರಯಾಣಿಕರಿಗಾಗಿ 20 ದಿನದ ದರ ಪಾವತಿಸಿ 30 ದಿನಗಳು ಪ್ರಯಾಣಿಸಬಹುದಾದ ಮಾಸಿಕ ಬಸ್ ಪಾಸ್‌ಗಳು.

**ಸ್ವಾತಂತ್ರ್ಯ ಟಿಕೆಟ್‌ಗಳು**

7 ದಿನಗಳ ಕಾಲ ರಾಜ್ಯದಲ್ಲಿ ಎಲ್ಲಿಂದ ಎಲ್ಲಿಗೆ ಬೇಕಾದರೂ ಎಷ್ಟು ಬಾರಿಯಾದರೂ ಪ್ರಯಾಣಿಸಬಹುದಾದ ಸ್ವಾತಂತ್ರ್ಯ ಟಿಕೆಟುಗಳು. ಈಗ ಇಂಟರ್‌ನೆಟ್ (ksrtc.in) ಮೂಲಕವೂ ಟಿಕೆಟ್ ಕಾಯ್ದಿರಿಸುವ ಸೌಲಭ್ಯ.

**ಅವತಾರ್ ಯೋಜನೆ**

**ಯಾವುದೇ ಸಮಯದಲ್ಲಿ ಎಲ್ಲಿಂದಾದರೂ ಮುಂಗಡ ಆಸನಗಳನ್ನು ಕಾಯ್ದಿರಿಸುವ ವ್ಯವಸ್ಥೆ**

- ಹೋಗಿ ಬರುವ ಟಿಕೆಟನ್ನು ಕಾಯ್ದಿರಿಸಿದಲ್ಲಿ ಹಿಂದಿರುಗುವ ಪ್ರಯಾಣದ ಟಿಕೆಟ್ ದರದಲ್ಲಿ ಶೇ. 10 ರಿಯಾಯಿತಿ.
- 4 ಜನಕ್ಕಿಂತ ಹೆಚ್ಚಿಗೆ ಒಂದೇ ಟಿಕೆಟ್‌ನಲ್ಲಿ ಸೀಟುಗಳನ್ನು ಕಾಯ್ದಿರಿಸಿದಲ್ಲಿ ಶೇ. 5 ರಿಯಾಯಿತಿ.
- ಮುಂಗಡ ಟಿಕೆಟ್ ಕಾಯ್ದಿರಿಸಿದವರಿಗೆ ಪ್ರಯಾಣದ ದಿನ 2 ಗಂಟೆ ಮುಂಚಿತವಾಗಿ ನಗರ ಸಾರಿಗೆಗಳಲ್ಲಿ ಉಚಿತ ಪ್ರಯಾಣದ ಸೌಲಭ್ಯ.
- ಸಂಸ್ಥೆಯ ಬಸ್‌ಗಳಲ್ಲಿ ಪ್ರಯಾಣಿಸುವವರಿಗೆ ಎರಡು ಲಕ್ಷ ರೂ.ಗಳ ಅಪಘಾತ ಪರಿಹಾರ ಸೌಲಭ್ಯ.

ಹೆಚ್ಚಿನ ವಿವರಗಳಿಗೆ ತಮ್ಮ ಸಮೀಪದ ನಿಲ್ದಾಣದ ಮೇಲ್ವಿಚಾರಕರು/ಡಿಪೋ ಮೇಲ್ವಿಚಾರಕರು/ವಿಭಾಗೀಯ ಕಛೇರಿಗಳನ್ನು ಸಂಪರ್ಕಿಸಿ. ಆರಾಮದಾಯಕ ಸುರಕ್ಷಿತ ಮತ್ತು ನಿಗದಿತ ಪ್ರಯಾಣಕ್ಕೆ ಕೆ.ಎಸ್.ಆರ್.ಟಿ.ಸಿ. ಬಸ್‌ಗಳಲ್ಲೇ ಪ್ರಯಾಣಿಸಿ.

ಪ್ರಯಾಣಿಕರು ಕೆಂಪೇಗೌಡ ಬಸ್ ನಿಲ್ದಾಣ ಹಾಗೂ ಬೆಂಗಳೂರಿನ ಇತರೆಡೆಗಳಲ್ಲಿರುವ 106 ಗಣಕೀಕೃತ ಕಾಯ್ದಿರಿಸುವ ಕೌಂಟರ್‌ಗಳಲ್ಲಿ ಹಾಗೂ ಮೈಸೂರು, ಮಂಗಳೂರಿನಲ್ಲಿ 15 ದಿನಗಳ ಮುಂಚಿತವಾಗಿ ಟಿಕೆಟ್‌ಗಳನ್ನು ಕಾಯ್ದಿರಿಸಬಹುದಾಗಿದೆ.

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ : 080-22873377/22870099/9980915155
ಬಸ್ ಗುತ್ತಿಗೆಗಾಗಿ : 9980915152, 22353054, ಮುಂಗಡ ಕಾಯ್ದಿರಿಸುವಿಕೆ 9980915157/22385848 ಹಾಗೂ 12666

**ನಿಮ್ಮ ಊರಿಗೆ ನಮ್ಮ ಸಾರಿಗೆ**

**ಮುಂಗಡ ಕಾಯ್ದಿರಿಸುವಿಕೆಗೆ www.ksrtc.in ಲಾಗಿನ್ ಮಾಡಿ**




All Standard
10 & 20 inches
Carbon Blocks are
WQA GOLD SEAL &
NSF Certified




**Filtrex**
**TECHNOLOGIES PVT LTD**
**An ISO 9001:2000 Company**






36/4, Raghavendra Nagar
Near Ring Road, 4th Cross
HRBR Layout, Bangalore 560043
Tel : (91) 80-2544 2331
Fax : (91) 80-2544 8514
e-mail : filtrex@singnet.com.sg
http://www.filtrextechnologies.com

Eco Carb™, coconut shell based activated carbon that is produced with NO Green House Gas Emission. The charring of the coconut shell is done in a reactor to capture all the Methane and VOC gases and convert them into useful energy. This pollution free high quality char is steam activated with the latest technology in a rotary kiln to produce high quality Activated Carbon with exceptionally high performance. In our Filters we use activated carbon obtain through charring coconut shells.

**Greencarbon™ & Greenblock™**
***are certified by***
**NSF and WQA**
**write to us for details :**
**info@eco-carb.com www.eco-carb.com**




*is a company of*

**Filtrex**
**HOLDINGS PTE LTD**
**SINGAPORE**
**An ISO 9001:2000 Company**

# "ಹಲೋ... ನಾನು..."

**ಅಭಯ ಸಿಂಹ**

ಫಿಲಂ ಸಿಟಿಯ ಹೊರಗಡೆ ಇರುವ ನಾಗರಿಕ್ ನಿವಾರ್ ಪರಿಷದ್ ಫ್ಲಾಟ್‌ಗಳಲ್ಲಿ ಬೆಳಗಾದಾಗ ಕೋಳಿ ಕೂಗುವುದಿಲ್ಲ. ಅಲ್ಲಿ ಕಾಗೆಗಳು ಆ ಕೆಲಸವನ್ನು ಮಾಡುತ್ತವೆ. ಹಿಂದಿನ ದಿನ ರಾತ್ರಿ ಯಾವುದೋ ಮನೆಯವರು ಹೊಡೆದು ಬಿಸಾಡಿದ ಹೆಗ್ಗಣದ ಹೆಣದ ಪೋಸ್ಟ್‌ಮಾರ್ಟಮ್ ಮಾಡಲು ಕಾಗೆಗಳ ದಂಡು ಅಂದು ಪದ್ಮಾ ಫ್ಲಾಟ್ ಹೊರಗಡೆ ಸೇರಿದ್ದವು. ಉಮ್ಮರ್ ಫಾರೂಕ್‌ಗೆ ಕಾಗೆಗಳ ಸಂಗೀತ ಮೇಳದೊಂದಿಗೆ ಬೆಳಗಾದದ್ದು ಹೊಸದೇನೂ ಆಗಿರಲಿಲ್ಲ. ಅಂದ ಹಾಗೆ ಈ ಉಮ್ಮರ್ ಫಾರೂಕ್ ಈ ಫ್ಲಾಟಿನಲ್ಲಿ ಕಳೆದ ಆರು ತಿಂಗಳಿಂದ ವಾಸಿಸುತ್ತಿದ್ದಾನೆ. ಅವನ ಫ್ಲಾಟ್ ಮೇಟ್ ತ್ರಿಪುರಾರಿ ಶರನ್. ಉಮ್ಮರ್ ಫಾರೂಕ್ ಮೂಲತಃ ಮಂಗಳೂರಿನ ಬ್ಯಾರಿ. ಅವನು ಮಂಗಳೂರಿನಲ್ಲಿ ಪದವಿ ಮುಗಿಸಿದ ನಂತರ ಮುಂಬೈನಲ್ಲಿ ಎಂ.ಬಿ.ಎ. ಓದಿಕೊಂಡಿದ್ದ. ಆರ್ಥಿಕ ಕುಸಿತದ ಹೊರತಾಗಿಯೂ ಅವನಿಗೆ ಮುಂಬೈನ ಅಂತರರಾಷ್ಟ್ರೀಯ ಕಂಪನಿಯಲ್ಲಿ ಕೆಲಸಕ್ಕೆ ಆಹ್ವಾನ ಬಂದಿತ್ತು. ಆತ ಜೀವನದ ಉದ್ದಕ್ಕೂ ಕಂಡಿದ್ದ ಕನಸು ಅದು. ಆ ದಿನ ಮುಂಬೈನ ಫಿಲಂ ಸಿಟಿ ಹೊರಗಡೆ ಇರುವ ತನ್ನ ವನ್ ಬೆಡ್ ರೂಮ್ - ಹಾಲ್ - ಕಿಚನ್‌ನಲ್ಲಿ ಆತ ಬೆಳಗ್ಗೆ ಆರು ಗಂಟೆಗೇ ಎದ್ದಿದ್ದನು. ಅವನ ಗೆಳೆಯ ತ್ರಿಪುರಾರಿ ಶರನ್ ಕಳೆದ ಒಂದು ವರ್ಷದಿಂದ ಸಿನೆಮಾಗಳಲ್ಲಿ ಕೆಲಸ ಹುಡುಕುತ್ತಾ ಒಂದು ದಿನ ತಾನು ಮುಂಬೈಯ ಕೊಳಕಿನ ಮೇಲೆ ಹಾರಿಹೋಗುವ ಕನಸು ಕಾಣುವವನು. ಮೂಲತಃ ಅವನು ಬಿಹಾರದ ಪಾಟ್ನಾದಿಂದ ಇನ್ನೂರು ಕಿಲೋಮೀಟರ್ ದೂರದ ಒಂದು ಸಣ್ಣ ಹಳ್ಳಿಯವನು. ಉಮ್ಮರ್ ಫಾರೂಕ್ ಬೇಗನೇ ಸ್ನಾನ ಮುಗಿಸಿದನು. ತ್ರಿಪುರಾರಿ ಅವತ್ತು ಅದೇನೋ ಬೇಗನೇ ಎದ್ದು ಸಿದ್ಧಿವಿನಾಯಕನಿಗೆ ನಮಸ್ಕಾರ ಮಾಡಿ ಸಣ್ಣಮಟ್ಟಿನ ಪೂಜೆಯನ್ನೇ ಮಾಡಿ ಉಮ್ಮರನಿಗೆ ಇಂದು ಕೆಲಸ ಸಿಗಲಿ ಎಂದು ಆಶಿಸಿ ಅವನಿಗೆ ಪ್ರಸಾದ ಕೊಟ್ಟನು. ಪ್ರಸಾದ?! ಮತ್ತೇನೂ ಅಲ್ಲ ಒಂದಿಷ್ಟು ಸಕ್ಕರೆ ಅಷ್ಟೇ. ಉಮ್ಮರ್ ನಕ್ಕ. ಮಗನೇ ನನಗೆ ಕೆಲಸ ಸಿಕ್ಕಿದರೆ, ನೀನು ಆರಾಮಾಗಿ ಮಜಾ ಮಾಡಬಹುದಂತ ಅಲ್ವಾ ಇದೆಲ್ಲಾ ನಿನ್ನ ನಾಟಕ? ಹ... ಹ... ಇಬ್ಬರೂ ಗೆಳೆಯರು ನಕ್ಕರು. ಅಂತೂ ಇಂತೂ ತಯಾರಾಗಿ ಉಮ್ಮರ್ ಮನೆಗೆ ಸಮೀಪದ ಲೋಕಲ್ ರೈಲು ಹತ್ತಿದನು. ಆಗ ಸಮಯ ಸುಮಾರು ಒಂಭತ್ತು ಗಂಟೆ. ಅಂದು ಭಾರತ-ಆಸ್ಟ್ರೇಲಿಯಾ ನಡುವೆ ಭಾರೀ ಮಹತ್ವದ ಕ್ರಿಕೆಟ್ ಪಂದ್ಯ ಇದ್ದದ್ದರಿಂದ ಲೋಕಲ್ ರೈಲಿನಲ್ಲಿ ಭಾರೀ ನೂಕು ನುಗ್ಗಲೇನೂ ಇರಲಿಲ್ಲ. ಪಂದ್ಯ ಆಗಷ್ಟೇ ಆರಂಭವಾಗಿತ್ತು. ರೈಲಿನಲ್ಲಿ ಯಾರದೋ ರೇಡಿಯೋದಲ್ಲಿ ಭಾರತ ಆಗಲೇ ಒಂದು ವಿಕೆಟ್ ಕಳೆದುಕೊಂಡಿರುವುದು ತಿಳಿದು ಉಮ್ಮರನಿಗೆ ಸ್ವಲ್ಪ ಬೇಸರವಾಯಿತು. ಆದರೆ ಸಚಿನ್ ಇನ್ನೂ ಆಡುತ್ತಿರುವುದು ಅವನಿಗೆ ನೆಮ್ಮದಿ ಕೊಟ್ಟಿತು. ಸುಮಾರು ಇಪ್ಪತ್ತು ನಿಮಿಷದ ದಾರಿ ಲೋಕಲ್ ರೈಲಿನಲ್ಲಿ ಮತ್ತೆ ಐದು ನಿಮಿಷ ನಡಿಗೆಯ ದೂರದಲ್ಲೇ ಹೋಟೆಲ್ ರಾಜ್‌ಕಮಲ್. ಇಂದು ಅಲ್ಲೇ ಭೇಟಿಯಾಗುವುದಾಗಿ ಬೊಮನ್ ದೋತಿವಾಲ ಹೇಳಿದ್ದರು. ಉಮ್ಮರ್ ಹೋಟೆಲ್ ಸಮಯಕ್ಕೆ ಸರಿಯಾಗಿ ಸೇರಿದ. ಮುಂಬೈ ಎಷ್ಟೇ ಹಾಳಾದರೂ ಇಲ್ಲಿ ಲೋಕಲ್ ರೈಲು ಮತ್ತಿತರ ವ್ಯವಸ್ಥೆಗಳು ಚೆನ್ನಾಗಿವೆ ಎಂದು ಅಂದುಕೊಂಡ ಉಮ್ಮರ್. ಉಮ್ಮರ್ ಹೋಟೆಲ್ ತಲುಪುವುದಕ್ಕೆ ಸರಿಯಾಗಿ ಅವನ ಮೊಬೈಲ್ ರಿಂಗ್ ಆಗುತ್ತದೆ. ಅದನ್ನೆತ್ತಿ ನೋಡಿದರೆ, ಅದ್ಯಾವುದೋ ಮಂಗಳೂರಿನ ಕಡೆಯ ಲ್ಯಾಂಡ್ ಲೈನ್ ನಂಬರ್. ಕರೆಯನ್ನು ರಿಸೀವ್ ಮಾಡುತ್ತಾನೆ... ಹಲೋ ನಾನ್ ಉಮ್ಮರ್ ಪಲಕಪರೆಯ್ಯೊ. ಆದರೆ ಮರುಕ್ಷಣ...

ಅವನ ಹೆಸರು ಜವಾನ್ ರಾಮ್‌ದೇವ್ ಸಿಂಗ್. ಸೈನ್ಯದಲ್ಲಿ 'ಜವಾನ್' ಆಗಿದ್ದರಿಂದ ಅವನ ಹೆಸರು ಹಾಗಿದ್ದರೂ ಅವನಿಗೆ ಜವಾನ್ ಎನ್ನುವುದು ತನ್ನ ಹೆಸರಲ್ಲ ಎನ್ನುವುದು ಮರೆತೇಹೋಗಿತ್ತು. ಈ ದಿನಗಳಲ್ಲಿ ಅವನಿಗೆ ಬೆಂಗಳೂರಿನ ವಿಮಾನ ನಿಲ್ದಾಣದಲ್ಲಿ ನೇಮಕಾತಿಯಾಗಿತ್ತು. ಅವನಿಗೆ ಭದ್ರತಾ ತಪಾಸಣೆ ನಡೆಯುವ ಸ್ಥಳದ ಬಳಿ ನಿಂತು ಅಲ್ಲಿ ತಪಾಸಣೆ ನಡೆಯುವುದನ್ನು ನೋಡುವುದು ಭಲೇ ಮೋಜೆನಿಸುತ್ತಿತ್ತು. ಒಬ್ಬೊಬ್ಬರು ಒಂದೊಂದು ರೀತಿ ಕೈ ಎತ್ತಿ ಶೂನ್ಯ ದಿಟ್ಟಿಸುತ್ತಾ ನಿಲ್ಲುವುದು ಅವನಿಗೆ ಭಾರೀ ಕುತೂಹಲದ ವಿಷಯವಾಗಿತ್ತು. ಇವನು ಏನು ಯೋಚಿಸುತ್ತಿರಬಹುದು? ಮತ್ತಿವನು ಯಾಕೆ ಅಷ್ಟು ಗಲಿಬಿಲಿಗೊಂಡಿದ್ದಾನೆ? ಹೀಗೆ ಯೋಚಿಸುತ್ತ ಅವರನ್ನೇ ನೋಡುತ್ತ ನಿಲ್ಲುತ್ತಿದ್ದ. ಪ್ರತಿಯೊಬ್ಬರೂ ತಪಾಸಣೆಗೆ ಸಹಕರಿಸಲೆಂದು ಕೈ ಎತ್ತುವ ರೀತಿಯಿಂದಲೇ ಅವರ ವ್ಯಕ್ತಿತ್ವ, ಸಮಾಜದಲ್ಲಿ ಅವರಿಗಿರುವ ಸ್ಥಾನ ಅರ್ಥವಾಗುತ್ತದೆಯಲ್ಲವಾ ಎಂದು ಅಂದುಕೊಂಡು ಮಾನವ ಮನಃಶಾಸ್ತ್ರದ ಮರುಶೋಧನೆಯನ್ನು ಮಾಡಿ ಅವನು ಸಂತಸಗೊಂಡಿದ್ದ. ಅಪ್ಪ-ಅಮ್ಮ ಇಂದಿರಾ ಗಾಂಧಿ ತೀರಿಹೋದಾಗ ನಡೆದ ಗಲಭೆಯಲ್ಲಿ ಕೊಲೆಗೀಡಾಗಿದ್ದರು. ಆಮೇಲೆ ಇವನು ಏಕಾಂಗಿಯಾಗಿ ಜೀವನ ಕಟ್ಟಿದ್ದನು. ಒಬ್ಬ ತಮ್ಮ ಅಜಿತ್ ಸಿಂಗ್ ಅದೇ ಸಂದರ್ಭದಲ್ಲಿ ಅಮೆರಿಕಾಗೆ ಓಡಿಹೋಗಿ ಅಲ್ಲಿ ಟ್ಯಾಕ್ಸಿ ಚಾಲಕನಾದ. ಅವನು




ಸತ್ತವರ ಸಂಖ್ಯೆ ಸದ್ಯಕ್ಕೆ ಸಿಕ್ಕ ವರದಿಯಂತೆ ಐವರು. ಹೆಚ್ಚಿನ ವಿವರಗಳು ಇನ್ನೂ ಸಿಕ್ಕಿಲ್ಲ. *** ಮಹಾರಾಷ್ಟ್ರದಲ್ಲಿ ಮುಂದುವರೆದ ಮಹಾರಾಷ್ಟ್ರೇತರರ ಹತ್ಯೆಯ ಸರಣಿ ಮುಂದುವರೆಯುತ್ತಾ ಇಂದು ಮತ್ತೊಂದು ಹತ್ಯೆ ನಡೆದಿದೆ. ಹತರಾದವರ ಹೆಸರು ಇನ್ನೂ ತಿಳಿದುಬಂದಿಲ್ಲ. ಅವರು ಬಿಹಾರ ಮೂಲದವರೆಂದು ತಿಳಿದು ಬಂದಿದೆ. ಹತ್ಯೆಯನ್ನು ಮುಂಬೈನ ಪ್ರಮುಖ ಮುಖಂಡರು ಖಂಡಿಸಿದ್ದಾರೆ. *** ನಿನ್ನೆ ನಡೆದ ಕನ್ನಡ-ತಮಿಳು ಗಲಭೆಯಲ್ಲಿ ನಷ್ಟ ಅನುಭವಿಸಿದವರಿಗೆ ತಲಾ ಒಂದು ಲಕ್ಷ ಪರಿಹಾರವನ್ನು ಕರ್ನಾಟಕದ ಮಾನ್ಯ ಮುಖ್ಯಮಂತ್ರಿಗಳಾದ ಚಿನ್ನಪ್ಪ ಗೌಡರು ಘೋಷಿಸಿದ್ದಾರೆ. *** ಹಾಗೂ ಭಾರತವು ರೋಮಾಂಚಕ ರೀತಿಯಲ್ಲಿ ಆಸ್ಟ್ರೇಲಿಯಾವನ್ನು ಕ್ರಿಕೆಟ್ ಪಂದ್ಯದಲ್ಲಿ ಸೋಲಿಸಿ ಸರಣಿಯನ್ನು ಗೆದ್ದುಕೊಂಡಿದ್ದಾರೆ. *** ಇನ್ನು ವಾರ್ತೆಗಳ ವಿವರ...




# ಕೇಂದ್ರ ಸಾಹಿತ್ಯ ಅಕಾದೆಮಿ

ದಕ್ಷಿಣ ಪ್ರಾದೇಶಿಕ ಕಚೇರಿ, ಸೆಂಟ್ರಲ್ ಕಾಲೇಜ್ ಆವರಣ
ಡಾ|| ಬಿ. ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು-560001



ತೀ. ನಂ. ಶ್ರೀಕಂಠಯ್ಯ
*ತೀ. ನಂ. ಶಂಕರನಾರಾಯಣ*
ಬೆಲೆ : ರೂ. 25/-



ತ.ರಾ.ಸು.
*ಎಂ. ಎಸ್. ಪಾಟೀಲ*
ಬೆಲೆ : ರೂ. 40/-



ಶ್ರೀರಂಗ
*ಎನ್ಕೆ. ಕುಲಕರ್ಣಿ*
ಬೆಲೆ : ರೂ. 40/-



ರಾಷ್ಟ್ರಕವಿ ಕುವೆಂಪು
*ಪ್ರಭುಶಂಕರ*
ಬೆಲೆ : ರೂ. 40/-



ಆರ್. ಕಲ್ಯಾಣಮ್ಮ
*ಎಸ್. ಡಿ. ಶಶಿಕಲಾ*
ಬೆಲೆ : ರೂ. 40/-



ಮಧುರಚೆನ್ನ
*ಗುರುಲಿಂಗ ಕಾಪಸೆ*
ಬೆಲೆ : ರೂ. 40/-



ಅ. ನ. ಕೃಷ್ಣರಾಯರು
*ಜಿ. ಎಸ್. ಆಮೂರ*
ಬೆಲೆ : ರೂ. 40/-



ಕೆ. ಜಿ. ಶಂಕರ ಪಿಳ್ಳೆಯವರ ಕವಿತೆಗಳು
*ಕೆ. ಜಿ. ಶಂಕರಪಿಳ್ಳೆ*
*ಅನು : ತೇರ್ಳಿ ಎನ್. ಶೇಖರ್*
ಬೆಲೆ : ರೂ. 120/-



ಸೂಫಿ ಹೇಳಿದ ಕಥೆ
*ಮೂಲ : ಕೆ. ಪಿ. ರಾಮನುಣ್ಣಿ*
*ಅನು : ಅಶೋಕ ಕುಮಾರ್*
ಬೆಲೆ : ರೂ. 100/-



ಕೇತು ವಿಶ್ವನಾಥ ರೆಡ್ಡಿ ಕತೆಗಳು
*ಮೂಲ : ಕೇತು ವಿಶ್ವನಾಥರೆಡ್ಡಿ*
*ಅನು : ಮೀರಾಸಾಬಿಹಳ್ಳಿ ಶಿವಣ್ಣ*
ಬೆಲೆ : ರೂ. 120/-



ನ ಹನ್ಯತೆ
*ಮೈತ್ರೇಯಿ ದೇವಿ*
*ಅನು : ಗೀತಾ ವಿಜಯಕುಮಾರ್*
ಬೆಲೆ : ರೂ. 250/-



ಸುಂದರಿಯರು ಸುಂದರರು
*ಉರೂಬ್*
*ಅನು : ಮೋಹನ ಕುಂಟಾರ್*
ಬೆಲೆ : ರೂ.250/-



ಮತ್ತಾರೂ ಅಲ್ಲ
*ಕುಂವರ್ ನಾರಾಯಣ*
*ಅನು : ಟಿ. ಜಿ. ಪ್ರಭಾಶಂಕರ್ 'ಪ್ರೇಮಿ'*
ಬೆಲೆ : ರೂ. 100/-



ಶ್ರೀ ಬಸವಣ್ಣನವರ ವಚನ ಸಂಗ್ರಹ
*ಸಂ : ಸ. ಸ. ಮಾಳವಾಡ*
ಬೆಲೆ : ರೂ. 65/-



ಬಿಳಿಯ ಲಕೋಟೆ
*ಮತಿನಂದಿ*
*ಅನು : ರಮಾ*
ಬೆಲೆ : ರೂ. 100/-



ಆಧುನಿಕ ಮಹಾಭಾರತ
*ಮೂಲ : ಗುಂಟೂರು ಶೇಷೇಂದ್ರ ಶರ್ಮ*
*ಅನು : ಅರ್ಕಸಾಲಿ ವೃಷಭೇಂದ್ರಾಚಾರ್*
ಬೆಲೆ : ರೂ. 200/-



ಲ ರೂಜ ಎ ಲ ನ್ವಾರ
*ಸ್ತಾಂದಾಲ*
*ಅನು : (ಶ್ರೀಮತಿ) ಶ್ರೀ ಹರ್ಲೆಕರ್*
ಬೆಲೆ : ರೂ. 350/-



ನೆಲವೆದ್ದು ಬಡಿಯಿತು
*ವಿಶ್ವಾಸ ಪಾಟೀಲ*
*ಅನು : ಚಂದ್ರಕಾಂತ ಪೋಕಳೆ*
ಬೆಲೆ : ರೂ. 350/-



ಒಂದು ಗಿಡ ಮತ್ತು ಎರಡು ಹಕ್ಕಿಗಳು
*ವಿಶ್ರಾಮ ಬೇಡೆಕರ*
*ಅನು : ಕುಮುದಿನಿ ಅಶೋಕ ಭೈರಣ್ಣವರ*
ಬೆಲೆ : ರೂ. 225/-

ಈವರೆಗೆ ಹಿಂದಿರುಗಿ ಬರಲಿಲ್ಲ. ಆಗೊಮ್ಮೆ ಈಗೊಮ್ಮೆ ಅಲ್ಲಿಂದ ದೂರವಾಣಿಸಿ ಇಲ್ಲಿನ ವಿಷಯಗಳನ್ನು ತಿಳಿದುಕೊಳ್ಳುತ್ತಾನೆ. ಇತ್ತೀಚೆಗೆ ಅದೂ ಕಡಿಮೆಯಾಗಿದೆ ಎಂದು ರಾಮ್‌ದೇವ್ ಸಿಂಗ್‌ಗೆ ಅನಿಸುತ್ತಿದೆ. ಮತ್ತೊಬ್ಬ ತಮ್ಮ ರವಿದೇವ್ ಸಿಂಗ್ ದೆಹಲಿಯಲ್ಲಿ ಈಗ ಕೆಲಸದ ಹುಡುಕಾಟದಲ್ಲಿದ್ದಾನೆ. ರಾಮ್‌ದೇವ್‌ನ ಹೆಂಡತಿ ಲಜ್ಜೋ ಈಗ ದೆಹಲಿಯಲ್ಲಿ ಇದ್ದಾಳೆ. ಅವಳೊಂದಿಗೇ ರವಿದೇವ್ ಸಿಂಗ್ ಇದ್ದಾನೆ. ಇಂದೂ ಅಂಥದ್ದೇ ಒಂದು ಮಾಮೂಲು ದಿನ. ದೆಹಲಿಯಲ್ಲಿ ಯಾವುದೋ ಕಾರಣದಿಂದ ವಿಮಾನ ವಿಳಂಬವಾಗಿ ಇಡೀ ದೇಶದಾದ್ಯಂತ ವಿಮಾನಗಳ ಚಲನವಲನ ಏರುಪೇರಾಗಿತ್ತು. ಅಂದೇಕೋ ಕರ್ತವ್ಯದಲ್ಲಿದ್ದಾಗಲೇ ಜವಾನ್ ರಾಮ್‌ದೇವ್ ಸಿಂಗ್‌ಗೆ ತನ್ನ ಹೆಂಡತಿ ಲಜ್ಜೋನ ನೆನಪು ತುಂಬಾ ಕಾಡಲಾರಂಭಿಸಿತ್ತು. ಸ್ವಲ್ಪ ಹೊತ್ತು ಮೀನಾಮೇಷ ಎಣಿಸಿದ ಜವಾನ್ ರಾಮ್‌ದೇವ್ ಪಕ್ಕದಲ್ಲೇ ಇದ್ದ ದೂರವಾಣಿ ಅಂಗಡಿಯತ್ತ ನಡೆದ. ಅಲ್ಲಿ ಎಸ್.ಟಿ.ಡಿ. ಎಂದು ಹೇಳಿ ಮನೆಯ ಸಂಖ್ಯೆ ಡಯಲ್ ಮಾಡಿದ. ತುಂಬಾ ಹೊತ್ತು ರಿಂಗ್ ಆದರೂ ಅತ್ತಲಿಂದ ಯಾರೂ ದೂರವಾಣಿ ಎತ್ತಲಿಲ್ಲ. ತಮ್ಮನೊಡನೆ ಪೇಟೆ ಕಡೆ ಏನಾದರೂ ಹೋಗಿರಬಹುದೇ ಎಂದು ಅಂದುಕೊಂಡು ಅವನ ಮೊಬೈಲ್ ಸಂಖ್ಯೆಯನ್ನು ಡಯಲ್ ಮಾಡಿದ. ಅವನ ತಮ್ಮ ರವಿದೇವ್ ಸಿಂಗ್ ಮೊಬೈಲ್ ಉತ್ತರಿಸಿದನು. ಇತ್ತಣಿಂದ ಜವಾನ್ ರಾಮ್‌ದೇವ್ ಸಿಂಗ್ ಹೇಳಿದ. ಓಯ್ !... ಮೆ ಜವಾನ್ ರಾಮ್‌ದೇವ್ ಬಾತ್ ಕರ್ರಿಯಾಸಿ. ಆದರೆ ಮರುಕ್ಷಣ...

ಮುಂಬೈ ತೀರದಲ್ಲಿ ಸಮುದ್ರದಲ್ಲಿ ಅಂದೇಕೋ ಅಲೆಗಳು ಜೋರಾಗಿ ಏಳುತ್ತಿದ್ದವು. ಜೇಸನ್ ಕೆಲಸ ಕಳೆದುಕೊಂಡು ಆಗಲೇ ನಾಲ್ಕು ದಿನವಾಗಿತ್ತು. ಅವನು ದಿನಾ ಕೆಲಸಕ್ಕೆ ಹೊರಡುತ್ತೇನೆಂದು ಹೊರಟು ಮನೆಯಿಂದ ಹೊರಗೆ ಬಂದು ಇಲ್ಲೇ ಸಮುದ್ರ ದಂಡೆಯಲ್ಲಿ ಕುಳಿತು ದಿನಪತ್ರಿಕೆಯಲ್ಲಿ ಬರುತ್ತಿರುವ ಕೆಲಸ ಖಾಲಿ ಇದೆ ಜಾಹೀರಾತುಗಳಿಗೆ ಸ್ಪಂದಿಸುತ್ತಾ ಇರುತ್ತಿದ್ದ. ಹೊಸ ಕೆಲಸ ಸಿಗುವವರೆಗೆ ತಾನು ಕೆಲಸ ಕಳೆದುಕೊಂಡದ್ದನ್ನು ಮನೆಯಲ್ಲಿ ಹೇಳಿದರೆ ಅದು ಉಂಟುಮಾಡಬಹುದಾದ ಕೋಲಾಹಲ ಅವನಿಗೆ ಚೆನ್ನಾಗಿ ಗೊತ್ತು. ಆದರೆ ಇಡೀ ಜಗತ್ತೇ ಆರ್ಥಿಕ ಹಿನ್ನಡೆಯಲ್ಲಿರಬೇಕಾದರೆ, ಅವನ ಕೆಲಸ ಹೋದದ್ದರಲ್ಲಿ ಏನು ವಿಶೇಷ? ಅದೂ ಹೇಳಿ ಕೇಳಿ ಅವನು ಒಂದು ಕಂಪನಿಯಲ್ಲಿ ಐ.ಟಿ. ಅನಾಲಿಸ್ಟ್. ಹೊಟ್ಟೆಗೇ ಇಲ್ಲದಾಗ ಇಂಥಾ ಲಕ್ಷುರಿ ಕೆಲಸಗಳನ್ನು ಕಂಪನಿಗಳು ಮುಚ್ಚುತ್ತಿವೆ, ಇದು ಸ್ವಾಭಾವಿಕವಲ್ಲವೇ? ಇಂದು ಯಾಕೋ ಅವನಿಗೆ ಮನಸ್ಸು ಶೂನ್ಯವಾಗಿಬಿಟ್ಟಿದೆ. ಏನೂ ಕೆಲಸ ಮಾಡುವ ಉತ್ಸಾಹವೇ ಇಲ್ಲ. ಸಣ್ಣಕೆ ಮಳೆ ಬೇರೆ ಬರುತ್ತಿತ್ತು. ಹಾಗೇ ಅವನು ಸಮುದ್ರ ತೀರದಲ್ಲೇ ನಡೆಯುತ್ತಾ ಹೊರಡುತ್ತಾನೆ. ಹಾಗೆ ಹೋಗುತ್ತಿರಬೇಕಾದರೆ, ಹಾದಿಯಲ್ಲಿ ಒಂದು ಪರ್ಸ್ ಬಿದ್ದದ್ದು ಸಿಗುತ್ತದೆ. ಅದನ್ನು ಹಾಗೇ ಎತ್ತಿಕೊಳ್ಳುತ್ತಾನೆ. ಸುತ್ತಮುತ್ತ ಯಾರೂ ಈ ಪರ್ಸ್ ಬಗ್ಗೆ ಗಮನ ಕೊಡದೇ ಇದ್ದದ್ದು ಕಂಡು ಅವನಿಗೆ ಅಚ್ಚರಿಯಾಗುತ್ತದೆ. ಅದನ್ನು ತೆರೆದು ನೋಡುತ್ತಾನೆ. ಅದರಲ್ಲಿ ನೂರು ರೂಪಾಯಿಯ ಎರಡು ನೋಟು ಮತ್ತು ಒಂದು ಹುಡುಗಿಯ ಫೋಟೋ ಇರುತ್ತದೆ. ಆ ಫೋಟೋವನ್ನು ತೆಗೆದು ನೋಡುತ್ತಾನೆ. ಆ ಫೋಟೋದ ಹಿಂದೆ ಒಂದು ಚೀಟಿಯಲ್ಲಿ ರಮೇಶ್, ಚಾಲುಕ್ಯ ಇನ್ಫೋಟೆಕ್, ಬೆಂಗಳೂರು ಎಂದು ವಿಳಾಸ ಇತ್ತು. ಫೋಟೋದಲ್ಲಿದ್ದ ಹುಡುಗಿ ಅಂದವಾಗಿದ್ದಳು. ಬಹುಶಃ ರಮೇಶ್ ಪ್ರೀತಿಸುವ ಹುಡುಗಿ ಇವಳಾಗಿರಬೇಕು ಎಂದುಕೊಂಡ ಜೇಸನ್. ಇವನು ಮುಂಬೈನಲ್ಲಿ ಏನು ಮಾಡುತ್ತಿದ್ದ? ಪಾಪ ಪರ್ಸ್ ಕಳೆದುಕೊಂಡು ಗಾಬರಿಯಲ್ಲಿರಬಹುದು ಎಂದುಕೊಂಡ. ಅಷ್ಟರಲ್ಲಿ ಆ ವಿಳಾಸದ ಕೆಳಗಡೆ ರಮೇಶನ ಮೊಬೈಲ್ ಸಂಖ್ಯೆಯೂ ಬರೆದದ್ದು ಕಂಡು ಅವನಿಗೆ ಒಮ್ಮೆ ಫೋನ್ ಮಾಡೋಣ. ಪರ್ಸ್ ವಾಪಾಸ್ ಕೊಟ್ಟ ನೆಪಕ್ಕೆ ಅವನ ಕಂಪನಿಯಲ್ಲಿ ಏನಾದರೂ ಕೆಲಸ ಕೊಟ್ಟರೂ ಕೊಟ್ಟನೇ ಎಂದುಕೊಂಡ ಜೇಸನ್. ಮರುಕ್ಷಣದಲ್ಲೇ ಛೆ! ಎಂಥಾ ಹುಚ್ಚು ತನಗೆ. ಈ ರಮೇಶ ಕೂಡಾ ನನ್ನಂತೆ ಕೇವಲ ಒಬ್ಬ ಕೆಲಸ ಮಾಡುವವನಿರಬಹುದು. ಕಂಪನಿಯ ಮಾಲಿಕನೇ ಆಗಿರಬೇಕೆಂದೇನೂ ಇಲ್ಲವಲ್ಲಾ ಎಂದು ತನ್ನಷ್ಟಕ್ಕೆ ತಾನೇ ನಗುತ್ತಾನೆ. ಏನಾದರೂ ಪಾಪ ಪರ್ಸ್ ವಾಪಾಸ್ ಕೊಡೋಣ ಎಂದು ತನ್ನ ಮೊಬೈಲ್ ತೆಗೆದು ಸಂಖ್ಯೆ ಡಯಲ್ ಮಾಡುತ್ತಾನೆ. ಆದರೆ ಆ ಸಂಖ್ಯೆ ಬೆಂಗಳೂರಿನದ್ದಾಗಿರುತ್ತದೆ ಮತ್ತು ಜೇಸನ್ನಿನ ಮೊಬೈಲಿನಲ್ಲಿ ಎಸ್.ಟಿ.ಡಿ.ಗೆ ಬೇಕಾದಷ್ಟು ಹಣ ಇರುವುದಿಲ್ಲ. ಹಾಳಾಗಲಿ ಎಂದು ಪಕ್ಕದಲ್ಲಿದ್ದ ಹೋಟೆಲ್ ರಾಜ್‌ಕಮಲ್ ಬಳಿಯ ದೂರವಾಣಿ ಅಂಗಡಿಗೆ ಹೋಗುತ್ತಾನೆ. ಅಲ್ಲಿ ಇದ್ದ ಅಂಗಡಿಯಲ್ಲಿ ಜನ ಸೇರಿದ್ದರು. ಸಣ್ಣ ಕಪ್ಪು-ಬಿಳಿ ಟಿ.ವಿ.ಯಲ್ಲಿ ಜನ ಕ್ರಿಕೆಟ್ ನೋಡುತ್ತಿದ್ದರು. ಭಾರತ ಈಗ ನಾಲ್ಕು ವಿಕೆಟ್ ಕಳೆದುಕೊಂಡಿತ್ತು. ಆದರೆ ರನ್ ಧಾರಣೆ ಚೆನ್ನಾಗಿದ್ದದ್ದರಿಂದ ಜನ ಕುತೂಹಲದಿಂದ ಪ್ರತಿ ಬಾಲನ್ನು ಬಿಡದೇ ನೋಡುತ್ತಿದ್ದರು. ಜೇಸನ್ನಿಗೆ ಅದು ಅಷ್ಟಾಗಿ ಆಸಕ್ತಿಯ ವಿಷಯವಲ್ಲ. ಅವನು ದೂರವಾಣಿ ಎತ್ತಿಕೊಂಡು ಅಲ್ಲಿ ರಮೇಶನ ಸಂಖ್ಯೆ ಒತ್ತಿ ಕಿವಿಯಿಡುತ್ತಾನೆ. ಹಲೋ... ದಿಸ್ ಈಸ್ ಜೇಸನ್ ಸ್ಪೀಕಿಂಗ್. ಆದರೆ ಮರುಕ್ಷಣ...

# ಶಕ್ತಿ

ಪಂಚಭೂತಗಳಿಂದ

ಸೃಷ್ಟಿಯಲ್ಲವೇ

ಈ ದೇಹ

ಅವೆಲ್ಲವು ಅಡಗಿರುವ

ಒಂದು ಶಕ್ತಿ

ಅಮ್ಮ



**ಕಮಲಂ ಅರಸು**
ನಂ.೧೧, ೧೧ನೇ ಅಡ್ಡರಸ್ತೆ
ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೨

ತ್ರಿಪುರಾರಿ ಶರನ್, ಉಮ್ಮರ್ ಫಾರೂಕ್ ಕೆಲಸಕ್ಕೆ ಹೋಗಿ ಆದ ಮೇಲೆ ಅಂದಿನ ಅವನ ಕೆಲಸಕ್ಕೆ ಹೊರಟ. ಅಂದು ಮಧ್ಯಾಹ್ನ ಹನ್ನೊಂದು ಗಂಟೆಗೆ ಯಾವುದೋ ಒಬ್ಬ ನಿರ್ದೇಶಕನೊಂದಿಗೆ ಇವನ ಭೇಟಿ ಇತ್ತು. ಅವನಿಗೆ ಕಥೆ ಇಷ್ಟವಾದರೆ ಮುಂದೆ ಅದನ್ನು ಚಿತ್ರಕಥೆಯನ್ನಾಗಿ ಬರೆಯುವ ಅವಕಾಶ ಸಿಗಲಿತ್ತು ತ್ರಿಪುರಾರಿಗೆ. ದಾದರಿನಲ್ಲಿರುವ ಇರಾನಿ ಹೋಟೆಲಿನಲ್ಲಿ ಸಿಗೋಣ, ಹೆಚ್ಚು ಜನ ಇರೋದಿಲ್ಲ, ಎಷ್ಟೊತ್ತು ಕುಳಿತರೂ ಏನೂ ಹೇಳೋದಿಲ್ಲ ಎಂದು ಇವರ ನಡುವೆ ನಿಶ್ಚಯವಾಗಿತ್ತು. ಹಾಗಾಗಿ ತ್ರಿಪುರಾರಿ ಹತ್ತೂವರೆಯ ಸುಮಾರಿಗೆ ಇರಾನಿ ಹೋಟೆಲ್ ತಲುಪಿದ. ಎರಡು ಚಾ ಇಳಿದಾಗುವಾಗ ಗಂಟೆ ಹನ್ನೆರಡಾಗಿತ್ತು. ನಿರ್ದೇಶಕ ಮಹಾಶಯನ ಪತ್ತೆ ಇಲ್ಲ. ಇವನೆಲ್ಲಿ ಹಾಳಾಗಿಹೋದ ಎಂದು ತ್ರಿಪುರಾರಿಗೆ ಚಿಂತೆ ಹತ್ತಿತು. ಯಾವುದಕ್ಕೂ ಅವನಿಗೆ ಒಮ್ಮೆ ದೂರವಾಣಿಸಿ ಎಲ್ಲಿದ್ದಾನೆ ಎಂದು ಕೇಳೋಣ ಎಂದುಕೊಂಡ. ಮೊಬೈಲ್ ಡಯಲ್ ಮಾಡಿ ಕಿವಿಗಿಟ್ಟರೆ ''ತಮ್ಮ ಅಕೌಂಟಿನಲ್ಲಿ ಹಣ ಇಲ್ಲದಿರುವುದರಿಂದ ಸೇವೆಯನ್ನು ರದ್ದುಪಡಿಸಲಾಗಿದೆ'' ಎಂದು ಮಧುರ ಕಂಠವೊಂದು ಉಲಿಯಿತು. ದರಿದ್ರ ಎಂದುಕೊಂಡು ಪಕ್ಕದಲ್ಲೇ ಇದ್ದ ಕಾಯಿನ್ ಫೋನ್ ಕಡೆ ಹೆಜ್ಜೆ ಇಟ್ಟ. ನಿರ್ದೇಶಕನ ದೂರವಾಣಿ ಕವರೇಜ್ ಕ್ಷೇತ್ರದ ಹೊರಗೆ ಇದೆ ಎಂದು ಕೇಳಿಬಂತು. ತ್ರಿಪುರಾರಿ, ಹೋಗಲಿ ಇಂದು ನಡೆಯುತ್ತಿರುವ ಕ್ರಿಕೆಟ್ಟಿನಲ್ಲಿ ಸ್ಕೋರ್ ಎಷ್ಟಾಯಿತು ಎಂದು ತಿಳಿಯೋಣ ಎಂದು ತನ್ನ ಗೆಳೆಯ ಮಾಧವನ್‌ಗೆ ದೂರವಾಣಿ ಕರೆ ಮಾಡಿದ, ಮತ್ತೆ ಕಾದ. ತ್ರಿಪುರಾರಿಗೆ ಸಣ್ಣಕೆ ಸಿಟ್ಟು ಬರಲಾರಂಭಿಸಿತ್ತು. ಬಿಹಾರಿ ಭಾಷೆಯಲ್ಲಿ ತನ್ನ ಅದೃಷ್ಟವನ್ನು ಅವನು ಹಳಿದುಕೊಂಡ. ಆದರೆ ಅವನ ಅದೃಷ್ಟ ನಿಜಕ್ಕೂ ಕೆಟ್ಟಿದ್ದು ಆಗಲೇ! ಅವನ ಪಕ್ಕದಲ್ಲೇ ಒಂದಿಷ್ಟು ಜನ ಮರಾಠೀ ರಕ್ಷಣಾ ವೇದಿಕೆಯವರಿದ್ದದ್ದು ಅವನಿಗೆ ಗೊತ್ತೇ ಇರಲಿಲ್ಲ! ಅಸಹಾಯಕ ಬಿಹಾರಿಯೊಬ್ಬ ಅವರಿಗೆ ಇಷ್ಟು ಸುಲಭಕ್ಕೆ ಎಂದೂ ಸಿಕ್ಕಿರಲಿಲ್ಲ. ಅಷ್ಟರಲ್ಲಿ ತ್ರಿಪುರಾರಿಯ ಫೋನ್ ಕನೆಕ್ಟ್ ಆಯಿತು. ಹಲೋ... ಹಮ್ ತ್ರಿಪುರಾರಿ ಬೋಲತ್ ಹೈ... ಆದರೆ ಮರುಕ್ಷಣ...

ಚಾಲುಕ್ಯ ಇನ್ಫೋಟೆಕ್‌ನ ಮಾಲಿಕ ರಮೇಶ ಮೂಲತಃ ತಮಿಳುನಾಡಿನವನು. ಆದರೆ ಅವನು ಓದಿದ್ದೆಲ್ಲಾ ಬೆಂಗಳೂರಿನಲ್ಲಿ. ಅವರಪ್ಪ ರೈಲ್ವೆ ಕೆಲಸದಲ್ಲಿದ್ದವರು. ಕೆಲಸದಿಂದ ನಿವೃತ್ತಿ ಹೊಂದಿದಾಗ ಅವರು ಬೆಂಗಳೂರಿನಲ್ಲಿ ನೇಮಕಗೊಂಡಿದ್ದರು.

ಬೆಂಗಳೂರಿನ ಹವಾಮಾನಕ್ಕೆ ಮನಸೋತು ಅವರು ಮತ್ತೆ ಇಲ್ಲೇ ನೆಲೆಸಿದ್ದರು. ಹಾಗಾಗಿ ರಮೇಶನೂ ಇಲ್ಲೇ ನೆಲೆ ನಿಂತು ತನ್ನ ಇಂಜಿನಿಯರಿಂಗ್ ಮುಗಿದ ನಂತರ ಕೆಲವು ಗೆಳೆಯರನ್ನು ಸೇರಿಸಿಕೊಂಡು ಚಾಲುಕ್ಯ ಇನ್ಫೋಟೆಕ್ ಎಂಬ ಸಾಫ್ಟ್‌ವೇರ್ ಸಂಸ್ಥೆಯೊಂದನ್ನು ಆರಂಭಿಸಿದ್ದ. ಮೊದಲು ತುಂಬಾ ಕಷ್ಟ ಇದ್ದರೂ, ಈಗ ಚೆನ್ನಾಗಿಯೇ ನಡೆಯುತ್ತಿದೆ ಅವರ ವ್ಯವಹಾರ. ಅವನು ಯಾವುದೋ ವ್ಯವಹಾರದ ಮೇಲೆ ಅಮೆರಿಕಾಗೆ ಹೋದಾಗ ಅಲ್ಲಿ ಅವನಿಗೆ ಸಿಕ್ಕಿದವಳೇ ಮೀನಾ ಬೋರಾ. ಅವಳು ಅಸ್ಸಾಮಿನ ಯಾವುದೋ ಸಣ್ಣ ಹಳ್ಳಿಯಿಂದ ಬಂದವಳು. ಅಲ್ಲಿನ ಉಗ್ರರ ಚಟುವಟಿಕೆಗಳ ನಡುವೆ ಬದುಕು ದುಸ್ತರ ಎಂದು ಅವಳ ತಂದೆ-ತಾಯಿ ಮಗಳನ್ನು ಮುಂಬೈಗೆ ತಮ್ಮ ಸಂಬಂಧಿಗಳ ಮನೆಗೆ ಕಳಿಸಿ ಅಲ್ಲೇ ಆಕೆಯನ್ನು ಬೆಳೆಸಿದರು. ಆಕೆ ಬಲು ಜಾಣೆ. ಸಿಕ್ಕ ಅವಕಾಶಗಳನ್ನು ಸಮರ್ಥವಾಗಿ ಬಳಸಿ ಇಂಜಿನಿಯರ್ ಆಗಿದ್ದಳು. ರಮೇಶನಿಗೂ ಮೀನಾ ಬೋರಾಳಿಗೂ ಅಮೆರಿಕಾದಲ್ಲಿ ಪ್ರೇಮಾಂಕುರವಾಗಿದ್ದು, ಮರಳಿ ಬಂದ ಮೇಲೆ ಅವರಿಬ್ಬರೂ ವಿವಾಹವಾಗಿ ಬೆಂಗಳೂರಿನಲ್ಲಿ ನೆಲೆನಿಲ್ಲುವ ನಿರ್ಧಾರಕ್ಕೆ ಬಂದಿದ್ದರು. ಈ ಕುರಿತು ಮಾತನಾಡಲೆಂದೇ ರಮೇಶ ಮುಂಬೈಗೆ ತೆರಳಿದ್ದನು. ಮೀನಾಳೊಂದಿಗೆ ಸಮುದ್ರ ತೀರದಲ್ಲಿ ವಿಹರಿಸುತ್ತ ಇರಬೇಕಿದ್ದರೆ ಅವನ ಪರ್ಸ್ ಬಿದ್ದುಹೋಗಿದ್ದು ಗೊತ್ತಾಗಲಿಲ್ಲ. ಆಗಲೇ ಅವನಿಗೆ ಕೆಟ್ಟ ಸುದ್ದಿ ಸಿಕ್ಕಿದ್ದು. ಬೆಂಗಳೂರಿನಲ್ಲಿ ಅಕಸ್ಮಾತ್ತಾಗಿ ಎದ್ದ ಕನ್ನಡ-ತಮಿಳು ದಂಗೆಯಲ್ಲಿ ಅವನ ಕಂಪನಿ ಚಾಲುಕ್ಯ ಇನ್ಫೋಟೆಕ್ ಪುಡಿ-ಪುಡಿಯಾಗಿತ್ತು! ರಮೇಶನ ಜೀವಮಾನದ ಕನಸು ನುಚ್ಚುನೂರಾಗಿತ್ತು. ರಮೇಶ ತುರ್ತಾಗಿ ಬೆಂಗಳೂರಿಗೆ ಮರಳುವ ತಯಾರಿ ಮಾಡಿದ. ಮರುದಿನ ಬೆಳಗ್ಗಿನ ವಿಮಾನವೇ ಅವನಿಗಿದ್ದ ಗತಿ. ಮರಳಿ ಹೋಟೆಲಿಗೆ ಬಂದಾಗ ಅವನಿಗೆ ತನ್ನ ಪರ್ಸ್ ಕಳೆದದ್ದು ಗೊತ್ತಾದರೂ ಇನ್ನು ಹುಡುಕುವುದು ವ್ಯರ್ಥ ಎಂದು ಸುಮ್ಮನಾದ. ಮರುದಿನ ಅವನು ಬೆಂಗಳೂರಿಗೆ ಮರಳುತ್ತಿದ್ದ. ದೆಹಲಿಯಲ್ಲಿ ವಿಮಾನ ವಿಳಂಬವಾದ್ದರಿಂದ ಅಂದು ಮುಂಬೈ-ಬೆಂಗಳೂರು ವಿಮಾನವೂ ವಿಳಂಬವಾಗಿತ್ತು. ಅಂತೂ ಇಂತೂ ಅವನು ಬೆಂಗಳೂರು ತಲಪುವಾಗ ಮಧ್ಯಾಹ್ನವಾಗಿತ್ತು. ವಿಮಾನ ನಿಲ್ದಾಣದಲ್ಲಿ ತನ್ನ ಬ್ಯಾಗೇಜ್ ತೆಗೆದುಕೊಂಡು ತುರ್ತಾಗಿ ಅವನು ಹೊರಗೆ ಹೋಗುತ್ತಿರಬೇಕಾದರೆ ಅವನ ಮೊಬೈಲ್ ರಿಂಗ್ ಆಯಿತು. ನೋಡಿದರೆ ಮುಂಬೈ ಸಂಖ್ಯೆ. ಹಲೋ... ನಾನು ರಮೇಶ ಮಾತನಾಡ್ತಾ ಇದೇನೆ. ಆದರೆ ಮರುಕ್ಷಣ...

ಲಜ್ಜೋ ಮತ್ತು ರವಿದೇವ್ ಸಿಂಗ್ ಕನಾಟ್ ಪ್ಲೇಸಿನಲ್ಲಿ ಯಾವುದೋ ಬಳಸಿಟ್ಟ ಪುಸ್ತಕಗಳನ್ನು ಕೊಂಡುಕೊಳ್ಳಲೆಂದು ಬಂದಿದ್ದರು. ಲಜ್ಜೋಳಿಗೆ ಪುಸ್ತಕಗಳ ಬಗ್ಗೆ ಅಷ್ಟೇನೂ ಆಸಕ್ತಿ ಇರಲಿಲ್ಲವಾದರೂ ಕನಾಟ್ ಪ್ಲೇಸಿನಲ್ಲಿ ಸಿಗುವ ಐಸ್‌ಕ್ರೀಮ್ ಬಜ್ಜಿಯ ಕಡೆಗಿನ ಒಲವು ಆಕೆಯನ್ನು ರವಿದೇವ್ ಸಿಂಗ್ ಜೊತೆಗೆ ಬರುವಂತೆ ಮಾಡಿತ್ತು. ಮದುವೆಯಾದ ಮೇಲೆ ಮೊದಲಬಾರಿಗೆ ಜವಾನ್ ರಾಮ್‌ದೇವ್ ಸಿಂಗ್ ಲಜ್ಜೋಳನ್ನು ಇಲ್ಲಿಗೇ ಕರೆದುಕೊಂಡು ಬಂದು ಇದೇ ಐಸ್‌ಕ್ರೀಮ್ ಬಜ್ಜಿ ತಿನ್ನಿಸಿದ್ದ. ಹೊರಗಿನಿಂದ ಬಿಸಿ-ಬಿಸಿ ಹಿಟ್ಟಿನ ಪಾಕ, ಒಳಗಡೆ ತಂಪನೆಯ ಐಸ್‌ಕ್ರೀಮ್ ಮೊದಲಬಾರಿಗೆ ತಿಂದಾಗ ಲಜ್ಜೋಳಿಗೆ ಇದು ತನ್ನ ಗಂಡನಂತೆಯೇ ಎನಿಸಿತ್ತು. ಹೊರಗಿನಿಂದ ಜವಾನ್ ರಾಮ್‌ದೇವ್ ಸಿಂಗ್ ಕಠಿಣವಾಗಿ ಕಾಣುತ್ತಿದ್ದ. ಬಹುಶಃ ಅವನ ವೃತ್ತಿಯ ಬೇಡಿಕೆಯಾಗಿತ್ತು ಅದು. ಆದರೆ ಜವಾನ್ ರಾಮ್‌ದೇವ್ ಸಿಂಗ್ ಬಹಳ ರಸಿಕ. ಹೆಂಡತಿಯೆಂದರೆ ಪ್ರಾಣ. ಸಿಕ್ಕ ಚಿಕ್ಕ-ಚಿಕ್ಕ ಅವಕಾಶಗಳಲ್ಲಿ ತನ್ನ ಪರಿಧಿಯಲ್ಲಿ ಲಜ್ಜೋಳ ಬಾಳನ್ನು ಅವಿಸ್ಮರಣೀಯಗೊಳಿಸಿದ್ದ. ಎಷ್ಟೆಂದರೂ ಅಪ್ಪ-ಅಮ್ಮ ಇಲ್ಲದ ಜವಾನ್ ರಾಮ್‌ದೇವ್ ಸಿಂಗ್‌ನನ್ನು ಲಜ್ಜೋ ಪ್ರೀತಿಸಿ ತನ್ನ ಸ್ವಂತ ಅಪ್ಪ-ಅಮ್ಮಂದಿರನ್ನು ಧಿಕ್ಕರಿಸಿ ಮದುವೆಯಾಗಿದ್ದಳು. ಹಾಗಾಗಿ ಜವಾನ್ ರಾಮ್‌ದೇವ್ ಸಿಂಗ್ ಆಕೆಯನ್ನು ತನ್ನ ಜೀವಕ್ಕಿಂತ ಮಿಗಿಲಾಗಿ ಪ್ರೀತಿಸುತ್ತಿದ್ದ. ಅವನು ಬೆಂಗಳೂರಿಗೆ ನಾಲ್ಕು ತಿಂಗಳ ಮಟ್ಟಿಗೆ ಕೆಲಸದ ಮೇಲೆ ಹೋದಾಗಿನಿಂದ ಲಜ್ಜೋ ಇದು ಎರಡನೇ ಬಾರಿ ಇಲ್ಲಿಗೆ ಬಂದು ಐಸ್‌ಕ್ರೀಮ್ ಬಜ್ಜಿ ತಿನ್ನುತ್ತಿರುವುದು.. ರವಿದೇವ್ ಸಿಂಗ್ 'ಅತ್ತಿಗೆ, ಇದು ಬರೇ ಒಂದು ತಿಂಡಿ ಅಣ್ಣ ಅಲ್ಲ. ಇದರ ಮೇಲೆ ಯಾಕಿಷ್ಟು ಪ್ರೀತಿಯೋ" ಎಂದು ತಮಾಷೆ ಮಾಡುತ್ತಿದ್ದ. ಕನಾಟ್ ಪ್ಲೇಸ್


*With Best Compliments From*



**KANTHI PROPERTIES**

# 34/1, 2nd Floor, Suraj Brigade
'G' Block, Sahakara Nagar, Bangalore - 560 092.
☎ : 080-23621822 / 23621866 Fax: 080-23621866

# ಚೌಕಾಬಂದಿ

ಬೆನ್ನಮುಖದಲಿ ಕಲ್ಲಿನ ಬಿಲ್ಲೆ ಬಗೆದು
ಜಿಗಿದವದ್ದೇ ಜಿಗಿದದ್ದು
ಕಡೆಯ ಮನೆ ಬಂತೆಂದರೆ
ಮತ್ತೆ ಹೊಸ ಗಿಲೀಟು

ನಯನಯ ತೇದ ಹಂಚಿನ ಚೂರು
ಸಪಾಟು ಕಲ್ಲು, ಮಾವಿನ ಗೊರಟೆ ಯಾವುದೂ
ಎಲ್ಲವನೂ ಪಾದದ ತುದಿಯಲಿ ಚಿಮ್ಮಿ
ಮುಖವಾರೆ ಮಾಡಿ ಕಣ್ಣರೆಪ್ಪೆ ಮೇಲಿಟ್ಟು ಕುಂಟು
ಕುಪ್ಪಳಿಸು, ಲಂಗ ಸಿಗಿಸು ನಡಕೆ ಹಾ ಹಾಗೆ !

ಚಿಮ್ಮು ಪುಟಿ
ಎಲ್ಲ ಚೌಕದ ಒಳಗೇ
ಗೆರೆ ದಾಟುವುದಲ್ಲ, ತುಳಿದರೂ ಔಟು
ನಾಜೂಕು. ಕಡೆಯ ಮನೆ ಮುಟ್ಟಿ ಕಾಲೂರು
ಉಸಿರಾರಿಸಿಕೊ. ಈಗ ಗೆಲ್ಲುವವರ್ಯಾರಿಲ್ಲ.

ಸಿಂಬಳ ಒರೆಸಿಕೊಳ್ಳಲು ಕಲಿವ ಮುಂಚೆಂದ
ಕಲಿತದ್ದು ಕುಂಟಾಬಿಲ್ಲೆ,
ಈಗಲೂ ಜಿಗಿವ ಕಾಲುಗಳಿಗದೇ ಶಿಸ್ತು
ಮನಸ ನಕಾಶೆಯಲಿ ಚೌಕು, ಚೌಕು, ಚೌಕು.

ವಿನಯಾ
'ನೆಮ್ಮದಿ', ಸಂಖ್ಯೆ ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ - ೫೮೦೦೦೩.

ಲುಪಿದಾಗ ಗಂಟೆ ಒಂಭತ್ತಾಗಿತ್ತು. ಐಸ್‌ಕ್ರೀಮ್ ಬಜ್ಜಿಯ ಅಂಗಡಿ ಇನ್ನೂ ತೆರೆದಿರಲಿಲ್ಲ. ರವಿದೇವ್ ಸಿಂಗ್ ತನಗೆ ಬೇಕಾದ ಪುಸ್ತಕಗಳನ್ನು ಆಯಲು ಆರಂಭಿಸಿದ. ಗಂಟೆ ಸುಮಾರು ಹನ್ನೆರಡಾಗುತ್ತಾ ಬಂದಾಗ ಐಸ್‌ಕ್ರೀಮ್ ಬಜ್ಜಿ ಅಂಗಡಿಯವನು ಬಾಗಿಲು ತೆರೆದ. ಲಜ್ಜೋ ರವಿದೇವ್ ಸಿಂಗ್‌ಗೆ ಹೇಳಿ ಅತ್ತ ಹೋಗುತ್ತಲೇ ರವಿದೇವ್ ಸಿಂಗ್‌ನ ಮೊಬೈಲ್ ರಿಂಗ್ ಆಗಲಾರಂಭಿಸಿತು. ನೋಡಿದರೆ ಬೆಂಗಳೂರಿನ ಸಂಖ್ಯೆ. ಹೋ! ಅಣ್ಣನೇ ಇರಬೇಕೆಂದು ಫೋನ್ ಎತ್ತಿದ. ಹಲೋ... ಮೈ ರವಿದೇವ್ ಸಿಂಗ್ ಬಾತ್ ಕರ್ ರಹಾ ಹೂಂ... ಆದರೆ ಮರುಕ್ಷಣ...

ಇಂದಿರಾ ಪ್ರಮುಖ ಸುದ್ದಿವಾಹಿನಿಯೊಂದರಲ್ಲಿ ಕೆಲಸಕ್ಕೆ ಸೇರಿದ್ದಳು. ಇಂದು ಆಕೆ ಮೊದಲ ಬಾರಿಗೆ ದೂರದರ್ಶನ ಪರದೆಯ ಮೇಲೆ ಕಾಣಿಸಿಕೊಳ್ಳುವವಳಿದ್ದಳು. ಸಂಜೆ ಐದು ಗಂಟೆಯ ಸುದ್ದಿಯನ್ನು ಇಂದು ಅವಳು ಓದುವವಳಿದ್ದಳು. ಅವಳು ಸುದ್ದಿಯನ್ನು ಓದುವುದನ್ನು ದೇಶವಿಡೀ ಕೇಳಲಿದೆ ಎನ್ನುವ ವಿಷಯ ಆಕೆಗೆ ರೋಮಾಂಚನ ಉಂಟುಮಾಡಿತ್ತು. ಮೇಕಪ್ ಮುಗಿಯುತ್ತಿದ್ದಂತೆ ಇಂದಿರಾಳ ಎದೆಬಡಿತ ಜೋರಾಗಿತ್ತು. ಇನ್ನು ಕೇವಲ ಹತ್ತು ನಿಮಿಷಗಳಲ್ಲಿ ಆಕೆ ಇಡೀ ದೇಶದ ಮುಂದೆ ತನ್ನ ಮೋಹಕ ನಗು ಬೀರಲಿದ್ದಳು. ಭಾರತ ಅದೇ ಸ್ವಲ್ಪ ಹೊತ್ತಿನ ಮೊದಲು ಆಸ್ಟ್ರೇಲಿಯಾವನ್ನು ರೋಮಾಂಚಕ ರೀತಿಯಲ್ಲಿ ಕ್ರಿಕೆಟಿನಲ್ಲಿ ಸೋಲಿಸಿತ್ತು. ತನ್ನ ಮೊದಲ ದಿನವೇ ಇಂಥಾ ಸುದ್ದಿ ಸಿಕ್ಕಿದ್ದು ಇಂದಿರಾಳಿಗೆ ಸಂತೋಷಕೊಟ್ಟಿತ್ತು. ಅದನ್ನು ಹೇಗೆ ಹೇಗೆ ಹೇಳಬಹುದೆಂದು ಯೋಚಿಸುತ್ತಾ ಆಕೆ ಸ್ಟುಡಿಯೋ ಒಳಗೆ ಹೋದಳು. ಕೌನ್ಟ್ ಡೌನ್ ಆರಂಭವಾಯಿತು. ಹತ್ತು... ಒಂಭತ್ತು... ... ಮೂರು... ಎರಡು... ಒಂದು... ಗೋ! ಇಂದಿರಾ ತನ್ನ ಮುಂದೆ ಇದ್ದ ಟೆಲಿ-ಪ್ರಾಂಪ್ಟರ್ನ ಮೇಲೆ ಮೂಡಿಬರುತ್ತಿದ್ದ ಸುದ್ದಿಯನ್ನು ನೋಡುತ್ತಾ ಓದಲಾರಂಭಿಸಿದಳು. ಆದರೆ...

ನಮಸ್ಕಾರ. ನೀವು ನೋಡುತ್ತಿದ್ದೀರಿ ದೇಶಕಾಲ ಸುದ್ದಿವಾಹಿನಿಯನ್ನು. ನಾನು ಇಂದಿರಾ. ಮೊದಲಿಗೆ ಮುಖ್ಯವಾರ್ತೆಗಳು. ಇದೀಗಷ್ಟೇ ಬಂದ ಸುದ್ದಿಯಂತೆ, ಮುಂಬೈನ ರಾಜ್ ಮಹಲ್ ಹೋಟೆಲಿನ ಬಳಿ, ದೆಹಲಿಯ ಕನಾಟ್ ಪ್ಲೇಸಿನಲ್ಲಿ ಹಾಗೂ ಬೆಂಗಳೂರಿನ ವಿಮಾನ ನಿಲ್ದಾಣದಲ್ಲಿ ಉಗ್ರಗಾಮಿಗಳು ಪ್ರಬಲ ಸ್ಫೋಟಕಗಳಿಂದ ಸ್ಫೋಟ ನಡೆಸಿದ್ದಾರೆ. ದೇಶದ ಮೂರು ಮೂಲೆಗಳಲ್ಲಿ ಏಕಕಾಲಕ್ಕೆ ಇಂಥಾ ಉಗ್ರಗಾಮಿ ಚಟುವಟಿಕೆ ನಡೆದಿರುವುದನ್ನು ಪ್ರಪಂಚದ ಅನೇಕ ನಾಯಕರು ಖಂಡಿಸಿದ್ದಾರೆ. ಇದರ ಹಿಂದೆ ಪಾಕಿಸ್ತಾನದ ಕೈವಾಡ ಸಾಧ್ಯ ಎಂದು ಕೇಂದ್ರ ಸರಕಾರ ಮೊದಲ ಹೇಳಿಕೆ ನೀಡಿದೆ. ಸತ್ತವರ ಸಂಖ್ಯೆ ಸದ್ಯಕ್ಕೆ ಸಿಕ್ಕ ವರದಿಯಂತೆ ಐವರು. ಹೆಚ್ಚಿನ ವಿವರಗಳು ಇನ್ನೂ ಸಿಕ್ಕಿಲ್ಲ. *** ಮಹಾರಾಷ್ಟ್ರದಲ್ಲಿ ಮುಂದುವರೆದ ಮಹಾರಾಷ್ಟ್ರೇತರರ ಹತ್ಯೆಯ ಸರಣಿ ಮುಂದುವರೆಯುತ್ತಾ ಇಂದು ಮತ್ತೊಂದು ಹತ್ಯೆ ನಡೆದಿದೆ. ಹತರಾದವರ ಹೆಸರು ಇನ್ನೂ ತಿಳಿದು ಬಂದಿಲ್ಲ. ಅವರು ಬಿಹಾರ ಮೂಲದವರೆಂದು ತಿಳಿದು ಬಂದಿದೆ. ಹತ್ಯೆಯನ್ನು ಮುಂಬೈನ ಪ್ರಮುಖ ಮುಖಂಡರು ಖಂಡಿಸಿದ್ದಾರೆ. *** ನಿನ್ನೆ ನಡೆದ ಕನ್ನಡ-ತಮಿಳು ಗಲಭೆಯಲ್ಲಿ ನಷ್ಟ ಅನುಭವಿಸಿದವರಿಗೆ ತಲಾ ಒಂದು ಲಕ್ಷ ಪರಿಹಾರವನ್ನು ಕರ್ನಾಟಕದ ಮಾನ್ಯ ಮುಖ್ಯಮಂತ್ರಿಗಳಾದ ಚಿನ್ನಪ್ಪ ಗೌಡರು ಘೋಷಿಸಿದ್ದಾರೆ. *** ಹಾಗೂ ಭಾರತವು ರೋಮಾಂಚಕ ರೀತಿಯಲ್ಲಿ ಆಸ್ಟ್ರೇಲಿಯಾವನ್ನು ಕ್ರಿಕೆಟ್ ಪಂದ್ಯದಲ್ಲಿ ಸೋಲಿಸಿ ಸರಣಿಯನ್ನು ಗೆದ್ದುಕೊಂಡಿದೆ. *** ಇನ್ನು ವಾರ್ತೆಗಳ ವಿವರ...

ಉಮ್ಮರ್ ಫಾರೂಕ್, ತ್ರಿಪುರಾರಿ ಶರನ್, ಜವಾನ್ ರಾಮ್‌ದೇವ್ ಸಿಂಗ್, ರಮೇಶ್, ರವಿದೇವ್ ಸಿಂಗ್, ಜೇಸನ್ ಇವರುಗಳ ದೂರವಾಣಿ ಕರೆಯನ್ನು ಉತ್ತರಿಸುವವರು ಆ ದಿನ ಯಾರೂ ಇರಲಿಲ್ಲ.

ಅಭಯ ಸಿಂಹ
ನಂ. ೨೯೧ - ಎ, ೧೨ನೇ ಅಡ್ಡರಸ್ತೆ, ಐಡಿಯಲ್ ಹೋಮ್ಸ್,
ರಾಜರಾಜೇಶ್ವರಿ ನಗರ, ಬೆಂಗಳೂರು - ೫೬೦ ೦೯೮

ಹತ್ತನೇ ವರ್ಷಕ್ಕೆ ಕಾಲಿಡುತ್ತಿರುವ

'ಹೊಸತು' ಪತ್ರಿಕೆಗೆ

ಹಾರ್ದಿಕ ಶುಭಾಶಯಗಳು



# ಬೆಂಗಳೂರು ಬಾಡಿ ಬಿಲ್ಡರ್ಸ್ (ಪ್ರೈ) ಲಿಮಿಟೆಡ್




ಕೋಚ್ ಬಿಲ್ಡರ್ಸ್ ಮತ್ತು ಫ್ಯಾಬ್ರಿಕೇಟರ್ಸ್

43-43ಎ, 1ನೇ ಮುಖ್ಯರಸ್ತೆ, ನ್ಯೂ ಟಿಂಬರ್ ಯಾರ್ಡ್

ಮೈಸೂರು ರಸ್ತೆ, ಬೆಂಗಳೂರು - 560026.

ಟೆಲಿಫ್ಯಾಕ್ಸ್ : 080-26754308

# ಸಾಹಿತ್ಯದ ಅನುಸಂಧಾನಗಳು – ಸಂವಹನ



**ರಾಮಲಿಂಗಪ್ಪ ಟಿ. ಬೇಗೂರು**

**ಭೌತಿಕ ಸಮುದಾಯಗಳಿಗಿಂತ ಮಾನಸಿಕ ಸಮುದಾಯಗಳು ಹೆಚ್ಚಾಗುತ್ತಾ ಇವೆ. ಇಂಟರ್ನೆಟ್ಟನಲ್ಲಿ ಪತ್ರಿಕೆಗಳನ್ನು ನಡೆಸುವ- ಮಾಹಿತಿಗಳನ್ನು ವಿನಿಮಯ ಮಾಡಿಕೊಳ್ಳುವ-ಹೇಳಿಕೊಳ್ಳುವ ಬ್ಲಾಗುಗಳನ್ನು ನಿರ್ಮಿಸುವ ಒಂದು ಮಹಾ ಜಾಲವೇ ಇದೆ. ಇಂಥ ಕಡೆ ನಡೆಯುವ ಸಾಹಿತ್ಯದ ಅನುಸಂಧಾನ ಬಹು ಸೀಮಿತವಾದ ಸಮುದಾಯಗಳಲ್ಲ ನಡೆಯುತ್ತಿರುತ್ತದೆ. ಇಲ್ಲಿ ಸಾಹಿತ್ಯವು ಹೆಚ್ಚು ಹೆಚ್ಚು ಮಾಹಿತಿಯ ರೂಪದಲ್ಲಿ ಸಂವಹನಗೊಳ್ಳುತ್ತದೆ. ಯಾವಾಗ ಬೇಕಾದರೂ ಯಾರು ಬೇಕಾದರೂ ನೋಡಬಹುದಾದ ಸರಕಾಗಿ ಇದು ಬದ್ದಿರುತ್ತದೆ.**

ಸಾಹಿತ್ಯವನ್ನು ಸಮಾಜದ ಬೇರೆ ಬೇರೆ ವಲಯಗಳಲ್ಲಿ, ಬೇರೆ ಬೇರೆ ಸಂದರ್ಭಗಳಲ್ಲಿ ನಾವು ಬಳಸುತ್ತೇವೆ. ಕೆಲವೊಮ್ಮೆ ಸಾಹಿತ್ಯದೊಂದಿಗೆ ಒಡನಾಟ, ಮುಖಾಮುಖಿ ನಡೆಸುತ್ತ ಸಾಹಿತ್ಯಸಂಬಂಧಿ ಗೋಷ್ಠಿ, ಚರ್ಚೆ, ವಿಮರ್ಶೆ, ವಿಚಾರ ಸಂಕಿರಣ, ಕಮ್ಮಟ, ಹಬ್ಬ, ಕೇಳಿಕೆ, ಸಮ್ಮೇಳನ, ಜಾತ್ರೆ, ಭಜನೆ, ತಾಳಮದ್ದಲೆ, ನಾಟಕ, ಹರಿಕತೆ, ಹಾಡುಗಾರಿಕೆ ಇತ್ಯಾದಿಗಳನ್ನು ನಡೆಸುತ್ತೇವೆ. ಅಲ್ಲದೆ ವೈಯಕ್ತಿಕವಾದ ಸಾಹಿತ್ಯದ ಓದು, ಶೈಕ್ಷಣಿಕವಾದ ಸಾಹಿತ್ಯದ ಕಲಿಕೆ-ಬೋಧನೆಗಳೂ ನಮ್ಮಲ್ಲಿವೆ. ಹೀಗೆ ವ್ಯಕ್ತಿ ಮತ್ತು ಸಮುದಾಯದ ಎರಡೂ ನೆಲೆಯಲ್ಲಿ ಏಕಾಂತದ ಕ್ರಿಯೆಯಾಗಿ ಮತ್ತು ಸಾಮುದಾಯಿಕ ಕ್ರಿಯೆಯಾಗಿ ಎರಡೂ ಬಗೆಯಲ್ಲಿ ಸಾಹಿತ್ಯದ ಹೊಕ್ಕುಬಳಕೆಗಳಿವೆ. ಇಂಥ ಸಾಹಿತ್ಯದ ಜೊತೆಗಿನ ನಮ್ಮ ಹೊಕ್ಕುಬಳಕೆಗಳನ್ನು ಇಲ್ಲಿ ಸಾಹಿತ್ಯದ ಅನುಸಂಧಾನಗಳು ಎನ್ನಲಾಗಿದೆ. ಇಂಥ ಹತ್ತಾರು ಆಚರಣೆಗಳಲ್ಲಿನ ಭಿನ್ನ ಅನುಸಂಧಾನಗಳು ಸಾಹಿತ್ಯದ ಭಿನ್ನ ಭಿನ್ನ ಸಂವಹನ ಸಾಧ್ಯತೆಗಳನ್ನು, ಬಹುಮುಖಿಯಾದ ಸಂವಹನ ಸ್ವರೂಪಗಳನ್ನು ತೋರಿಸುತ್ತವೆ.

ಸಾಹಿತ್ಯದ ಅನುಸಂಧಾನಗಳಲ್ಲಿನ ಸಂವಹನದ ಸ್ವರೂಪವನ್ನು ಚರ್ಚಿಸುವ ಮೊದಲು ಸಾಹಿತ್ಯ ಎನ್ನುವುದು ಒಂದೇನಾ ಎಂದು ಕೇಳಿಕೊಳ್ಳಬೇಕಾಗಿದೆ. ನಮ್ಮಲ್ಲಿ ಪ್ರತಿಷ್ಠಿತ ಸಾಹಿತ್ಯ, ಮೌಖಿಕ ಸಾಹಿತ್ಯ, ಜನಪ್ರಿಯ ಸಾಹಿತ್ಯ, ಚಿತ್ರಸಾಹಿತ್ಯ, ಹೀಗೆ ಹಲವು ಸಾಹಿತ್ಯಗಳು ಇವೆ. ಜನಪ್ರಿಯ ಸಾಹಿತ್ಯ, ಚಿತ್ರಸಾಹಿತ್ಯಗಳು ಪ್ರತಿಷ್ಠಿತ ಸಾಹಿತ್ಯದ ಹೊರಗೇ ಉಳಿದಿವೆ. ಮೌಖಿಕ ಸಾಹಿತ್ಯದೊಂದಿಗೆ ಪ್ರತಿಷ್ಠಿತ ಸಾಹಿತ್ಯವು ಮುಖಾಮುಖಿ ಆಗುತ್ತಿದ್ದರೂ, ಮೌಖಿಕಕ್ಕೆ ಇನ್ನೂ ಎರಡನೆ ದರ್ಜೆತನ ಹೋಗಿಲ್ಲ. ಈ ಒಂದೊಂದು ಸಾಹಿತ್ಯಗಳೂ ಅಜಮಾಸು ತಮ್ಮದೇ ಆದ ಜನವಲಯಗಳನ್ನು ಹೊಂದಿವೆ ಮತ್ತು ಇಲ್ಲೆಲ್ಲ ಬದುಕಿನ ವಿನ್ಯಾಸಕ್ಕೂ ಮತ್ತು ಸಾಹಿತ್ಯದ ಅನುಸಂಧಾನವಿನ್ಯಾಸಕ್ಕೂ ಒಂದು ಅನ್ಯೋನ್ಯವಾದ ಸಂಬಂಧವಿದೆ. ಹೀಗಾಗಿ ಒಂದೊಂದು ಸಾಹಿತ್ಯಗಳಿಗೂ ಅವುಗಳದ್ದೇ ಆದ ಹೊಕ್ಕು ಬಳಕೆಗಳಿವೆ. ಇವುಗಳ ಅನುಸಂಧಾನ ಸ್ವರೂಪಗಳು, ವಿನ್ಯಾಸಗಳು ಭಿನ್ನ ಭಿನ್ನವಾಗಿವೆ. ಹಾಗಾಗಿ ಇವುಗಳ ಸಂವಹನ ಸ್ವರೂಪಗಳೂ ಭಿನ್ನ ಭಿನ್ನವಾಗಿವೆ.

ಆಧುನಿಕ ಪ್ರತಿಷ್ಠಿತ ಸಾಹಿತ್ಯವು ಹೆಚ್ಚು ಕಡಿಮೆ ಆಧುನಿಕೋತ್ತರತೆಗೆ ಗುರಿಯಾಗಿರುವ ಶಿಕ್ಷಿತ ಸಮುದಾಯದ ಓದುಗರಿಗೆ ಸೀಮಿತವಾಗುತ್ತಿದೆ. ವಿದ್ಯಾವಂತರೆಲ್ಲರೂ ಇದರ ಬಳಕೆದಾರರಲ್ಲ. ಸಾಹಿತ್ಯ ಎಲ್ಲರಿಗಲ್ಲ ಎನ್ನುವ ವಾತಾವರಣ ನಮ್ಮಲ್ಲಿದೆ. ಹೀಗಿರುವಾಗ ಸಾಹಿತ್ಯೇತರ ಸಮುದಾಯಗಳನ್ನು ಸಾಹಿತ್ಯದ ಓದುಗರು ಮತ್ತು ಗ್ರಾಹಕರನ್ನಾಗಿ ಮಾಡಿಕೊಳ್ಳುವ ಬಗ್ಗೆ, ಯಾರಿಗೆ ಯಾವ ರೀತಿಯ ಸಾಹಿತ್ಯ ಬೇಕಾಗಿದೆ ಎಂಬ ಬಗ್ಗೆ, ಅಕ್ಷರ ರೂಪಿ ಲಿಪಿಕ ಸಾಹಿತ್ಯ ಮಾತ್ರವೇ ಶ್ರೇಷ್ಠವಾದದ್ದೇ, ಸಾಹಿತ್ಯದ ಪುಸ್ತಕರೂಪಿ ಓದು ಮಾತ್ರವೇ ಸಂವಹನದಲ್ಲಿ ಮುಖ್ಯವಾದದ್ದೇ ಎಂಬ ಬಗ್ಗೆ, ಸಾಹಿತ್ಯ ಸಂಸ್ಕೃತಿಯ ಭಿನ್ನ ಶ್ರೇಣೀಕರಣಗಳ ಬಗ್ಗೆ ಹೀಗೆ ಬೇರೆ ಬೇರೆ ನೆಲೆಯಲ್ಲಿ ಪರಿಶೀಲನೆ ನಡೆಯಬೇಕಾಗಿದೆ.

ಹಲವಾರು ಜನ ತಮ್ಮ ಉಪನ್ಯಾಸ, ಭಾಷಣಗಳಲ್ಲಿ ತಮ್ಮ ಅಭಿಪ್ರಾಯ ಮಂಡನೆಗೆ, ಸಮರ್ಥನೆಗೆ ಸಾಹಿತ್ಯದ ಸಾಲುಗಳನ್ನು ಉಲ್ಲೇಖಮಾಡುವುದುಂಟು. ಇಂಥ ಬಳಕೆಗಳ ಮೂಲಕ ಸಾಹಿತ್ಯವನ್ನು ಜನರಿಗೆ ತಲುಪಿಸುವುದು ಭಾಷಣಕಾರರ ಉದ್ದೇಶ ಆಗಿರುವುದಿಲ್ಲ. ಸಾಹಿತ್ಯದ ಸಾಮಾಜಿಕ ಮಾನ್ಯತೆಯನ್ನು ವೈಯಕ್ತಿಕ ಅಭಿಪ್ರಾಯದ ಮಾನ್ಯತೆಗೆ, ಸಮರ್ಥನೆಗೆ ಬಳಸಿಕೊಳ್ಳುವ ಉದ್ದೇಶವೇ ಇಲ್ಲಿ ಮುಖ್ಯವಾಗಿರುತ್ತದೆ. ಕೆಲವೊಮ್ಮೆ ಬಜೆಟ್ ಮಂಡನೆಯ ಕಾಲದಲ್ಲಿ ರಾಜಕಾರಣಿಗಳು ಸಾಹಿತ್ಯದ ಸಾಲುಗಳನ್ನು ಬಳಸುವುದುಂಟು. ಇಂಥ ಕಡೆ ಏಕತಾನವನ್ನು ಮುರಿಯಲು ಮತ್ತು ತಮ್ಮ ಸಾಹಿತ್ಯ ಪಾಂಡಿತ್ಯವನ್ನು ಪ್ರದರ್ಶಿಸಲು ಸಾಹಿತ್ಯವನ್ನು ಬಳಸುವುದುಂಟು. ತಮ್ಮ ಅಭಿಪ್ರಾಯ ಅಥವಾ ಸಿದ್ಧಾಂತ ಗಳನ್ನು ಕೇಳುಗರಿಗೆ ಪರಿಣಾಮಕಾರಿಯಾಗಿ ತಲುಪಿಸಲು ಸಾಹಿತ್ಯವನ್ನು ಸಹಾಯಕ ಸಾಮಗ್ರಿಯಾಗಿ ಬಳಸುವುದುಂಟು. ಹೀಗೆ ಬಹಳಷ್ಟು ಸಾರಿ ಸಾಹಿತ್ಯದ ಜೊತೆ ನಾವು ನಡೆಸುವ ಅನುಸಂಧಾನವು (ಸಾಹಿತ್ಯವನ್ನು ನಾವು ಬಳಸುವ ಕ್ರಮವು) ಸಾಹಿತ್ಯ ಸಂವಹನ ವನ್ನೇ ಉದ್ದೇಶವನ್ನಾಗಿ ಹೊಂದಿರುವುದಿಲ್ಲ.

ಇಲ್ಲಿ ಒಂದು ಪ್ರಶ್ನೆ ಕೇಳಿಕೊಳ್ಳಬೇಕು. ಸಾಹಿತ್ಯವು ಸಂವಹನ ಹೊಂದಬೇಕಾದ ಸಾಮಗ್ರಿಯೋ? ಅಥವಾ ತಾನೇ ಸಂವಹನ ಮಾಧ್ಯಮವೋ? ಎಲ್ಲ ಸಾಹಿತ್ಯಗಳಿಗೂ ತಂತಾವೆ ಸಂವಹನ ಮಾಧ್ಯಮಗಳಾಗುವ ಸಾಧ್ಯತೆ ಮತ್ತು ಸಂವಹನ ಸಾಮಗ್ರಿಯಾಗುವ ಸಾಧ್ಯತೆ ಎರಡೂ ಇರುತ್ತವೆ. ಹಾಗೇ ಎಲ್ಲ ಸಾಹಿತ್ಯಗಳಿಗೂ ಸ್ವತಂತ್ರವಾದ ಅಸ್ತಿತ್ವವೂ ಇದೆ. ಸಪ್ಲಿಮೆಂಟರಿಯಾದ, ಸಹಾಯಕ ಸಾಮಗ್ರಿಯಾಗುವ ಎಳೆಯೂ ಇರುತ್ತದೆ. ಬೇರೆ ಬೇರೆ ಆಶಯ, ಉದ್ದೇಶಗಳ ಈಡೇರಿಕೆಯ ಸಾಧನ ಸಾಮಗ್ರಿಯಾಗುವ ಸಾಧ್ಯತೆಯೂ ಇರುತ್ತದೆ. ಸಾಹಿತ್ಯವನ್ನು ಬೇರೆ ಬೇರೆ ಉದ್ದೇಶಗಳ ಈಡೇರಿಕೆಗಾಗಿ ಬಳಸುವಾಗ ಆಯಾ ಉದ್ದೇಶಗಳ ಜೊತೆಗೆ ಸಾಹಿತ್ಯವೂ ಸಂವಹನವಾಗುತ್ತಿರುತ್ತದೆ. ಆದರೆ ಅಲ್ಲಿ ಸಾಹಿತ್ಯವು ಜನರಿಗೆ

ಸಂವಹನಗೊಳ್ಳುವುದು ಮುಖ್ಯವಾಗಿ ಇರುವುದಿಲ್ಲ. ಸಾಹಿತ್ಯವನ್ನು ಸಾಧನ ಸಾಮಗ್ರಿಯಾಗಿ ಬಳಸಿ ಇನ್ನೇನೋ ಉದ್ದೇಶಗಳನ್ನು ಸಾಧಿಸಿಕೊಳ್ಳುವುದೇ ಮುಖ್ಯವಾಗಿರುತ್ತದೆ. ನಮ್ಮ ಪ್ರತಿಷ್ಠಿತ ಸಾಹಿತ್ಯಚರಿತ್ರೆಯನ್ನು ನೋಡಿದರೆ, ೯ನೇ ಶತಮಾನದಿಂದ ಇತ್ತೀಚಿನವರೆಗೆ ಕವಿಗಳು ತಮ್ಮದೇ ಸಾಹಿತ್ಯ ರಚನೆಯ ಉದ್ದೇಶ-ಕಾರಣಗಳನ್ನು ಹೇಳುತ್ತ ಬಂದಿದ್ದಾರೆ. ಆದರೆ ಅವರು ಯಾವ ಉದ್ದೇಶ - ಕಾರಣಗಳಿಂದ ಸಾಹಿತ್ಯ ರಚಿಸಿದರೋ ಅದೇ ಉದ್ದೇಶ-ಕಾರಣಗಳಿಗಾಗಿ ಮಾತ್ರ ಆ ಸಾಹಿತ್ಯಗಳು ಅನುಸಂಧಾನಕ್ಕೆ ಗುರಿಯಾಗಲಿಲ್ಲ. ಹಾಗೇ, ಯಾರಿಗಾಗಿ ತಾವು ಬರೆಯುತ್ತಿದ್ದೇವೆ ಎಂದು ಭಾವಿಸಿದರೋ ಅವರು ಮಾತ್ರ ಆ ಬರಹಗಳಿಗೆ ಮುಖಾಮುಖಿಯಾಗಲಿಲ್ಲ. ಹಾಗಾಗಿ ಸಾಹಿತ್ಯ ಪಠ್ಯಗಳು ಚಲಿಸುವ ದಾರಿ ಮತ್ತು ಬಗೆಗಳು ಕಾಲದಿಂದ ಕಾಲಕ್ಕೆ ಬದಲಾಗುವ ಅನುಸಂಧಾನಗಳಲ್ಲಿ ಬದಲುಗೊಳ್ಳುತ್ತ ಬಂದಿವೆ. ನಮ್ಮ ಪ್ರತಿಷ್ಠಿತ ಸಾಹಿತ್ಯ ಚರಿತ್ರೆಯಲ್ಲಿನ ಸಾಹಿತ್ಯ ಮತ್ತು ಸಾಹಿತಿ, ಸಾಹಿತ್ಯ ಮತ್ತು ಪ್ರಭುತ್ವ , ಸಾಹಿತ್ಯ ಮತ್ತು ಸಾಮಾನ್ಯ ಜನತೆ, ಸಾಹಿತ್ಯ ಮತ್ತು ಭಕ್ತಿ, ಧರ್ಮಗಳ ನಡುವಿನ ಸಂಬಂಧಗಳನ್ನು ಚರ್ಚಿಸಿದರೆ ಸಾಹಿತ್ಯದ ಸಂವಹನವು ಹೇಗೆಲ್ಲ ಆಗುತ್ತಿತ್ತು ಎಂಬ ಬಗ್ಗೆ ಕೆಲವು ಸುಳುಹುಗಳು ಸಿಗುತ್ತವೆ. ಅದೊಂದು ಪ್ರತ್ಯೇಕ ಚರ್ಚೆ.

ಸಾಹಿತ್ಯದ ಅನುಸಂಧಾನಗಳಲ್ಲಿ ಕೆಲವು ನಿತ್ಯ ಬದುಕಿನಿಂದ ಬದಿಗೆ ಸರಿದ ಚಟುವಟಿಕೆಗಳಾಗಿದ್ದರೆ ಕೆಲವು ಬದುಕಿನ ಭಾಗವೇ ಆಗಿರುತ್ತವೆ. ನಮ್ಮಲ್ಲಿ ಸಾಂಸ್ಕೃತಿಕ ಚಟುವಟಿಕೆ ಎಂದರೆ ನಿತ್ಯದ ಚಟುವಟಿಕೆಗಳೆಲ್ಲ ಮುಗಿದ ಮೇಲೆ ಕೈಗೊಳ್ಳುವ ಅಥವಾ ಅದರ ಹೊರತಾದ ಚಟುವಟಿಕೆ ಎಂಬ ನಂಬಿಕೆಯೊಂದಿದೆ. ಆದರೆ ನಮ್ಮ ಜನಪದರು ಹೀಗೆ ನೋಡುವುದಿಲ್ಲ. ಅವರ ಸಾಹಿತ್ಯ ಅನುಸಂಧಾನಗಳು ಅವರ ಬದುಕಿನ ಭಾಗವೇ ಆಗಿರುತ್ತವೆ. ಪ್ರತಿಷ್ಠೆ, ಕೀರ್ತಿ, ವಾಣಿಜ್ಯ ಉದ್ದೇಶಗಳಿಗಾಗಿ ಮತ್ತು ಸಾಹಿತ್ಯ ಸೃಷ್ಟಿಸಬೇಕೆಂಬ ಉದ್ದೇಶಕ್ಕಾಗಿ ಸೃಷ್ಟಿಯಾಗುವ ಸಾಹಿತ್ಯ ಇದೆಯಲ್ಲ, ಇಂಥ ಪ್ರತಿಷ್ಠಿತ ಸಾಹಿತ್ಯಕ್ಕೆ ಮಾತ್ರ ಸಂವಹನದ ಪ್ರಶ್ನೆ ಕಾಡುತ್ತದೆ. ಮಿಕ್ಕ ಬಳಕೆಯಲ್ಲಿನ ಸಾಹಿತ್ಯಕ್ಕೆ, ಸಾಮೂಹಿಕ ಒತ್ತಡಗಳಿಂದ ಯಾವ್ಯಾವುದೋ ಸಾಂದರ್ಭಿಕ ಅಗತ್ಯಗಳಿಗಾಗಿ ಸಂಭವಿಸುವ ಸಾಹಿತ್ಯಕ್ಕೆ, ಸಂವಹನದ ಪ್ರಶ್ನೆ ಉದ್ಭವಿಸುವುದಿಲ್ಲ. ಅಷ್ಟೇ ಅಲ್ಲ, ನಮ್ಮ ಎಷ್ಟೊ ಮೌಖಿಕ ಕಾವ್ಯ , ಸಾಹಿತ್ಯಗಳನ್ನು ಸೃಷ್ಟಿಸುವ, ಹಾಡುವ ಜನ ಅವುಗಳನ್ನು ನಾವು ಹೇಳುವಂತೆ ಸಾಹಿತ್ಯ ಎಂದು ಕರೆಯುವುದೇ ಇ ಅವರ ಪರಿಭಾಷೆಯೇ ಬೇರೆ. ಎಲ್ಲಮ್ಮನ ಜಾತ್ರೆಯಲ್ಲಿ ಹಾಡುವ ಚೌಡಿಕೆ ಪದಗ ಮಾರಮ್ಮನ ಜಾತ್ರೆಯಲ್ಲಿ ಹಾಡುವ ಆಸಾದಿ ಪದಗಳು, ಇತ್ಯಾದಿಗಳನ್ನು ಕಟ್ಟ ಹಾಡುವವರು ಇವುಗಳನ್ನು ಸಾಹಿತ್ಯವೆಂದು ಭಾವಿಸುವುದೇ ಇಲ್ಲ. ಇವು ಅನುಸಂಧಾನಗಳಲ್ಲಿ ಭಾಗವಹಿಸುವವರೂ ಕೂಡ ಇವುಗಳನ್ನು ಅರ್ಥಮಾಡಿಕೊಳ್ಳ ವಿಶ್ಲೇಷಿಸುವ, ವಿಮರ್ಶಿಸುವ ಗೋಜಿಗೇ ಹೋಗುವುದಿಲ್ಲ. ಆದರೆ ಇವುಗಳೆಲ್ಲ ಇವರ ಪ್ರಜ್ಞೆಯ ಭಾಗವೇ ಆಗಿವೆ ಮತ್ತು ಸಾಮುದಾಯಿಕ ಪ್ರಜ್ಞೆಯನ್ನು ಇ ರೂಪಿಸುತ್ತಲೂ ಇರುತ್ತವೆ. ಸಾಹಿತ್ಯ ಎಂದರೆ ನಿತ್ಯ ಬದುಕಿನ ಹೊರಗೆ ಇರುವ ಅ ಸಾಮಗ್ರಿ ಅಲ್ಲ. ಬದುಕಿನ ಕ್ರಮಗಳ ಶೋಧನೆಯಲ್ಲಿ ಬದುಕಿನ ಒಂದು ಅವಿಭಾ ಅಂಗವಾಗಿ ಸಾಹಿತ್ಯ ಇಲ್ಲಿ ಅನುಸಂಧಾನಕ್ಕೆ ಗುರಿಯಾಗುತ್ತಿರುತ್ತದೆ.

ನಮ್ಮಲ್ಲಿ ಬಹಳ ಹಿಂದಿನಿಂದಲೂ ಗಮಕವಾಚನ, ಟೀಕು-ವ್ಯಾಖ್ಯಾ ಪಾರಾಯಣ, ಪಠಣಗಳು ನಡೆಯುತ್ತಾ ಬಂದಿವೆ. ಸಾಹಿತ್ಯ ಬಳಕೆ ಮ ಸಂವಹನಗಳು ಬೆರೆತುಕೊಂಡ ಆಚರಣೆಗಳಿವು. ವ್ಯಕ್ತಿ ಮತ್ತು ಸಮುದಾಯ ಎರಡೂ ನೆಲೆಯಲ್ಲಿ ಈ ಆಚರಣೆಗಳು ನಡೆಯುತ್ತವೆ. ಪಾರಾಯಣ ಎಂದರೆ ತ ಇಷ್ಟದ ಯಾವುದಾದರು ಗ್ರಂಥವನ್ನು ಪುಣ್ಯ ಕಾರ್ಯವೆಂಬಂತೆ ಮತ್ತೆ ಮ ಓದುವುದು, ಒಂದು ರೀತಿಯಲ್ಲಿ ಜಪಿಸಿದಂತೆ ಮತ್ತೆ ಮತ್ತೆ ಅನ್ನುವುದು. ನಮ್ಮ ಕುಮಾರವ್ಯಾಸ ಭಾರತ, ಭರತೇಶ ವೈಭವ, ಮರಾಠಿಯಲ್ಲಿ ಜ್ಞಾನೇಶ್ವರಿ ಕಾವ್ಯ ಹಿಂದಿಯಲ್ಲಿ ರಾಮಚರಿತ ಮಾನಸ, ತಮಿಳಿನಲ್ಲಿ ಕಂಬರಾಮಾಯಣ, ತಿರುಕ್ಕುರ ಇಂಥ ಗ್ರಂಥಗಳು ಪಾರಾಯಣಕ್ಕೆ ಗುರಿಯಾಗಿವೆ, ಗುರಿಯಾಗುತ್ತಿವೆ. ಇಂ ಅನುಸಂಧಾನಗಳಲ್ಲಿ ಸಾಹಿತ್ಯವನ್ನು ಆತ್ಮಸಾತ್ ಮಾಡಿಕೊಳ್ಳುವ ಕೆಲಸ ಆಗುತ್ತಿರುತ್ತ ಪಾರಾಯಣ ಎಂದರೆ ಇಲ್ಲಿ ಸಂವಹನದ ಪ್ರಶ್ನೆ ಉದ್ಭವಿಸುವುದಿಲ್ಲ. ಭಕ್ತಿಯಿಂದ ನಂ ಕಾವ್ಯವನ್ನು ಸದಾ ಬಳಸುವ, ತಮ್ಮೊಟ್ಟಿಗೆ ಒಯ್ಯುವ ಕ್ರಿಯೆ ಇದು.

ಉತ್ತರ ಕರ್ನಾಟಕದ ಕಡೆ 'ಕೇಳಿಕೆ' ಎಂಬ ಅನುಸಂಧಾನವೊಂದ

With Best Compliments From



RAVI TEJA CONSTRUCTIONS PVT. LTD.

# 13/1, 2nd Floor, Suraj Brigade
Sahakar Nagar, Bangalore - 560 092.
☎ : 080-23621822 / 23621866 Fax: 080-23621866

ಚಾಲ್ತಿಯಲ್ಲಿದೆ. ಸಾಹಿತ್ಯವನ್ನು ಚರ್ಚೆಗೆ, ಜಿಜ್ಞಾಸೆಗೆ ಗುರಿಪಡಿಸುವ ಚಟುವಟಿಕೆ ಇದು. ಇಲ್ಲಿ ಸಂವಹನವನ್ನು ದಾಟಿದ ಉನ್ನತ ತತ್ವ, ದರ್ಶನಗಳ ಚರ್ಚೆ ಇರುತ್ತದೆ. ಇಂಥ ಗೋಷ್ಠಿಗಳಲ್ಲಿ ಸಾಹಿತ್ಯವು ಒಳಗೊಂಡಿರುವ ತತ್ವ, ದರ್ಶನಗಳ ಚರ್ಚೆ ಹಿನ್ನೆಲೆಗೆ ಸರಿದು ಲೋಕನಡಾವಳಿ, ಲೋಕಜೀವನದ ತಾತ್ವಿಕತೆ, ದರ್ಶನಗಳ ಜಿಜ್ಞಾಸೆ ಮುನ್ನೆಲೆಗೆ ಬರುತ್ತದೆ. ತಮ್ಮ ತಮ್ಮ ತತ್ವಗಳನ್ನು ಜೀವನದರ್ಶನಗಳನ್ನು ಪ್ರತಿಪಾದಿಸುವ, ಪರೀಕ್ಷಿಸಿಕೊಳ್ಳುವ, ಆತ್ಮಾವಲೋಕನ ಮಾಡಿಕೊಳ್ಳುವ ಒಂದು ನೆಪವಾಗಿ ಸಾಹಿತ್ಯ ಇಂಥ ಕಡೆ ಒದಗಿಬರುತ್ತದೆ. ಇಂಥ ಗೋಷ್ಠಿಗಳನ್ನು ತತ್ವಕ್ಕೆ ಹಾಕುವುದು, ವಿಚಾರಕ್ಕೆ ಹಾಕುವುದು ಅಂತಲೂ ಕರೆಯುತ್ತಾರೆ. ಇಲ್ಲಿ ಸಾಹಿತ್ಯದ ಸಂವಹನದ ಪ್ರಶ್ನೆ ಉದ್ಭವಿಸುವುದಿಲ್ಲ. ಸಾಹಿತ್ಯದ ದರ್ಶನವನ್ನು ಭಿನ್ನ ವ್ಯಾಖ್ಯಾನಗಳಿಗೆ ಇಲ್ಲಿ ಗುರಿಮಾಡಲಾಗುತ್ತದೆ. ಆ ಮೂಲಕ ಲೋಕ ವಿಚಾರದ ಚರ್ಚೆಗೆ ಸಾಹಿತ್ಯವನ್ನು ಸಹಾಯಕ ಸಾಮಗ್ರಿಯಾಗಿ ಬಳಸಿಕೊಳ್ಳಲಾಗುತ್ತದೆ.

ಕರಾವಳಿ ಕರ್ನಾಟಕದಲ್ಲಿ ಚಾಲ್ತಿಯಲ್ಲಿರುವ ತಾಳಮದ್ದಲೆ ಇಂಥ ಇನ್ನೊಂದು ಪರಿಪಾಠ. ಕೇಳಿಕೆಯಂತೆ ಇಲ್ಲಿ ಸಾಹಿತ್ಯವು ಚರ್ಚೆಯ ಸಾಮಗ್ರಿಯಲ್ಲ. ಕಥನದ ಪಾತ್ರಗಳೇ ತಾವಾಗಿ ಸಾಹಿತ್ಯವನ್ನು ಅಭಿನಯಿಸುತ್ತ, ಆಂಗಿಕ-ಶಾರೀರಿಕ ಚಟುವಟಿಕೆಗಳ ಮೂಲಕ ವಾದನವನ್ನೂ ಒಳಗೊಂಡು ಲೋಕವರ್ತಮಾನವನ್ನು ಆತ್ಮಸಾತ್ ಮಾಡಿಕೊಳ್ಳುವ ಕ್ರಿಯೆ ಇದು. ಈ ರಂಗ ಪ್ರಸ್ತುತಿಯಲ್ಲಿ ಸಾಹಿತ್ಯ ಕಥನವು ಮೊದಲೇ ಗೊತ್ತಿರುತ್ತದೆ. ಪ್ರೇಕ್ಷಕರಿಗೂ ತಿಳಿದಿರುತ್ತದೆ. ಪಾತ್ರಧಾರಿಗಳಿಗಂತೂ ಅಂತರ್ಗತವೇ ಆಗಿರುತ್ತದೆ. ಹಾಗಾಗಿ ಇಲ್ಲಿ ಸಂವಹನದ ಪ್ರಶ್ನೆಯೇ ಇಲ್ಲ. ಇಲ್ಲೂ ಕೂಡ ಒಡನಾಟ-ಅನುಸಂಧಾನ-ವರ್ತಮಾನದೊಂದಿಗೆ ಕಥನದ ಮುಖಾಮುಖಿ ಮುಖ್ಯವಾಗುತ್ತದೆ. ಈ ಕೇಳಿಕೆಗಳು, ತಾಳಮದ್ದಳೆಗಳ ಟಾರ್ಗೆಟ್ ಆಡಿಯನ್ಸ್ ಬೇರೆ; ನಮ್ಮ ಪ್ರತಿಷ್ಠಿತ ವರ್ಗದ ವಿಚಾರ ಸಂಕಿರಣಗಳು, ಸಮ್ಮೇಳನಗಳು, ಕವಿಗೋಷ್ಠಿಗಳು, ಸಂವಾದ ಗೋಷ್ಠಿಗಳ ಟಾರ್ಗೆಟ್ ಆಡಿಯನ್ಸ್ ಬೇರೆ. ತಾಳಮದ್ದಳೆಗಳು ಜನಪದರನ್ನೂ-ಪ್ರತಿಷ್ಠಿತರನ್ನೂ ಒಟ್ಟಿಗೇ ತಲುಪಬಲ್ಲವು. ಆದರೆ ಈ ಪ್ರತಿಷ್ಠಿತರ ಸಾಹಿತ್ಯಕ ಅನುಸಂಧಾನಗಳು ಜನಪದರನ್ನು ಒಳಗೊಳ್ಳುತ್ತಿಲ್ಲ. ಟೀವಿ-ಸಿನಿಮಾ-ರೇಡಿಯೊ ಮಾಧ್ಯಮಗಳ ಟಾರ್ಗೆಟ್ ಕೂಡ ಸರ್ವವ್ಯಾಪಿಯಾದುದು. ಎಲ್ಲ ಸಮುದಾಯಗಳನ್ನು ತಲುಪಿ ಸಂವಹನವಾಗುವ ತಾಕತ್ತು ಈ ಮಾಧ್ಯಮದ ಅನುಸಂಧಾನಗಳಿಗೆ ಇದೆ. ಆದರೆ ಪ್ರತಿಷ್ಠಿತ ಸಾಹಿತ್ಯಕ್ಕೆ ಈ ಶಕ್ತಿ, ವ್ಯಾಪ್ತಿ ಇಲ್ಲ.

ಮೌಖಿಕ ವಲಯದ ನಮ್ಮ ಕೆಲವು ಪಾರಂಪರಿಕ ಸಾಹಿತ್ಯದ ಅನುಸಂಧಾನಗಳು ಕೇವಲ ಸಾಹಿತ್ಯದ ಅನುಸಂಧಾನಗಳಲ್ಲ. ಅಲ್ಲಿ ಭಕ್ತಿ, ಧಾರ್ಮಿಕತೆ ಸಾಹಿತ್ಯದ ಒಡನಾಟಗಳೆಲ್ಲ ಒಂದಕ್ಕೊಂದು ಬೆರೆತು ಹೋಗಿರುತ್ತವೆ. ನನ್ನ ಒಂದೆರಡು ಸ್ವಾನುಭವಗಳನ್ನು ಬಳಸಿಕೊಂಡು ಇಲ್ಲಿ ಕೆಲವು ಮಾತುಗಳನ್ನು ಹೇಳುತ್ತೇನೆ.

ನಮ್ಮ ಹಳ್ಳಿಯಲ್ಲಿ ವರ್ಷಕ್ಕೊಮ್ಮೆ ಕಾಮನ ಹಬ್ಬ ಮಾಡುತ್ತಿದ್ದೆವು. ಕಾಮನನ್ನು ಸುಟ್ಟ ಮಾರನೆ ದಿನ ಹೋಳಿ ಆಡುತ್ತಿದ್ದೆವು. ಪೋಲಿ ಹಾಡುಗಳನ್ನು ಕಟ್ಟಿ ಹಾಡಿಕೊಳ್ಳುತ್ತ, ಊರಿನ ಎಲ್ಲ ಬೀದಿಗಳಲ್ಲಿ ಕುಣಿಯುತ್ತ ಊರಾಚೆಯ ಮಡುವಿಗೆ ಹೋಗಿ ಈಜಾಡಿ ದೊಡ್ಡದೊಂದು ಆಲದ ಮರದ ಕೆಳಗೆ ಕಡ್ಲೆಪುರಿ ಪ್ರಸಾದ ತಿಂದು ಬರುವ ಆಚರಣೆ ಅದು. ಊರಿನ ವಯಸ್ಕ ಗಂಡಸರ ಆ ಊರಾಡೊ ಆಚರಣೆಯಲ್ಲಿ ಒಂದಕ್ಕಿಂತ ಒಂದು ಪೋಲಿಯಾದ ರಚನೆಗಳನ್ನು ಸಾಮೂಹಿಕವಾಗಿ ಯಾವ ಅಂತಸ್ತು, ವಯಸ್ಸುಗಳ ಭೇದ ಇಲ್ಲದೆ ಕಟ್ಟಿ ಹಾಡುತ್ತಿದ್ದೆವು. ಇಂಥ ಸಂದರ್ಭದಲ್ಲಿ ಎಲ್ಲ ವೈರ ಜಗಳಗಳು ಮಾಯವಾಗಿಬಿಡುತ್ತಿದ್ದವು. ಇಲ್ಲಿ ಸಾಹಿತ್ಯವೇ ಪ್ರಧಾನ ಅಲ್ಲದಿದ್ದರೂ ಎಲ್ಲರ ನಡುವಿನ ಒಂದು ಅಂತರ್ ವಿದ್ಯುತ್ತಾಗಿ ಅದು ನಮ್ಮೆಲ್ಲರನ್ನೂ ಜೋಡಿಸುತ್ತಿತ್ತು. ಯಾರೋ ಒಬ್ಬ 'ಹಾಲೂ ಮಾರುತ ಬಂದವಳಾರೆ ನೀಲೇ ನಾಮದ ಗೊಲ್ಲಾರುಡುಗಿ'

# ಅವಳ ಆತ್ಮ



ಅವರು
ಅವಳ ಲೇಖನಿ ಸುಟ್ಟರು.
ಕೈಬೆರಳುಗಳನ್ನು
ಒಂದೊಂದಾಗಿ ಕಿತ್ತರು.
ಅಂಗೈ ಕತ್ತರಿಸಿ,
ಮುಂಗೈ ಬೀಸಿ ಒಗೆದರು.

ಸಿಗರೇಟಿನ ಕಿಚ್ಚಿನಿಂದ
ಕಣ್ಣು ಸುಟ್ಟರು.
ಬಂದೂಕಿನ ನಳಿಗೆಗಳು
ಧ್ವನಿ ಪೆಟ್ಟಿಗೆಯನ್ನು
ಛಿದ್ರಗೊಳಿಸಿದವು.

ಎದೆ ಬಗೆದು
ಹೃದಯದ ಕೋಣೆ ಹೊಕ್ಕು
ವಿಜಯ ಪತಾಕೆ ನೆಟ್ಟರು.

ಆದರೆ ಈಗ,
ಆ ಸುಟ್ಟ ಮನೆಯಲ್ಲಿ
ಕವಿತೆಗಳದೇ ಕಾರುಬಾರು.

ಅರೆಸುಟ್ಟ ಡೈರಿಯ
ಪುಟದಿಂದೆದ್ದು
ಸ್ವಚ್ಛಂದವಾಗಿ
ಸುಳಿದಾಡುತ್ತಿವೆ
ಅವಳ ಆತ್ಮದಂತೆ.

ಹೇಮಾ ವೆಂಕಟ್
ನಂ.೩೨೬, ತುಂಗಾನಗರ, ಅಂಚೆ: ವಿಶ್ವನೀಡಂ, ಬೆಂಗಳೂರು -೫೬೦೦೯೧

ತಂದರೆ ಎಲ್ಲರೂ ಅದನ್ನು ರಾಗವಾಗಿ ಹಾಡೋರು. ಇದೇ ಮುಂದೆ ಇನ್ಯಾರೋ ಒಬ್ಬನಿಗೆ ಸ್ಫೂರ್ತಿಯಾಗಿ ಅವನು ಅಲ್ಲೇ ಹೊಸದೊಂದು ಸಾಲನ್ನು 'ಮೀನು ಮಾರೂತ ಬಂದೋಳ್ಯಾರೇ ಮೀನಾ ನಾಮದ ಬೆಸ್ತಾರುಡುಗಿ' ಅಂತ ಕಟ್ಟಿ ಹಾಡೋನು. ಅದನ್ನು ಮಿಕ್ಕವರು ಕೋರಸ್ ಥರ ಹಾಡೋರು. ಮೀನು ಮಾರೂತ, ಮೀನು ಮಾರೂತ, ಬಂದೋಳ್ಯಾರೇ, ಬಂದೋಳ್ಯಾರೇ ಅಂತ ವೇಗವಾಗಿ ಲಯಬದ್ಧವಾಗಿ ಹಾಡುತ್ತ ಕುಣಿಯೋರು. ಮತ್ತೆ ಹಾಡು, ಕುಣಿತ ನಡೀತಾ ಸಾಗೋದು. ಇದು ಪ್ರತಿ ವರ್ಷದ ಆಚರಣೆ. ಇಲ್ಲಿ ಸಾಹಿತ್ಯ ಪೀಳಿಗೆಯಿಂದ ಪೀಳಿಗೆಗೆ ದಾಟಿಸಲ್ಪಡೋದು. ಸಂವಹನ ಅಂದರೆ ಇಲ್ಲಿ ವ್ಯಕ್ತಿಗೆ ಸಾಹಿತ್ಯ ಅರ್ಥವಾಗುವುದು ಅಲ್ಲ. ಇಂಥ ಆಚರಣೆಗಳಿಂದ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಸಾಹಿತ್ಯವನ್ನು ದಾಟಿಸುವ ಕೆಲಸ ನಡೆಯೋದು. ಸಾಹಿತ್ಯ ಸೃಷ್ಟಿಯ ವರಸೆಗಳು ಇಂಥ ಸಾಹಿತ್ಯದ ಅನುಸಂಧಾನಗಳಿಂದ ಪ್ರಾಕ್ಟೀಸಿನ ಮೂಲಕವೇ ಎಲ್ಲರಿಗೂ ಕರಗತ ಆಗಿಬಿಡೋವು. ಅಂದರೆ ಒಂದು ಕಾಲದಲ್ಲಿ ಪ್ರದೇಶದಿಂದ ಪ್ರದೇಶಕ್ಕೆ , ಒಬ್ಬರಿಗಿಂತ ಹೆಚ್ಚಿನ ಜನರಿಗೆ ಹಾರಿಜಾಂಟಲ್ಲಾಗಿ ಹಬ್ಬುವುದಷ್ಟೇ ಸಂವಹನ ಅಲ್ಲ. ವರ್ಟಿಕಲ್ಲಾಗಿ ಕಾಲದಿಂದ ಕಾಲಕ್ಕೆ ಸಾಗಿ ಬರುವುದು ಕೂಡ ಸಂವಹನವೇ.

ಇಲ್ಲಿ ಸಾಹಿತ್ಯಕ್ಕೆ ಬಹುಮುಖಿಯಾದ ಕಾರ್ಯಗಳು ಇವೆ. ಇಲ್ಲಿ ಸಾಹಿತ್ಯದ ಅನುಸಂಧಾನವು ಏಕಕಾಲಕ್ಕೆ ಆನಂದವನ್ನು, ಅನುಭವವನ್ನು, ದೈಹಿಕ ಮತ್ತು ಮಾನಸಿಕ ಚೈತನ್ಯವನ್ನು ನೀಡುತ್ತದೆ. ಭಾಗಿಯಾದವನಿಗೆ ಸಾಹಿತ್ಯವನ್ನು ತಂತಾನೆ ಇನ್ನೊಬ್ಬರಿಗೆ ದಾಟಿಸುವ ಸಂವಹನ ಮಾಧ್ಯಮವಾಗುವ ಮತ್ತು ಅದನ್ನು ತನ್ನ ಸ್ಮೃತಿಕೋಶದಲ್ಲಿ ಇಟ್ಟುಕೊಳ್ಳುವ ಮೂಲಕ ತಾನು ಧಾರಣ ಮಾಧ್ಯಮವೂ ಆಗುವ ಸಾಧ್ಯತೆಯನ್ನು ನೀಡುತ್ತದೆ. ಇಂಥ ಕಡೆ ವ್ಯಕ್ತಿಯು ನಿಷ್ಕ್ರಿಯ ಗ್ರಾಹಕ ಆಗಿರದೆ ಸಕ್ರಿಯ ಪಾಲುದಾರ ಆಗಿರುತ್ತಾನೆ. ಸಾಹಿತ್ಯವನ್ನು ಸೃಷ್ಟಿಸುವ ಮತ್ತು ಅನುಭವಿಸುವ ಮೂಲಕ ಸಮುದಾಯವೇ ಇಂಥ ಕಡೆ ಸ್ಮೃತಿಕೋಶ ಆಗಿ ವರ್ತಿಸುತ್ತಿರುತ್ತದೆ. ಪುಸ್ತಕ, ಸಿ.ಡಿ., ಕಂಪ್ಯೂಟರುಗಳ ರೂಪದಲ್ಲಿ ಸ್ಮೃತಿಕೋಶಗಳನ್ನು ಮಾಡಿ ಇಟ್ಟುಕೊಳ್ಳುವುದಕ್ಕೂ ಜನಸಮುದಾಯದ ಮಿದುಳು ಮತ್ತು ಮನಸ್ಸುಗಳನ್ನೇ ಸ್ಮೃತಿಕೋಶಗಳನ್ನಾಗಿ ಬಳಸುವುದಕ್ಕೂ ಬಹ ವ್ಯತ್ಯಾಸವಿದೆ. ಮನರಂಜನೆಗಾಗಿ ಜನರು ಟೀವಿ ಎದುರು, ಸಿನಿಮಾ ಹಾಲ್‌ಗಳ ನಿಷ್ಕ್ರಿಯವಾಗಿ ಕೂತುಕೊಳ್ಳುವುದಕ್ಕೂ ಇಂಥ ಆಚರಣೆಗಳಲ್ಲಿ ಸಕ್ರಿಯವಾ ಪಾಲ್ಗೊಳ್ಳುವುದಕ್ಕೂ ಬಹಳ ವ್ಯತ್ಯಾಸ ಇದೆ. ಇಂಥ ಆಚರಣೆಗಳಿಂದ ನಾವು ಮಾರುಕ ರಾಜಕಾರಣದ ಆಧುನಿಕೋತ್ತರ ಅವತಾರಗಳನ್ನು ಸಂಶಯದಿಂದಲೂ ಜನಪದ ಆಚರಣೆಗಳನ್ನು ಚಿಕಿತ್ಸಕ ವಿವೇಕದಿಂದಲೂ ನೋಡುವುದನ್ನು ಕಲಿಯಬೇಕಾಗಿದೆ.

ಇದಕ್ಕಿಂತ ಭಿನ್ನವಾದ ಇನ್ನೊಂದು ಉದಾಹರಣೆ ಕೊಡುತ್ತೇನೆ. ಅ ಶುದ್ಧಾಂಗವಾಗಿ ಸಾಹಿತ್ಯಕ ಅನುಸಂಧಾನ ಅಲ್ಲ. ಹಾಗೆ ನೋಡಿದರೆ ಶುದ್ಧಾಂಗವಾ ಸಾಹಿತ್ಯಕ ಅನುಸಂಧಾನ ಅನ್ನುವುದು ಇಲ್ಲವೇ ಇಲ್ಲ. ಕಲೆಗಾಗಿ ಕಲೆ ಎನ್ನುವು ಒಂದು ಶುದ್ಧ ಸುಳ್ಳು. ಅಂತಹ ಕಲೆ ಇರೋಕ್ಕೆ ಸಾಧ್ಯವಿಲ್ಲ. ವ್ಯಕ್ತಿ, ವ್ಯಕ್ತಿಯ ಪ್ರಜ್ಞ ಸಮುದಾಯ, ಬದುಕು ಹೀಗೆ ಬಿಡಿ ಅಥವಾ ಇಡಿ ನೆಲೆಯಲ್ಲಿ ಪ್ರೇರೇಪಣೆ ನೀಡ ಸಾಹಿತ್ಯ ಎಲ್ಲಾದರೂ ಇರಲು ಸಾಧ್ಯವೇ? ಇರಲಿ. ಉದಾಹರಣೆಗೆ ಬರುತ್ತೇ ಮಾಂತಪ್ಪನ ಗದ್ದುಗೆ ಅಂತ ವೀರಶೈವ ಸಂತನ ಸಮಾಧಿಯೊಂದು ನಮ್ಮ ಊರಿನಿಂ ಸುಮಾರು ಮುವತ್ತು ಕಿಲೋಮೀಟರು ದೂರದಲ್ಲಿ ಇತ್ತು. ಅಲ್ಲಿಗೆ ನಮ್ಮ ಸುತ್ತಮುತ್ತ ಊರುಗಳ ಬಹಳಷ್ಟು ಜನ ನಡೆದುಕೊಳ್ಳುತ್ತಿದ್ದರು. ಮಕ್ಕಳು ಮರಿಗೆ ಏನಾದರ ರೋಗಗಳು ಬಂದರೆ ಮಂಡೆ ಕೊಡುತ್ತೇವೆ ಅಂತ ಹರಕೆ ಮಾಡಿಕೊಳ್ಳುತ್ತಿದ್ದರ ಶಿವರಾತ್ರಿ ಕಾಲದಲ್ಲಿ ಅಲ್ಲಿಗೆ ಯಾತ್ರೆ ಹೋಗುತ್ತಿದ್ದರು. ಒಂದೊಂದು ಊರಿನಿಂದಲ ಒಂದೋ, ಹಲವೋ ತಂಡಗಳು ಬೆಳಗಿನ ಜಾವ ಭಜನೆ ಮಾಡುತ್ತ ಹೊರಟ ಊರುಗಳನ್ನು ದಾಟುತ್ತಾ ಭಜನೆ ಮಾಡುತ್ತಾ ರಾತ್ರಿಗೆ ಹೋಗಿ ಗದ್ದುಗೆಯ ತಲುಪುತ್ತಿದ್ದೆವು. ಬೇರೆ ಬೇರೆ ಊರುಗಳ ಭಕ್ತಾದಿಗಳು ಕೊಟ್ಟ ದವಸ ಧಾನ್ಯ ತರಕ ತೆಗೆದುಕೊಂಡು ಹೋಗಿ ಗದ್ದುಗೆಗೆ ಅರ್ಪಿಸುತ್ತಿದ್ದೆವು. ಮುಡಿಗಿಡಿ ಕೊಟ್ಟು ಭಜ ಮಾಡುತ್ತಾ ಊರಿಗೆ ವಾಪಸು ಬರುತ್ತಿದ್ದೆವು. ಆ ಮಾಂತಪ್ಪನ ಗದ್ದಿಗೆಗೆ ಒಮ್ಮೆ ಭಜ ತಂಡದ ಜೊತೆ ಹೋಗಿ ಬಂದರೆ ಭಜನೆಯವರ ಜೊತೆ ಅಂದೂ ಬಹುತೇ


FOR A WIDE RANGE OF BOOKS ON ALL SUBJECTS



Rs. 150



Rs. 70



Rs. 295



Rs. 225



Rs. 140



Rs. 125



Rs. 80


Rs. 160



Rs. 125



Rs. 140



Rs. 85



Rs. 95



Rs. 195

GOODWILL PUBLISHING HOUSE YOUNG LEARNER PUBLICATIONS

Rattan Jyoti, 18 Rajendra Place, New Delhi - 110 008

Tel : 91-11-25750801. 25755519, 25820556 FAX: 91-11-25763428

e-mail : goodwillpub@vsnl.net website : www.goodwillpublishinghouse.com



## ಅವಳು

ಅವಳು ಹಂಚಿದಳು
ಬಣ್ಣ ಬಣ್ಣದ ಕನಸನು
ಜೀವ ತುಂಬಿದ ಶಕ್ತಿಯನು
ತಿಳಿದೆಲ್ಲ ಜ್ಞಾನವನು
ಬೇರಿಳಿಯ ಬಂಡೆಗೆ

ಅವಳು ಬಿತ್ತಿದಳು
ಪ್ರೀತಿ ತುಂಬಿದ ಹೃದಯವನು
ವಿಶ್ವಾಸ ತುಂಬಿದ ನಂಬಿಕೆಯನು
ವಿನಯ ತುಂಬಿದ ಭಕ್ತಿಯನು
ಬರಡಾದ ಹೃದಯಕ್ಕೆ

ಕಮಲಂ ಅರಸು

ಜನೆಗಳು ಬಾಯಿಗೆ ಬಂದುಬಿಡುತ್ತ ಇದ್ದವು. ಇಂತಹ ಆಚರಣೆಗಳಲ್ಲಿ ಸಾಹಿತ್ಯವು ಾರಿಯನ್ನು ಭಕ್ತಿಯಿಂದ ಕ್ರಮಿಸಲು ಸಹಾಯ ಮಾಡುತ್ತಾ ಇತ್ತು. ಪದಗಳನ್ನು ಕಟ್ಟುವ ುತ್ತು ಹಾಡುವ ಎರಡೂ ತೆರನ ಕೌಶಲ್ಯ ಪ್ರಾಕ್ಟೀಸಿನ ಮೂಲಕವೇ ಸಿದ್ಧಿಸಿಬಿಡುತ್ತಿತ್ತು. ಾಹಿತ್ಯದ ಬಳಕೆ, ಸಾಹಿತ್ಯದ ಸೃಷ್ಟಿ ಮತ್ತು ಸಾಹಿತ್ಯದ ಸಂವಹನಗಳು ಏಕಕಾಲಕ್ಕೆ ಇಲ್ಲಿ ರುಗುತ್ತಿದ್ದವು. ಸಾಹಿತ್ಯದ ಬಳಕೆ (ಸಂವಹನ) ಮತ್ತು ಸೃಷ್ಟಿಗಳು ಪ್ರತಿಷ್ಠಿತರಲ್ಲಿ ಯಾವತ್ತಿನಿಂದಲೂ ಪ್ರತ್ಯೇಕಿತ ಚಟುವಟಿಕೆಗಳೇ ಆಗಿವೆ. ಆದರೆ ಜನಪದರಲ್ಲಿ ಇವು ಟ್ಟಿಗೇ ಜರುಗುವ ಚಟುವಟಿಕೆಗಳು.

ನಮ್ಮ ದೇಶಾದ್ಯಂತ ಇಂಥ ಸಾವಿರಾರು ರೂಢಿಗಳು ಇದ್ದಾವೆ. ಈಗೀಗ ಇಂತಹ ಳೆ ಆಚರಣೆಗಳು ಅಳಿಯುತ್ತ ರೂಪಾಂತರವಾಗುತ್ತಿವೆ. ಹೊಸ ಆಚರಣೆಗಳು ುಟ್ಟಿಕೊಳ್ಳುತ್ತಿವೆ. ಮಾಂತಪ್ಪನ ಗದ್ದುಗೆಯ ರೀತಿಯಲ್ಲೇ ಬೇಂದ್ರೆ ರಾಷ್ಟ್ರೀಯ ಟ್ರಸ್ಟ್, ುವೆಂಪು ಅಧ್ಯಯನ ಕೇಂದ್ರಗಳು ಪ್ರತಿಷ್ಠಿತ ಸಾಹಿತ್ಯ ಸಮುದಾಯಗಳಿಗೆ ಇವೆ. ಪ್ರಸಂಗಿಕವಾಗಿ ಅಲ್ಲಿ ವಿಚಾರಗೋಷ್ಠಿ, ಅಧ್ಯಯನ, ಕವಿಗೋಷ್ಠಿ, ಪಾರಾಯಣ, ೀರ್ತನೆ, ಭಜನೆಗಳು ನಡೆಯುತ್ತವೆ. ಆದರೆ ಇಲ್ಲಿ ಅಧ್ಯಯನ, ಪಾರಾಯಣಗಳ ರೂಪ ಬೇರೆ. ಪ್ರತಿಷ್ಠಿತ ವಿದ್ವಾಂಸರಿಗೆ ಇಂಥ ಆಚರಣೆಗಳಲ್ಲಿ ಟಿ.ಎ., ಡಿ.ಎ. ಗೌರವಗಳು ಸಿಗುತ್ತವೆ. ಇದು ಇನ್ನೊಂದೇ ರೀತಿಯ ಸಂವಹನ.

ಸಾಣೆಹಳ್ಳಿ ಮಠಕ್ಕೆ ಒಮ್ಮೆ ಸಾಹಿತ್ಯ ಅಭಿರುಚಿ ಕಮ್ಮಟದ ಅತಿಥಿಯಾಗಿ ಹೋಗಿದ್ದಾಗ ಒಂದು ವಾರ ಕಾಲ ವಾಸ್ತವ್ಯ ಮಾಡಬೇಕಾದ ಪ್ರಸಂಗ ಬಂದಿತ್ತು. ಆ ಸಂಸ್ಥೆಯಲ್ಲಿ ಬೆಳಿಗ್ಗೆ ಪ್ರಾರ್ಥನೆಗೆ ವಚನ, ಊಟಕ್ಕೆ ಮುಂಚೆ ವಚನ, ಪ್ರತಿ ಸಮಾರಂಭಗಳಲ್ಲೂ ಪ್ರಾರ್ಥನೆಗೆ ವಚನ ಹಾಡುತ್ತಿದ್ದರು. ಒಟ್ಟಾರೆ ಕೀರ್ತನ, ಸಂಸ್ಕೃತಗಳಿಗೆ ಪರ್ಯಾಯವಾದ ವಚನ ಸಂಸ್ಕೃತಿಯನ್ನು ಅಲ್ಲಿ ಆಚರಿಸುತ್ತಿದ್ದರು. ಸಾಹಿತ್ಯದ ಅನುಸಂಧಾನ ಇಲ್ಲಿ ಸಂವಹನದ ಉದ್ದೇಶ ಹೊಂದಿಲ್ಲ. ಜೀವನದ ಒಂದು ಭಾಗವಾಗಿ ಅಳವಡಿಸಿಕೊಳ್ಳಲ್ಪಟ್ಟಿದೆ. ಸಾಹಿತ್ಯವನ್ನು ಓದುವುದು, ಅನುಭವಿಸುವುದು, ಅರ್ಥಮಾಡಿಕೊಳ್ಳುವುದು, ಆನಂದಿಸುವುದು, ಅರ್ಥ ವಿವರಿಸಿ ಹೇಳುವುದು, ವ್ಯಾಖ್ಯಾನಿಸುವುದು, ವಿಮರ್ಶಿಸುವುದು ಇವೆಲ್ಲವುಗಳನ್ನು ದಾಟಿದ ಸಾಹಿತ್ಯವನ್ನು ಬಾಳುವ, ಬಾಳಿನಲ್ಲಿ ಸಾಹಿತ್ಯವನ್ನು ಬಳಸುವ ಪರಿ ಇದು. ಸಾಹಿತ್ಯವನ್ನು ಪ್ರಚಾರ ಮಾಡುವುದು, ಸಂವಹನಗೊಳಿಸುವುದು ಮತ್ತು ಸಾಹಿತ್ಯವನ್ನು ಬಾಳುವುದು: ಇವುಗಳಲ್ಲಿ ಬಾಳುವುದೇ ದೊಡ್ಡದು ಅಲ್ಲವೆ? ಬಾಳಿಗಾಗಿ ಸಾಹಿತ್ಯ ರಚಿಸುವುದು ಅಲ್ಲ - ಬಾಳಿಗಾಗಿ ಸಾಹಿತ್ಯ ಸಂಭವಿಸುವುದು ಬಹಳ ಅಮೂಲ್ಯವಾದುದು. ನಮ್ಮಲ್ಲಿ ಇಂದಿಗೂ ಇಂಥ ಸಂಭವನೀಯತೆಗಳು ಇವೆ. ಕಾಲದ ಅಗತ್ಯಗಳಿಗೆ ತಕ್ಕ ಸಾಹಿತ್ಯದ ಪರ್ಯಾಯ ಆಚರಣೆಗಳ ಶೋಧನೆ, ಬಳಕೆ ಬಹು ಮುಖ್ಯವಾದ್ದು ಅಲ್ಲವೆ ?

ಈಗೀಗ ನಮ್ಮ ಹಳ್ಳಿಗಳು ಬದಲಾಗಿವೆ. ನಮ್ಮ ಹಳ್ಳಿಗಳಲ್ಲಿ ಮೊದಲು ರಾಜಕೀಯ, ಸೌಲಸಲಾತಿ, ಟೀವಿ, ಸಿನೆಮಾ, ಕೇಬಲ್ಲುಗಳು ಬರುವುದಕ್ಕೆ ಮುಂಚೆ ಅವರ ನೈತಿಕ ಮೌಲ್ಯಗಳನ್ನು ನಮ್ಮ ಬಹುತೇಕ ಮೌಖಿಕ ಸಾಹಿತ್ಯ ಪ್ರಕಾರಗಳು, ಹರಿಕತೆ, ಬಯಲಾಟದಂತಹ ಪ್ರದರ್ಶನ ಸಂಗತಿಗಳು, ಯಾತ್ರೆ, ಭಜನೆ, ಕೋಲಾಟ ಇತ್ಯಾದಿಗಳು ರೂಪಿಸುತ್ತಿದ್ದವು. ಜನಗಳ ತತ್ವ, ನಡಾವಳಿ, ಜೀವನದರ್ಶನಗಳು ಮತ್ತೆ ಮತ್ತೆ ಇಂಥ ಸಾಹಿತ್ಯದ ಅನುಸಂಧಾನಗಳಿಂದ ರೂಪುಗೊಳ್ಳುತ್ತಿದ್ದವು. ಆದರೆ ಇತ್ತೀಚೆಗೆ ಬಾರುಗಳು, ರಾಜಕೀಯ ಅಧಿಕಾರ, ಟೀವಿ ಕೇಬಲ್ಲುಗಳು ಹಳ್ಳಿಗಳ ಸಾಂಸ್ಕೃತಿಕ ಜೀವನ ಮತ್ತು ದರ್ಶನಗಳನ್ನು ಬಹುಪಾಲು ರೂಪಿಸುತ್ತಿವೆ. ಸಾರ್ವತ್ರಿಕ ಶಿಕ್ಷಣದ ಪಾತ್ರ, ಸಾಹಿತ್ಯ ಕಲೆಗಳ ಅನುಸಂಧಾನದ ಪಾತ್ರ ತೀರಾ ಗೌಣವಾಗಿದೆ. ಬೇಡ ಬೇಡವೆಂದರೂ ಅವರ ಮನಸ್ಸು, ನಾಡಿಮಿಡಿತಗಳನ್ನೇ ಬದಲಿಸುವಷ್ಟು ಶಕ್ತಿಯನ್ನು ಟೀವಿ ಚಾನೆಲ್ಲು, ಸಿನೆಮಾ ಮತ್ತು ಸ್ಥಳೀಯ ರಾಜಕಾರಣಗಳು ಪಡೆದಿವೆ. ಹಳ್ಳಿಗಳ ಋತುಮಾನಗಳೂ ಬದಲಾಗುತ್ತಿವೆ. ಜೀವನ ವಿಧಾನಗಳೂ ಬದಲಾಗುತ್ತಿವೆ. ಪ್ರತಿಯೊಂದೂ ಪ್ಯಾಕೇಜಿನ ರೂಪದಲ್ಲಿ ದೊರೆಯುವುದರಿಂದ ಜನ ಗ್ರಾಹಕರು ಮಾತ್ರ ಆಗುವ ಅನಿವಾರ್ಯತೆ ಸೃಷ್ಟಿಯಾಗಿದೆ. ಇನ್ನು ಸಾಹಿತ್ಯದ ಅನುಸಂಧಾನಗಳು ಬದಲಾಗದೇ ಇರುತ್ತವೆಯೇ ? ನಾವೆಲ್ಲ ಇಂದು ಸಾಹಿತ್ಯದ ಸ್ವರೂಪ, ಅಗತ್ಯ, ಪಾತ್ರ, ಪ್ರಾಮುಖ್ಯತೆಗಳನ್ನು ಗಂಭೀರವಾಗಿ ಮರುನಿರ್ವಚನೆ ಮಾಡಿಕೊಳ್ಳಬೇಕಾಗಿದೆ.

ಮೌಖಿಕ ಪರಂಪರೆಗಳಷ್ಟೇ ಅಲ್ಲದೆ ಪ್ರತಿಷ್ಠಿತ ಸಾಹಿತ್ಯ ಕೂಡ ಜನಕ್ಕೆ ಬೇಕೇ ಬೇಕು ಎಂಬ ಸ್ಥಿತಿ ಇಲ್ಲ. ಸಾಮಾಜಿಕ ನ್ಯಾಯ, ಸಮಾನತೆ, ಪ್ರಜಾಪ್ರಭುತ್ವೀಯ ಸ್ಥಿತಿ, ಉದ್ಯೋಗ, ಆತ್ಮಗೌರವ ಇತ್ಯಾದಿಗಳನ್ನು ತಂದುಕೊಡುವ ಶಕ್ತಿ ಆಧುನಿಕ ಸಾರ್ವತ್ರಿಕ ಶಿಕ್ಷಣಕ್ಕೆ ಇದೆ ಎಂಬ ಭ್ರಮೆ ಕೂಡ ಈಗೀಗ ನಿರಸನಗೊಳ್ಳುತ್ತಿದೆ. ಸಾಕ್ಷರರಾದವರೆಲ್ಲ ತಮ್ಮ ನಿಕೃಷ್ಟ ಜೀವನದಿಂದ ವಿಮೋಚನೆ ಪಡೆಯುತ್ತಾರೋ ? ಇದೂ ಒಂದು ದೊಡ್ಡ ಪ್ರಶ್ನೆ.

ಮತ್ತೆ ಮತ್ತೆ ಯಾವ ಸಾಹಿತ್ಯ ಕಲೆಗಳು ನಿಯಂತ್ರಣವಿಲ್ಲದೆ ನಮ್ಮ ಜನರ ಮನಸ್ಸನ್ನು ಪ್ರವೇಶ ಮಾಡುತ್ತಿರುತ್ತವೋ ಅದನ್ನೇ ಸಮಾಜವು ಒಪ್ಪಿ ಬಳಸುವ ಪರಿಪಾಠವು ಬೆಳೆಯುತ್ತಿದೆ. ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲದಾಗ ಒಪ್ಪಿಕೊಳ್ಳಲೇಬೇಕಲ್ಲ! ಸಂವಹನವು ಅತಿಯಾದರೆ ನಮ್ಮ ನಮ್ಮ ಭಾವಕೋಶ-ಮೌಲ್ಯಲೋಕವನ್ನೇ ಕಬಳಿಸಿಬಿಡುವ ಅಪಾಯ ಇರುತ್ತದೆ. ಸಿನೆಮಾ, ಟೀವಿಗಳಿಂದ ಇದು ಆಗುತ್ತಿದೆ. ನಮ್ಮಲ್ಲಿಂದು ಪ್ರತಿಷ್ಠಿತ ಸಾಹಿತ್ಯವು ಸಂವಹನದ ಕೊರತೆಯಿಂದ ನರಳುತ್ತಿದ್ದರೆ, ಚಿತ್ರಸಾಹಿತ್ಯವು ಅತಿಸಂವಹನದ ಕೊಬ್ಬಿನಿಂದ ಬೆಳೆಯುತ್ತಿದೆ. ಪುಸ್ತಕದ ಓದೆಂಬುದು ಶ್ರಮ-ಬಿಡುವು-ಏಕಾಗ್ರತೆ-ವೈಯಕ್ತಿಕ ತೊಡಗುವಿಕೆಯನ್ನು ಬೇಡುವ ಕೆಲಸ. ಕೇಳುವ, ನೋಡುವ ಜನ ರಿಮೋಟು ಕೈಯ್ಯಲ್ಲಿ ಹಿಡಿದು ಮೂರ್‍ನಾಲ್ಕು ಸೆಕೆಂಡುಗಳ ಕಾಲ ಕೂಡ ಏಕಾಗ್ರವಾಗಿ ಒಂದೆಡೆ ನಿಲ್ಲಲಾರರು ಎಂದ ಮೇಲೆ ಇವರು ಪುಸ್ತಕಗಳನ್ನು ಓದುತ್ತಾರಾ ? ಪುಸ್ತಕ ಸಂಸ್ಕೃತಿಯನ್ನು ಬೆಳೆಸುತ್ತಾರಾ ? ಇಂಥ ನಿಷ್ಕ್ರಿಯ ವೀಕ್ಷಕ-ಕೇಳುಗರೇ ಹೆಚ್ಚಾಗುತ್ತಿರುವ ಕಡೆ ಓದುವ ಅಭಿರುಚಿ-ವಾತಾವರಣವನ್ನು ಬೆಳೆಸುವುದು ಒಂದು ಸವಾಲೇ ಸರಿ. ಓದುವಾಗ ತನ್ನದೇ ಆದ ಕಲ್ಪನಾ ಶಕ್ತಿ ಓದುಗನಿಗೆ ಇರಬೇಕಾಗುತ್ತದೆ. ಸಾಹಿತ್ಯ ಕಥನದೊಂದಿಗೆ ಓದುಗ ತಾನೂ ಯಾನಿಸ ಬೇಕಾಗುತ್ತದೆ. ಕಥನದ ಭಾವಲೋಕದೊಳಗೆ ಇರಬಹುದಾದ ಖಾಲಿ ಸ್ಪೇಸುಗಳನ್ನು ತುಂಬಿಕೊಳ್ಳಬೇಕಾಗುತ್ತದೆ. ಲಿಪಿಕ ಅಭಿವ್ಯಕ್ತಿಯನ್ನು ತನ್ನದೇ ದೃಶ್ಯಾತ್ಮಕ ಕಲ್ಪನೆಗಳಿಂದ ಓದುಗ ಸಜೀವಗೊಳಿಸಿಕೊಳ್ಳಬೇಕಾಗುತ್ತದೆ. ಇಂಥ ಕಡೆ ಓದುಗನಿಗೆ ಅವನದೇ ಸ್ಪೇಸು ಸಾಹಿತ್ಯದಲ್ಲಿ ಇರುತ್ತದೆ. ಆದರೆ ದೃಶ್ಯ ಮತ್ತು ಶ್ರವಣಗಳು ಓದುಗನ ಕ್ರಿಯಾಶೀಲ ತೊಡಗುವಿಕೆಯನ್ನು ಕಡಿಮೆ ಮಾಡುತ್ತವೆ. ಅಥವಾ ಓದುಗನಿಗೆ ಇರಬಹುದಾದ ಕಷ್ಟಗಳನ್ನು ಸುಲಭ ಮಾಡುತ್ತವೆ. ಇದರಿಂದ ನಿತ್ಯ ಬದುಕಿನ ಜಂಜಡಗಳಿಂದ ಬೇಸತ್ತವರು ಸುಲಭ ಮನರಂಜನೆಗಾಗಿ ದೃಶ್ಯ-ಶ್ರವಣ ಮಾಧ್ಯಮಗಳಿಗೆ ಹೋಗುತ್ತಾರೆ.

ಕಂಪ್ಯೂಟರಿನಲ್ಲಿ ಅಷ್ಟೇ ಅಲ್ಲ. ಮೊಬೈಲುಗಳಲ್ಲಿಯೂ ಎಫ್.ಎಂ- ಎಂ.ಎಂ.ಎಸ್. -ಮೆಮರಿಕಾರ್ಡ್-ಇಂಟರ್ನೆಟ್ ಬಂದು ಏಕಾಕಿ ಆಗಿದ್ದೂ ಜನರೊಂದಿಗೆ ಇರುವ ಅನುಭವ, ವರ್ತನೆ ನಮ್ಮ ಜನಗಳಲ್ಲಿ ಹೆಚ್ಚುತ್ತಿದೆ. ಭೌತಿಕ ಸಮುದಾಯಗಳಿಗಿಂತ ಮಾನಸಿಕ ಸಮುದಾಯಗಳು ಹೆಚ್ಚಾಗುತ್ತಾ ಇವೆ. ಇಂಟರ್ನೆಟ್ಟಿನಲ್ಲಿ ಪತ್ರಿಕೆಗಳನ್ನು ನಡೆಸುವ-ಮಾಹಿತಿಗಳನ್ನು ವಿನಿಮಯ ಮಾಡಿಕೊಳ್ಳುವ-ಹೇಳಿಕೊಳ್ಳುವ ಬ್ಲಾಗುಗಳನ್ನು ನಿರ್ಮಿಸುವ ಒಂದು ಮಹಾ ಜಾಲವೇ ಇದೆ. ಇಂಥ ಕಡೆ ನಡೆಯುವ ಸಾಹಿತ್ಯದ ಅನುಸಂಧಾನ ಬಹು ಸೀಮಿತವಾದ ಸಮುದಾಯಗಳಲ್ಲಿ ನಡೆಯುತ್ತಿರುತ್ತದೆ. ಇಲ್ಲಿ ಸಾಹಿತ್ಯವು ಹೆಚ್ಚು ಹೆಚ್ಚು ಮಾಹಿತಿಯ ರೂಪದಲ್ಲಿ ಸಂವಹನಗೊಳ್ಳುತ್ತದೆ. ಯಾವಾಗ ಬೇಕಾದರೂ ಯಾರು ಬೇಕಾದರೂ ನೋಡಬಹುದಾದ ಸರಕಾಗಿ ಇದು ಬಿದ್ದಿರುತ್ತದೆ. ಅಂತರ್ಜಾಲ ಶಿಕ್ಷಿತ ಸಮುದಾಯಕ್ಕೆ (ಕಂಪ್ಯೂಟರ್ ಲಿಟರೇಟ್ಸ್‌ಗೆ)

ಮಾತ್ರ ಸೀಮಿತವಾದ ಜಗತ್ತು ಇದು. ನಮ್ಮಲ್ಲಿ ಇ-ಬುಕ್ಕುಗಳನ್ನು ಓದುವ, ಇ-ತಾಣಗಳನ್ನು ಎಡತಾಕುವ, ಬ್ಲಾಗುಗಳಲ್ಲಿ ಬರೆಯುವ ಜನ ಸಮುದಾಯ ತುಂಬಾ ಕಡಿಮೆ ಇದೆ ಮತ್ತು ಅದು ಈಗೀಗ ವೇಗವಾಗಿ ವೃದ್ಧಿಯಾಗುತ್ತಿದೆ. ಇಂಥ ಗುಂಪುಗಳ ಬೆಳವಣಿಗೆಯಿಂದ ಪುಸ್ತಕದ ಓದಿನ ಮೇಲೆ ಎಂಥ ಪರಿಣಾಮ ಬೀಳುತ್ತದೆ ಎಂದು ಕಾಯ್ದು ನೋಡಬೇಕಾಗಿದೆ.

ಪುಸ್ತಕಗಳನ್ನು ಜನಕ್ಕೆ ತಲುಪಿಸುವುದು ಒಂದು ರೀತಿಯ ಸಂವಹನವಾದರೆ ಅದಕ್ಕಿಂತಲೂ ಮೊದಲು ಇಂತಿಂಥ ಪುಸ್ತಕಗಳು ಇವೆ ಎಂಬ ಅರಿವನ್ನು ಜನರಿಗೆ ನೀಡುವುದು ಇನ್ನೂ ಪ್ರಾಥಮಿಕ ಹಂತದ ಸಂವಹನ. ಯಾವುದೇ ಸಾಂಸ್ಕೃತಿಕ ಉತ್ಪನ್ನವನ್ನು ಮಾರಲು ಅದು ಇದೆ ಎಂಬ ಬಗ್ಗೆ ತಿಳಿವಳಿಕೆ ನೀಡುವುದೂ ಮುಖ್ಯವಲ್ಲವೇ ? ಪುಸ್ತಕಗಳನ್ನು ಗಮನಕ್ಕೆ ತರುವ, ಕೊಳ್ಳಲು ಪ್ರೇರೇಪಿಸುವ, ಪುಸ್ತಕಗಳನ್ನು ಕೊಂಡು ಮನೆಗಳಲ್ಲಿ ಕಿರು ಗ್ರಂಥಾಲಯಗಳನ್ನು ಇಟ್ಟುಕೊಳ್ಳುವಂತೆ ಪ್ರತಿಯೊಂದು ಕುಟುಂಬವನ್ನು ಪ್ರೇರಿಸುವ ಮಾರ್ಗೋಪಾಯಗಳು ನಮ್ಮಲ್ಲಿ ಶಕ್ತಿಯುತವಾಗಿಲ್ಲ. ಒಂದೊಂದು ಶಿಕ್ಷಿತ ಕುಟುಂಬದಲ್ಲೂ ಟೀವಿ, ಫ್ರಿಜ್ಜು, ಕಂಪ್ಯೂಟರುಗಳು ಐಶಾರಾಮಿ ಆದರೂ ಅಗತ್ಯ ವಸ್ತುಗಳೆಂಬಂತೆ ಆಗುತ್ತಿವೆ. ಆದರೆ ಪುಸ್ತಕಗಳೇಕೆ ಹೀಗೆ ಆಗುತ್ತಿಲ್ಲ?

ಇನ್ನು ನಮ್ಮ ರೇಡಿಯೋಗಳಲ್ಲಿ ನಿತ್ಯ ಬಿತ್ತರವಾಗುವ ಚಿಂತನ ಕಾರ್ಯಕ್ರಮಗಳನ್ನು ಇಲ್ಲಿ ನೆನಪಿಸಿಕೊಳ್ಳಲೇ ಬೇಕು. ನಮ್ಮ ಆಧುನಿಕ ಸಾಹಿ ಸೃಷ್ಟಿ ಮತ್ತು ಸಾಹಿತ್ಯದ ಅನುಸಂಧಾನ ಎರಡ ಬ್ಲೆಂಡಾಗಿರುವ ಒಂದು ಕಾರ್ಯಕ್ರಮ ಇದು. ಚಿಂತನೆ ಮುದ್ರಿತ ರೂಪಗಳೂ ಅಲ್ಲಲ್ಲಿ ಸಿಗುತ್ತವೆ. ಹೊಸತ ಪ್ರಜಾವಾಣಿ, ವಿಜಯ ಕರ್ನಾಟಕಗಳಲ್ಲಿ ಇಂಥದ್ ಖಾಯಂ ಕಾಲಮ್ಮುಗಳಿವೆ. ಇಂಥ ಚಿಂತನ ಪ್ರಕಾರ ಇತ್ತೀಚೆಗೆ ಸೃಷ್ಟಿಯಾಗುತ್ತಿರುವ ಒಂದು ಹೊಸ ಸಾಹಿ ಪ್ರಕಾರವೇ ಆಗಿದೆ. ಇದನ್ನು ಚಿಂತನ ಸಾಹಿತ್ಯ ಎಂದ ಕರೆಯಬಹುದು. ಲಂಕೇಶ್, ಅಗ್ನಿ, ಕನ್ನಡ ಟೈಮ ಪತ್ರಿಕೆಗಳಲ್ಲಿ ಪ್ರಕಟವಾದ, ಆಗುತ್ತಿರುವ ಕಟ್ಟೆ ಪುರಾ ಒಕ್ಕಲ ಒನಪು, ಭಳಾರೆ ವಿಚಿತ್ರಂ, ಅಮಾಸೆ ಟೈಮ ಇಂಥ ಕಾಲಂಗಳು ಹೊಸ ಪ್ರಕಾರಗಳನ್ನು ಸೃಷ್ಟಿಸುತ್ತಿ ಲಲಿತ ಸಾಹಿತ್ಯ ಎಂದೇ ಇವನ್ನು ಕರೆಯಬಹುದು ಪತ್ರಿಕೆ, ರೇಡಿಯೋ, ಟೀವಿಗಳು ಸಾಹಿತ್ಯ ಅನುಸಂಧಾನಕ್ಕೆ ತೊಡಗಿದಾಗ ಹೀಗೆ ಸಾಹಿತ್ಯ ಜನ ತಲುಪುತ್ತಲೇ ಹೊಸ ವಿನ್ಯಾಸಗಳನ್ನು ಪಡೆಯು ಹೋಗುತ್ತದೆ.

ಇಲ್ಲೇ ಇನ್ನೊಂದು ರೀತಿಯ ಸಾಹಿತ್ಯ ಅನುಸಂಧಾನವನ್ನು ನೆನಪಿಸಿಕೊಳ್ಳಬೇಕು. ಕಿರಂ ಅವ ಕಾವ್ಯ ಮಂಡಲ, ಶಿವರಾತ್ರಿ ದಿನ ನಡೆಸು ಮಂಟೇಸ್ವಾಮಿ ದಿನಾಚರಣೆ ಮೌಖಿಕ ಪರಂಪರೆಯ ಪ್ರತಿಷ್ಠಿತ ಪರಂಪರೆಯ ಮುಖಾಮುಖಿಯಾಗಿಸುವ ಒಂದು ಕಾರ್ಯಕ್ರಮವಾಗಿದೆ. ಇ ಭಕ್ತಿಗಿಂತ ಸಾಹಿತ್ಯದ ಜೊತೆ ನಿರ್ಭೀದವಾಗಿ ಒಡನಾಡುವ ಅಭಿರುಚಿ ನಿರ್ಮಾ



ಬರಲಿರುವ ಹೊಸವರ್ಷದಲ್ಲಿ ನಿಮಗೆ ಉಜ್ವಲ ಭವಿಷ್ಯ ಇದೆ...! ಆದರೆ ಅಧಿಕಾರಯೋಗ ಬರಬೇಕಷ್ಟೆ..?!


## ನಮ್ಮ ಜನಪ್ರಿಯ ಹೊಸ ಪ್ರಕಟಣೆಗಳು

1. ನೂತನ ರುಚಿಕರ ಪಾಕಶಾಸ್ತ್ರ — ಬಿ. ಎಂ. ಕೋಮಲ 30.00
2. ಭಯ, ದುಃಖ, ಕೋಪಗಳ ಹತೋಟಿ ಹೇಗೆ ? ಡಾ|| ಸಿ. ಆರ್. ಚಂದ್ರಶೇಖರ್ 5.00
3. ನಮ್ಮ ನಿಮ್ಮ ಅಸಹಜ ನಡೆವಳಿಕೆಗಳಿಗೆ ಪರಿಹಾರವೇನು ?* — ಡಾ|| ಸಿ. ಆರ್. ಚಂದ್ರಶೇಖರ್ 25.00
4. How to Keep the Mind Strong & Healthy — *Dr. C. R. Chandrashekar* 15.00
5. (ಅ)ವಿವಾಹಿತರ ಸಮಸ್ಯೆಗಳು ಹಾಗೂ ಪರಿಹಾರ — ಡಾ|| ಸಿ. ಆರ್. ಚಂದ್ರಶೇಖರ್ 45.00
6. ಸಸ್ಯ ವಿಜ್ಞಾನಿ ಬಿ.ಜಿ.ಎಲ್. ಸ್ವಾಮಿ — ಬೆ. ಗೋ. ರಮೇಶ್ 25.00
7. ಕರ್ನಾಟಕದ ಔಷಧೀಯ ಸಸ್ಯಗಳು (ಮಾಲಿಕೆ-1) — ಡಾ|| ಮಾಗಡಿ ಆರ್. ಗುರುದೇವ 150.00
8. ಕರ್ನಾಟಕದ ಔಷಧೀಯ ಸಸ್ಯಗಳು (ಮಾಲಿಕೆ-2) — ಡಾ|| ಮಾಗಡಿ ಆರ್. ಗುರುದೇವ 300.00
9. ಕರ್ನಾಟಕ ಸಸ್ಯಗಳ ಸಸ್ಯಶಾಸ್ತ್ರೀಯ, ಕನ್ನಡ ಕೊಂಕಣಿ ಮತ್ತು ತುಳು ಹೆಸರುಗಳು — ಡಾ|| ಮಾಗಡಿ ಆರ್. ಗುರುದೇವ 300.00
10. Bibliography of Medical Plants of India — *S. N. Yoganarasimhan, Magadi R. Gurudeva* 1000.00
11. Eminent Leaders of India — *B. G. Ramesh* 60.00
12. Botanical and Vernacular Names of South Indian Plants — *Dr. Magadi R. Gurudeva* 800.00
13. ಶೃಂಗಾರ ಲಹರಿ (ಸಂಸ್ಕೃತದ ಆರು ಶ್ರೇಷ್ಠ ಶೃಂಗಾರ ಕಾವ್ಯಗಳ ಅಪೂರ್ವ ಸಂಕಲನ) — ಡಾ|| ಬಿ. ಆರ್. ಸುಹಾಸ್ 150.00
14. ಆಯುರ್ವೇದದ ಅದ್ಭುತ ಗುಣಗಳು ಹಾಗೂ ಸರಳ ಚಿಕಿತ್ಸೆಗಳು — ಡಾ|| ವೈ. ಪರಮೇಶ್ವರಯ್ಯ 60.00
15. ಅಪೂರ್ವ ಗಿಡಮೂಲಿಕೆಗಳು ಹಾಗೂ ಸರಳ ಚಿಕಿತ್ಸೆಗಳು — ವೈದ್ಯ ಎ. ಆರ್. ಎಂ. ಸಾಹೇಬ್ 50.00
16. ಶತಾಯುಷ್ಯಕ್ಕಾಗಿ ಪರ್ಯಾಯ ಚಿಕಿತ್ಸೆಗಳು — ಡಾ|| ಟಿ. ಜಿ. ಹೊನ್ನಗಿರಿಯಪ್ಪ 50.00
17. ಹಾಸ್ಯಮಲ್ಲಿಗೆ — 'ಪಾಪಪಾಂಡು' ಖ್ಯಾತಿಯ 20.00
18. ವರ್ಗಾವರ್ಗಿ* — ಎಂ. ಎಸ್. ನರಸಿಂಹಮೂರ್ತಿ 35.00
19. ಚುಕ್ಕಿ ಚಿತ್ರಗಳಲ್ಲಿ ಶತಸಾಹಿತ್ಯ ಪ್ರತಿಭೆ — ಮೋಹನ್ ವರ್ಣೇಕರ್ 200.00 (ಕನ್ನಡದ ನೂರು ಮಂದಿ ಪ್ರಸಿದ್ಧ ಸಾಹಿತಿಗಳ ಚುಕ್ಕಿ ಚಿತ್ರಗಳು ಮತ್ತು ಪರಿಚಯ ಸಂಗ್ರಹ)
20. ನಮಗೆ ಖಾಯಿಲೆಗಳು ಏಕೆ ಬರುತ್ತವೆ ? — ಡಾ|| ಟಿ. ಜಿ. ಹೊನ್ನಗಿರಿಯಪ್ಪ 20.00
21. ಆರೋಗ್ಯಕ್ಕಾಗಿ ಔಷಧಿಯ ಗುಣವುಳ್ಳ ನೀರು ಸೇವನೆ — ಎಂ. ಎಲ್. ರಾಯಮಾನೆ 20.00
22. ಮಂದಸ್ಮಿತ — ಎಂ. ಎಸ್. ನರಸಿಂಹಮೂರ್ತಿ 35.00
23. ಭಾರತದ ರತ್ನ ಡಾ|| ರಾಜ್‌ಕುಮಾರ್ — ಬೆ. ಗೋ. ರಮೇಶ್ 60.00
24. ಮೊದಲ 100 ವರ್ಷಗಳು - ಜೋಗ ಜಲಪಾತ — ನಾ. ಡಿಸೋಜ 45.00
25. ಸದಾ ಆರೋಗ್ಯವಾಗಿರುವುದು ಹೇಗೆ? — ಡಾ|| ಸಿ. ಆರ್. ಚಂದ್ರಶೇಖರ್ 15.00
26. ನಿಮ್ಮ ಮಗುವಿನ ಮಾನಸಿಕ ಆರೋಗ್ಯ* — ಡಾ|| ಸಿ. ಆರ್. ಚಂದ್ರಶೇಖರ್ 30.00
27. ನಿಮ್ಮ ವಿಶ್ರಾಂತಿ ನಿಮ್ಮ ಆರೋಗ್ಯ ಮತ್ತು ಆಯಾಸ ಕಾರಣ - ಪರಿಹಾರ — ಎನ್. ವಿಶ್ವರೂಪಾಚಾರ್ 20.00

* ರಾಜ್ಯಸಾಹಿತ್ಯ ಅಕಾಡೆಮಿ ಬಹುಮಾನಿತ ಕೃತಿಗಳು

ಇದೀಗ ಪ್ರಕಟವಾಗಿದೆ : (1) ಆರೋಗ್ಯದರ್ಶನ ಎನ್. ಗೋಪಾಲಕೃಷ್ಣ (2) ಶತಾಯುಷ್ಯದ ಜೀವನ ಶೈಲಿ ನಿಮ್ಮ ಆರೋಗ್ಯ ಎನ್. ವಿಶ್ವರೂಪಾಚಾರ್ (3) ಮಾನಸ ಡಾ|| ಕೆ. ವಿ. ಅಶೋಕ ಪೈ (4) ಬದುಕಿಗೆ ಬಣ್ಣ ನಾ. ಡಿಸೋಜ (5)ನೀತಿಬೋಧಕ ಮಕ್ಕಳ ರಾಮಾಯಣ ಮೋಹನ್ ವರ್ಣೇಕರ್ (6) ಸವಿ ಉಷಾನವರತ್ನರಾಮ್ (7) ಹ್ಯಾಪಿಬರ್ತ್‌ಡೇ ಉಷಾನವರತ್ನರಾಮ್ (8) ಸುವರ್ಣಕರ್ನಾಟಕ ಬೆ.ಗೋ.ರಮೇಶ್ (9) **Ramayana** *K. Narayana Rao*

# ದಿವ್ಯಚಂದ್ರ ಪ್ರಕಾಶನ

'ಕಾಳಿಕಾ ಸೌಧ', ನಂ. 6/7, ಪೂರ್ಣಯ್ಯ ಛತ್ರದ ರಸ್ತೆ (ಕಾರ್ಪೋರೇಷನ್ ವಾರ್ಡ್ ಆಫೀಸ್ ಎದುರು) ಬಳೆಪೇಟೆ ಕ್ರಾಸ್, ಬೆಂಗಳೂರು - 560 053 ✆ 23404627 ಮೊಬೈಲ್ : 9448259595

ಪ್ರಧಾನವಾದುದು. ಇಂಥ ಕಾರ್ಯಕ್ರಮ ಸಾಹಿತ್ಯವನ್ನು ಜನಕ್ಕೆ ತಲುಪಿಸುವ ಜೊತೆಗೆ ಮೌಖಿಕ ಸಾಹಿತ್ಯವನ್ನು ಪ್ರತಿಷ್ಠಿತರು ಪುಣ್ಯಶ್ರವಣದಂತೆ ಎದುರ್ಗೊಳ್ಳುವ ಕ್ರಿಯೆಯಾಗಿದೆ.

ಎಲ್ಲ ರೀತಿಯ ಸಾಹಿತ್ಯಕ ಅನುಸಂಧಾನಗಳೂ ಒಂದು ರೀತಿಯಲ್ಲಿ ವಿಮರ್ಶೆಗಳೇ. ಆದರೂ ಸರಿಸುಮಾರು ೧೮೩೦ರಿಂದ ೧೯೩೦ರ ನಡುವಿನ ಕಾಲವನ್ನು ಆಧುನಿಕ ವಿಮರ್ಶೆಯ ಸಂಭವಕಾಲ ಎಂದು ಕರೆಯಬಹುದು. ಪ್ರಚಾರೋಪನ್ಯಾಸಗಳು, ಸಾಹಿತ್ಯ ಚರಿತ್ರೆ ರಚನೆಗಳು, ಗ್ರಂಥಸಂಪಾದನಾ ಶಾಸ್ತ್ರ, ಟೀಕು, ವ್ಯಾಖ್ಯಾನ, ಸರಳಾನುವಾದ, ವಿಚಾರ ಸಂಕಿರಣ, ಕಮ್ಮಟ, ಸಂಶೋಧನೆ, ಶಿಕ್ಷಣಪಠ್ಯ ರಚನೆ, ಅಭಿನಂದನಾ ಗ್ರಂಥನಿರ್ಮಾಣ, ಶತಮಾನೋತ್ಸವ ಹೀಗೆ ಹತ್ತು ಹಲವು ರೀತಿಗಳಲ್ಲಿ ವಿಮರ್ಶೆಯು ಸಂಭವಿಸಿ ಸಾಹಿತ್ಯದ ಅನುಸಂಧಾನವನ್ನು ನಡೆಸಿದೆ ಅಥವಾ ಇಂಥ ಹತ್ತು ಹಲವು ರೀತಿಯ ಸಾಹಿತ್ಯದ ಅನುಸಂಧಾನಗಳಲ್ಲಿ ವಿಮರ್ಶೆಯು ಸೃಷ್ಟಿಯಾಗುತ್ತಲಿದೆ. ಇಂಥ ಕಡೆ ಆಧುನಿಕ ಶಿಕ್ಷಣ ಪಡೆದ ಸಾಹಿತ್ಯದ ಪ್ರತಿಷ್ಠಿತ ಓದುಗರು ವಿಮರ್ಶೆಯನ್ನು ಸೃಷ್ಟಿಸುತ್ತಿದ್ದಾರೆ. ಈ ವಿಮರ್ಶೆಗಳು ಒಳಗೊಳ್ಳುವುದು ಮತ್ತು ತಲುಪುವುದು ನಿರ್ದಿಷ್ಟ ಪ್ರತಿಷ್ಠಿತ ಜನವರ್ಗಗಳನ್ನು ಮಾತ್ರ. ಹಳ್ಳಿಗಳಿಗೆ-ಸಾಮಾನ್ಯ ಜನರಿಗೆ ಪ್ರತಿಷ್ಠಿತ ಸಾಹಿತ್ಯವನ್ನು ಮುಟ್ಟಿಸುವ (ಸಂವಹನಗೊಳಿಸುವ) ಯತ್ನಗಳು ಅಲ್ಲಲ್ಲಿ ಜರುಗಿವೆ- ಜರುಗುತ್ತಿವೆ. ಆದರೂ ಅವುಗಳ ಪ್ರಮಾಣ ಮತ್ತು ಪರಿಣಾಮ ಬಹಳ ಕಡಿಮೆ.

ವಿಮರ್ಶೆಯ ಕಾರ್ಯ, ಉದ್ದೇಶಗಳಲ್ಲಿ ಸಾಹಿತ್ಯದ ಭಿನ್ನ ಭಿನ್ನ ಓದುಗಳನ್ನು ಪ್ರಸ್ತುತಪಡಿಸುವುದು ಕೂಡ ಒಂದು ಉದ್ದೇಶ. ಇಂತಹ ಭಿನ್ನ ಓದಿನ ಪ್ರಸ್ತುತಿಯು ಸಾಹಿತ್ಯದ ಭಿನ್ನ ರೂಪಿ ಸಂವಹನಕಾರ್ಯವನ್ನು ನಿರ್ವಹಿಸಬಹುದು. ಆದರೆ ವಿಮರ್ಶೆಯು ಓದುಗನ ಅಭಿವ್ಯಕ್ತಿ ಮಾಧ್ಯಮವೇ ವಿನಾ ಅದನ್ನು ಸಾಹಿತ್ಯದ ಸಂವಹನಕಾರ್ಯವೆಂದು ಕರೆಯಲಾಗುವುದಿಲ್ಲ. ಹಾಗೆ ನೋಡಿದರೆ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿನ ಓದಿ ಅರ್ಥ ಹೇಳುವ, ವಿವರಿಸಿ ತಿಳಿಸುವ ಕೆಲಸ ಕೂಡ ಸಾಹಿತ್ಯದ ಸಂವಹನವೇ ಆಗಿದೆ. ಕಾದಂಬರಿ, ಕತೆ ಮತ್ತು ಲೇಖಕರ ಜೀವನಗಳನ್ನು ಆಧರಿಸಿ ರಂಗಪಠ್ಯಗಳನ್ನು ನಿರ್ಮಾಣ ಮಾಡಿ ನಾಟಕ ಆಡಿಸುವ ಪರಿಪಾಠವೂ ನಮ್ಮಲ್ಲಿದೆ. ಬೇಂದ್ರೆ, ಕುವೆಂಪು, ಕೆಎಸ್‌ನ, ದೇವನೂರು, ಲಂಕೇಶ್, ಅನಂತಮೂರ್ತಿ ಇಂಥವರ ಕುರಿತಾಗಿ ನಮ್ಮಲ್ಲಿ ನಾಟಕಗಳು ತಯಾರಾಗಿ ಪ್ರಯೋಗವಾಗಿವೆ. ಇವೂ ಕೂಡ ರಂಗಭೂಮಿಯನ್ನು ಸಮೂಹ ಸಂವಹನ ಮಾಧ್ಯಮದಂತೆ ಬಳಸಿ ಸಾಹಿತ್ಯವನ್ನು ಇನ್ನಷ್ಟು ಮತ್ತಷ್ಟು ಜನರಿಗೆ ತಲುಪಿಸುವ ಅನುಸಂಧಾನಗಳು. ಇಂಥ ಕಡೆ ಸಾಹಿತ್ಯ ಮತ್ತು ರಂಗಭೂಮಿಯ ಸಂಬಂಧಗಳೂ ವ್ಯಕ್ತವಾಗುತ್ತವೆ. ಸಾಹಿತ್ಯಸಂಬಂಧಿ ಹಬ್ಬಗಳು, ಜಾತ್ರೆಗಳು ಕೂಡ ನಮ್ಮಲ್ಲಿ ನಡೆಯುತ್ತವೆ. ಪರಿಷತ್ತಿನ ಸಮ್ಮೇಳನಗಳು, ವಿಶ್ವವಿದ್ಯಾಲಯಗಳ ವಿಚಾರಸಂಕಿರಣ-ಸಾಂಸ್ಕೃತಿಕ ಮುಖಾಮುಖಿಗಳು, ಪರ್ಯಾಯ ಸಮ್ಮೇಳನ, ಪೂರಕ ಸಮ್ಮೇಳನಗಳು, ಜಾನಪದ ಜಾತ್ರೆಗಳು ಸಾಹಿತ್ಯವನ್ನು

> **ಕಾಡು ಮೃಗಗಳು**
>
> ಕಾಡು ತೊರೆದು
> ನಾಡು ಸೇರಿದ
> ಮೃಗಗಳು ಏರಿವೆ
> ವಿಧಾನ ಸೌಧದ ಮೆಟ್ಟಿಲು
> ಆಗಿದೆ ಅದು
> ಕಾಡ ಪ್ರವೃತ್ತಿಗೆ ತೊಟ್ಟಿಲು
>
> ಡಿ. ವಿ. ಬಡಿಗೇರ
> ತೆಗ್ಗಿನ ಪೇಟಿ ಓಣಿ
> ಅಂಚೆ: ಗದಗ - ಬೆಟಗೇರಿ - ೫೮೨೧೦೨

ಸಂಭ್ರಮದ ಸಾಮೂಹಿಕ ಆಚರಣೆಗಳನ್ನಾಗಿ ಮಾಡುತ್ತಿವೆ. ಹೊಸ ಪೀಳಿಗೆಯ ಶಿಕ್ಷಣ ಪಡೆದವರನ್ನು ಪ್ರತಿಷ್ಠಿತ ಸಾಹಿತ್ಯ ಪರಿವಾರದ ಒಳಕ್ಕೆ ಸೇರಿಸಿಕೊಳ್ಳುವ ಜೊತೆ ಜೊತೆಗೆ ಸಮಕಾಲೀನ ಸಂದರ್ಭದ ಸಾಹಿತ್ಯಕ ವಿಮರ್ಶೆಯೂ ಇಂಥ ಕಡೆ ನಡೆಯುತ್ತಿರುತ್ತದೆ.

ಕೆಲ ಸಾಂಸ್ಕೃತಿಕ ಕೇಂದ್ರಗಳು ಸಾಹಿತ್ಯ-ಸಂಸ್ಕೃತಿಯ ಅಭಿವೃದ್ಧಿಯನ್ನು ಇಂದಿನ ಜಾಗತೀಕರಣ, ಆಧುನಿಕೀಕರಣಗಳ ಎದುರೀಜು ಎಂಬಂತೆ ನಡೆಸುತ್ತಿವೆ. ಹೆಗ್ಗೋಡಿನ ನೀನಾಸಂ, ಉಡುಪಿಯ ಪ್ರಾದೇಶಿಕ ಸಂಶೋಧನಾ ಕೇಂದ್ರ, ಮೈಸೂರಿನ ರಂಗಾಯಣ, ಸಾಣೇಹಳ್ಳಿಯ ಶಿವಸಂಚಾರ ಕೇಂದ್ರ, ಕೋಲಾರದ ಆದಿಮ ಕೇಂದ್ರ, ಬೆಂಗಳೂರಿನ ಸುಚಿತ್ರ ಫಿಲಂ ಸೊಸೈಟಿ, ರಂಗಶಂಕರ, ಮೊದಲಾದ ಕೇಂದ್ರಗಳು; ಸಮುದಾಯ, ರಂಗನಿರಂತರ ಇತ್ಯಾದಿ ಹಲವು ರಂಗ ತಂಡಗಳು ತಮ್ಮದೇ ನೆಲೆಗಳಲ್ಲಿ ನಿರಂತರ ಸಾಹಿತ್ಯ ಸಂಸ್ಕೃತಿಯ ಅಭಿರುಚಿ ನಿರ್ಮಾಣ, ಸಂವಹನ, ಪ್ರಸಾರ ಕಾರ್ಯಗಳನ್ನು ನಡೆಸುತ್ತಿವೆ. ಚರ್ಚೆ, ಸಂವಾದ, ಓದು, ವೀಕ್ಷಣೆ, ವಿಚಾರಗೋಷ್ಠಿ, ರಂಗಪ್ರದರ್ಶನ, ರಂಗಸಂಚಾರ, ಜನಪದ ಕಲೆಗಳ ಅಭ್ಯಾಸ, ಪ್ರದರ್ಶನ ಮೊದಲಾದ ಬಗೆಗಳಲ್ಲಿ ಸಾಹಿತ್ಯ ಸಂವಹನದ ಹಲವು ಮಾರ್ಗಗಳನ್ನು ಶೋಧಿಸುತ್ತಿವೆ. ಆ ಮೂಲಕ ಸಮುದಾಯದ ಮೌಲ್ಯನಿರ್ಮಾಣದ ಕೆಲಸವನ್ನೂ, ವ್ಯಕ್ತಿಗಳ ವ್ಯಕ್ತಿತ್ವ-ಸಂಸ್ಕಾರಗಳ ನಿರ್ಮಾಣದ ಕೆಲಸವನ್ನೂ ಮಾಡುತ್ತಿವೆ. ಇಂಥ ಕೇಂದ್ರಗಳ ಸಾಹಿತ್ಯಕ ಅನುಸಂಧಾನಗಳು ಸಂವಹನವನ್ನು ಮಾತ್ರವೇ ತಮ್ಮ ಗುರಿಯನ್ನಾಗಿ ಹೊಂದಿಲ್ಲ. ಒಟ್ಟಾರೆ ಸಂಸ್ಕೃತಿಯ ಬೇರುಗಳನ್ನು ಬಲಪಡಿಸುವ ಕೆಲಸದಲ್ಲಿ ಸಾಹಿತ್ಯವನ್ನು ಒಂದು ಅನುಸಂಧಾನದ ವಲಯವನ್ನಾಗಿ ಪರಿಗಣಿಸುತ್ತಿವೆ. ಇಂಥ ಕಡೆ ಸಾಹಿತ್ಯದ ಒಣ ಸಂವಹನಕ್ಕಿಂತ ಸಾಹಿತ್ಯದ ಬಳಕೆ ಮುಖ್ಯವಾಗಿದೆ.

ಸಾಹಿತ್ಯದೊಂದಿಗೆ ಒಡನಾಟ ನಡೆಸುವಾಗ ಯಾವ ರೀತಿಯಲ್ಲಿ ನಾವು ಅದನ್ನು ನಮ್ಮ ಇಂದ್ರಿಯಾನುಭವಗಳಿಗೆ ಬರಮಾಡಿಕೊಳ್ಳುತ್ತೇವೆ ಅಥವಾ ಇನ್ನೊಬ್ಬರ ಇಂದ್ರಿಯಾನುಭವಗಳಿಗೆ ದೊರಕುವಂತೆ ಮಾಡುತ್ತೇವೆ ಎಂಬುದನ್ನು ಸಂವಹನದ ವಿಧಾನ ಎನ್ನಬಹುದು. ಸಂವಹನವು ತೀರಾ ವೈಯಕ್ತಿಕವಾದ ಖಾಸಗಿ ಚಟುವಟಿಕೆಯಾಗಿಯೂ, ಸಮೂಹ ಚಟುವಟಿಕೆಯಾಗಿಯೂ ಸಂಭವಿಸುವ ಎರಡೂ ಸಾಧ್ಯತೆಗಳಿವೆ. ಹಾಗೇ ಕಾಲಬದ್ಧ ಮತ್ತು ಕಾಲಾತೀತ, ಪ್ರದೇಶಬದ್ಧ ಮತ್ತು ಪ್ರದೇಶಾತೀತ, ವ್ಯಕ್ತಿತ್ವಾತೀತ, ಭಾಷೆ, ಜಾತಿಗಳಿಗೂ ಅತೀತವಾದ ಸಂವಹನ ಕೂಡ ಇಂದಿನ ತಾಂತ್ರಿಕತೆಯಲ್ಲಿ ಸಾಧ್ಯವಿದೆ. ನಮ್ಮ ಮನಸ್ಸುಗಳಿಗೇ ಮೂಗುದಾರ ಹಾಕಬಲ್ಲ ಸಂವಹನ ತಂತ್ರ, ಜಾಹೀರಾತು ತಂತ್ರಗಳು ಇರುವುದರಿಂದ ಸಂವಹನದ ಇಂದ್ರಿಯಾನುಭವದಲ್ಲಿ ವ್ಯಕ್ತಿನಿಷ್ಠತೆ, ಸಮುದಾಯನಿಷ್ಠತೆ, ಸಂಸ್ಕೃತಿನಿಷ್ಠತೆಗಳೂ ಕೂಡ ಅಪಹರಣವಾಗುವ ಸಾಧ್ಯತೆಗಳು ಆಧುನಿಕ ತಂತ್ರಜ್ಞಾನದಿಂದ ಸಾಧ್ಯವಾಗಿವೆ. ಏಕರೂಪಿ ಅಪೇಕ್ಷೆಗಳನ್ನು ವಿಶ್ವಾದ್ಯಂತ ಸೃಷ್ಟಿಸಲು ಸಾಧ್ಯವಾಗಿದೆ. ಇದು ಆತಂಕಕಾರಿ.

ಜನರಿಗೆ ತಿಳಿಯುವುದು, ಜನರ ಅರಿವು, ತಿಳುವಳಿಕೆಯ ಭಾಗವಾಗುವುದು ಸಂವಹನದ ಪ್ರಾಥಮಿಕ ಹಂತ. ನಮ್ಮ ಪ್ರತಿಷ್ಠಿತ ಸಾಹಿತ್ಯದ ಇರುವಿಕೆಯ ಬಗೆಗೇನೆ ಎಷ್ಟೋ ಜನರಿಗೆ ಅರಿವಿಲ್ಲ. ಕಾನೂರು ಹೆಗ್ಗಡಿತಿ ಎಂದರೆ ಅದು ಏನು ಎಂಬ ವಿಚಾರವೇ ನಮ್ಮಲ್ಲಿ ಅನೇಕರಿಗೆ ಗೊತ್ತಿಲ್ಲ. ಇದರಿಂದ ಅವರಿಗೆ ಏನಾದರೂ ತೊಂದರೆ ಆಗಿದೆಯಾ ? ಮಧ್ಯಮವರ್ಗದ ವಿದ್ಯಾವಂತರ ಒಂದು ಚಿಕ್ಕ ಸಮುದಾಯಕ್ಕೆ, ಸಾಹಿತ್ಯದ ಗಂಭೀರ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ಒಂದು ಚಿಕ್ಕ ಸಮುದಾಯಕ್ಕೆ ಮಾತ್ರ ಗೊತ್ತಿರುವ ಪ್ರತಿಷ್ಠಿತ ಸಾಹಿತ್ಯವನ್ನು ಎಲ್ಲರಿಗೆ ಸಂವಹನಗೊಳಿಸಬೇಕಾದ ತುರ್ತು ಆಧುನಿಕೋತ್ತರ ಸಂದರ್ಭದಲ್ಲಿ ಇದೆಯಾ, ಎಂಬುದು ಬಹಳ ಗಂಭೀರವಾದ ಪ್ರಶ್ನೆ ಆಗಿದೆ. ಪ್ರತಿಷ್ಠಿತರ ಸಾಹಿತ್ಯ ಅವರಿಗೆ ಕೆಲವೊಮ್ಮೆ ತಲುಪಿದರೂ ತಿಳಿಯುತ್ತಿಲ್ಲ, ಬೇಕಾಗಿಲ್ಲವಲ್ಲ, ಯಾಕೆ ? ನಾವು ಬರೆಯುವ ಕವಿತೆ ನಮ್ಮ ಅಣ್ಣ ತಮ್ಮಂದಿರಿಗೇ ಬೇಕಾಗಿಲ್ಲವಲ್ಲ, ಯಾಕೆ ? ಇದರಿಂದ ಜನಸಮುದಾಯಕ್ಕೆ ಏನಾದರೂ ನಷ್ಟವಾಗುತ್ತಿದೆಯಾ ? ಜನಸಮುದಾಯಕ್ಕೆ ಬೇಕಾದ ಸಾಹಿತ್ಯವನ್ನು ನಾವು ಸೃಷ್ಟಿಸುತ್ತಿಲ್ಲವಾ ? ಅವರನ್ನು ನಮ್ಮ ಗ್ರಾಹಕರನ್ನಾಗಿ ಮಾಡಿಕೊಳ್ಳುವ ಮಾರ್ಗಗಳು ನಮಗೆ ಗೊತ್ತಿಲ್ಲವೋ ? ಅವರನ್ನೆಲ್ಲ ನಮ್ಮ ಗ್ರಾಹಕರನ್ನಾಗಿ ಮಾಡಿಕೊಳ್ಳಬೇಕಾ ? ಸಾಹಿತ್ಯವು ಸಂವಹನಗೊಳ್ಳಬೇಕಾದ ಸಮುದಾಯವನ್ನಾಗಿ ಮಾಡಿಕೊಳ್ಳಬೇಕೋ ಅಥವಾ ಅವರಿಗೆ ಸ್ವಯಂ ಸೃಜನಶೀಲರಾಗುವ ಅವಕಾಶಗಳನ್ನು ಸೃಷ್ಟಿಸಬೇಕೋ ? ಮಾಧ್ಯಮಗಳ ಒಳಗೆ ಪರ್ಯಾಯಗಳನ್ನು ಶೋಧಿಸುವ, ಮಾಧ್ಯಮಗಳ ಹೊರಗೆ ಪರ್ಯಾಯಗಳನ್ನು ಹುಡುಕುವುದಕ್ಕಿಂತಾ ಪರ್ಯಾಯ ಮಾಧ್ಯಮಗಳನ್ನೇ ಶೋಧಿಸಬೇಕಾಗಿದೆಯಾ ?... (ಈ ಟಿಪ್ಪಣಿ ಅಪೂರ್ಣ)

ರಾಮಲಿಂಗಪ್ಪ ಟಿ. ಬೇಗೂರು
ಆಯ್ಕೆ ಶ್ರೇಣಿ ಕನ್ನಡ ಉಪನ್ಯಾಸಕರು, ಮಹಾರಾಣಿ ಮಹಿಳಾ ಕಲಾ ಕಾಲೇಜು, ಬೆಂಗಳೂರು




# ಕೆಪಿಸಿಎಲ್ ಕರ್ನಾಟಕವನ್ನು ಶಕ್ತಿಯುತಗೊಳಿಸುತ್ತಿದೆ

ಕರ್ನಾಟಕದಲ್ಲಿ ವಿದ್ಯುತ್ ಉತ್ಪಾದನೆಯನ್ನು ಹೆಚ್ಚಿಸುವ ಸಲುವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (ಕವಿನಿನಿ)ವು ನೂತನ ಉಪಕ್ರಮಗಳಿಗೆ ಚಾಲನೆ ನೀಡಿ ಈ ದಿಸೆಯಲ್ಲಿ ಸತತ ಮುಂಚೂಣಿ ಪಾತ್ರವಹಿಸಿರುವ ನಿಗಮ 5509 ಮೆಗಾವಾಟ್ (ಮೆ.ವಾ.) ಸ್ಥಾಪಿತ ಸಾಮರ್ಥ್ಯ ಹೊಂದಿದೆ ಮತ್ತು ರಾಜ್ಯದ ವಿದ್ಯುತ್ ಜಾಲದಲ್ಲಿರುವ ಪ್ರತಿಶತ 63ರಷ್ಟು ಪಾಲು ನಿಗಮದ್ದಾಗಿದೆ. ಪ್ರಸ್ತುತ ನಿಗಮ 34 ಅಣೆಕಟ್ಟುಗಳನ್ನು ಮತ್ತು 0.35 ಮೆ.ವಾ.ನಿಂದ 1470 ಮೆ.ವಾ.ವರೆಗೆ ವಿವಿಧ ಗಾತ್ರದ ಘಟಕಗಳನ್ನು ಹೊಂದಿರುವ 25 ವಿದ್ಯುದಾಗಾರಗಳನ್ನು ಹೊಂದಿದ್ದು ಇವುಗಳು ಕಾರ್ಯಾಚರಣೆಯಲ್ಲಿವೆ. ಇದರಲ್ಲಿ ತಲಾ 210 ಮೆ.ವಾ. ಸಾಮರ್ಥ್ಯದ 7 ಘಟಕ ಹೊಂದಿರುವ ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರ ಮತ್ತು 500 ಮೆ.ವಾ. ಸಾಮರ್ಥ್ಯದ ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರ, ಕಪ್ಪತಗುಡ್ಡದಲ್ಲಿ 4.56 ಮೆ.ವಾ. ಪವನಶಕ್ತಿ ಕೇಂದ್ರ ಮತ್ತು ಯಲಹಂಕದಲ್ಲಿ 128 ಮೆ.ವಾ.ಸಾಮರ್ಥ್ಯದ ಒಂದು ಡೀಸಲ್ ಕೇಂದ್ರ ಒಳಗೊಂಡಿದೆ.

ನಿಗಮ, ಕರ್ನಾಟಕದ ವಿದ್ಯುತ್ ಯೋಜನೆಗಳನ್ನು ನಿರಂತರವಾಗಿ ಅಭಿವೃದ್ಧಿಗೊಳಿಸುವ ಮೂಲಕ ವಿದ್ಯುತ್ ವಲಯದಲ್ಲಿ ಅಗ್ರ ಸ್ಥಾನವನ್ನು ಅಲಂಕರಿಸಿದೆ. ತನ್ನ 38 ವರ್ಷಗಳ ಕಾಲಾವಧಿಯಲ್ಲಿ ಕವಿನಿನಿ ದಾಖಲೆಯ ಸಾಧನೆಗೈದಿರುವುದು ಸಂಸ್ಥೆಯ ಉತ್ಕೃಷ್ಟ ಕಾರ್ಯವೈಖರಿಗೆ ಹಿಡಿದ ಕೈಗನ್ನಡಿಯಾಗಿದೆ. ಪ್ರಸಕ್ತ ಕರ್ನಾಟಕ ಸರ್ಕಾರ ಕವಿನಿನಿಗೆ ಗುರುತರ ಜವಾಬ್ದಾರಿಯನ್ನು ವಹಿಸಿರುವ ಕಾರಣ ಮುಂದಿನ ಐದು ವರ್ಷಗಳಲ್ಲಿ ಈ ಹಿಂದೆಂದಿಗಿಂತ ಹೆಚ್ಚಿನ ಸಾಮರ್ಥ್ಯದ ವಿದ್ಯುತ್ತನ್ನು ಉತ್ಪಾದಿಸುವ ಗುರಿ ಹೊಂದಿದೆ. ಕವಿನಿನಿ ಇತ್ತೀಚೆಗೆ ಸ್ಥಾಪಿಸಿದ 500 ಮೆ.ವಾ. ಸಾಮರ್ಥ್ಯದ ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರವು ಕಾರ್ಯಾಚರಣೆಯಲ್ಲಿದೆ.

* **ನಿಗಮ, ಪ್ರಸ್ತುತ ಬಳ್ಳಾರಿ ಶಾಖೋತ್ಪನ್ನ ವಿದ್ಯುತ್ ಕೇಂದ್ರದ 500 ಮೆ.ವಾ. ಸಾಮರ್ಥ್ಯದ 2ನೇ ಘಟಕ ಮತ್ತು 250 ಮೆ.ವಾ. ಸಾಮರ್ಥ್ಯದ ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರದ 8ನೇ ಘಟಕ, 230 ಮೆ.ವಾ. ಸಾಮರ್ಥ್ಯದ ವರಾಹಿ ಯೋಜನೆ (ಜನವರಿ 2009ರಲ್ಲಿ ಕಾರ್ಯಾರಂಭ) ನಾಗಝರಿಯ 30 ಮೆ.ವಾ. ಸಾಮರ್ಥ್ಯದ ಆರ್ ಮತ್ತು ಎಂ, ಹಾಗೂ 9 ಮೆ.ವಾ. ಸಾಮರ್ಥ್ಯದ ಗ್ರಿಡ್ ಸಂಪರ್ಕಿತ ಸೋಲಾರ್ ಫೋಟೋ ವೋಲ್ಟಾಯಿಕ್ ಸ್ಕೀಂ ಈ ಯೋಜನೆಗಳಿಂದ ಮುಂದಿನ ಎರಡು ವರ್ಷಗಳಲ್ಲಿ 1019 ಮೆ.ವಾ. ಸೇರ್ಪಡಿಸಲಿವೆ.**
* **ಪ್ರಸ್ತಾಪಿತ ನೂತನ ಜಲ, ಕಲ್ಲಿದ್ದಲು ಆಧಾರಿತ ಶಾಖೋತ್ಪನ್ನ, ಪಿಟ್‌ಹೆಡ್ ಶಾಖೋತ್ಪನ್ನ, ಕಂಬೈನ್ಡ್ ಸೈಕಲ್ ಮತ್ತು ಪಂಪ್ಡ್ ಸ್ಟೋರೇಜ್ ವಿದ್ಯುತ್ ಯೋಜನೆಗಳು, ಸೋಲಾರ್ ಫೋಟೋ ವೋಲ್ಟಾಯಿಕ್ ಮತ್ತು ಪವನಶಕ್ತಿ ಯೋಜನೆಗಳ ಪೂರ್ವ ಸಿದ್ಧತೆ ಮತ್ತು ಸ್ಥಾಪನಾ ಪೂರ್ವ ಕೆಲಸಗಳು ಪ್ರಗತಿಯಲ್ಲಿವೆ. 11ನೇ ಮತ್ತು 12ನೇ ಯೋಜನಾ ಆರಂಭದ ಅವಧಿಯಲ್ಲಿ 9000ಕ್ಕೂ ಅಧಿಕ ಮೆ.ವಾ. ಸಾಮರ್ಥ್ಯವು ರಾಜ್ಯದಲ್ಲಿ ಸ್ಥಾಪನೆಗೊಳ್ಳಲಿದೆ.**

ಕವಿನಿನಿ ಪ್ರಪ್ರಥಮ ಬಾರಿಗೆ ಛತ್ತೀಸ್‌ಘಢ ರಾಜ್ಯದಲ್ಲಿ ಅಲ್ಲಿನ ಸರ್ಕಾರದ ಸಹಕಾರದೊಂದಿಗೆ 1200 ಮೆ.ವಾ. ಸಾಮರ್ಥ್ಯದ ಪಿಟ್‌ಹೆಡ್ ಆಧಾರಿತ ಶಾಖೋತ್ಪನ್ನ ಯೋಜನೆಯನ್ನು ಸ್ಥಾಪಿಸಲು ಒಡಂಬಡಿಕೆ ಮಾಡಿಕೊಂಡಿದೆ. ಕರ್ನಾಟಕದ ಸನ್ಮಾನ್ಯ ಮುಖ್ಯ ಮಂತ್ರಿಗಳ ಘನ ಅಧ್ಯಕ್ಷತೆಯಲ್ಲಿ ಮತ್ತು ಮಾನ್ಯ ಇಂಧನ ಸಚಿವರ ಉಪಾಧ್ಯಕ್ಷತೆಯಲ್ಲಿ ಕವಿನಿನಿ ತನ್ನ ಕನಸನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ಕ್ರಮವಹಿಸಿದೆ.

**ಕರ್ನಾಟಕ ವಿದ್ಯುತ್ ನಿಗಮ ನಿಯಮಿತ**

(ಕರ್ನಾಟಕ ಸರ್ಕಾರದ ಒಂದು ಉದ್ಯಮ)

ನೋಂದಾಯಿತ ಕಚೇರಿ: ಶಕ್ತಿ ಭವನ, ನಂ.82, ರೇಸ್ ಕೋರ್ಸ್ ರಸ್ತೆ, ಬೆಂಗಳೂರು - 560001.

ದೂರವಾಣಿ : 080-22256568, 22269930-37, ಫ್ಯಾಕ್ಸ್ : 080-22252144

E-mail: cccm@karnatakapower.com Website: www.karnatakapower.com

# ಪ್ರಾಚೀನ ಗ್ರೀಕ್ ಪ್ರಾಜ್ಞರ ಜೊತೆ ಸ್ವಲ್ಪ ಹೊತ್ತು

ಭೂಮಿಯಾಚೆ ವಿಶ್ವದಲ್ಲಿ ಎಲ್ಲಾದರೂ ಜೀವಿಗಳಿರಬಹುದು, ಒಂದು ದಿನ ಅವುಗಳೊಂದಿಗೆ ಸಂಪರ್ಕ ಸಾಧ್ಯವಾಗಬಹುದು ಎಂಬ ಆಶಾಭಾವನೆಯಿಂದ ವಿಜ್ಞಾನಿಗಳು ಜಗತ್ತಿನ ವಿವಿಧೆಡೆ 'ಸೆಟಿ' (ಭೂಮಿಯಾಚೆಯಲ್ಲಿ ಜೀವಿಗಾಗಿ ಹುಡುಕಾಟ) ಎಂಬ ಪ್ರಯೋಗಗಳ ಸರಣಿಯನ್ನೇ ಆರಂಭಿಸಿದ್ದಾರೆ. ಅನ್ಯಗ್ರಹ ಜೀವಿಗಳಿಂದ ಬರಬಹುದಾದ ಸಂದೇಶ ಸ್ವೀಕರಿಸಲು ಬೃಹತ್ ರೇಡಿಯೊ ದೂರದರ್ಶಕಗಳ ಸಮೂಹಗಳನ್ನೇ ನಿಲ್ಲಿಸಿ ಚಾಲೂ ಮಾಡಿ ಇಟ್ಟಿದ್ದಾರೆ. ಅನ್ಯಗ್ರಹ ಜೀವಿಗಳು ಗ್ರಹಿಸಲೆಂದು ವಿಶ್ವದ ಮೂಲೆ ಮೂಲೆಗೂ ಪ್ರಸಾರವಾಗುವಂತೆ ರೇಡಿಯೊ ತರಂಗಗಳನ್ನು ಬಿತ್ತರಿಸುತ್ತಿದ್ದಾರೆ. ಸೌರವ್ಯೂಹವನ್ನೇ ದಾಟಿ ಪಯಣಿಸುತ್ತಿರುವ ಪಯೋನೀರ್ -೧೦ ಮತ್ತು ವಾಯೇಜರ್ ಸರಣಿಯ ಅಂತರಿಕ್ಷ ನೌಕೆಗಳಲ್ಲಿ ಕ್ರಮವಾಗಿ ಚಿತ್ರ ಹಾಗೂ ಶಬ್ದ ಸಂದೇಶಗಳನ್ನು ಅನ್ಯಗ್ರಹ ಜೀವಿಗಳು ಗಮನಿಸಲೆಂದು ಕಳುಹಿಸಿಕೊಟ್ಟಿದ್ದಾರೆ.

ಕೆ. ಎಸ್. ರವಿಕುಮಾರ್

ನಕ್ಷತ್ರಗಳನ್ನು ವೀಕ್ಷಿಸುವಾಗ ಮೈಮರೆತು ಕಾಲಕಡೆ ನೋಡದೆ ಬಾವಿಗೆ ಬಿದ್ದ ಪ್ರಾಚೀನ ಗ್ರೀಸಿನ ಈ ಪ್ರಖ್ಯಾತ ಚಿಂತಕನನ್ನು ಬಾವಿಯಿಂದ ಹೊರಗೆಳೆದ ಮನೆಗೆಲಸದ ಹೆಂಗಸೊಬ್ಬಳು ''ನಿನ್ ಕಾಲ್‌ಕಡೆ ಏನಿದೆ ಅಂತ ನೋಡ್ದೆ ಇರೋ ನೀನು ಆಕಾಶದ ಬಗ್ಗೆ ಅದೇನ್ ತಿಳಕೊಂಡಿದೀಯೋ'' ಅಂತ ಛೇಡಿಸಿದಳಂತೆ. ಪೆಚ್ಚಾಗಿ ನಕ್ಕ ಆ ಚಿಂತಕ ವೃತ್ತಿಯಿಂದ ವ್ಯಾಪಾರಿಯಾಗಿದ್ದರೂ ಗಣಿತಜ್ಞ, ಖಗೋಳವಿಜ್ಞಾನಿ, ಮುತ್ಸದ್ದಿ, ರಾಜನೀತಿಜ್ಞ, ಇಂಜಿನಿಯರ್, ತತ್ವಜ್ಞಾನಿ ಹೀಗೆ ಹಲವು ವ್ಯಕ್ತಿತ್ವಗಳನ್ನು ಹೊಂದಿ ಅಪಾರ ಜನಮನ್ನಣೆ ಪಡೆದಿದ್ದನು. ಅವನೇ ಮಿಲೆಟಸ್ಸಿನ ಥೇಲಿಸ್ (ಕ್ರಿ.ಪೂ.೬೨೪-೫೫೫). ಅವನಿಗೆ ಗುರುವಿರಲಿಲ್ಲ. ಮಾರ್ಗದರ್ಶಕರಿರಲಿಲ್ಲ. ಯಾವ ವೈಜ್ಞಾನಿಕ ಪಂಥದ ಮಾದರಿಯೂ ಇರಲಿಲ್ಲ. ಅರಿವಿನ ಹಾದಿಯಲ್ಲಿ ಥೇಲಿಸ್ ಒಂಟಿ ಪಯಣಿಗ. ಸ್ವತಂತ್ರ ಸಲಗ. ವಾಣಿಜ್ಯ ಉದ್ದೇಶಕ್ಕಾಗಿ ಅವನು ವ್ಯಾಪಕವಾಗಿ ಸುತ್ತಾಡುತ್ತಿದ್ದ. ಬ್ಯಾಬಿಲೋನಿಯಾ, ಈಜಿಪ್ಟ್‌ಗಳಿಗೆ ಭೇಟಿಯಿತ್ತು ಅಲ್ಲಿನವರ ಜ್ಞಾನ, ವಿಜ್ಞಾನಗಳನ್ನು ಅಭ್ಯಸಿಸಿದ. ಗ್ರೀಸ್‌ಗೆ ಈಜಿಪ್ಟಿನಿಂದ ಜ್ಯಾಮಿತಿಯನ್ನು ಪರಿಚಯಿಸಿದ್ದು ಇವನೇ.

ಥೇಲಿಸ್ ಗ್ರೀಕ್ ಗಣಿತಜ್ಞರ ಪರಂಪರೆಯಲ್ಲಿ ಮೊದಲು ಬಂದವನು. ವ್ಯಾಸವು ವೃತ್ತವನ್ನು ವಿಭಾಗಿಸುತ್ತದೆ; ಸಮದ್ವಿಬಾಹು ತ್ರಿಭುಜದ ತಳಕೋನಗಳು ಸಮವಾಗಿರುತ್ತವೆ; ಎರಡು ಪರಸ್ಪರ ಛೇದಿಸುವ ಸರಳ ರೇಖೆಗಳಲ್ಲಿ ಅಭಿಮುಖ ಕೋನಗಳು ಸಮವಾಗಿರುತ್ತವೆ ಮತ್ತು ಅರ್ಧವೃತ್ತದಲ್ಲಿರುವ ತ್ರಿಭುಜವು ಯಾವಾಗಲೂ ಲಂಬಕೋನ ತ್ರಿಭುಜವೇ ಆಗಿರುತ್ತದೆ ಎಂಬ ಕೆಲವು ಗ್ರಹೀತ ಮಂಡನೆಗಳ ಮೂಲಕ ಗ್ರೀಸಿನಲ್ಲಿ ಜ್ಯಾಮಿತಿಗೆ ಭದ್ರ ಬುನಾದಿ ಹಾಕಿದ ಕೀರ್ತಿ ಥೇಲಿಸ್‌ಗೆ ಸಲ್ಲಬೇಕು.




ಕ್ರಿ.ಶ. ಮೊದಲನೇ ಶತಮಾನದ ರೋಮನ್ ಇತಿಹಾಸಕಾರ ಪಾಂಫಿಲಾನ ಪ್ರಕಾರ ಅರ್ಧವೃತ್ತದಲ್ಲಿ ಲಂಬಕೋನ ತ್ರಿಭುಜವನ್ನು ರಚಿಸಿದವರಲ್ಲಿ ಥೇಲಿಸ್‌ನೆ ಮೊದಲಿಗನಾಗಿದ್ದನು.

ಕ್ರಿ. ಪೂ. ೫೮೫ರ ಮೇ ೨೮ರಂದು ಮೀಡಿಯಾ ಹಾಗೂ ಲಿಡಿಯಾ ರಾಜ್ಯಗಳ ನಡುವೆ ಘೋರ ಕದನ ನಡೆಯುತ್ತಿತ್ತು. ಅಂದೇ ಸಂಪೂರ್ಣ ಸೂರ್ಯಗ್ರಹಣ ಸಂಭವಿಸಿ ಸಂಪೂರ್ಣ ಕತ್ತಲು ಕವಿಯಿತು. ಕೂಡಲೇ ಕದನ ನಿಲುಗಡೆಗೆ ಬಂತು. ಈ ಗ್ರಹಣದ ವೈಶಿಷ್ಟ್ಯವೆಂದರೆ ಅದು ಸಂಭವಿಸುವ ತಾರೀಕನ್ನು ಥೇಲಿಸ್ ಸಾಕಷ್ಟು ಮುಂಚಿತವಾಗಿಯೇ ಊಹಿಸಿದ್ದ. ಅವನ ಕರಾರುವಾಕ್ ಊಹೆ ನಿಜವಾದದ್ದು ಅವನಿಗೆ ಅಪಾರ ಜನಪ್ರಿಯತೆ ತಂದುಕೊಟ್ಟಿತು. ಅಂದಿನ ಗ್ರೀಸ್‌ನಲ್ಲಿದ್ದ ಏಳು ಮಂದಿ ಪ್ರಖರ ಬುದ್ಧಿಶಾಲಿಗಳಲ್ಲಿ ಥೇಲಿಸ್‌ನೂ ಒಬ್ಬ ಎಂದು ಪ್ಲುಟಾರ್ಕ್ ಬರೆಯುತ್ತಾನೆ (ಕ್ರಿ.ಶ.೧೦೦ರಲ್ಲಿ). ಥೇಲಿಸ್ ರಾಜಕೀಯ ಚಟುವಟಿಕೆಗಳಲ್ಲೂ ಮಹತ್ವದ ಪಾತ್ರ ನಿರ್ವಹಿಸುತ್ತಿದ್ದನಂತೆ. ''ಅಸಂಖ್ಯ ರಾಜಕಾರಣಿಗಳ ಗುಂಪಿನಲ್ಲೊಬ್ಬ ಸಮರ್ಥ ತತ್ವಜ್ಞಾನಿ ಅವನು'' ಎಂದು ಪ್ಲುಟಾರ್ಕ್ ಅವನನ್ನು ಪ್ರಶಂಸಿಸುತ್ತಾನೆ.

* * *

''ವಿಸ್ತಾರವಾದ ಹೊಲದ ತುಂಬ ಬೀಜ ಬಿತ್ತಲಾಗಿದೆ. ಆದರೆ ಇಡೀ ಹೊಲಕ್ಕೆಲ್ಲ ಒಂದೇ ಒಂದು ಬೀಜ ಮೊಳೆತು ಗಿಡವಾಗುತ್ತದೆ ಎಂದು ಭಾವಿಸುವುದು (ಅಥವಾ ವಾದಿಸುವುದು) ಎಷ್ಟು ಅಸಂಬದ್ಧವೋ ಅಷ್ಟೇ ಅಸಂಬದ್ಧವಾದುದು ವಿಶ್ವದಲ್ಲಿ ಭೂಮಿ ಮಾತ್ರ ಜೀವಿಗಳ ತಾಣ ಎಂದು ತೀರ್ಮಾನಿಸುವುದು.'' ಹೀಗೊಂದು ಪ್ರಬಲ, ಸೀಮಾತೀತ ತರ್ಕವನ್ನು ಮಂಡಿಸಿದವನು ಕ್ರಿ.ಪೂ. ೬ನೇ ಶತಮಾನದಲ್ಲಿ ಬದುಕಿದ್ದ ಗ್ರೀಕ್ ಚಿಂತಕ ಮೆಟ್ರೋಡೋರಸ್. ಇವನ ಬದುಕಿನ ಬಗ್ಗೆ ಹೆಚ್ಚೇನೂ ತಿಳಿದುಬಂದಿಲ್ಲ. ಆದರೆ ೨೬೦೦ ವರ್ಷಗಳಷ್ಟು ಹಿಂದೆಯೇ ಭೂಮಿಯ ಹೊರತಾಗಿಯೂ ಜೀವಿಗಳಿರಬಹುದು ಎಂಬ ಚಿಂತನೆಯ ಕಡೆ ಮನಸ್ಸು ಹೊರಳಿಸಿದ್ದವನು ಮೆಟ್ರೋಡೋರಸ್.

ಭೂಮಿಯಾಚೆ ವಿಶ್ವದಲ್ಲಿ ಎಲ್ಲಾದರೂ ಜೀವಿಗಳಿರಬಹುದು, ಒಂದು ದಿನ ಅವುಗಳೊಂದಿಗೆ ಸಂಪರ್ಕ ಸಾಧ್ಯವಾಗಬಹುದು ಎಂಬ ಆಶಾಭಾವನೆಯಿಂದ ವಿಜ್ಞಾನಿಗಳು ಜಗತ್ತಿನ ವಿವಿಧೆಡೆ 'ಸೆಟಿ' (ಭೂಮಿಯಾಚೆಯಲ್ಲಿ ಜೀವಿಗಾಗಿ ಹುಡುಕಾಟ) ಎಂಬ ಪ್ರಯೋಗಗಳ ಸರಣಿಯನ್ನೇ ಆರಂಭಿಸಿದ್ದಾರೆ. ಅನ್ಯಗ್ರಹ ಜೀವಿಗಳಿಂದ ಬರಬಹುದಾದ ಸಂದೇಶ ಸ್ವೀಕರಿಸಲು ಬೃಹತ್ ರೇಡಿಯೊ ದೂರದರ್ಶಕಗಳ ಸಮೂಹಗಳನ್ನೇ ನಿಲ್ಲಿಸಿ ಚಾಲೂ ಮಾಡಿ ಇಟ್ಟಿದ್ದಾರೆ. ಅನ್ಯಗ್ರಹ ಜೀವಿಗಳು ಗ್ರಹಿಸಲೆಂದು ವಿಶ್ವದ ಮೂಲೆ ಮೂಲೆಗೂ ಪ್ರಸಾರವಾಗುವಂತೆ ರೇಡಿಯೊ



ಅನ್ಯಗ್ರಹ ಜೀವಿ. ಒಂದು ಕಲ್ಪನೆಯ ಚಿತ್ರ.

ತರಂಗಗಳನ್ನು ಬಿತ್ತರಿಸುತ್ತಿದ್ದಾರೆ. ಸೌರವ್ಯೂಹವನ್ನೇ ದಾಟಿ ಪಯಣಿಸುತ್ತಿರುವ ಪಯೋನೀರ್ - ೧೦ ಮತ್ತು ವಾಯೇಜರ್ ಸರಣಿಯ ಅಂತರಿಕ್ಷ ನೌಕೆಗಳಲ್ಲಿ ಕ್ರಮವಾಗಿ ಚಿತ್ರ ಹಾಗೂ ಶಬ್ದ ಸಂದೇಶಗಳನ್ನು ಅನ್ಯಗ್ರಹ ಜೀವಿಗಳು ಗಮನಿಸಲೆಂದು ಕಳುಹಿಸಿ ಕೊಟ್ಟಿದ್ದಾರೆ. ಆಶ್ಚರ್ಯ ಎನ್ನುವಂತೆ ವಿಶ್ವದ ಬೇರೆ ಬೇರೆ ಗೆಲಾಕ್ಸಿಗಳಲ್ಲಿ ನಮ್ಮ ಸೌರವ್ಯೂಹದಂತಹ ಅನೇಕ ಸೌರವ್ಯೂಹಗಳು ಪತ್ತೆಯಾಗುತ್ತಿವೆ. ಅವುಗಳಲ್ಲಿ ಭೂಮಿಯಂತಹ ಗ್ರಹಗಳಿರಬಹುದು. ನಮ್ಮಂತೆ ''ಮುಂದುವರಿದವರು'' ಇಲ್ಲದಿದ್ದರೂ (ಇರಬಾರ ದೆಂದೇನಿಲ್ಲ, ನಮಗಿಂತಲೂ ಹೆಚ್ಚಿನ ತಾಂತ್ರಿಕ ಪ್ರಗತಿ ಸಾಧಿಸಿದವರು ಯಾಕಿರಬಾರದು? ಸಮರ್ಥನೆಗೆ ಮೆಟ್ರೋಡೋರಸ್‌ನ ತರ್ಕವಿದೆಯಲ್ಲ) ಕಡೆಯ ಪಕ್ಷ ಸೂಕ್ಷ್ಮಜೀವಿಗಳ ಅಸ್ತಿತ್ವವಾದರೂ ಇರಬಹುದಲ್ಲ. ಜೀವವಿಕಾಸ ಕ್ರಿಯೆ ಅಲ್ಲಿಯೂ ಚಾಲ್ತಿಯಲ್ಲಿರಬಹುದು.

ಸೆಟಿಯ ಎಲ್ಲ ಪ್ರಯೋಗಗಳ ಹಿಂದೆ ಇರುವ ಅದಮ್ಯ ಸ್ಫೂರ್ತಿ ಮಾತ್ರ ಮೆಟ್ರೋಡೋರಸ್‌ನ ತರ್ಕ. ಭೂಮ್ಯೇತರ ಬುದ್ಧಿವಂತಿಕೆಯ ಅನ್ವೇಷಣೆಯಲ್ಲಿ ತೊಡಗಿರುವ ವಿಜ್ಞಾನಿಗಳಿಗೆ ಪ್ರಯೋಗ ಮುಂದುವರಿ ಸುತ್ತಲೇ ಇರಲು ಪುನಃ ಪುನಃ ಹುಮ್ಮಸ್ಸು ತುಂಬುವುದು ಅವನ ಸೃಜನಶೀಲ ತರ್ಕ. ಮನುಕುಲದ ಮಹತ್ತರ ತರ್ಕ ಮಂಡಿಸಿದ ಮೆಟ್ರೋಡೋರಸ್ ಪ್ರಾಚೀನ ಗ್ರೀಕ್ ಚಿಂತಕರ ವೈವಿಧ್ಯಮಯ ಆಲೋಚನಾ ಸಾಮರ್ಥ್ಯಕ್ಕೆ ಸಶಕ್ತ ಉದಾಹರಣೆಯಾಗಿದ್ದಾನೆ. ಮುಂದೆಂದಾದರೂ ಅನ್ಯಗ್ರಹ ಜೀವಿಯೊಡನೆ ನಮ್ಮ ಮುಖಾಮುಖಿಯಾದಾಗ ಮೆಟ್ರೋಡೋರಸ್‌ನನ್ನು ನಾವು ನೆನಪಿಸಿಕೊಳ್ಳಲೇಬೇಕು.

* * *

ಇವನಿಗೆ ಗಣಿತವೇ ಸರ್ವಸ್ವ. ಗಣಿತವೇ ವ್ಯಕ್ತಿತ್ವ, ಗಣಿತವೇ ಅಸ್ತಿತ್ವ. ಗಣಿತವನ್ನು ಬಲವಾಗಿ ಸಮರ್ಥಿಸುವ ಪಂಥವೇ ಇವನಿಂದ ರೂಪುಗೊಂಡಿತು. ಜಗತ್ತನ್ನು ಅರ್ಥಮಾಡಿಕೊಳ್ಳಬೇಕಾದರೂ ಗಣಿತ ಬೇಕು ಎಂಬ ದೃಢನಿಲುವು ಈ ಪಂಥದ್ದು. ನಮಗಿವತ್ತು ತಿಳಿದಿದೆ, ಬರಿಯ ಜಗತ್ತೇನು, ಇಡೀ ವಿಶ್ವದ ವಿದ್ಯಮಾನಗಳನ್ನು ನಾವು ಗಣನೀಯವಾಗಿ ಅರ್ಥೈಸಬಹುದೆಂದು. ಎಲ್ಲ ವಿಜ್ಞಾನಿಗಳೂ ಆನ್ವಯಿಕ ಶಾಸ್ತ್ರವಾಗಿ ಗಣಿತವನ್ನು ಬಳಸಿಕೊಳ್ಳುತ್ತವೆ. ಆದ್ದರಿಂದಲೇ ಗಣಿತವನ್ನು 'ಎಲ್ಲ ವಿಜ್ಞಾನಗಳ ರಾಣಿ' ಎಂದು ಕರೆಯುತ್ತಾರೆ. ಸೈದ್ಧಾಂತಿಕ ವಿಜ್ಞಾನ ನಿಂತಿರುವುದೇ ಸಂಪೂರ್ಣ ಗಣಿತದ ತಳಹದಿಯ ಮೇಲೆ. ಇಂತಹ ಗಣಿತದ ಮಹತ್ವವನ್ನು ೨೫೦೦ ವರ್ಷಗಳ ಹಿಂದೆಯೇ ಕಂಡುಕೊಂಡ ಮಹಾನ್ ಗಣಿತಜ್ಞನೇ ಪೈಥಾಗೋರಸ್ (ಕ್ರಿ. ಪೂ. ೫೮೦ ?-೫೦೦).

''ಒಂದು ಲಂಬಕೋನ ತ್ರಿಭುಜದಲ್ಲಿ ಅದರ ಕರ್ಣದ ವರ್ಗವು ಉಳಿದೆರಡು ಭುಜಗಳ ವರ್ಗಗಳ ಮೊತ್ತಕ್ಕೆ ಸಮ'' ಎಂಬ ಸುಪ್ರಸಿದ್ಧ ಪ್ರಮೇಯವನ್ನು ಓದದೇ ಇರುವ ಪ್ರೌಢಶಾಲಾ ವಿದ್ಯಾರ್ಥಿ ಯಾರಿದ್ದಾರೆ? ಈ ಪ್ರಮೇಯ ಪೈಥಾಗೋರಸ್‌ನ ಕೊಡುಗೆ. ಜ್ಯಾಮಿತಿ ಅಥವಾ ರೇಖಾಗಣಿತವೆನ್ನುವುದು ತರ್ಕಬದ್ಧ ಸುಸ್ಪ...


# ಪ್ಲಾಸ್ಟಿಕ್ ಬಳಕೆ ತ್ಯಜಿಸಿ





## ಆರೋಗ್ಯವಂತ ಪರಿಸರ ನಿರ್ಮಿಸಿ

ಪ್ಲಾಸ್ಟಿಕ್ ಮಾನವನು ಸೃಷ್ಟಿಸಿಕೊಂಡಿರುವ ಕೃತಕ ವಸ್ತು. ಇದರ ಬಳಕೆಯು ಎಲ್ಲೆಡೆ ಹೆಚ್ಚಾಗಿದ್ದು ಪ್ರಕೃತಿಯ ಮೇಲೆ ಇದರಿಂದ ಅನೇಕ ದುಷ್ಪರಿಣಾಮಗಳುಂಟಾಗುತ್ತಿವೆ. ಪರಿಸರಮಾಲಿನ್ಯ ರಹಿತವಾಗಿರಲು ಹಾಗೂ ನಮ್ಮ ಆರೋಗ್ಯದ ದೃಷ್ಟಿಯಿಂದ ಪ್ಲಾಸ್ಟಿಕ್ ಬಳಕೆಯನ್ನು ಅಗತ್ಯವಾಗಿ ತ್ಯಜಿಸುವುದು ಅತ್ಯಂತ ಸೂಕ್ತವಾಗಿದೆ. ಪ್ಲಾಸ್ಟಿಕ್ ಮಣ್ಣಲ್ಲಿ ಕೊಳೆಯದೆ, ನೀರಿನಲ್ಲಿ ಕರಗದೆ ಮಣ್ಣಿನ ಫಲವತ್ತತೆಯನ್ನು ಹಾಳುಮಾಡುತ್ತದೆ. ಪುನರ್ ಬಳಕೆಯ ಪ್ಲಾಸ್ಟಿಕ್ ಹಾಳೆ/ಚೀಲ/ಡಬ್ಬಿಯಲ್ಲಿ ಆಹಾರ ಪದಾರ್ಥಗಳನ್ನು ಪ್ಯಾಕ್ ಮಾಡುವುದು ಮತ್ತು 20 ಮೈಕ್ರಾನ್‌ಗಳಿಗಿಂತ ತೆಳುವಾದ ಪರಿಶುದ್ಧ/ಪುನರ್ ಬಳಕೆ ಪ್ಲಾಸ್ಟಿಕ್ ಕೈಚೀಲ ಉತ್ಪಾದನೆಯನ್ನು ಕಾನೂನಿನನುಸಾರ ನಿಷೇಧಿಸಲಾಗಿದೆ.

**ಪ್ಲಾಸ್ಟಿಕ್ ಉಪಯೋಗದಿಂದಾಗುವ ಅಪಾಯಗಳು**

- ಸುಟ್ಟಾಗ ಹೊರಬರುವ ವಿಷಾನಿಲಗಳು ವಾತಾವರಣ ಸೇರಿ ವಾಯುಮಾಲಿನ್ಯ ಉಂಟು ಮಾಡುತ್ತದೆ
- ಮಣ್ಣಲ್ಲಿ ಸೇರಿ ನೀರು ಇಂಗಲು ಅಡ್ಡಿ ಮಾಡಿ ಕೆರೆ ಬಾವಿಗಳಿಗೆ ಬರುವ ನೀರನ್ನು ತಡೆಯುತ್ತದೆ
- ಮಣ್ಣಿನಲ್ಲಿ ಎರೆಹುಳುಗಳನ್ನು ಬೆಳೆಯಕೊಡದೆ, ಮಣ್ಣಿನ ಫಲವತ್ತತೆ ಕಡಿಮೆಯಾಗಲು ಕಾರಣವಾಗುತ್ತದೆ
- ಸಸ್ಯಗಳ ಬೇರುಗಳು ಮಣ್ಣಿನಲ್ಲಿ ಪಸರಿಸಲು ಅಡ್ಡಿ ಮಾಡುತ್ತದೆ
- ಹುಲ್ಲು, ಮೇವಿನ ಜೊತೆ ಬೆರೆತಲ್ಲಿ ದನಕರು ಮತ್ತು ಇನ್ನಿತರೆ ಪ್ರಾಣಿಗಳ ಸಾವಿಗೆ ಕಾರಣವಾಗುತ್ತದೆ
- ಚರಂಡಿಗಳಲ್ಲಿ ನೀರು ಸರಾಗವಾಗಿ ಹರಿಯಲು ಅಡ್ಡಿ ಉಂಟುಮಾಡುವುದಲ್ಲದೇ ಹಲವಾರು ಕಾಯಿಲೆಗಳು ಹರಡಲು ಕಾರಣವಾಗುತ್ತದೆ

**ಸರಳ ವಿಧಾನಗಳಿಂದ ಪ್ಲಾಸ್ಟಿಕ್ ಬಳಕೆಯನ್ನು ಕಡಿಮೆ ಮಾಡಬಹುದು**

- ಪ್ಲಾಸ್ಟಿಕ್ ಉತ್ಪನ್ನಗಳ ಬದಲಿಗೆ ಬಟ್ಟೆ/ಕಾಗದದಿಂದ ತಯಾರಿಸಿದ ಉತ್ಪನ್ನಗಳ ಬಳಕೆ
- ಪ್ಲಾಸ್ಟಿಕ್ ವ್ಯರ್ಥ ಪದಾರ್ಥಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಬಿಸಾಡದೇ ನಿಗದಿತ ಸ್ಥಳಗಳಲ್ಲಿ ವಿಲೇವಾರಿ ಮಾಡಿರುವುದು
- ಹೋಟೆಲ್ ಉದ್ಯಮ ಹಾಗೂ ಆಹಾರ ಪದಾರ್ಥಗಳಲ್ಲಿ ಉತ್ಪಾದಕರು/ಮಾರಾಟಗಾರರು ಪ್ಲಾಸ್ಟಿಕ್ ಬಳಕೆ ತಡೆ
- ಆಹಾರ ವಸ್ತುಗಳ ಸಂಗ್ರಹಣೆ, ಸಾಗಣೆ ಅಥವಾ ಪ್ಯಾಕ್ ಮಾಡಲು ಪ್ಲಾಸ್ಟಿಕ್ ಬಳಕೆ ತಪ್ಪಿಸುವುದು

ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಕಟಣೆ

**ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ**

ನಂ.49, ಪರಿಸರ ಭವನ, 4 ಮತ್ತು 5ನೇ ಅಂತಸ್ತು, ಚರ್ಚ್ ಸ್ಟ್ರೀಟ್
ಬೆಂಗಳೂರು-560001, ಕರ್ನಾಟಕ, ಭಾರತ.
ದೂರವಾಣಿ :25581383, 25589112, 25589113, 25586520 ಫ್ಯಾಕ್ಸ್ :080-25586321
ಈಮೇಲ್ :kspcbcom@blr.vsnl.net.in ವೆಬ್‌ಸೈಟ್ : http://kspcb.kar.nic.in



ಪ್ರಮೇಯಗಳ ಸಮೂಹ ಎಂದು ಪೈಥಾಗೋರಸ್ ವಿವರಿಸಿದ್ದಾನೆ. ಒಂದು ಜ್ಞಾನವನ್ನು ಸಮಗ್ರವಾಗಿ ಗ್ರಹಿಸಿ ಎಲ್ಲ ಕಾಲಕ್ಕೂ ಸಲ್ಲುವಂತೆ ಅದನ್ನು ವಿವರಣೆಗೆ ಅಳವಡಿಸುವ ಪ್ರತಿಭೆಯಿದೆಯಲ್ಲ, ಅದುವೇ ಪೈಥಾಗೋರಸ್‌ನಂತಹ ಗ್ರೀಕ್ ಗಣಿತಜ್ಞರ ವಿಶೇಷವಾಗಿದೆ. (ಸುಮಾರು ಅದೇ ಕಾಲಕ್ಕೆ ಭಾರತದಲ್ಲಿ ಶುಲ್ಬಸೂತ್ರಗಳು ಈ ಪ್ರಮೇಯವನ್ನು ಸಾಧಿಸಿದ್ದುದುಂಟು).

ಪೈಥಾಗೋರಸ್ ಆರಂಭಿಸಿದ ಗಣಿತ ಪಂಥ ಹಲವು ಪೀಳಿಗೆಗಳವರೆಗೆ ಚಿಂತಕರ ಮೇಲೆ ಪ್ರಭಾವ ಬೀರಿತ್ತು. ಪೈಥಾಗೋರಸ್ ಗಣಿತದೊಡನೆ ಖಗೋಳವಿಜ್ಞಾನದಲ್ಲೂ ಆಸಕ್ತಿ ಹೊಂದಿದ್ದ. ಅವನು ತನ್ನ ವಿಶ್ವವಿಜ್ಞಾನ ಸಿದ್ಧಾಂತದಲ್ಲಿ ಭೂಮಿಯೆನ್ನುವುದು ಒಂದು ಗೋಳ. ಅದು ವಿಶ್ವದ ಕೇಂದ್ರದ ಸುತ್ತ ಪರಿಭ್ರಮಿಸುತ್ತದೆ ಎಂದು ವಿವರಿಸಿದ್ದಾನೆ. ಇಲ್ಲಿ ನಾವು ಪ್ರಮುಖವಾಗಿ ಗಮನಿಸಬೇಕಾದ ಅಂಶವೆಂದರೆ ಭೂಮಿ ಯಾವುದಕ್ಕೂ ಕೇಂದ್ರವಲ್ಲ, ಸ್ವತಃ ಚಲಿಸುವ ಆಕಾಶಕಾಯ ಎಂಬುದು. ಈ ವಾದ ಮುಂದೆ ಚಾಲ್ತಿಗೆ ಬಂದು ಸೂರ್ಯಕೇಂದ್ರ ವಾದಕ್ಕೆ ಒಂದು ರೂಪ ಕೊಡುವ ತೀರಾ ಆರಂಭಿಕ ಪ್ರಯತ್ನವಾಗಿ ಕೋಪರ್ನಿಕಸ್‌ನ ನೆರವಿಗೆ ಬಂತು.

ಪ್ರಾಚೀನ ಗ್ರೀಸಿನಲ್ಲಿ ವೈಜ್ಞಾನಿಕ ಚಿಂತನೆಗಳು ಬರಿಯ ಊಹೆಯ ಹಂತದಲ್ಲಿ ಚರ್ಚೆಯಾಗುತ್ತಿದ್ದಾಗ ಪ್ರಯೋಗಗಳ ಮೂಲಕ ವಿಜ್ಞಾನವನ್ನು ಕಂಡುಕೊಳ್ಳ ಬಹುದು ಎಂಬ ಕಡೆಗೆ ಮೊದಮೊದಲು ಗಮನ ಸೆಳೆಯುವ ಪ್ರಯತ್ನ ನಡೆದಿದ್ದೂ ಪೈಥಾಗೋರಸ್ ನಿಂದ. ಧ್ವನಿವಿಜ್ಞಾನದ ಕೆಲವು ನಿಯಮಗಳನ್ನು ಅವನು ಕಂಡುಕೊಂಡಿದ್ದನು ಎಂದು ತಿಳಿಯಲಾಗಿದೆ. ತಂತಿವಾದ್ಯದ ತಂತಿಗಳೊಂದಿಗೆ ಅವನು ನಡೆಸಿದ ಪ್ರಯೋಗಗಳ ಪ್ರಕಾರ ಎರಡು ಬೇರೆ ಬೇರೆ ಉದ್ದದ ತಂತಿಗಳನ್ನು ಒಟ್ಟಿಗೆ ಅಥವಾ ಒಂದರ ನಂತರ ಇನ್ನೊಂದನ್ನು ಮೀಟಿದಾಗ ಉತ್ಪತ್ತಿಯಾಗುವ ನಾದ ಕೇಳಲು ಇಂಪಾಗಿರಬಹುದು ಇಲ್ಲವೆ ಕರ್ಕಶವಾಗಿರ ಬಹುದು. ಬೇರೆ ಬೇರೆ ಉದ್ದದ ತಂತಿಗಳು ಬೇರೆ ಬೇರೆ ಸ್ಥಾಯಿಯ ನಾದ ಹೊರಡಿಸುತ್ತವೆ ಎಂಬ ಜ್ಞಾನ ಪೈಥಾಗೋರಸ್ಸನ ಕಾಲಕ್ಕಾಗಲೆ ತಿಳಿದ ವಿಚಾರವಾಗಿತ್ತು. ಒಟ್ಟಾರೆ ಧ್ವನಿವಿಜ್ಞಾನ ಕೂಡ ಬಹಳ ಪ್ರಾಚೀನ ವಾದುದೆಂದು ಈ ಮೂಲಕ ತಿಳಿದುಬರುತ್ತದೆ.

* * *

ತನ್ನ ನೇರ, ನಿಷ್ಠುರ, ನಿರ್ಭೀತಿಯ ಸ್ಪಷ್ಟ ಚಿಂತನೆಗಳಿಂದ ಸಮಕಾಲೀನ ಸಮಾಜದ ನಿಂದನೆ ಮತ್ತು ಉಗ್ರ ಟೀಕೆಗೆ ಗುರಿಯಾದ ಅಥೆನ್ಸಿನ ಚಿಂತಕನೆಂದರೆ ಅನಾಕ್ಸಗೋರಸ್ (ಕ್ರಿ. ಪೂ. ೫೦೦-೪೨೮). ಆಗರ್ಭ ಶ್ರೀಮಂತನಾಗಿದ್ದರೂ ಇವನಿಗೆ ಅಧ್ಯಯನದಲ್ಲೇ ಹೆಚ್ಚು ಆಸಕ್ತಿ. ಸೂರ್ಯ, ಚಂದ್ರ ಮತ್ತು ಭೂಮಿಗಳ ಕುರಿತು ತನಿಖೆ ಮಾಡಲೆಂದೇ ತಾನು ಹುಟ್ಟಿದ್ದೇನೆ ಎಂದು ಆತ್ಮವಿಶ್ವಾಸ ದಿಂದ ಹೇಳಿಕೊಳ್ಳುತ್ತಿದ್ದ ವಿಶಿಷ್ಟ 'ಅಧಿಕಪ್ರಸಂಗಿ' ಅನಾಕ್ಸಗೋರಸ್. ಖಗೋಳ ವಿಜ್ಞಾನದ ಹಲವು ಪ್ರಥಮಗಳು ಇವನ ಲೆಕ್ಕಕ್ಕೆ ದಾಖಲಾಗಿವೆ.



ಪೈಥಾಗೋರಸ್

ಚಂದ್ರನನ್ನು ಬೆಳಗುವುದು ಸೂರ್ಯನ ಬೆಳಕು ಎಂದು ಅವನು ವಾದಿಸಿದ್ದ. ಚಂದ್ರನ ಕಲೆಗಳು ಸಂಭವಿಸುವುದು ಹೇಗೆ ಎಂಬ ಪ್ರಶ್ನೆಗೆ ಅವನು ಸ್ಪಷ್ಟ ಉತ್ತರ ನೀಡಿದ ಮೊದಲಿಗ. ಚಂದ್ರ ಭೂಮಿಯ ನೆರಳಿನ ಪ್ರದೇಶವನ್ನು ಅಂತರಿಕ್ಷದಲ್ಲಿ ಪ್ರವೇಶಿಸಿದಾಗ ಚಂದ್ರಗ್ರಹಣ ಆಗುತ್ತದೆ ಎಂಬ ನಿಖರ ವಿವರಣೆ ನೀಡಿದವರಲ್ಲಿ ಅನಾಕ್ಸಗೋರಸ್ಸನೇ ಮೊದಲಿಗ.

ಇಷ್ಟಕ್ಕೇ ಇವ ಸುಮ್ಮನಿದ್ದರೆ ತನ್ನಪಾಡಿಗೆ ತನ್ನ ಶ್ರೀಮಂತಿಕೆಯನ್ನು ಅನುಭವಿಸಿಕೊಂಡು ಇರಬಹುದಿತ್ತು. ಆದರೆ ಮುಂದುವರಿದು ಚಂದ್ರನ ಮೇಲೂ ಭೂಮಿಯಲ್ಲಿರುವಂತೆ ಕಣಿವೆ, ಪರ್ವತಗಳಿವೆ, ಭೂಮಿಯಲ್ಲಿರುವಂತೆ ವಿಶ್ವದ ಬೇರೆ ಬೇರೆ ಆಕಾಶಕಾಯಗಳಲ್ಲಿ ನಮ್ಮಂತೆ ಮನುಷ್ಯರಿದ್ದಾರೆ, ನಗರಗಳನ್ನು ನಿರ್ಮಿಸಿಕೊಂಡಿದ್ದಾರೆ, ರೈತರು ಕೃಷಿ ಮಾಡಿಕೊಂಡಿದ್ದಾರೆ ಎಂಬ ಕಲ್ಪನೆಯ ಮೂಲಕ ಸಮಕಾಲೀನ ಧರ್ಮೀಯರಿಂದ ಟೀಕೆಗೊಳಗಾದ. ಇದು ಸಾಲದೆಂಬಂತೆ ಖಗೋಳವಿಜ್ಞಾನದ ಅಧ್ಯಯನ ದಲ್ಲಿ ದೈವಿಕವಾದುದು ಮತ್ತು ಆಧ್ಯಾತ್ಮಿಕವಾದುದು ಏನೂ ಇಲ್ಲ ಎಂದು ಖಚಿತವಾಗಿ ಹೇಳುವ ಮೂಲಕ ವಿಶ್ವದ ಸಮಸ್ತವೂ ದೇವರ ಕೃಪೆ ಎಂದು ನಂಬಿದ್ದ ಆಸ್ತಿಕರಿಗೆ ದೊಡ್ಡ ಆಘಾತವನ್ನೇ ನೀಡಿದ. ಮತನಂಬಿಕೆ ಮತ್ತು ವಿಜ್ಞಾನಗಳ ನಡುವೆ ವೈಚಾರಿಕ ಸಂಘರ್ಷವನ್ನು ಹುಟ್ಟುಹಾಕಿದ ಅನಾಕ್ಸಗೋರಸ್ಸನನ್ನು ಸಹಿಸುವುದಾದರೂ ಹೇಗೆ? ಚಕ್ರವರ್ತಿ ಪೆರಿಕ್ಲಿಸ್ ಇವನಿಗೆ ಆತ್ಮೀಯ ಗೆಳೆಯ. ಇಷ್ಟಾಗಿಯೂ ಇವನಿಗೆ ಜೀವ ಬೆದರಿಕೆ ಒಡ್ಡಿ ಅಥೆನ್ಸಿನಿಂದ ಓಡಿಸಲಾಯಿತು (ಪೆರಿಕ್ಲಿಸ್ಸನ ಮಧ್ಯಸ್ಥಿಕೆ ಯಿಂದ ಅನಾಕ್ಸಗೋರಸ್‌ಗೆ ಮರಣದಂಡನೆ ವಿಧಿಸಲಿಲ್ಲ ಎಂಬುದೇ ಸಮಾಧಾನದ ವಿಷಯ.) ಅವನ ಬರಹಗಳನ್ನು ನಾಶಪಡಿಸಲಾಯಿತು. ಆದರೇನು, ಅವನು ಅಂದು ಚಂದ್ರನ ಬಗ್ಗೆ ಹೇಳಿದ ವಿಷಯಗಳನ್ನು ನಾವು ಇಂದು ಶಾಲೆಯಲ್ಲಿ ಕಲಿಯುತ್ತಿದ್ದೇವೆ. ಅಂದಿನ ಯುಗಧರ್ಮಕ್ಕೆ ಸುಳ್ಳೆನಿಸಿದ್ದ ವಿಚಾರಗಳು ಇಂದು ಪ್ರಾಯೋಗಿಕ ಪುರಾವೆಗಳಿಂದ ನಿಜವಾಗಿವೆ.

ವಿಜ್ಞಾನದ ಇತಿಹಾಸದಲ್ಲಿ ಒಮ್ಮೊಮ್ಮೆ ಅನಾಕ್ಸ ಗೋರಸ್ಸನಂತಹ ದಿಟ್ಟೆದೆಯ ಚಿಂತಕರು ವಿಜ್ಞಾನದ ಬೆಳವಣಿಗೆಗೆ ಅಚ್ಚರಿಯ ವೇಗ ಒದಗಿಸುತ್ತಾರೆ. ಆಲೋಚನೆಯ ದಿಕ್ಕನ್ನು ನಿರ್ದೇಶಿಸುವ ಹೊಸ ಆಯಾಮಗಳನ್ನು ನೀಡಿಬಿಡುತ್ತಾರೆ. ವಿಜ್ಞಾನ ಮುನ್ನುಗ್ಗಿದ್ದೇ ಅನಾಕ್ಸಗೋರಸ್‌ನಂತಹ ಅಧಿಕ ಪ್ರಸಂಗಿಗಳಿಂದ ಎಂದು ಮತ್ತೆ ಮತ್ತೆ ಸಾಬೀತಾಗಿದೆ. (ಪ್ರಾಚೀನ ಭಾರತದಲ್ಲಿ ತಳಬುಡವಿಲ್ಲದ ನಂಬಿಕೆಗಳ ಪ್ರವಾಹದ ವಿರುದ್ಧ ಈಜಿದ ವಿಜ್ಞಾನ ಚಿಂತಕರು ದೊಡ್ಡ ಸಂಖ್ಯೆ ಯಲ್ಲಿದ್ದರು. ಉದ್ದಾಲಕ ಆರುಣಿ ಅವರೆಲ್ಲರ ಪಿತಾಮಹ).

* * *

ಖಗೋಳ ವಿಜ್ಞಾನವನ್ನು ಅದರ ನೈಜ ಸ್ವರೂಪದಲ್ಲಿ, ವೈಜ್ಞಾನಿಕ ದೃಷ್ಟಿಕೋನದ ಮೂಲಕ ಅಧ್ಯಯನ ಮಾಡುವ ಮಹತ್ವವನ್ನು ಮೊದಲ ಬಾರಿಗೆ ಎತ್ತಿಹಿಡಿದ ಮಹನೀಯ ಇವನು. ನಾವಿಂದು ಅಭ್ಯಸಿಸುವ ಸೌರವ್ಯೂಹದ ಮಾದರಿಯನ್ನು ಮೊದಲ ಬಾರಿಗೆ ಅರ್ಥೈಸಿದವನು ಇವನು. ಭೂಮಿ ಮತ್ತು ಚಂದ್ರ ಹಾಗೂ ಭೂಮಿ ಮತ್ತು ಸೂರ್ಯರ ನಡುವಿನ ಅಂತರವನ್ನು ಗಣಿತೀಯವಾಗಿ ಅಳೆಯುವ ಪ್ರಥಮ ಪ್ರಯತ್ನವೂ ಇವನದು. ಅಲೆಕ್ಸಾಂಡ್ರಿಯಾದ ಖಗೋಳ ವಿಜ್ಞಾನಿಗಳ ಸಾಲಿನಲ್ಲಿ ಮೊದಲು ನಿಲ್ಲುವ ಈ ಮೇಧಾವಿಯೇ ಅರಿಸ್ಟಾರ್ಕಸ್ (ಕ್ರಿ. ಪೂ. ३१०-२३०).

ಇವನು ಬರಿಯ ಖಗೋಳವಿಜ್ಞಾನಿಯಲ್ಲ, ಗಣಿತಜ್ಞನೂ ಹೌದು. ಸಂಗೀತದಲ್ಲೂ ಪ್ರಾವೀಣ್ಯ ಪಡೆದಿದ್ದನು. ಅವನ ಪ್ರತಿಪಾದನೆಗಳು ನಾವಿಂದು ಬಹುವಾಗಿ ಆಶಿಸುವ ವೈಜ್ಞಾನಿಕ ಮನೋಭಾವಕ್ಕೆ ಪೂರಕವಾಗಿದ್ದವು ಎಂಬುದೇ ಅವನ ಅನನ್ಯತೆಯಾಗಿದೆ.

ಅರಿಸ್ಟಾರ್ಕಸ್ ಸೂರ್ಯ ಮತ್ತು ಚಂದ್ರರಿರುವ ದೂರವನ್ನು ಅಳೆಯುವ ಸಂದರ್ಭದಲ್ಲಿ ಬರಿಗಣ್ಣಿಗೆ ಅವೆರಡರ ತೋರಿಕೆಯ ಆಕಾರ ಒಂದೇ ಎಂದು ಕಂಡುಬಂದರೂ ವಾಸ್ತವದಲ್ಲಿ ಅವು ಬೇರೆ ಬೇರೆ ಅಳತೆಯ ಆಕಾರ ಹೊಂದಿವೆ ಎಂದು ಕಂಡುಕೊಂಡನು. ಬಹಳ ದೂರದಲ್ಲಿರುವ ಚಂದ್ರನ ಮೇಲೆ ಭೂಮಿಯ ನೆರಳು (ಗ್ರಹಣದ ವೇಳೆ) ಬೀಳಬೇಕಾದರೆ ನೆರಳಿಗೆ ಕಾರಣವಾದ ಸೂರ್ಯ ಭೂಮಿಗಿಂತ ಬಹಳ ದೊಡ್ಡದೇ ಇರಬೇಕು. ದೊಡ್ಡ ಸೂರ್ಯ ಚಿಕ್ಕ ಭೂಮಿಯನ್ನು ಪರಿಭ್ರಮಿಸುವುದು ಸಾಧ್ಯವಿಲ್ಲ, ಆದ್ದರಿಂದ ಭೂಮಿಯೇ ಸೂರ್ಯನನ್ನು ಸುತ್ತಬೇಕು. ಹೀಗಾಗಿ ಭೂಮಿಯನ್ನೂ ಒಳಗೊಂಡಂತೆ (ಶನಿಯವರೆಗೆ)ಎಲ್ಲ ಗ್ರಹಗಳು ಸೂರ್ಯನನ್ನು ಸುತ್ತುತ್ತವೆ ಎಂದು ಅರಿಸ್ಟಾರ್ಕಸ್ ಖಚಿತವಾಗಿ ವಾದಿಸಿದ. ಅವನ ವಾದ ಜನಪ್ರಿಯವೇನಾಗಲಿಲ್ಲ. ಆದರೆ ಇವನ ನಿಲುವು ಸರಿಯಿತ್ತೆಂದು ಹೇಳಲು ಕ್ರಿ.ಶ.೧೬ನೇ ಶತಮಾನದಲ್ಲಿ ಕೋಪರ್ನಿಕಸ್ಸನೇ ಬರಬೇಕಾಯಿತು.

* * *

ಅಲೆಕ್ಸಾಂಡ್ರಿಯಾದ ಇತಿಹಾಸ ಪ್ರಸಿದ್ಧ ಗ್ರಂಥಾಲಯದ ಕ್ಯೂರೇಟರ್ ಆಗಿದ್ದ ಇವನು ಬಹುಮುಖಿ, ಬಹುಶ್ರುತ ಪ್ರತಿಭೆಯಿದ್ದ ಮೇಧಾವಿ. ಇದೇ ಮೊದಲ ಬಾರಿಗೆ ಭೂಮಿಯ ಪರಿಧಿಯನ್ನು

## ನೀವು ಸ್ಪರ್ಧೆಗಳಲ್ಲಿ ಭಾಗವಹಿಸಬೇಕೆ ?




ರೂ. 250/-




ರೂ. 270/-




ರೂ. 225/-




ರೂ. 45/-




# ಹಲ್ಲೂರ ಪ್ರಕಾಶನ

ನಂ. 124/1–5, 3ನೇ ಮುಖ್ಯರಸ್ತೆ
4ನೇ ಅಡ್ಡರಸ್ತೆ, ಮಲ್ಲೇಶನ ಪಾಳ್ಯ
ನ್ಯೂ ತಿಪ್ಪಸಂದ್ರ, ಅಂಚೆ
ಬೆಂಗಳೂರು – 560 075
ಸಂಚಾರಿ ದೂರವಾಣಿ : 9448533120




ರೂ. 250/-

ನಮ್ಮಲ್ಲಿ ಎಲ್ಲಾ ರೀತಿಯ ಸ್ಪರ್ಧಾತ್ಮಕ ಪರೀಕ್ಷೆಗಳ ಪುಸ್ತಕಗಳು ದೊರೆಯುತ್ತವೆ.

---

Prop
S. T. Viraktamath (Raju)

(S) 2367902
(Br) 2260317
(0836) (R) 2253209

# National Book Stall

(Estd 1952)

Koppikar Road, Hubli - 580020

*Branch*

Axiz Mansion, Koppiker Road, Hubli - 580 020
email : nationalbook 1@ rediffmail.com

*Distributors for*

TMH, MGH, Starling & Vikas
Wiley India, Cambridge, Universities Press





ಎರಟೋಸ್ತೆನೀಸ್

ನಿಖರತೆಯ ಸನಿಹಕ್ಕೆ ಅಳೆದವನು. ಅವನೇ ಎರಟೋಸ್ತೆನೀಸ್ (ಕ್ರಿ. ಪೂ. ೨೭೬-೧೯೫). ಇವನು ಭೂಮಿಯ ಪರಿಧಿಯನ್ನು ಉತ್ತರ ದಕ್ಷಿಣವಿರುವ ಎರಡು ನಿರ್ದಿಷ್ಟ ಸ್ಥಳ (ಅಲೆಕ್ಸಾಂಡ್ರಿಯಾ ಮತ್ತು ಸಿಯೇನ್)ಗಳಲ್ಲಿ ವರ್ಷದ ದೀರ್ಘಾವಧಿ ಹಗಲಿನ ದಿನ ಅಂದರೆ ಜೂನ್ ೨೧ರಂದು ನಡುಮಧ್ಯಾಹ್ನ ನೆತ್ತಿಯ ನೇರಕ್ಕಿರುವ ಸೂರ್ಯನ ಕಿರಣಗಳು ಭೂಮಿಯ ಮೇಲೆ ಬೀಳುವಾಗ ಉಂಟುಮಾಡುವ ಕೋನಗಳ ಸಹಾಯದಿಂದ ಜ್ಯಾಮಿತಿ ಬಳಸಿ ಲೆಕ್ಕಹಾಕಿದ. ಆವನ ಪ್ರಕಾರ ಭೂಮಿಯ ಪರಿಧಿ ೪೨,೦೦೦ ಕಿ.ಮೀ. ಗಳಾಗಿದ್ದವು (ವಾಸ್ತವ ಅಳತೆ ೩೯,೯೪೦ ಕಿ.ಮೀ.). ಎರಟೋಸ್ತೆನೀಸನ ತಪ್ಪು ನಿರ್ಲಕ್ಷಿಸುವಂತಹುದು. ಯಾಕೆಂದರೆ ಅವನು ತಿಳಿದಂತೆ ಸಿಯೇನ್ ನಗರ ಅಲೆಕ್ಸಾಂಡ್ರಿಯಾದ ನೇರ ದಕ್ಷಿಣಕ್ಕಿಲ್ಲ. ಎರಡು ನಗರಗಳ ನಡುವಿನ ಅಕ್ಷಾಂಶದ ವ್ಯತ್ಯಾಸ ಅಂತಿಮ ಫಲಿತಾಂಶದಲ್ಲೂ ವ್ಯತ್ಯಾಸ ತಂದಿತು. ನಿಖರ ಭೌಗೋಳಿಕ ನಕ್ಷೆಗಳಿಲ್ಲದ ಅಂದಿನ ದಿನಗಳಲ್ಲಿ ಫಲಿತಾಂಶದ ನಿಖರತೆಗಿಂತ ಲೆಕ್ಕಹಾಕುವ ವಿಧಾನದ ನಿಷ್ಕೃಷ್ಟತೆ ಮತ್ತು ಸುಧಾರಣೆ ಹೆಚ್ಚು ಪ್ರಮುಖವಾಗುತ್ತವೆ.

ಭೂಮಿ ತನ್ನ ಅಕ್ಷದಿಂದ ಕೊಂಚ ವಾಲಿದೆಯೆಂದು ನಮಗೆ ಗೊತ್ತು. ಎರಟೋಸ್ತೆನೀಸ್ ಅಂದು ಭೂಮಿಯ ವಾಲಿಕೆ ೨೩° ೫೧' ಎಂದು ಲೆಕ್ಕಹಾಕಿದ್ದ (ವಾಸ್ತವ ಬೆಲೆ ೨೩° ೪೬'). ಇಲ್ಲಿಯ ತಪ್ಪು ನಿರ್ಲಕ್ಷಿಸುವಂತಹುದು.

ಭೂಗೋಳದ ಮೇಲೆ ಸ್ಥಳಗಳನ್ನು ಗುರ್ತಿಸಲು ಅಕ್ಷಾಂಶ, ರೇಖಾಂಶಗಳ ಪರಿಕಲ್ಪನೆಯನ್ನು ಮೊದಲ ಬಾರಿಗೆ ಬಳಕೆಗೆ ತಂದವನು ಎರಟೋಸ್ತೆನೀಸನೆ. ಒಂದು ವರ್ಷದ ಅವಧಿ ೩೬೫.೨೫ ಎಂದು ಲೆಕ್ಕಹಾಕಿ ಇದರ ಆಧಾರದ ಮೇಲೆ ಅಧಿಕ ವರ್ಷವನ್ನು ಕಂಡುಹಿಡಿದವನೂ ಇವನೇ. ಮೊದಲಬಾರಿಗೆ ಭೂಗೋಳದ ಅಧ್ಯಯನಕ್ಕೆ 'ಜಿಯೊಗ್ರಫಿ' ಎಂಬ ಪದ ಬಳಸಿ ನಾಂದಿ ಹಾಡಿದವನೂ ಇವನೇ.

೮೧ ವರ್ಷ ಬದುಕಿದ್ದ ಇವನು ಕೊನೆಗಾಲದಲ್ಲಿ ಸಂಪೂರ್ಣ ಕುರುಡನಾದ. ಇನ್ನು ಬದುಕಿ ಅರ್ಥವಿಲ್ಲ ಎಂದು ತೀರ್ಮಾನಿಸಿ ನಿರಶನ ಕೈಗೊಂಡು ತನ್ನ ಅರ್ಥಪೂರ್ಣ ಬದುಕಿಗೆ ವಿದಾಯ ಹೇಳಿದ.

* * *

ಇವನು ಬಹುಪಾಲು ನಿಖರ ಅಳತೆಗಳಿಗೆ ಇನ್ನೊಂದು ಹೆಸರು. ಒಂದು ಚಾಂದ್ರಮಾನ ತಿಂಗಳ ಅವಧಿಯನ್ನು ಕೆಲವೇ ಸೆಕೆಂಡುಗಳ ವ್ಯತ್ಯಾಸದೊಂದಿಗೆ, ಸೌರಮಾನ ವರ್ಷದ ಅವಧಿಯನ್ನು ಬರಿಯ ಆರು ನಿಮಿಷಗಳ ವ್ಯತ್ಯಾಸದೊಂದಿಗೆ ಲೆಕ್ಕ ಹಾಕಿದವನೆ ಹಿಪ್ಪಾರ್ಕಸ್ (ಕ್ರಿ.ಪೂ. ೧೯೦-೧೨೦). ಅಲೆಕ್ಸಾಂಡ್ರಿಯಾದಲ್ಲಿ ಬದುಕಿದ್ದ ಖಗೋಳವಿಜ್ಞಾನಿ. ಇವನು ಗಣಿತಜ್ಞನೂ ಹೌದು.

ಹಿಪ್ಪಾರ್ಕಸ್ ಸ್ವಂತ ಶ್ರಮದಿಂದ ರ್‍ಹೋಡ್ಸ್ ದ್ವೀಪದಲ್ಲಿ ವೇಧಶಾಲೆಯೊಂದನ್ನು ನಿರ್ಮಿಸಿದ. ಇವನ ಕಾಲಕ್ಕಾಗಲೇ ಗ್ರೀಕರು 'ಆಸ್ಟ್ರೋಲೇಬ್' ಎಂಬ ಉಪಕರಣವನ್ನು ತಯಾರಿಸಿದ್ದರು (ಇಂದಿನ ಸೆಕ್ಸ್‌ಟಾಂಟ್‌ನ ಪೂರ್ವ ಮಾದರಿ ಇದು). ಆಕಾಶಕಾಯಗಳು ಇರುವ ಸ್ಥಾನ ಮತ್ತು ಎತ್ತರವನ್ನು ತಿಳಿಯಲು ಈ ಉಪಕರಣವನ್ನು ಗ್ರೀಕ್ ನಾವಿಕರು ಬಳಸುತ್ತಿದ್ದರು. ಖಗೋಳವಿಜ್ಞಾನಿಗಳೂ ಇದನ್ನು ಬಳಸುತ್ತಿದ್ದರು. ಹಿಪ್ಪಾರ್ಕಸ್ ತಾನೇ ತಯಾರಿಸಿಕೊಂಡ ಆಸ್ಟ್ರೋಲೇಬ್ ಬಳಸಿ ನಕ್ಷತ್ರಗಳ ಅಧ್ಯಯನ ಮಾಡಿದ. ಕ್ರಿ.ಪೂ. ೧೩೪ರಲ್ಲಿ ಅವನು ಚಿತ್ತಾ ನಕ್ಷತ್ರ ಪ್ರತಿ ೧೬೦ ವರ್ಷಗಳಿಗೊಮ್ಮೆ ೭ ಡಿಗ್ರಿಯಷ್ಟು ಸ್ಥಾನಪಲ್ಲಟ ಹೊಂದುತ್ತದೆ ಎಂದು ಕಂಡುಹಿಡಿದ. ೧ರಿಂದ ೬ ಕಾಂತಿಮಾನಗಳವರೆಗಿರುವ ಒಂದು ಸಾವಿರ ನಕ್ಷತ್ರಗಳ ಸ್ಥಾನವನ್ನು ಅಧ್ಯಯನ ಮಾಡಿ ಜಗತ್ತಿನ ಮೊತ್ತಮೊದಲ ಸುಸಜ್ಜಿತ ನಕ್ಷತ್ರ ಪಟವನ್ನು ತಯಾರಿಸಿದ.

ಜ್ಯಾಮಿತಿ ಬಳಸಿ ನಮ್ಮಿಂದ ಚಂದ್ರ ಇರುವ ದೂರವನ್ನು ಹಿಪ್ಪಾರ್ಕಸ್ ೩,೮೪,೦೦೦ ಕಿ.ಮೀ. ಎಂದು ಕಂಡುಹಿಡಿದ. ವಾಸ್ತವ ಸರಾಸರಿ ದೂರ ೩,೮೪,೪೦೩ ಕಿ. ಮೀ.ಗಳು ಅಂದರೆ ೪೦೩ ಕಿ.ಮೀ. ಗಳ ವ್ಯತ್ಯಾಸ ನಿರ್ಲಕ್ಷಿಸುವಷ್ಟು. (ನಾವು, ಆಧುನಿಕ ಮನುಷ್ಯರು ೨೦ನೇ ಶತಮಾನದಿಂದೀಚೆಗೆ ನೂರಾರು ಬಾಹ್ಯಾಕಾಶ ನೌಕೆಗಳನ್ನು ಚಂದ್ರನೆಡೆಗೆ ಕಳುಹಿಸಿದ್ದೇವೆ. ಹಲವು ಚಂದ್ರನ ಮೇಲೇ ಇಳಿದಿವೆ. ಹನ್ನೆರಡು ಮಂದಿ ಚಂದ್ರನ ನೆಲದಲ್ಲಿ ನಡೆದುಬಂದಿದ್ದಾರೆ. ಇಡೀ ಚಂದ್ರನ 'ಭೂಪಟ' ಇಂದು ಲಭ್ಯವಿದೆ. ಇವೆಲ್ಲ ಸಾಧ್ಯವಾದದ್ದು ಚಂದ್ರ ನಮ್ಮಿಂದ ಇರುವ ದೂರವನ್ನು ಮೊದಲು ಲೆಕ್ಕಹಾಕಿದ ಮೇಲೆ ಅಲ್ಲವೆ? ಈ ಹಿನ್ನೆಲೆಯಲ್ಲಿ ನೋಡಿದಾಗ ದೂರದರ್ಶಕ, ಕ್ಯಾಮೆರಾ ಉಪಗ್ರಹ, ಕಂಪ್ಯೂಟರ್ ಚಾಲಿತ ಉಪಕರಣ ಇತ್ಯಾದಿಗಳಿಲ್ಲದ ಅಂದಿನ ದಿನಗಳಲ್ಲಿ ಬರಿಯ ತರ್ಕ, ವೀಕ್ಷಣೆ ಮತ್ತು ಗಣಿತದ ಸಹಾಯ ಪಡೆದು ನಿಖರ ಲೆಕ್ಕಹಾಕಿದ ಹಿಪ್ಪಾರ್ಕಸ್ಸನ ಸಾಧನೆ ಇಂದಿನ ವಿಜ್ಞಾನಿ, ತಂತ್ರಜ್ಞಾನಿಗಳಿಗಿಂತ ಕಡಿಮೆ ಹೇಗಾದೀತು?)

ಭೂಮಿ ದಿನಕ್ಕೊಮ್ಮೆ ತನ್ನ ಅಕ್ಷದ ಸುತ್ತ ಸುತ್ತುತ್ತದೆ (ಭ್ರಮಣೆ), ವರ್ಷಕ್ಕೊಮ್ಮೆ ಸೂರ್ಯನ ಸುತ್ತ ಸುತ್ತುತ್ತದೆ (ಪರಿಭ್ರಮಣೆ). ಇವಲ್ಲದೆ ಭೂಮಿಗೆ ಇನ್ನೊಂದು ಚಲನೆಯಿದೆ. ಅದುವೆ ಭೂ ಅಕ್ಷಚಲನೆ ಅಥವಾ ವಿಷುವಚ್ಚಲನೆ. ಈ ಚಲನೆ ನೆಲದ ಕಡೆ ಬಾಗಿಕೊಂಡು ತಿರುಗುವ ಬುಗುರಿಯ ಚಲನೆ ಹೋಲುತ್ತದೆ. ವಿಷುವಚ್ಚಲನೆಯನ್ನು ಮೊದಲು ಕಂಡುಹಿಡಿದದ್ದು ಹಿಪ್ಪಾರ್ಕಸ್. ಭೂಮಿಯು ತನ್ನ ಅಕ್ಷದ ಸುತ್ತ ಈ ಬುಗುರಿಯ ಚಲನೆಯ ಮೂಲಕ ಒಂದು ಪ್ರದಕ್ಷಿಣೆ ಬರಲು ೨೫,೮೦೦ ವರ್ಷಗಳು ಬೇಕು ಎಂದೂ ಇವನು ನಿರ್ಧರಿಸಿದ.

ಕ್ರಿಸ್ತಪೂರ್ವದ ಮೇಧಾವಿ ಗ್ರೀಕ್ ಖಗೋಳ ವಿಜ್ಞಾನಿಗಳ ಪರಂಪರೆಯಲ್ಲಿ ಹಿಪ್ಪಾರ್ಕಸ್ಸನೆ ಕೊನೆಯವನು. ಇವನ ನಂತರ ವಿಜ್ಞಾನದ ವಿಚಾರಗಳು ಖಚಿತವಾಗಿಯೂ ಹೀಗೆಯೆ ಎಂದು ಎದೆಯುಬ್ಬಿಸಿ ಹೇಳಬಲ್ಲ ವಿಜ್ಞಾನಿಗಳು ಕಾಣಬರಲಿಲ್ಲ. ಮುಂದಿನ ೧೬೦೦ ವರ್ಷಗಳವರೆಗಿನ ಅವಧಿ ವೈಜ್ಞಾನಿಕ ಸಾಧನೆಗಳ ದೃಷ್ಟಿಯಿಂದ ಕತ್ತಲೆಯ ಯುಗ ಎನಿಸಿಕೊಳ್ಳುತ್ತದೆ. ಈ ಅವಧಿಯಲ್ಲಿ ಮತೀಯ ನಂಬಿಕೆಗಳು ವಿಜ್ಞಾನವನ್ನು ತಮ್ಮ ಕಪಿಮುಷ್ಟಿಯಲ್ಲಿ ಬಂಧಿಸಿದ್ದವು. ವಿಚಾರ ಸ್ವಾತಂತ್ರ್ಯವನ್ನು ಹತ್ತಿಕ್ಕಿದ್ದವು. ಅದು ಇನ್ನೊಂದೇ ಇತಿಹಾಸ.

ಅಂತಃಸ್ಫೂರ್ತಿಯಿಂದಲೇ ಅರಿವುಗಳ ಕಿಟಕಿ, ಬಾಗಿಲುಗಳ ತೆರೆದ ಥೇಲಿಸ್, ಭೂಮ್ಯೇತರ ಜೀವಾನ್ವೇಷಣೆಯೆಂಬ ಮನುಕುಲದ ಮಹಾಶೋಧಕ್ಕೆ ಮುನ್ನುಡಿ ಬರೆದ ಮೆಟ್ರೋಡೋರಸ್, ಭೂಮಿಯೂ ಚಲನಶೀಲವಾದುದೆಂದು ಸಮರ್ಥಿಸಿದ ಪ್ರಯೋಗಶೀಲ ಪೈಥಾಗೋರಸ್, ವಿಚಾರ ಸಂಘರ್ಷದ ವಿನೂತನ ಹಾದಿ ತುಳಿದ ಅಸಾಮಾನ್ಯ ಅನಾಕ್ಸಗೋರಸ್, ಸೂರ್ಯಕೇಂದ್ರವಾದಕ್ಕೆ ಅಸ್ತಿವಾರ ಹಾಕಿದ ಅರಿಸ್ಟಾರ್ಕಸ್, ಭೂಗೋಳಶಾಸ್ತ್ರವೆಂಬ ಹೊಸ ಅಧ್ಯಯನ ಶಾಖೆಯನ್ನು ಆರಂಭಿಸಿದ ಎರಟೋಸ್ತೆನೀಸ್ ಮತ್ತು ನಕ್ಷತ್ರಗಳ ನಾಡಿನ ಸ್ವಾರಸ್ಯಗಳಿಗೆ ನಮ್ಮನ್ನು ಕರೆದೊಯ್ದ ಹಿಪ್ಪಾರ್ಕಸ್ ಎಲ್ಲರೂ ಈಗಲೂ ನಮ್ಮನ್ನು ಆಲೋಚನೆಗೆ ಹಚ್ಚಬಲ್ಲರು. ವಿಜ್ಞಾನವೆಂದರೆ ಕಂಪ್ಯೂಟರ್ ತಂತ್ರಜ್ಞಾನ ಎಂಬಷ್ಟು ನಮ್ಮ ಜೀವನದಲ್ಲಿ ಕಂಪ್ಯೂಟರ್ ಬೆರೆತುಹೋಗಿರುವ ಇಂದಿನ ಯುಗದಲ್ಲಿ ಮೂಲಾಧಾರ ವಿಜ್ಞಾನಗಳನ್ನು ಕಟ್ಟಿ ಬೆಳೆಸಿದವರನ್ನು ನಾವು ಮರೆಯುವಂತಿಲ್ಲ. ಸಮಕಾಲೀನರ ವಿರೋಧ ಕಟ್ಟಿಕೊಂಡು, ತಮಗೆ ಅವಶ್ಯವಿರುವ ಸಂಶೋಧನಾತ್ಮಕ ವಾತಾವರಣವನ್ನು ರೂಪಿಸಿಕೊಂಡು, ಪ್ರಯೋಗಕ್ಕೆ ಉಪಕರಣಗಳನ್ನು ತಾವೇ ತಯಾರಿಸಿಕೊಂಡು, ಹಗಲು ರಾತ್ರಿ ದುಡಿಯುತ್ತಿದ್ದ ಅಂದಿನ ಸಾಹಸೀ ವಿಜ್ಞಾನಿಗಳನ್ನು ಇಲ್ಲಿ ಬಹಳ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ತಮ್ಮ ಕಾಲಘಟ್ಟಕ್ಕಿಂತ ಬಹಳ ಮುಂದಕ್ಕೆ ಆಲೋಚಿಸಬಲ್ಲ ಸಾಮರ್ಥ್ಯ ಅವರಿಗಿತ್ತು ಎಂಬ ಕಾರಣಕ್ಕೆ ಅವರನ್ನು ಪರಿಚಯಿಸಿದ್ದು.

ಕೆ. ಎಸ್. ರವಿಕುಮಾರ್
ಭಾರತೀಯ ಜೀವ ವಿಮಾ ನಿಗಮ, ಹಾಸನ - ೫೭೩೨೦೧




೧೯೯೭ರಲ್ಲಿ ಭಾರತೀಯ ಬ್ಯಾಡ್‌ಮಿಂಟನ್ ಸಂಸ್ಥೆಯ ವಿರುದ ಅನೇಕರು ಬಂಡಾಯವೆದ್ದರು. ಈ ಬಂಡಾಯದ ನಾಯಕತ್ವ ವಹಿಸಿದ ಭಾರತದ ಹೆಸರಾಂತ ಬ್ಯಾಡ್‌ಮಿಂಟನ್ ಕ್ರೀಡಾಪಟು ಪ್ರಕಾಶ್ ಪಡುಕೋಣ ಅವರಿಗೆ ಪ್ರಾರಂಭದಲ್ಲೇ ತಾನು ಯಾಕಾದರೂ ಈ ದುಸ್ಸಾಹಸಕ್ಕೆ ಕೈಹಾಕಿದ ಎನ್ನಿಸಿದ್ದರಲ್ಲಿ ಅಚ್ಚರಿಯಿಲ್ಲ. ಅವರು ಬಂಡಾಯವೆದ್ದದ್ದು ಎರಡು ದಶಕಗಳ ಕಾಲ ಅಧಿಕಾರದ ಸವಿಯನ್ನುಂಡು ಐಶಾರಾಮ ಜೀವನ ನಡೆಸುತ್ತಿದ್ದ ಆ ಸಂಸ್ಥೆಯ ಪದಾಧಿಕಾರಿಗಳ ವಿರುದ್ಧ. ಪರ್ಯಾಯ ಸಂಸ್ಥೆಯೊಂದನ್ನು ಅಸ್ತಿತ್ವಕ್ಕೆ ತರುವುದರ ಜೊತೆಗೆ ಕೇವಲ ಅರ್ಹತೆಯ ಆಧಾರದ ಮೇಲೆ ಆಟಗಾರರನ್ನು ಗುರುತಿಸಿ ಜಿಲ್ಲಾ ಮಟ್ಟದಲ್ಲೂ ಬ್ಯಾಡ್‌ಮಿಂಟನ್ ಕ್ರೀಡೆಯನ್ನು ಜನಪ್ರಿಯಗೊಳಿಸಬೇಕೆಂಬುದು ಪಡುಕೋಣೆಯವರ ಆಶಯವಾಗಿತ್ತು. ಕೊನೆಗೂ ಆ ಬಂಡಾಯಕೋರ ಭಾರತೀಯ ಬ್ಯಾಡ್‌ಮಿಂಟನ್ ಪರ್ಯಾಯ ಸಂಸ್ಥೆಯನ್ನು ರಚಿಸಿಯೂ ಆಯಿತು. ಆದರೆ ಸಂಸ್ಥೆ ಅಸ್ತಿತ್ವದಲ್ಲಿದ್ದದ್ದು ನಾಲ್ಕು ತಿಂಗಳು ಮಾತ್ರ.

ಆನಂತರ ಆ ನಾಲ್ಕು ತಿಂಗಳ ಅನುಭವ ಎಂತಹ ಒಂದು ದುಃಸ್ವಪ್ನವಾಗಿ ಪರಿಣಮಿಸಿತು ಎಂದು ಪಡುಕೋಣೆ ಅಲ್ಲಲ್ಲಿ ಹೇಳಿಕೊಂಡದ್ದುಂಟು. ಮಾನ್ಯತೆ ರದ್ದುಮಾಡಲಾಗುವುದೆಂದು ಹೊಸದಾಗಿ ಅಸ್ತಿತ್ವಕ್ಕೆ ಬಂದ ಭಾರತೀಯ ಬ್ಯಾಡ್‌ಮಿಂಟನ್ ಸಂಸ್ಥೆಗೆ ಬೆದರಿಕೆ ಹಾಕಲಾಯಿತು. ಜೊತೆಗೆ ಆ ಸಂಸ್ಥೆಯ ಭಾಗವಾಗಿದ್ದ, ಸರ್ಕಾರಿ ಸಂಸ್ಥೆಗಳಲ್ಲಿ ನೌಕರರಾಗಿದ್ದ ಆಟಗಾರರನ್ನೂ ಹುದ್ದೆಯಿಂದ ಕಿತ್ತು ಹಾಕಲಾಗುವುದೆಂದು ಎಚ್ಚರಿಕೆ ನೀಡಲಾಯಿತು. ತಾಕತ್ತಿದ್ದರೆ ಮುಂದಿನ ಹೆಜ್ಜೆ ಇಡಿ ಎಂದು ಬೆದರಿಸುವ ಅನಾಮಿಕ ದೂರವಾಣಿ ಕರೆಗಳೂ ಕ್ರೀಡಾ ಸಚಿವಾಲಯದಿಂದ ಬರತೊಡಗಿದವು. ಬೇಸತ್ತುಹೋದ ಪಡುಕೋಣೆ ಆಡಳಿತಾರೂಢ ಸಂಸ್ಥೆಯೊಂದಿಗೆ ರಾಜಿಮಾಡಿಕೊಳ್ಳಲೇಬೇಕಾಯಿತು.

ಈ ಒಂದು ಘಟನೆ ಭಾರತದ ಕ್ರೀಡಾ ವಲಯಕ್ಕೆ ಅಂಟಿಕೊಂಡಿರುವ

# ಕ್ರೀಡಾ ಜಗತ್ತಿನ ಮುಗ್ಗಟ್ಟು ಮತ್ತು ಅವ್ಯವಸ್ಥೆ

ದೇವ್ ಎಸ್. ಸುಕುಮಾರ್

**ಖಾಲಿ ಜಾಗಗಳು, ನಿವೇಶನಗಳ ಕೊರತೆಯಿಂದಾಗಿ ಬ್ಯಾಡ್‌ಮಿಂಟನ್, ಸ್ಕ್ವಾಷ್, ಟೇಬಲ್ ಟೆನಿಸ್‌ಗಳಂತಹ ಒಳಾಂಗಣ ಕ್ರೀಡೆಗಳಿಗೇ ಮೊರೆಹೋಗುವುದರ ಪರಿಣಾಮವಾಗಿ ಆಟಗಾರರ ದೈಹಿಕ ಬೆಳವಣಿಗೆ ಕುಂಠಿತಗೊಳ್ಳುವ ಸಾಧ್ಯತೆಗಳಿವೆ. ಇತ್ತೀಚೆಗೆ ಹೊರಾಂಗಣ ಕ್ರೀಡೆಗಳಲ್ಲಿ ಭಾಗವಹಿಸುವ ಬಾಲಕ ಬಾಲಕಿಯರು ಬೂಟುಗಳನ್ನು ಉಪಯೋಗಿಸುತ್ತಾರೆ; ಇದರಿಂದಾಗಿ ಅವರಿಗೆ ನೆಲದ ಮೇಲೆ ಬರಿಗಾಲಿನಲ್ಲಿ ಆಡುವ, ಆ ಮೂಲಕ ಅವರಿಗೆ ದಕ್ಕುವ ವಿಶಿಷ್ಟ ಅನುಭವದಿಂದ ವಂಚಿತರಾಗುತ್ತಾರೆ ಎಂದು ತರಬೇತುದಾರರೊಬ್ಬರು ವಿಷಾದ ವ್ಯಕ್ತಪಡಿಸುತ್ತಿದ್ದರು. ಬಹುಶಃ ಹೀಗೆ ಕ್ರೀಡಾಪಟುಗಳು ಬರಿಗಾಲಿನಲ್ಲಿ ಅಥವಾ ಬೂಟುಹಾಕಿಕೊಂಡು ವಿವಿಧ ಬಗೆಯ ಆಟದ ಮೈದಾನಗಳಲ್ಲಿ ಆಡುವುದರಿಂದಾಗಿ ಉಂಟಾಗುವ ಪರಿಣಾಮಗಳ ಕುರಿತು ಸಂಶೋಧನೆ ನಡೆಸುವ ಅಗತ್ಯವಿದೆ.**



ರ್ವ್ಯವಸ್ಥೆಗೆ ಕನ್ನಡಿ ಹಿಡಿಯುವಂತಿದೆ. ನಮ್ಮ ಕ್ರೀಡಾ ವ್ಯವಸ್ಥೆ ಅವನತಿಯ ಹಾದಿ ಡಿಯುತ್ತಿರುವ ಬಗೆಗೆ ಯಾವತ್ತಿಗೂ ಆತಂಕಪಡದ ಈ ಜನರು ಪಡುಕೋಣೆಯವರ ದುದ್ದೇಶದಿಂದ ಕೂಡಿದ ಪ್ರಯತ್ನಗಳಿಗೆ ಅಡ್ಡಗಾಲು ಇಟ್ಟದ್ದು ನಿಜಕ್ಕೂ ಶೋಚನೀಯ.

ಈ ಕೆಟ್ಟ ಪ್ರವೃತ್ತಿ ನಮ್ಮ ಬದುಕಿನ ಎಲ್ಲ ವಲಯಗಳಲ್ಲೂ ತಾಂಡವವಾಡುತ್ತಿದೆ. ರಂತವೆಂದರೆ ಒಂದರ್ಥದಲ್ಲಿ ನಾವೂ ಇಂತಹ ಪರಿಸ್ಥಿತಿಗೆ ಒಗ್ಗಿಕೊಂಡುಬಿಟ್ಟಿದ್ದೇವೆ. ಮ್ಮ ನಿತ್ಯ ಬದುಕಿನ ಹಲವಾರು ಸ್ತರಗಳಲ್ಲಿ, ಅದರಲ್ಲೂ ರಾಜಕೀಯ ಕ್ಷೇತ್ರದಲ್ಲಿ ಂಚಕರು, ಖದೀಮರು ಮತ್ತಿತರ ಕೀಳುಮಟ್ಟದ ಜನರು ಸೇರಿಕೊಂಡು ಉನ್ನತ ನಗಳನ್ನು ಆಕ್ರಮಿಸಿಕೊಂಡುಬಿಡುತ್ತಾರೆ. ಇಂತಹ ಸಂಘಸಂಸ್ಥೆಗಳತ್ತ ಅಥವಾ ಜಕೀಯದತ್ತ ಸಮಾಜಘಾತುಕ ಜನರು ಆಕರ್ಷಿತರಾಗುವ ವಿದ್ಯಮಾನದ ಹಿಂದೆ ಂದು ನಿರ್ದಿಷ್ಟ ಕಾರಣವಿದೆ, ತರ್ಕವಿದೆ. ಆದರೆ ಕ್ರೀಡೆಯಂತಹ ಒಂದು ಕ್ಷೇತ್ರವು ಬಗೆಯ ಜನರನ್ನು ಆಕರ್ಷಿಸುವುದಕ್ಕೆ ಕಾರಣವಾದರೂ ಏನು ?

ಬೋರಿಯ ಮಜುಮ್ದಾರ್ ಮತ್ತು ನಳಿನ್ ಮೆಹ್ತಾ ಅವರು ರಚಿಸಿರುವ ಲಿಂಪಿಕ್ಸ್ : ದಿ ಇಂಡಿಯ ಸ್ಟೋರಿ' ಎಂಬ ಇತ್ತೀಚಿನ ಒಂದು ಪುಸ್ತಕ ಭಾರತೀಯ ೀಡಾ ಕ್ಷೇತ್ರದ ಬಗ್ಗೆ ಚಾಲ್ತಿಯಲ್ಲಿರುವ ಅನೇಕ ಪ್ರಶ್ನೆಗಳಿಗೆ ಸಮಜಾಯಿಷಿ ಒದಗಿಸುತ್ತದೆ. ಭಾರತವು ಅಂದಿನ ದಿನಗಳಲ್ಲಿ ಒಲಿಂಪಿಕ್ ಕ್ರೀಡೆಗಳಿಗೆ ಮುಖಾಮುಖಿಯಾದ ಬಗೆ ನಂತರದ ದಿನಗಳಲ್ಲಿ ಜರುಗಿದ ಆಗುಹೋಗುಗಳನ್ನು ನಿರ್ಧರಿಸಿತು ಎಂಬುದು ಗಮನಾರ್ಹ. ಅಂದಿನ ದಿನಗಳಲ್ಲಿ ಸಾಮ್ರಾಜ್ಯಶಾಹಿ ಆಡಳಿತಕ್ಕೊಳಪಟ್ಟಿದ್ದ ಭಾರತದಂತಹ ದೇಶವನ್ನು ಪ್ರತಿನಿಧಿಸಿ ತಮ್ಮದೇ ಸ್ವಂತ ಖರ್ಚಿನಲ್ಲಿ ಅಂತರರಾಷ್ಟ್ರೀಯ ಒಲಿಂಪಿಕ್ ಸಂಸ್ಥೆಗಳಂತಹ ಜಾಗತಿಕ ಸಂಘಸಂಸ್ಥೆಗಳಲ್ಲಿ ಭಾಗವಹಿಸಲು ಸಮರ್ಥರಾಗಿದ್ದವರು ರಾಜವಂಶಕ್ಕೆ ಸೇರಿದ ಶ್ರೀಮಂತ ವರ್ಗದವರು ಮಾತ್ರ. ಎಂದೇ ಪಾಟಿಯಾಲ ಮಹಾರಾಜರಂತಹ ದೊಡ್ಡ ದೊಡ್ಡ ಕುಳಗಳು ಭಾರತೀಯ ಕ್ರೀಡಾ ಜಗತ್ತಿನಲ್ಲಿ ಪ್ರಭಾವಶಾಲಿ ವ್ಯಕ್ತಿಗಳಾದರು. ಹಲವಾರು ಸಂಘಸಂಸ್ಥೆಗಳಿಗೆ ಪೋಷಕರಾದರು. ಶತಮಾನಗಳ ಕಾಲದಿಂದಲೂ ಪಿತ್ರಾರ್ಜಿತವಾಗಿ ತಮಗೆ ದೊರಕುತ್ತಿದ್ದ ರಾಜಧನ ಮುಂತಾದ ಸವಲತ್ತುಗಳಿಂದ ವಂಚಿತರಾದ ರಾಜ ಮಹಾರಾಜರು ಮತ್ತು ಅವರ ವಂಶಸ್ಥರು ಸ್ವಾತಂತ್ರ್ಯಾ ನಂತರದ ದಿನಗಳಲ್ಲೂ ಪ್ರಭಾವಯುತ ವಲಯಗಳಲ್ಲಿ ಸ್ವಪ್ರತಿಷ್ಠೆ, ಅಂತಸ್ತುಗಳನ್ನು ಮೆರೆಯುವ ಪ್ರಕ್ರಿಯೆ ಮುಂದುವರೆಯಿತು. ಹೀಗೆ ಕ್ರೀಡಾ ಕ್ಷೇತ್ರವು ಗಣ್ಯವ್ಯಕ್ತಿಗಳ ಮತ್ತು ಸ್ವಾರ್ಥ ರಾಜಕಾರಣಿಗಳ ಆಶ್ರಯತಾಣವಾಗಿಬಿಟ್ಟಿತು ಎಂದರೆ ತಪ್ಪಾಗಲಾರದು. ಇದರಿಂದಾಗಿ

# ಆನೆಕರೋಟಿಯ ಹುಡುಗಿ



ಆ ದಿನ ಸಂಜೆ ರಾಮಸ್ವಾಮಿ ಸರ್ಕಲ್ಲಲ್ಲಿ
ನೂರಡಿ ಜೋಡಿ ರಸ್ತೆಗೆ ಇಳಿದು
ಪಕ್ಕಕೆ ಸರಿದು ಫುಟ್‌ಪಾತಲ್ಲಿ
ನಡೆಯುತಲಿದ್ದರೆ ಏನಿದು ಚೋದ್ಯ-
ಅರಳಿದ ಹೂಗಳ ಮರಗಳ ಕೆಳಗೆ
ಎದುರಿಗೆ ಬಂದಳು ಅವನ ಬಾಲ್ಯದ ಗೆಳತಿ
ಆನೆಕರೋಟಿಯ ಹುಡುಗಿ !

ಅವನನು ಕಂಡು ಅವಳಿಗು ಸೋಜಿಗ:
''ಏನೋ ರಾಮು, ಹೇಗಿದ್ದೀಯೊ ?
ಯಾವತ್ತಿಂದ ಇಲ್ಲಿ?'' ಪ್ರಶ್ನಿಸಿ ಅವನ
ಕಣ್ಣಲಿ ಹೊಕ್ಕು ನಿಂತಳು ಬಳಿಯಲ್ಲಿ.

''ಇರುವುದು ಹೀಗೇ ಅಂದಿನ ಹಾಗೇ,
ಕೈಹಿಡಿದಾಕೆಗೆ ನನ್ನೊಳು ಹೊಂದಿಕೆ
ಯಾಗಲೆ ಇಲ್ಲ ಯಾಕೋ ಏನೋ
ಇಂದಿನವರೆಗೂ ಮನೆಯಲ್ಲಿ;
ಇಲ್ಲಿಗೆ ಬಂದೆ ನಾಟಕ ನೋಡಲು
ರಂಗಾಯಣದಲ್ಲಿ'' ಎನ್ನಲು ಅವನು,
ಕರೆದಳು ಅವನ ಕ್ಯಾಂಟೀನತ್ತ
ಯಾಚನೆ ಕಣ್ಣಲಿ.

ಕ್ಯಾಂಟೀನಲ್ಲಿ ಕುಳಿತಿರಲವರು ಜೊತೆಯಲ್ಲಿ
ಕಾಫಿಯ ಹೀರುತ ಕೇಳಿದನವಳ
ಎಂಥದೊ ಯೋಚನೆಯಲ್ಲಿ –
''ಆಗಿದೆಯೇನೇ ನಿನಗೂ ಮದುವೆ ?
ಹೇಳು ಸುನಂದಾ ನನ್ನಲ್ಲಿ.''

''ಆಗಿದೆ ರಾಮು, ನನಗೂ ಮದುವೆ –
ಅಮ್ಮನ ಪ್ರೀತಿಗೆ ಒಲ್ಲದ ಗಂಡಿನ ಜೊತೆಗೆ ;
ವರ್ಷದ ಹಿಂದೆ ಕಾಯಿಲೆಯಿಂದ
ತೀರಿದರವರು ಇಲ್ಲಿ, ದಿನ ಬೆಳಗಾದರೆ
ಅಮ್ಮನು ಸುರಿಸುವ ಕಣ್ಣೀರನ್ನು
ನೋಡುವುದೀಗ ಕಡು ಕಷ್ಟ.''

''ಮನೆಯಲ್ಲೀಗ ಯಾರಿದ್ದೀರಿ ?
ಸಾಗಿದೆ ಹೇಗೆ ಬದುಕು ಸುನಂದಾ ?''
ಗಂಟಲು ಕಟ್ಟಲು ಸಂಕಟದಲ್ಲೇ
ಕೇಳಿದನವನು ಕಣ್ಣಲಿ ಕಣ್ಣಿಟ್ಟವಳ

''ಇಲ್ಲೇ ಮುನಿಸಿಪಾಲಿಟಿಯಲ್ಲಿ
ಸಣ್ಣದು ಕ್ಲಾರ್ಕು ಕೆಲಸ;
ಅಮ್ಮನು-ನಾನು ಇರುವುದು ಇಬ್ಬರೆ,
ಹೇಗೋ ಸಾಗಿದೆ ಬದುಕು.''

ನೆನಪಿನ ಹನಿಮಳೆ ಸಣ್ಣಗೆ ಸುರಿಸಿ
ಒಡನಾಡಿಗಳಿಬ್ಬರು ಕ್ಯಾಂಟೀನಿಂದ
ಬಂದರು ಮೆಲ್ಲಗೆ ಹೊರಗೆ -
ಗುಲ್‌ಮೊಹರಿನ ಮರಗಳ ಕೆಳಗೆ.

''ಊರಿಗೆ ಹೊರಡುವ ಮೊದಲು
ಮರೆಯದೆ ಬಾರೋ ರಾಮು,
ಆನೆಕರೋಟಿಯ ನಮ್ಮನೆಗೆ''
ಅಗಲುವ ವೇಳೆಯ ಅವಳ ನುಡಿಗೆ
ಕರಗುತ ರಾಮು – ''ಗುರುತಿಗೆ ಈಗಲು
ಇದೆಯೆ ಸುನಂದಾ, ಮನೆ ಮುಂಬಾಗಿಲ
ಜಾಜಿ ಮಲ್ಲಿಗೆ ಬಳ್ಳಿ ಕಮಾನು ?''
ಎನ್ನುತ್ತಿರಲು, ತಲೆಯಲ್ಲಾಡಿಸಿ
ಇದೆಯಿದೆಯೆನ್ನುತ ಅವಳು
ಕಣ್ಣರಳಿಸಿ ನಕ್ಕಳು ಜಾಜಿಮಲ್ಲಿಗೆಯಂತೆ.

ಜಿ. ಎಸ್. ಉಬರಡ್ಕ
'ಕಾರ್ತಿಕ' ನಾರ್ಣಕಜೆ, ಅಂಚೆ: ದೊಡ್ಡತೋಟ - ೫೭೪೨೪೮
ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ

ಈ ವ್ಯಕ್ತಿಗಳು ಕ್ರೀಡೆಯ ಅಭಿವೃದ್ಧಿಗಾಗಿ ದುಡಿಯುವ ಬದಲು ಅಧಿಕಾರವನ್ನು ತಮ್ಮ ಸ್ವಂತ ಹಿತಾಸಕ್ತಿಗಳಿಗಾಗಿ ದುರುಪಯೋಗಪಡಿಸಿಕೊಳ್ಳುವಂತಾಯಿತಷ್ಟೆ. ಕಾಲ ಕ್ರಮೇಣ ಪ್ರಜಾಪ್ರಭುತ್ವ ವಿರೋಧಿ ಅಧಿಕಾರಶಾಹಿ, ಸ್ವಜನ ಪಕ್ಷಪಾತ, ಕ್ರೀಡಾಪಟುಗಳು ಸುಳ್ಳು ವಯಸ್ಸನ್ನು ದಾಖಲಿಸುವುದು ಇವೇ ಮೊದಲಾದ ಸಮಸ್ಯೆಗಳು ಇಡೀ ವ್ಯವಸ್ಥೆಯಲ್ಲಿ ಆಳವಾಗಿ ಬೇರೂರಿದವು.

ಕ್ರೀಡಾ ಸಂಸ್ಥೆಗಳು ಮತ್ತು ಒಕ್ಕೂಟಗಳನ್ನು ಸಂಘ ಸಂಸ್ಥೆಗಳ ಕಾಯಿದೆಯಡಿ ನೋಂದಾಯಿಸಲಾಗುತ್ತದೆ. ತಾತ್ವಿಕವಾಗಿ ನೋಡಿದರೆ ಈ ಒಕ್ಕೂಟಗಳು ಪ್ರಜಾಪ್ರಭುತ್ವವಾದಿ ನಿಯಮಗಳಿಗನುಸಾರವಾಗಿ ಕಾರ್ಯ ನಿರ್ವಹಿಸಬೇಕಿದೆ; ಜಿಲ್ಲಾ ಪ್ರತಿನಿಧಿಗಳನ್ನೂ ಒಳಗೊಂಡಂತೆ ರಾಜ್ಯಮಟ್ಟದ ಸಂಸ್ಥೆಗಳನ್ನು ಪ್ರತಿನಿಧಿಸುವ ವ್ಯಕ್ತಿಗಳು ಒಕ್ಕೂಟದ ಸದಸ್ಯರಾಗಬೇಕಿದೆ. ಜಿಲ್ಲಾ ಸಂಸ್ಥೆಗಳಲ್ಲಿ ಸ್ಥಳೀಯ ಕ್ರೀಡಾ ತಂಡಗಳ ಪ್ರತಿನಿಧಿಗಳು ಸದಸ್ಯರಾಗಿರಬೇಕಿದೆ. ಇವೆಲ್ಲವೂ ಸರಿಯೆ. ಆದರೆ ನಿಜಸ್ಥಿತಿ ಹಾಗಿಲ್ಲ. ಈ ಇಡೀ ಸಾಂಸ್ಥಿಕ ರಚನೆಗೆ ಅಡಿಪಾಯವೇ ಇಲ್ಲ. ಎಂದರೆ ಬಹುತೇಕ ಬೇರುಮಟ್ಟದ ಘಟಕಗಳು (ಕ್ಲಬ್ಬುಗಳು) ಅಸ್ತಿತ್ವದಲ್ಲೇ ಇಲ್ಲ. ಯಾವನೋ ಒಬ್ಬ ಸದಸ್ಯ ಮೇಲ್ಮಟ್ಟದ ಸಂಸ್ಥೆಯ ಚುನಾವಣೆಯಲ್ಲಿ ಸ್ಪರ್ಧಿಸಲು ಬಯಸಿದಾಗ ಮಾತ್ರ ಇಂತಹ ಘಟಕಗಳು ದಿಢೀರನೆ ಹುಟ್ಟಿಕೊಂಡುಬಿಡುತ್ತವೆ. ಇಷ್ಟೇ ಅಲ್ಲ, ಹೆಚ್ಚೂ ಕಡಿಮೆ ಪ್ರತಿಯೊಂದು ರಾಷ್ಟ್ರೀಯ ಕ್ರೀಡಾ ಒಕ್ಕೂಟವೂ ಕಾರ್ಯ ನಿರ್ವಹಿಸುವ ಶೈಲಿ ಪ್ರಶ್ನಾರ್ಹವಾಗಿದೆ. ಸರ್ವಸದಸ್ಯರ ಸಭೆಗಳು ನಿಗದಿತ ವೇಳೆಗೆ ಜರುಗುವುದು ಬಹಳ ವಿರಳ. ಒಂದೊಮ್ಮೆ ಜರುಗಿದರೂ ಸಭೆಯ ಕಾರ್ಯ ಕಲಾಪಗಳನ್ನು, ಚರ್ಚೆಗಳನ್ನು ದಾಖಲಿಸುವ ಪರಿಪಾಠವೇ ಇಲ್ಲ. ಚುನಾವಣೆಗಳಲ್ಲಿ ಜರುಗುವ ಅನಾಚಾರಗಳಿಗಂತೂ ಲೆಕ್ಕವೇ ಇಲ್ಲ. ಕರ್ನಾಟಕ ಬ್ಯಾಡ್‌ಮಿಂಟನ್ ಸಂಸ್ಥೆಯು ಮಾತ್ರ ಈ ಎಲ್ಲ ಅನಿಷ್ಟ ಪ್ರವೃತ್ತಿಗಳಿಗೆ ಅಪವಾದವಾಗಿ ಕಾರ್ಯ ನಿರ್ವಹಿಸುತ್ತಿರುವುದು ನಿಜಕ್ಕೂ ಪ್ರಶಂಸನೀಯ. ಈ ಸಂಸ್ಥೆ ತನ್ನದೇ ಆದ ಸಾಕಷ್ಟು ನಿಧಿ ಇರಿಸಿಕೊಂಡಿದೆ. ತನ್ನ ವರಮಾನದ ಶೇಕಡ ೩೦ರಷ್ಟು ಭಾಗವನ್ನು, ಎಂದರೆ ೩೦ ಲಕ್ಷ ರೂಪಾಯಿಗಳನ್ನು ಬೆಂಗಳೂರಿನಾಚೆಗಿನ ಪ್ರದೇಶಗಳಲ್ಲಿ ಬ್ಯಾಡ್‌ಮಿಂಟನ್ ಕ್ರೀಡೆಯನ್ನು ಜನಪ್ರಿಯಗೊಳಿಸುವ ಮತ್ತು ಆಟಗಾರರ ಕೌಶಲ್ಯವನ್ನು ಪ್ರತಿಭೆಯನ್ನು ಬೆಳೆಸುವ ಸಲುವಾಗಿ ಮೀಸಲಾಗಿಟ್ಟಿದೆ. ಈಗಾಗ ಮಂಡ್ಯ ಮತ್ತು ಬೆಳಗಾಂಗಳಲ್ಲಿ ಕ್ರೀಡಾಂಗಣಗಳನ್ನು ಕಟ್ಟಲು ನೆರವು ನೀಡುವುದ ಜೊತೆಗೆ ಕಿರಿಯ ಆಟಗಾರರಿಗೆ ವಿದ್ಯಾರ್ಥಿವೇತನ ನೀಡಲು ಉದ್ದೇಶಿಸಿದೆ. ಮಂಡ್ಯ ಆದಿತ್ಯ ಪ್ರಕಾಶ್ ಅಂತಹ ಫಲಾನುಭವಿಗಳಲ್ಲಿ ಒಬ್ಬ. ಈತ ಭಾರತದ ಕಿರಿ ಬ್ಯಾಡ್‌ಮಿಂಟನ್ ತಂಡದ ಸದಸ್ಯನಾಗಿದ್ದಾನೆ. ಕ್ರೀಡಾ ವಲಯದಲ್ಲಿ ಸಮರ್ಥವಾ ಕಾರ್ಯ ನಿರ್ವಹಣೆ ನಡೆಸಬೇಕೆಂದು ಅಪೇಕ್ಷಿಸುವವರು ಕರ್ನಾಟಕ ಬ್ಯಾಡ್‌ಮಿಂಟ ಸಂಸ್ಥೆಯ ಕಾರ್ಯವೈಖರಿಯನ್ನು ಅಭ್ಯಸಿಸುವುದು ಸೂಕ್ತವೆನಿಸುತ್ತದೆ.


ಶುಭಾಶಯಗಳು



ಪುಟ : 352 ಬೆಲೆ : ರೂ. 95




ಬೆಲೆ : ರೂ. 60



ಪುಟ : 304 ಬೆಲೆ : ರೂ. 80

ಮಾನ್ಯ ಡಿ.ವಿ.ಜಿ.ಯವರ 'ಮಂಕುತಿಮ್ಮನ ಕಗ್ಗ' ಹಾಗೂ 'ಮರುಳ ಮುನಿಯನ ಕಗ್ಗ' ಕೃತಿಗಳಿಗೆ ತಾತ್ಪರ್ಯವನ್ನು ಬರೆದಿರುವ ಮತ್ತು 'ಮಂಕುತಿಮ್ಮನ ಕಗ್ಗ' ತಾತ್ಪರ್ಯದ ಸಂಪೂರ್ಣ 945 ಕವನಗಳನ್ನು ತಾತ್ಪರ್ಯ ಸಹಿತ 11.30 ತಾಸು ಹೇಳಿರುವ ಎಂಪಿ-3 ಸಿಡಿಯನ್ನು ಹೊರತಂದಿರುವವರು :

**ಶ್ರೀಕಾಂತ್**

226, 8ನೇ ಕ್ರಾಸ್, 19ನೇ 'ಡಿ' ಮೈನ್
1ನೇ 'ಎನ್' ಬ್ಲಾಕ್, ರಾಜಾಜಿನಗರ
ಬೆಂಗಳೂರು - 560 010. ದೂರವಾಣಿ : 23373662


ಇತರೆಡೆ ಇರುವ ಕ್ರೀಡಾ ಸಂಸ್ಥೆಗಳೆಲ್ಲವೂ ತಮ್ಮ ಜಮೀನ್ದಾರಿ ಪರಂಪರೆಯ ಮುಂದುವರೆಸಿಕೊಂಡೇ ಬರುತ್ತಿವೆ. ಏಕೆಂದರೆ ಆ ಸಂಸ್ಥೆಗಳಿಗೆ ಅದೊಂದು ಪ್ರತಿಷ್ಠೆ ಪ್ರಶ್ನೆಯಾಗಿಬಿಟ್ಟಿದೆ. ಅವರಿಗೆ ಯಾವ ಜವಾಬ್ದಾರಿಯೂ ಇಲ್ಲ. ಯಾವುದಾದರೂ ನಿರ್ದಿಷ್ಟ ಅವಧಿಯವರೆಗೆ ಮಾತ್ರ ಪದಾಧಿಕಾರಿಗಳಾಗಿ ಇರಬೇಕು ಎ ನಿರ್ಬಂಧವೂ ಇಲ್ಲ. ಸಾಮಾನ್ಯವಾಗಿ ಅನೇಕರು ತಮ್ಮ ಜೀವನ ಪರ್ಯ ಪದಾಧಿಕಾರಿಗಳಾಗಿ ಮುಂದುವರೆಯುತ್ತಲೇ ಬಂದಿದ್ದಾರೆ. ಈ ಮಾತಿಗೆ ಕೆಲ ಪ್ರಮು ಉದಾಹರಣೆಗಳೆಂದರೆ – ಸುರೇಶ್ ಕಲ್ಮಾಡಿ (ಅಥ್ಲೆಟಿಕ್ಸ್ – ೧೯ ವರ್ಷ ಕೆ.ಪಿ.ಎಸ್. ಗಿಲ್ (ಹಾಕಿ – ೧೫ ವರ್ಷ), ದಿಗ್ವಿಜಯ್ ಸಿಂಗ್ (ಶೂಟಿಂಗ್ – ವರ್ಷ), ಪ್ರಿಯರಂಜನ್ ದಾಸ್‌ಮುನ್ಷಿ (ಫುಟ್‌ಬಾಲ್ – ೧೯ ವರ್ಷ). ಆಂ ಪದಾಧಿಕಾರಿಗಳ ಅನುಕೂಲಕ್ಕೆ ತಕ್ಕಂತೆ ಪ್ರತಿಯೊಂದು ಒಕ್ಕೂಟದ/ ಫೆಡರೇಷನ ಬೈಲಾಗಳನ್ನು ಮಾರ್ಪಾಡುಮಾಡಿಕೊಳ್ಳಲಾಗುತ್ತದೆ. ಜಮೀನ್ದಾರಿ ಕಾರ್ಯಶೈಲಿ ರಾಜಕಾರಣಗಳಲ್ಲಿ ಅಂತರ್ಗತವಾಗಿಬಿಟ್ಟಿರುತ್ತದೆ. ಕ್ರೀಡೆ ಮತ್ತಿತರ ಸಾರ್ವಜ ಸಂಸ್ಥೆಗಳಲ್ಲಿ ಉನ್ನತ ಸ್ಥಾನಗಳಲ್ಲಿದ್ದುಕೊಂಡು ಪದಾಧಿಕಾರಿಗಳಾಗಿ ಮೆರೆಯುವು ಅಂತಹ ವ್ಯಕ್ತಿಗಳಿಗೆ ಮತ್ತೊಂದು ಲಾಭದಾಯಕ ಕಸುಬಾಗಿಬಿಟ್ಟಿದೆ. ಏಕೆಂದ ಸಂಸ್ಥೆಯ ಖರ್ಚಿನಲ್ಲಿ ಆಗಾಗ್ಗೆ ವಿದೇಶಗಳಿಗೆ ಭೇಟಿ ನೀಡುವ ಅವಕಾಶಗಳಿರುತ್ತ ಇವರ ಆಜ್ಞೆಯನ್ನು ಸೇವಕರಂತೆ ಪರಿಪಾಲಿಸುವ ಕಿರಿಯ ಅಧಿಕಾರಿಗಳು, ಕ್ರೀಡಾಪ ಗಳಿರುತ್ತಾರೆ. ಈ ಇಡೀ ವ್ಯವಸ್ಥೆಯಲ್ಲಿ ಸುಧಾರಣೆಗಳನ್ನು ತರಬೇಕೆಂದರೆ ಕ್ರೀ ಸಚಿವಾಲಯದ ಅಂಗಸಂಸ್ಥೆಗಳಾಗಿರುವ ಎಲ್ಲ ರಾಷ್ಟ್ರೀಯ ಫೆಡರೇಷನ್‌ಗಳ ನಿಬಂಧ ಗಳನ್ನು /ಕಟ್ಟಳೆಗಳನ್ನು ತನಿಖೆಗೆ ಒಳಪಡಿಸಬೇಕು. ಸಂಘ ಸಂಸ್ಥೆಗಳ ಕಾಯಿದೆಯ ಕ್ರೀಡಾ ಫೆಡರೇಷನ್‌ಗಳಿಗೆ ಹಾಲಿ ಇರುವ ಸ್ವಾಯತ್ತತೆಗೆ ಮಿತಿಯೇ ಇಲ್ಲದಂತಾಗಿದೆ.

ಸ್ಥೂಲವಾಗಿ ಹೇಳಬಹುದಾದರೆ ಮೇಲ್ಕಾಣಿಸಿದ ಈ ಅಂಶಗಳೆಲ್ಲವೂ ಭಾರತ ಕ್ರೀಡಾ ವ್ಯವಸ್ಥೆಗೆ ಗಂಭೀರವಾದ ಸವಾಲುಗಳಾಗಿವೆ. ಮಿಕ್ಕೆಲ್ಲವೂ ಇದರಿಂದ ಹುಟ್ಟಿಕೊಂಡಿರುವ ಸಮಸ್ಯೆಗಳೇ ಆಗಿವೆ.

**ಮೂಲಭೂತ ಸೌಕರ್ಯಗಳು**

ಜಾಗತಿಕ ಮಟ್ಟದಲ್ಲಿರುವ ಮೂಲಭೂತ ಸೌಕರ್ಯಗಳು ನಮ್ಮಲ್ಲಿಲ್ಲ; ಕಾರಣದಿಂದಾಗಿ ನಮ್ಮ ಕ್ರೀಡಾಪಟುಗಳು ನೀಡುವ ಪ್ರದರ್ಶನಗಳು ಕ ಮಟ್ಟದವಾಗಿವೆ ಎಂಬ ಮಾತನ್ನು ತಳ್ಳಿ ಹಾಕುವಂತಿಲ್ಲ. ಕಲ್ಲುಮಣ್ಣುಗಳಿಂದ ಕೂಡಿ ಆಟದ ಮೈದಾನಗಳಿಗೂ ವಿಶೇಷವಾಗಿ ಸಿದ್ಧಪಡಿಸಿದ ಆಧುನಿಕ ಆಟದ ಮೈದಾನಗಳಿಗ ಅಜಗಜಾಂತರ ವ್ಯತ್ಯಾಸವಿದೆಯಲ್ಲವೆ ? ಅದೇನೇ ಇರಲಿ, ಕಳೆದ ದಶಕದಿಂದೀಚ ಜರುಗಿರುವ ಆರ್ಥಿಕ ಪ್ರಗತಿಯ ಭರಾಟೆಯ ಹಿನ್ನೆಲೆಯಲ್ಲಿ ಕ್ರೀಡಾ ಕ್ಷೇತ್ರದ ಹೂಡಲಾಗುವ ಹಣದ ಮೊತ್ತ ಹೆಚ್ಚಬೇಕೆಂಬ ಎಡೆಬಿಡದ ಬೇಡಿಕೆಯ ಪರಿಣಾಮವಾ ಹೈದರಾಬಾದ್, ದೆಹಲಿ, ಪುಣೆ, ಮತ್ತಿತರ ನಗರಗಳಲ್ಲಿ ಉತ್ತಮ ಮಟ್ಟದ 'ಕ್ರೀಡ ನಗರಿಗಳನ್ನು' ನಿರ್ಮಿಸಲಾಗಿದೆ. ಆದರೆ ಈ ಕ್ರೀಡಾ ನಗರಗಳಲ್ಲಿ ಭಾಗವಹಿಸು ಅವಕಾಶವಿರುವುದು ಸ್ಪರ್ಧಾತ್ಮಕ ಮನೋಭಾವವುಳ್ಳ , ಸಮರ್ಥ ಕ್ರೀಡಾ ಪಟುಗಳ ಮಾತ್ರ. ಕೇವಲ ಮನರಂಜನೆಗಾಗಿಯೋ ಅಂಗಸಾಧನೆಗಾಗಿಯ ವ್ಯಾಯಾಮಕ್ಕಾಗಿಯೋ ಹೋಗಲಿಚ್ಛಿಸುವವರಿಗೆ ಅಲ್ಲಿ ಹೇಳಿಕೊಳ್ಳುವಂತಹ ಯ ಮೂಲಭೂತ ಸೌಕರ್ಯಗಳೂ ಇಲ್ಲ. ಈ ತಥಾಕಥಿತ ಕ್ರೀಡಾತಾಣಗ ಸಾಮಾನ್ಯವಾಗಿ ಹೊಸಬರಿಗೆ ಮತ್ತು ಸಾಮಾನ್ಯರಿಗೆ ಅವಕಾಶಗಳೇ ಇಲ್ಲದಿರು ಕೋಟೆಗಳಂತಾಗಿಬಿಟ್ಟಿವೆ. ಈ ಅಂಶಗಳೆಲ್ಲವೂ ನಮ್ಮ ಸರ್ಕಾರಗಳ ಕ್ರೀಡಾನೀತಿ ಸಾಗಿದೆ ಮತ್ತು ಆ ಕ್ಷೇತ್ರದಲ್ಲಿ ಹೂಡಲಾಗುವ ಬಂಡವಾಳವನ್ನು ಯಾವ ರ ವ್ಯಯಿಸಲಾಗುತ್ತಿದೆ ಎಂಬುದನ್ನು ಸೂಚಿಸುತ್ತವೆ. ಈ ಕ್ರೀಡಾ ನಗರಿಗಳು ತೆರಿಗೆದಾರ ಹಣ ನೀಡುವ ಕೋಟ್ಯಂತರ ರೂಪಾಯಿ ಗುಳುಂ ಆಗುವ ಕೇಂದ್ರಗಳಾಗಿವೆ ಎಂ ಉತ್ಪ್ರೇಕ್ಷೆಯಾಗಲಾರದು. ಹೈದರಾಬಾದಿನಲ್ಲಿರುವ ಗಾಚಿಬೌಲಿ ಮತ್ತು ಪುಣೆಯಲ್ಲಿರು



ಲೇವಾಡಿಯಲ್ಲಿರುವ ಕ್ರೀಡಾ ಕೇಂದ್ರಗಳು ಜಾಗತಿಕ ಮಟ್ಟದವು. ಆದರೆ ಮುಂದಿನ ದು ಹತ್ತು ವರ್ಷಗಳಲ್ಲಿ ಅವುಗಳ ಗುಣಮಟ್ಟವನ್ನು ಹೀಗೇ ಮುಂದುವರೆಸಿಕೊಂಡು ೋಗಲಿದ್ದಾರೆ ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ನಿಜಕ್ಕೂ ಕ್ರೀಡಾ ಗರಿಗಳು ಸರ್ಕಾರಗಳ ಸಾಧನೆಯ ಸಂಕೇತವಾಗಿವೆ. ಅಲ್ಲಿ ಸ್ಪರ್ಧಾತ್ಮಕ ೀಡಾಳುಗಳಿಗೆ ಪ್ರೋತ್ಸಾಹ ನೀಡಲಾಗುತ್ತದೆ ಎಂಬುದರಲ್ಲಿ ಯಾವ ಸಂದೇಹವೂ ಲ್ಲ. ಆದರೆ ಇವುಗಳಿಂದ ಬಂಡವಾಳ ಹೂಡಿದ ಸರ್ಕಾರಗಳಿಗೆ ಕಿಂಚಿತ್ ಲಾಭವೂ ಲ್ಲ. ಜನಸಾಮಾನ್ಯರಿಗಾಗಿ ಅಲ್ಲಿ ಯಾವುದೇ ಕ್ರೀಡಾ ಚಟುವಟಿಕೆಗಳೂ ರುಗುವುದಿಲ್ಲ. ಇನ್ನುಮುಂದೆ ಇಂತಹ ಕ್ರೀಡಾ ನಗರಿಗಳಿಗೆ ಪರ್ಯಾಯವಾಗಿ ತರೆಡೆ ಎಲ್ಲ ಸಾರ್ವಜನಿಕರೂ ಭಾಗವಹಿಸುವಂತಹ ಸಣ್ಣ ಪ್ರಮಾಣದ ಕ್ರೀಡಾ ಂಕೀರ್ಣಗಳನ್ನು ನಿರ್ಮಿಸುವತ್ತ ಸರ್ಕಾರಗಳು ಗಮನ ಹರಿಸಬೇಕಾದ ಅಗತ್ಯವಿದೆ.

**ಳ್ಳು ವಯಸ್ಸಿನ ದಾಖಲೆ ಇತ್ಯಾದಿ**

ಕಿರಿಯರಿಗಾಗಿ ಏರ್ಪಡಿಸುವ ಟೂರ್ನಮೆಂಟುಗಳಲ್ಲಿ / ಕ್ರೀಡಾಸ್ಪರ್ಧೆಗಳಲ್ಲಿ ತಮ್ಮ ಕ್ಕಳು ಗೆದ್ದುಬರುವ ಮತ್ತು ಆನಂತರ ವೃತ್ತಿಪರ ಡಿಗ್ರಿ ಕೋರ್ಸುಗಳಲ್ಲಿ ೀಡಾಪಟುಗಳಿಗಾಗಿಯೇ ಮೀಸಲಾಗಿಡುವ ಸೀಟುಗಳನ್ನು ಗಿಟ್ಟಿಸಿಕೊಳ್ಳುವ ುವಾಗಿ ತಂದೆತಾಯಂದಿರೇ ಆ ಕಿರಿಯ ಸ್ಪರ್ಧಿಗಳನ್ನು ಕಡಿಮೆ ವಯಸ್ಸಿನವರೆಂದು ೀಂದಾಯಿಸಿ ಸುಳ್ಳು ಪ್ರಮಾಣ ಪತ್ರವನ್ನು ನೀಡುತ್ತಾರೆ. ಒಂದರ್ಥದಲ್ಲಿ ಹೀಗೆ ಾಡುವುದು ಆ ಪುಟಾಣಿ ಸ್ಪರ್ಧಿಗಳಿಗೇ ಹಾನಿಕರವಾಗುತ್ತದೆ. ಏಕೆಂದರೆ ರುಗಿಂತಲೂ ಹಿರಿಯರಾದ ಆಟಗಾರರೊಂದಿಗೆ ಸ್ಪರ್ಧಿಸಲಾಗದೆ ಸೋತುಹೋಗಿ ನಂತರ ಯಾವುದೇ ಸ್ಪರ್ಧೆಯಲ್ಲಿ ಭಾಗವಹಿಸುವ ಕನಿಷ್ಠ ಪ್ರೇರಣೆಯನ್ನೇ ೆದುಕೊಂಡುಬಿಡುತ್ತಾರೆ. ತಂದೆತಾಯಂದಿರಿಂದಲೇ ನಡೆಯುವ ಈ ಅಕ್ರಮ ್ಯವನ್ನು ತಡೆಗಟ್ಟಲು ಕ್ರೀಡಾಪಟುಗಳನ್ನು ಎಲುಬು ಪರೀಕ್ಷೆಗೆ (bone test) ಳಪಡಿಸಲಾಗುತ್ತದೆ. ಹಾಗೊಮ್ಮೆ ಸ್ಪರ್ಧಿಗಳು ತಪ್ಪಿತಸ್ಥರೆಂದು ಕಂಡುಬಂದರೂ ಶಿಕ್ಷೆ ೀಡುವಲ್ಲಿ ತಾರತಮ್ಯ ಮಾಡಲಾಗುತ್ತದೆ. ಆದ್ದರಿಂದ ಈಗ ಹಾಲಿ ಇರುವ ವ್ಯವಸ್ಥೆಗೆ ದಲಾಗಿ ಕಿರಿಯ ಸ್ಪರ್ಧಿಗಳ ಎಲ್ಲ ವೈಯಕ್ತಿಕ ವಿವರಗಳನ್ನು ಗಣಕಯಂತ್ರಗಳಲ್ಲಿ ಖಲಿಸಿ ಹೊಸ ವ್ಯವಸ್ಥೆಯೊಂದನ್ನು ರೂಪಿಸಿದರೆ ಮಾತ್ರ ಪರಿಸ್ಥಿತಿ ಲ್ಪಮಟ್ಟಿಗಾದರೂ ಸುಧಾರಿಸೀತು. ಈಗಿನ ವ್ಯವಸ್ಥೆಯಲ್ಲಿ ಶಾಲೆ ಅಥವಾ ಂಚಾಯತ್ ಇಲ್ಲವೇ ಯಾರೋ ಬೇಕಾಬಿಟ್ಟಿ ಪ್ರಮಾಣೀಕರಿಸಿ ಬರೆದುಕೊಡುವ ತ್ರವನ್ನೇ ವಯಸ್ಸು ಸೂಚಿಸುವ ಪ್ರಮಾಣಪತ್ರವೆಂದು ಪರಿಗಣಿಸುವ ಪರಿಪಾಠವಿದೆ. ದರಿಂದಾಗಿ ಸ್ಪರ್ಧಿಗಳು ತಮ್ಮ ವಯಸ್ಸನ್ನು ಎರಡು ಮೂರು ಬಾರಿ ಬದಲಾಯಿಸಿ ಂಡು ಮೈದಾನಕ್ಕಿಳಿಯುವ ಸಾಧ್ಯತೆಗಳಿವೆ.

**ಾದಕ ವಸ್ತುಗಳ ಸೇವನೆ**

ರಾಷ್ಟ್ರಮಟ್ಟದ ಕ್ರೀಡಾಕೂಟಗಳು ನಡೆಯುವ ಸ್ಥಳಗಳಲ್ಲಿ ಮಾದಕ ವಸ್ತುಗಳನ್ನು ವಿಸಲು ಬಳಸಲಾಗುವ ಸಿರಿಂಜುಗಳು, ಸೀಸೆಗಳನ್ನು ಸ್ಪರ್ಧಿಗಳು ಬೇಕಾಬಿಟ್ಟಿ ಚೆಲ್ಲಾಡಿ ಟ್ಟಿರುವ ಸುದ್ದಿಗಳು ಆಗಾಗ್ಗೆ ದಿನಪತ್ರಿಕೆಗಳಲ್ಲಿ ವರದಿಯಾಗುವುದು ಸಾಮಾನ್ಯವಾಗಿ ಟ್ಟಿದೆ. ಕಿರಿಯ ಪಟುಗಳಿಗಾಗಿ ಏರ್ಪಡಿಸುವ ಕ್ರೀಡಾ ಸ್ಪರ್ಧೆಗಳಲ್ಲೂ ಇಂತಹ ಸ್ತುಗಳ ಬಳಕೆಯಾಗುವುದು ಮಾಮೂಲಿನ ಸಂಗತಿ. ಅವುಗಳ ಸೇವನೆಯ ಹಿಂದೆ ಉನ್ನತ ಮಟ್ಟದ ಪ್ರದರ್ಶನ ನೀಡಿ ಪದಕಗಳನ್ನು ಗೆದ್ದು ಸರ್ಕಾರಿ ಹುದ್ದೆಗಳನ್ನು ಗಿಟ್ಟಿಸಿಕೊಳ್ಳುವ ಹುನ್ನಾರವಿದೆ. ವಯಸ್ಕರು ಭಾಗವಹಿಸುವ ಕೂಟಗಳಲ್ಲೂ ಈ ಪಿಡುಗು ಇನ್ನೂ ಹೆಚ್ಚು ಸಂಘಟಿತವಾಗಿ ಜರುಗುತ್ತದೆ. ಕೆಲ ವೇಳೆ ಸರ್ಕಾರದ ಕುಮ್ಮಕ್ಕು ಇರುತ್ತದೆ.

ಇಂದು ಇಂತಹ ವ್ಯವಸ್ಥೆಗೆ ಸಂಬಂಧಪಟ್ಟ ಸಮಸ್ಯೆಗಳೇ ಅಲ್ಲದೆ ಕೆಲವು ಸಾಮಾಜಿಕ ಸಮಸ್ಯೆಗಳೂ ಇವೆ. ನಗರ ಮತ್ತು ಜಿಲ್ಲಾ ಕೇಂದ್ರಗಳಲ್ಲಿ ವಿಶಾಲವಾದ ಖಾಲಿ ನಿವೇಶನಗಳನ್ನು ಗುರುತಿಸಿ, ಅಂತಹ ಜಾಗಗಳಲ್ಲಿ ಸ್ಪರ್ಧಾತ್ಮಕ ಚಟುವಟಿಕೆಗಳಿಗೆ ಹೊರತಾದ ಮನೋರಂಜನೆಗೆ ಸಂಬಂಧಪಟ್ಟಂತಹ ಕ್ರೀಡೆಗಳನ್ನು ಸಂಘಟಿಸಲು ಅವಕಾಶಗಳನ್ನುಂಟುಮಾಡುವುದು ಕ್ರೀಡಾಸಕ್ತರ ಜವಾಬ್ದಾರಿಯಾಗಿದೆ.

ಖಾಲಿ ಜಾಗಗಳು, ನಿವೇಶನಗಳ ಕೊರತೆಯಿಂದಾಗಿ ಬ್ಯಾಡ್‌ಮಿಂಟನ್, ಸ್ಕ್ವಾಷ್, ಟೇಬಲ್ ಟೆನಿಸ್‌ಗಳಂತಹ ಒಳಾಂಗಣ ಕ್ರೀಡೆಗಳಿಗೇ ಮೊರೆಹೋಗುವುದರ ಪರಿಣಾಮವಾಗಿ ಆಟಗಾರರ ದೈಹಿಕ ಬೆಳವಣಿಗೆ ಕುಂಠಿತಗೊಳ್ಳುವ ಸಾಧ್ಯತೆಗಳಿವೆ. ಇತ್ತೀಚೆಗೆ ಹೊರಾಂಗಣ ಕ್ರೀಡೆಗಳಲ್ಲಿ ಭಾಗವಹಿಸುವ ಬಾಲಕ ಬಾಲಕಿಯರು ಬೂಟುಗಳನ್ನು ಉಪಯೋಗಿಸುತ್ತಾರೆ; ಇದರಿಂದಾಗಿ ಅವರಿಗೆ ನೆಲದ ಮೇಲೆ ಬರಿಗಾಲಿನಲ್ಲಿ ಆಡುವ, ಆ ಮೂಲಕ ಅವರಿಗೆ ದಕ್ಕುವ ವಿಶಿಷ್ಟ ಅನುಭವದಿಂದ ವಂಚಿತರಾಗುತ್ತಾರೆ ಎಂದು ತರಬೇತುದಾರರೊಬ್ಬರು ವಿಷಾದ ವ್ಯಕ್ತಪಡಿಸುತ್ತಿದ್ದರು. ಬಹುಶಃ ಹೀಗೆ ಕ್ರೀಡಾಪಟುಗಳು ಬರಿಗಾಲಿನಲ್ಲಿ ಅಥವಾ ಬೂಟುಹಾಕಿಕೊಂಡು ವಿವಿಧ ಬಗೆಯ ಆಟದ ಮೈದಾನಗಳಲ್ಲಿ ಆಡುವುದರಿಂದಾಗಿ ಉಂಟಾಗುವ ಪರಿಣಾಮಗಳ ಕುರಿತು ಸಂಶೋಧನೆ ನಡೆಸುವ ಅಗತ್ಯವಿದೆ. ಚಿಕ್ಕ ವಯಸ್ಸಿನ ಮಕ್ಕಳು ಮರ ಹತ್ತುವುದು, ಕೊಳ-ಹೊಳೆಗಳಲ್ಲಿ ಈಜುವುದು, ಕುಂಟೆಬಿಲ್ಲೆ ಇವೇ ಮುಂತಾದ ಆಟಗಳಲ್ಲಿ ತೊಡಗಿಕೊಳ್ಳುತ್ತಿದ್ದ ಕಾಲದಲ್ಲಿ ಎಷ್ಟು ಆರೋಗ್ಯವಂತರಾಗಿರುತ್ತಿದ್ದರು ಎಂಬುದನ್ನು ಗ್ರಾಮೀಣ ಪ್ರದೇಶಗಳಿಂದ ಬಂದಿರುವ ತರಬೇತುದಾರರು ಈಗಲೂ ನೆನಪಿಸಿಕೊಳ್ಳುತ್ತ ಅಂತಹ ಆಟಗಳಿಂದ ಒದಗಿಬರುವ ಅನುಕೂಲತೆಗಳನ್ನು ಕಡೆಗಣಿಸಲಾಗುತ್ತಿದೆ ಎಂದು ಅಭಿಪ್ರಾಯಪಡುತ್ತಾರೆ.

ವ್ಯಾಯಾಮ, ದೇಹವರ್ಧನೆಗಳಿಗಾಗಿ ಪಾರಂಪರಿಕವಾಗಿ ಅಸ್ತಿತ್ವದಲ್ಲಿದ್ದ ಕರ್ನಾಟಕದ ಗರಡಿಮನೆಗಳು, ಕೇರಳದ ಕಾಲಡಿಗಳು ಮತ್ತು ಉತ್ತರ ಭಾರತದ ಅಖಾಡಗಳು ಕಣ್ಮರೆಯಾಗುತ್ತಿರುವುದು ಆತಂಕಕಾರಿ ಬೆಳವಣಿಗೆಯಾಗಿದೆ. ಇಂದಿನ ದಿನಗಳಲ್ಲಿ ಜಿಮ್‌ಗಳಿಗೆ ಹೋಗುವುದೇ ಒಂದು ಫ್ಯಾಷನ್ ಆಗಿಬಿಟ್ಟಿದೆ. ಕೇರಳದಲ್ಲಿ ಕಾಲಡಿಪಯಟ್ಟು ಎಂಬ ಕಲೆಯನ್ನು ದೃಶ್ಯ ಮಾಧ್ಯಮದಲ್ಲಿ ಪ್ರದರ್ಶಿಸಿ ಪ್ರವಾಸಿಗರನ್ನು ಆಕರ್ಷಿಸಲಾಗುತ್ತದೆ. ಆದರೆ ಕಾಲಡಿಯು ದೇಹವರ್ಧನೆಗಾಗಿ ರೂಢಿಸಿಕೊಂಡು ಬಂದಿರುವ ಒಂದು ಉತ್ತಮ ಸಾಧನ ಎಂಬುದರ ಬಗ್ಗೆ ಅಂತಹ ಪ್ರದರ್ಶನಗಳಲ್ಲಿ 'ಚಕಾರ'ವನ್ನೂ ಎತ್ತುವುದಿಲ್ಲ. ಪರಿಣಾಮ ಇಂತಹ ಒಂದು ಶ್ರೀಮಂತ ಹಾಗೂ ಪರಿಪೂರ್ಣ ಕಲೆ ಮಧ್ಯಮ ವರ್ಗದ ಬೆಂಬಲವನ್ನು ಕಳೆದುಕೊಂಡಂತಾಗಿದೆ.

ಇವೆಲ್ಲವೂ ಭಾರತದ ಕ್ರೀಡಾವ್ಯವಸ್ಥೆಯ ಕುರಿತು ಸಾಮಾನ್ಯವಾಗಿ ನಾವು ಚರ್ಚಿಸಬಹುದಾದ ಕೆಲವೊಂದು ಸಮಸ್ಯೆಗಳಷ್ಟೆ. ಇಲ್ಲಿ ಒಂದು ಅಂಶವನ್ನು ನಾವು ಗಮನದಲ್ಲಿಡಬೇಕು. ಅದೇಂದರೆ ಇಂದಿನ ನಮ್ಮ ದೇಶದ ಕ್ರೀಡಾಪಟು ಹಿಂದಿನ ತಲೆಮಾರಿನ ಕ್ರೀಡಾ ಪಟುವಿನಂತಲ್ಲ. ಅವನಲ್ಲೀಗ ಹೆಚ್ಚಿನ ಆತ್ಮವಿಶ್ವಾಸವಿದೆ; ವಿದೇಶೀ ಅಥ್ಲೀಟುಗಳು, ಅವರ ಜೀವನ ಶೈಲಿ ಇದಾವುದನ್ನೂ ನೋಡಿ ನಿಬ್ಬೆರಗಾಗಿ ಕೂರುವುದಿಲ್ಲ. ಅವರ ತರಬೇತಿ ವಿಧಾನಗಳು, ಅವರು ಅನುಸರಿಸುವ ಆಹಾರ ಕ್ರಮ ಮತ್ತು ಪಥ್ಯಗಳು ಎಲ್ಲರಿಗೂ ತಿಳಿದಿರುವ ವಿಚಾರ. ಕಳೆದ ಹತ್ತು ವರ್ಷಗಳಲ್ಲಿ ಕ್ರೀಡಾ ಕ್ಷೇತ್ರ ಸಾಕಷ್ಟು ಜಾಗತೀಕರಣ ಪ್ರಕ್ರಿಯೆಗೆ ಒಳಗಾಗಿದೆ. ಇದರಿಂದಾಗಿ ನಮ್ಮ ಕ್ರೀಡಾಪಟುಗಳಲ್ಲಿ ಒಂದು ಬಗೆಯ ಹೊಸ ಆತ್ಮವಿಶ್ವಾಸ ಮೂಡಿದೆ. ಕ್ರೀಡಾಪಟುಗಳು ತರಬೇತಿಗಾಗಿ ತಗಲುವ ಖರ್ಚಿಗಾಗಿ ತಮ್ಮ ಸಂಸ್ಥೆಯೇ ಅಲ್ಲದೆ ಇತರ ಮೂಲಗಳನ್ನು ಅರಸುವಷ್ಟು ಸಮರ್ಥರಾಗಿದ್ದಾರೆ. ಅದಕ್ಕೀಗ ಸಾಕಷ್ಟು ಮಾರ್ಗಗಳೂ ಇವೆ. ಈ ಮಾತಿಗೆ ಒಂದು ಉತ್ತಮ ಉದಾಹರಣೆಯೆಂದರೆ ಅಭಿನವ್ ಬಿಂದ್ರ. ಈತ ಜರ್ಮನಿಯಲ್ಲಿ ತರಬೇತಿ ಪಡೆಯಲು ತನ್ನದೇ ಸಂಪನ್ಮೂಲಗಳನ್ನು ಕಂಡುಕೊಂಡು ಬೀಜಿಂಗ್ ಒಲಿಂಪಿಕ್ಸ್‌ನಲ್ಲಿ ಚಿನ್ನದ ಪದಕವನ್ನೂ ಗೆದ್ದುಬಂದ. ನೆನೆಗುದಿಗೆ ಬಿದ್ದಿರುವ ಭಾರತದ ಕ್ರೀಡಾ ಕ್ಷೇತ್ರವು ತನ್ನ ಏಳಿಗೆಗೆ ಇಂತಹ ಕೆಲವು ಪ್ರಕರಣಗಳಿಂದ ಸ್ಫೂರ್ತಿ ಪಡೆಯಬೇಕಿದೆ.

ಮೂಲ : **ದೇವ್ ಎಸ್. ಸುಕುಮಾರ್**
೧೨೩, ಕಲತೂರ್ ಲೇಔಟ್, ಜಾಲಹಳ್ಳಿ, ಬೆಂಗಳೂರು - ೫೬೦ ೦೧೩.
ಕನ್ನಡಕ್ಕೆ : ಎಸ್. ಸುರೇಂದ್ರ

# ಸಂಶೋಧನೆಗೆ ಮತ್ತೆ ಮಹತ್ವ ಬಂದಿದೆ ಜೊತೆಗೆ ಸಂಶೋಧನೆ ಎಂದರೇನೆಂದು ಕೇಳಿಕೊಳ್ಳುವ ಕಾಲವೂ ಬಂದಿದೆ

ಸಂಶೋಧನೆ ಎಂದರೇನು ಎಂದು ಕೇಳಿಕೊಳ್ಳುವ ದಿನ ಇವತ್ತು ಬಂದಿದೆ. ನಮ್ಮಲ್ಲಿ ಬಹಳಷ್ಟು ಮಂದಿ ಡಾಕ್ಟೊರೇಟ್ ಪದವಿ ಪಡೆದವರನ್ನು ವಿಶ್ವವಿದ್ಯಾಲಯಗಳಲ್ಲಿ ಮತ್ತು ಕಾಲೇಜುಗಳಲ್ಲಿ ನಾವು ಕಾಣಬಹುದು. ಇವರನ್ನು ನಿಮಗೆ ಏಕೆ ಡಾಕ್ಟೊರೇಟ್ ನೀಡಿದ್ದಾರೆ? ಅದರ ಪ್ರಯೋಜನ ಏನು? ಏಕೆ ಡಾಕ್ಟೊರೇಟ್ ಆಫ್ ಫಿಲಾಸಫಿ ಎನ್ನುತ್ತಾರೆ? ಎಂದೆಲ್ಲಾ ಕೇಳಿದರೆ ಬಹಳ ಜನಕ್ಕೆ ಉತ್ತರ ಹೇಳುವುದು ಕಷ್ಟವಾಗುತ್ತದೆ. ಅಬ್ಬಬ್ಬ ಎಂದರೆ ಅವರ ಉತ್ತರ ಈ ರೀತಿ ಇರುತ್ತದೆ: ''ಸತ್ಯವನ್ನು ಹುಡುಕುವುದು'', ''ಹೊಸದನ್ನು ಕಂಡು ಹಿಡಿಯುವುದು'', ''ಒಂದು ವಿಷಯದಲ್ಲಿ ಆಳವಾದ ಅಧ್ಯಯನ ಮಾಡಿರುವುದರಿಂದ, ಡಾಕ್ಟರ್ ಎನ್ನುತ್ತಾರೆ'', ಇತ್ಯಾದಿ. ಈ ಸಮಸ್ಯೆಯ ಮೂಲವು ಸಂಶೋಧನೆ, ತತ್ವಶಾಸ್ತ್ರ, ವಿಶ್ವವಿದ್ಯಾಲಯದ ಚರಿತ್ರೆ, ಅಧ್ಯಯನ ಶಿಸ್ತುಗಳ ಹುಟ್ಟು ಬೆಳವಣಿಗೆಗಳ ಚಾರಿತ್ರಾತ್ಮಕ ಪರಿಚಯದ ಕೊರತೆಯಲ್ಲಿದೆ.

**ತತ್ವಶಾಸ್ತ್ರ**

ಮನುಷ್ಯಪ್ರಾಣಿಯು ನಾನು ಯಾರು? ನಾನು ಏಕೆ ಇಲ್ಲಿದ್ದೇನೆ? ಹೇಗೆ ಬಂದೆ? ನನ್ನ ಸುತ್ತಲೂ ಏನಿದೆ? ನನಗೂ ಇದಕ್ಕೂ ಏನು ಸಂಬಂಧ ಎಂದು ಪ್ರಶ್ನೆಗಳನ್ನು ಕೇಳುವುದರಿಂದ ತತ್ವಶಾಸ್ತ್ರ ಆರಂಭವಾಗುತ್ತದೆ. ಈ ಪ್ರಶ್ನೆಗಳಿಗೆ ಉತ್ತರಗಳನ್ನು ಮೊದಲಿಗೆ ಥಿಯಾಲಜಿಯಲ್ಲಿ (ಧಾರ್ಮಿಕ ಆವರಣ) ಕಂಡುಕೊಳ್ಳಲಾಗಿತ್ತು. ಈಗಲೂ ಈ ಪ್ರಶ್ನೆಗಳಿಗೆ ಧರ್ಮಗಳು, ಪಂಥಗಳು ತಮ್ಮ ಅನುಯಾಯಿಗಳಿಗೆ ಉತ್ತರವನ್ನು ಒದಗಿಸುತ್ತವೆ. ಆದರೆ ಈ ಪ್ರಶ್ನೆಗಳು ಮತ್ತಷ್ಟು ಪ್ರಶ್ನೆಗಳಿಗೆ ದಾರಿ ಮಾಡಿಕೊಡುತ್ತಿದ್ದಂತೆ ತತ್ವಶಾಸ್ತ್ರದಲ್ಲಿಯೇ ಇತರೆ ಅಧ್ಯಯನ ಶಾಖೆಗಳು ಆರಂಭಗೊಂಡವು. ಮನುಷ್ಯನ ದೇಹವನ್ನು, ಅದರ ಸುತ್ತಮುತ್ತಲಿನ ವಸ್ತುಗಳನ್ನು ಅಧ್ಯಯನ ಮಾಡುವುದು ಒಂದು ಶಾಖೆ, ಆ ವಸ್ತುಗಳನ್ನು ಭೌತಿಕವಾಗಿ ಅಧ್ಯಯನ ಮಾಡುವುದು ಬೇರೆ, ರಾಸಾಯನಿಕವಾಗಿ ಅಧ್ಯಯನ ಮಾಡುವುದು ಬೇರೆ, ಸಾಮಾಜಿಕವಾಗಿ ಅಧ್ಯಯನ ಮಾಡುವುದು ಬೇರೆ, ಮನಸ್ಸನ್ನು ಅಧ್ಯಯನ ಮಾಡುವುದು ಬೇರೆ, ರಾಜಕೀಯವಾಗಿ ಅಧ್ಯಯನ ಮಾಡುವುದು ಬೇರೆ ಇತ್ಯಾದಿ, ಇತ್ಯಾದಿ. ಅಂದರೆ ನಾವು ಅಧ್ಯಯನ ಮಾಡುತ್ತಿರುವ ವಸ್ತುಗಳು ಒಂದೇ ಆದರೂ ಅವುಗಳ ಯಾವ ಅಂಶವನ್ನು ನಾವು ಅಧ್ಯಯನ ಮಾಡುತ್ತಿದ್ದೇವೆ ಎಂಬುದರ ಮೇಲೆ ನಾವು ಯಾವ ಅಧ್ಯಯನ ಶಿಸ್ತಿನ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತಿದ್ದೇವೆ ಎಂಬುದು ನಿರ್ಧಾರವಾಗುತ್ತದೆ. ಉದಾಹರಣೆಗೆ, ಒಂದು ಮರವನ್ನು ಅದರ ಭೌತಿಕ ಗುಣಗಳಿಗಾಗಿ ಅಧ್ಯಯನ ಮಾಡುವುದು ಭೌತಶಾಸ್ತ್ರದ ಭಾಗವಾದರೆ, ಅದರ ರಾಸಾಯನಿಕ ಗುಣಗಳಿಗಾಗಿ (ರಸಾಯನ ಶಾಸ್ತ್ರ), ಅದರ ಜೈವಿಕ ಗುಣಗಳಿಗಾಗಿ (ಜೀವಶಾಸ್ತ್ರ / ಸಸ್ಯಶಾಸ್ತ್ರ), ಒಂದು ಸಮಾಜದಲ್ಲಿ ಅದು ಪಡೆದಿರುವ ಮೌಲ್ಯಾತ್ಮಕ ಗುಣಗಳಿಗಾಗಿ (ಮಾನವಶಾಸ್ತ್ರ/ ಜಾನಪದ/ಸಂಸ್ಕೃತಿ ಅಧ್ಯಯನ) ಅಧ್ಯಯನ ಮಾಡುವುದು ಬೇರೆ ಬೇರೆ ಅಧ್ಯಯನ ಶಿಸ್ತುಗಳ ಭಾಗವಾಗುತ್ತದೆ. ಆದರೆ ಈ ಎಲ್ಲಾ ಅಧ್ಯಯನಗಳೂ ಮೂಲಭೂತ ಪ್ರಶ್ನೆಗಳಾದ ನಾನು ಯಾರು? ನನ್ನ ಸುತ್ತಮುತ್ತಲೂ ಏನಿದೆ? ಅದಕ್ಕೂ ನನಗೂ ಏನು ಸಂಬಂಧ? ಇವುಗಳಿಗೆ ಉತ್ತರ ಹುಡುಕುವ ಪ್ರಯತ್ನಗಳೇ ಆಗಿವೆ. ಆದ್ದರಿಂದ ನಾವು ಯಾವುದೇ ಅಧ್ಯಯನ ಶಿಸ್ತಿನ ಒಳಗೆ ಅಧ್ಯಯನ ಮಾಡಿದ[...] ಅದು ತತ್ವಶಾಸ್ತ್ರದ ಭಾಗವೇ ಆಗುತ್ತದೆ. ಡಾಕ್ಟ[...] (ಸಿದ್ಧಾಂತ) ರೂಪಿಸುವವರು ಡಾಕ್ಟರ್‌ಗಳಾಗುತ್ತಾರೆ.

**ವಿಶ್ವವಿದ್ಯಾಲಯಗಳು - ಧರ್ಮ(ರಿಲಿಜನ್)**

ತತ್ವಶಾಸ್ತ್ರವು ಮೊದಲಿಗೆ ಧರ್ಮದೊಂ[...] ತಳುಕುಹಾಕಿಕೊಂಡಿದ್ದನ್ನು ನಾನು ಮೇಲೆ ಹೇಳಿ[...] ಪ್ರಪಂಚದಲ್ಲಿ ಇಂದು ವಿಶ್ವವಿದ್ಯಾಲಯಗಳೆ[...] ಗುರುತಿಸುವ, ವಿದ್ಯೆಯನ್ನು ರೂಪಿಸುವ ಮ[...] ಪ್ರಸರಿಸುವ ಪ್ರಯತ್ನಗಳೂ ಧರ್ಮದ ಭಾಗವಾಗಿ[...] ಆರಂಭಗೊಂಡವು. ರಾಜಪ್ರಭುತ್ವಗಳೂ ವಿದ್ಯೆ[...] ಜ್ಞಾನದ ಮಹತ್ವವನ್ನು ಅರಿತು ಅವುಗಳನ್ನು [...] ಆಡಳಿತದ ಕಕ್ಷೆಯ ಭಾಗವಾಗಿ ತರಲು ಯತ್ನಿಸಲಿ[...] ಇದರಿಂದಾಗಿ ಅವುಗಳು ಸ್ವಾಯತ್ತ ಕಾಯಗಳಾಗಿದ[...] (ಆದರೆ ಧರ್ಮಗಳು ರಾಜಪ್ರಭುತ್ವಗಳ[...] ಬಳಸಿಕೊಂಡಿದ್ದು ಬೇರೆಯದೇ ಆದ ವಿಷಯ[...] ಧರ್ಮಗಳು ತಮ್ಮ ಉಳಿವಿಗಾಗಿ ಬೇರೆ ಧರ್ಮಗ[...] ಪಂಥಗಳ ವಿಚಾರಗಳನ್ನೂ ಅಧ್ಯಯನ ಮಾಡುತ್ತಿದ್ದ[...] ತಮ್ಮದು ಉತ್ತಮವಾದದ್ದು ಎಂದು ನಿರೂಪಿಸಬೇಕಾ[...] ಇತರರು ಏನು ಹೇಳುತ್ತಿದ್ದಾರೆ, ಏಕೆ ಹೇಳುತ್ತಿದ್ದಾ[...] ಅದಕ್ಕೆ ಆಧಾರ/ಪ್ರಮಾಣ ಏನು ಎಂದು ಹೇಳುವುದ[...] ಅಗತ್ಯವಾಗಿತ್ತು. ಇದರಿಂದ ಒಂದು ರೀತಿ[...] ಅರೆ-ಧರ್ಮಾತೀತತೆ ಅವುಗಳಿಗೆ ದೊರಕಿತು.

ಬಂಡವಾಳದ ಉಗಮ, ರಾಷ್ಟ್ರೀಯತೆಯ ಗ[...] ವಸಾಹತೀಕರಣದ ಸಂದರ್ಭದಲ್ಲಿ ಇತರೆ ಜನರಿ[...] ಎದುರಾದ ಸವಾಲುಗಳು ಈ ಪ್ರಯತ್ನಗಳಿಗೆ ಮತ್ತ[...] ಧರ್ಮಾತೀತತೆಯ ಬಣ್ಣವನ್ನು ನೀಡಿದವು. ಧರ್ಮ[...] ಅಗತ್ಯಗಳೊಂದಿಗೆ ರಾಷ್ಟ್ರಗಳ ಅಗತ್ಯಗಳೂ, ಆರ್ಥಿ[...]


**ಡಾ|| ತಾರಕೇಶ್ವರ್ ವಿ.ಬಿ.**


**ನಾವು ನೋಡಿದ, ಅನುಭವಿಸಿದ, ಕೇಳಿದ, ಅಧ್ಯಯನ ಮಾಡಿ ಕಲಿತ ವಿಷಯಗಳನ್ನು ಬೇರೆಯವರಿಗೆ (ಮುಂದಿನ ಪೀಳಿಗೆಯವರಿಗೂ ಸೇರಿ) ತಿಳಿಸಬೇಕಾದರೆ ಆ ತಿಳುವಳಿಕೆಯನ್ನು ನಾವು ಭಾಷೆಯಲ್ಲಿ ಹಿಡಿದಿಡಬೇಕಾಗುತ್ತದೆ. ಬೇರೆ ಕಾಲ, ದೇಶದವರಿಗೆ ಅರ್ಥವಾಗುವಂತೆ, ಮನದಟ್ಟಾಗುವಂತೆ ಅದು ಭಾಷೆಯಲ್ಲಿ ನಿರೂಪಿತವಾಗಬೇಕಾಗುತ್ತದೆ. ಆಗ ಮಾತ್ರ ಅದು ಜ್ಞಾನವಾಗುತ್ತದೆ. ನನ್ನ ತಿಳುವಳಿಕೆ/ಅರಿವು/ಜ್ಞಾನ ಭಾಷೆಯನ್ನು ಪ್ರವೇಶಿಸದಿದ್ದಲ್ಲಿ ಅದು ಬೇರೆಯವರ ಪ್ರಯೋಜನಕ್ಕೆ ಬರುವುದಿಲ್ಲ, ಆದ್ದರಿಂದ ನಾವು ಪಡೆದ ಜ್ಞಾನ ಏನು, ಹೇಗೆ ಪಡೆದೆವು, ಪಡೆದ ವಿಧಾನ ಯಾವುದು ಇತ್ಯಾದಿಗಳು ಭಾಷೆಯಲ್ಲಿ ಬರಬೇಕಾಗುತ್ತದೆ. ಇಲ್ಲಿಯೇ ಜ್ಞಾನದ ಮುಖ್ಯವಾದ ಪ್ರಶ್ನೆಗಳಿರುವುದು. ಇಲ್ಲಿಯೇ ವ್ಯವಸ್ಥಿತವಾದ ಅಧ್ಯಯನ ಎಂಬ ಪ್ರಶ್ನೆ ಮುಖ್ಯವಾಗುವುದು.**

ಉದ್ಯಮಶೀಲತೆಯ ಅಗತ್ಯಗಳೂ ತಳುಕುಹಾಕಿಕೊಂಡವು. ಆದರೆ ಇವತ್ತಿನ ವಿಶ್ವವಿದ್ಯಾಲಯಗಳು ಮೊದಲಿಗೆ ಕ್ರಿಶ್ಚಿಯನ್ ಧರ್ಮದ ಭಾಗವೇ ಆಗಿದ್ದು ನಂತರ ಧರ್ಮಾತೀತವಾಗಿರುವುದು. ಆದ್ದರಿಂದ ಧರ್ಮಾತೀತ ಅಂದರೆ ಕೆಲವೊಮ್ಮೆ ಹಳೆಯ ಕ್ರಿಶ್ಚಿಯನ್ ಧರ್ಮದಿಂದ ಉದಾರವಾದ ನಿಲುವುಗಳನ್ನು ಬೆಳೆಯುವುದು ಎಂಬ ಅರ್ಥ ಇದೆ.

**ಅಧ್ಯಯನ ಶಿಸ್ತುಗಳು**

ಕೇವಲ ಧರ್ಮಶಾಸ್ತ್ರ, ವ್ಯಾಕರಣ, ತರ್ಕ, ವೈದ್ಯಶಾಸ್ತ್ರ ಇವುಗಳೊಂದಿಗೆ ತಳಕುಹಾಕಿಕೊಂಡಿದ್ದ ವಿಶ್ವವಿದ್ಯಾಲಯಗಳಲ್ಲಿ ಇತರ ಅಧ್ಯಯನಶಾಸ್ತ್ರಗಳ ಹುಟ್ಟು ಮತ್ತು ಬೆಳವಣಿಗೆಯ ಪ್ರಕ್ರಿಯೆ ಆರಂಭವಾಯಿತು. ಆದರೆ ಈ ಕಥೆ ಅಷ್ಟು ಸುಲಭವಾದ ಕಥೆಯಲ್ಲ.

ಇವತ್ತು ಸಂಶೋಧನೆ ಎಂದರೆ ಹೊಸದನ್ನು ಕಂಡುಹಿಡಿಯುವುದು ಎಂದು ನಾವು ಯಾವುದನ್ನು ಹೇಳುತ್ತೇವೆ ಅದು ವಿಜ್ಞಾನಗಳಲ್ಲಿ ನಡೆಯುವ ಇನ್‌ವೆನ್ಷನ್‌ನಿಂದ ಬಂದಿರುವುದು. ಆದರೆ ಈ ವಿಜ್ಞಾನಗಳು ಮೊದಲಿಗೆ ಖಾಸಗಿ ಪ್ರಯತ್ನಗಳಾಗಿದ್ದವು, ವಿಶ್ವವಿದ್ಯಾಲಯಗಳಲ್ಲಿ ಇವುಗಳಿಗೆ ಜಾಗವಿರಲಿಲ್ಲ. ಹಳೆಯ ಇನ್‌ವೆನ್ಷನ್‌ಗಳಲ್ಲಿ ಬಹಳಷ್ಟು, ವಿಜ್ಞಾನಿಗಳು ತಮ್ಮ ಆಸಕ್ತಿಯ ಫಲವಾಗಿ ಮಾಡಿದ ಸಾಧನೆಗಳೇ ಆಗಿವೆ. ಜ್ಞಾನವು ನಂತರವಷ್ಟೇ ಬಹಳ ಪ್ರಯಾಸದಾಯಕವಾಗಿ ವಿಶ್ವವಿದ್ಯಾಲಯಗಳಲ್ಲಿ ಜಾಗ ಪಡೆಯಿತು. ಅದೇ ರೀತಿ ರಾಷ್ಟ್ರಗಳ, ಬಂಡವಾಳಶಾಹಿ/ವಸಾಹತು ಉದ್ಯಮಶೀಲತೆಯ ಆರಂಭದೊಂದಿಗೆ ಅರ್ಥಶಾಸ್ತ್ರ, ತಮ್ಮ ಸಮಾಜವನ್ನು ಅಧ್ಯಯನ ಮಾಡುವುದಕ್ಕೆ ಸಮಾಜಶಾಸ್ತ್ರ, ತಮ್ಮದಲ್ಲದ ವಸಾಹತುಸಮಾಜಗಳನ್ನು ಅಧ್ಯಯನ ಮಾಡುವುದಕ್ಕೆ ಮಾನವಶಾಸ್ತ್ರ ಇತ್ಯಾದಿಗಳು ರೂಪುಗೊಂಡವು. ಈ ಪ್ರಕ್ರಿಯೆ ಇನ್ನೂ ಚಾಲ್ತಿಯಲ್ಲಿದೆ. ಅದೇ ರೀತಿ ಬಹಳಷ್ಟು ಸಿದ್ಧಾಂತಗಳು (ಉದಾಹರಣೆಗೆ, ಮಾರ್ಕ್ಸ್‌ವಾದ) ವಿಶ್ವವಿದ್ಯಾಲಯದ ಆಚೆ ರೂಪುಗೊಂಡು ನಂತರ ವಿಶ್ವವಿದ್ಯಾಲಯದೊಳಗೆ ಪ್ರವೇಶ ಪಡೆದಿವೆ.

ಆದರೆ ಕೆಲವು ಮೂಲಭೂತ ಪ್ರಶ್ನೆಗಳಿಗೆ ಉತ್ತರ ಹುಡುಕಲು ಹೋಗಿ, ಅವುಗಳನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಒಡೆದುಕೊಂಡು ಮತ್ತೆ ಅವುಗಳಿಗೆ ಉತ್ತರ ಹುಡುಕಲು ಹೋಗಿ, ನೂರಾರು ಅಧ್ಯಯನ ಶಿಸ್ತುಗಳನ್ನು ಆರಂಭಿಸಿ ಇಂದು ಯಾವುದೇ ಅರ್ಥಪೂರ್ಣವಾದ ಉತ್ತರಗಳನ್ನು ನೀಡುವಲ್ಲಿ ವಿಫಲವಾಗಿದ್ದೇವೆ ಎಂದು ವಿಶ್ವವಿದ್ಯಾಲಯಗಳು ಭಾವಿಸಲಾರಂಭಿಸಿವೆ. ನಾವು ಆಳವಾದ ಅಧ್ಯಯನಕ್ಕಾಗಿ ಎಳೆದುಕೊಂಡ ಗೆರೆಗಳು ತಮಗೆ ಇಂದು ಮುಳುವಾಗಿರುವುದನ್ನು ಗುರುತಿಸಲಾರಂಭಿಸಿವೆ. ಇದಕ್ಕಾಗಿ ಇಂದು ಅಂತರಶಿಸ್ತೀಯ ಮತ್ತು ಬಹುಶಿಸ್ತೀಯ ಅಧ್ಯಯನಗಳ ವಿಚಾರಗಳು ಮುನ್ನೆಲೆಗೆ ಬರುತ್ತಿವೆ. ಇವುಗಳ ನಡುವಿನ ವ್ಯತ್ಯಾಸಗಳೇನು ? ಶಿಸ್ತಿನ ಲಕ್ಷಣಗಳೇನು ? ವ್ಯಾಖ್ಯಾನವೇನು ? ಎನ್ನುವ ಪ್ರಶ್ನೆಗಳು ಚರ್ಚೆಗೆ ಒಳಪಟ್ಟಿವೆ. ಇವುಗಳನ್ನು ಇಲ್ಲಿ ವಿವರಿಸಲು ಹೋಗುವುದಿಲ್ಲ.

## ಈ ನಿನ್ನ ಮಕ್ಕಳನು ಕ್ಷಮಿಸು ತಂದೆ



ಅಂದು

ತಲೆ ಹಣೆ ಕಣ್ಣು ಗಂಟಲು ಎದೆ ಹೊಟ್ಟೆ
ತೊಡೆ ಕಾಲು ರಟ್ಟೆ ಅಂಗೈ ಬೆರಳು ಬೆರಳುಗಳಲ್ಲಿ
ಜಡಿದ ಮೊಳೆಗಳು ಶಿಲುಬೆಯ ಸೇರಿ
ಮೈಯ ಮೂಲೆ ಮೂಲೆಯ ಒರತೆಗಳಿಂದ
ಒಸಿದ ನೆತ್ತರಗುಂಟ ಉಸಿರೊಂದು ಹೊರಬಿತ್ತು
'ದೇವರೇ, ಈ ನಿನ್ನ ಮಕ್ಕಳನು ಕ್ಷಮಿಸು ತಂದೆ'
ಬೆಚ್ಚಿಬಿದ್ದಿತು ಲೋಕ ಕರುಣೆಯ ಮಹಾಲೀಲೆಗೆ
ತಾಯ್ತನದ ಮಹತ್ತಿಗೆ, ಬೆಳಕಿನಾಕ್ರಮಣಕ್ಕೆ
ಅಂತಃಕರಣದಲಿ ವಿಶ್ವವನೊಮ್ಮೆ ಅದ್ದಿ ತೆಗೆದಂತೆ
ಮಮತೆಯ ಮಡಿಲಲ್ಲಿ ಮನುಕುಲವ ಮಲಗಿಸಿ
ಜೋಗುಳವ ಹಾಡಿದಂತೆ; ಮನುಜನಾಳದ
ಶತಶತಮಾನಗಳ ಜ್ವಾಲಾಮುಖಿಯನೊಂದು
ಹಿಮದ ಪರ್ವತ ಮಾಡಿ ಕೆಡವಿದಂತೆ
ಮೊಳೆಹೊಡೆದ ಬೆರಳುಗಳು ಗಡಗಡನೆ
ನಡುಗಿ, ಕಣ್ಣೀರ ಧಾರೆಯಲಿ ಕರಗಿ ಹೋದಂತೆ

ಇಂದು

ಮಿಲಾಗ್ರೆಸನ ಶಿಲುಬೆಯಿಂದ ಏಸುವಿನ
ಅಂಗಾಂಗಗಳು ಭೂಮಿಗೆ ಬಿದ್ದ ಗಳಿಗೆ
ಅವನಾತ್ಮ ಮತ್ತೊಮ್ಮೆ ಮೊರೆಯಿಟ್ಟಿತು.

'ದೇವರೇ, ಈ ನಿನ್ನ ಮಕ್ಕಳನು ಕ್ಷಮಿಸು ತಂದೆ'
ಜಗದ ಕಿವಿಗೀಸೊಲ್ಲು ಕೇಳುತ್ತಿಲ್ಲ.
ದೊಂಬಿ ಗಲಭೆಗಳ ರಕ್ತಸಿಕ್ತ ಹಾದಿಗಳಿಗೆ
ನಮ್ಮ ಅಂಗಾಲುಗಳು ಒಗ್ಗಿಹೋದವೇ ?
ಕರುಣೆ ಪ್ರೇಮದ ಭಾಷೆ ಮಡಿಲ ಮಮತೆಯ ಭಾಷೆ
ಅರ್ಥವಾಗದಷ್ಟು ದೂರ ಬಂದೆವೇ ನಾವು ?

ಶಿಲುಬೆಗೇರಿಸಿದವರೇ
ಶಿಲುಬೆ ಮುರಿದಿದ್ದಾರೆ
ಏಸು ಪ್ರಭು,
ಈ ನಿನ್ನ ಮಕ್ಕಳನು ಕ್ಷಮಿಸು ತಂದೆ.

ಎಂ. ಡಿ. ಒಕ್ಕುಂದ
'ನೆಮ್ಮದಿ', ಸಂಖ್ಯೆ ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ - ೫೮೦ ೦೦೩

## ಅತ್ರಿ ಬುಕ್ ಸೆಂಟರ್, ಮಂಗಳೂರು

### ಇವರ ಲಭ್ಯ ಪ್ರಕಟಣೆಗಳು

| | | ರೂ. |
|---|---|---|
| ೧. ಅಕ್ಷಮಾಲಾ | ಜಿ. ಎ. ರುಕ್ಮಿಣಿ ಮಾಲಾ | ೨೦ |
| ೨. ಇಂಗ್ಲಿಷ್ ಪದಗಳಿಗೆ ಕನ್ನಡದ್ದೇ ಪದಗಳು | ಡಿ. ಎನ್. ಶಂಕರ ಭಟ್ಟ | ೧೮೦ |
| ೩. ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ | ಡಿ. ಎನ್. ಶಂಕರ ಭಟ್ಟ | ೧೪೦ |
| ೪. ಕನ್ನಡದ ಸರ್ವನಾಮಗಳು | ಡಿ. ಎನ್. ಶಂಕರ ಭಟ್ಟ | ೪೬ |
| ೫. ಕನ್ನಡನುಡಿ ನಡೆದುಬಂದ ದಾರಿ | ಡಿ. ಎನ್. ಶಂಕರ ಭಟ್ಟ | ೧೬೦ |
| ೬. ಕನ್ನಡ ಪದಗಳ ಒಳರಚನೆ | ಡಿ. ಎನ್. ಶಂಕರ ಭಟ್ಟ | ೧೨೦ |
| ೭. ಕನ್ನಡ ಬರಹವನ್ನು ಸರಿಪಡಿಸೋಣ | ಡಿ. ಎನ್. ಶಂಕರ ಭಟ್ಟ | ೧೨೦ |
| ೮. ಕನ್ನಡ ವಾಕ್ಯಗಳ ಒಳರಚನೆ | ಡಿ. ಎನ್. ಶಂಕರ ಭಟ್ಟ | ೧೨೦ |
| ೯. ತಾಯಂದಿರಿಗೆ ಕಿವಿಮಾತು | ಭಾರತೀ ಭಟ್ | ೧೨೦ |
| ೧೦. ದೀವಟಿಗೆ | ಕೆ. ಎಂ. ರಾಘವ ನಂಬಿಯಾರ್ | ೬೦ |
| ೧೧. ದುಃಖಾರ್ತರು | ಎ. ಪಿ. ಸುಬ್ಬಯ್ಯ | ೭೦ |
| ೧೨. ನನ್ನ ಬೆಲ್ಜಿಯಮ್ ಪ್ರವಾಸ | ಭಾರತೀ ಭಟ್ | ೫೦ |
| ೧೩. ನಮ್ಮ ಜಪಾನ್ ಪ್ರವಾಸ | ಗಂಗಾ ಬಿ. ರಾಜಪುರೋಹಿತ | ೬೦ |
| ೧೪. ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು ? | ಡಿ. ಎನ್. ಶಂಕರ ಭಟ್ಟ | ೬೫ |
| ೧೫. ನೃತ್ಯಲೋಕ | ಕೆ. ಮುರಲೀಧರ ರಾವ್ | ೩೦೦ |
| ೧೬. ಮಾತಿನ ಒಳಗುಟ್ಟು | ಡಿ. ಎನ್. ಶಂಕರ ಭಟ್ಟ | ೧೨೦ |
| ೧೭. ಮಾರಿಷಾ ಕಲ್ಯಾಣ | ಅಮೃತ ಸೋಮೇಶ್ವರ | ೧೮ |
| ೧೮. ಸನಾತನ ತತ್ತ್ವದ ಇಣುಕು ನೋಟಗಳು | ದರ್ಭೆ ನಾರಾಯಣ ಶಾಸ್ತ್ರಿ | ೧೪೦ |
| ೧೯. ಸಂಜೆ ಬಿಸಿಲು | ಎ. ಪಿ. ಮಾಲತಿ | ೬೦ |

### ಜಿ. ಟಿ. ನಾರಾಯಣರಾಯರ ಕೃತಿಗಳು

| | |
|---|---|
| ೨೦. ಅತ್ರಿಸೂನು ಉವಾಚ (ಮುಕ್ತಕಗಳು) | ೩೦ |
| ೨೧. ಆಲ್ಬರ್ಟ್ ಐನ್‌ಸ್ಟೈನ್ : ಮಾನವೀಯ ಮುಖ (ಅನುವಾದ) | ೫೦ |
| ೨೨. ಉಲ್ಲೇಖನೀಯ ಐನ್‌ಸ್ಟೈನ್ (ಅನುವಾದ) | ೩೦ |
| ೨೩. ಋಷಿವಾಕ್ಯ ವಿಜ್ಞಾನ ಕಲೆ (ತತ್ತ್ವಶಾಸ್ತ್ರ-ವಿಜ್ಞಾನ ಜಿಜ್ಞಾಸೆ) | ೧೫ |
| ೨೪. ಎನ್‌ಸಿಸಿ ದಿನಗಳು (ಅನುಭವ ಕಥನ) | ೫೫ |
| ೨೫. ಐನ್‌ಸ್ಟೈನ್ ಬಾಳಿದರಿಲ್ಲಿ (ವೈಜ್ಞಾನಿಕ ಜೀವನಚರಿತ್ರೆ) | ೫೫ |
| ೨೬. ಕುವೆಂಪು ದರ್ಶನ ಸಂದರ್ಶನ (ಲೇಖನಗಳು) | ೪೫ |
| ೨೭. ಕೃಷ್ಣ ವಿವರಗಳು (Black Holes) | ೩೦ |
| ೨೮. ಕೊಪರ್ನಿಕಸ್ ಕ್ರಾಂತಿ (ಖಗೋಳ ವಿಜ್ಞಾನೇತಿಹಾಸ) | ೩೦ |
| ೨೯. ಜಾತಕ ಮತ್ತು ಭವಿಷ್ಯ (ನಾಳೆಯನ್ನು ಇಂದು ಅರಿಯಬಹುದೇ ?) | ೧೫ |
| ೩೦. ಧೂಮಕೇತು (ಅದೃಶ್ಯಲೋಕದ ಅನಾದಿಕಾಲದ ಅಪೂರ್ವ ಅತಿಥಿ) | ೩೦ |
| ೩೧. ನವಕರ್ನಾಟಕ ವಿಜ್ಞಾನ ಪದವಿವರಣ ಕೋಶ | ೫೦೦ |
| ೩೨. ಫರ್ಮಾ ಯಕ್ಷಪ್ರಶ್ನೆ ಮತ್ತು ಇತರ ವಿಜ್ಞಾನ ಲೇಖನಗಳು | ೬೦ |
| ೩೩. ಬಾನಬಯಲಾಟ ಗ್ರಹಣ (ಗ್ರಹಣದ ವಿಜ್ಞಾನ ವೃತ್ತಾಂತ) | ೧೦ |
| ೩೪. ಮುಗಿಯದ ಪಯಣ (ಆತ್ಮಕಥೆ) | ೧೨೦ |
| ೩೫. ರಾಮಾನುಜನ್ ಬಾಳಿದರಿಲ್ಲಿ (ಗಣಿತ ಮೇರುವಿನ ದುರಂತ ಜೀವನ) | ೫೦ |
| ೩೬. ವಿಜ್ಞಾನ ವರ್ತಮಾನ (ವಿಜ್ಞಾನ ವಾಚಿಕೆ) | ೮೦ |
| ೩೭. ವಿಜ್ಞಾನ ಸಪ್ತರ್ಷಿಗಳು | ೩೫ |
| ೩೮. ವಿಶ್ವದ ಕಥೆ (ಜಗತ್ತಿನ ಹುಟ್ಟು, ಬೆಳವಣಿಗೆ, ಮುಪ್ಪು, ಸಾವು) | ೨೧ |
| ೩೯. ವೈಜ್ಞಾನಿಕ ಮನೋಧರ್ಮ (Scientific Temper) | ೮೦ |
| ೪೦. ಸಪ್ತಸಾಗರದಾಚೆಯೆಲ್ಲೋ.... (ಚಂದ್ರಶೇಖರ್ ದರ್ಶನ, ಸಂವಾದ) | ೬೦ |
| ೪೧. ಸವಾಲನ್ನು ಎದುರಿಸುವ ಛಲ (ವ್ಯಕ್ತಿತ್ವ ವಿಕಾಸ) | ೩೦ |
| ೪೨. ಸುಬ್ರಹ್ಮಣ್ಯನ್ ಚಂದ್ರಶೇಖರ್ (ವಿಜ್ಞಾನ, ಜೀವನ) | ೫೫ |
| ೪೩. ಸೂಪರ್ನೋವಾ (ನಾಕ್ಷತ್ರಿಕಾಸ್ಫೋಟನೆ) | ೨೪ |
| ೪೪. ಸಂಗೀತ ರಸನಿಮಿಷಗಳು (ಕಲೆ, ಆಖ್ಯಾಯಿಕೆಗಳು) | ೬೦ |
| 45. Crossing the Dateline | 40 |
| 46. Scientific Temper | 15 |
| 47. With the Great Minds | 30 |

**ಅತ್ರಿ ಬುಕ್ ಸೆಂಟರ್**

೪, ಶರಾವತಿ, ಕಟ್ಟಡ, ಬಲ್ಮಠ, ಮಂಗಳೂರು – ೫೭೫ ೦೦೧
© ೦೮೨೪ - ೨೪೨೫೧೬೧, ೨೪೯೨೩೯೭, e-mail : athreebook@gmail.com
ಬ್ಲಾಗ್ : athree.wordpress.com

**ಸತ್ಯದ ಸಮಸ್ಯೆ - ಜ್ಞಾನದ/ಅರಿವಿನ/ತಿಳುವಳಿಕೆಯ ಉತ್ಪಾದನೆಯ ನೆಲೆ**

ಆದರೆ ಇಂದು ಬಹಳಷ್ಟು ಸಿದ್ಧಾಂತಗಳು ಸತ್ಯವೆನ್ನುವ ಪರಿಕಲ್ಪನೆಯನ್ನು ಬಹ ಆಳವಾದ ಪರಿಶೀಲನೆಗೆ ಒಡ್ಡಿವೆ. ಸತ್ಯವನ್ನು ಆತ್ಯಂತಿಕವಾಗಿ ಛಾಪಿಸುವುದು ಸಮಸ್ಯಾತ್ಮಕವಾದದ್ದು ಎನ್ನುವುದನ್ನು ಅವು ನಮ್ಮ ಮುಂದೆ ಇಟ್ಟಿವೆ. ಆದ್ದರಿಂದ ನಾ ಸಂಶೋಧನೆಯನ್ನು ವ್ಯಾಖ್ಯಾನಿಸುವಾಗ ಈ ಪರಿಕಲ್ಪನೆಯನ್ನು ಬಳಸುವು ಸಾಧ್ಯವಾಗಲಾರದು. ಹಾಗಾದರೆ ಸಂಶೋಧನೆಯನ್ನು ವ್ಯಾಖ್ಯಾನಿಸುವುದು ಹೇ ಎಂಬ ಪ್ರಶ್ನೆ ಮತ್ತೆ ಉಳಿಯುತ್ತದೆ. ಇತ್ತೀಚೆಗೆ ಜ್ಞಾನ / ಅರಿವು / ತಿಳುವಳಿಕೆಯ ನೀಡುವುದು ಸಂಶೋಧನೆ ಎನ್ನಲಾಗುತ್ತಿದೆ. ಸಂಶೋಧನೆಯ ಮೂಲಕ ನಾ ಜ್ಞಾನವನ್ನು ಯಾವುದೇ ವಿಷಯದ ಬಗ್ಗೆ ಉತ್ಪಾದಿಸುತ್ತೇವೆ. ಇದಕ್ಕೆ ಪ್ರತಿಯಾ ಕೆಲವರು ಕೆಲವು ಪ್ರಶ್ನೆಗಳನ್ನು ಕೇಳಬಹುದು: ಸಂಶೋಧನೆ ಮಾಡಿದವರಿಗೆ ಮಾ ಜ್ಞಾನ ಇರುತ್ತದೆ, ಇತರರಿಗೆ ಇರುವುದಿಲ್ಲ ಎಂದೇ ? ಅಥವಾ ಸಂಶೋಧನೆಯೇತ ಜ್ಞಾನ/ತಿಳುವಳಿಕೆ/ಅರಿವು ಇರುವುದಿಲ್ಲ ಎಂದೇ ? ಈ ಪ್ರಶ್ನೆಗಳಿಗೆ ಉತ್ತ ನಕಾರಾತ್ಮಕವಾದ್ದು.

ಅಂದರೆ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ಶಿಸ್ತಿನ ಚೌಕಟ್ಟಿನಲ್ಲಿ ತರ್ಕಬದ್ಧವಾಗಿ, ವ್ಯವಸ್ಥಿತವಾಗಿ ನಡೆಯುವ ಅಧ್ಯಯನಗಳು ಮಾತ್ರ ಜ್ಞಾನ/ಅರಿವು ತಿಳುವಳಿಕೆ ನೀಡುತ್ತವೆ ಎಂದಲ್ಲ. ಅವುಗಳ ಆಚೆಗೂ ಹಿಂದೆ ಹೇಳಿದಂತೆ ಜ್ಞಾನ ಉತ್ಪಾದನೆಯಾಗುತ್ತದೆ. ಅವುಗಳೂ ತರ್ಕಬದ್ಧವಾಗಿದ್ದರೆ, ವ್ಯವಸ್ಥಿತವಾ ಅಧ್ಯಯನದಲ್ಲಿಯೂ ಅವು ಮತ್ತೆ ಸಾಬೀತಾದರೆ ಅವೂ ಸಂಶೋಧನೆಯಲ್ಲಿ ಜಾ ಪಡೆಯುತ್ತವೆ. ಆದರೆ ಈ ಪ್ರಶ್ನೆಗಳಿಗೆ ಮತ್ತಷ್ಟು ಆಯಾಮಗಳಿವೆ. ಅವುಗಳನ್ನು ವಿವರಿಸಿಕೊಳ್ಳುವುದು ಅಗತ್ಯ.

**ಮಾಡಿ ಕಲಿ, ನೋಡಿ ಕಲಿ**

ತಿಳುವಳಿಕೆ/ಅರಿವು/ಜ್ಞಾನ ಇವುಗಳು ಹೇಗೆ ಬರುತ್ತವೆ ಎಂಬ ಮೂಲಭೂತ ಪ್ರ ಇಲ್ಲಿದೆ. ಯಾವುದೇ ತರ್ಕವಿಲ್ಲದೆ, ವ್ಯವಸ್ಥಿತವಾಗಿಲ್ಲದೆ ಇದ್ದರೂ ಕೆಲವೊಮ್ಮೆ ಕೆಲವ ತತ್ತ್ವಗಳು ನಮ್ಮ ಅರಿವಿಗೆ ಬರಬಹುದಲ್ಲವೇ ? ಹೌದು. ಅನುಭವದ ಆಧಾರ ಮೇಲೆ ನಮಗೆ ತಿಳುವಳಿಕೆ ದೊರೆಯುತ್ತದೆ. ದೀಪದ ಉರಿಯಲ್ಲಿ ನಮ್ಮ ದೇಹ ಯಾವುದಾದರೂ ಭಾಗವನ್ನು ಇಟ್ಟರೆ ನಮಗೆ ಸುಡುವ ಅನುಭವವಾಗುತ್ತದೆ. ಇದನ್ನು ನಾವು ಅನುಭವದ ಮೂಲಕ ಕಂಡುಕೊಳ್ಳಬಹುದು. ಆದರೆ ಪ್ರತಿಯೊಂದನ್ನು ಅನುಭವದ ಮೂಲಕವೇ ಕಂಡುಕೊಳ್ಳುವುದಾದರೆ ಒಬ್ಬರ ಜೀವಿತಾವಧಿಯಲ್ಲಿ ವ್ಯಕ್ತಿ ಹೆಚ್ಚಿನ ಅರಿವನ್ನು ಪಡೆದುಕೊಳ್ಳಲು ಸಾಧ್ಯವಿಲ್ಲ. ಅಂದರೆ ನಾವು ಬೇರೆಯವ ಅನುಭವದಿಂದಲೂ ಅರಿವನ್ನು ಪಡೆಯಲು ಸಾಧ್ಯವಿದೆ. ನಾನು ಉರಿಯಲ್ಲಿ ಹಿಡಿಯದೆಯೇ ಕೈ ಇಟ್ಟರೆ ಸುಡುತ್ತದೆ ಎಂದು ತಿಳುವಳಿಕೆ ಪಡೆಯಲು ಸಾಧ್ಯ ಇವುಗಳು ಮಾಡಿ ಕಲಿ ಮತ್ತು ನೋಡಿ ಕಲಿ ವಿಧಾನಗಳು. ಆದರೆ ಇವುಗಳಷ್ಟೇ ಜ್ಞಾನವನ್ನು ಪಡೆಯುವ ವಿಧಾನಗಳಲ್ಲ. ನಾನು ಅನುಭವಿಸದೆ, ನೋಡದೆ ಕಲಿಯಲು ಸಾಧ್ಯವಿಲ್ಲವೆ ? ಇಲ್ಲಿಯೇ ಜ್ಞಾನದ ಮುಖ್ಯವಾದ ಪ್ರಶ್ನೆಗಳಿರುವುದು. ಇಲ್ಲಿಯೇ ವ್ಯವಸ್ಥಿತವಾದ ಅಧ್ಯಯನ ಎಂಬ ಪ್ರಶ್ನೆ ಮುಖ್ಯವಾಗುವುದು.

**ಓದಿ ಕಲಿ - ಜ್ಞಾನ ಮತ್ತು ಭಾಷೆ**

ಇಲ್ಲಿ ಭಾಷೆಯ ಪ್ರಶ್ನೆ ಮುಖ್ಯವಾಗುತ್ತದೆ. ಅಂದರೆ ನಾವು ನೋಡಿಲ್ಲದ ಅನುಭವಿಸಿಲ್ಲದ ವಿಷಯಗಳ ಬಗೆಗಿನ ತಿಳುವಳಿಕೆಯನ್ನು ಬೇರೆ ಯಾರಾದರೂ ಭಾಷೆಯಲ್ಲಿ ಹಿಡಿದಿಟ್ಟರೆ ಅದನ್ನು ನಾವು ಅರ್ಥಮಾಡಿಕೊಂಡರೆ ಆಗ ಸಹ ನಮಗೆ ಜ್ಞಾನ ಸಿಗುತ್ತದೆ. ಅಂದರೆ ಕೇಳಿ ಕಲಿ, ಓದಿ ಕಲಿ. ಅಂದರೆ ಭಾಷೆಯಮೂಲಕ ಮಾತ್ರ ನಮಗೆ ಜ್ಞಾನ ದೊರೆಯುತ್ತದೆ. ಈ ಭಾಷೆಯೇ ಮನುಷ್ಯಪ್ರಾಣಿಯನ್ನು ಇತರ ಪ್ರಾಣಿಗಳಿಗಿಂತ ಭಿನ್ನವಾಗಿಸಿರುವುದು. ಈ ಕಾರಣಕ್ಕಾಗಿಯೇ ತತ್ತ್ವಶಾಸ್ತ್ರದಲ್ಲಿ ಮೊದಲಿಗ ಇದ್ದ ಶಾಖೆಗಳಲ್ಲಿ ವ್ಯಾಕರಣ (ಗ್ರಾಮರ್) ಮತ್ತು ಭಾಷಾಬಳಕೆಯಶಾಸ್ತ್ರ (ರೆಟೊರಿಕ್ ಕನ್ನಡದಲ್ಲಿ ರೆಟೊರಿಕ್‌ಅನ್ನು ಈ ಮೊದಲಿಗೆ ಕೇವಲ 'ಭಾಷಣ ಕಲೆ' ಎಂದು ಮಾತ್ರ ಅರ್ಥಮಾಡಿಕೊಂಡು ಭಾಷಾಂತರಿಸಲಾಗಿದೆ/ಪದವನ್ನು ಟಂಕಿಸಲಾಗಿದೆ) ಪ್ರಮುಖವಾಗಿದ್ದವು.

ನಾವು ನೋಡಿದ, ಅನುಭವಿಸಿದ, ಕೇಳಿದ, ಅಧ್ಯಯನ ಮಾಡಿ ಕಲಿತ ವಿಷಯಗಳನ್ನು ಬೇರೆಯವರಿಗೆ (ಮುಂದಿನ ಪೀಳಿಗೆಯವರಿಗೂ ಸೇರಿ) ತಿಳಿಸಬೇಕಾದರೆ ಆ ತಿಳುವಳಿಕೆಯನ್ನು ನಾವು ಭಾಷೆಯಲ್ಲಿ ಹಿಡಿದಿಡಬೇಕಾಗುತ್ತದೆ. ಬೇರೆ ಕಾಲ, ದೇಶದವರಿಗೆ ಅರ್ಥವಾಗುವಂತೆ, ಮನದಟ್ಟಾಗುವಂತೆ ಅದು

ಾಷೆಯಲ್ಲಿ ನಿರೂಪಿತವಾಗಬೇಕಾಗುತ್ತದೆ. ಆಗ ಮಾತ್ರ ಅದು ಜ್ಞಾನವಾಗುತ್ತದೆ. ನನ್ನ ತಿಳುವಳಿಕೆ/ಅರಿವು/ಜ್ಞಾನ ಭಾಷೆಯನ್ನು ಪ್ರವೇಶಿಸದಿದ್ದಲ್ಲಿ ಅದು ಬೇರೆಯವರ ಪ್ರಯೋಜನಕ್ಕೆ ಬರುವುದಿಲ್ಲ. ಆದ್ದರಿಂದ ನಾವು ಪಡೆದ ಜ್ಞಾನ ಏನು, ಹೇಗೆ ಪಡೆದೆವು, ಪಡೆದ ವಿಧಾನ ಯಾವುದು ಇತ್ಯಾದಿಗಳು ಭಾಷೆಯಲ್ಲಿ ಬರಬೇಕಾಗುತ್ತದೆ. ಇಲ್ಲಿಯೇ ಜ್ಞಾನದ ಮುಖ್ಯವಾದ ಪ್ರಶ್ನೆಗಳಿರುವುದು. ಇಲ್ಲಿಯೇ ವ್ಯವಸ್ಥಿತವಾದ ಅಧ್ಯಯನ ಎಂಬ ಪ್ರಶ್ನೆ ಮುಖ್ಯವಾಗುವುದು.

**ಡೆಸರ್ಟೇಶನ್-ಥೀಸಿಸ್**

ಈ ಎರಡು ಪದಗಳನ್ನು ನಮ್ಮ ವಿದ್ಯಾರ್ಥಿಗಳು ಮತ್ತು ಇತರರೂ ಸಹ ಸಮಾನಾರ್ಥಕವಾದ ಪದಗಳಾಗಿ ಬಳಸುತ್ತಾರೆ. ಆದರೆ ಇವುಗಳೆರಡರ ನಡುವಿನ ವ್ಯತ್ಯಾಸ ಸಹ ನಮಗೆ ಮುಖ್ಯವಾಗಬೇಕಾಗುತ್ತದೆ. ಥೀಸಿಸ್ ಎನ್ನುವುದು ನಾವು ನಮ್ಮ ಅಧ್ಯಯನದ ಮೂಲಕ ಕಂಡುಕೊಂಡ ಫಲಿತ, ಅದನ್ನು ಹೇಗೆ ಕಂಡುಕೊಂಡೆವು ಎಂದು ನೀಡುವ ವಿವರವಾದ ವರದಿಯೇ ಡೆಸರ್ಟೇಶನ್. ನಮ್ಮಲ್ಲಿ ಡೆಸರ್ಟೇಶನ್ ಬರೆಯುವದನ್ನೇ ಸಂಶೋಧನೆ ಎಂದು ಭಾವಿಸಿಕೊಳ್ಳಲಾಗಿದೆ. ಇದು ಹೆಚ್ಚಾಗಿ ಸಾಹಿತ್ಯದ ಅಧ್ಯಯನಗಳಲ್ಲಿ ಕಂಡುಬರುತ್ತದೆ. ನಾವು ಯಾವುದೋ ಪ್ರಯೋಗದ ಮೂಲಕವೋ, ಅಥವಾ ಹಲವು ಆಕರಗಳನ್ನು ವಿಶ್ಲೇಷಿಸಿಯೋ ಕೆಲವು ಪ್ರಶ್ನೆಗಳಿಗೆ ಉತ್ತರವನ್ನು ಹುಡುಕಿಕೊಳ್ಳುತ್ತೇವೆ. ಈ ಇಡೀ ಪ್ರಕ್ರಿಯೆಯ ವರದಿಯೇ ಡೆಸರ್ಟೇಶನ್. ನಾವು ಸಂಶೋಧನೆಯನ್ನು ಏಕೆ ಆರಂಭಿಸಿದೆವು; ಏಕೆ ಈ ಪ್ರಶ್ನೆಗೇ ಉತ್ತರವನ್ನು ಹುಡುಕಲು ಯತ್ನಿಸಿದೆವು/ ಅಥವಾ ಇದನ್ನೆ ಏಕೆ ಊಹಾಸಿದ್ಧಾಂತವಾಗಿ ಪರೀಕ್ಷಿಸಿದೆವು; ಈ ವಿಷಯದ ಬಗ್ಗೆ ಇದುವರೆಗೆ ಇರುವ ಜ್ಞಾನದ ಸ್ವರೂಪ ಯಾವುದು (ಲಿಟರೇಚರ್ ಸರ್ವೆ, ಇದುವರೆಗಿನ ಅಧ್ಯಯನಗಳ ಸಮೀಕ್ಷೆ); ನಾವು ನಡೆಸಿದ ಪ್ರಯೋಗ/ವಿಶ್ಲೇಷಣೆ ಯಾವುದು; ಯಾವುದನ್ನು ಆಕರವಾಗಿ, ಉಪಕರಣಗಳಾಗಿ ಬಳಸಿದೆವು, ಅವುಗಳ ವ್ಯಾಪ್ತಿ, ಪ್ರಮಾಣ ಏನು; ಅವುಗಳ ಹಿಂದೆ ಕೆಲಸ ಮಾಡಿದ ಸಿದ್ಧಾಂತ ಯಾವುದು; ನಾವು ಬಳಸಿದ ವಿಧಾನಗಳಾವುವು; ಏಕೆ ಅವುಗಳನ್ನೇ ಬಳಸಿದೆವು ಇತ್ಯಾದಿ ವಿವರಗಳನ್ನು ನಾವು ಡೆಸರ್ಟೇಶನ್‌ನಲ್ಲಿ ನೀಡಬೇಕಾಗುತ್ತದೆ.

**ಜ್ಞಾನದಷ್ಟೇ ಜ್ಞಾನದ ಮಾರ್ಗವೂ ಮುಖ್ಯ**

ಇದೇ ಜ್ಞಾನ ಎಂದು ಹೇಳಬೇಕಾದರೆ ಆ ನಿರ್ಧಾರಕ್ಕೆ ನಾವು ಹೇಗೆ ಬಂದೆವು, ಏಕೆ ಬಂದೆವು ಎಂಬುದನ್ನು ಹೇಳಬೇಕಾಗುತ್ತದೆ. ಈ ವಿವರಗಳನ್ನು ಅದೇ ಕ್ಷೇತ್ರದಲ್ಲಿ ನುರಿತ ತಜ್ಞರು ಪರಿಶೀಲಿಸಿ ವ್ಯವಸ್ಥಿತವಾಗಿ ಅಧ್ಯಯನ ನಡೆದಿದೆಯೇ ಇಲ್ಲವೇ ಎಂದು ಹೇಳಬೇಕಾಗುತ್ತದೆ. ಆಗ ಮಾತ್ರ ಅದನ್ನು ವಿಶ್ವವಿದ್ಯಾಲಯಗಳು ಮಾನ್ಯ ಮಾಡಲು ಸಾಧ್ಯ. ಇಲ್ಲದಿದ್ದರೆ ಬೇರೊಬ್ಬರು ನೀವು ಹೇಳಿದ್ದನ್ನು ಮರುಮಾತಿಲ್ಲದೆ ಒಪ್ಪಿಕೊಳ್ಳಬೇಕಾಗುತ್ತದೆ. ಪರೀಕ್ಷಿಸಲು ಸಾಧ್ಯವಿಲ್ಲ. ಈ ಕಾರಣಕ್ಕಾಗಿಯೇ ವ್ಯವಸ್ಥಿತವಾದ ಅಧ್ಯಯನ ಮುಖ್ಯವಾಗುತ್ತದೆ. ಹಾಗೆಂದ ಮಾತ್ರಕ್ಕೆ ಹಿಂದೆ ಹೇಳಿದಂತೆ ಇತರೆ ಯಾವುದೇ ವ್ಯವಸ್ಥಿತವಾದ ಅಧ್ಯಯನಗಳನ್ನು ಮಾಡದಿರುವವರು ಜ್ಞಾನದ ಉತ್ಪಾದನೆ ಮಾಡಲು ಸಾಧ್ಯವಿಲ್ಲ ಎಂದಲ್ಲ. ಅವರು ತಾವು ಆ ಜ್ಞಾನವನ್ನು ತಲುಪಿದ ಮಾರ್ಗವನ್ನು ಸ್ಪಷ್ಟಪಡಿಸಿದರೆ ಪರೀಕ್ಷಿಸಲು ಅಥವಾ ಅದನ್ನು ಮುಂದುವರೆಸಲು ಸಾಧ್ಯವಿದೆ.

ಉದಾಹರಣೆ ನೀಡಿದರೆ ಇದು ಸ್ಪಷ್ಟವಾಗಬಹುದು. ಆಕಸ್ಮಾತ್ತಾಗಿ ಏನೋ ಮಾಡಲು ಹೋಗಿ ಮತ್ತೇನೋ ಆಗಬಹುದು. ಎರಡು ರಾಸಾಯನಿಕಗಳನ್ನು ತಪ್ಪಿ ಬಳಸಿದಾಗ ಮತ್ತೇನೋ ಉಪಯುಕ್ತವಾದದ್ದು ಆಗಬಹುದು. ಆದರೆ ಅದು ನಮಗೆ ಹೊಳಹನ್ನು ಮಾತ್ರ ನೀಡುತ್ತದೆ. ಅದನ್ನು ಮತ್ತೆ ಪರೀಕ್ಷಿಸಬೇಕಾಗುತ್ತದೆ. ಅವುಗಳನ್ನು ಯಾವ ಪ್ರಮಾಣದಲ್ಲಿ ಬೆರೆಸಬೇಕು, ಯಾವ ತಾಪಮಾನದಲ್ಲಿ ಬೆರೆಸಬೇಕು ಇತ್ಯಾದಿ ಅಂಶಗಳನ್ನು ಮುಂದಿನ ಸಂಶೋಧನೆ ನಿರ್ಧರಿಸಬೇಕಾಗಿರುವುದರಿಂದ ವ್ಯವಸ್ಥಿತವಾದ ಅಧ್ಯಯನದ ಅಗತ್ಯವಿರುತ್ತದೆ. ನಾನು ಹಿಡಿದ ಮಾರ್ಗಗಳನ್ನು ಸ್ಪಷ್ಟಪಡಿಸುವುದು ಅಗತ್ಯವಿರುತ್ತದೆ. ಏಕೆಂದರೆ ಬೇರೊಂದು ಮಾರ್ಗವನ್ನು ಹಿಡಿದರೆ ಬೇರೆ ಫಲಿತ ಕಾಣಲು ಸಾಧ್ಯವಿರುತ್ತದೆ.

**ಹೈಕುಗಳು**

*ಮೂವರು ಹೇಳಿದ*
*ಸುಳ್ಳು*
*ನಾಲ್ಕನೇಯವ ಸತ್ಯವೆಂದ!*

ಗಣೇಶ ಹೊಸ್ಮನೆ
ಜಾನ್ಮನೆ - ಶಿಲಗಿಶಿಗಿ, ಶಿರಸಿ (ಉ.ಕ.)

**ಮಾರ್ಗದ ಪ್ರಶ್ನೆ - ಎಪಿಸ್ಟಮಾಲಜಿ, ಸಿದ್ಧಾಂತ, ವಿಧಾನ, ಆಕರಗಳು ಇತ್ಯಾದಿ**

ತತ್ವಶಾಸ್ತ್ರದಲ್ಲಿ ಎಪಿಸ್ಟಮಾಲಜಿ ಎಂಬುದೊಂದಿದೆ. ಇದು ಜ್ಞಾನಶಾಸ್ತ್ರ (ಕನ್ನಡದಲ್ಲಿ ಇದಕ್ಕೆ ಮುಂಚೆ ಪ್ರಮಾಣಶಾಸ್ತ್ರ ಎಂದೂ ಬಳಸಲಾಗಿದೆ). ಯಾವುದನ್ನು ಜ್ಞಾನ ಎಂದು ಒಪ್ಪಿಕೊಳ್ಳಬೇಕು, ಒಪ್ಪಿಕೊಳ್ಳುವುದಕ್ಕೆ ಪ್ರಮಾಣ ಏನು ಎಂಬುದನ್ನು ಇದು ಹೇಳುತ್ತದೆ. ನೀವು ಯಾವ ಎಪಿಸ್ಟಮಾಲಜಿಯ ಚೌಕಟ್ಟನ್ನು ಒಪ್ಪಿಕೊಳ್ಳುತ್ತೀರಾ ಎಂಬುದರ ಮೇಲೆ ನೀವು ಯಾವುದನ್ನು ಪ್ರಮಾಣ ಎಂದು ಒಪ್ಪಿಕೊಳ್ಳುತ್ತೀರಾ ಮತ್ತು ನೀವು ತಲುಪುವ ನಿರ್ಧಾರ ಯಾವುದು ಎಂಬುದು ತೀರ್ಮಾನಗೊಳ್ಳುತ್ತದೆ. ಆದ್ದರಿಂದ ಸಂಶೋಧಕರು ತಾವು ಬಳಸುತ್ತಿರುವ ಜ್ಞಾನಶಾಸ್ತ್ರೀಯ ಚೌಕಟ್ಟು ಯಾವುದು ಎಂಬುದನ್ನು ನಿರ್ಧರಿಸಬೇಕಾಗುತ್ತದೆ ಮತ್ತು ಅದರ ಬಗೆಗೆ ಅರಿವಿರಬೇಕಾಗುತ್ತದೆ. ಭಾರತದ ಷಡ್ದರ್ಶನಗಳೆಂದು ಯಾವುದನ್ನು ಕರೆಯುತ್ತಾರೆ ಅವುಗಳ ನಡುವಿನ ವ್ಯತ್ಯಾಸಗಳೂ ಎಪಿಸ್ಟಮಲಾಜಿಕಲ್ ವ್ಯತ್ಯಾಸಗಳಾಗಿದ್ದವು.

**ಸಿದ್ಧಾಂತ**

ಈಗಾಗಲೇ ಹಲವು ರೀತಿಯ ಸಂಗತಿಗಳನ್ನು ಪರೀಕ್ಷಿಸಿ ಸಾಮಾನ್ಯವಾಗಿ ಎಲ್ಲದಕ್ಕೂ ಒಪ್ಪಿತವಾಗುವ ನಿಯಮವೊಂದನ್ನು ರೂಪಿಸಿರುವುದೇ ಸಿದ್ಧಾಂತ. ಇದನ್ನು ಬಳಸಿ ಮತ್ತೆ ನಾವು ಎಲ್ಲವನ್ನೂ ಕೂಲಂಕಷವಾಗಿ ಪರಿಶೀಲಿಸದೆ ಕೇವಲ ಅನ್ವಯಿಸಿ ನಿರ್ಧಾರಕ್ಕೆ ಬರಬಹುದು. ಈ ರೀತಿ ಆನ್ವಯಿಕ ಅಥವಾ ಆ ಸಿದ್ಧಾಂತದ ಚೌಕಟ್ಟಿನಲ್ಲೇ ಮುಂದುವರೆಸಿ ಸಂಶೋಧನೆ ಮಾಡುವುದಾದರೆ ಸಿದ್ಧಾಂತವನ್ನು ನಾವು ಬಳಸುತ್ತೇವೆ. ಇದು ಎಪಿಸ್ಟಮಲಾಜಿಕಲ್ ಚೌಕಟ್ಟನ್ನು ನಿರ್ಧರಿಸಿದ ನಂತರದ ಹಂತ. ಒಂದು ಸಂಗತಿಯನ್ನು ಕುರಿತು ಒಂದೇ ಎಪಿಸ್ಟಮಲಾಜಿಕಲ್ ಚೌಕಟ್ಟಿನಲ್ಲಿ ಹಲವು ಸಿದ್ಧಾಂತಗಳಿರಬಹುದು. ಉದಾಹರಣೆಗೆ ಉದಾರವಾದಿ ಸಿದ್ಧಾಂತ ಮತ್ತು ಮಾರ್ಕ್ಸ್‌ವಾದಿ ಸಿದ್ಧಾಂತಗಳು ಒಂದೇ ಎಪಿಸ್ಟಮಲಾಜಿಕಲ್ ಚೌಕಟ್ಟನ್ನು ಹೊಂದಿದ್ದರೂ ಅವುಗಳು ಸಂಗತಿಗಳನ್ನು ಪ್ರಕ್ರಿಯೆಗಳನ್ನು ಗ್ರಹಿಸುವ/ತೀರ್ಮಾನಿಸುವ ರೀತಿ ಬೇರೆಯಾಗಿರುತ್ತದೆ. ಆದ್ದರಿಂದ ಸಂಶೋಧಕರಿಗೆ ತಾವು ಯಾವ ಸಿದ್ಧಾಂತವನ್ನು ಬಳಸುತ್ತಿದ್ದೇವೆ ಎಂಬುದರ ಬಗ್ಗೆ ಅರಿವಿರಬೇಕಾಗುತ್ತದೆ. ಇವತ್ತು ಹೆಚ್ಚಿನ ಸಂಶೋಧನೆಗಳಲ್ಲಿ ವಿದ್ಯಾರ್ಥಿಗಳು ಭಿನ್ನಸಿದ್ಧಾಂತಗಳ ಹಿನ್ನಲೆಯಲ್ಲಿನ ವಿಚಾರಗಳನ್ನು ಅವುಗಳ ನಡುವೆ ಯಾವುದೇ ವ್ಯತ್ಯಾಸವಿಲ್ಲದಂತೆ ತಮ್ಮ ವರದಿಯಲ್ಲಿ ತಮ್ಮ ನಿರ್ಧಾರದ ಬೆಂಬಲಕ್ಕೆ ಉಲ್ಲೇಖಿಸುತ್ತಾರೆ. ಈ ಸಮಸ್ಯೆಗೆ ಕಾರಣವೇನೆಂದರೆ ಅವರಿಗೆ ವಿಭಿನ್ನ ಸಿದ್ಧಾಂತಗಳ ಅರಿವಿಲ್ಲದಿರುವುದು, ಇದ್ದರೂ ಕೇವಲ ಅವುಗಳನ್ನು ಸಿದ್ಧಾಂತವಾಗಿ ಮಾತ್ರ ಗ್ರಹಿಸಿರುವುದರಿಂದ, ತಾವು ಅವಲಂಬಿಸುವ ನಿರ್ಧಾರಗಳ ಹಿಂದೆ ಯಾವ ಸಿದ್ಧಾಂತ ಕೆಲಸ ಮಾಡಿದೆ ಎಂಬುದನ್ನು ಗ್ರಹಿಸುವಲ್ಲಿ ವಿಫಲರಾಗುತ್ತಾರೆ.

**ವಿಧಾನ**

ವಿಧಾನದ ಪ್ರಶ್ನೆಯೂ ಸಂಶೋಧನೆಯಲ್ಲಿ ಬಹಳ ಮುಖ್ಯವಾದದ್ದು. ನಾವು ಯಾವ ಆಕರಗಳನ್ನು ಬಳಸಿ ಅವುಗಳ ವಿಶ್ಲೇಷಣೆಯ ಮೂಲಕ ನಾವು ಹಾಕಿಕೊಂಡಿದ್ದ ಸಂಶೋಧನಾ ಪ್ರಶ್ನೆಗೆ ಉತ್ತರ ಹುಡುಕುತ್ತೇವೆ ಅವುಗಳನ್ನು ವಿಶ್ಲೇಷಿಸುವ ವಿಧಾನಕ್ಕೆ (ಮಾನವಿಕ ಮತ್ತು ಸಮಾಜ ಜ್ಞಾನಗಳಲ್ಲಾದರೆ) ಯಾವ ಪರಿಕರಗಳನ್ನು ಬಳಸಿ ಪ್ರಯೋಗವನ್ನು ಮಾಡುತ್ತೇವೂ ಅದರ ವಿಧಾನಕ್ಕೆ ನಾವು ಗಮನ ನೀಡಬೇಕಾಗುತ್ತದೆ. ನಾವು ಭಿನ್ನ ವಿಧಾನಗಳನ್ನು ಬಳಸಿದರೆ ಭಿನ್ನ ತೀರ್ಮಾನಕ್ಕೆ ತಲುಪಲು ಸಾಧ್ಯವಿರುತ್ತದೆ. ಇನ್ನೊಂದು ಅಂಶವನ್ನು ನಾವು ಗಮನಿಸಬೇಕಾದದ್ದು ಏನೆಂದರೆ, ವಿಧಾನಗಳ ಹಿಂದೆ ಸಿದ್ಧಾಂತಗಳು ಕೆಲಸ ಮಾಡುತ್ತಿರುತ್ತವೆ. ನಾನು ಹಾಕಿ ಕೊಂಡ ಸೈದ್ಧಾಂತಿಕ ಚೌಕಟ್ಟಿಗೆ ಅನುಗುಣವಾಗಿ ನಮ್ಮ ವಿಧಾನವಿರಬೇಕಾಗುತ್ತದೆ. ಒಂದೇ ಸಿದ್ಧಾಂತದ ಅಡಿಯಲ್ಲಿ ಭಿನ್ನ ವಿಧಾನಗಳಿರಲು ಸಾಧ್ಯ. ಏಕೆಂದರೆ ಕೆಲವೊಮ್ಮೆ ಆಕರಗಳು/ಪರಿಕರಗಳಿಗೆ ಅನುಗುಣವಾಗಿ ವಿಧಾನವೂ ಬದಲಾಗಬೇಕಾಗುತ್ತದೆ. ಉದಾಹರಣೆಗೆ, ಒಂದು ಕವನವನ್ನು ವಿಶ್ಲೇಷಿಸುವ ವಿಧಾನಕ್ಕೂ, ಆತ್ಮಚರಿತ್ರೆಯನ್ನು ವಿಶ್ಲೇಷಿಸುವ ವಿಧಾನಕ್ಕೂ, ಒಂದು

ಕಾದಂಬರಿಯನ್ನು ವಿಶ್ಲೇಷಿಸುವ ವಿಧಾನಕ್ಕೂ, ಮೌಖಿಕ ಕಾವ್ಯವನ್ನು ವಿಶ್ಲೇಷಿಸುವ ವಿಧಾನಕ್ಕೂ, ಭಾಷಣವನ್ನು ವಿಶ್ಲೇಷಿಸುವ ವಿಧಾನಕ್ಕೂ ವ್ಯತ್ಯಾಸವಿರುತ್ತದೆ. ಮತ್ತು ಒಂದೇ ಪ್ರಕಾರವನ್ನು (ಈ ಸಾಹಿತ್ಯ ಆಕರಗಳ ಉದಾಹರಣೆಯಲ್ಲಿ) ವಿಶ್ಲೇಷಿಸುವುದಕ್ಕೆ ಭಿನ್ನ ವಿಧಾನಗಳಿರಲು ಸಾಧ್ಯ. ಈ ವ್ಯತ್ಯಾಸ ಸಿದ್ಧಾಂತ ಮತ್ತು ಎಪಿಸ್ಟಮಾಲಜಿಯನ್ನು ಅವಲಂಬಿಸಿರುತ್ತದೆ.

**ಪ್ರಾಕಲ್ಪನೆ/ಊಹಾ ಸಿದ್ಧಾಂತ - ಸಂಶೋಧನಾ ಪ್ರಶ್ನೆ**

ಸಾಮಾನ್ಯವಾಗಿ ಸಂಶೋಧನೆ ಮಾಡಲು ಹೈಪಾಥಿಸಿಸ್ (ಕನ್ನಡದಲ್ಲಿ ಇದನ್ನು ಊಹಾ ಸಿದ್ಧಾಂತವೆಂದು ಕೆಲವರು, ಮತ್ತೆ ಕೆಲವರು ಪ್ರಾಕಲ್ಪನೆ ಎಂದು ಭಾಷಾಂತರಿಸಿದ್ದಾರೆ) ಇರಬೇಕೆಂದು ಹೇಳುತ್ತಾರೆ. ಬಹಳಷ್ಟು ಸಂಶೋಧನೆ ಎಂದರೇನೆಂದು ಹೇಳಿಕೊಡುವ ಪುಸ್ತಕಗಳಲ್ಲೂ ಈ ಅಂಶ ಪ್ರಸ್ತಾಪವಾಗುತ್ತದೆ. ಇದು ಸಾಮಾನ್ಯವಾಗಿ ವಿಜ್ಞಾನ ವಿಷಯಗಳಲ್ಲಿ ಸಂಶೋಧನೆ ನಡೆಸುವಾಗ ಬಳಕೆಯಾಗುವ ಪರಿಭಾಷೆ. ಅಲ್ಲಿ ಪ್ರಯೋಗದ ಆರಂಭಕ್ಕೆ ಮುನ್ನವೇ ಈ ಪರಿಕರಗಳನ್ನು ಈ ವಿಧಾನದಲ್ಲಿ ಪ್ರಯೋಗಿಸಿದಾಗ ಈ ಕಾಲಾವಧಿಯಲ್ಲಿ, ನಿರ್ದಿಷ್ಟವಾದ ಕೆಲವು ಅಂಶಗಳು ಕಾನ್‌ಸ್ಟಂಟ್ (ತಟಸ್ಥ/ಬದಲಾಗದಿದ್ದರೆ) ಆಗಿದ್ದರೆ ಈ ರೀತಿಯ ಫಲಿತ ದೊರೆಯುತ್ತದೆ ಎಂದು ಭಾವಿಸಲಾಗುತ್ತದೆ. ನಂತರ ಅದನ್ನು ಪರೀಕ್ಷಿಸಲಾಗುತ್ತದೆ. ಪ್ರಯೋಗ ಯಶಸ್ವಿಯಾದರೂ ಅದು ಜ್ಞಾನವೇ, ಯಶಸ್ವಿಯಾಗದಿದ್ದರೂ ಅದು ಜ್ಞಾನವೇ. ಆ ರೀತಿ ಮಾಡುವುದರಿಂದ ನಿರೀಕ್ಷಿತ ಫಲಿತಾಂಶ ದೊರೆಯುವುದಿಲ್ಲ ಎಂದು ತೀರ್ಮಾನಕ್ಕೆ ಬರುವುದೂ ಕೂಡ ಜ್ಞಾನವೇ.

ಆದರೆ ಸಮಾಜವಿಜ್ಞಾನಗಳಲ್ಲಿ ಮತ್ತು ಮಾನವಿಕಗಳಲ್ಲಿ ಈ ರೀತಿಯ ಊಹೆ, ಕಲ್ಪನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಇಲ್ಲಿ ಪ್ರಯೋಗ ನಡೆಸಲಾಗುವುದಿಲ್ಲ, ಮತ್ತು ಸಾಮಾಜಿಕ, ರಾಜಕೀಯ, ಚಾರಿತ್ರಿಕ, ವ್ಯಕ್ತಿಗತ, ಮಾನಸಿಕ ಅಂಶಗಳನ್ನು ಬದಲಾಗದಂತೆ, ತಟಸ್ಥಗೊಳಿಸಲು ಬರುವುದಿಲ್ಲ. ಆದ್ದರಿಂದ ಇಲ್ಲಿ ಊಹಾಸಿದ್ಧಾಂತ ಅಥವಾ ಪ್ರಾಕಲ್ಪನೆ ಎಂಬ ಪರಿಕಲ್ಪನೆಯ ಬದಲಾಗಿ ಸಂಶೋಧನಾ ಪ್ರಶ್ನೆ ಎಂಬುದನ್ನು ಬಳಸುವುದು ಉಪಯುಕ್ತವಾಗುತ್ತದೆ. ಏಕೆ ಕರಾವಳಿ ಪ್ರದೇಶಗಳಲ್ಲಿ ಸಾಮುದಾಯಿಕ ಘರ್ಷಣೆಗಳು ಹೆಚ್ಚಾಗುತ್ತಿವೆ? ಕನ್ನಡ ಸುದ್ದಿ ಮಾಧ್ಯಮಗಳ ಭಾಷೆಯಲ್ಲಿ ಗಮನಾರ್ಹ ಪಲ್ಲಟವಾಗುತ್ತಿದೆಯೇ ? ಏಕೆ ? ಅದರ ಪರಿಣಾಮಗಳೇನು ? ಭಾರತದಲ್ಲಿ ಕಪ್ಪು ಹಣ ಪರಿಮಾಣವನ್ನು ಮತ್ತು ಪರಿಣಾಮವನ್ನು ಅಳೆಯಲು ಸಾಧ್ಯವೆ ? ಕನ್ನಡ ಬ್ಲಾಗ್‌ಗ ಆರಂಭವು ಕನ್ನಡ ಗುರುತಿನ ಮೇಲೆ, ಅದನ್ನು ನಾವು ಪರಿಭಾವಿಸಿಕೊಂಡಿರುವು ಮೇಲೆ ಬೀರುವ ಪರಿಣಾಮಗಳೇನು ? ಇತ್ಯಾದಿ ಪ್ರಶ್ನೆಗಳನ್ನು ರೂಪಿಸಿಕೊಂ ಸಂಶೋಧನೆಯ ಮೂಲಕ ನಾವು ಉತ್ತರವನ್ನು ಹುಡುಕಿ ಜ್ಞಾನವನ್ನು ಉತ್ಪಾದಿಸ ಸಾಧ್ಯ. ಆದ್ದರಿಂದ ನನ್ನ ದೃಷ್ಟಿಯಲ್ಲಿ ನಾವು ಬಳಸುವ ಸಂಶೋಧನೆ ಎಂದು ಹೇಳು ಪುಸ್ತಕಗಳಲ್ಲಿ ಸಾಮಾನ್ಯವಾಗಿ ಕಾಣುವ ಉಹಾಸಿದ್ಧಾಂತ, ಪ್ರಾಕಲ್ಪನೆ ಇತ್ಯಾದಿಗಳ ಬದಿಗಿಟ್ಟು ನಾವು ಯಾವ ಪ್ರಶ್ನೆಗೆ/ಗಳಿಗೆ ಈ ಸಂಶೋಧನೆಯ ಮೂಲಕ ಉತ್ತರವ ಹುಡುಕುತ್ತಿದ್ದೇವೆ ಎಂದು ಸ್ಪಷ್ಟಪಡಿಸಿಕೊಳ್ಳುವುದು ಉತ್ತಮ.

**ಜ್ಞಾನವೂ ಆತ್ಯಂತಿಕವಲ್ಲ**

ಮೂಲ ಪ್ರಶ್ನೆಗೆ ಮತ್ತೆ ಹಿಂದಿರುಗುವುದಾದರೆ, ಸತ್ಯವನ್ನು ಆತ್ಯಂತಿಕವಾ ನೋಡುವುದು ಸರಿಯಲ್ಲ ಎನ್ನುವುದಾದರೆ ಜ್ಞಾನ ಎಂಬ ಮತ್ತೊಂದು ಪದವ ಸಂಶೋಧನೆಯ ವ್ಯಾಖ್ಯಾನದಲ್ಲಿ ಅದರ ಬದಲಿಗೆ ಸೇರಿಸಿದ ತಕ್ಷಣ ಸಮ ಬಗೆಹರಿಯುವುದಿಲ್ಲ. ಜ್ಞಾನವೂ ಆತ್ಯಂತಿಕವಲ್ಲ. ನಾವು ಕಂಡುಕೊಂಡಿರುವ ಜ್ಞಾ (ಅಂದರೆ ನಾವು ಹಾಕಿಕೊಂಡಿದ್ದ ಸಂಶೋಧನಾ ಪ್ರಶ್ನೆಗೆ ದೊರಕಿರುವ ಉತ್ತರ) ನಾ ಅನುಸರಿಸಿದ ಎಪಿಸ್ಟಮಲಾಜಿಕಲ್ ಚೌಕಟ್ಟು, ಸೈದ್ಧಾಂತಿಕ ಚೌಕಟ್ಟು, ನಾ ವಿಶ್ಲೇಷಿಸಿರುವ ಆಕರಗಳು (ಅವುಗಳ ವ್ಯಾಪ್ತಿ, ಸಂಖ್ಯೆ, ಪರಿಮಾಣ ಮ ಅವುಗಳನ್ನು ಆಯ್ಕೆಮಾಡಿಕೊಂಡ ಮಾನದಂಡ), ವಿಶ್ಲೇಷಣೆಗೆ ಬಳಸಿದ ವಿಧಾನ/ಗ ಇವುಗಳಿಗೆ ಅನುಗುಣವಾಗಿರುತ್ತದೆ. ಇವುಗಳಲ್ಲಿ ಯಾವುದೊಂದು ವ್ಯತ್ಯಾಸವಾದರ ನಾವು ಕಂಡುಕೊಂಡ ಉತ್ತರವೂ ಬದಲಾಗುತ್ತಿತ್ತು. ಆದ್ದರಿಂದ ಈ ಜ್ಞಾನವೂ ಕೂ ಆತ್ಯಂತಿಕವಲ್ಲ ಎಂಬ ಎಚ್ಚರ ನಮಗೆ ಇರಬೇಕಾಗುತ್ತದೆ. ಮತ್ತು ನಮ್ಮ ಸಂಶೋಧನೆ ಎಪಿಸ್ಟಮಲಾಜಿಕಲ್ ಚೌಕಟ್ಟು, ಸೈದ್ಧಾಂತಿಕ ಚೌಕಟ್ಟು, ವಿಧಾನ, ಆಕರಗ ಸ್ವರೂಪ/ಆಯ್ಕೆ, ಉದ್ದೇಶ/ಸಂಶೋಧನಾ ಪ್ರಶ್ನೆ ಇವುಗಳನ್ನು ವಿವರವಾ ಸಂಶೋಧನಾ ವರದಿಯಲ್ಲಿ ಮಂಡಿಸಬೇಕಾಗುತ್ತದೆ.

ಸಂಶೋಧನೆಯಲ್ಲಿ ಈ ರೀತಿಯ ಎಚ್ಚರ ಇಲ್ಲದಿದ್ದರೆ ಸಾಮಾಜ ಅನಾಹುತಗಳಾಗುತ್ತವೆ. ಆ ರೀತಿಯ ಸಾಕಷ್ಟು ಅನಾಹುತಗಳನ್ನು ನಾವು ಕಾಣಬಹುದ ಉದಾಹರಣೆಗೆ, ಯಾರೊ ಒಬ್ಬರು ಭಾರತದಲ್ಲಿ ಬ್ರಿಟಿಷರು ಬರುವುದಕ್ಕೆ ಮುಂ ಜಾತಿವ್ಯವಸ್ಥೆ ಇರಲಿಲ್ಲ ಎಂದು ಊಹಾ ಸಿದ್ಧಾಂತ ಇಟ್ಟುಕೊಂಡು ಸಂಶೋಧನೆ ಹೊರಡುತ್ತಾರೆ. ಸಂಶೋಧನೆ ಮುಗಿಯುವ ಮುಂಚೆಯೇ ಆ ಊಹಾ ಸಿದ್ಧಾಂತವ ಸರಿ ಎಂದು ವಾದಿಸಲು ಹೊರಡುತ್ತಾರೆ, ಮತ್ತು ತಮ್ಮ ವಾದವನ್ನು ಸಮರ್ಥಿಸು ಅಂಶಗಳನ್ನಷ್ಟೇ ತಮ್ಮ ಸಂಶೋಧನೆಯಲ್ಲಿ ಕಾಣುತ್ತಾರೆ (ಅದಕ್ಕೆ ವಿರುದ್ಧವಾ ಅಂಶಗಳನ್ನು ನೋಡುವುದಕ್ಕೆ ಅವರ ನಂಬಿಕೆ ಅವರಿಗೆ ದಾರಿ ಮಾಡಿಕೊಡುವುದಿಲ್ಲ ಅದನ್ನೇ ತೀರ್ಮಾನವೆಂದು ಭಾವಿಸುತ್ತಾರೆ. ಈ ರೀತಿಯ ತಪ್ಪುಗಳು - ಒಂದ ಸಂಶೋಧನೆಯಲ್ಲಿ ಎಪಿಸ್ಟಮಲಾಜಿಕಲ್ ಮತ್ತು ಸೈದ್ಧಾಂತಿಕ ಜಗಿತಗಳು; ಊ ಸಿದ್ಧಾಂತವೆಂದು ಭಾವಿಸಿ ಸಂಶೋಧನೆಗೆ ಮುಂಚೆಯೇ ಅದನ್ನು ತೀರ್ಮಾನವೆಂ ಭಾವಿಸಿಕೊಳ್ಳುವುದು; ಅದಕ್ಕೆ ಅನುಗುಣವಾದದ್ದನ್ನು ಮಾತ್ರ ಹೆಕ್ಕಿ ಆಕರವಾ ಕೊಳ್ಳುವುದು, ಅಥವಾ ಅದಕ್ಕೆ ವಿರುದ್ಧವಾದದ್ದು, ವಿಪರೀತವಾದದ್ದು ದೊರಕಿದ ಅದನ್ನು ಕಾಣದೆ ಇರುವಂತಹ ತಪ್ಪುಗಳು ಇವೆಲ್ಲವೂ ಇಂದು ಸಂಶೋಧನೆ ಕ್ಷೇತ್ರದಲ್ಲಿ ರಾರಾಜಿಸುತ್ತಿದೆ.

ಇಂದು ೨೧ನೇ ಶತಮಾನವನ್ನು ಜ್ಞಾನ ಆರ್ಥಿಕತೆ ಎಂದು ಕರೆಯುತ್ತಿದ್ದಾ ಜ್ಞಾನವನ್ನು ಬಂಡವಾಳ ಎಂದು ಪರಿಗಣಿಸಲಾಗುತ್ತಿದೆ. ಈ ಸಂದರ್ಭದಲ್ಲಿ ಮ ಸಂಶೋಧನೆಗೆ, ಉನ್ನತಶಿಕ್ಷಣಕ್ಕೆ ಪ್ರಾಶಸ್ತ್ಯ ದೊರಕುತ್ತಿದೆ. ಈ ಸಂದರ್ಭದಲ್ಲಿ ನಾ ನಮ್ಮ ಜ್ಞಾನದ/ಅರಿವಿನ/ತಿಳುವಳಿಕೆಯ ಉತ್ಪಾದನೆಯ ನೆಲೆಯಾದ ಸಂಶೋಧನೆ ಬಗ್ಗೆ ಕೆಲವು ಮೂಲಭೂತ ಪ್ರಶ್ನೆಗಳನ್ನು ಕೇಳಿಕೊಂಡು, ಅದಕ್ಕೆ ಉತ್ತರಗಳ ರೂಪಿಸಿಕೊಳ್ಳಬೇಕಾಗಿದೆ. ಏಕೆಂದರೆ ಈ ಪುಟ್ಟ ಲೇಖನದಲ್ಲಿ ಎತ್ತಿರುವ ಪ್ರಶ್ನೆಗ ಸರ್ವಪರಿಹಾರಿ ಅಲ್ಲ. ಇವುಗಳು ಮಾನವಿಕ ಮತ್ತು ಸಮಾಜವಿಜ್ಞಾನಗಳಲ್ಲಿನ ನ ಕೆಲವು ವರ್ಷಗಳ ಕೆಲಸದ ಹಿನ್ನೆಲೆಯಲ್ಲಿ ರೂಪಿತವಾದ ಕೆಲವೇ ಅಂಶ ಹಿನ್ನೆಲೆಯಲ್ಲಿನ ಕಿರುಟಿಪ್ಪಣಿ ಮಾತ್ರ.

**ಡಾ|| ತಾರಕೇಶ್ವರ್ ವಿ.ಬಿ.**
ಭಾಷಾಂತರ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ - ಹಂಪಿ. ವಿದ್ಯಾರಣ್ಯ - ೫೮೩೨೭೬

ಶುಭಾಶಯಗಳು
ಸಮಾಜ ಪುಸ್ತಕಾಲಯ
ಶಿವಾಜಿ ಬೀದಿ, ಧಾರವಾಡ - 580 001
ದೂರವಾಣಿ : 0836-2791616
ಶಾಖೆ : ಕೊಪ್ಪೀಕರ ಬೀದಿ, ಹುಬ್ಬಳ್ಳಿ - 580 020

# “ನಾನು ವಿಜ್ಞಾನಿಯಾಗಿದ್ದು ಹೇಗೆ?”

## – ರೊದ್ದಂ ನರಸಿಂಹ

**ಟಿ. ಆರ್. ಅನಂತರಾಮು**

ವಾಸ್ತವವಾಗಿ ಇದು ಶುರುವಾದದ್ದು ಮನೆಯಲ್ಲೇ. ನಮ್ಮ ತಂದೆ ಚಿಕ್ಕ ಪಟ್ಟಣವೊಂದರಿಂದ ಬಂದು, ಮೊದಲು ಪದವಿ ಪಡೆದವರ ಪೈಕಿ ಒಬ್ಬರು. ಅಲಹಾಬಾದಿನಲ್ಲಿ ಬೋಧಿಸುತ್ತಿದ್ದ (ಬೆಂಗಳೂರಿನಿಂದ ಸಾವಿರಾರು ಕಿಲೋಮೀಟರಿಗೂ ಹೆಚ್ಚು ದೂರವಿರುವ) ಭೌತವಿಜ್ಞಾನದ ಮಹಾಗುರು ಮೇಘನಾದ ಸಹಾ ಅವರ ಬಳಿ ಅಧ್ಯಯನ ಮಾಡಲು ಹೋದರು. ಅಲ್ಲಿಂದ ಸ್ನಾತಕೋತ್ತರ ಪದವಿ ಪಡೆದು ಮರಳಿ, ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಅಧ್ಯಾಪಕರಾದರು. ಅವರ ಕೊನೆಯ ದಿನಗಳಲ್ಲಿ ವಿಜ್ಞಾನವನ್ನು ವ್ಯಾಪಕವಾಗಿ ಭಾರತದ ಈ ಭಾಗದ ಭಾಷೆಯಾದ ಕನ್ನಡದಲ್ಲಿ ಬರೆದರು. (ರೊದ್ದಂ ನರಸಿಂಹ ಅವರ ತಂದೆ ಪ್ರೊ॥ ಆರ್. ಎಲ್. ನರಸಿಂಹಯ್ಯ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಭೌತವಿಜ್ಞಾನದ ಅಧ್ಯಾಪಕರು. ನಕ್ಷತ್ರದರ್ಶನ, ಶಬ್ದ ಮುಂತಾದ ಕನ್ನಡ ವಿಜ್ಞಾನ ಕೃತಿ ರಚಿಸಿ ಮುಂದಿನ ತಲೆಮಾರಿನ ವಿಜ್ಞಾನ ಲೇಖಕರಿಗೆ ಆದರ್ಶಪ್ರಾಯರಾಗಿದ್ದರು.) ನೇರವಾಗಿ ಅವರಿಂದ ಭೌತವಿಜ್ಞಾನವನ್ನಾಗಲಿ, ವಿಜ್ಞಾನವನ್ನಾಗಲಿ ನಾನು ಕಲಿತದ್ದು ತುಂಬ ಕಡಿಮೆ. ಅವರ ನಡೆ, ಪ್ರವೃತ್ತಿ, ವೈಜ್ಞಾನಿಕವಾಗಿ ಆಧುನಿಕ ಬಗೆಯದು. ಸಾಮಾಜಿಕವಾಗಿ ಉದಾರ ನೀತಿಯದು; ಸಾಂಸ್ಕೃತಿಕವಾಗಿ ಹಳೆಯ ಸಂಪ್ರದಾಯಕ್ಕೆ ಸೇರಿದ್ದು. ಇವು ನನಗೆ ಮೂಲಭೂತವೆನ್ನಬಹುದಾದ ಅಂಶಗಳನ್ನು ಕಲಿಸಿದುವು. ನನ್ನ ತಾಯಿ ಹತ್ತನೆಯ ವರ್ಷಕ್ಕೆ ಕಾಲಿಟ್ಟ ಮೇಲೆ ಶಾಲೆಗೆ ಹೋದವಳಲ್ಲ. ಆದರೆ ಸಾಕಷ್ಟು ಚೆನ್ನಾಗಿ ಓದಿಕೊಂಡಿದ್ದ ಸುಸಂಸ್ಕೃತೆ, ಆತ್ಮವಿಶ್ವಾಸದಿಂದ ಕೂಡಿದ ವ್ಯಕ್ತಿತ್ವ ಆಕೆಯದು. ನಾವು ಮಲಗುವ ಮುನ್ನ 'ದೇವರೇ ನಮಗೆ ಬುದ್ಧಿ ಕೊಡು, ಜ್ಞಾನ ನೀಡು' ಎಂದು ಕೇಳಿಕೊಳ್ಳುವುದನ್ನು ನಿತ್ಯವೂ ಪಠಿಸುವಂತೆ ಮಾಡಿದ್ದಳು.

ಶಾಲೆಯಲ್ಲಿ ಅತ್ಯುತ್ತಮ ಶಿಕ್ಷಕರ ಸಾನ್ನಿಧ್ಯದಲ್ಲಿ ಕಲಿಯುವ ಅದೃಷ್ಟ ನನ್ನದಾಗಿತ್ತು. ಅವರಲ್ಲೊಬ್ಬರು, ನೊಬೆಲ್ ಪ್ರಶಸ್ತಿ ಪಡೆದಿದ್ದ ಸಿ. ವಿ. ರಾಮನ್ ಅವರನ್ನು ನಮ್ಮ ಶಾಲೆಗೆ ಕರೆತರುವಲ್ಲಿ ಸಫಲರಾಗಿದ್ದರು. ಭಾರತದ ವಿಜ್ಞಾನ ಕ್ಷೇತ್ರದಲ್ಲಿ ರಾಮನ್ ಅವರದು ಆಗ ದೊಡ್ಡ ಹೆಸರು. ಆ ದಿನ ಅವರು ತಮ್ಮ ಕಾರ್ಯದ ಬಗ್ಗೆ ನವಿರು ಹಾಸ್ಯ ಮತ್ತು ಚೈತನ್ಯಭರಿತ ಮಾತುಗಳನ್ನಾಡಿದರು. ಇಡೀ ಪ್ರೇಕ್ಷಕ ವರ್ಗ ಮಂತ್ರಮುಗ್ಧವಾಗಿ ಕುಳಿತಿತ್ತು – ವಿದ್ಯಾರ್ಥಿ ಮತ್ತು ಶಿಕ್ಷಕರೂ ಸೇರಿದಂತೆ. ರಾಮನ್ ಅವರ ಭೇಟಿಯನ್ನು ವ್ಯವಸ್ಥೆಗೊಳಿಸಿದ್ದು ಕೆ.ವಿ.ಆರ್. ಎಂಬ ನಮ್ಮ ಅಧ್ಯಾಪಕರು, ನನಗೆ ಸ್ಫೂಲವಾಗಿ ಮತ್ತು ಪ್ರಾಮಾಣಿಕವಾಗಿ ಹೇಗೆ ಬರೆಯಬೇಕೆಂಬುದನ್ನು ಕಲಿಸಿಕೊಟ್ಟಿದ್ದರು. ಆಗ ಎಷ್ಟೋ ಪರೀಕ್ಷೆಗಳನ್ನು ನಾವು ಬರೆಯುವಾಗ ಒಮ್ಮೊಮ್ಮೆ ಎಂಥ ಪ್ರಶ್ನೆಗಳಿರುತ್ತಿದ್ದವೆಂದರೆ ''ಸೌರವ್ಯೂಹದಲ್ಲಿರುವ ಗ್ರಹಗಳ ಸಂಖ್ಯೆ ಎಷ್ಟು?'' ಎಂಬಂತಹವು. ನಾನು 'ಒಂಬತ್ತು ಗ್ರಹಗಳು' ಎಂದಷ್ಟೇ ಬರೆಯುತ್ತಿದ್ದೆ. ಗ್ರಹಗಳ ಹೆಸರುಗಳನ್ನು ಬರೆಯುತ್ತಿರಲಿಲ್ಲ ಎಂಬ ಕಾರಣಕ್ಕಾಗಿ ನಮ್ಮ ಅಧ್ಯಾಪಕರು ಅಸಂತೋಷಗೊಳ್ಳುತ್ತಿದ್ದರು. ನನಗೆ ಇದು ಸರಿಯಲ್ಲ ಎನ್ನಿಸುತ್ತಿತ್ತು. ಏಕೆಂದರೆ ಪ್ರಶ್ನೆಯಲ್ಲಿ 'ಗ್ರಹಗಳ ಹೆಸರು ಬರೆಯಿರಿ' ಎಂದು ಕೇಳಿರಲಿಲ್ಲ. ಅಂಥ ಸಂದರ್ಭದಲ್ಲಿ ಕೆ.ವಿ.ಆರ್. ನನಗೆ ಬೆಂಬಲ ನೀಡುತ್ತಿದ್ದರು. ನಮ್ಮ ಬಾಂಧವ್ಯ ಬೆಳೆದದ್ದು ಹೀಗೆ. ಆದರೆ ಎಂದೂ ಅತ್ಯಂತ ನಿಕಟವಾಗಿರಲಿಲ್ಲ; ಅಭಿಮಾನ ಮತ್ತು ಗೌರವಕ್ಕೆ ಎಂದೂ ಚ್ಯುತಿಯಾಗಿರಲಿಲ್ಲ. ಇನ್ನೊಬ್ಬ ಅಧ್ಯಾಪಕರು ತುಂಬ ನಿಕಟವಾದರು. ಕೆಲವೊಮ್ಮೆ ನನ್ನನ್ನು, ನನ್ನ ಕೆಲವು ಸಹಪಾಠಿಗಳನ್ನು ಕಾಫಿಗಾಗಿ ಕರೆದೊಯ್ಯುತ್ತಿದ್ದರು. ಕುರುಕುತಿಂಡಿ ಕೊಡಿಸುತ್ತಿದ್ದರು, ಮಾತಿಗೆ ಎಳೆಯುತ್ತಿದ್ದರು. ಒಮ್ಮೆ ಅವರು ಎರಡು ಪುಸ್ತಕಗಳನ್ನು ನನ್ನ ಕೈಗಿತ್ತರು. 'ಲೈವ್ಸ್ ಆಫ್ ಗ್ರೇಟ್ ಸೈಂಟಿಸ್ಟ್ಸ್' ಎಂಬುದು ಅದರಲ್ಲೊಂದು. ಅದು ವಿಜ್ಞಾನದ ಅಪರಿಚಿತ ಬೌದ್ಧಿಕ ಪ್ರಪಂಚಕ್ಕೆ (ಪಾಶ್ಚಾತ್ಯ) ನನ್ನ ಕಣ್ಣು ತೆರೆಸಿತು. ಒಡನೆಯೇ ನನಗೆ ಅದು ಆಸಕ್ತಿಯನ್ನು ಕೆರಳಿಸಿತು. ಇನ್ನೊಂದು ಪುಸ್ತಕ ಲೆವಿಸ್ ಕರೋಲ್‌ನ 'ಅಲೀಸ್ ಇನ್ ವಂಡರ್‌ಲ್ಯಾಂಡ್' ಎಂಬುದರ ಕನ್ನಡ ಅವತರಣಿಕೆ. ಅದೂ ಕೂಡ ನನಗೆ ಖುಷಿಕೊಟ್ಟಿತು. ನನಗೆ ಈ ಪುಸ್ತಕಗಳು ಅಷ್ಟೊಂದು ಆಸಕ್ತಿಯನ್ನು ಕೆರಳಿಸುತ್ತವೆಂಬುದು ಬಿ.ಎಲ್.ಎ. ಅವರಿಗೆ ಹೇಗೆ ಗೊತ್ತಿತ್ತೋ ನನಗೆ ತಿಳಿಯದು.

೧೯೪೯ರಲ್ಲಿ ನಾನು ವಿಶ್ವವಿದ್ಯಾನಿಲಯವನ್ನು ಪ್ರವೇಶಿಸುವ ಹೊತ್ತಿಗೆ ಭೌತವಿಜ್ಞಾನವನ್ನೇ ಅಧ್ಯಯನಕ್ಕಾಗಿ ಆರಿಸಿಕೊಳ್ಳಬೇಕೆಂಬ ಗಂಭೀರ ಚಿಂತನೆಯಲ್ಲಿದ್ದೆ. ಆದರೆ ಆ ಹೊತ್ತಿಗೆ ದಕ್ಷಿಣ ಭಾರತದಲ್ಲಿ ಬೀಸುತ್ತಿದ್ದ ರಾಜಕೀಯ ಮತ್ತು ಸಾಮಾಜಿಕ ಬಿರುಗಾಳಿ (ರಕ್ತಪಾತರಹಿತ) ಯಿಂದಾಗಿ ಇದು ಸಾಧ್ಯವಾಗಲಿಲ್ಲ. ಕೊನೆಗೆ ಬೆಂಗಳೂರಿನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ಮೆಕ್ಯಾನಿಕಲ್ ಇಂಜಿನಿಯರಿಂಗ್ ಕೋರ್ಸ್‌ಗೆ ಸೇರಿಕೊಂಡೆ. ಆ ದಿನಗಳಲ್ಲಿ ನನಗೆ ಸ್ಫೂರ್ತಿ ನೀಡಿದ ವಿಚಾರವೆಂದರೆ ಭಾರತೀಯ ವಿಜ್ಞಾನ ಮಂದಿರಕ್ಕೆ ನೀಡಿದ ಭೇಟಿ. ಆ ದಿನ ಭೇಟಿಯಾಗುವವರಿಗೆ ಸಂಸ್ಥೆ ತೆರೆದಿತ್ತು.

ಏರೋನಾಟಿಕಲ್ ಇಂಜಿನಿಯರಿಂಗ್ ವಿಭಾಗದ ಚೌಕದಲ್ಲಿ (ಅದನ್ನು ಆಗತಾನೆ ತೆರೆಯಲಾಗಿತ್ತು) ಎರಡನೇ ಮಹಾಯುದ್ಧದಲ್ಲಿ ಬಳಸಿದ ಅತ್ಯಾಕರ್ಷಕವಾದ ಸ್ಪಿಟ್‌ಫೈರ್ ಎಂಬ ವಿಮಾನವಿತ್ತು. ಇದನ್ನು ಸಾಂದರ್ಭಿಕವಾಗಿ ಭಾರತೀಯ ವಾಯುದಳದಿಂದ ಎರವಲು ಪಡೆಯಲಾಗಿತ್ತು. ನಾನು ವಿಮಾನವನ್ನು ಬಹು ಹತ್ತಿರದಿಂದ ನೋಡಿದ್ದು ಅದೇ ಮೊದಲು. ಅದು ನನಗೆ ಬೇರೊಂದು ಪ್ರಪಂಚವನ್ನೇ ತೆರೆಯಿತು. ನನ್ನ ಗಮನವನ್ನು ಸೆಳೆದದ್ದು ಸ್ಪಿಟ್‌ಫೈರ್‌ನ ನವಿರಾದ ಆಕರ್ಷಕವಾದ ಹೊರಭಾಗ (ಅದರಲ್ಲೂ ಅದರ ಸುಂದರ ಅಂಡಾಕೃತಿಯ ರೆಕ್ಕೆ). ಆದರೆ ಅದರ ಒಳಾವರಣವನ್ನು ನೋಡಿದಾಗ ಅದೆಷ್ಟು ಸಂಕೀರ್ಣ ಎನ್ನಿಸಿತು. ಒಳಭಾಗದಲ್ಲಿದ್ದುದು ಕೇಬಲ್, ಪೈಪು,



*೧೯೪೯ರಲ್ಲಿ ನಾನು ವಿಶ್ವವಿದ್ಯಾನಿಲಯವನ್ನು ಪ್ರವೇಶಿಸುವ ಹೊತ್ತಿಗೆ ಭೌತವಿಜ್ಞಾನವನ್ನೇ ಅಧ್ಯಯನಕ್ಕಾಗಿ ಆರಿಸಿಕೊಳ್ಳಬೇಕೆಂಬ ಗಂಭೀರ ಚಿಂತನೆಯಲ್ಲಿದ್ದೆ. ಆದರೆ ಆ ಹೊತ್ತಿಗೆ ದಕ್ಷಿಣ ಭಾರತದಲ್ಲಿ ಬೀಸುತ್ತಿದ್ದ ರಾಜಕೀಯ ಮತ್ತು ಸಾಮಾಜಿಕ ಬಿರುಗಾಳಿ (ರಕ್ತಪಾತರಹಿತ) ಯಿಂದಾಗಿ ಇದು ಸಾಧ್ಯವಾಗಲಿಲ್ಲ. ಕೊನೆಗೆ ಬೆಂಗಳೂರಿನ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ಮೆಕ್ಯಾನಿಕಲ್ ಇಂಜಿನಿಯರಿಂಗ್ ಕೋರ್ಸ್‌ಗೆ ಸೇರಿಕೊಂಡೆ. ಆ ದಿನಗಳಲ್ಲಿ ನನಗೆ ಸ್ಫೂರ್ತಿ ನೀಡಿದ ವಿಚಾರವೆಂದರೆ ಭಾರತೀಯ ವಿಜ್ಞಾನ ಮಂದಿರಕ್ಕೆ ನೀಡಿದ ಭೇಟಿ. ಆ ದಿನ ಭೇಟಿಯಾಗುವವರಿಗೆ ಸಂಸ್ಥೆ ತೆರೆದಿತ್ತು.*

ಡೆಕ್ಸ್, ಕವಾಟಗಳ ಗೊಂಡಾರಣ್ಯ ಎನ್ನಿಸಿತು. ಈ ವಿಮಾನದ ಚಿತ್ತಾಕರ್ಷಕ ಮೇಲ್ಮೈ ಕಳಗೆ (ಗಣಿತವಿಲ್ಲದೆ ಇದು ಸಾಧ್ಯವಾಗದೆಂದೇ ಭಾವಿಸಿದೆ) ಅದ್ಭುತವಾದ ಸಂಕೀರ್ಣ ತಂತ್ರಜ್ಞಾನ ಅಡಗಿಕೊಂಡು ನನ್ನನ್ನು ಚಕಿತಗೊಳಿಸಿತು. ಈ ಎರಡನ್ನೂ ಆಗ್ಗೆ ತಮ್ಮ ಕೌಶಲದಿಂದ ರೂಪಿಸಿದ ಆ ಜನರ ಬುದ್ಧಿವಂತಿಕೆಯನ್ನು ಮನಸಾರೆ ಪ್ರಶಂಸಿಸಿದೆ.

ನಾನು ಪದವಿಯನ್ನು ಪಡೆದ ನಂತರ ಏರೋನಾಟಿಕ್ಸ್ ಅಧ್ಯಯನ ಮಾಡಬೇಕೆಂಬ ಬಯಕೆಯಾಯಿತು. ಆದರೆ ಆ ಕಾಲದಲ್ಲಿ ಇದನ್ನು ಯಾರೂ ಅಷ್ಟಾಗಿ ಆಸಕ್ತಿದಾಯಕ ಕ್ಷೇತ್ರವೆಂದು ಪರಿಗಣಿಸಿರಲಿಲ್ಲ. ಭಾರತೀಯ ವಿಜ್ಞಾನ ಮಂದಿರದಲ್ಲಿದ್ದ ನಮ್ಮ ಕುಟುಂಬದ ಗೆಳೆಯರೊಡನೆ ಮಾತನಾಡೆಂದು ನನ್ನ ತಂದೆ ನೀಡಿದ ಸಲಹೆಯಂತೆ ಮಾಡಿದೆ. ಅವರು ''ಮೂರ್ಖನಾಗಬೇಡ'' ಎಂದು ಕಡ್ಡಿ ತುಂಡಾದಂತೆ ಹೇಳಿದರು. ''ನೀನು ಮಾಡಬೇಕಾದ ಸರಿಯಾದ ಕೆಲಸವೆಂದರೆ ಇಂಡಿಯನ್ ರೈಲ್ವೇ ಸರ್ವಿಸ್‌ನಲ್ಲಿ ಅಥವಾ ಬರ್ಮಾ ಷೆಲ್ (ಬೆಂಗಳೂರಿನಲ್ಲಿ ಈ ದಿನಗಳಲ್ಲಿ ಸಾಫ್ಟ್‌ವೇರ್ ಇಂಜಿನಿಯರುಗಳು ತೆಗೆದುಕೊಳ್ಳುವ ಜೇಬುತುಂಬಿದ ಸಂಬಳಕ್ಕೆ ಅದು ಸಮ) ಸೇರು'' ಎಂಬುದು ಅವರ ಇಂಗಿತ. ಸಪ್ಪೆಮುಖ ಮಾಡಿಕೊಂಡು, ನನ್ನ ಗೆಳೆಯರ ಸಲಹೆಯ ಮೇರೆಗೆ ಮತ್ತೆ ನನ್ನ ತಂದೆಯ ಬಳಿಗೆ ಹೋದೆ. ಅವರು ಸರಳವಾದ ಪ್ರಶ್ನೆಯೊಂದನ್ನು ಕೇಳಿದರು.

''ಈಗ ನೀನು ಏನು ಮಾಡಬೇಕೆಂದಿರುವೆ ?''

''ಏರೋನಾಟಿಕ್ಸ್ ಮಾಡಬೇಕೆಂಬುದೇ ನನ್ನ ಇಚ್ಛೆ'' ನಾನು ಹೇಳಿದೆ.

''ಹಾಗಾದರೆ ಸರಿ, ಮುಂದುವರಿ'' ಎಂದರು. ಗಂಟೆಗಟ್ಟಲೆ ಅಪ್ಪನೊಡನೆ ಚರ್ಚಿಸಬೇಕೆಂದು ನಾನು ಭಾವಿಸಿದ್ದೆ. ಎರಡೇ ನಿಮಿಷಗಳಲ್ಲಿ ಸಮಸ್ಯೆ ಮುಗಿದೇ ಹೋಯಿತು. ಭಾರತೀಯ ವಿಜ್ಞಾನ ಮಂದಿರವನ್ನು ಸೇರಿಯಾಯಿತು. ಇಲ್ಲಿ ಕಳೆದ ಐವತ್ತು ವರ್ಷಗಳಿಂದ ಒಂದಲ್ಲ ಒಂದು ಹುದ್ದೆಯಲ್ಲಿ ಉಳಿದುಕೊಂಡಿದ್ದೇನೆ.

ಸಂಸ್ಥೆಯಲ್ಲಿ ಮತ್ತೊಂದು ಹೊಸ ಜಗತ್ತನ್ನು ಪ್ರೊ|| ಸತೀಶ್ ಧವನ್ ಅವರು ನನಗಾಗಿ ತೆರೆದಿದ್ದರು. ಅವರು ಹೊಸ ಜಗತ್ತಿನ ಚೈತನ್ಯದಾಯಕ ಗಾಳಿಯ ಪ್ರತೀಕವಾಗಿದ್ದರು; ಕ್ಯಾಲಿಫೋರ್ನಿಯ ತಂತ್ರಜ್ಞಾನ ಸಂಸ್ಥೆಯಿಂದ ಪಿಎಚ್.ಡಿ. ಪದವಿ ಪಡೆದು ಬಂದಿದ್ದರು (ಕ್ಯಾಲ್‌ಟೆಕ್). ನಡೆಯಲ್ಲಿ ಸರಳಜೀವಿ, ಆದರೆ ಕೆಲಸದಲ್ಲಿ ಛಲಗಾರ (ಆಗ ಸಂಸ್ಥೆಯ ಬೇರೆ ಇಲಾಖೆಗಳಲ್ಲಿದ್ದ ಬೋಧಕರ ಪ್ರವೃತ್ತಿ ಇದಕ್ಕೆ ವಿರುದ್ಧವಾಗಿತ್ತು). ಒಂದು ರೀತಿಯಲ್ಲಿ ಸ್ಟಿಟ್ ಫ್ವರ್‌ನಂತೆಯೇ ಇವರೂ ಕೂಡ. ಅವರ ಪ್ರಯೋಗಾಲಯ ಎಲ್ಲೆಯರಿಯದ ವಿಜ್ಞಾನ, ತಂತ್ರಜ್ಞಾನಗಳ ಮಿಶ್ರಣ. ತಾವೇ ನಿರ್ಮಿಸಿದ ಸೂಪರ್‌ಸಾನಿಕ್ ಸುರಂಗವನ್ನು ಕಾರ್ಯಶೀಲವಾಗಿಸಲು ಅದರಲ್ಲಿ ಬಹುದೊಡ್ಡ ಕಂಪ್ರೆಸರ್ ಇಟ್ಟಿದ್ದರು (ಎಲೆಕ್ಟ್ರಾನಿಕ್ ಯುಗದ ಆ ಆರಂಭಿಕ ವರ್ಷಗಳಲ್ಲಿ). ಆ ಸುರಂಗದಲ್ಲಿ ಗ್ಯಾಲ್ವನೋ ಮಾಪಕವನ್ನು (ವಿದ್ಯುತ್ತನ್ನು ಗುರುತಿಸುವ ಮತ್ತು ಅಳೆಯುವ ಸಾಧನ) ದಾಖಲೆಗಾಗಿ ಬಳಸಿಕೊಳ್ಳಲಾಗಿತ್ತು. ಮುಂದೆ ಅವರು ಭಾರತದ ವಿಜ್ಞಾನದಲ್ಲಿ ದೊಡ್ಡ ನಾಯಕರಾಗಿ ಬೆಳೆಯುತ್ತ ಹೋದರು. ಬಾಹ್ಯಾಕಾಶ ಸಂಶೋಧನಾ ಸಂಸ್ಥೆಯನ್ನು ಹುಟ್ಟುಹಾಕಿದರು. ಇದು ತಂತ್ರಜ್ಞಾನದ ಅಭಿವೃದ್ಧಿಯ ಯಶಸ್ವೀ ಸಂಸ್ಥೆಯಾಗಿ ಬೆಳೆಯಿತು. ಧವನ್, ರಾಷ್ಟ್ರೀಯ ಬದ್ಧತೆಗಳೊಂದಿಗೆ ಭಾರಿ ವಿಜ್ಞಾನಕ್ಕೆ ಆದ್ಯತೆ ಕೊಡುವಾಗ ಸಣ್ಣ ವಿಜ್ಞಾನದ ಬಗ್ಗೆ ಅವರಿಗಿದ್ದ ಅತೀವ ಪ್ರೀತಿಯನ್ನು ಮಿಲನಗೊಳಿಸಿದರು. ಸಂಶೋಧನೆಗೆ ಬೇಕಾದ ಎಲ್ಲ ಉಪಕರಣಗಳು ಲಭ್ಯವಿಲ್ಲದಿದ್ದರೂ ಸಂಶೋಧನೆಯನ್ನು ಹೇಗೆ ಮಾಡ ಬಹುದೆಂಬುದನ್ನು ನಾನು ಅವರಿಂದ ಕಲಿತೆ. ಅವರ ಪ್ರಯೋಗಾಲಯದಲ್ಲಿ ತುಂಬ ಸುಂದರವಾದ ಸಣ್ಣ ಪುಟ್ಟ ಉಪಕರಣಗಳಿದ್ದವು. ಅದನ್ನು ಅವರು 'ಗಿಜ್ಮೋ' ಎನ್ನುತ್ತಿದ್ದರು. ನಾವೆಲ್ಲ ಆ ಸಂಗ್ರಹಕ್ಕೆ ಇನ್ನಷ್ಟು ಉಪಕರಣಗಳನ್ನು ಸೇರಿಸಿದೆವು. ಇದರಲ್ಲಿ ಸರಳವಾದ, ಒಂದು ಡಾಲರ್ ಮೌಲ್ಯದ ಒಂದು ಬಾಕ್ಸ್ ಕ್ಯಾಮೆರಾವೂ ಸೇರಿತ್ತು. ಆಸಿಲೋಸ್ಕೋಪ್ (ಎಲೆಕ್ಟ್ರಾನಿಕ್ ಸಾಧನ) ಸೃಷ್ಟಿಸುತ್ತಿದ್ದ ರೇಖೆಗಳನ್ನು ತ್ವರಿತಗತಿಯಲ್ಲಿ ದಾಖಲೆ ಮಾಡಲು ಇದು ಅವಶ್ಯಕವಾಗಿತ್ತು. ಇದರಿಂದ ದೊರೆತ ಕೆಲವು ಫಲಿತಾಂಶಗಳನ್ನು 'ಜರ್ನಲ್ ಆಫ್ ಫ್ಲೂಯಿಡ್ ಮೆಕ್ಯಾನಿಕ್ಸ್'ನಲ್ಲಿ ಪ್ರಕಟಿಸಿದೆವು.

ಎರಡು ವರ್ಷಗಳ ಕೊನೆಯಲ್ಲಿ ''ಇನ್ನಷ್ಟು ಕಲಿಯಬೇಕೆಂದರೆ ನೀನು ಕಾಲ್ಟೆಕ್‌ಗೆ ಹೋಗು'' ಎಂದು ಧವನ್ ಸೂಚಿಸಿದರು. ಈಗ ನಿಮಗೆ ವಿಸ್ಮಯ ಎನ್ನಿಸಬಹುದು. ಆಗ ವಿದೇಶಕ್ಕೆ ಹೋಗಲೊಲ್ಲದವರಲ್ಲಿ ನಾನೂ ಸೇರಿದ್ದೆ. ಅಲ್ಲದೆ ನನ್ನ ಬೆಂಗಳೂರಿನ ಗೆಳೆಯರ ತಿಕ್ಕಲು ಹೇಗಿತ್ತೆಂದರೆ ವಿಜ್ಞಾನದ ಅಧ್ಯಯನಕ್ಕಾಗಿ ವಿದೇಶಗಳಿಗೆ ಹಂಬಲಿಸದೆ ಭಾರತದಲ್ಲೇ ಉಳಿಯುವ ಹುಡುಗರನ್ನು ಕಂಡರೆ ಅವರಿಗೆಲ್ಲ ಭಾರೀ




ಕಾದಂಬರಿ ಸಾರ್ವಭೌಮ

**ಅ.ನ.ಕೃ.**

ಅವರ ಎಲ್ಲ ಕೃತಿಗಳು
ಸಾಗರ್ ಪ್ರಕಾಶನದಿಂದ
ಮರುಮುದ್ರಣವಾಗಿವೆ

✶

ಎಲ್ಲ ಪ್ರಮುಖ ಪುಸ್ತಕದ
ಅಂಗಡಿಗಳಲ್ಲಿ ದೊರೆಯುತ್ತವೆ




ಪುಟ : 822+14 ಬೆಲೆ : ರೂ. 650

**ಸಾಗರ್ ಪ್ರಕಾಶನ**

1679, 10ನೇ ಮುಖ್ಯ ರಸ್ತೆ, 5ನೇ 'ಎ' ಅಡ್ಡರಸ್ತೆ
ಬನಶಂಕರಿ 1ನೇ ಹಂತ, 2ನೇ ಘಟ್ಟ
ಬೆಂಗಳೂರು – 560 050, ಮೊಬೈಲ್ : 94484 94632

ಗೌರವ – ಇಲ್ಲಿ ಹೆಚ್ಚಿಗೆ ವೈಜ್ಞಾನಿಕ ಪ್ರಗತಿಯನ್ನು ಸಾಧಿಸದಿದ್ದರೂ. ಇವೆಲ್ಲದರ ಮಧ್ಯೆ ನಾನು ಕಾಲ್ಟೆಕ್ ಸೇರಿದೆ. ಆಗ ಧವನ್ ಅವರು ಏಕೆ ನನ್ನನ್ನು ಕಾಲ್ಟೆಕ್‌ಗೆ ಹೋಗಬೇಕೆಂದು ಒತ್ತಾಯಿಸಿದರೆಂಬುದು ತಿಳಿಯಿತು. ಅಲ್ಲಿ ಹ್ಯಾನ್ಸ್ ಲೆಪ್‌ಮನ್ ಎಂಬ, ಹಿಂದೆ ಧವನ್ ಅವರ ಹಿತೈಷಿಗಳಾಗಿದ್ದ ಅವರೊಡನೆ ಕೆಲಸ ಮಾಡುವ ಅವಕಾಶವಾಯಿತು. ಈ ಬದಲಾವಣೆಗೆ ಹೊಂದಿಕೊಳ್ಳಲು ಸುಮಾರು ಒಂದು ವರ್ಷವೇ ಬೇಕಾಯಿತು. ಏಕೆಂದರೆ ೧೯೫೦ರಲ್ಲಿ ಬೆಂಗಳೂರು ಮತ್ತು ಪಸೆಡೆನ ಧ್ರುವಗಳಷ್ಟು ದೂರ - ಭೌಗೋಳಿಕವಾಗಿ, ವೈಜ್ಞಾನಿಕವಾಗಿ, ಸಾಂಸ್ಕೃತಿಕವಾಗಿ ಹಾಗೆಯೇ ಆರ್ಥಿಕವಾಗಿ. ಆದರೆ ಮುಂದಿನ ಐದು ವರ್ಷಗಳು ನನ್ನ ಬದುಕಿನಲ್ಲಿ ತುಂಬ ಮಹತ್ವದ ವರ್ಷಗಳು. ಏಕೆಂದರೆ ಲೆಪ್‌ಮನ್ ಮತ್ತು ಕಾಲ್ಟೆಕ್ ಅತ್ಯಂತ ಸೌಹಾರ್ದವಾಗಿ ನನಗೆ ಇನ್ನೊಂದು ಪ್ರಪಂಚವನ್ನೇ ತೆರೆದಿದ್ದರು. ಪ್ರಸಕ್ತ ಜ್ಞಾನದ ಮುಂಚೂಣಿಯಲ್ಲಿ ಅಂತಾರಾಷ್ಟ್ರೀಯ ವಿಜ್ಞಾನದಲ್ಲಾಗುತ್ತಿದ್ದ ಪ್ರಗತಿಯನ್ನು ಕಾಣುವ ಅವಕಾಶ. ನನ್ನಂತಹ ತಿಕ್ಕಲು ವಿಷ್ಯದ ಸಸ್ಯಾಹಾರಿಯನ್ನು ಅವರು ಉದಾರವಾಗಿ ಪರಿಭಾವಿಸಿದರು. ಅವರ ಔದಾರ್ಯ ಎಷ್ಟಿತ್ತೆಂದರೆ ಪಸೆಡೆನ ನನಗೆ ಮೊದಲ ತೌರಾಗದಿದ್ದರೂ ಎರಡನೆಯದು ಎಂಬ ಭಾವನೆ ಹುಟ್ಟಿಸುವಷ್ಟು.



ಏನೇ ಆದರೂ ೧೯೬೨ರಲ್ಲಿ ನನಗೆ ಬೆಂಗಳೂರಿನ ಸೆಳೆತ ಹೆಚ್ಚಾಯಿತು. ಆಗಾಗ ಜಗತ್ತಿನ ಬೇರೆ ಬೇರೆ ಭಾಗಗಳಿಗೆ ಹೋಗುತ್ತಿದ್ದುದರ ಜೊತೆಗೆ ಬೆಂಗಳೂರೇ ನನ್ನ ತೌರೆಂಬುದನ್ನು (ಮೊದಲ) ಮತ್ತೆ ಕಂಡುಕೊಂಡೆ. ಅನಂತರ ೪೦ ವರ್ಷಗಳಲ್ಲಿ ನಾನು ಏನು ನಿರ್ಮಿಸಬಲ್ಲೆ, ಏನು ಮಾಡಬಲ್ಲೆ ಎಂಬುದರ ನಡುವೆ ಸಮತೋಲವೇರ್ಪಡಿಸಲು ಪ್ರಯತ್ನಿಸಿದ್ದೇನೆ. ಇವೆರಡರ ಹೊರತು ಬೇರಾವುದಕ್ಕೂ ನಾನು ಮಾರುಹೋಗಲಾರೆ – ಎಷ್ಟೋ ಸಲ ನಿರಾಶಾದಾಯಕ ಸಂದರ್ಭಗಳು ಎದುರಾಗಿದ್ದರೂ ಕೂಡ. ಈ ಹೊತ್ತಿಗೆ ಫ್ಲೂಯಿಡ್ ಡೈನಮಿಕ್ಸ್‌ನ ಪರಿಣತ ಎನ್ನುವ ಆತ್ಮವಿಶ್ವಾಸ ನನ್ನಲ್ಲಿ ಮೂಡಿತು. ಈ ಕ್ಷೇತ್ರದಲ್ಲಿ ಬೆಂಗಳೂರಿನಲ್ಲಿ ಏನು ಅನುಕೂಲವಿದೆ ಅಥವಾ ಯಾವ ಅನುಕೂಲವನ್ನು ಕಲ್ಪಿಸಿಕೊಳ್ಳಲು ಸಾಧ್ಯ ಎನ್ನುವುದನ್ನು ಯೋಚಿಸಿ, ಹೇಗೆ ಆಸಕ್ತಿದಾಯಕ ಸಂಶೋಧನೆ ಮಾಡಬಹುದು ಎಂಬುದರತ್ತಲೇ ನನ್ನ ಗಮನ. ಎಷ್ಟೋ ಸಲ ಇದು ನಿಧಾನವಾದ ಪ್ರಕ್ರಿಯೆ ಎನ್ನಿಸುತ್ತಿತ್ತು. ಆದರೆ ಸಾಧಿಸಬಹುದಾದ್ದು ಎಂಬ ವಿಶ್ವಾಸವಿತ್ತು. ಕೆಲವೇ ವರ್ಷಗಳ ಅವಧಿಯಲ್ಲಿ ಇಲ್ಲಿ ಅತ್ಯುತ್ತಮ ವಿದ್ಯಾರ್ಥಿಗಳ ಮತ್ತು ಸಹಾಯಕರ ತಂಡ ಸಿದ್ಧವಾಯಿತು. ತಾವು ಮಾಡುತ್ತಿದ್ದ ಕೆಲಸದಲ್ಲಿ ಬಹುಬೇಗ ಅವರು ಪರಿಣತರೆನ್ನಿಸಿಕೊಂಡರು. ಇವೆಲ್ಲ ನಮಗೆ ರೋಚಕ ಅನುಭವ ನೀಡಿದವು. ನಾವು ಕೈಗೊಂಡ ಸಂಶೋಧನೆಯ ಬಹುಪಾಲೆಲ್ಲವೂ ಹರಿವಿನಲ್ಲಾಗುವ (ಫ್ಲೋ) ಬದಲಾವಣೆ ಕುರಿತದ್ದು. ನಮ್ಮೆಲ್ಲರ ನಿತ್ಯ ಅನುಭವಕ್ಕೆ ಬಂದಂತೆ ತರಲದ (ಫ್ಲೂಯಿಡ್) ಹರಿವು ಸಾಲುಗೂಡಿರಬಹುದು ಇಲ್ಲವೇ ಪ್ರಕ್ಷುಬ್ಧವಾಗಿರಬಹುದು. ನಿಮ್ಮ ವಾಷ್ ಬೇಸಿನ್‌ನಲ್ಲಿ ನಲ್ಲಿ ತಿರುಗಿಸಿದೊಡನೆ ಇದನ್ನು ನೀವೇ ಗಮನಿಸಬಹುದು. ಯಾವ ಕಾರಣಕ್ಕೋ ಏನೋ ಒಂದು ಸ್ಥಿತಿಯಿಂದ ಮತ್ತೊಂದು ಸ್ಥಿತಿಗೆ ಹರಿವಿನಲ್ಲಾಗುವ ಬದಲಾವಣೆ ನನ್ನಲ್ಲಿ ವಿಶೇಷ ಕುತೂಹಲ ಹುಟ್ಟಿಸಿತು. ಈ ಬದಲಾವಣೆಗಳು ಭಗ್ಗನೆ ಆಗುವಂತಹುವೆ? ಇದ್ದಕ್ಕಿದ್ದಂತೆ ಆಗುವಂತಹವೇ? ಹರಿವು, ಫಲಕವನ್ನು ಹಿಮ್ಮೆಟ್ಟಿಸಿ ನುಗ್ಗುವಾಗ ಕುಸಿದು ಪ್ರಕ್ಷುಬ್ಧವಾಗುತ್ತದೆಯೆ? ಹಾಗಿದ್ದಲ್ಲಿ ಎಷ್ಟು ತ್ವರಿತವಾಗಿ? ಏಕೆ ಹೀಗಾಗುತ್ತದೆ? ಅಥವಾ ಕ್ರಮಾನುಗತವಾದ್ದೆ? ಹಾಗಿದ್ದಲ್ಲಿ ಯಾವ ಹಂತದಲ್ಲಿ? ಪ್ರಕ್ಷುಬ್ಧ ಸ್ಥಿತಿಯಿಂದ ಸಾಲುಗೂಡಿದಂತೆ ಹರಿಯುವ ಸ್ಥಿತಿಗೆ ಅದು ಮರಳಬಲ್ಲದೆ? ಈ ಬಗೆಯ ವಿಪರ್ಯಯ ಬದಲಾವಣೆಗಳನ್ನು ಅರ್ಥಮಾಡಿಕೊಳ್ಳುವುದೇ ಆಗ ತುಂಬ ಕ್ಲಿಷ್ಟವಾಗಿತ್ತು. ೧೯೬೦-೭೦ರ ದಶಕದಲ್ಲಿ ಬೆಂಗಳೂರಿನ ನಮ್ಮ ಪ್ರಯೋಗಾಲಯಕ್ಕೆ ಭೇಟಿಕೊಟ್ಟ ವಿದೇಶೀ ಪರಿಣತರೊಬ್ಬರು ಇದನ್ನು ನೋಡಿ 'ನಂಬಲಾರೆ' ಎಂದರು. ಬಹು ದೀರ್ಘಕಾಲ ನಾನು ಮತ್ತು ನನ್ನ ವಿದ್ಯಾರ್ಥಿ ತಂಡ ಆಸಕ್ತಿದಾಯಕವಾಗಿ ಮಾಡಿದ, ಒಪ್ಪಬಹುದಾದ ಸಂಶೋಧನಾ ಫಲಗಳು ಇವೆಂದು ಹೇಳಿದರೂ ಆತ ನಂಬದಾದ. ಇದರ ಜೊತೆಗೆ ಈಗ ಆಘಾತ ಅಲೆಗಳನ್ನೂ ಪತ್ತೆಹಚ್ಚಿದ್ದೆ. ಇದೂ ಕೂಡ ಇನ್ನೊಂದು ಬಗೆಯ ಸ್ಥಿತ್ಯಂತರ. ಇದು ಸೂಪರ್‌ಸಾನಿಕ್‌ನಿಂದ ಹಿಡಿದು ಸಬ್‌ಸಾನಿಕ್‌ವರೆಗಿನದು (ಸೂಪರ್‌ಸಾನಿಕ್ ಎಂದರೆ ಶಬ್ದದ ವೇಗಕ್ಕಿಂತ ಹೆಚ್ಚಾಗಿ ವೇಗವಾಗಿರುವುದು. ಸಬ್‌ಸಾನಿಕ್ ಎಂದರೆ ಶಬ್ದದ ವೇಗಕ್ಕಿಂತ ಕಡಿಮೆ ವೇಗವಾಗಿರುವುದು). ಇದೂ ಕೂಡ ಅಷ್ಟೇ ಆಸಕ್ತಿದಾಯಕವಾದದ್ದು. ಎಷ್ಟೋ ವರ್ಷಗಳವರೆಗೆ ನಾನು ಈ ಕಾರ್ಯದಲ್ಲೇ ಮಗ್ನನಾಗಿರುವಂತೆ ಮಾಡಿತು.

೧೯೮೦ರ ದಶಕದಲ್ಲಿ ನನಗೆ ಒಂದು ಅಂಶ ದೃಢವಾಯಿತು. ಫ್ಲೂಯಿಡ್ ಮೆಕ್ಯಾನಿಕ್ಸ್‌ನ ಸಮಸ್ಯೆಗೆ ಪರಿಹಾರ ಕಾಣುವ ವಿಚಾರದಲ್ಲಿ ಭಾರತೀಯ ವಿಜ್ಞಾನಿಗೆ ಅತ್ಯಂತ ಆಸಕ್ತಿದಾಯಕವಾದುದ್ದೆಂದರೆ ಮಾನ್ಸೂನ್. ಎಷ್ಟೋ ವರ್ಷಗಳ ಶ್ರಮದ ನಂತರ ಇದರ ಅಧ್ಯಯನಕ್ಕಾಗಿ ಬೆಂಗಳೂರಿನ ಈ ಸಂಸ್ಥೆಯಲ್ಲಿ ೧೯೮೨ರಲ್ಲಿ ಹೊಸ ವಾಯುಗೋಳ ಕೇಂದ್ರವನ್ನು ತೆರೆಯುವಲ್ಲಿ ಸಫಲರಾದೆವು (ಈಗಲೂ ಅದು ಸಾಗರಾಧ್ಯಯನ). ಆಗಿನಿಂದ ಅತ್ಯಂತ ಕುಶಲಮತಿಗಳಾದ ಈ ಕೇಂದ್ರದ ಪರಿಣತರು ಮಾನ್ಸೂನಿನ ಎಲ್ಲ ಅಂಶಗಳನ್ನೂ ಬುಡಮಟ್ಟ ಅರಿಯಲು ಶ್ರಮಿಸುತ್ತಿದ್ದಾರೆ. ನಾನೇ ಸ್ವತಃ ಮೋಡಗಳ ಬಗ್ಗೆ ಆಸಕ್ತಿ ತಳೆದೆ. ಬೆಂಗಳೂರು ಮತ್ತು ಸುತ್ತಮುತ್ತಣ ಉಷ್ಣ ಪ್ರದೇಶದಲ್ಲಿ ಕುಂತಲ (ಕ್ಯುಮುಲಸ್) ಬಗೆಯ ಮೋಡಗಳು ರಾಕೆಟ್ ಬಿಡುವ ಗರಿಯಂತಹ ಬಿಳಿ ಮೋಡದ ಬದಲು ಕೋಸಿನಂತೆ ರಾಶಿ ರಾಶಿಯಾಗಿ ಏಕೆ ಕಾಣಿಸಿಕೊಳ್ಳುತ್ತವೆ ಅಥವಾ ಗೋಪುರದಂತೆ ಮೇಲೇರುತ್ತದೇಕೆ ಎಂದು ಚಿಂತಿಸಿ ವಿಸ್ಮಯಪಟ್ಟದ್ದೇನೆ. ಎಷ್ಟೋ ಬಾರಿ ಪ್ರಯೋಗದಲ್ಲಿ ವಿಫಲವಾದ ಮೇಲೂ ನೀರಿನ ತೊಟ್ಟಿಯಲ್ಲಿ (ಎಲ್ಲ ಬಿಟ್ಟು) ಎದ್ದ ಮೋಡದಂತಹ ದಟ್ಟಣೆಯನು ಆಧರಿಸಿ ಮೋಡಗಳ ಅಧ್ಯಯನಕ್ಕೆ ಆಸಕ್ತಿದಾಯಕ ಮಾರ್ಗವನ್ನು ಕಂಡುಕೊಂಡೆವು ಇದು ವಿಚಿತ್ರವೆನ್ನಿಸಬಹುದು. ಈ ತೊಟ್ಟಿಗೆ ವಿದ್ಯುತ್ ಹರಿಸಿ, ನೀರನ್ನು ಕಾಸಿದೆವು (ನೀರು ವಾಹಕವಾಗುವಂತೆ ಮಾಡಲು ಅದರಲ್ಲಿ ಆಮ್ಲ ಬೆರೆಸಿತ್ತು). ನಿಜವಾ ಮೋಡದಲ್ಲಿ ಗುಪ್ತೋಷ್ಣ ಹರಿಯುವಂತೆ ಮಿಥ್ಯ ಚಿತ್ರಣ ರೂಪಿಸಿದೆವು (ಸಾಧಾರಣ ಮೋಡದ ಪುಚ್ಛಕ್ಕಿಂತಲೂ ಈ ಮೋಡಗಳು ಹೇಗೆ ಭಿನ್ನ ಎಂದು ಇದು ತೋರಿಸಿಕೊಟ್ಟಿತು ಎಂದು ನನ್ನ ಆನಿಸಿಕೆ). ಮೋಡಗಳೇಕೆ ಮೋಡಗಳಾಗೆ ಕಾಣಿಸುತ್ತವೆ ಎಂದು ಈ ಪ್ರಯೋಗ ತೋರಿಸಿಕೊಟ್ಟಿತು. ಮೊದಲು ಇದನ್ನು ನಂಬುವುದಕ್ಕೆ ಸಾಧ್ಯವಿಲ್ಲ ಎನ್ನಿಸಿತು. ಇದಕ್ಕೂ ಉಪಸ್ಥಿತ್ಯಂತರ ಅಂದರೆ ವ್ಯವಸ್ಥೆಯ ಭಾಗಶಃ ನಷ್ಟಕ್ಕೂ ಸಂಬಂಧವಿರುವ ಹಾಗೆ ಕಾಣಿಸುತ್ತಿತ್ತು (ಈ ಸಲದ ಸ್ಥಿತ್ಯಂತರ ತುಂಬ ಲಘುತಮವಾಗಿತ್ತಾದರೂ). ಚಿಕ್ಕ ಹುಡುಗನಾಗಿದ್ದಾಗ ನಾನು ಮೋಡಗಳನ್ನು ವೀಕ್ಷಿಸುತ್ತಿದ್ದ ಸಂದರ್ಭದಲ್ಲಿ ಹಿರಿಯರೊಬ್ಬರು (ಸಹಜವಾಗಿ ಒಳ್ಳೆಯವರೇ) 'ಹೇ ಆಕಾಶರಾಯ, ಕೆಲವು ಸಲವಾದರೂ ನೆಲದತ್ತ ನೋಡು' ಎಂದು ಗೇಲಿಯಿಂದಲೇ ಎಚ್ಚರಿಸಿದ್ದರು. ಆದರೆ ಈಗಲೂ ಆಕಾಶ ನೋಡುವ ಚಾಳಿ ತಪ್ಪಿಲ್ಲ. ಅಷ್ಟೇ ಅಲ್ಲ, ನಮ್ಮ ಪ್ರಯೋಗಾಲಯದಲ್ಲಿ ಮಿಥ್ಯ ಮೋಡಗಳನ್ನು ಸೃಷ್ಟಿಸುತ್ತಿದ್ದೇನೆ.

ಹಿಂತಿರುಗಿ ನೋಡಿದಾಗ ನನಗನ್ನಿಸುತ್ತದೆ, ನನ್ನ ಅದೃಷ್ಟಕ್ಕೆ ಒಳ್ಳೆಯ ಅಧ್ಯಾಪಕರೇ ದೊರೆತಿದ್ದರು. ಅವರು ನನ್ನ ಜ್ಞಾನದ ಬಾಗಿಲುಗಳನ್ನೇ ತೆರೆದರು. ಅದ್ಭುತವಾದ ಹೊಸ ಪ್ರಪಂಚಕ್ಕೆ ಒಯ್ದರು. ರೂಢಿಗತವಲ್ಲದ ಕೆಲಸಗಳಲ್ಲಿ ಮುಳುಗುವುದು ಚಟವಾಯಿತು – ಅದರಲ್ಲೇ ಒಂದು ಬಗೆಯ ಮೋಜು ಇದೆ.

(ಯುನೆಸ್ಕೋ ಸಂಸ್ಥೆ ಪ್ರಕಟಿಸಿದ 'ಒನ್ ಹಂಡ್ರೆಡ್ ರೀಸನ್ಸ್ ಟು ಬಿ ಎ ಸೈಂಟಿಸ್ಟ್' ಎಂಬುದರಲ್ಲಿ ಪ್ರಕಟವಾದ 'ಹೌ ಹಿ ಬಿಕೇಮ್ ಎ ಸೈಂಟಿಸ್ಟ್' ಎಂಬ ಲೇಖನದ ಅನುವಾದ.)

**ಟಿ. ಆರ್. ಅನಂತರಾಮು**
ನಂ. ೫೩೪, ೭೦ನೇ ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ
ಕುಮಾರಸ್ವಾಮಿ ಬಡಾವಣೆ, ೧ನೇ ಹಂತ, ಬೆಂಗಳೂರು - ೫೬೦ ೦೭೮.

# ಐಸ್‌ಕ್ರೀಂ ಇಟಲಿ

**ಇಟಲಿ ದೇಶದ ಜನರ ಒಂದು ಲಕ್ಷಣದ ಪರಿಚಯ ಮಾಡಿಸಬೇಕು. ಅದೇನೆಂದರೆ, ಅವರೇನು ಮಾಡಿದರೂ ಅದನ್ನು ಆಳವಾದ ಒಮ್ಮನಸ್ಸಿನಿಂದ ಮಾಡುತ್ತಾರೆ. ಅದು ಒಂದು ಜೊತೆ ಬೂಟುಗಳನ್ನು ಮಾಡುವುದಿರಬಹುದು, ಒಂದು**

**ಮಡಿಕೆ ಮಾಡುವುದಿರಬಹುದು, ಅಥವಾ ತಿನಿಸುಗಳನ್ನು ಮಾಡುವುದಿರಬಹುದು, ಎಲ್ಲದರಲ್ಲೂ ಒಂದೇ ರೀತಿಯ ಆಸಕ್ತಿ ಇರುತ್ತದೆ. ಪ್ರತಿಯೊಂದು ಕೆಲಸದಲ್ಲೂ ತಲ್ಲೀನವಾಗುವುದು ಅವರ ಸ್ವಭಾವ. ಅಚ್ಚುಕಟ್ಟಿನ ಜೊತೆಗೆ ಅಲಂಕಾರ ಇದ್ದೇ ತೀರಬೇಕು. ಸೌಂದರ್ಯ ಮತ್ತು ಕಲಾತ್ಮಕತೆಗಳ ಸಮ್ಮಿಲನದಿಂದಾಗಿ ಇಟಲಿಯಲ್ಲಿ ನಿರ್ಮಿಸಲಾಗಿರುವ ಚರ್ಚುಗಳು ಅದ್ಭುತವಾಗಿವೆ. ಅಂದವಾದ ಭಿತ್ತಿಚಿತ್ರಗಳೊಟ್ಟಿಗೆ ಅಮೃತಶಿಲೆಯಲ್ಲಿ ಮಾಡಲಾದ ಪ್ರತಿಮೆಗಳನ್ನು ಕೂರಿಸಿ ಕಣ್ಣಿಗೆ ಸೊಬಗನ್ನು ನೀಡುವುದು ಹೀಗೆ.**

ಇಟಲಿಯೆಂದರೆ ನನ್ನ ಪಾಲಿಗೆ ಐಸ್ ಕ್ರೀಂ. ಅತ್ಯಂತ ರುಚಿಕರ; ನಾಲಿಗೆ ಚಪ್ಪರಿಸಬೇಕು, ಹಾಗೆ. ಕೆನೆಯೋ ಕೆನೆ. ಜೊತೆಗೆ ಹೇರಳ ಮುದ್ದೆಗಳು.

ಇಟಲಿಗೆ ಹೋಗಿ ಐಸ್‌ಕ್ರೀಂ ತಿನ್ನದಿರುವುದುಂಟೆ! ಎಲ್ಲೆಲ್ಲಿ ನೋಡಿದರೂ ಅದೇ; ಗೆಲಾತೆರಿಗಳಲ್ಲಿ, ಕೆಫೆಗಳಲ್ಲಿ, ಪೆಟ್ಟಿಗೆ ಅಂಗಡಿಗಳಲ್ಲಿ, ರಸ್ತೆಬದಿಯ ಅಂಗಡಿಗಳಲ್ಲಿ, ಹೀಗೆ ಎಲ್ಲಾ ಕಡೆ. ಎಲ್ಲಿ ಹೋದರೂ ಸಾಲು ಸಾಲು ಐಸ್‌ಕ್ರೀಂ ಜೋಡಿಸಲ್ಪಟ್ಟಿರುತ್ತದೆ. ರುಚಿಯ ವೈವಿಧ್ಯವೂ ಸೊಗಸೇ. ಸ್ಟ್ರಾಬೆರಿಯದಕ್ಕೆ ಫ್ರಗೋಲ ಅನ್ನುತ್ತಾರೆ. ಬ್ಲೂಬೆರಿ ಮತ್ತು ಪೈನಾಪಲ್‌ದೂ ಉಂಟು. ಅತಿ ಹೆಚ್ಚಿನ ಪಾಪದ್ದೆಂದರೆ 'ಚಿಯೋಕ್ಕೊಲಾತ್' (ಚಾಕೊಲೇಟ್)ದು. ಇವಲ್ಲದೆ ತೆಂಗಿನಕಾಯಿ, ಕಲ್ಲಂಗಡಿ, ಸಿದ್ರೋಟೆ, ಹಸಿರು ಸೇಬು, ಮುಂತಾದವೂ ಇರುತ್ತವೆ. ನೀವು ಹೇಳಿದ ರುಚಿಯದ್ದು ಅಲ್ಲುಂಟು. ಅದೆಷ್ಟು ಆಕರ್ಷಣೀಯ. ನಾನು ದೇಶ-ವಿದೇಶಗಳಲ್ಲಿ ಎಲ್ಲೂ ಅಷ್ಟು ಮಧುರವಾದ ಐಸ್‌ಕ್ರೀಂ ತಿಂದದ್ದಿಲ್ಲ. ಹೊಟ್ಟೆ ಬರುತ್ತದೆಂಬ ಅಂಜಿಕೆಯನ್ನು ಬಿಟ್ಟೇ ಇಟಲಿಗೆ ಹೊರಡಬೇಕೆಂದರ್ಥ.

ಅವರ ಇನ್ನೊಂದು ತಿನಿಸು "ತೋರ್ತಾ". ಪಿಷ್ಟ ಭಕ್ಷ್ಯಗಳು (ಅಂದರೆ, ಹಿಟ್ಟಿನಿಂದ ಮಾಡಿದ್ದು). ಹಣ್ಣು ಕಡುಬುಗಳು, ಭೋಜನಾನಂತರದ ಸಿಹಿಭಕ್ಷ್ಯ, ಇವೆಲ್ಲಾ 'ತೋರ್ತಾ' ಗುಂಪಿನವು. ಸಿಹಿಭಕ್ಷ್ಯವೆಂದರೆ ಸುಮ್ಮನೆ ಕ್ರೀಂ ಜೊತೆ ಇರುವ ಕೇಕ್ ಅಲ್ಲ. ಅದರ ತಯಾರಿಕೆಯಲ್ಲಿ ಸಂಕೀರ್ಣವಾದ ಪಾಕಶಾಸ್ತ್ರ ಪ್ರಾವೀಣ್ಯ ಇರಬೇಕು. ದಾಲ್ಚಿನ್ನಿ, ಬಾದಾಮಿ, ಕಡಲೆಕಾಯಿ, ದ್ರಾಕ್ಷಾರಸ, ರಮ್ಮು, ಚೀಸ್ಸು ಹೀಗೆ ಹಲವು ಪರಿಕರಗಳಿಂದ ಸಿಹಿಭಕ್ಷ್ಯವನ್ನು ತಯಾರಿಸುತ್ತಾರೆ. "ಭೋಜನಾನಂತರ" ಆದ್ದರಿಂದ ಕಡಿಮೆ ಪ್ರಮಾಣದಲ್ಲಿ ತೆಗೆದುಕೊಳ್ಳಬೇಕೆಂದೇನೂ ಇಲ್ಲ. ಬೊಗಸೆ-ಬೊಗಸೆ ತಿನ್ನಲಡ್ಡಿಯಿಲ್ಲ. ಸುಮ್ಮನೆ ಒಂದೆರಡು ಬಾರಿ ನವಿರಾಗಿ ಚಮಚಾವನ್ನು ಬಾಯಲ್ಲಿಟ್ಟು ತೆಗೆದುಬಿಡುವುದಲ್ಲ ಇದು. ನಿಮಗೆ ಬೇಕಾದ್ದನ್ನು ಹೇಗೆ ಮತ್ತು ಎಷ್ಟು ಕೊಡಬೇಕೆಂಬುದನ್ನು ಇಟಲಿಯವರು ಚೆನ್ನಾಗಿ ತಿಳಿದಿರುತ್ತಾರೆ.

ತಿನಿಸುಗಳ ಇನ್ನೊಂದು ಪಟ್ಟಿಯಲ್ಲಿ ಪಾಸ್ತಾ, ಪೀತ್ಸ, ಬ್ರುಸ್ಕೆತಾ, ಬ್ರೆಡ್ಡು, ಇತ್ಯಾದಿಗಳಿರುತ್ತವೆ. ಈ ವರೆಗೆ ನಾನು ತಿಂದಿರುವ 'ಲಸಾನ್ಯೆ'ಗಳಲ್ಲಿ ಬಹಳ ಚೆನ್ನಾಗಿದ್ದುದೆಂದರೆ ನಾನು ಅಸಿಸಿಯ ಒಂದು ಚಿಕ್ಕ 'ದರ್ಶಿನಿ'ಯಲ್ಲಿ ತಿಂದದ್ದು; ಅತ್ಯುತ್ತಮ ಪಾಸ್ತಾ ಎಂದರೆ ಟುಸ್ಕನಿಯ ಒಂದು ಹಳ್ಳಿಯ ದ್ರಾಕ್ಷಾರಸದ ಅಂಗಡಿಯಲ್ಲಿ ತಿಂದದ್ದು. ರೋಮಿನ 'ತಿರಮಿಸು' ಮತ್ತು 'ಒಸ್ತೇರಿಯಾ'ಗಳಿಗೆ ಸಮಾನವಾದ್ದು ಬೇರೆಲ್ಲೂ ಇರಲಾರದೇನೊ! ಮನೆಗಳಲ್ಲಿ ಸಿಗುವ ದ್ರಾಕ್ಷಾರಸವೇ ಬೇರೆ, ಅಂಗಡಿಗಳಲ್ಲಿಟ್ಟಿರುವುದೇ ಬೇರೆ. ಯಾವ ಚಿಕ್ಕ ಊರಿನಲ್ಲೇ ಆಗಲಿ ಉತ್ಕೃಷ್ಟವಾದ ದ್ರಾಕ್ಷಾರಸ ಸಿಗುತ್ತದೆ. ಮಾರುಕಟ್ಟೆಯಲ್ಲಿ ಹೆಸರು ಮಾಡಿರುವ 'ಬ್ರ್ಯಾಂಡ್'ಗಳು ಅದರೆತ್ತರಕ್ಕೆ ಬರುವುದಿಲ್ಲ. ಮನೆಗಳಲ್ಲಿ ದ್ರಾಕ್ಷಾರಸ ಕೊಡಲು ಲಾಳಿಕೆ ಮಾದರಿಯ ಬೀಕರ್ ಬಳಸುತ್ತಾರೆ. ರಸಾಯನಶಾಸ್ತ್ರದ ಪ್ರಯೋಗಶಾಲೆಗೆ ಹೋಗಿಬಂದಿರುವವರಿಗೆ ಅದರ ಕಲ್ಪನೆ ಸುಲಭ. ಅವೇನೂ ಚಿಕ್ಕವಲ್ಲ. ಸಾಮಾನ್ಯವಾಗಿ ಮೂರು ಲೋಟ ಶಾಂಪೇನ್ ಹಿಡಿಸುವಂತಹ ಬೀಕರ್‌ಗಳು ಅವು. ಯಾವಾಗಲೂ ಮೊದಲಿಗೆ ದ್ರಾಕ್ಷಾರಸ. ಅದೂ ಪುಷ್ಕಳವಾಗಿ. ಆಮೇಲೆ ಬೇರೆ ತಿನಿಸುಗಳು. ದ್ರಾಕ್ಷಾರಸ, ಚೀಜ್ ಮತ್ತು ಆಲಿವ್, ಇವು ಇಟಲಿಯ ಆಹಾರದ ಅವಿಚ್ಛಿನ್ನ ಭಾಗ.

ಆದ್ದರಿಂದಲೇ ಹೇಳುತ್ತಿದ್ದೇನೆ, ನೀವು ಇಟಲಿಗೆ ಹೋಗುವುದಾದಲ್ಲಿ ಮೊದಲು ತಿನ್ನಲು ಅಂಜುವುದಿಲ್ಲವೆಂಬ ನಿರ್ಧಾರಕ್ಕೆ ಬನ್ನಿ. ಅವರದ್ದು ಭೂರಿ ಭೋಜನ. ಚೀಜ್ ಮತ್ತು ಆಲಿವ್ ಹೇರಳ. ಸೂಕ್ಷ್ಮವಾದ ರುಚಿ ಭೇದಗಳು. ಇಂಡಿಯಾದಲ್ಲಿ ಇಟಲಿಯ ದೆನ್ನಲಾದ ಆಹಾರ ತಿನ್ನುತ್ತಾರಲ್ಲ, ಅದಕ್ಕಿಂತಲೂ ಭಿನ್ನವಾದ್ದು ಇದು.

ಈಗ ಬೇರೊಂದು ವಿಭಾಗಕ್ಕೆ ಹೋಗೋಣ. ಸುವಾಸನೆಯ ಪದಾರ್ಥಗಳು, ಅನ್ನಿ. ನಾನು ಇಟಲಿಗೆ ಹೋಗಿದ್ದುದು ಅಲ್ಲಿಯ ವಸಂತದಲ್ಲಿ. ಬೇಸಿಗೆ



ತನು ಮೆಹ್ತಾ ತಿವಾರಿ

ುವುದರಲ್ಲಿತ್ತು. ಯಾವ ಕಡೆ ನೋಡಿದರೂ ಕಂಗೊಳಿಸುವ ಹೂವುಗಳು. ಕಣ್ಣಿಗೆ ಣವೆನ್ನುವಷ್ಟು ಬಣ್ಣಗಳು. ಕೆನ್ನೀಲಿ ಪೆತುನಿಯಾ, ಕೆಂಪು ಗಸಗಸೆ, ಬಿಳಿ ಮತ್ತು ದಿ ಡೇಲಿಯಾ, ಇತ್ಯಾದಿ. ಆದರೆ ಗುಲಾಬಿಗೆ ಸಮನಾದ್ದು ಬೇರಾವುದೂ ಇರಲಿಲ್ಲ. ರೆಯಲಾಗದ ಅನುಭವ ಅದು: ಕೈತೋಟದಿಂದ ಹೊರಬರುವಂತಿರುವ ಲಾಬಿಗಳು, ಛಾವಣಿಯ ಮೇಲಿನವು, ಮನೆಯೊಳಗಿನವು, ಗೇಟಿನ ಅಕ್ಕಪಕ್ಕ ಲ್ಲಿಯುವು, ಬಾಗಿಲು-ಕಿಟಕಿಗಳಿಂದ ಹೊರಚಾಚಿದಂತಹವು, ಹೀಗೆ ಎಲ್ಲೆಲ್ಲೂ ಲಾಬಿಮಯ. ಅದೆಷ್ಟು ಬಣ್ಣದವು: ಟೊಮೆಟೋವಿನಷ್ಟು ಕೆಂಪು, ಕಿತ್ತಳೆ, ಹಳದಿ, ುಗೆಂಪು, ಇತ್ಯಾದಿ ದೊಡ್ಡ ಆಕಾರದವು, ಆದರೂ ಒಳ್ಳೆಯ ಸುವಾಸನೆಯಿಂದ ಡಿದವು. ರಸ್ತೆಯಲ್ಲಿ ನಡೆದು ಹೋಗುತ್ತಿದ್ದರೆ ಸಾಕು, ನಿಮಗೆ ತಿಳಿಯುತ್ತದೆ, ದಲ್ಲೇ ಎಲ್ಲೋ ಗುಲಾಬಿ ವನ ಇದೆಯೆಂದು. ನಮ್ಮಲ್ಲಿರುವ ಗುಲಾಬಿಗಳಿಗಿಂತ ಹತ್ತಾದವು ಅವು, ಆದರೆ 'ದೇಸಿ ಗುಲಾಬಿ'ಯ ಸುಮಧುರ ಪರಿಮಳ ಉಂಟು.

ನಮ್ಮ ಇಂದ್ರಿಯಗಳನ್ನೆಲ್ಲಾ ತಣಿಸುವಂತಹದ ದೇಶ ಇಟಲಿ ಎಂಬುದರಲ್ಲಿ ಯಾವ ಶಯೋಕ್ತಿಯೂ ಇಲ್ಲ.

ಇನ್ನು ಆ ದೇಶದ ಕಲೆ: ಅದನ್ನು ಹೇಳುವ ಮುನ್ನ ಇಟಲಿ ದೇಶದ ಜನರ ಒಂದು ಣದ ಪರಿಚಯ ಮಾಡಿಸಬೇಕು. ಅದೇನೆಂದರೆ, ಅವರೇನು ಮಾಡಿದರೂ ಅದನ್ನು ವಾದ ಒಮ್ಮನಸ್ಸಿನಿಂದ ಮಾಡುತ್ತಾರೆ. ಅದು ಒಂದು ಜೊತೆ ಬೂಟುಗಳನ್ನು ಡುವುದಿರಬಹುದು, ಒಂದು ಮಡಿಕೆ ಮಾಡುವುದಿರಬಹುದು, ಅಥವಾ ಸುಗಳನ್ನು ಮಾಡುವುದಿರಬಹುದು, ಎಲ್ಲದರಲ್ಲೂ ಒಂದೇ ರೀತಿಯ ಆಸಕ್ತಿ ುತ್ತದೆ. ಪ್ರತಿಯೊಂದು ಕೆಲಸದಲ್ಲೂ ತಲ್ಲೀನವಾಗುವುದು ಅವರ ಸ್ವಭಾವ. ತ್ತುಕಟ್ಟಿನ ಜೊತೆಗೆ ಅಲಂಕಾರ ಇದ್ದೇ ತೀರಬೇಕು. ಸೌಂದರ್ಯ ಮತ್ತು ಾತ್ಮಕತೆಗಳ ಸಮ್ಮಿಲನದಿಂದಾಗಿ ಇಟಲಿಯಲ್ಲಿ ನಿರ್ಮಿಸಲಾಗಿರುವ ಚರ್ಚುಗಳು ್ಭುತವಾಗಿವೆ. ಅಂದವಾದ ಭಿತ್ತಿಚಿತ್ರಗಳೊಟ್ಟಿಗೆ ಅಮೃತಶಿಲೆಯಲ್ಲಿ ಮಾಡಲಾದ ತಿಮೆಗಳನ್ನು ಕೂರಿಸಿ ಕಣ್ಣಿಗೆ ಸೊಬಗನ್ನು ನೀಡುವುದು ಹೀಗೆ.

ಆಹಾರವೂ ಅಷ್ಟೆ. ಅದೂ ಕಣ್ಣಿಗೆ ಸೊಬಗು, ಹೊಟ್ಟೆಗೆ ರಮ್ಯತೆ ನೀಡುವಂತಿರ ಕು. ಒಂದು ಬಟ್ಟೆ ಮಾಡಿದರೆ ಅದಕ್ಕೆ ನಯವಾದ ಲೇಸ್‌ಗಳು ಮತ್ತು ಬಣ್ಣಗಳು. ತೂ ಮನಸ್ಸನ್ನು ಸೂರೆಗೊಳ್ಳಬೇಕು. ವಾಸಿಸುವ ಮನೆಗಳಿಗೆ ಅದೆಷ್ಟು ಅಲಂಕಾರ; ಕಿ ಮತ್ತು ಬಾಗಿಲುಗಳಿಗೆ ಲತೆ ಹಬ್ಬಿಸುವುದು ಮತ್ತು ಹೂವುಗಳನ್ನು ೀಡಿಸುವುದು ಸರ್ವೇಸಾಮಾನ್ಯ. ಗಂಧರ್ವಲೋಕದ ಸೃಷ್ಟಿಯೆಂದರೆ ಇದೇ ಬೇಕು. ದಿನನಿತ್ಯದ ಜೀವನದಲ್ಲಿ ಇವೆಲ್ಲಾ ಅವಿಭಾಜ್ಯ ಅಂಗಗಳು.

ಕಲೆಯ ಬೀಡು ಇಟಲಿ. ಮೈಕೇಲೆಂಜೆಲೊ ನಾಡಲ್ಲವೆ ಅದು! ಅವನು ವಿನ್ಯಾಸ ಡಿರುವ ಸೆಂಟ್ ಪೀಟರನ ಬ್ಯಾಸಿಲಿಕಾ ವಿಶ್ವಖ್ಯಾತಿ ಪಡೆದಿದೆ. ಸಿಸ್ಟೀನ್ ಪೆಲ್‌ನಲ್ಲಿ ಅವನು ಮಾಡಿಟ್ಟಿರುವ ೫೨ ಬೆತ್ತಲೆಯ ಪ್ರತಿಮೆಗಳು, ಭಿತ್ತಿಚಿತ್ರಗಳು, ನನ್ನು ಅಮರನನ್ನಾಗಿಸಿವೆ. ಅವನ ಕೈಯಲ್ಲಿ ಅಮೃತಶಿಲೆಯ ವಿಗ್ರಹಗಳು ವಂತಿಕೆ ಪಡೆಯುತ್ತವೆ ಮತ್ತು ವೀಕ್ಷಕನನ್ನು ದಿಙ್ಮೂಢರನ್ನಾಗಿಸುತ್ತವೆ. ಅವನು ುವ ಬೆತ್ತಲೆಯ ಡೇವಿಡ್ ಪ್ರಖ್ಯಾತವಾಗಿದೆ, ಆದರೆ ನನಗೆ ಸೆಂಟ್ ಪೀಟರನ ಸಿಲಿಕಾದಲ್ಲಿರುವ 'ಪೀಟ' ವಿಗ್ರಹ ಅತಿರಂಜನೀಯವೆನಿಸುತ್ತದೆ. ಜೀಸಸ್ ಮತ್ತು ೇರಿ ಅಲ್ಲಿ ಜೀವಂತವಾಗಿರುವಷ್ಟು ಬೇರೆಲ್ಲೂ ಇಲ್ಲ. ಸೂಕ್ಷ್ಮತೆ, ಭಂಗಿ, ದಾಡುವಂತಿರುವ ಶರೀರ, ಅಮೃತ ಶಿಲೆಯ ಮೆರುಗು, ಎಲ್ಲಾ ಅವರ್ಣನೀಯ. ಗೆಯೇ ಬೇರೆ ಹತ್ತಾರಿವೆ. ರ್‍ಯಾಫೆಲ್ ದೋನತೆಲ್ಲೊ, ಬ್ರೂನೆಲೆಸ್ಸಿ, ಸ್ಯಾಂಗೆಲೋ, ಂತಾದವರು ಕಡೆದಿರುವ ಚಿತ್ರಗಳು, ಪ್ರತಿಮೆಗಳು. ಭಾರತದಲ್ಲಿ ಮೂಲೆ ೂಲೆಗೂ ಒಂದು ದೇವಸ್ಥಾನವಿರುವಂತೆ ಇಟಲಿಯಲ್ಲಿ ಎಲ್ಲೆಲ್ಲೂ ಚರ್ಚುಗಳಿವೆ. ಯೊಂದು ಚರ್ಚಿನಲ್ಲೂ ಅನನ್ಯವಾದ ಕಲಾತ್ಮಕತೆಯುಂಟು, ಭಿತ್ತಿಚಿತ್ರಗಳುಂಟು. ಲಿಯಲ್ಲಿ ಚರ್ಚುಗಳನ್ನು ಸವಿಯುವುದೇ ಒಂದು ಮಹತ್ತರ ಅನುಭವ. ೀನಾದಲ್ಲಿರುವ ಕ್ಯಾಥಿಡ್ರೆಲ್ ಒಂದು ಅಮೂಲ್ಯವಾದ ನಿದರ್ಶನ. ಕಲಾಸಂಪತ್ತು ್ತು ದಾರ್ಶನಿಕ ದೃಷ್ಟಿ ಎರಡೂ ಇಲ್ಲಿ ಮೇಳೈಸಿವೆ. ಆ ಕ್ಯಾಥಿಡ್ರೆಲ್‌ನ ನೆಲಹಾಸಿನಲ್ಲಿ ಧ ದಾರ್ಶನಿಕ ಅಂಶಗಳನ್ನು ಗುರುತಿಸಬಹುದು. ಫ್ಲಾರೆನ್ಸ್‌ನ ದುವೋಮೋ ್ಶನಂತಹದು ಬೇರೆಲ್ಲೂ ಇಲ್ಲ. ಅಸಿಸಿಯ ಸೆಂಟ್ ಫ್ರಾನ್ಸಿಸ್ ಕ್ಯಾಥಿಡ್ರೆಲ್ ಒಂದು ಯಾಲೋಕವನ್ನೇ ತೆರೆದಿಡುತ್ತದೆ. ಅದನ್ನು ನೋಡಿದವರು ಅವಾಕ್ಕಾಗುವುದು ತ್ರ. ವೆನಿಸ್‌ನ್‌ಲ್ಲಿರುವ ಸೆಂಟ್ ಮಾರ್ಕ್‌ನ ಬ್ಯಾಸಿಲಿಕಾದ ಒಳ ಮಾಳಿಗೆಯಲ್ಲಿರುವ ದಿ, ಹಸಿರು ಮತ್ತು ಕೆಂಪು ಕಲ್ಲು ತುಂಡುಗಳ ಸಂರಚನೆಯು ಅಸಾಮಾನ್ಯವಾದುದು.



ಇನ್ನು ರೋಮಿನ ಸೆಂಟ್ ಪೀಟರನ ಬ್ಯಾಸಿಲಿಕಾ ಬಗ್ಗೆ ಹೇಳುವುದೇ ಬೇಡ. ಅದು ಎಲ್ಲದಕ್ಕಿಂತಲೂ ಅದ್ಭುತವಾದ್ದು. ಈ ಭೂಮಿಯಲ್ಲಿ ಅಂತಹ ಇನ್ನೊಂದು ಅರಮನೆಯುಂಟೆ! ಅಂದರೆ, ಬೇರೆ ಪಟ್ಟಣ ಮತ್ತು ಹಳ್ಳಿಗಳಲ್ಲಿರುವ ಚಿಕ್ಕ ಚಿಕ್ಕ ಚರ್ಚ್‌ಗಳು ನಗಣ್ಯವೆಂದೇನೂ ಅಲ್ಲ. ಅವೂ ಸಹ ಕಲೆಯಿಂದ ಸಂಪದ್ಭರಿತವಾಗಿವೆ. ಬಣ್ಣ ಬಣ್ಣದ ಕಿಟಕಿಗಳು, ಚಿನ್ನದ ಮೊಸಾಯಿಕ್‌ಗಳು, ಕಂಚಿನ ವಿಗ್ರಹಗಳು, ಅಗಾಧವಾದ ಪೂಜಾಸ್ಥಳಗಳು, ಎಲ್ಲಾ ಕಂಗೊಳಿಸುವ ಚಿತ್ರಗಳೇ.

ಇಟಲಿಯಲ್ಲಿ ಪ್ರಾಚೀನ ಕಾಲದ ಅವಶೇಷಗಳು ಅಸಂಖ್ಯ. ಅವನ್ನು 'ಕ್ಷುದ್ರಧರ್ಮಿ' (ಪ್ಯಾಗನ್) ರೋಮ್ ಸಾಮ್ರಾಜ್ಯದ ಉಳಿಕೆಗಳೆನ್ನುತ್ತಾರೆ. ರೋಮನ್ ಫೋರಮ್, ಕೊಲೀಸಿಯಂ, ಪ್ಯಾಂಥಿಯಾನ್, ಮಿನರ್ವ ದೇಗುಲಗಳು, ಜಗತ್ಪ್ರಸಿದ್ಧವಾಗಿವೆ. ಬೇರೆ ಚಿಕ್ಕಪುಟ್ಟ ದೇವ - ದೇವಿಯರ ದೇಗುಲಗಳೂ ಇವೆ. ಅವುಗಳ ಇತಿಹಾಸವನ್ನು ಬಿಚ್ಚಿಡಬಲ್ಲ ಮಾರ್ಗದರ್ಶಿಯಿದ್ದರೆ ಅವೆಲ್ಲಾ ಆಸಕ್ತಿದಾಯಕವಾಗಿರಬಲ್ಲವು. ಇಟಲಿಗೆ ಇತಿಹಾಸದ ಹೊರೆ ಅಗಾಧವಾಗಿದೆ. ಅದನ್ನು ಜನ ಈಗಲೂ ಹೆಮ್ಮೆಯಿಂದ ಸವಿಯುತ್ತಾರೆ.

ಇಟಲಿಯಲ್ಲಿ ಸಂಚಾರ ಸುಲಭ. ತ್ರೇನಿತಾಲಿಯ ಎಂಬ ರೈಲ್ವೆಯು ನಿಮ್ಮನ್ನು ಎಲ್ಲೆಡೆ ಕೊಂಡೊಯ್ಯುತ್ತದೆ. 'ಬಿಗ್ಲೆತ್ತಿ' (ಟಿಕೆಟ್) ಪಡೆಯುವುದು ಕೂಡ ಸುಲಭವೇ. ಅವನ್ನು 'ಮಾರುವ' ಮಿಶನ್‌ಗಳಿರುತ್ತವೆ, ಅಗತ್ಯವಾದ ಎಲ್ಲ ಮಾಹಿತಿಯನ್ನು ನೀಡುತ್ತವೆ. ರೈಲ್ವೆ ಪ್ರಯಾಣದ ದರ ಬಹಳ ಜಾಸ್ತಿಯಿಲ್ಲ, ಆದರೆ ವೇಗ ಮಾತ್ರ ಹೆಚ್ಚು. ಇಟಲಿಯು ದೊಡ್ಡ ದೇಶವಲ್ಲವಾದ್ದರಿಂದ ಎಲ್ಲಿಂದ ಎಲ್ಲಿಗೆ ಹೋದರೂ ಪ್ರಯಾಣವು ಸರಾಸರಿ ನಾಲ್ಕು ಘಂಟೆಗಳನ್ನು ಮೀರುವುದಿಲ್ಲ.

ಪ್ರಯಾಣ ಮಾಡುವಾಗ ಅಲ್ಲಲ್ಲಿ ಹಾಸ್ಟೆಲ್‌ಗಳಲ್ಲಿ ತಂಗಬಹುದು. ಅವು ಹೇರಳವಾಗಿವೆ. ಫ್ಲಾರೆನ್ಸ್‌ನಲ್ಲಿ ನಾವು ತಂಗಿದ್ದ ಜಾಗವು ಒಂದು ಬೃಹತ್ ಕಟ್ಟಡಗಳ ಸಂಕೀರ್ಣ. ಒಂದು ತೋಟದ ಮಧ್ಯದಲ್ಲಿ ಸುಂದರವಾದ ನಿರ್ಮಿತಿ ಅದು.

ರೋಮ್ ಮತ್ತು ವೆನಿಸ್‌ನಲ್ಲೂ ಈ ಸೌಕರ್ಯವಿದೆ. ಅವು ಸ್ವಲ್ಪ ಇಕ್ಕಟ್ಟು ಎನಿಸಬಹುದು, ಅಷ್ಟೆ. ರೋಮ್ ಮತ್ತು ವೆನಿಸ್‌ಗೆ ವರ್ಷಂಪ್ರತಿ ಸುಮಾರು ಎರಡೂವರೆ ಕೋಟಿ ಪ್ರವಾಸಿಗಳು ಬಂದುಹೋಗುತ್ತಾರೆ. ಸಹಜವಾಗಿಯೇ ಅಲ್ಲಿ ಒಳ್ಳೆಯ ಜಾಗಗಳು ದುರ್ಲಭ. ಹಾಗೆ ನೋಡಿದರೆ ಹಾಸ್ಟೆಲ್‌ಗಳು ಮೇಲು. ಅನುಕೂಲಗಳೂ ಉಂಟು, ಖರ್ಚೂ ಕಡಿಮೆ. ಕೊಠಡಿಗಳಿಗಾಗಿ ಹೆಚ್ಚು ಹಣ ಖರ್ಚು ಮಾಡುವುದು ಅನಗತ್ಯ, ಏಕೆಂದರೆ ಪ್ರವಾಸಿಗಳಾಗಿ ಕೊಠಡಿಯಲ್ಲಿ ಎಷ್ಟು ವೇಳೆ ಕಳೆಯಬಲ್ಲಿವು? ಹಾಸ್ಟೆಲ್‌ಗಳನ್ನು ಆಯ್ಕೆ ಮಾಡಿಕೊಳ್ಳುವುದು ಬುದ್ಧಿವಂತಿಕೆಯ ಲಕ್ಷಣ.

ಪ್ರವಾಸಿಗಳಿಂದ ಇಟಲಿಗೆ ಹಣ ಸುರಿಯುತ್ತದೆ. ಆ ದೇಶದ ರಾಷ್ಟ್ರೀಯ ವರಮಾನದಲ್ಲಿ ಈ ಬಾಬ್ತು ಬಹಳ ಹೆಚ್ಚಿನದು. ಆದ್ದರಿಂದ ಎಲ್ಲಿ ಪ್ರವೇಶ ಪಡೆಯ ಬೇಕಾದರೂ ಪ್ರವೇಶ ಧನ ತೆತ್ತಬೇಕು. ಅದೂ ಕಡಿಮೆಯೇನಲ್ಲ. ಪ್ರಾಚೀನ ಸಂಪತ್ತಿನಿಂದ ವರ್ತಮಾನದ ಸಂಪತ್ತನ್ನು ಹಿಗ್ಗಿಸಿಕೊಳ್ಳುವುದರಲ್ಲಿ ಇವರು ನಿಪುಣರು. ನಿಮಗೆ ಬೇಕಾದ ನಕಾಶೆಯನ್ನು ಪುಕ್ಕಟೆ ಪಡೆಯಬಹುದು; ಇತಿಹಾಸದ ಎಲ್ಲ ಮಾಹಿತಿಯನ್ನೂ ಅಚ್ಚುಮಾಡಿ ಹಂಚುವ ಸೌಲಭ್ಯವಿದೆ. ವೆನಿಸ್‌ನಲ್ಲಿ ಒಮ್ಮೆ ಮೂತ್ರಾಲಯಕ್ಕೆ ನುಗ್ಗಿಬರಲು ಒಂದು ಯೂರೋ (ಕನಿಷ್ಠ ಅರವತ್ತು ರೂಪಾಯಿ) ಎಂದರೆ ನಂಬುತ್ತೀರಾ?

ಪ್ರವಾಸಿಗಳನ್ನು ಒಲೈಸುವ ಕಂಪನಿಗಳು ನೂರಾರಿವೆ. "ಎರಡು ದಿನ ರೋಮ್, ಒಂದು ದಿನ ಫ್ಲಾರೆನ್ಸ್" ಅದಕ್ಕೆ ಇಂತಿಷ್ಟು ಹಣ, ಎಂಬ ಫಲಕಗಳು ಸಾವಿರವಿರುತ್ತವೆ. ಅಂತಹ ಪ್ರವಾಸವು ನಿರಾಸೆಯನ್ನುಂಟುಮಾಡಬಹುದು. ಹೆಚ್ಚುಕಡಿಮೆ ಅದೇ ಹಣದಲ್ಲಿ ಸ್ವತಂತ್ರವಾಗಿ ಪ್ರವಾಸ ಕೈಗೊಂಡು ಎಲ್ಲವನ್ನೂ ಸಾವಧಾನವಾಗಿ ನೋಡುವುದು ಉತ್ತಮ. ಟೂರಿಸ್ಟ್ ಕಂಪನಿಯವರು ಪ್ರವಾಸಿಗಳನ್ನು ಮನಬಂದಂತೆ ಅಡ್ಡಾಡಲು ಬಿಡುವುದಿಲ್ಲ; ಅವರಿಗೆ ಸಮಯದ ಒತ್ತಡ. ಆ ರೀತಿ ಇಟಲಿಯನ್ನು ನೋಡಿದರೆ ಪ್ರವಾಸವು ಅಪೂರ್ಣವೆನಿಸುತ್ತದೆ.

ಹೋಗಿ, ಇಟಲಿಯಲ್ಲಿ ಅಲೆದಾಡಿ, ಸಂತೋಷ ಪಡೆಯಿರಿ: ರೋಮ್, ಅಸಿಸಿ, ವೆನಿಸ್, ಫ್ಲಾರೆನ್ಸ್, ಸಿಯೇನಾ, ಪೀಸಾ, ಸ್ಯಾನ್ ಗಿಮಿನ್ಯಾನೊ, ಹೀಗೆ ಎಷ್ಟೋ ಇವೆ. ಶ್ರೀಮತಿ ಸೋನಿಯಾ ಗಾಂಧಿಗೆ ಪತ್ರ ಬರೆದು ಹೇಳಬೇಕು, ಭಾರತದ ಪ್ರವಾಸೋದ್ಯಮ ಖಾತೆಯು ನೇರವಾಗಿ ಇಟಲಿಯ ಪ್ರವಾಸಿ ಪ್ರಾಧಿಕಾರದೊಡನೆ ಒಂದು ಜಂಟಿ ಒಡಂಬಡಿಕೆ ಮಾಡಿಕೊಳ್ಳಬೇಕು, ಎಂದು. ಅದರಿಂದ ಪ್ರವಾಸಿಗಳಿಗೆ ಅನುಕೂಲವಾಗುವುದು ಖಂಡಿತ.

**ತನು ಮೆಹ್ತಾ ತಿವಾರಿ**
ವಕೀಲರು, ಸಂ.೩೭, ೪ನೇ ಮಹಡಿ, ಯೂಸುಫ್ ಬಿಲ್ಡಿಂಗ್, ಫ್ಲೋರ ಫೌಂಟೇನ್, ಮುಂಬಯಿ.

## ನಮ್ಮ ಇತ್ತೀಚಿನ ಪ್ರಕಟಣೆಗಳು

ಮನಸ್ವಿ — ಪುಟ : 152 ರೂ. 75
ರಾಜನ್ ಗವಸ — ಪುಟ : 128 ರೂ. 80
ಮರಳ ಮೇಲಿನ ಹೆಜ್ಜೆಗಳು — ಪುಟ : 112 ರೂ. 60
ಲೈಂಗಿಕ ವೈವಿಧ್ಯ — ಪುಟ : 136 ರೂ. 65
ಕಾಫಿನಾಡಿನ ಕಿತ್ತಳೆ — ಗಿರಿಮನೆ ಶ್ಯಾಮರಾವ್ — ಪುಟ : 200 ರೂ. 110

ಪುಸ್ತಕಗಳ ಮೊಬಲಗಿನ ಜೊತೆಗೆ ರಿಜಿಸ್ಟರ್ಡ್ ಅಂಚೆ/ಕೊರಿಯರ್ ವೆಚ್ಚ ರೂ.20 ಸೇರಿಸಿ ಒಟ್ಟು ಹಣವನ್ನು ಎಂ.ಓ. ಅಥವಾ ಡಿ.ಡಿ. ಮೂಲಕ ಈ ಕೆಳಕಂಡ ವಿಳಾಸಕ್ಕೆ ಕಳುಹಿಸಿ

ನವಕರ್ನಾಟಕ ಪ್ರಕಾಶನ

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಬೆಂಗಳೂರು - 1
ದೂರವಾಣಿ : 080-22203580/81/82, 30578020/22 ಫ್ಯಾಕ್ಸ್ : 080-30578023
e-mail : navakarnataka@vsnl.com website : www.navakarnataka.com

ಶಾಖೆಗಳು
ಬೆಂಗಳೂರು ✆ 22251382 ❖ ಮೈಸೂರು ✆ 2424094 ❖ ಮಂಗಳೂರು ✆ 2441016 ❖ ಗುಲ್ಬರ್ಗಾ - 224302

ಜೀವಿ ಇರುವ ಜಾಗದಲ್ಲೆಲ್ಲ ಭಾವ ಸ್ಪಂದನ ಇರುತ್ತದೆ. ಅದು ಒಳ್ಳೆಯದೂ ಇರಬಹುದು, ಕೆಟ್ಟದ್ದೂ ಇರಬಹುದು. ಇದನ್ನು ಭಾವವಲಯ ಎಂದು ಕರೆಯುತ್ತೇವೆ. ಈ ಭಾವವಲಯ ಸ್ಪಂದನಶೀಲವೂ, ಕಂಪನಶೀಲವೂ ಆಗಿರುತ್ತದೆ.

ಜ್ಞಾನ, ಕರ್ಮ, ಭಾವ ಇವು ಮೂರು ಬದುಕಿನ ಆಧಾರಸ್ತಂಭಗಳು. ಸದಾಶಯದ ಸಂಗಾತವಿರದೆ ಇವು ತುಂಬ ಅಪಾಯಕಾರಿ. ಕ್ರಿಯೆಗೆ ತಕ್ಕ ಭಾವ, ಭಾವಕ್ಕೆ ತಕ್ಕ ನಡೆ, ಗೌರವ ಹುಟ್ಟಿಸುತ್ತವೆ. ಭಾವ ಅನೇಕ ಮುಖಿ. ಪ್ರೀತಿ - ಪ್ರೇಮ, ವಾತ್ಸಲ್ಯ, ಚೈತನ್ಯ ಇತ್ಯಾದಿ ಭಾವದ ನಾನಾ ರೂಪಗಳು. ಇವಿಲ್ಲದ ಕ್ರಿಯೆ ಮುದ ನೀಡುವುದಿಲ್ಲ, ಅಲ್ಲಿ ಹದ ಕಾಣವುದಿಲ್ಲ. ಭಾವದ ಸಂಗಾತಕ್ಕೆ ಕಾತೊರೆವ ಮನ ಮೊರೆಯಿಡುವ ಪರಿ ನೋಡಿ :

ನೀನಿಲ್ಲದೆ ಬಾಳು ಬರಡಾಗಿದೆ
ಚೈತನ್ಯದ ಸೆಲೆಯು ಬರಿದಾಗಿದೆ
ಬರಡಾಗಿದೆ, ಕೊರಡಾಗಿದೆ
ಬೆಳಕೆಲ್ಲವೂ, ಬದುಕೆಲ್ಲವೂ, ನಿನ್ನಿಂದಲೇ
ನೀನಿಲ್ಲದೆ ಬಾಳು ಬರಡಾಗಿದೆ.

ಜರಿ ಹತ್ತಿದೆ ಧರೆಗೆ
ಸೆಲೆ ಬತ್ತಿದೆ ಕೆರೆಗೆ
ಬ್ರಹ್ಮಾಂಡ ನಿನ್ನೊಳಗೆ
ನಿಂತಿರುವೆ ಏಕೆ ಹೊರಗೆ, ಬರಬಾರದೆ,
ನೀನಿಲ್ಲದೆ ಬಾಳು ಬರಡಾಗಿದೆ.

**ಬಿ. ಆರ್. ಪೋಲೀಸ್ ಪಾಟೀಲ**

ಗೆಲುವೆಲ್ಲವೂ ಹುಸಿಯಾಗಿದೆ,
ಕೊಲ್ಲುವುದೆ ಇಲ್ಲಿ ಕಸಬಾಗಿದೆ
ನಗೆಯೆಂಬುದೀಗ ಹೊಗೆಯಾಗಿದೆ
ನಿಟ್ಟುಸಿರೆ ಬಾಳ ಜೊತೆಯಾಗಿದೆ, ನೀ ಬಾರದೆ
ನೀನಿಲ್ಲದೆ ಬಾಳು ಬರಡಾಗಿದೆ.

ಸದ್ಭಾವವೇ ಬಾS
ಚೈತನ್ಯವೇ ಬಾSS
ಪ್ರೀತಿಸುವುದ ಕಲಿಸು
ನೆಮ್ಮದಿಯನಿತ್ತು ಹರಸು, ದಯೆ ತೋರಿಸು
ನೀನಿಲ್ಲದೆ ಬಾಳು ಬರಡಾಗಿದೆ.

ಭಾವ ತಿಳಿಯಾಗಿದ್ದರೆ ಬದುಕು ತಿಳಿಯಾಗಿರುತ್ತದೆ. ಅಳಿಮನದವನ ಭಕ್ತಿಯೂ, ಶಕ್ತಿಯೂ ವ್ಯರ್ಥ. ಇದನ್ನು :

ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ
ಇರುಳೆಲ್ಲ ನಡೆದನಾ ಸುಂಕಕ್ಕಂಜಿ

ಎಂದು ಬಣ್ಣಿಸಿದ್ದಾರೆ ಜೇಡರ ದಾಸಿಮಯ್ಯನವರು.

ಹೀಗೊಬ್ಬ ತಾಯಿ, ತನ್ನ ಮಗನಿಗೆ ಸಕಲ ಭೋಗ ಭಾಗ್ಯಗಳು ಪ್ರಾಪ್ತವಾಗಲಿ ಎಂದು ಅಖಂಡ ಇಪ್ಪತ್ತೈದು ವರ್ಷಗಳ ಕಾಲ ಪ್ರಾರ್ಥಿಸಿದಳು. ಮಗ ಚೆನ್ನಾಗಿ ಓದಿದ, ಒಳ್ಳೆಯ ಕೆಲಸ ಸಿಕ್ಕಿತು. ಭಾಗ್ಯ ಬಂತು, ಬುದ್ಧಿ ಹೋಯಿತು. ಅಧಿಕಾರದ ಅಮಲು ತಲೆಗೇರಿತು; ಅಕ್ರಮ ಸಂಪಾದನೆ ಹಾದಿ ಬಿಡಿಸಿತು. ದುಷ್ಟನಾದ, ಭ್ರಷ್ಟನಾದ, ವ್ಯಸನಿಯಾದ, ಅಪರಾಧ ಜಗತ್ತಿನ ದೊರೆಯಾಗಿ ಮೆರೆದ, ಕೆಲವು ದಿನ ಮಾತ್ರ. ಕೊನೆಗೊಮ್ಮೆ ಅವನ ಅಪರಾಧಗಳೆಲ್ಲ ಬಯಲಾಗಿ ಆತನಿಗೆ ಜೈಲು ಶಿಕ್ಷೆಯಾಯಿತು. ಎಲ್ಲರೂ ಆ ತಾಯಿಯನ್ನು: ''ನೀನು ಇಷ್ಟು ವರ್ಷ, ಅದೆಷ್ಟು ನಿಷ್ಠೆಯಿಂದ ಪ್ರಾರ್ಥನೆ ಮಾಡಿದೆ. ಅದರ ಪ್ರತಿಫಲ ಇದೇನಾ ? ನಿನ್ನ ಮಗ ಹೀಗೇ ಬೆಳೆಯಲಿ ಎಂದೇನಾದರೂ ಪ್ರಾರ್ಥಿಸಿದೆಯಾ ?'' ಎಂದು ಕೇಳಿದರು. ಆಕೆ ಶಾಂತವಾಗಿಯೇ ಹೇಳಿದಳು: ''ತಪ್ಪು ಅವನದಲ್ಲ, ನನ್ನದು. ನನ್ನ ಭಾವದ ಹಿಂದೆ ಸ್ವಾರ್ಥವಿತ್ತು. ನನ್ನ ಮಗನಿಗೆ ಮಾತ್ರ ಸಕಲ ಭಾಗ್ಯ ದೊರಕಲಿ ಎಂದು ಪ್ರಾರ್ಥಿಸಿದೆ. ನನ್ನ ಪ್ರಾರ್ಥನೆಯಲ್ಲಿ ನಿಷ್ಠೆಯಿತ್ತು, ಆದ್ದರಿಂದ ನನ್ನ ಪ್ರಾರ್ಥನೆ ಭಗವಂತನಿಗೆ ಮುಟ್ಟಿತು. ಆತ ನಾನು ಬೇಡಿದ್ದನ್ನು ನೀಡಿದ. ಆದರೆ ನನ್ನ ಭಾವಮಾಲಿನ್ಯದಿಂದಾಗಿ ನನ್ನ ಮಗ ಲೋಕ ಕಂಟಕನಾದ.''



ಧೃತರಾಷ್ಟ್ರ ಕುರುಡ, ಗಾಂಧಾರಿ ಕಣ್ಣಿದ್ದೂ ಕುರುಡಿಯಾದಳು. ಇವರಿಬ್ಬರೂ ಕುರುಕ್ಷೇತ್ರ ಯುದ್ಧದ ಸಂದರ್ಭದಲ್ಲಿ ತಮ್ಮ ನೂರು ಮಕ್ಕಳಿಗೆ ಜಯಸಿಗಲಿ ಎಂದು ಪ್ರಾರ್ಥಿಸಿದರೇ ವಿನಾ ಸತ್ಯಕ್ಕೆ ಜಯವಾಗಲಿ ಎಂದು ಇಬ್ಬರೂ ಪ್ರಾರ್ಥಿಸಿರಲಿಕ್ಕಿಲ್ಲ. ಕುರುಕ್ಷೇತ್ರದಲ್ಲಿ ಆದದ್ದೇನು ? ಕೌರವರಷ್ಟೇ ಅಲ್ಲ ಅಭಿಮನ್ಯು, ಕರ್ಣ, ದ್ರೋಣ, ಭೀಷ್ಮರೊಂದಿಗೆ ಲಕ್ಷಾಂತರ ವೀರಯೋಧರು ಪ್ರಾಣ ಕಳಕೊಂಡರು.

ಆದ್ದರಿಂದ ಉಳಿದೆಲ್ಲ ಮಾಲಿನ್ಯಗಳಿಗಿಂತ ಈ ಭಾವ ಮಾಲಿನ್ಯ ಭಯಾನಕವಾದುದು. ಭಾವ ಶುದ್ಧವಿರದಿದ್ದರೆ ಎಂಥ ಉನ್ನತ ವಿದ್ಯೆಯೂ ಇಚ್ಛಿತ ಫಲ ಕೊಡಲಾರದು.

ಒಂದು ಕಡೆ ವಿದ್ಯೆ- ಪಾಂಡಿತ್ಯ, ಇನ್ನೊಂದೆಡೆ ನಿಷ್ಕಾಮ ಕರ್ಮ, ಶುದ್ಧ ವಿರತಿಭಾವ. ಹೃದಯದಲ್ಲಿ ನಿರ್ವ್ಯಾಜ ಪ್ರೇಮವಿದ್ದರೆ ಯಾವುದೇ ಕಾರ್ಯ ಮಾಡಿದರೂ ಅದರಲ್ಲಿ ಸಂತೋಷವಿರುತ್ತದೆ. ಕರ್ಮದ ಸತ್ಫಲ ದೊರಕುತ್ತದೆ.

ಒಬ್ಬ ಆಗರ್ಭ ಶ್ರೀಮಂತ, ಅವನಿಗೊಬ್ಬಳೇ ಮಗಳು ಸುಶೀಲೆ. ವಿದ್ಯಾವಂತೆ, ಬುದ್ಧಿವಂತೆ, ಸುಂದರಿ, ಸುಶೀಲೆ. ಅವಳ ಸಹಪಾಠಿ ಮತ್ತೊಬ್ಬ ಆಗರ್ಭ ಶ್ರೀಮಂತನ ಮಗ. ಅವನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡುವುದಾಗಿ ನಿಶ್ಚಯ ಮಾಡಿದ. ಅವನನ್ನು ತನ್ನ ಮನೆಯಲ್ಲೇ ಇಟ್ಟುಕೊಂಡು ಉನ್ನತ ಶಿಕ್ಷಣ ನೀಡಿದ.

ತನ್ನ ಮನೆಯಲ್ಲಿ ಕೆಲಸ ಮಾಡಿಕೊಂಡಿದ್ದ ಬಡ ಹೆಣ್ಣುಮಗಳ ಮಗನೂ ಸುಶೀಲಳ ಸಹಪಾಠಿಯಾಗಿದ್ದುದು ಅವನಿಗೆ ಗೊತ್ತಿತ್ತು. ಆತ ಬುದ್ಧಿವಂತ,

# ಭಾವ ಬತ್ತದಿರಲಿ...

''ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯಾ. ಇವ ನಮ್ಮವ, ಇವ ನಮ್ಮವ ಇವ ನಮ್ಮವನೆಂದೆನಿಸಯ್ಯಾ'' ಎಂಬ ಭಾವ ಶ್ರೀಮಂತಿಕೆಯಿಂದಾಗಿಯೇ ಬಸವಣ್ಣನ ಮನೆ ಮಹಾಮನೆಯೆನ್ನಿಸಿತು, ಕಲ್ಯಾಣ ಕೈಲಾಸವಾಗಿ ಕಂಗೊಳಿಸಿತು. ದೇಶ-ವಿದೇಶಗಳಿಂದ ಜನ ಕಲ್ಯಾಣಕ್ಕೆ ಬಂದು ಶರಣರಾದರು. ಇಂಥ ಭಾವಗಳ ಹಿಂದೆ ಅಂಧಕಾರವಿರುವುದಿಲ್ಲ, ಬರಿ ಬೆಳಕು ಇರುತ್ತದೆ; ಸಂತೃಪ್ತಿ, ಸಮಾಧಾನವಿರುತ್ತದೆ. ಆದ್ದರಿಂದ ಇಂಥ ಭಾವ ಸೆಲೆ ಎಂದೆಂದೂ ಬತ್ತದಿರಲಿ ಎಂಬ ಪ್ರಾರ್ಥನೆ ಎಲ್ಲರದೂ ಆಗಬೇಕು, ಆಗ ನಾವಿರುವ ಭೂಮಿಯೇ ಸ್ವರ್ಗವಾಗುತ್ತದೆ.

ನಗರ್ಿ. ಆದರೆ ಎರಡು ಹೊತ್ತಿನ ಊಟಕ್ಕೂ ಗತಿಯಿಲ್ಲದಷ್ಟು ಬಡವ – ಎಂದೂ ಅವನಿಗೆ ಗೊತ್ತಿತ್ತು. ಸುಶೀಲಳಿಗೆ ಇವನ ಮೇಲೆ ಪ್ರೀತಿ ಇದ್ದರೂ ಅವನನ್ನು ಗಂಡನನ್ನಾಗಿ ಸ್ವೀಕರಿಸಲು ಆಕೆಯ ತಂದೆ ಒಪ್ಪಲಿಲ್ಲ. ಯಾಕೆಂದರೆ ಈತ ಕಡುಬಡವ. ಭಾವೀ ಅಳಿಯನ ಬಿಟ್ಟುಡುಗೆ ತೊಟ್ಟು, ಉಂಡು ಬಿಟ್ಟ ಅಡಿಗೆ ಉಂಡು, ಏಕಚಿತ್ತದಿಂದ ಓದಿ ಉನ್ನತ ದರ್ಜೆಯಲ್ಲಿ ತೇರ್ಗಡೆಯಾದ. ಇದಕ್ಕೆ ಸುಶೀಲಳ ತಂದೆಯ ಔದಾರ್ಯವೇ ಕಾರಣ ಎಂದು ಹೇಳಿದ. ಆದರೆ ಅಳಿಯ ಎಷ್ಟು ಕೊಟ್ಟರೂ ತೃಪ್ತನಾಗಲಿಲ್ಲ. ಮದುವೆ ಮುಂದೂಡುತ್ತ ಬಂದ. ಕಾರಣ ಕೇಳಲು ಅವನ 'ಆಸ್ತಿಯೆಲ್ಲವನ್ನೂ ತನ್ನ ಹೆಸರಿಗೆ ವರ್ಗಾಯಿಸಿದರೆ ಮಾತ್ರ ಮದುವೆ' ಎಂದಾಗ ಶ್ರೀಮಂತನ ಭ್ರಮೆ ನಷ್ಟವಾಯಿತು. ಅವನನ್ನು ಹೊರಹಾಕಿದ. ತನ್ನ ಕೂಲಿಯಾಳಿನ ಮಗ ಸುಶೀಲನೇ ಮಗಳು ಸುಶೀಲೆಗೆ ತಕ್ಕ ವರ ಎಂದು ತೀರ್ಮಾನಿಸಿ ತಾನೇ ಅವನ ಗುಡಿಸಲಿಗೆ ಹೋದ; ತನ್ನ ನಿರ್ಧಾರ ತಿಳಿಸಿದ. ಸುಶೀಲೆ ಗುಣವಂತೆಯೆಂದು ಗೊತ್ತಿತ್ತು. ಆದ್ದರಿಂದ ಅವನಿಗೂ ಸಂತೋಷವಾಯಿತು. ಸೂಕ್ತ ಸಮಯದಲ್ಲಿ ಮದುವೆಯಾಗುವುದಾಗಿ ಹೇಳಿದ.



'ನನ್ನ ಆಸ್ತಿಯನ್ನೆಲ್ಲ ನಿನ್ನ ಹೆಸರಿಗೆ ಬರೆಯುತ್ತೇನೆ ಈಗಲೇ. ನೀನು ಏನೂ ಮಾಡುವುದು ಬೇಡ. ಹತ್ತು ಜನ್ಮಗಳಲ್ಲಿ ಕುಳಿತು ಉಂಡರೂ ಸವೆಯದಷ್ಟು ಆಸ್ತಿಯಿದೆ. ತಡವೇಕೆ, ಮದುವೆ ಮಾಡಿಕೊಂಡುಬಿಡು' ಎಂದ ಶ್ರೀಮಂತ. ಸುಶೀಲ ವಿನಮ್ರವಾಗಿಯೇ ಹೇಳಿದ: ''ನಿಮ್ಮದೇನಿದ್ದರ ನಿಮ್ಮದೆ, ನನ್ನದು ಮಾತ್ರ ನನ್ನದು. ನಿ ಮಗಳನ್ನು ಸಾಕುವ ಶಕ್ತಿ ನನಗೆ ಬಂದಾಗ ನಾ ಬಂದು 'ಕನ್ಯಾದಾನ ಮಾಡಿರಿ' ಎಂ ಕೇಳುವೆ'' ಎಂದ. ಅವನ ಈ ಭಾವವ ಕಂಡು ಶ್ರೀಮಂತ ಹಿರಿಹಿರಿ ಹಿಗ್ಗಿದ.

ಇಂಥ ಭಾವ ಶ್ರೀಮಂತಿಕೆ ಇರುವಲ್ಲಿ ದು ಹಾಗೂ ದಾರಿದ್ರ್ಯ ಸುಳಿಯುವುದಿಲ್ಲ. ಬಸವಣ್ಣ ಭಾವವೂ ಇಂಥದೆ ಆಗಿತ್ತು. ''ಇವನಾರ ಇವನಾರವ, ಇವ ನಾರವನೆಂದೆನಿಸದಿರಯ್ಯಾ ಇವ ನಮ್ಮವ, ಇವ ನಮ್ಮವ ಇವ ನಮ್ ನೆಂದೆನಿಸಯ್ಯಾ'' ಎಂಬ ಭಾವ ಶ್ರೀಮಂ ಯಿಂದಾಗಿಯೇ ಬಸವಣ್ಣನ ಮ ಮಹಾಮನೆಯೆನ್ನಿಸಿತು, ಕಲ್ಯಾಣ ಕೈಲಾಸವಾ ಕಂಗೊಳಿಸಿತು. ದೇಶ-ವಿದೇಶಗಳಿಂದ ಜ ಕಲ್ಯಾಣಕ್ಕೆ ಬಂದು ಶರಣರಾದರು.

ಇಂಥ ಭಾವಗಳ ಹಿಂದೆ ಅಂಧಕಾ ವಿರುವುದಿಲ್ಲ, ಬರಿ ಬೆಳಕು ಇರುತ್ತದೆ; ಸಂತೃಪ್ತಿ, ಸಮಾಧಾನವಿರುತ್ತದೆ. ಆದ್ದರಿಂ ಇಂಥ ಭಾವ ಸೆಲೆ ಎಂದೆಂದೂ ಬತ್ತದಿರಲಿ ಎಂಬ ಪ್ರಾರ್ಥನೆ ಎಲ್ಲರದೂ ಆಗಬೇಕು ಆಗ ನಾವಿರುವ ಭೂಮಿಯೇ ಸ್ವರ್ಗವಾಗುತ್ತದೆ.

ಬಿ. ಆರ್. ಪೋಲೀಸ್ ಪಾಟೀಲ
'ವಾತ್ಸಲ್ಯ', ಸೋಮವಾರ ಪೇಟೆ
ಬನಹಟ್ಟಿ - ೫೮೭೩೧೧. ಬಾಗಲಕೋಟೆ ಜಿಲ್ಲೆ.



ರೂ. 500/-



ರೂ. 125/-



ರೂ. 200/-


ರೂ. 200/-



ರೂ. 200/-

ಪ್ರಿಯದರ್ಶಿನಿ ಪ್ರಕಾಶನ




ಎ–01–03 ಸ್ಪೀಚ್ ಅಂಡ್ ಹಿಯರಿಂಗ್ ಲೇಔಟ್
ಬೋಗಾದಿ ಎರಡನೇ ಹಂತ, ಮೈಸೂರು ದಕ್ಷಿಣ
ಮೈಸೂರು – 570026



ರೂ. 250/-



ರೂ. 200/-

# ಸಿನಿಮಾ – ಪ್ರಾದೇಶಿಕ, ಸಾಂಸ್ಕೃತಿಕ ಆಶಯಗಳಿಗೆ ನೈತಿಕವಾಗಿ ಸ್ಪಂದಿಸಬೇಕು

ಬಹಳ ಇತ್ತೀಚಿನವರೆಗೂ ಸಂಸ್ಕೃತಿಯ ಪರಿಕಲ್ಪನೆ ಸಾಹಿತ್ಯ, ಸಂಗೀತ, ನೃತ್ಯ, ಚಿತ್ರಕಲೆ ಮುಂತಾದ ಅಭಿವ್ಯಕ್ತಿ ಮಾಧ್ಯಮಗಳಲ್ಲಿನ ಸೃಷ್ಟಿ ಮತ್ತು ಗ್ರಹಿಕೆಗಳ ಜಿಜ್ಞಾಸೆಗೆ ಸೀಮಿತವಾಗಿತ್ತು. ಅಂದರೆ ಸಂಸ್ಕೃತಿ ಮನಸ್ಸಿನ ಸೂಕ್ಷ್ಮಸಂವೇದನೆಗಳಿಗೆ ಮಾತ್ರ ಕನ್ನಡಿಯೆಂಬಂತೆ ಗುರುತಿಸಲಾಗುತ್ತಿತ್ತು. ಒಂದು ಭಾಷೆಯ, ಪ್ರದೇಶದ ಚೌಕಟ್ಟಿನೊಳಗೆ ನಿರ್ಮಿತವಾದರೂ ಸಹ, ಅದರ ವ್ಯಾಪ್ತಿ ಮತ್ತು ಆಶಯಗಳು ಸಾರ್ವತ್ರಿಕವೂ ಸಾರ್ವಕಾಲಿಕವೂ ಆಗಿರುತ್ತಿದ್ದವು. ಇದಕ್ಕೆ ತೀರ ವಿಭಿನ್ನವಾದ ನೆಲೆಯಲ್ಲಿ ಕೆಲಸ ಮಾಡುವಂತಹುದು ನಮ್ಮ ಕಾಲದ ಸಮೂಹ ಮಾಧ್ಯಮಗಳು. ಅವು ಒಂದು ಸಂಸ್ಕೃತಿಯೇ ಅನ್ನುವುದಕ್ಕಿಂತ ಹೆಚ್ಚಾಗಿ ಒಂದು ಜನಸಮುದಾಯದ ಭಾವುಕ ಜಗತ್ತನ್ನು ಮಾತ್ರವೇ ಪ್ರತಿನಿಧಿಸುತ್ತವೆ. ಆದ್ದರಿಂದಲೇ, ಸಮೂಹ ಮಾಧ್ಯಮಗಳು ಬೆಳೆದಂತೆಲ್ಲಾ ಸಂಸ್ಕೃತಿಯ ಪರಿಕಲ್ಪನೆಯಲ್ಲೇ ಬದಲಾವಣೆಯನ್ನು ಕಾಣಬಹುದು. ಈಗ ಜೀವನಕ್ರಮಗಳೇ ಸಂಸ್ಕೃತಿಯ ಪರಿಕಲ್ಪನೆಗಳನ್ನು ಸೂಚಿಸುತ್ತವೆಯೇ ಹೊರತು ಕಲೆ, ಸಾಹಿತ್ಯ ಮುಂತಾದವುಗಳಲ್ಲ. ಇಂತಹ ಸಂಸ್ಕೃತಿಯ ಹೊಸ ಪರಿಕಲ್ಪನೆಗಳನ್ನು ಪ್ರಾತಿನಿಧಿಕವಾಗಿ ಕಾಣಿಸುವ ಮಾಧ್ಯಮಗಳೆಂದರೆ ಸಿನಿಮಾ, ಟೆಲಿವಿಷನ್ ಮುಂತಾದ ಸಮೂಹ ಮಾಧ್ಯಮಗಳು. ಈ ಮಾಧ್ಯಮಗಳು ನಿರ್ಮಿಸುತ್ತಿರುವ ಭಾವುಕ ಜಗತ್ತು ಏಕಕಾಲಕ್ಕೆ ಹಲವಾರು ಅಂಶಗಳನ್ನು ಹೊಂದಿರುವಂತಹದ್ದು. ಅದರಲ್ಲಿ ಮನುಷ್ಯನ ಹೃದಯದ ವೈಯಕ್ತಿಕ ಆಸೆ ಆಕಾಂಕ್ಷೆಗಳು, ಕುಟುಂಬದ ಆಸೆ ಆಕಾಂಕ್ಷೆಗಳು, ಸಾಮಾಜಿಕ ಆಶಯಗಳು ಮತ್ತು ರಾಜಕೀಯ ಆಶಯಗಳು ಸೇರಿಕೊಂಡಿವೆ. ಹೀಗೆ ಇಷ್ಟೊಂದು ಅಂಶಗಳು ಒಟ್ಟಿಗೇ ಸೇರಿದಾಗ ಉಂಟಾಗುವ ಸಂಘರ್ಷ ಇತ್ಯಾತ್ಮಕವಾಗೂ ಇರಬಹುದು, ನೇತ್ಯಾತ್ಮಕವಾಗಲೂಬಹುದು. ಬಹುಶಃ ಈ ಕಾರಣಕ್ಕಾಗಿಯೇ ಸಿನಿಮಾ ತನ್ನೊಳಗೆ ಸ್ಫೋಟಿಸುವ ಹಿಂಸೆಯ ಸ್ವರೂಪ, ಲೈಂಗಿಕತೆಯ ಅತಿಪ್ರಮಾಣ, ಸೆಂಟಿಮೆಂಟಾಲಿಟಿ ಅದರ ಪ್ರಧಾನ ಲಕ್ಷಣವಾಗಿ ಕಾಣಿಸಿಕೊಳ್ಳುತ್ತಿರುವುದು. ಇಂತಹ ಸನ್ನಿವೇಶದಲ್ಲಿ, ರಾಜಕೀಯ ಪ್ರಜ್ಞೆಯನ್ನು ಬೆಳೆಸುವ, ಸಾಮಾಜಿಕ ಬದಲಾವಣೆಯ ಆಶಯಗಳನ್ನು ಮಂಡಿಸುವ, ಕುಟುಂಬ ವ್ಯವಸ್ಥೆಯನ್ನು ಪರಿಶೀಲಿಸುವ, ವೈಯಕ್ತಿಕ ಸಂಬಂಧಗಳನ್ನು ಶೋಧಿಸಬಲ್ಲ ಅದರ ಗುಣಾತ್ಮಕ ಶಕ್ತಿಯ ಕಡೆ ನಮ್ಮ ಗಮನ ಅಷ್ಟಾಗಿ ಹರಿಯುತ್ತಿಲ್ಲ. ಅದಕ್ಕೆ ಮುಖ್ಯ ಕಾರಣ ಸಿನಿಮಾಗಳ ಸ್ವರೂಪ. ಅಂದರೆ ಕಥೆ ಮತ್ತು ಕಥಾವಸ್ತುಗಳು ಗಟ್ಟಿಯಾಗಿದ್ದರೂ ಹೆಚ್ಚು ಜನರಿಗೆ ತಲುಪಬೇಕಾದ ಆರ್ಥಿಕ, ವಾಣಿಜ್ಯ ಒತ್ತಾಯಗಳು. ಅದರ ಅಸಹಜ ಮತ್ತು ಅತಿಭಾವುಕತೆಯ ಅಭಿವ್ಯಕ್ತಿ ಕ್ರಮ ನಮ್ಮನ್ನು ಒಟ್ಟಾಗಿ ಕಥಾವಸ್ತುವಿನ ಕಡೆ ಗಮನ ಸೆಳೆಯುವ ಬದಲು, ಬಿಡಿ ಬಿಡಿ ಚಿತ್ರಗಳ ಮೇಲೆ ಅನುಭವವನ್ನು ಕಟ್ಟಲು ಯತ್ನಿಸುತ್ತದೆ. ಇನ್ನೂ ವಿಸ್ತರಿಸಿ ಹೇಳಬೇಕಾದರೆ, ನಾವು ಸಿನಿಮಾವನ್ನು ನೋಡುವುದು ನಾಟಕವಾಗಿ, ಸಂಗೀತವಾಗಿ, ನೃತ್ಯವಾಗಿ, ಛಾಯಾಚಿತ್ರವಾಗಿಯೇ ಹೊರತು ಒಟ್ಟಾಗಿಯಲ್ಲ. ಪಾತ್ರಗಳು ಕೂಡ ನಮಗೆ ಗ್ರಾಹ್ಯವಾಗುವುದು ಹೀರೋಗಳಾಗಿ, ಖಳನಾಯಕರಾಗಿ, ಹಾಸ್ಯ ಪಾತ್ರಗಳಾಗಿಯೇ ಹೊರತು ಇವೆಲ್ಲದರ ಸಂಗಮವಾಗಿ ಅಲ್ಲ. ಹೀಗಾಗಿ ಸಿನಿಮಾ ತನ್ನ ಸಾಂಸ್ಕೃತಿಕ ಮಹತ್ವವನ್ನು ಪಾರಂಪರಿಕ ನೆಲೆಗಳಲ್ಲಿ ಗುರುತಿಸಿಕೊಳ್ಳಲು ಸಾಧ್ಯವಾಗಿಲ್ಲ. ಸಂಸ್ಕೃತಿಯ ಹೊಸ ಪರಿಕಲ್ಪನೆಗಳಾದ ಜೀವನಶೈಲಿ, ಸಾಮೂಹಿಕ ದಂತಕತೆಗಳನ್ನು ಪ್ರತಿನಿಧಿಸುವ ಸಿನಿಮಾ ಒಂದು ಜಾನಪದ ಕಲೆಯಾಗಿ ಕೆಲವು ಬುದ್ಧಿಜೀವಿಗಳಿಗೆ ಕಂಡಿರುವುದು ಈ ಹಿನ್ನೆಲೆಯಲ್ಲಿರಬಹುದೇನೋ. ಆದರೆ, ಎಲ್ಲ ಹೊಸ ಸಮೂಹ ಮಾಧ್ಯಮಗಳೂ ಸಮುದಾಯಗಳ ಮಧ್ಯೆ ಸೃಷ್ಟಿಯಾದವಲ್ಲ, ತಂತ್ರಜ್ಞಾನ ಮತ್ತು ವಾಣಿಜ್ಯ ಕಾರಣಗಳಿಂದ ಜನರ ಮೇಲೆ ಹೇರಲ್ಪಟ್ಟಂತಹವು ಎಂಬುದನ್ನು ಗಮನಿಸಿದರೆ ಜನಪದ ಮತ್ತು ಜನಪ್ರಿಯತೆಯ ನಡುವೆ ಇರುವ ಸೂಕ್ಷ್ಮ ವ್ಯತ್ಯಾಸವನ್ನು ಗುರುತಿಸಬಹುದು.

ಸಿನಿಮಾದ ತಂತ್ರಜ್ಞಾನ ಮತ್ತು ವಾಣಿಜ್ಯ ನೆಲೆಗಳೇ ಗಾಂಧೀಜಿಯವರಿಗೆ ಆ ಮಾಧ್ಯಮದ ಬಗೆಗಿನ ನಿರಾಸಕ್ತಿಗೆ ಕಾರಣವಾಗಿತ್ತು ಎಂಬುದನ್ನು ಈಗ ತಾರ್ಕಿಕವಾಗಿ ಗುರುತಿಸಬಹುದು. ಅವರ ಭಾರತೀಯತೆಯ ತತ್ತ್ವಚಿಂತನೆಯ ಕೇಂದ್ರದಲ್ಲಿದ್ದುದು ಧಾರ್ಮಿಕ ಶ್ರದ್ಧೆ. ಅವರ ಮಟ್ಟಿಗೆ ಸಂಗೀತ, ನೃತ್ಯ, ಶಿಲ್ಪಕಲೆ, ಚಿತ್ರಕಲೆ, ಕಡೆಗೆ ಸಾಹಿತ್ಯಕ್ಕೂ ಕೂಡ ಅರ್ಪಣಾಭಾವವೇ ಮೂಲಪ್ರೇರಣೆ. ಇಂತಹ ಒಂದು ಸಾಮಾಜಿಕ ಚೌಕಟ್ಟಿನೊಳಗೆ, ಪವಿತ್ರ ಸಂಸ್ಕೃತಿಗೆ ಕವಿ ಗೋಪಾಲಕೃಷ್ಣ ಅಡಿಗರ ಮಾತುಗಳಲ್ಲಿ ಹೇಳುವುದಾದರೆ 'ಬಡಿದ ಆಧುನಿಕ ವಿಕಾರ' ತಂತ್ರಜ್ಞಾನ (ಸಿನಿಮಾ ಕೂಡ ಒಳಗೊಂಡಂತೆ). ೧೯೨೧ರಷ್ಟು ಹಿಂದೆಯೇ ಗಾಂಧೀಜಿ ಕರೆಕೊಟ್ಟ ''ಕಳೆದ ಐವತ್ತು ವರ್ಷಗಳ ಭಾರತದ ಅನುಭವವನ್ನು ಕಳೆದುಕೊಳ್ಳುವುದು'' ಎಂಬುದರಲ್ಲಿ ಪಾಶ್ಚಾತ್ಯ ಚಿತ್ರಗಳೂ ಕೂಡ ಸೇರಬೇಕೆ ಎನ್ನುವ ಚರ್ಚೆ ಕೂಡ

ಎನ್. ವಿದ್ಯಾಶಂಕರ್









ನಡೆದಿತ್ತು. ಇದೇ ಸರಿಸುಮಾರಿಗೆ ನಡೆದ ಗಾಂಧೀಜಿ - ಚಾರ್ಲಿ ಚಾಪ್ಲಿನ್ ಭೇಟಿ ಹಲವು ಸೂಕ್ಷ್ಮ ವಿವರಗಳನ್ನು ನೀಡುವಲ್ಲಿ ಸಹಾಯ ಮಾಡಬಲ್ಲದು. ಆಧುನಿಕ ತಂತ್ರಜ್ಞಾನವನ್ನು ತೀವ್ರವಾಗಿ ವಿಮರ್ಶಿಸಿದ ''ಮಾಡರ್ನ್ ಟೈಂಸ್''ನಂತಹ ಚಿತ್ರವನ್ನು ನಿರ್ದೇಶಿಸಿದ ಚಾಪ್ಲಿನ್ ಆಧುನಿಕ ಯಂತ್ರಯುಗದ ಪರವಾಗಿ ''ನೀವ್ಯಾಕೆ ಯಂತ್ರಗಳನ್ನು ವಿರೋಧಿಸುತ್ತೀರಿ'' ಎಂದು ಪ್ರಶ್ನಿಸಿದಾಗ ಗಾಂಧೀಜಿ ನೀಡಿದ ಉತ್ತರ ಇಂದಿಗೂ ಪ್ರಸ್ತುತ. ''ಅತ್ಯಂತ ಮಹತ್ವದ ಸ್ವಾತಂತ್ರ್ಯವೆಂದರೆ ಅನವಶ್ಯಕವಾದ ವಸ್ತುಗಳನ್ನು ಕೈಬಿಡುವುದು ಮತ್ತು ಹಿಂಸೆಯು ಅಂತಿಮವಾಗಿ ತನ್ನನ್ನು ತಾನೇ ನಾಶಗೊಳಿಸಿಕೊಳ್ಳುತ್ತದೆಂಬುದು.'' ಗಾಂಧೀಜಿಗೆ ಹಿಂಸೆ ಮತ್ತು ಕ್ರೌರ್ಯ ಹುಟ್ಟುವುದು ಅನಗತ್ಯ ವಸ್ತುಗಳ ಸಂಗ್ರಹದಿಂದ. ಅವರ ಅನಗತ್ಯ ವಸ್ತುಗಳ ಪಟ್ಟಿಯಲ್ಲಿ ಬ್ರಿಟಿಷರ ಆಡಳಿತ ಮತ್ತು ಆಧುನಿಕ ತಂತ್ರಜ್ಞಾನ (ಸಿನಿಮಾ ಸೇರಿದಂತೆ) ಎರಡೂ ಸೇರಿತ್ತು. ಸಮಾಜದಲ್ಲಿ ಹಿಂಸೆಯ ಬಗೆಗಿನ ಗಾಂಧೀಜಿಯವರ ಗ್ರಹಿಕೆ ಇಂದಿಗೂ ಮಾದರಿ. ಜಗತ್ತಿನಾದ್ಯಂತ ಇಂದು ಕಾಣುತ್ತಿರುವ ಹಿಂಸೆ ಅನಗತ್ಯ ವಸ್ತುಗಳನ್ನು ಪಡೆಯುವುದಕ್ಕಾಗಿ ಮತ್ತು ಪಡೆಯುವುದರಿಂದ. ಕೇವಲ ಅಗತ್ಯ ವಸ್ತುಗಳನ್ನು ಸೃಷ್ಟಿಸುವ ರೈತ ಇವತ್ತೂ ತನ್ನ ಕ್ಷೋಭೆಯನ್ನು, ಕ್ಲೇಶವನ್ನು ಅಭಿವ್ಯಕ್ತಿಸುತ್ತಿರುವುದು ಆತ್ಮಹತ್ಯೆಯ ಮೂಲಕವೇ ಹೊರತು ಸಮಾಜದ ಮೇಲೆ ಹಿಂಸೆಯನ್ನು ಹೇರುವುದರ ಮೂಲಕ ಅಲ್ಲ ಎನ್ನುವುದು ಗಮನಾರ್ಹವಾದ ಸಂಗತಿ.

೧೯೩೮ರಲ್ಲಿ ಗಾಂಧೀಜಿ ಸಿನಿಮಾ ಉದ್ಯಮವನ್ನು ತಮ್ಮ ''ಕಟ್ಟಕಡೆಯ ಆದ್ಯತೆ'' ಎನ್ನುತ್ತಾರೆ. ಅಲ್ಲದೆ ಸಮಾಜದಲ್ಲಿ ಅದರ ನೈತಿಕ ಸ್ಥಾನವನ್ನು ಪ್ರಶ್ನಿಸುತ್ತಾರೆ. ಭಾರತದಲ್ಲಿ ಸಿನಿಮಾವನ್ನು ಹೇಗೆ ಗ್ರಹಿಸಿದ್ದೀವಿ ಎನ್ನುವುದರ ಮೊದಲ ಪ್ರತಿನಿಧಿ ಗಾಂಧೀಜಿ. ಗಾಂಧೀಜಿ ಮಾಧ್ಯಮದ ನೈತಿಕತೆಯನ್ನು ಪ್ರಶ್ನಿಸಿ ೮೦ ವರ್ಷಗಳು ಕಳೆದರೂ, ಅದರ ಬಗ್ಗೆ ನಿರ್ದಿಷ್ಟವಾದ ತಾತ್ವಿಕ ನಿಲುವೊಂದನ್ನು ತಳೆಯುವಲ್ಲಿ ನಮ್ಮ ಸಾಂಸ್ಕೃತಿಕ ರಾಜಕೀಯ ನಾಯಕತ್ವ ವಿಫಲವಾಗಿದೆ. ದಿನಕ್ಕೆ ನಾಲ್ಕಾರು ಸಿನೆಮಾಗಳನ್ನು ಟೆಲಿವಿಷನ್ ಮೂಲಕ ನೋಡುವ ಜನರೂ ಕೂಡ ಅದರ ಬಗ್ಗೆ ಗಂಭೀರ ಚರ್ಚೆ ಹಿಂಜರಿಯುವುದನ್ನು ಕಾಣಬಹುದು. ಮಾಧ್ಯಮದ ಬಗ್ಗೆ ಅದರಲ್ಲೂ ಮುಖ್ಯವಾ ಅದರಲ್ಲಿನ ಸಂಗೀತ ಮತ್ತು ಕಥೆಗಳ ಬಗ್ಗೆ ನಾಸ್ಟಾಲ್ಜಿಯಾದಿಂದ ಭಾವುಕರಾಗು ಮಂದಿ ಸಮಕಾಲೀನ ಸಿನಿಮಾ ತಮ್ಮ ಮಕ್ಕಳಮೇಲೆ ಬೀರುವ ಪ್ರಭಾವದ ಬ ಗಂಭೀರವಾಗಿ ಯೋಚನೆಮಾಡಲು ಹಚ್ಚುತ್ತಾರೆ ಮತ್ತು ಅವುಗಳ ಸಾಂಸ್ಕೃತಿ ದಿವಾಳಿತನದ ಬಗ್ಗೆ ಅಸಹನೆ ತೋರುತ್ತಾರೆ. ಏಕಕಾಲಕ್ಕೆ ಸಂಭ್ರಮಿಸುವ ಸಂತೋಷಗೊಳ್ಳುವ ಮತ್ತು ಪಾಪಪ್ರಜ್ಞೆಯನ್ನು ಬೆಳೆಸಿಕೊಳ್ಳುವಂತೆ ಮಾಡು ಮಾಧ್ಯಮ ಸಿನಿಮಾ. ಆದ್ದರಿಂದಲೇ, ಬೇರೆಲ್ಲ ಮಾಧ್ಯಮಗಳಿಗಿಂತ, ಉದ್ಯ ಗಳಿಗಿಂತ ಶಕ್ತಿಶಾಲಿ ಚಟುವಟಿಕೆಯಾಗಿ ರೂಪುಗೊಂಡಿರುವುದನ್ನು ನಾವಿಂದು ಕಾಣುತ್ತಿದ್ದೇವೆ. ನಮ್ಮಲ್ಲಿ ಈ ಹೊತ್ತು ದೈನಂದಿನ ಜೀವನಕ್ರಮಗಳನ್ನು, ಹೆಣ್ಣು ಗಂಡಿ ಸಂಬಂಧಗಳನ್ನು, ಹಿಂಸೆಯನ್ನು, ಕ್ರೌರ್ಯವನ್ನು ನಿರ್ಣಾಯಕವಾಗಿ ಪ್ರತಿನಿ ಸುತ್ತಿರುವುದು, ಪ್ರಚೋದಿಸುತ್ತಿರುವುದು ಸಿನಿಮಾ.

ಗಾಂಧೀಜಿಯವರ ಕಲ್ಪನೆಯ ಭಾರತದಿಂದ ನಾವು ಎಷ್ಟು ದೂರ ಬಂದಿದ್ದೀ ಎನ್ನುವುದರ ಸಂಕೇತಗಳಾಗಿ ನಮ್ಮ ಈ ಹೊತ್ತಿನ ಸಿನಿಮಾಗಳನ್ನು ನೋಡಬಹುದು ಈ 'ಆಧುನಿಕ ವಿಕಾರ' ಬೇರೆಲ್ಲ ಆಧುನಿಕ ವಸ್ತುಗಳಂತೆಯೇ ನಗರೀಕರಣ ಸರಂಜಾಮುಶಾಹಿ ವ್ಯವಸ್ಥೆ, ಪಾಶ್ಚಾತ್ಯ ಜೀವನಶೈಲಿಯ ವೇಗ, ವೇಷಭೂಷಣಗಳ ಇತ್ಯಾದಿಗಳಂತೆ ಜನಪ್ರಿಯ. ಇಂಗ್ಲಿಷ್ ಭಾಷೆಯಂತೆಯೇ ಸಿನಿಮಾ ಕೂಡ ಸಮುದಾಯದ ಹಗಲುಗನಸು. ಆದರೆ ಸಮಾಜವನ್ನು, ಆರ್ಥಿಕ ವ್ಯವಸ್ಥೆಯನ್ನು ಸಂಸ್ಕೃತಿಯನ್ನು ವಿಶ್ಲೇಷಿಸಲು ಬೇಕಾದ ತಾತ್ತ್ವಿಕತೆ ನಮಗಿನ್ನೂ ದಕ್ಕಿಲ್ಲ. ಏಕೆಂದರೆ ಗಾಂಧೀಜಿ ಹೇಳಿದ 'ಅನಗತ್ಯ ವಸ್ತು'ಗೆ ಸೇರಿದ 'ತಂತ್ರಜ್ಞಾನ', 'ಆರ್ಥಿ ಪರಾವಲಂಬನೆ'ಗಳನ್ನು ಪಾಶ್ಚಾತ್ಯರಿಂದ ಪಡೆದುಕೊಂಡ ಹಾಗೆ ಅದನ್ನು ಅಳವಡಿ ಕೊಳ್ಳಲು ಬೇಕಾದ ತರ್ಕ, ನೈತಿಕತೆ ಮತ್ತು ಸೌಂದರ್ಯ ಪ್ರಜ್ಞೆಗಳನ್ನು ಪಡೆದು


## ATTENTION

# PUBLISHERS AND RETAIL BOOKSELLERS

Contact us for Wholesale Distribution of Books of General Interest



Rs. 22



Vol. 1&2
Rs. 320 per set



Rs. 95



Rs. 75



Rs. 35



Rs. 35



Rs. 140

OVER 5,000 TITLES BY INDIAN & FOREIGN PUBLISHERS AVAILABLE AT WHOLESALE PRICES




**Kohinoor Book Distributors**

6/2, Railway Parallel Road, Kumara Park East, Bangalore - 560 001

© : 22261691, 51138691e-mail : kohinoorbooks@yahoo.co.in



Rs. 30

ಕೊಳ್ಳದೇ ಇರುವುದು. ಅಲ್ಲದೆ ತಂತ್ರಜ್ಞಾನ ಕೂಡ ಒಂದು ತರ್ಕವನ್ನು, ನೈತಿಕತೆಯನ್ನು, ಸೌಂದರ್ಯ ಪ್ರಜ್ಞೆಯನ್ನು ತನ್ನ ಹಿಂದೆ ಒಳಗೊಂಡಿರಬಹುದು ಎನ್ನುವ ಕುತೂಹಲ ಕೂಡ ನಮ್ಮ ಬೌದ್ಧಿಕ ವಲಯಗಳಲ್ಲಿ ಗಂಭೀರವಾಗಿ ಕಾಣಿಸದೇ ಹೋದದ್ದು ಆಶ್ಚರ್ಯಕರ. ಇಂತಹ ಒಂದು ಸ್ಥಿತಿಯನ್ನು ಉದಾಹರಣೆಯಾಗಿ ನಮ್ಮ ಸಾಹಿತ್ಯಲೋಕ ಪ್ರತಿನಿಧಿಸುತ್ತದೆ. ಪಾಶ್ಚಾತ್ಯೀಕರಣದತ್ತ ಸಂಪೂರ್ಣವಾಗಿ ವಾಲಿರುವ ಭಾರತದಲ್ಲಿ ಆಧುನಿಕ ಸಾಹಿತ್ಯಕ್ಕೆ ಕಂಡದ್ದು ಕೇವಲ ಸಾಮಾಜಿಕ ವಿಭಜನೆಗಳು, ಆತ್ಮರತಿ ಸ್ವರೂಪದ ವೈಯಕ್ತಿಕ ಸಂಘರ್ಷಗಳು ಮಾತ್ರ. ಜಾಗತಿಕ ಆರ್ಥಿಕ ನೀತಿಯಿಂದ, ತಂತ್ರಜ್ಞಾನದಿಂದ ನುಚ್ಚುನೂರಾಗುತ್ತಿರುವ ಆಧುನಿಕ ಮನುಷ್ಯನ ಸ್ಥಿತಿಯನ್ನು ಗುರುತಿಸಲು ನವ್ಯ ಗದ್ಯ ಸಾಹಿತ್ಯಕ್ಕಾಗಲಿ, ನವ್ಯೋತ್ತರ ಸಾಹಿತ್ಯಕ್ಕಾಗಲಿ ಸಾಧ್ಯವಾಗಿಲ್ಲ. ಸ್ವಾತಂತ್ರ್ಯಪೂರ್ವದ ಶಿವರಾಮ ಕಾರಂತರ 'ಮರಳಿ ಮಣ್ಣಿಗೆ'ಯ ಲಚ್ಚನ ಪಾತ್ರ ಪ್ರತಿನಿಧಿಸುವ ಜಾಗತಿಕ ಆರ್ಥಿಕ ನೀತಿಯ, ನಗರೀಕರಣದ ಆಧುನಿಕ ನೈತಿಕ ವಿಕಾರವೇ ಇನ್ನೂ ಸಾಹಿತ್ಯಿಕ ಮಾದರಿಯಾಗಿರುವುದನ್ನು ಗಮನಿಸಬಹುದು.

ಪಾಶ್ಚಾತ್ಯ ಮಾದರಿಯ ತಂತ್ರಜ್ಞಾನದ ಬಳಕೆಯನ್ನು (ಸಿನಿಮಾವನ್ನು) ಸಂಪೂರ್ಣವಾಗಿ ನಿರಾಕರಿಸಲು ಸಾಧ್ಯವಾಗಿದ್ದರೆ, ಪಾಶ್ಚಾತ್ಯ ಸಿನಿಮಾಗಳ ಆರ್ಥಿಕತೆ, ವಾಣಿಜ್ಯ ಮತ್ತು ಸೌಂದರ್ಯಗಳನ್ನು ಕೂಡ ನಿರಾಕರಿಸಲು ನಮಗೆ ಸಾಧ್ಯವಾಗುತ್ತಿತ್ತೇನೋ. ಆದರೆ ಈಗ ತಂತ್ರಜ್ಞಾನದ ಸವಲತ್ತುಗಳನ್ನು ಪಡೆದು ಕೊಳ್ಳುತ್ತಲೇ ಅದರ ಹಿಂದಿನ ತಾತ್ತ್ವಿಕತೆಯನ್ನು ಪಶ್ಚಿಮಬುದ್ಧಿಯೆಂದು ನಿರಾಕರಿಸುವುದು ಹಾಸ್ಯಾಸ್ಪದವಾಗುತ್ತದೆ. ಭಾರತದಲ್ಲಿ ಸಿನಿಮಾ ಬಗೆಗಿನ ನೈತಿಕ ಇಬ್ಬಂದಿತನ ಈ ಹಿನ್ನೆಲೆಯಿಂದ ಬಂದದ್ದು. ಮಾಧ್ಯಮದ ಆಂತರಿಕ ಶಕ್ತಿಯಾದ ಐಂದ್ರಿಯಕತೆಯನ್ನು ಲೈಂಗಿಕತೆಯಾಗಿ ಗ್ರಹಿಸುವ ಸ್ಥಿತಿ ಕೂಡ ಈ ನೈತಿಕ ಇಬ್ಬಂದಿತನದ ಇನ್ನೊಂದು ಪರಿಣಾಮ.

ಗಾಂಧೀಜಿಯವರಿಗೆ ಸಮಾಜದಲ್ಲಿ ನೈತಿಕತೆಯೇ ಅತ್ಯುತ್ಕೃಷ್ಟ ಮೌಲ್ಯ. ರಾಜಕೀಯವೂ ಸಹ ಅದರ ಅಡಿಯಾಳಾಗಿರಬೇಕು. ಆದ್ದರಿಂದಲೇ ಸಿನಿಮಾದ ಬಗ್ಗೆ ಅವರಿಗಿದ್ದ ಧೋರಣೆ ಅವರ ಸಮಕಾಲೀನರಾಗಿದ್ದ ಯೂರೋಪಿನ ರಾಜಕಾರಣಿಗಳಿಗಿಂತ ಭಿನ್ನ. ಗಾಂಧೀಜಿಯವರ ಸಮಕಾಲೀನರಾದ ಲೆನಿನ್ ಮತ್ತು ಹಿಟ್ಲರ್ ಇಬ್ಬರೂ ಸಿನಿಮಾ ಮಾಧ್ಯಮವನ್ನು ತುಂಬಾ ಪ್ರಭಾವಶಾಲಿಯಾಗಿ ಬಳಸಿಕೊಂಡದ್ದು ಈಗ ಚಾರಿತ್ರಿಕ ಸಂಗತಿ. ಅವರಿಬ್ಬರೂ ಬಳಸಿಕೊಂಡ ಕ್ರಮದಲ್ಲಿ ಒಂದು ತಾತ್ತ್ವಿಕತೆ ಇದೆ. ಹಿಟ್ಲರ್ ಕಾಲದ ಜರ್ಮನ್ ಸಿನಿಮಾಗಳ ಸೌಂದರ್ಯಪ್ರಜ್ಞೆ ತನ್ನದೇ ಆದ ವಿಶಿಷ್ಟತೆಯನ್ನು ಪಡೆದಿದೆ. ಅವನ ಲೆಫ್ಟಿನೆಂಟ್ ಆಗಿದ್ದ ಪ್ರತಿಭಾನ್ವಿತ ನಿರ್ದೇಶಕಿ ಲೆನಿ ರೀಫೆನ್‌ಸ್ತಾಲಳ ನಾಜಿ ಸಾಕ್ಷ್ಯಚಿತ್ರಗಳು ಈವತ್ತಿಗೂ ಪಠ್ಯವಾಗಬಲ್ಲಂತಹ ಕೃತಿಗಳು. ಆದರೆ ಹಿಟ್ಲರ್‌ಗೆ ನೈತಿಕತೆ ರಾಜಕೀಯಕ್ಕೆ ಅಡಿಯಾಳಾದಂತಹುದು. ಲೆನಿನ್‌ಗೂ ಸಹ ನೈತಿಕತೆ ರಾಜಕೀಯಕ್ಕೆ ಅಡಿಯಾಳಾದಂತಹುದೇ. ಆದರೆ ಅವನ ರಾಜಕೀಯ ಜಾಗತಿಕ ಸತ್ಯದ ಮೇಲೆ ನಿಂತಿದ್ದಂತಹುದು. ಸಿನಿಮಾ ಮಾಧ್ಯಮ ಇನ್ನೂ ತನ್ನ ಸಾಂಸ್ಕೃತಿಕ ಶಕ್ತಿಯನ್ನು ಪ್ರದರ್ಶಿಸುವ ಮೊದಲೆ ಈ ಇಬ್ಬರು ರಾಜಕಾರಣಿಗಳಿಗೆ ಅದರ ಶಕ್ತಿ ಗೊತ್ತಾಗಿತ್ತು.

ಸಿನಿಮಾ ಮಾಧ್ಯಮ ಸಮಾಜದಲ್ಲಿ ಉಂಟುಮಾಡಿರುವ, ಉಂಟುಮಾಡುವ ನೈತಿಕ ಇಬ್ಬಂದಿತನವೇ ಅದರ ಬಗ್ಗೆ ಗಂಭೀರವಾದ ತಾತ್ವಿಕ ಚಿಂತನೆಯ ಕೊರತೆಗೆ ಕಾರಣವಿರಬಹುದೇನೋ. ಈ ರೀತಿಯ ಸಮಸ್ಯೆ ಮೊದಲಿಂದಲೂ ಇಲ್ಲದಿರುವುದರಿಂದಲೇ ಏನೋ ಪಶ್ಚಿಮದೇಶಗಳಲ್ಲಿ ಸಮೃದ್ಧವಾದ



ಮಾಡರ್ನ್ ಟೈಮ್ಸ್ ಚಿತ್ರದಲ್ಲಿ ಚಾರ್ಲಿ ಚಾಪ್ಲಿನ್

ಚಿಂತನೆಗಳು ಬೆಳೆದಿರಬಹುದು. ಸಿನಿಮಾಗೆ ೧೦೦ ವರ್ಷಗಳ ಚರಿತ್ರೆಯಿದ್ದಂತೆ, ಸಿನಿಮಾದ ಸೈದ್ಧಾಂತಿಕ ಚರ್ಚೆಗೆ ಸುಮಾರು ೮೦ ವರ್ಷಗಳ ಚರಿತ್ರೆಯಿದೆ. ೧೯೨೦ರ ಸುಮಾರಿಗೇ ಶಿಕ್ಷಣತಜ್ಞರು, ಮನೋವಿಜ್ಞಾನಿಗಳು, ಕಲಾವಿಮರ್ಶಕರು, ಪತ್ರಿಕೆಗಳು ಸಿನಿಮಾದ ಬಗ್ಗೆ ಗಂಭೀರವಾದ ಚರ್ಚೆಯನ್ನು ಪ್ರಾರಂಭಿಸಿದ್ದರು. ಬೇರೆ ಬೇರೆ ಕಲೆಗಳ ಜತೆಗಿನ ಸಾಮ್ಯತೆ, ವ್ಯತ್ಯಾಸಗಳ ಬಗ್ಗೆ ಪ್ರಾರಂಭವಾದ ಚರ್ಚೆ, ತಂತ್ರಜ್ಞಾನ, ಆರ್ಥಿಕತೆ, ವಾಣಿಜ್ಯನೀತಿ, ಮನೋವೈಜ್ಞಾನಿಕ ನೆಲೆಗಳು – ಹೀಗೆ ಹಲವಾರು ಆಯಾಮಗಳನ್ನು ಪಡೆದುಕೊಂಡು, ಸಿನಿಮಾ ಸ್ವತಂತ್ರ ಕಲೆಯಾಗುವುದು, ಕಲೆಯಾಗಿದ್ದು ಹೇಗೆ ಎಂಬ ಜಿಜ್ಞಾಸೆಯನ್ನು ಒಳಗೊಳ್ಳುತ್ತಾ ಹೋಗಿ ಕಡೆಗೆ ಅದರ ಸೃಷ್ಟಿ, ಸ್ಥಿತಿ ಮತ್ತು ಪ್ರಭಾವಗಳನ್ನು, ಕಲಾತ್ಮಕ ಸಾಧ್ಯತೆಗಳನ್ನು ವಿಸ್ತರಿಸುತ್ತಾ ಹೋಯಿತು.

ಈ ಚರ್ಚೆಗಳಲ್ಲಿ ಮೂರು ಪ್ರಮುಖ ನೆಲೆಗಳನ್ನು ಕಾಣಬಹುದು. ಒಂದು, ತಂತ್ರಜ್ಞಾನವನ್ನು ವೈಜ್ಞಾನಿಕವಾಗಿ ಉಪಯೋಗಿಸುವ ಕ್ರಮ. ಇದು ರಷ್ಯಾದ ಐಸೆನ್‌ಸ್ಟೈನ್ ಬಳಸಿಕೊಂಡದ್ದು. ಬೋಲ್ಷಿವಿಕ್ ಕ್ರಾಂತಿಯ ದಿನಗಳು, ನಂತರದ ದಿನಗಳ ಅನುಭವವನ್ನು ಆಧರಿಸಿದ ಚಿತ್ರಗಳನ್ನು ನಿರ್ಮಿಸಿದ ಐಸೆನ್‌ಸ್ಟೈನ್‌ಗೆ 'ವಾಸ್ತವ' ಬದಲಿಸಬೇಕಾದ, ಹೊಸದಾಗಿ ಕಟ್ಟಬೇಕಾದ ವಸ್ತು. ವಿಜ್ಞಾನದ ''ಸಂಶೋಧನೆ ಮತ್ತು ಆವಿಷ್ಕಾರ''ಗಳು ಇದ್ದಹಾಗೆ. ಅದರ ಮೂಲದ್ರವ್ಯ ಸದ್ಯದ ಕ್ಷುದ್ರ ವಾಸ್ತವತೆ. ಅದನ್ನು ಒಡೆಯಲು ಉಪಯೋಗಿಸುವ ಸಾಧನ 'ತಂತ್ರಜ್ಞಾನ' (ಸಿನಿಮಾ). ಒಬ್ಬ ವಿಜ್ಞಾನಿಯ ರೀತಿಯಲ್ಲಿ, ಇಂಜಿನಿಯರನ ರೀತಿಯಲ್ಲಿ ಸಿನಿಮಾವನ್ನು ಉಪಯೋಗಿಸಿದ ಐಸೆನ್‌ಸ್ಟೈನ್‌ಗೆ ತಾರ್ಕಿಕ ಮತ್ತು ಅತಾರ್ಕಿಕಗಳ ಸಂಘರ್ಷವೇ ಸಿನಿಮಾಕಲೆಯ ಸೌಂದರ್ಯಪ್ರಜ್ಞೆಯನ್ನು ನಿರ್ಧರಿಸುವಂತಹುದು.

ಇದಕ್ಕೆ ಭಿನ್ನವಾಗಿರುವುದು ತಂತ್ರಜ್ಞಾನವನ್ನು (ಸಿನಿಮಾವನ್ನು) ಮಾನವೀಯಗೊಳಿಸುವ ಕ್ರಮ. ಎದುರಿನ ವಾಸ್ತವವೇ ಪೂರ್ಣ ವಾಸ್ತವ. ಆದರೆ ಅದರ ಪೂರ್ಣತೆ ಆಳ, ಸಂಕೀರ್ಣತೆ ಎಲ್ಲವನ್ನೂ ಒಳಗೊಂಡಾಗ ಮಾತ್ರ, ಅದರ ತೋರಿಕೆಯ ಮೇಲುಪದರವನ್ನು ಸೀಳಿಹೋದಾಗ ಮಾತ್ರ ಕಾಣುವಂತಹುದು. ಆಗ ಮಾತ್ರವೇ ಸಿನಿಮಾ ಮನುಷ್ಯನ ಕಣ್ಣಾಗಬಲ್ಲದು ಕೂಡ. ನೋಡುವ, ಗ್ರಹಿಸುವ, ಒಳಗೊಳ್ಳುವ ಶಕ್ತಿ ಕ್ಯಾಮರಾ ಕಣ್ಣಿಗೆ ವರ್ಗಾಯಿಸಲ್ಪಟ್ಟಾಗ ಮಾತ್ರ ಅದರ ಬಳಕೆ ಸರಿ. ವೈಚಾರಿಕ ಮತ್ತು ಅವೈಚಾರಿಕ ಸಂಘರ್ಷವೇ ಕಲೆಯ ಮೂಲ ಪ್ರವೃತ್ತಿ ಎನ್ನುವುದು ಇದರ ಹಿಂದಿನ ವಾದ.

ಕ್ರಿಶ್ಚಿಯನ್ ಮೆಟ್ಜ್, ಸಂಸ್ಕೃತಿ ನಿಷ್ಠತೆಯ ಸಿನಿಮಾಗ್ರಹಿಕೆಗೆ ಸಹಾಯವಾಗುವಂತಹ ವಿಚಾರಗಳನ್ನು ಮಂಡಿಸಿದವನು. ಅವನ ಮಟ್ಟಿಗೆ ಸಿನಿಮಾದ ಅಸ್ತಿತ್ವ ಇರುವುದೇ ಅದು ಒಳಗೊಳ್ಳುವ ವ್ಯಕ್ತಿ ಮತ್ತು

ವಸ್ತುಗಳ ಅಂತರ್ ಸಂಬಂಧದ ಭಾಷೆಯಿಂದ. ಒಂದು ನಾಗರಿಕತೆಯೊಳಗೆ ಉಂಟಾಗುವ ಸೌಂದರ್ಯ ಪ್ರಜ್ಞೆ ಮತ್ತು ವಿಕೃತಿಗಳ ಸಂಘರ್ಷವೇ ಕಲೆಯ ಮೂಲ ಉದ್ದಿಶ್ಯ.

ಹೀಗೆ ಸಿನಿಮಾ ನೋಡುವ, ನಿರ್ಮಿಸುವ, ಅರ್ಥೈಸುವ ಹಲವಾರು ಚಿಂತನೆಗಳು ೮೦ ವರ್ಷಗಳಿಂದ ಪಶ್ಚಿಮದಲ್ಲಿ ನಡೆಯುತ್ತಿರುವಾಗ, ಜಗತ್ತಿನಲ್ಲೇ ಅತಿ ಹೆಚ್ಚು ಚಿತ್ರಗಳನ್ನು ನಿರ್ಮಿಸುವ ಇಲ್ಲಿ, ನಮ್ಮ ಸೈದ್ಧಾಂತಿಕ ನಿಲುವುಗಳೇನು ಎಂದು ಪ್ರಶ್ನಿಸಿದರೆ ಬಹಳ ಮುಂದುವರಿಯಲು ಸಾಧ್ಯವಿಲ್ಲ. ಏಕೆಂದರೆ ನಿರ್ಮಾಣಕ್ಕೆ ಬಳಸುವ ತಂತ್ರಜ್ಞಾನದಲ್ಲಿ, ತಾಂತ್ರಿಕತೆಯಲ್ಲಿ ನಮ್ಮದೇ ಆದ ಸ್ವಯಂ ಕರ್ತೃತ್ವ ಶಕ್ತಿ ಇಲ್ಲ. ವಸ್ತು ವಿನ್ಯಾಸಗಳಲ್ಲಿ ಪುನರಾವರ್ತನೆ ಬಹಳ. ವಸ್ತುಗಳ ಆಯ್ಕೆಯಲ್ಲಿಯೂ ಕೆಲವೇ ವರ್ಗಗಳಿಗೆ ಸೀಮಿತವಾದವು. ಕೆಲವೊಮ್ಮೆ ಸದ್ಯದ ಸಾಮಾಜಿಕಸ್ಥಿತಿಯನ್ನು ಪ್ರತಿಬಿಂಬಿಸಲು ಪ್ರಯತ್ನಿಸಿದರೂ ವಿಶ್ಲೇಷಿಸುವುದಿಲ್ಲ. ಸಿನಿಮಾದ ವಾಣಿಜ್ಯ ಆಯಾಮಗಳು, ಅವು ಸೃಷ್ಟಿಸುವ ಸಾಂಸ್ಕೃತಿಕ ಮಾದರಿಗಳು, ಅದರಿಂದುಂಟಾಗುವ ಮಾನಸಿಕ ಪ್ರಭಾವಗಳ ಬಗ್ಗೆ ಸಮಾಜಶಾಸ್ತ್ರೀಯ ಚರ್ಚೆಯನ್ನು ಮಾತ್ರ ಪ್ರಾರಂಭಿಸಬಹುದು. ಈ ಚರ್ಚೆಗಳೂ ಕೂಡ ನಮ್ಮ ಸಾಹಿತ್ಯ ಮತ್ತು ಪುರಾಣಗಳ ಬಗ್ಗೆ ನಡೆಸಲಾಗುವ ಜಿಜ್ಞಾಸೆಗಳಾಗಿ ಉಳಿದುಬಿಡಬಹುದೆಂಬ ಅನುಮಾನ.

ಸಿನಿಮಾ ಮಾಧ್ಯಮಕ್ಕೆ ದೇಶೀಯ ಸಂಸ್ಕೃತಿಯ ಪರಿಕಲ್ಪನೆಗಳು ಕಡಿಮೆ. ಸಾಹಿತ್ಯಕ್ಕೆ ಮತ್ತು ಇತರ ಕಲೆಗಳಿಗಾದರೋ ಇರುವಂತೆ ಭಾರತೀಯ ಪರಂಪರೆ ಎನ್ನುವ ಕಲ್ಪನೆಯೇ ಸಾಧ್ಯವಿಲ್ಲ. ಜಾಗತಿಕ ಸಂಸ್ಕೃತಿಯ ಪ್ರಭಾವಕ್ಕೆ, ಆರ್ಥಿಕ ಜಾಗತೀಕರಣಕ್ಕೆ, ಪಾಶ್ಚಾತ್ಯ ತಂತ್ರಜ್ಞಾನ, ಆವಿಷ್ಕಾರಗಳಿಗೆ ನೇರವಾಗಿ ಪ್ರತಿಸ್ಪಂದಿಸಬೇಕಾಗಿರುವ ಒತ್ತಾಯಗಳಿಗೆ ಸಿನಿಮಾ ಅಡಿಯಾಳಾಗಿರುವುದರಿಂದ ದೇಶೀಯ ಸಾಂಸ್ಕೃತಿಕ ಆಶಯಗಳನ್ನು ಅಭಿವ್ಯಕ್ತಿಸುವ ಬದಲಾಗಿ ಪಾಶ್ಚಾತ್ಯ ವಾಣಿಜ್ಯ ಮತ್ತು ತಂತ್ರಜ್ಞಾನಗಳನ್ನು ದೇಶೀಯ ಆಶಯಗಳಾಗಿ ಪರಿವರ್ತಿತವಾಗುವುದನ್ನು ಭಾರತದ ಎಲ್ಲ ಭಾಷಾ ಚಿತ್ರಗಳಲ್ಲೂ ಗುರುತಿಸಬಹುದು. ಹಾಗಾದರೆ ಭಾರತೀಯ ಸಿನಿಮಾಗಳಲ್ಲಿ ಪ್ರಕಟಗೊಳ್ಳುವ ನಮ್ಮ ಜೀವನಕ್ರಮ, ಸನ್ನಿವೇಶಗಳು, ಭಾವುಕ ಜಗತ್ತು, ವಸ್ತುಸ್ಥಿತಿ ಏನನ್ನೂ ಹೇಳಲಾರವೇ ಎಂಬ ಪ್ರಶ್ನೆ ನಾವೇ ಹಾಕಿಕೊಂಡರೆ ಸ್ವಲ್ಪ ಮುಜುಗರದ ಉತ್ತರವೇ ಸಿಗುವ ಸಾಧ್ಯತೆಯಿದೆ. ಏಕೆಂದರೆ, ಬಹುಪಾಲು ಚಿತ್ರಗಳು, ಅದರಲ್ಲೂ ರಾಷ್ಟ್ರೀಯ ಸಂಸ್ಕೃತಿಯ ಪ್ರತಿನಿಧಿಯೆಂದು ಘೋಷಿಸಿಕೊಳ್ಳುವ ಹಿಂದಿ ಚಿತ್ರಗಳು ಕೇವಲ ಕೆಲವೇ ವರ್ಗಗಳ ಆಶಯಗಳನ್ನು, ಜೀವನಶೈಲಿಯನ್ನು ಪ್ರತಿಬಿಂಬಿಸುವತ್ತ ಸಾಗಿವೆ. ಇನ್ನು ಕಲಾತ್ಮಕ ಅಭಿವ್ಯಕ್ತಿಯ ಮಹತ್ವದ ಚಿತ್ರಗಳೆಂದು ಗುರುತಿಸಲ್ಪಡುವ ಚಿತ್ರಗಳು ಕೂಡ ಅನೇಕ ಬಾರಿ ಸಾಮಾಜಿಕ ಸ್ಥಿತಿಗಳ ದಾಖಲೀಕರಣಗಳಾಗಿ ಪ್ರಚಾರ ಮತ್ತು ಪ್ರಶಸ್ತಿಗಳನ್ನು ಪಡೆದಿವೆಯೇ ಹೊರತು ಸಿನಿಮಾ ಮಾಧ್ಯಮದ ಅಭಿವ್ಯಕ್ತಿಯಾಗಿ ಅಲ್ಲ. ಅವುಗಳಲ್ಲಿ ಬಹುಪಾಲು ಚಿತ್ರಗಳು ಜನಪ್ರಿಯವಾಗುವುದಿರಲಿ, ಚಿಕ್ಕ ಚಿಕ್ಕ ಸಮುದಾಯಗಳಲ್ಲೂ ಕೂಡ ಯಾವುದೇ ಸಾಂಸ್ಕೃತಿಕ ಚರ್ಚೆಯನ್ನೂ ಹುಟ್ಟುಹಾಕಲು ಸಾಧ್ಯವಾಗಿಲ್ಲ.

ಹಾಗಾದರೆ ಸಿನಿಮಾ ಮಾಧ್ಯಮದ ಭವಿಷ್ಯ ಏನು ? ಈಗಾಗಲೇ ಬಹಳಷ್ಟು ಚಿಂತಕರು ಸಿನಿಮಾ ಸಾವಿನಂಚಿನಲ್ಲಿರುವ ಮಾಧ್ಯಮ ಎಂದು ಘೋಷಿಸಿರುತ್ತಾರೆ. ಕೇವಲ ಚಿತ್ರೋತ್ಸವಕ್ಕೆ, ಡ್ರಾಯಿಂಗ್ ರೂಮುಗಳಲ್ಲಿ, ವಿಶ್ವವಿದ್ಯಾಲಯಗಳ ಪಠ್ಯಪುಸ್ತಕಗಳಲ್ಲಿ, ಟೆಲಿವಿಷನ್‌ಸ್ಟುಡಿಯೋಗಳಲ್ಲಿ ಅವಿತಿರುವ ಮಾಧ್ಯಮವೆಂದು ಕಾಣಲು ಪ್ರಾರಂಭಿಸಿದ್ದಾರೆ. ಅದರ ಉಳಿವು, ಜಾಗತೀಕರಣಗೊಂಡ ಆರ್ಥಿಕ ಮತ್ತು ವಾಣಿಜ್ಯ ವ್ಯವಸ್ಥೆಯಿಂದ ಅನಗತ್ಯ ತಂತ್ರಜ್ಞಾನಗಳಿಂದ ಬಿಡುಗಡೆ ಹೊಂದಿ ಪ್ರಾದೇಶಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಆಶಯಗಳಿಗೆ ನೈತಿಕವಾಗಿ ಸ್ಪಂದಿಸಿದಾಗ ಮಾತ್ರ ಸೃಜನಶೀಲವಾಗಿ ಉಳಿಯಲು ಸಾಧ್ಯ. ಇಲ್ಲದೇ ಹೋದಲ್ಲಿ ಸಿನಿಮಾ ಕೇವಲ ಯಾಂತ್ರಿಕ ವಾಣಿಜ್ಯ ಚಟುವಟಿಕೆಯಾಗಿ ಮಾತ್ರ ಮುಂದುವರಿಯುವ ಸೂಚನೆಗಳಿವೆ.

ಎನ್. ವಿದ್ಯಾಶಂಕರ್
ಹೆಚ್-ಓ 'ಕೃಷ್ಣ ಗ್ಲೇಡ್', ಸಂಖ್ಯೆ ೧೦೫/೧, ೧ನೇ ಮುಖ್ಯರಸ್ತೆ
ಶೇಷಾದ್ರಿಪುರಂ, ಬೆಂಗಳೂರು - ೫೬೦ ೦೨೦

ರೂಪರಶ್ಮಿ ಪ್ರಕಾಶನ
'ಸನ್ನಿಧಿ', 171, ಕುಮಾರೇಶ್ವರ ನಗರ, ಬೆಳಗಾವಿ ರಸ್ತೆ, ಧಾರವಾಡ - 580 008
ಫೋನ್ (0836) 2444400, ಮೊಬೈಲ್ : 9845273736

ನಮ್ಮ ಪ್ರಕಟಣೆಗಳು
ವಿದ್ವಾಂಸರ ಪ್ರಶಂಸೆಗೆ ಪಾತ್ರವಾದ ಹಾಗೂ ವಿದ್ಯಾರ್ಥಿಲೋಕದ ಅಚ್ಚುಮೆಚ್ಚಿನ ಕನ್ನಡ ಭಾಷಾ ವಿಜ್ಞಾನ, ಸಂಶೋಧನ ಕ್ಷೇತ್ರದ ಮೂಲಜ್ಞಾನದ ವಿಶಿಷ್ಟ ಗ್ರಂಥಗಳು, ಹೆಸರಾಂತ ಭಾಷಾವಿಜ್ಞಾನಿ ಸಂಶೋಧಕ ಡಾ॥ ಸಂಗಮೇಶ ಸವದತ್ತಿಮಠ ಅವರ ಲಭ್ಯವಿರುವ ಆಯ್ದ ಉಪಯುಕ್ತ ಕೃತಿಗಳು :
1. ಕನ್ನಡ ಭಾಷಾವ್ಯಾಸಂಗ : ಪರಿಷ್ಕೃತ 9ನೇ ಆವೃತ್ತಿ, 13ನೇ ಮುದ್ರಣ (2007). ಬೆಲೆ : ರೂ. 110
2. ತೌಲನಿಕ ದ್ರಾವಿಡಭಾಷಾ ವಿಜ್ಞಾನ : ಪರಿಷ್ಕೃತ 7ನೇ ಆವೃತ್ತಿ, 10ನೇ ಮುದ್ರಣ (2008). ಬೆಲೆ : ರೂ. 110
3. ಕನ್ನಡ ಭಾಷಾ ಸ್ವರೂಪ : ಪರಿಷ್ಕೃತ 5ನೇ ಆವೃತ್ತಿ, 10ನೇ ಮುದ್ರಣ (2007). ಬೆಲೆ : ರೂ. 85
4. ಕನ್ನಡ ಸಾಹಿತ್ಯ ಸಂಶೋಧನೆ : ಮಾರ್ಗ ಮತ್ತು ಇತಿಹಾಸ : ದ್ವಿತೀಯ ಆವೃತ್ತಿ. ಬೆಲೆ : ರೂ. 130
ಕನ್ನಡ ಭಾಷಾ ವಿಜ್ಞಾನ ಕ್ಷೇತ್ರದ ಅತಿ ಹೆಚ್ಚು ಮುದ್ರಣಗಳನ್ನು ಕಂಡ ಗ್ರಂಥಗಳಿವು.
ನೇರವಾಗಿ ಖರೀದಿಸುವ ವಿದ್ಯಾರ್ಥಿಗಳಿಗೆ ವಿಶೇಷ ರಿಯಾಯತಿ ಇದೆ.

ಾರತೀಯ ಮಾತ್ರವಲ್ಲ ಜಗತ್ತಿನ ಕಲಾವಿದರಲ್ಲಿ, ಕೃತಿ ನೋಡಿದ ಕೂಡಲೆ ಗುರುತಿಸಬಹುದಾದಷ್ಟು ವಿಶಿಷ್ಟ ೈಲಿಯನ್ನು, ಅಭಿವ್ಯಕ್ತಿಯ ಅನನ್ಯತೆಯನ್ನು ಮೆರೆದವರು ಕಲಾವಿದ ಎಸ್. ಜಿ. ವಾಸುದೇವ್. ವರ್ತಮಾನದ ನುಭವಗಳ ಅಭಿವ್ಯಕ್ತಿಯಲ್ಲಿ ಪುರಾಣ, ಜಾನಪದಗಳ ಪರಂಪರೆಯ ಬೇರುಗಳನ್ನು ರೂಪಿಕೆಗಳಾಗಿ ರ್ಥವಾಹಿಯಾಗಿ ಬಳಸಿದರು. ವೃಕ್ಷ ಕಲ್ಪನೆ ಕಲ್ಪವೃಕ್ಷವಾಗಿ, ಜೀವನ ವೃಕ್ಷವಾಗಿ ಬೆಳೆಯಿತು. ಅಂತಿಮವಾಗಿ ೀವನರಂಗವಾಯಿತು. ವಾಸುದೇವ ತಮ್ಮ ರೇಖಾಪ್ರಧಾನವಾದ ವಿಶಿಷ್ಟ ಶೈಲಿಯ ಅನಂತ ಸಾಧ್ಯತೆಗಳನ್ನು ಕೃತಿಗಳ ೂಲಕ ಅರಸಿದಂತೆ ಅಖಂಡ ಬದುಕಿನ ಅರ್ಥಸಾಂದ್ರತೆಯನ್ನೂ ಹಿಡಿಯುವ ಹುಡುಕಾಟವನ್ನೂ ನಡೆಸಿದರು. ವನು, ಅವಳು, ಮೈಥುನ, ಭೂದೃಶ್ಯ, ಮನೋದೃಶ್ಯ, ಹುಟ್ಟುಸಾವಿನ ವೃಕ್ಷ, ಜೀವನರಂಗ ಮೊದಲಾದ ಚಿತ್ರ ರಣಿ ಶೀರ್ಷಿಕೆಗಳು ಸೂಚನೆ ಮಾತ್ರ. ರೇಖಾಚಿತ್ರ, ವರ್ಣಚಿತ್ರ, ತಾಮ್ರ ಫಲಕ, ಮುಖವಾಡಗಳು, ಭಿತ್ತಿರೂಪಗಳು, ಲಾನಿರ್ದೇಶನ, ಪೋಸರ್ ವಿನ್ಯಾಸ, ಸೆಟ್‌ರಚನೆ ಹೀಗೆ ಹಲವಾರು ಬಗೆಯಲ್ಲಿ ಸದಾ ಕ್ರಿಯಾಶೀಲ ಲಾವಿದರಾದ ಅವರು ಕಾವ್ಯ ನಾಟಕಗಳಿಗೆ ಸೃಜನಶೀಲವಾಗಿ ಸ್ಪಂದಿಸಿದ ಬಗೆಯೂ ಪ್ರತಿಭಾಸಂವಾದ ಎನಿಸಿದೆ. ಪ್ರೊ|| ಎಂ. ಎಚ್. ಕೃಷ್ಣಯ್ಯ ಮತ್ತು ಕೆ. ಎಸ್. ಪಾರ್ಥಸಾರಥಿಯವರು ಅವರೊಡನೆ ನಡೆಸಿದ ಸಂವಾದದ ಆರಿಸಿದ ಾಗಗಳನ್ನು ಇಲ್ಲಿ ನೀಡಿದೆ.

ಶ್ರೀ ವಾಸುದೇವ್ ಅವರ ಕೆಲವು ಕಲಾಕೃತಿಗಳನ್ನು ಹಿಂಬದಿಯ ಒಳರಕ್ಷಾಪುಟದಲ್ಲಿ ಕೊಡಲಾಗಿದೆ.)



ಸಮುದ್ರ ಮಥನ

ಸಂದರ್ಶಕರು : **ಪ್ರೊ|| ಎಂ. ಎಚ್. ಕೃಷ್ಣಯ್ಯ, ಕೆ. ಎಸ್. ಪಾರ್ಥಸಾರಥಿ.** ಚಿತ್ರಗಳು : **ಕೆ. ಪಿ. ಸ್ವಾಮಿ**

# ಅಭಿವ್ಯಕ್ತಿಯ ಅನನ್ಯತೆ : ಎಸ್. ಜಿ. ವಾಸುದೇವ್

**ಎಂ.ಎಚ್.ಕೆ.** : ನಮಸ್ಕಾರ ವಾಸುದೇವ್ ಅವರಿಗೆ. ಇವರು ಪಾರ್ಥಸಾರಥಿಯವರು. 'ಹೊಸತು' ಬಳಗಕ್ಕೆ ಸೇರಿದವರು. ನಿಮ್ಮ ಪರಿಚಯ ಇವರಿಗೆ ಚೆನ್ನಾಗಿದೆ, ನಿಮ್ಮ ಕಲೆ ಬಗ್ಗೆ ತುಂಬ ಆಸಕ್ತಿ. ವಾಸುದೇವ್, ನೀವು ಮೈಸೂರು, ಬೆಂಗಳೂರಿನಲ್ಲಿ ಓದಿದಿರಿ. ನ್ಯಾಷನಲ್ ಕಾಲೇಜಿನಲ್ಲಿ ವಿಜ್ಞಾನದ ವಿದ್ಯಾರ್ಥಿ. ವಿಜ್ಞಾನದ ತಾರ್ಕಿಕ ದೃಷ್ಟಿಗೆ ಸಂಪೂರ್ಣ ಭಿನ್ನವಾದದ್ದು ಕಲೆ. ನೀವು ವಿದ್ಯಾರ್ಥಿಯಾಗಿದ್ದಾಗ, ಹೈಸ್ಕೂಲ್ ದಿನಗಳಲ್ಲಿ ಕಾರ್ಟೂನ್ಸ್ ಬರೆಯುತ್ತಿದ್ದಿರಿ ಎಂದು ಗೊತ್ತು. ಆದರೆ, ಈ ಹೊರಳುವಿಕೆ, ಕಲೆಯ ಕಡೆಗೆ ತಿರುವು, ಇದಕ್ಕೊಂದು ಕಾರಣ, ಹಿನ್ನೆಲೆ ಇರಬೇಕು, ಅಲ್ಲವೆ ?

**ವಾಸುದೇವ್** : ಕಲೆ ನನ್ನ ಕುಟುಂಬದಲ್ಲಿತ್ತು. ನಮ್ಮ ತಾಯಿ ಪೇಂಟರ್ ಆಗಿದ್ದರು, ಅವರ ಕೃತಿಗಳು ಎಷ್ಟು ಒರಿಜಿನಲ್ ಆಗಿದ್ದುವು ಅಂದ್ರೆ, ಒಮ್ಮೆ ಎನ್. ಎಸ್. ಬೇಂದ್ರೆ ಮನೆಗೆ ಬಂದಿದ್ದಾಗ, ಕೇಳಿದ್ರು... ''ಯಾರು ಮಾಡಿದ್ದು ಈ ಪೇಂಟಿಂಗ್ ?'' ''ನಮ್ಮ ತಾಯಿ ಮಾಡಿದ್ದು'' ಎಂದೆ. ''ವೆರಿ ಗುಡ್... ಐ ಸೇ ಐ ಡೋಂಟ್ ಕನ್ಸಿಡರ್ ಹರ್ ಆಸ್ ಅಮೆಟೂರ್, ಷಿ ಈಸ್ ವೆರಿ ಗುಡ್'' ಎಂದರು. ಎಸ್. ಜಿ. ರತ್ನ ಎಂದು ಅವರ ಹೆಸರು. ದಸರಾ ವಸ್ತು ಪ್ರದರ್ಶನದಲ್ಲಿ ಅವರಿಗೆ ಸ್ವರ್ಣ ಪದಕ ಸಿಕ್ಕಿತ್ತು... ಡ್ರಾಯಿಂಗ್ಸ್, ಪೇಂಟಿಂಗ್ಸ್ ಎಲ್ಲಾ ಮಾಡ್ತಾ ಇದ್ರು. ದಸರಾ ಸಮಯದಲ್ಲಿ ಸುಂದರವಾಗಿ ಅಲಂಕಾರ, ಜೋಡಣೆ ಮಾಡೋರು, ಒಂದು ರೀತಿ ಏಸ್ಥೆಟಿಕ್ ದೃಷ್ಟಿ.. ನಮ್ಮ ಮುತ್ತಾತ, ತಾಯಿಯ ತಾತ, ಅವರ ಹೆಸರು ಗುಂಡ್ಲು ಅಂತ, ದಸರಾ ಸಮಯದಲ್ಲಿ ಒಂಬತ್ತು ದಿವಸಾನೂ ಕಾರ್ಡ್ ಬೋರ್ಡ್ ನಲ್ಲಿ ಪೂರ್ತಿ ಪ್ಯಾಲೇಸ್, ಮೆರವಣಿಗೆ... ಕಟ್ ಮಾಡಿ ಪೇಂಟ್ ಮಾಡೋರು. ತುಂಬಾ ಜನಾ ನೋಡೋಕೆ ಬರೋರು. ನಮ್ಮ ತಾಯಿ ಮೇಲೆ ಇವೆಲ್ಲಾ ಪ್ರಭಾವ ಬೀರಿತ್ತು. ಸೋಪ್‌ಸ್ಟೋನ್‌ನಲ್ಲಿ ಕೆಲವು ಸ್ಕಲ್ಪ್ಚರ್ಸ್ ಮಾಡಿದಾರೆ... ತರುಣನಾದ ನನ್ನ ಮೇಲೆ

## ಕನ್ನಡ ವಿಶ್ವವಿದ್ಯಾಲಯ, ಹಂಪಿ ಪ್ರಸಾರಾಂಗದ ಹೊಸ ಪ್ರಕಟಣೆಗಳು

| | | | |
|---|---|---|---|
| ೧. | ನಡುಗಾಲದ ಕನ್ನಡ ನಾಡು | ಡಾ॥ ಮೊಗಳ್ಳಿ ಗಣೇಶ್ | ೧೦೦.೦೦ |
| ೨. | ಭಾರತೀಯ ಸಮಾಜ ಮತ್ತು ದಲಿತರು | ಡಾ॥ ಎನ್. ಚಿನ್ನಸ್ವಾಮಿ | ೧೦೦.೦೦ |
| ೩. | ಕರ್ನಾಟಕದ ಸೂಫಿಗಳು | ಡಾ॥ ರಹಮತ್ ತರೀಕೆರೆ | ೧೫೦.೦೦ |
| ೪. | ಹೊಸ ತಲೆಮಾರಿನ ತಲ್ಲಣ | ಸಂ. ಡಾ॥ ರಹಮತ್ ತರೀಕೆರೆ | ೮೦.೦೦ |
| ೫. | ದೇಶಿಯತೆಯ ನೆರಳಿನಲ್ಲಿ ವಿಕೇಂದ್ರೀಕರಣ | ಡಾ॥ ಎಂ ಚಂದ್ರಪೂಜಾರಿ | ೧೨೦.೦೦ |
| ೬. | ರಾಮಾಯಣ : ಮರುದರ್ಶನ | ಸಂ. : ಡಾ॥ ಮಂಜುನಾಥ ಬೇವಿನಕಟ್ಟಿ | ೧೦೦.೦೦ |
| ೭. | ಹಸ್ತಪ್ರತಿ ವ್ಯಾಸಂಗ - ೮ | ಸಂ. ಡಾ॥ ಎಫ್. ಟಿ. ಹಳ್ಳಿಕೇರಿ | ೧೦೦.೦೦ |
| ೮. | ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ | ಸಂ. ಡಾ॥ ವಿರೂಪಾಕ್ಷಿ ಪೂಜಾರಹಳ್ಳಿ | ೧೦೦.೦೦ |
| ೯. | ಕರಾವಳಿ ಕರ್ನಾಟಕದ ಕೋಮುವಾದ | ಡಾ॥ ಎಂ. ಚಂದ್ರಪೂಜಾರಿ ಮತ್ತು ನಿತ್ಯಾನಂದ ಶೆಟ್ಟಿ | ೧೦.೦೦ |
| ೧೦. | ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿಗತಿ | ಡಾ॥ ಟಿ. ಆರ್. ಚಂದ್ರಶೇಖರ್ | ೧೦.೦೦ |
| ೧೧. | ದಲಿತರು ಮತ್ತು ಭೂಮಿಯ ಪ್ರಶ್ನೆ | ಡಾ॥ ಬಿ. ಎಂ. ಪುಟ್ಟಯ್ಯ | ೧೦.೦೦ |
| ೧೨. | ಹೊಸಗನ್ನಡ ಛಂದಸ್ಸು | ಡಾ॥ ಎಸ್. ಎಸ್. ಅಂಗಡಿ | ೧೦೦.೦೦ |
| ೧೩. | ಯಶಸ್ಸು ಹಾಗೂ ನೆಮ್ಮದಿಯ ಬದುಕು | ಡಾ॥ ಸಿ. ಆರ್. ಚಂದ್ರಶೇಖರ್ | ೬೦.೦೦ |
| ೧೪. | ಕವಿರಾಜಮಾರ್ಗ : ಸಾಂಸ್ಕೃತಿಕ ಮುಖಾಮುಖಿ | ಸಂ. : ಡಾ॥ ರಹಮತ್ ತರೀಕೆರೆ | ೬೦.೦೦ |
| ೧೫. | ಲಿಂಗಸಂಬಂಧಿ ಅಭಿವೃದ್ಧಿ ಪ್ರಬಂಧಗಳು | ಡಾ॥ ಟಿ. ಆರ್. ಚಂದ್ರಶೇಖರ್ | ೧೦.೦೦ |
| ೧೬. | ಅಭಿವೃದ್ಧಿ ಪತ್ರಿಕೋದ್ಯಮ ಮತ್ತು ಹಂಪಿ ಪರಿಸರ | ಕೆ. ರಾಮಚಂದ್ರ | ೬೦.೦೦ |
| ೧೭. | ಮಹಿಳಾ ಆರೋಗ್ಯ : ಒಂದು ಮರು ಚಿಂತನೆ | ಡಾ॥ ಕೆ. ಸರೋಜಾ | ೧೦೦.೦೦ |
| ೧೮. | ರಾಮಮನೋಹರ ಲೋಹಿಯಾ ಚಿಂತನೆ | ಸಂ. ಡಾ॥ ನಟರಾಜ್ ಹುಳಿಯಾರ್ | ೧೨೦.೦೦ |
| ೧೯. | ಹರಿಹರನ ಲಿಂಗಭೇದ ನಿರಸನ ರಗಳೆಗಳು | ಸಂ. ಡಾ॥ ಗುರುಪಾದ ಮರಿಗುದ್ದಿ | ೮೦.೦೦ |
| ೨೦. | ಲಯವೂ ಅದರ ಪರಿವಾರವೂ | ಪ್ರೊ॥ ಜಿ. ಎಸ್. ಸಿದ್ದಲಿಂಗಯ್ಯ | ೮೦.೦೦ |
| ೨೧. | ನಿತ್ಯ ವರ್ತಮಾನ | ಪ್ರೊ॥ ಚಂದ್ರಶೇಖರ ಪಾಟೀಲ | ೮೦.೦೦ |
| ೨೨. | ಸಾಹಿತ್ಯ ವಿಮರ್ಶೆಯ ಮಾದರಿಗಳು | ಸಿ. ಆರ್. ಎರವಿನತೇಲಿಮಠ | ೩೦೦.೦೦ |
| ೨೩. | ವಸಾಹತು ಪೂರ್ವ ಕರ್ನಾಟಕದ ರಾಜ್ಯಪದ್ಧತಿ | ಡಾ॥ ರಾಜಾರಾಮ ಹೆಗಡೆ | ೧೦.೦೦ |
| ೨೪. | ಮಾರ್ಕ್ಸ್‌ವಾದಿ ಸಾಹಿತ್ಯ ವಿಮರ್ಶೆ | ಡಾ॥ ಕೆ. ಕೇಶವ ಶರ್ಮ | ೧೦೦.೦೦ |
| ೨೫. | ವಿಜ್ಞಾನ ವರ್ತಮಾನ | ಜಿ. ಟಿ. ನಾರಾಯಣರಾವ್ | ೮೦.೦೦ |

### ಪುಸ್ತಕಗಳು ದೊರೆಯುವ ಸ್ಥಳ

**ಮಾರಾಟ ವಿಭಾಗ, ಪ್ರಸಾರಾಂಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ
ದೂರವಾಣಿ ೦೮೩೯೪ - ೨೪೧೨೧೩




**ಕನ್ನಡ ವಿಶ್ವವಿದ್ಯಾಲಯ ಪ್ರಾದೇಶಿಕ ಕಚೇರಿ ಮತ್ತು ಪ್ರಸಾರಾಂಗ ಪುಸ್ತಕ ಮಾರಾಟ ಮಳಿಗೆ**
ಸರ್ಕಾರಿ ಮುದ್ರಣ ತಂತ್ರಜ್ಞಾನ ಸಂಸ್ಥೆ ಕಟ್ಟಡ
ಅರಮನೆ ರಸ್ತೆ, ಬೆಂಗಳೂರು - ೫೬೦ ೦೦೧
ದೂರವಾಣಿ : ೦೮೦ - ೨೨೩೭೨೩೮೮

ಭಾವ ಬೀರಿತ್ತು. ನಾನು ನನ್ನ ತಂದೆತಾಯಿಗೆ ಒಬ್ಬನೇ ಮಗ.

**ಎಂ.ಎಚ್.ಕೆ.** : ತಂದೆಯವರು... ನಿಮ್ಮ ಇನಿಷಿಯಲ್ಸ್ ಎಸ್. ಜಿ...

**ವಾಸುದೇವ್** : ಎಸ್. ಕೆ. ಗೋಪಾಲ್ ಅಂತ. ಸೆಟ್ಲೂರ್ ಕೃಷ್ಣಮೂರ್ತಿ ೋಪಾಲ್. ನಾನು ಸೆಟ್ಲೂರ್ ಗೋಪಾಲ್ ವಾಸುದೇವ್. ಸೆಟ್ಲೂರ್ ಆಗ ಪ್ರಸಿದ್ಧ ಟುಂಬ. ನನ್ನ ದಾಯಾದಿಗಳೆಲ್ಲ ಪ್ರಸಿದ್ಧ ಡಾಕ್ಟರ್ಸ್, ಇಂಜಿನಿಯರ್ಸ್, ವಕೀಲರು. ನೂ ಡಾಕ್ಟರೋ, ಇಂಜಿನಿಯರೋ ಆಗಬೇಕು ಅಂತ ನಿರೀಕ್ಷೆ ಇಟ್ಟುಕೊಂಡಿದ್ದರು.

**ಎಂ.ಎಚ್.ಕೆ.** : ನಿಮ್ಮ ತಂದೆ ವೃತ್ತಿಯಲ್ಲಿ...

**ವಾಸುದೇವ್** : ನಮ್ಮ ತಂದೆ ಕಡೆ ಎಲ್ಲ ಕೃಷಿಕರು. ಕದಿರೇನಹಳ್ಳಿಯಲ್ಲಿ ಮೀನಿತ್ತು. ನಮ್ಮ ತಂದೆ ಅಂಕಲ್ ಬಿ. ಜಿ. ಗರುಡಾಚಾರ್ ಅಂತ. ಅವರಿಗೂ ಯಿಲ್ ಮಿಲ್ಸ್ ಇತ್ತು. ಇವರಿಗೆಲ್ಲಾ ಕುಟುಂಬದ ಜಮೀನು ಹೋಗಬಾರದು ಅಂತ. ನು ಅವರಿಗೆ ಸಹಾಯವಾಗಲಿ ಎಂದು ಆಸೆ, ನಿರೀಕ್ಷೆ. ಅದಕ್ಕೆ ನನ್ನ ಕೃಷಿ ಕಾಲೇಜಿಗೆ ರ್ಸೋಕೆ ಕರೆದುಕೊಂಡು ಹೋದರು. ನನಗೋ ಈ ಭೌತಶಾಸ್ತ್ರ ರಸಾಯನಶಾಸ್ತ್ರ ಲ್ಲ ಕಂಡರೆ ದ್ವೇಷ. ನ್ಯಾಷನಲ್ ಕಾಲೇಜಿನ ಇಡೀ ವಾತಾವರಣವೇ ನನಗೆ ಗ್ತಿರಲಿಲ್ಲ. ಕಾರಣ ಅಲ್ಲಿ ಕಲೆಗೆ ಪ್ರೋತ್ಸಾಹವೇ ಇರ್ತಿರಲಿಲ್ಲ. ಕೃಷಿ ಕಾಲೇಜು ನ್ಸಿಪಾಲರು ನನ್ನ ಮಾರ್ಕ್ಸ್ ನೋಡಿ... ಅಡ್ಮಿಟ್ ಮಾಡ್ಕೊಳೋಕೆ ಆಗಲ್ಲ ಅಂದ್ರು. ಹೇಗಿದ್ದರೂ ನ್ಯಾಷನಲ್ ಕಾಲೇಜು ವಿದ್ಯಾರ್ಥಿ. ಬಿ.ಎಸ್‌ಸಿ. ಮಾಡ್ಲಿ'' ಎಂದರು. ಲ್ಲಿ ದ್ವಾರಕಾನಾಥ್, ಇಂಗ್ಲಿಷ್ ಸಾಹಿತ್ಯದ ಬಗ್ಗೆ ಆಸಕ್ತಿ ಮೂಡಿಸಿದರು. ಕನ್ನಡದಲ್ಲಿ . ಎಸ್. ವೆಂಕಟರಾವ್. ಜಿ. ಪಿ. ರಾಜರತ್ನಂ ಆಗಾಗ್ಗೆ ಬರ್ತಿದ್ರು. ಅವರು ನನ್ನ ಯಿಯ ಸೋದರ ಸಂಬಂಧಿ. ಒಂದು ಸಲ ಎಸ್. ಟಿ. ಸೀತಾರಾಮಯ್ಯನವರ ರ್ಟೂನ್ ಬಿಡಿಸಿದ್ದೆ, ಕ್ಲಾಸ್‌ನಲ್ಲಿ. ಪ್ರಿನ್ಸಿಪಾಲ್‌ಗೆ ದೂರು. ಪಾಠ ಕೇಳೋದಕ್ಕೆ ದಲು ಈ ಕೆಲ್ಸ ಮಾಡ್ತಾನೆ ಅಂತ. ''ಸಹಪಾಠಿಯಿಂದ ಆಮೇಲೆ ನೋಟ್ಸ್ ಗೋಂಡ್ರಾಯ್ತು ಸಾರ್... ನನಗೆ ಚಿತ್ರ ಬಿಡಿಸೋದ್ರಲ್ಲಿ ಆಸಕ್ತಿ'' ಎಂದೆ. ''ಇದನ್ನ ನು ಮ್ಯಾಗಜೀನ್‌ನಲ್ಲಿ ಪ್ರಕಟಿಸೋದಕ್ಕೆ ಅನುಮತಿ ಕೊಡಲ್ಲ'' ಅಂದ್ರು. ಈ ಘಟನೆ ನ್ನ ಮುಂದಿನ ಹಾದಿಯನ್ನ ನಿರ್ಧರಿಸಿತು. ನಾಟಕಕ್ಕೆ ಬೆಂಬಲ ಕೊಡೋರು, ಂಗೀತಕ್ಕೆ ಬೆಂಬಲ... ಕಲೆ ಬಂದ ತಕ್ಷಣ ಯಾಕೆ ಹೀಗೆ ಅಂತ.

**ಎಂ.ಎಚ್.ಕೆ.** : ಅನಂತರ ಮದರಾಸಿಗೆ ಹೋದಿರಾ ?

**ವಾಸುದೇವ್** : ನನ್ನ ಚಿಕ್ಕಪ್ಪನ ಮಗಳು ವಿಮಲಾ ರಂಗಾಚಾರ್. ಅವರ ಮೂಲಕ ಾವಿಮರ್ಶಕ ಜಿ. ವೆಂಕಟಾಚಲಂ ಪರಿಚಯ ಆಯ್ತು. ಆಗ ಅವರು ಣಿಪುರದಲ್ಲಿದ್ದರು. ಒಮ್ಮೆ ಬಂದು ನನ್ನ ಕೃತಿಗಳನ್ನು ನೋಡಿದರು. ''ನೀನು ದ್ರಾಸ್‌ಗೆ ಹೋಗ್ಬೇಕು'' ಅಂದ್ರು. ತಂದೆಯನ್ನ ಒಪ್ಪಿಸೋಕೆ ನೆರವಾದರು. ನಾನು ವರಿಂದ ಪರಿಚಯ ಪತ್ರ ತಗೊಂಡು ಪಣಿಕ್ಕರ್ ಅವರಿಗೆ ಕೊಟ್ಟೆ.

**ಎಂ.ಎಚ್.ಕೆ.** : ನೀವು ಮದ್ರಾಸಿಗೆ ಹೋಗೋ ವೇಳೆಗೆ ರಾಯ್‌ಚೌಧುರಿ ಬಿಟ್ಟಿದ್ದರು, ಪಣಿಕ್ಕರ್ ಅಲ್ಲಿಗೆ ಬಂದಿದ್ದರಲ್ಲವೆ ?

**ವಾಸುದೇವ್** : ಅಲ್ಲಿ ಪ್ರವೇಶ ಪರೀಕ್ಷೆ ಇದೆ. ಪಣಿಕ್ಕರ್ ಹೇಳಿದರು ''ವೆಂಕಟಾಚಲಂ ನನ್ನ ಒಳ್ಳೆಯ ಸ್ನೇಹಿತರು. ಆದ್ರೂ ನೀನೊಂದು ಪ್ರವೇಶ ಪರೀಕ್ಷೆ ತಗೊಳ್ಳಲೇ ಬೇಕು.'' ಸರಿ ಎಂದೆ. ಪ್ರವೇಶ ಪರೀಕ್ಷೇಲಿ ಮೊದಲ ಸ್ಥಾನ ಪಡೆದುಕೊಂಡೆ. ನಾನು ಕಾಲೇಜು ಸೇರಿದ ಮೇಲೆ, ಅಲ್ಲಿ ಸಂಪೂರ್ಣ ಸ್ವಾತಂತ್ರ್ಯ ಇತ್ತು. ನಾನು ಏನು ಬೇಕಾದ್ರೂ ಮಾಡಬಹುದಾಗಿತ್ತು. ಮುಕ್ತವಾದ ವಾತಾವರಣ ಇತ್ತು. ಕಲೆ ಮತ್ತು ಕರಕುಶಲ ಕಲೆ ಸರ್ಕಾರಿ ಕಾಲೇಜು. ಶಿಕ್ಷಣ ವ್ಯವಸ್ಥೆಯೇ ಹಾಗಿತ್ತು. ಒಂಬತ್ತು ಗಂಟೆಗೆ ಕಾಲೇಜು ಶುರು. ಮೊದಲ ಅರ್ಧ ಗಂಟೆ ಬಹಳ ಮುಖ್ಯ. ತರಗತಿಯಲ್ಲಿ ಡ್ರಾಯಿಂಗ್, ಮಾಡೆಲಿಂಗ್... ನಮಗೆ ಕಲಿತುಕೊಳ್ಳೋದಕ್ಕೆ ತರಗತಿ ಮಾತ್ರ ಅಲ್ಲ, ಇನ್ನೊಂದು ಸೌಲಭ್ಯ. ಸಂಜೆ ನಾಲ್ಕೂವರೆ ಆದ ಮೇಲೆ ಬರಬೇಕಂದ್ರೆ ಬರಬಹುದಿತ್ತು. ವಾಚ್‌ಮನ್‌ಗೆ ಹೇಳೀಬಿಟ್ಟಿದ್ರು. ಸ್ಟುಡಿಯೋಲಿ ಎಷ್ಟು ಹೊತ್ತಾದರೂ ಕೆಲಸ. ಪಣಿಕ್ಕರ್ ಅವರ ಮನೇನೂ ಕಾಂಪೌಂಡ್ ಒಳಗೇ ಇತ್ತು. ಲೈಟ್ ನೋಡಿದ್ರೆ ಬರ್ತಿದ್ದರು. ಚರ್ಚೆ ಮಾಡ್ತಿದ್ದರು.

**ಎಂ.ಎಚ್.ಕೆ.** : ಒಂದು ಕಡೆ ನೀವು ಅವರನ್ನು ಫ್ರೆಂಡ್, ಫಿಲಾಸಫರ್, ಗೈಡ್ ಎಂದಿದ್ದೀರಿ.

**ವಾಸುದೇವ್** : ಖಂಡಿತವಾಗಿ. ಅಷ್ಟೇ ಅಲ್ಲ. ಫಾದರ್ ಫಿಗರ್ ಸಹ ನನ್ನ ಮಟ್ಟಿಗೆ ಆಗಿದ್ದರು. ನಾನು ನನ್ನ ಕಸಿನ್ ಜೊತೆ ವಾಸ ಇದ್ದೆ. ಅಲ್ಲಿಂದ ಕಾಲೇಜಿಗೆ ಸೈಕಲ್‌ನಲ್ಲಿ ಬರುತ್ತಿದ್ದೆ.

**ಎಂ.ಎಚ್.ಕೆ.** : ರಾಯ್‌ಚೌಧುರಿ ಶಿಲ್ಪಗಳು, ಸ್ವಲ್ಪ ಮಟ್ಟಿಗೆ ರಿಯಲಿಸ್ಟಿಕ್. ಅತ್ತ ಜೆ. ಜೆ. ಸ್ಕೂಲ್ ಸಹ ಅಕಾಡೆಮಿಕ್ ಶಿಕ್ಷಣ ಕೊಡುತ್ತಿತ್ತು. ಇಲ್ಲಿ ಪಣಿಕ್ಕರ್ ಅವರು ಬಂದ ಮೇಲೆ, ದೇಶೀ ದೃಷ್ಟಿಯನ್ನು ವಿದ್ಯಾರ್ಥಿಗಳಲ್ಲಿ ಬೆಳೆಸುವ ಪ್ರಯತ್ನ ಮಾಡಿದರು. ನಿಮ್ಮ ಮೇಲೆ ಅವರ ಪ್ರಭಾವ ಆಗಿರಬೇಕು.

**ವಾಸುದೇವ್** : ಚೌಧುರಿ ಶಿಲ್ಪಗಳಲ್ಲಿ ರಿಯಲಿಸಂ ಇತ್ತು. ರೆಂಬ್ರಾಂಟ್, ಯೂರೋಪಿನ ೧೯ನೇ ಶತಮಾನದ ಶಿಲ್ಪಕಲೆ ಪ್ರಭಾವ ಆಗಿತ್ತು. ಮದ್ರಾಸು ಕಾಲೇಜು ಕ್ರಾಫ್ಟ್ ಕಾಲೇಜಾಗಿತ್ತು. ಅದನ್ನು ಬದಲಿಸಿದರು. ಅವರದು ಶ್ರೀಮಂತ ಗಾಂಭೀರ್ಯದ ನಡವಳಿಕೆ. ಅವರಿಗೆ ಸಂಗೀತದಲ್ಲಿ ಆಸಕ್ತಿ, ಕುಸ್ತಿಯಲ್ಲಿ ಆಸಕ್ತಿ. ಅವರು ಬಂಗಾಳದಿಂದ ಬಂದವರು. ಅವರು, ಹಾಗೇ ಜಹಾಂಗೀರ್ ಶಾಂತಿನಿಕೇತನ್ ವಿರುದ್ಧ ದಂಗೆ ಎದ್ದಿದ್ದರು. ಪಣಿಕ್ಕರ್ ಕೇರಳದವರು. ಅವರ ಕೇರಳ ಲ್ಯಾಂಡ್‌ಸ್ಕೇಪ್ಸ್ ನೋಡಬೇಕು, ಬಹಳ ಸುಂದರವಾಗಿವೆ. ವಾಟರ್‌ಕಲರ್ಸ್.

**ಎಂ.ಎಚ್.ಕೆ.** : ರೇಖೆ ಮೇಲೆ ನಿಮ್ಮ ಪ್ರಭುತ್ವ ಅಸಾಧಾರಣ. ಆಗ್ಗೆ ಕೌಶಲಕ್ಕೆ ಒತ್ತು ಇತ್ತು. ಅದೆಲ್ಲ ಕಲಿತ ಮೇಲೆ, ನಮ್ಮ ಪುರಾಣ, ಜಾನಪದ, ನಮ್ಮ ಐತಿಹ್ಯ ಈ ಕಡೆ ನಿಮ್ಮ ಮನಸ್ಸು ಹೊರಳಿತು ಅಂತ ತೋರುತ್ತೆ.



*ಕೆ. ಎಸ್. ಪಾರ್ಥಸಾರಥಿ, ಎಸ್. ಜಿ. ವಾಸುದೇವ್, ಪ್ರೊ॥ ಎಮ್. ಎಚ್. ಕೃಷ್ಣಯ್ಯ*

**ವಾಸುದೇವ್** : ಅರವತ್ತರ ದಶಕದಲ್ಲಿ ಆಗಲೇ ಎಕ್ಸ್‌ಪ್ರೆಷನಿಸಂ ಇತ್ತು. ನಾವು ಸೇರಿದಾಗ ಪಣಿಕ್ಕರ್ ಎಕ್ಸ್‌ಪ್ರೆಷನಿಸ್ಟ್ ಆಗಿದ್ದರು. ಅಂತಹ ಪೇಂಟಿಂಗ್ಸ್ ಮಾಡುತ್ತಿದ್ದರು. ಅದರಿಂದ ಬ್ರೇಕ್ ಆಗಬೇಕು ಅಂತ ಯೋಚಿಸುತ್ತಿದ್ದರು. ಚರ್ಚೆ ಮಾಡೋರು. ''ನಿನಗೇನ್ ಅನ್ನಿಸುತ್ತೆ ಹೇಗೆ ಮುಂದುವರೆಸಿಕೊಂಡು ಹೋಗಬೇಕು ಅಂತಿದೀಯಾ ?'' ಹೀಗೆಲ್ಲಾ ಕೇಳೋರು. ಆಗ ನಾನು ಜಾನಪದ ಆಯ್ಕೆ ಮಾಡ್ಕೊಂಡೆ. ಪಿಕಾಸೊ ಮುಂತಾದವರನ್ನ ನೋಡೋದನ್ನ ನಿಲ್ಲಿಸಿದೆ. ಕಲಿತುಕೊಳ್ಳೋ ಬೇಕಿದ್ರೆ... ಬೆಳಗ್ಗೆ ಎದ್ದ ಕ್ಷಣದಿಂದ ಮೈಸೂರು ಶೈಲಿ, ಗಾಜಿನ ಪೇಂಟಿಂಗ್ ನೆನಪಿಗೆ ಬರುತ್ತಿದ್ದುವು.

**ಎಂ.ಎಚ್.ಕೆ.** : ನಿಮಗೆ ಕವಿಗಳು, ನಾಟಕಕಾರರು ಇವರ ಒಡನಾಟ ಲಭಿಸಿದ್ದು : ಒಂದು ಬೌದ್ಧಿಕವಲಯ, ಅದರ ಪರಿಣಾಮ, ಪ್ರತಿಕ್ರಿಯಿಸುವ ಬಗೆ ಇವೆಲ್ಲ ವಿಶಿಷ್ಟವಾಯಿತಲ್ಲವೆ ?

**ವಾಸುದೇವ್** : ೧೯೬೨. ಗಿರೀಶ್ ಕಾರ್ನಾಡ್ ಮದ್ರಾಸಿಗೆ ಸಹಾಯಕ ವ್ಯವಸ್ಥಾಪಕರಾಗಿ ಬಂದಿದ್ರು. ನನಗೆ ಒಬ್ಬ ಕನ್ನಡ ಮಾತಾಡೋಕೆ ಸಿಕ್ಕಿದರು. ಅವರಿಗೂ ನಾನು ಸಿಕ್ಕಿದೆ. ನಾವು ಉತ್ತಮ ಸ್ನೇಹಿತರಾದೆವು. ಅವರು ನನ್ನನ್ನು ಉತ್ತಮ ಕನ್ನಡ ಸಾಹಿತ್ಯಕ್ಕೆ ಪರಿಚಯ ಮಾಡಿಕೊಟ್ಟರು. ಆಗಲೇ 'ನಡೆದು ಬಂದ ದಾರಿ' ಅವನ್ನೆಲ್ಲ ಓದಿದ್ದು. ಆಗ ಅನ್ನಿಸಿತು, ಸಾಹಿತ್ಯದಲ್ಲಿ ಏನೆಲ್ಲ ಬದಲಾವಣೆ ಬಂದಿದೆ ಎಂದು. ಎ. ಕೆ. ರಾಮಾನುಜನ್ ಪರಿಚಯ ಕೂಡ ಕಾರ್ನಾಡ್ ಮೂಲಕ ಆಯಿತು. ಆಮೇಲೆ ಅವರು ಮದರಾಸಿಗೆ ಬಂದು ಮೂರು ಮೂರು ತಿಂಗಳು ಇರುತ್ತಿದ್ದರು.

**ಎಂ. ಎಚ್. ಕೆ.** : ಚೋಳಮಂಡಲಂ ಅಂತಹ ಕಲಾಗ್ರಾಮ, ಅದೊಂದು ಹೊಸ ಪರಿಕಲ್ಪನೆ. ಅದರ ಪ್ರಾರಂಭ, ಹಿನ್ನೆಲೆ ಹೇಗೆ ?

**ವಾಸುದೇವ್** : ಒಂದು ಸಲ ಕಾಲೇಜಿಗೆ ಒಬ್ಬ ಅಮೆರಿಕನ್ ಚಿತ್ರಕಲಾವಿದ ಬಂದಿದ್ದ. ಅವನು ಒಂದು ಶರ್ಟ್ ಧರಿಸಿದ್ದ. ಅವನೇ ವಿನ್ಯಾಸ ಮಾಡಿದ್ದು. ಅದರ ಮೇಲಿನ ಪೇಂಟಿಂಗ್ ಅವನದೆ. ಪಣಿಕ್ಕರ್ ಅದನ್ನು ತೋರಿಸಿ ''ಅವನು ತನ್ನದೇ ಶರ್ಟ್ ವಿನ್ಯಾಸ ಮಾಡಿಕೊಂಡು ಧರಿಸಬಹುದಾದರೆ, ನಮಗೇಕೆ ಸಾಧ್ಯವಿಲ್ಲ?'' ನಾನು ''ಮಾಡಬಹುದು'' ಎಂದೆ. ಕಾಲೇಜಿನಲ್ಲಿ ಒಂದು ದೊಡ್ಡ ಹಾಲ್ ಇದೆ. ನಮಗೆ ಬಾಟಿಕ್ ವಿಭಾಗದಲ್ಲಿ ಕಲಿಸೋರು ಕ್ರಾಫ್ಟ್ ಶಿಕ್ಷಕರು. ನಾವು ಒಂದು ರೀತಿ ಸಮೂಹ ರಚಿಸಿಕೊಳ್ಳಬೇಕು ಎನಿಸಿತು. ಅದನ್ನು 'ಆರ್ಟಿಸ್ಟ್ಸ್ ಹ್ಯಾಂಡಿಕ್ರಾಫ್ಟ್ ಅಸೋಸಿಯೇಷನ್' ಎಂದು ಕರೆದೆವು. ಅದಕ್ಕೆ ಜಾಗ ಬೇಕಿತ್ತು. ಆಗ ವೆಂಕಟರಾಮನ್ ಕೈಗಾರಿಕಾ ಮಂತ್ರಿ ಆಗಿದ್ದರು. ಅವರು ಪಣಿಕ್ಕರ್‌ಗೆ ಪೆರಂಬದೂರ್‌ನಲ್ಲಿ ಜಾಗ ಇದೆ, ನಿಮಗೆ ಕೊಡ್ತೀನಿ ಎಂದರು. ಹೋಗಿ ನೋಡಿದೆವು. ಶುಷ್ಕ ಪ್ರದೇಶ. ಒಪ್ಪಿಗೆ ಆಗಲಿಲ್ಲ. ಮಹಾಬಲಿಪುರಂನಲ್ಲಿ ಒಳ್ಳೆಯ ಜಾಗ ಇತ್ತು. ನೋಡಿ, ಹಂತಹಂತವಾಗಿ ಕೊಂಡುಕೊಂಡೆವು. ೧೦ ಎಕರೆ. ಹೆಸರೇನು ಇಡೋದು ? ಅಲ್ಲಿ ಚೋಳರು ಕಲೆಯನ್ನು ಆರಾಧಿಸುತ್ತಿದ್ದರು. ಕಲೆಯ ಸ್ಥಳ. ಹಾಗಾಗಿ 'ಚೋಳಮಂಡಲಂ' ಅಂತ ಕರೆದೆವು. ಇಂದಿಗೂ ಅದು ಕಲಾವಿದರಿಂದಲೇ ಬೆಳೆಯುತ್ತಿದೆ. ಪ್ರಭಾವಶಾಲಿ, ಸತ್ವಯುತ ಕ್ಷೇತ್ರವಾಗಿದೆ.

**ಎಂ. ಎಚ್. ಕೆ.** : ರೇಖೆ ಮತ್ತು ವರ್ಣ. ಪಾಶ್ಚತ್ಯರ ಅರ್ಥದಲ್ಲಿ ಅಲ್ಲ. ಭಾರತೀಯ ಪರಂಪರೆಯಲ್ಲಿ ರೇಖೆಯನ್ನು, ಅದರ ಶಕ್ತಿಯನ್ನು, ಅದರ ಸಾಧ್ಯತೆಗಳನ್ನೆಲ್ಲ ತೋರಿಸಿಕೊಟ್ಟಿದ್ದಾರೆ. ನಿಮಗೆ ಪಾಶ್ಚಾತ್ಯರ ಉದಾಹರಣೆಗಳೇನಾದ್ರೂ ಕಂಡಿತೇ ? ಮಾತೀಸ್, ಮಾಡಿಗ್ಲಿಯಾನಿ ಹೀಗೆ. ಮಾಡಿಗ್ಲಿಯಾನಿಯ ಮಹಿಳೆಯರ ಕಣ್ಣುಗಳು, ನೀಲ- ಚಪ್ಪಟೆ- ಆಳ, ಒಂದು ಅನುಭವ ಡೆಪ್ತ್ ಆಫ್ ಎ ಸೀ ಅಂಥದ್ದು ಆಗುತ್ತೆ. ನಿಮ್ಮ ಕೆಲವು 'ಷೀ' ಚಿತ್ರಗಳಲ್ಲಿ ನನಗೆ ಹಾಗೆ ಅನುಭವ ಆಗುತ್ತೆ.

**ವಾಸುದೇವ್** : ನಾನು ಸೆಜಾನಿಂದ ಬಹಳ ಆಕರ್ಷಿತನಾದೆ ೬೪-೬೫ರಲ್ಲಿ. ನಾನು ಅವರ ಪ್ರದರ್ಶನ ನೋಡಿದೆ. ಅವರನ್ನು ಭೇಟಿಯಾದೆ. ನನ್ನ ಕೃತಿಗಳನ್ನು ತೋರಿಸಿದೆ. ಎ. ಎಸ್. ರಾಮನ್‌ಗೆ ಅವರು ಪರಿಚಯಿಸಿದರು. ಆಗ್ಗೆ ನಾನು ಪಾಶ್ಚಾತ್ಯ ಪ್ರಭಾವದಲ್ಲಿದ್ದೆ. ೬೭ರಲ್ಲಿ ರಾಷ್ಟ್ರೀಯ ಪ್ರಶಸ್ತಿ ಬಂದಿತು. ಮತ್ತೊಂದು ತಿರುವು ಬಂದದ್ದು ಕಾರ್ನಾಡ್, ಕುರ್ತಕೋಟಿ, ಬೇಂದ್ರೆ ಒಂದು ಪ್ರದರ್ಶನಕ್ಕೆ ಬಂದಿದ್ದಾಗ. ಕವಿ ದ. ರಾ. ಬೇಂದ್ರೆ, ಬಂದ್ರು, ನೋಡಿದ್ರು. ''ನೀವು ಶೀರ್ಷಿಕೆ ಯಾಕೆ ಕೊಡ್ತೀರಾ'' ಅಂದರು. ''ನಾನು ನನ್ನ ರೀತೀಲಿ ಪೇಂಟಿಂಗ್ ನೋಡಿ ಆನಂದಿಸ್ತೀನಿ'' ಅಂದರು. ಆಮೇಲೆ ಜಿ. ಬಿ. ಜೋಶಿಯವರ ಅಟ್ಟದಲ್ಲಿ ಕುಳಿತು ಟೀ ಕುಡೀತಾ ಮಾತಾಡಿದೆವು. ಕುರ್ತಕೋಟಿ ಒಂದು ಕವನ ವಿವರಿಸಿದರು. ಆ ಕಾಲ್ಪನಿಕತೆಯ ನಿಟ್ಟಿನಲ್ಲಿ ನನ್ನ



ಮನಸ್ಸೂ ಕೆಲಸ ಮಾಡುತ್ತಿತ್ತು. ವೃಕ್ಷ ಕಲ್ಪವೃಕ್ಷವಾದದ್ದು ನಾನು ಬೆಂಗಳೂರಿಗೆ ಬಂದ ಮೇಲೆ. ಸಂಸ್ಕಾರ ವಂಶವೃಕ್ಷಗಳಿಗೆ ಕಲಾ ನಿರ್ದೇಶನ ಮಾಡಿದ್ದರ ಪ್ರಭಾವವೂ ಆಯಿತು. ವೃಕ್ಷ-ವಂಶವೃಕ್ಷ ಇವೆಲ್ಲದರಿಂದ ನನ್ನದೇ ಒಂದು ತತ್ತ್ವ ಸೃಷ್ಟಿಸಿಕೊಳ್ಳಲು ಸಾಧ್ಯವಾಯಿತು.

**ಎಂ. ಎಚ್. ಕೆ.** : ಅದೊಂದು ಸ್ವಾಯತ್ತ ಪ್ರಪಂಚವೇ ಆಯಿತು.

**ವಾಸುದೇವ್** : ನನಗೆ ತಾಂತ್ರಿಕವಾಗಿ ವಿಷಯದ ಆಳಕ್ಕೆ ಹೋಗೋದಕ್ಕೆ ಅಲ್ಲಿನ ಅನುಭವಗಳು ಸಹಾಯಕವಾದುವು. ವರ್ಟಿಕಲ್, ಹಾರಿಜಾಂಟಲ್, ಸಿಂಬಾಲಿಕ್... ಅದರಲ್ಲಿ ಎಲ್ಲಾ ತರೋದಕ್ಕೆ ಸಾಧ್ಯವಾಯಿತು. ನಾನು ಬಹಳ ಕಲಿಯೋದಿಕ್ಕೆ ಸಾಧ್ಯವಾಯಿತು. ೮-೯ ವರ್ಷ ಅದರ ಮೇಲೆ ಕೆಲಸ ಮಾಡಿದೆ. ೧೯೮೪ರಲ್ಲಿ ಒಂದು ಪೇಂಟಿಂಗ್ ಮಾಡಿದೆ. ''ಟ್ರೀ ಆಫ್ ಲೈಫ್ ಅಂಡ್ ಡೆಥ್'' ಅಂತ ಕರೆದೆ. ನನಗೆ ಅನ್ನಿಸಿತು 'ಶಾಶ್ವತ ಜೀವನ ಅನ್ನೋದಿಲ್ಲ. ಅದು ಸಾಯಲೇಬೇಕು' ಎಂದು.

**ಎಂ. ಎಚ್. ಕೆ.** : ವೈಯಕ್ತಿಕವಾಗಿ ಅನುಭವಿಸಿದ್ದೂ ಕಾರಣವಿರಬಹುದು.

**ವಾಸುದೇವ್** : ಹೌದು. ಆಗ ನನ್ನ ಹೆಂಡತಿಗೆ ಕ್ಯಾನ್ಸರ್ ಆಗಿತ್ತು. ಆದರೆ ಅದರ ಬಗ್ಗೆ ನಾನು ಯೋಚನೇನೇ ಮಾಡ್ಲಿಲ್ಲ.

**ಎಂ. ಎಚ್. ಕೆ.** : ಜೀವನ ಅನ್ನೋದು ಹುಟ್ಟು ಮತ್ತು ಸಾವುಗಳ ಆವರ್ತನ ಕ್ರಿಯೆ.

**ವಾಸುದೇವ್** : ಮರ ಯಾವುದೋ ಒಂದು ಸಮಯದಲ್ಲಿ ಸಾಯುತ್ತೆ, ಆದರೆ ಮತ್ತೆ ಹುಟ್ಟಿಕೊಳ್ಳುತ್ತೆ.

**ಎಂ. ಎಚ್. ಕೆ** : ಅಜಂತಾದ ಬಹುದೃಷ್ಟಿಕೋನತ್ವ, ಮಲ್ಟಿಪರ್ಸ್ಪೆಕ್ಟಿವ್ ನಿಮ್ಮಲ್ಲಿದೆ. ರೇಖೆಗಳಿಗೆ ಅವುಗಳದೇ ಆದ ಗುಣಮೌಲ್ಯ ಕೊಟ್ಟು, ಆ ಮೂಲಕ ಸ್ವತಂತ್ರ ಕಲಾಕೃತಿ, ಜಗತ್ತು ಸೃಷ್ಟಿಸುತ್ತೀರ.

**ವಾಸುದೇವ್** : ರೇಖೆ ಬಹಳ ಮುಖ್ಯ. ಹಾಗೆ ಪಣಿಕ್ಕರ್ ಹೇಳೋರು. ನಮಗೆ ಒಳ್ಳೆಯ ಶಿಕ್ಷಕರಿದ್ದರು. ಒಬ್ಬರು ಸಂತಾನರಾಜು. ಇನ್ನೊಬ್ಬರು ಮುನಿಸ್ವಾಮಿ. ಅವರಿಬ್ಬರೂ ರೇಖೆಗಳಲ್ಲಿ ಅತ್ಯುತ್ತಮ ಪ್ರಭುತ್ವ ಸಾಧಿಸಿದ್ದರು. ನನ್ನಲ್ಲಿ ಇದ್ದ ಒಂದು ಶಕ್ತಿ ಎಂದರೆ ಅದು. ಇದೆ ಅನ್ನಲ್ಲ, ಇತ್ತು.

**ಎಂ. ಎಚ್. ಕೆ.** : ನೀವು ರೇಖೆಗಳನ್ನು ಬಳಸುವ ಬಗೆ, ಸಂಗೀತದಲ್ಲೂ ಸ್ವರಗಳ ಮೂಲಕ ಒಂದು ವಾಸ್ತು ಶಿಲ್ಪ ಹೇಗೆ ರಚಿಸುತ್ತಾರೋ ಹಾಗೇ ನಿಮ್ಮ ಪೇಂಟಿಂಗ್‌ನಲ್ಲಿ ಒಂದು ವಾಸ್ತು ನಿರ್ಮಾಣ ಆಗುತ್ತೆ. ಕನ್ನಡ ಲಿಪಿಗಳನ್ನೂ ಬಳಸುತ್ತೀರಿ. ಕೇವಲ

ಅಲಂಕಾರಕ್ಕಾಗಿ ಅಲ್ಲ... ಇನ್ನೂ ಆಳದ ಭಾವಗಳಿವೆ...

**ವಾಸುದೇವ್** : ಕನ್ನಡಕ್ಕೆ ಸಂಬಂಧಿಸಿದ್ದು... ಅಂದ್ರೆ ಆ ಶೈಲಿ, ಆಕಾರ... ಕನ್ನಡ ಸಾಹಿತ್ಯದೊಂದಿಗಿನ ನನ್ನ ಸಂಬಂಧ. ಅದು ಬರ್ತಾನೇ ಇರುತ್ತೆ. ನಾನು ರಾಮಾನುಜನ್ ಅವರನ್ನು ಕೇಳಿದೆ ''ನನ್ನ ಡ್ರಾಯಿಂಗ್ ಅಥವಾ ಪೇಂಟಿಂಗ್‌ನಲ್ಲಿ ಆಗಾಗ ಈ ಕನ್ನಡದ ಅಕ್ಷರಮಾಲೆ ಬರ್ತಾನೆ ಇರುತ್ತೆ. ಯಾಕೆ ?'' ''ನಿನಗೆ ಇಷ್ಟ ಅಂತ ಬರೀತಿ'' ಅಂದರು. ''ಇಲ್ಲ ನನಗೆ ಇಷ್ಟ ಅಂತಲ್ಲ ಅದನ್ನು ಮಾಡೋದು. ಅದರಲ್ಲೇನೋ ಅರ್ಥ ಇದೆ.'' ಆಗ ಅವರು ಹೇಳಿದರು ''ನೀನು ಮುಂದಕ್ಕೆ ಹೋಗ್ಬೇಕು ಅಂತಿದೀಯಾ... ನಿನಗೆ ನಿನ್ನ ಬೇರುಗಳ ಜೊತೆ ಸಂಪರ್ಕ ಇರಬೇಕು ಅನ್ನಿಸುತ್ತೆ. ನೀನು ನಿನ್ನ ಬೇರುಗಳನ್ನು ಬಿಟ್ಟುಹೋಗ್ತಿಲ್ಲ. ನಿನ್ನ ಜೊತೆ ಮುಂದಕ್ಕೆ ಒಯ್ಯುತ್ತಿದ್ದೀಯಾ.''

**ಎಂ. ಎಚ್. ಕೆ.** : ಇನ್ನೊಂದು ಮುಖ್ಯವಾದ ವಿಷಯ. ನೀವು ಕೊಡುವ ಶೀರ್ಷಿಕೆಗಳೂ ಸ್ವಾರಸ್ಯವಾಗಿರುತ್ತವೆ. ಶೀರ್ಷಿಕೆ ಬಗ್ಗೆ ಬೇಂದ್ರೆ ಕಲ್ಪವೃಕ್ಷ ನೆನಪಿಸಿ ಕೊಂಡಿರಿ. ಆದರೆ ಒಂದೊಂದೇ ಚಿತ್ರಕ್ಕೆ ಶೀರ್ಷಿಕೆ ಕೊಡುವುದಿಲ್ಲ. ''ಹಿ'' ''ಷಿ'' ಅನ್ನುತ್ತೀರಿ. ಇದು ಯಾವುದೋ ಒಬ್ಬ ವ್ಯಕ್ತಿಗೆ ಸೀಮಿತ ಅಲ್ಲ. ಮನುಷ್ಯಕುಲದ ಅನುಭವ ಗಳಿಗೆ ಸಂಬಂಧಿಸಿದ್ದು. ಮೈಥುನ ಸರಣಿ. ನಾನೂ ಮೊದಲು ಇದು ಲೈಂಗಿಕ ಕ್ರಿಯೆಗೆ ಸಂಬಂಧಿಸಿದೆ ಎಂದುಕೊಂಡಿದ್ದೆ. ಕಾಮ. ಆಮೇಲೆ ಆ ಚಿತ್ರಗಳನ್ನು ಮತ್ತೆ ಮತ್ತೆ ನೋಡುತ್ತಿದ್ದಂತೆ – ಅವು ಹೆಚ್ಚಿನದೇನನ್ನೋ ಹೇಳುತ್ತಿವೆ ಎನ್ನಿಸಿತು. ಕಾಮವನ್ನು ಮೀರಿದ್ದು. ಇಡೀ ಸೃಷ್ಟಿಯ ಸಂಕೇತ. ಅದು ಯಾವಾಗ ಸೃಷ್ಟಿಯ ಸಂಕೇತವಾಗುತ್ತೋ ಆಗ ಸೂರ್ಯ-ಚಂದ್ರ, ಭೂಮಿ-ಆಕಾಶ, ಗ್ರಹ-ನಕ್ಷತ್ರಗಳ ಸೆಳೆತ – ಅದು ಕಾಸ್ಮಾಸ್‌ನ ಸೃಷ್ಟಿಗೆ ಹಿನ್ನೆಲೆಯಾಗಿ ಶಕ್ತಿಯಾಗಿ ಇರುತ್ತೆ ಅನ್ನೋದು, ಅದರ ಸಂಕೇತ ಅನ್ನೋದು ಹೊಳೆಯಿತು.

**ವಾಸುದೇವ್** : ಮೈಥುನ ಒಂದು ಮಟ್ಟದಲ್ಲಿ... ಖಜುರಾಹೊ ಶಿಲ್ಪಗಳು ಪ್ರೇರಣೆ ಕೊಟ್ಟಿದ್ದವು. ಆದರೆ ಅದೇ ಸಮಯದಲ್ಲಿ ನಾನು ಹೇಳೋದು ಅಂದರೆ ಒಂದು ಭಾಗ – ಇನ್ನೊಂದು ಭಾಗವಿಲ್ಲದೆ ಅಸ್ತಿತ್ವದಲ್ಲಿರಲು ಸಾಧ್ಯವಿಲ್ಲ ಎಂದು. ಒಬ್ಬ ಮನುಷ್ಯ ತಾನಾಗಿಯೇ ಬದುಕಿರಲು ಸಾಧ್ಯವಿಲ್ಲ. ಅವನಿಗೆ ಬೇರೇನೋ ಬೇಕು.

**ಎಂ. ಎಚ್. ಕೆ.** : ವೈರುಧ್ಯಗಳನ್ನು ಉದ್ದಕ್ಕೂ ಬಳಸಿಕೊಳ್ಳೋದು...

**ಕೆ.ಎಸ್.ಪಿ.** : ಅದರ ಇನ್ನೊಂದು ಬಗೆ ಸಂಲಗ್ನಗೊಳಿಸುವ ಕ್ರಿಯೆ. ಸಂಲಗ್ನ ಗೊಳಿಸಲು ವಿಯೋಜನೆ, ವಿಯೋಜನೆಗೊಳಿಸಲು ಸಂಲಗ್ನತೆ.

**ವಾಸುದೇವ್** : ನನ್ನ ಪೇಂಟಿಂಗ್‌ಗಳೆಲ್ಲದರಲ್ಲೂ ಸಂಲಗ್ನತೆ ಹಾಗೂ ವಿಯೋಜನೆ ನೋಡುತ್ತೀರಿ.

**ಎಂ. ಎಚ್. ಕೆ.** : ಅರ್ಥ್‌ಸ್ಕೇಪ್ ಸರಣಿಯಲ್ಲಿ ಪರಿಸರ ಪ್ರಜ್ಞೆ ಅನ್ನುವುದಕ್ಕಿಂತಲೂ ಮನುಷ್ಯ-ನಿಸರ್ಗ ಸಂಬಂಧ... ಇಲ್ಲೂ ಒಂಟಿಯಾಗಿ ಉಳಿಯಲು ಸಾಧ್ಯವಿಲ್ಲ. ನಿಸರ್ಗ ನಾಶವಾದರೆ ಮನುಷ್ಯ ನಾಶವಾಗ್ತಾನೆ. ಜೀವರಾಶಿ ಇಲ್ಲದಿದ್ದರೆ ನಿಸರ್ಗವೂ ವಿಕಾಸಗೊಳ್ಳುವುದಿಲ್ಲ ಎಂಬ ತತ್ತ್ವ ಅಡಗಿದೆ ಎನಿಸುತ್ತೆ.

**ವಾಸುದೇವ್** : ಈಗ ಜನ ಅರಣ್ಯ ಕಡಿಯೋದು ಇಂಥದೆಲ್ಲ ಏಕೆ ಮಾಡ್ತಾರೆ ? ತಮಗೆ ಅದಕ್ಕಿಂತ ಹೆಚ್ಚು ಬಲ, ಶಕ್ತಿ ಇದೆ ಅಂತ ಯೋಚಿಸ್ತಾರೆ. ಆದ್ರೆ ನಿಜ. ಹೇಳಬೇಕೆಂದರೆ ಅವರಿಗೆ ಇಲ್ಲ. ಈ ಪ್ರಕೃತಿಗೆ ಎಂಥ ಅದ್ಭುತ ಶಕ್ತಿ ಇದೆ !

**ಎಂ. ಎಚ್. ಕೆ.** : ನೀವು ಸಿನೆಮಾಗಳಲ್ಲಿ ಕಲಾ ನಿರ್ದೇಶನ ಮಾಡಿದ್ದೀರಿ. ಅವರಿಂದ ಏನಾದರೂ ನಿಮ್ಮ ರಚನೆಗಳ ಮೇಲೆ ಪ್ರಭಾವ ಆಯಿತೆ ?

**ವಾಸುದೇವ್** : ಹೌದು. ಮದರಾಸ್ ಥಿಯೇಟರ್ ಗ್ರೂಪ್‌ಗೂ ಸೆಟ್, ಪೋಸ್ಟರ್ ವಿನ್ಯಾಸ ಮಾಡ್ತಿದ್ದೆ. ಆಮೇಲೆ ಕಾರ್ನಾಡ್ ಭೇಟಿಯಾಯಿತು. ನಾಟಕದ ಬಗ್ಗೆ ಆಸಕ್ತಿ ಬಂದದ್ದು ಆಗ. ಬಹಳಷ್ಟು ಚರ್ಚೆ ಮಾಡುತ್ತಿದ್ದೆವು. ಪೇಂಟಿಂಗ್‌ನ ಆಚೆ ಏನನ್ನೋ ತಿಳಿದುಕೊಳ್ಳೋದಕ್ಕೆ ಸಹಾಯವಾಯಿತು. ಕಾರ್ನಾಡ್, ಕಾರಂತ್, ರಾಮಾನುಜನ್, ಕಂಬಾರ, ಧಾರವಾಡದಲ್ಲಿ ಕುರ್ತಕೋಟಿ, ಆಮೇಲೆ ಲಂಕೇಶ್ ಇವರ ಒಡನಾಟ, ಚರ್ಚೆ ಬಹಳ ಸಹಾಯ ಮಾಡಿದೆ.

(ದೀರ್ಘ ಸಂವಾದದಿಂದ ಆರಿಸಿದ ಭಾಗಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿ ನಿರೂಪಿಸಿದೆ.)

---

ಸಂದರ್ಶನ ಲೇಖನ ಸಿದ್ಧಪಡಿಸಿದವರು : **ಪ್ರೊ|| ಎಂ. ಎಚ್. ಕೃಷ್ಣಯ್ಯ**
ನಂ. ೧೮೨, ''ಶಾಲಿನಿ'', ೭ನೇ ಅಡ್ಡರಸ್ತೆ, ೧ನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

With Best Compliments From



RASASRI DEVELOPERS (P) LTD

No. 18, 3rd Floor, Jaladharshini Layout
New BEL Road
BANGALORE - 560 054

# ಪ್ರಜಾಪ್ರಭುತ್ವ : ಓದುಗರ ಪ್ರತಿಕ್ರಿಯೆ



ಪಕ್ಷಾಂತರ, ಪ್ರಜಾಪ್ರಭುತ್ವದ ಸ್ಥಿತಿ - ಗತಿ, ಚುನಾಯಿತ ಶಾಸಕರನ್ನು ಹಿಂದಕ್ಕೆ ಕರೆಸಿಕೊಳ್ಳುವ ಕ್ರಮ, ಹಣದ ಪ್ರಭಾವ, ಸೈದ್ಧಾಂತಿಕ ನಡೆ - ಇವನ್ನು ಕುರಿತಂತೆ 'ಹೊಸತು' ಓದುಗರರಿಂದ ಸಂಕ್ಷಿಪ್ತ ಲೇಖನಗಳನ್ನು ಆಹ್ವಾನಿಸಲಾಗಿತ್ತು. ಅದಕ್ಕೆ ಪ್ರತಿಕ್ರಿಯಿಸಿದ ಓದುಗರೆಲ್ಲರಿಗೂ 'ಹೊಸತು' ವಂದನೆ ಸಲ್ಲಿಸುತ್ತದೆ ಮತ್ತು ಕೆಲವನ್ನು ಆಯ್ದು ಪ್ರಕಟಿಸುತ್ತಿದೆ.

– ಸಂ.

## ಸಿದ್ಧಾಂತ ಮತ್ತು ರಾಜಕಾರಣ

**ಮ**ನುಷ್ಯ ನಾಗರಿಕನಾದಂತೆ ಅವನ ಆಸಕ್ತಿ, ಅಭಿರುಚಿ, ಚಿಂತನೆ, ಸಂಸ್ಕೃತಿಗಳು ಉದಾತ್ತವಾಗ ಬೇಕಾದದ್ದು ಪ್ರಕೃತಿ ಸಹಜ ನಿಯಮ. ಇದೇ ಮಾತು ಒಂದು ರಾಷ್ಟ್ರಕ್ಕೂ ಅನ್ವಯಿಸುತ್ತದೆ. ಹಲವು ನಾಗರಿಕತೆಗಳ, ಜನಾಂಗಗಳ ಸಮ್ಮಿಳನ ಸ್ಥಾನವೆನಿಸಿ ಕೊಂಡಿರುವ ಒಂದು ದೇಶ ತನ್ನ ಅತ್ಯುತ್ಕೃಷ್ಟ ಮೌಲ್ಯಗಳು, ಪ್ರಬುದ್ಧ ರಾಜಕೀಯ ನಡೆ ಮತ್ತು ಆಯ್ಕೆಗಳಿಂದ ಗಮನ ಸೆಳೆಯುತ್ತದೆ. ಕಳೆದ ಕೆಲವು ದಶಕಗಳವರೆಗೂ ಭಾರತಕ್ಕೆ ಈ ಮಾತು ಸಮಂಜಸವಾಗಿತ್ತು. ಪ್ರಜಾಪ್ರಭುತ್ವ, ಜನಮತ ಗಳು ದೇಶದುದ್ದಕ್ಕೂ ಶ್ರೇಷ್ಠ ಸ್ಥಾಪಿತ ಮೌಲ್ಯಗಳಾಗಿದ್ದವು. ಆದರೆ ಇತ್ತೀಚಿನ ದಿನಗಳಲ್ಲಿ, ಗಣತಂತ್ರವೂ ಅರಸೊತ್ತಿಗೆಯ ವಿಸ್ತೃತ ಭಾಗದಂತೆ ತೋರುತ್ತಿದೆ. ಸ್ವತಂತ್ರ ಭಾರತದಲ್ಲಿ ರಾಜಕೀಯ ರಂಗವನ್ನು ನಡೆಸ ಬೇಕಿದ್ದ ಮೌಲ್ಯಗಳು ನಾಮಕಾವಸ್ಥೆಗೂ ಅಸ್ತಿತ್ವದಲ್ಲಿದ್ದಂತೆ ಕಾಣುತ್ತಿಲ್ಲ. ಇಂದು ಭಾರತದಲ್ಲಿ ರಾಜಕೀಯ ಸೇರುವುದೆಂದರೆ ಒಂದು ಹೊಸ ಕೆಲಸ ಹಿಡಿದಂತೆ. ಈ ಕೆಲಸಕ್ಕೆ ಬರುವವರು ಪ್ರಾಮಾಣಿಕತೆ, ಬದ್ಧತೆ, ಲಜ್ಜೆ, ಮರ್ಯಾದೆಗಳನ್ನು ಮರೆತು ಇಡೀ ದೇಶವನ್ನು ಏಕಸ್ವಾಮ್ಯದ ಉದ್ದಿಮೆಯಂತೆ ನೋಡಲು ಸಿದ್ಧರಿರ ಬೇಕು. ತನ್ನನ್ನು ಆರಿಸಿ ಕಳುಹಿಸುವ ಜನರ ಬಗ್ಗೆ ನಿಜವಾದ ಕಳಕಳಿಯಿಂದ ಕೆಲಸ ಮಾಡಲು ಹೊರಟರೆ, ಮುಂದಿನ ಚುನಾವಣೆಯಲ್ಲಿ ಸೋಲ ಬೇಕಾಗುತ್ತದೆ. ಇದು ಜನರ ನೈತಿಕ ಅಧಃಪತನವೋ ಅಥವಾ ರಾಜಕೀಯದ ನೂರೆಂಟು ಹುಳುಕುಗಳ ಸಂಚಿತ ಪರಿಣಾಮವೋ ತಿಳಿಯುತ್ತಿಲ್ಲ. ದೇಶದಲ್ಲಿ ಚುನಾವಣೆಯ ಮೂಲಕ ಪಕ್ಷವೊಂದನ್ನು ಅಧಿಕಾರಕ್ಕೆ ತರುವುದು, ಅದು ಸಾಂವಿಧಾನಿಕ ಮಾರ್ಗದಲ್ಲಿ ಜನರ ಪರವಾಗಿ ಕೆಲಸ ಮಾಡಲೆಂದೇ ಹೊರತು, ರಾಜ ಪ್ರಭುತ್ವದ ಮಾದರಿಯಲ್ಲಿ ಜನರನ್ನು ಐದು ವರ್ಷ ಆಳಿಕೊಂಡಿರಲೆಂದಲ್ಲ. ಆದರೆ ಇಂದು ಈ ಆಯ್ಕೆಯ ಪ್ರಕ್ರಿಯೆ ಮತ್ತು ಆಯ್ಕೆಗಳೆರಡೂ ತಮ್ಮ ಗುಣಮಟ್ಟ ಕಳೆದುಕೊಳ್ಳುತ್ತಿವೆ. ಸ್ವಾತಂತ್ರ್ಯ ಬಂದ ಶುರುವಿನಲ್ಲಿ ಸರ್ಕಾರದ ಕಾರ್ಯವೈಖರಿ ಮತ್ತು ಸಿದ್ಧಾಂತಗಳು ಮುಂದಿನ ಚುನಾವಣೆಯಲ್ಲಿ ಪಕ್ಷಗಳ ಹಣೆಬರಹವನ್ನು ನಿರ್ಧರಿಸುತ್ತಿದ್ದವು. ಈಗ ಯಾವ ರಾಜ್ಯದಲ್ಲೂ ಹೀಗೆ ಹೇಳುವಂತಿಲ್ಲ. ಜಾತಿ, ಧರ್ಮ, ಹಣದ ಬೆಂಬಲವಿಲ್ಲದೆ ಯಾವ ಪಕ್ಷವೂ ಅಧಿಕಾರಕ್ಕೆ ಬರುವುದು ಅಸಾಧ್ಯ. ರಾಜಕೀಯದಲ್ಲಿರುವವರಿಗೂ ಜನರಿಗೂ ಇದೇ ಮುಖ್ಯವಾಗಿರುವುದು ವಿಚಿತ್ರ. ಬಹುಶಃ ದೇಶ ಕೇವಲ ಆರ್ಥಿಕ ಪ್ರಗತಿಯೆಡೆಗೆ ಗಮನ ಕೇಂದ್ರೀಕರಿಸಿದಾಗ ಹೀಗಾಗಬಹುದು. ತಲಾದಾಯವನ್ನು ಮಾತ್ರ ಹೆಚ್ಚಿಸುತ್ತಾ ಹೋದರೆ ಇತ್ತ ವೈಯಕ್ತಿಕ ನೈತಿಕತೆ ಮತ್ತು ಸಾಂಸ್ಕೃತಿಕ ಬೆಳವಣಿಗೆ ಕುಂಠಿತವಾಗುತ್ತದೆ. ಕೈಗಾರಿಕೋದ್ಯಮಿಗಳ ಶ್ರೇಯೋಭಿವೃದ್ಧಿಗೆ ಬಡವರನ್ನು ಬಲಿಕೊಟ್ಟು ಶ್ರಮಿಸುತ್ತಿರುವ ಮೋದಿಯ ಗುಜರಾತಿನಂತಾಗಲಿ ಎಂದು ಕರ್ನಾಟಕದಲ್ಲಿ ಬಿ.ಜೆ.ಪಿ.ಯನ್ನು ಅಧಿಕಾರಕ್ಕೆ ತಂದ ಜನ ಹಾರೈಸಿರಬೇಕು. ಕಳೆದ ಚುನಾವಣೆಯಲ್ಲಿ ಸ್ವತಃ ಬಿ.ಜೆ.ಪಿ.ಗೆ ತನ್ನ ಮೂಲ ಸಿದ್ಧಾಂತದ ಹೆಸರೆತ್ತುವ ಧೈರ್ಯವಾಗಲಿಲ್ಲ. ಆದರೆ ಯಾವ ಸಿದ್ಧಾಂತವೂ ಇಲ್ಲದ ಶಾಸಕರು ಮಾರುಕಟ್ಟೆಯಲ್ಲಿ ಧಾರಾಳವಾಗಿ ಸಿಗುತ್ತಿದ್ದ ಕಾರಣ ಈಗ ಕರ್ನಾಟಕದಲ್ಲಿ ಧರ್ಮ ಮತ್ತು ಧನ ಬಲದ ಸರ್ಕಾರ ಸ್ಥಾಪಿತವಾಗಿದೆ. ಈಗೀಗ ನಮ್ಮಲ್ಲಿ ನಿಜಕ್ಕೂ ಸಮಾಜವಾದಿ ಚಳುವಳಿಗಳು ನಡೆದಿದ್ದವೇ ಎಂಬ ಅನುಮಾನ ಮೂಡುತ್ತದೆ. ಅಲ್ಲದೆ, ನಮ್ಮ ದೇಶದ ಪ್ರಜಾಪ್ರಭುತ್ವದ ಪ್ರಕ್ರಿಯೆ ಇನ್ನೂ ಪೂರ್ಣವಾಗಿಲ್ಲ. ಒಂದು ಪಕ್ಷ ಇನ್ನೊಂದಕ್ಕೆ ತೃಪ್ತಿದಾಯಕ ಪರ್ಯಾಯ ಎನ್ನುವಂತೆಯೂ ಇಲ್ಲ. ಬಂಡವಾಳಶಾಹಿ ಕಾಂಗ್ರೆಸ್ಸಿಗೆ ಕೋಮುವಾದಿ ಬಿ.ಜೆ.ಪಿ. ಬದಲಿ ಎಂದುಕೊಳ್ಳುವುದು ಅಸಾಧ್ಯ. ಇವೆರಡೂ ಬೇಡವೆಂದರೆ ಯಾವುದಾದರೂ ಕಲಬೆರಕೆ ಪಕ್ಷ ಅಧಿಕಾರಕ್ಕೆ ಬಂದೀತು. ಕಮ್ಯುನಿಸ್ಟರನ್ನು ಗೆಲ್ಲಿಸುವಷ್ಟು ಪ್ರಬುದ್ಧತೆ ಇನ್ನೂ ಮೂಡಿಲ್ಲ. ಉಳ್ಳವರು - ಇಲ್ಲದವರ ನಡುವೆ ಬಹು ದೊಡ್ಡ ಕಂದರವಿರುವ ಭಾರತ, ಕ್ರಾಂತಿಗೆ



## ಸದಭಿರುಚಿಯ ಓದುಗರಿಗೆ ಉಪಯುಕ್ತ ಪುಸ್ತಕಗಳು....

**ಎಂ. ಎಲ್. ರಾಘವೇಂದ್ರರಾವ್**

| | |
|---|---|
| ✦ ಕೀಲುನೋವು ಚಿಕಿತ್ಸೆ ಏನು ? | 60-00 |
| ✦ ಯಾವುದು ಸರಿ, ಯಾವುದು ತಪ್ಪು? ಒಂದು ಆತ್ಮಾವಲೋಕನ | 60-00 |
| ✦ ಆತ್ಮವಿಶ್ವಾಸ : ಯಶಸ್ಸಿಗೆ ಮೆಟ್ಟಿಲು | 40-00 |
| ✦ ಕಲಿಯಿರಿ 'ಸಿ' ಭಾಷೆ | 60-00 |
| ✦ ವಯಸ್ಸು ಜೀವನ ನಿರ್ವಹಣೆ | 60-00 |
| ✦ ಚಿಣ್ಣರ ಕುರಿತು ಹಿರಿಯರಿಗೆ ಕಿವಿಮಾತು | 50-00 |
| ✦ ಪ್ರೀತಿ ಎಂದರೇನು ? | 30-00 |
| ✦ ಭೌತಶಾಸ್ತ್ರ ರಸಪ್ರಶ್ನೆ | 35-00 |
| ✦ ಗಣಿತ ರಸಪ್ರಶ್ನೆ | 35-00 |
| ✦ ವಯಸ್ಸು - ಜೀವನ ನಿರ್ವಹಣೆ | 60-00 |
| ✦ ನೀವು ಉತ್ತಮ ವಿದ್ಯಾರ್ಥಿಯಾಗಬೇಕೆ ? | 85-00 |
| ✦ ಪ್ರೀತಿ ಎಂದರೇನು ? | 30-00 |
| ✦ ರಿಲ್ಯಾಕ್ಸೇಷನ್ | 60-00 |
| ✦ ಸೃಜನಶೀಲ ಮನಸ್ಸು | 30-00 |
| ✦ ಸಕಾರಾತ್ಮಕ ಆಲೋಚನೆ | 25-00 |
| ✦ ಗೆಲುವಿನ ದಿಕ್ಸೂಚಿ ಗುರಿ | 25-00 |
| ✦ ಯಶಸ್ಸಿನ ರಹಸ್ಯ | 30-00 |
| ✦ ಗೆಲುವಿನ ತಂತ್ರಗಳು | 25-00 |
| ✦ ಸಮಯ ನಿರ್ವಹಣೆ | 25-00 |
| ✦ ಮಾನಸಿಕ ಒತ್ತಡದಿಂದ ಮುಕ್ತರಾಗಿ | 25-00 |
| ✦ ಏಕಾಗ್ರತೆ-ಜ್ಞಾಪಕಶಕ್ತಿ | 30-00 |
| ✦ ಜೀವನ ಆನಂದ | 25-00 |
| ✦ ಜೀವನ ಸಮರ ಗೆಲ್ಲೋಣ ಬನ್ನಿ ! | 30-00 |
| ✦ ಖಿನ್ನತೆ | 25-00 |
| ✦ ನೀವೇ ವಿಜೇತರು | 40-00 |
| ✦ ಓದುವ ತಂತ್ರಗಳು | 50-00 |
| ✦ ನಿಮ್ಮನ್ನು ನೀವು ಅರ್ಥಮಾಡಿಕೊಳ್ಳಿ | 50-00 |
| ✦ ಎಸರ್ಟೀವ್‌ನೆಸ್ | 50-00 |
| ✦ ಆನಂದಕ್ಕೆ ಆರು ಹೆಜ್ಜೆ | 80-00 |

**ಎಂ. ಆರ್. ಗುರುಪ್ರಸಾದ್**

| | |
|---|---|
| ✦ ಕಂಪ್ಯೂಟರ್ | 60-00 |

**ಡಾ. ಪಿ. ಎಸ್. ಶಂಕರ್**

| | |
|---|---|
| ✦ ಮೈಮನಕೆ ಚೇತನ | 65-00 |
| ✦ ಆರೋಗ್ಯ ಅನಾರೋಗ್ಯದ ನಡುವೆ | 55-00 |

**ಡಾ. ವಸುಂಧರಾ ಭೂಪತಿ**

| | |
|---|---|
| ✦ ಸ್ತ್ರೀ-ಆರೋಗ್ಯ-ಆರೈಕೆ | 40-00 |

ಲಹರಿ ಪ್ರಕಾಶನ, ವಿಕ್ರಂ ಪ್ರಕಾಶನದ ಸಹಯೋಗದ ಪ್ರಕಟಣೆಗಳು

**ಮಧುರ ಪ್ರಕಾಶನ**

ಪ್ರತಿಗಳಿಗೆ ಸಂಪರ್ಕಿಸಿ: ನಂ. 218-ವೈ, 13ನೇ ಮುಖ್ಯರಸ್ತೆ, 3ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - 560 010 ಮೊಬೈಲ್: 9980114365

## Emmvee, the fastest growing solar family in India

**solarizer®**
SOLAR HEATING SYSTEMS
The Best under the Sun




The credentials are impeccable -Asia's largest state-of-the-art integrated factory, imported machinery, world class expertise and absolute professionalism.

- Guarantee of quality
- Standard Products
- Customised products : Heat Exchanger & Pressurised models
- Auto Circulation System
- Excellent after sales service

**EMMVEE**
An ISO 9001:2000 & 14001 : 2004 Company

*EMMVEE SOLAR SYSTEMS PRIVATE LIMITED*
(A Joint Venture of Emmvee Group India & SolarCAP AS, Denmark)
"SOLAR TOWER", #55, 6th Main, 11th Cross, Lakshmaiah Block, Ganganagar, Bangalore - 560 024.

To call on you in person, or for more details, contact us at
**Tel : 2333 7427 / 28 Fax : 2333 2060 / 2363 8391**
**Cell : 98442 45444 / 99005 99099**
e-mail : info@emmvee.in **Web : www.emmveesolar.com**

**Emmvee Solar - Born to lead. Designed to perform**

ಎಂದೂ ತಯಾರಾಗದಂತೆ ಪಟ್ಟಭದ್ರ ಹಿತಾಸಕ್ತಿಗಳು ಎಚ್ಚರವಹಿಸಿವೆ. ಹಾಗಾಗಿ ಸಮಾನತೆ, ಧರ್ಮ ನಿರಪೇಕ್ಷತೆಯ ಸಿದ್ಧಾಂತಗಳನ್ನು ಅಂತಸ್ಸಾರವಾಗಿಸಿಕೊಂಡ ಪಕ್ಷಗಳು, ವಿರೋಧ ಪಕ್ಷದಲ್ಲಿದ್ದು ಗಂಟಲು ಹರಿದುಕೊಳ್ಳಬೇಕಷ್ಟೆ.

ದುರಾಸೆ, ಲಂಚಗುಳಿತನ, ಸ್ವಜಾತಿ ಪ್ರೇಮ, ಹಣದ ಮದ ಇತ್ಯಾದಿಗಳು ವರ್ಜ್ಯ ಎಂಬುದು ಇನ್ನೂ ಮನುಷ್ಯನ ಚಾರಿತ್ರ್ಯದ ವ್ಯಾಪ್ತಿಯೊಳಗೆ ಬಂದಿಲ್ಲದಿರುವ ಕಾರಣ, ಚುನಾಯಿತ ಶಾಸಕರನ್ನು ಹಿಂದಕ್ಕೆ ಕರೆಯಿಸಿಕೊಳ್ಳುವ ಅಧಿಕಾರ ಕೊಟ್ಟರೂ, ಪ್ರಸ್ತುತ ರಾಜಕೀಯ ವ್ಯವಸ್ಥೆಯಲ್ಲಿ ಹೆಚ್ಚಿನ ವ್ಯತ್ಯಾಸವಾಗಲಾರದು. ಜಾತಿ, ಜನಾಂಗ, ಧರ್ಮ, ಪ್ರಾಂತ್ಯಗಳು ಜನರ ಧೋರಣೆಯನ್ನು ರೂಪಿಸುತ್ತವಾದರೂ ಈ ಮಾತನ್ನು ಸಾಮಾನ್ಯೀಕರಿಸಲಾಗದು. ಆದರೆ ಬಹುಮತದ ತತ್ವ ಚಾಲ್ತಿಯಲ್ಲಿ ಇರುವಾಗ ನಿಜವಾದ ಬದಲಾವಣೆಯನ್ನು ಬಯಸುವವರು ಅಲ್ಪಸಂಖ್ಯಾತರು. ಹಾಗಾಗಿ ನಮ್ಮ ರಾಜಕಾರಣದಲ್ಲಿ ಪರಿವರ್ತನೆ ಕಾಣಬೇಕಾದರೆ ಮೊದಲು ಒಂದು ಶುದ್ಧೀಕರಣ ಕಾರ್ಯ ನಡೆಯಬೇಕಿದೆ. ಜನರಲ್ಲಿ ಉದಾತ್ತ ಚಿಂತನೆಗಳು ಇದ್ದ ಹೊರತು, ಅವರು ಯೋಗ್ಯರನ್ನು ಆರಿಸಿ ಕಳುಹಿಸುವುದು ಸಾಧ್ಯವಿಲ್ಲ. ಜೊತೆಗೆ ರಾಜಕೀಯದಲ್ಲಿ ಮಹತ್ವಾಕಾಂಕ್ಷೆಗೆ ಹೇಗೆ ಜಾಗವಿಲ್ಲವೋ ಹಾಗೆಯೇ ಧನಬಲಕ್ಕೂ ಸ್ಥಾನವಿಲ್ಲ ಎನ್ನುವುದನ್ನು ಜನರು ಮೊದಲು ಸ್ವೀಕರಿಸಬೇಕು. ದೇಶವನ್ನು ಮುನ್ನಡೆಸ ಬೇಕಾದ ಮಹತ್ತರ ಕಾರ್ಯದಲ್ಲಿ ಮುಂಚೂಣಿಯಲ್ಲಿರ ಬೇಕಾದ ಪಕ್ಷಗಳು ಜನತಂತ್ರದ ತತ್ವಗಳನ್ನು, ಮೌಲ್ಯಗಳನ್ನು ಗೌರವಿಸಿ, ಅಳವಡಿಸಿಕೊಳ್ಳದೆ ಹೋದರೆ ಅಧಿಕಾರಕ್ಕೆ ಬರುವ ಸರ್ಕಾರಕ್ಕೆ ನೈತಿಕ ತಳಹದಿಯಾದರೂ ಎಲ್ಲಿಂದ ಬಂದೀತು ? ವ್ಯವಸ್ಥೆಯಲ್ಲಿ ಆಮೂಲಾಗ್ರ ಬದಲಾವಣೆಯಾಗಬೇಕು ಎನ್ನುವುದು ನಿಜವಾದರೂ, ದೋಷವಿರುವುದು ಅದರ ರಚನೆಯಲ್ಲಿ ಅಲ್ಲ, ಅದರ ಭಾಗವೇ ಆದ ನಮ್ಮಲ್ಲಿ, ಪ್ರತಿಗಾಮಿತ್ವಕ್ಕಿಂತ, ನಿರ್ಲಕ್ಷ್ಯ ನಿರ್ಲಿಪ್ತತೆ ಹೆಚ್ಚು ಅಪಾಯಕಾರಿ ಎನ್ನುವುದು ದೇಶದ ಪ್ರತಿಯೊಬ್ಬ ಜವಾಬ್ದಾರಿಯುತ ಪ್ರಜೆ ನೆನಪಿನಲ್ಲಿಟ್ಟುಕೊಳ್ಳಬೇಕಾದ ವಿಚಾರ.

■ ಸಾಕ್ಷಿ, D/o ಕೆ. ಅರವಿಂದ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು
ರೈಲ್ವೇ ಸ್ಟೇಷನ್ ರೋಡ್, ಗುಬ್ಬಿ, ತುಮಕೂರು ಜಿಲ್ಲೆ-೫೭೨ ೨೧೬

## ಪ್ರಜಾಪ್ರಭುತ್ವ ಮತ್ತು ಸೈದ್ಧಾಂತಿಕ ನಡೆ

ಪ್ರಸ್ತುತ ರಾಜಕೀಯ ಬೆಳವಣಿಗೆಗಳನ್ನು ಗಮನಿಸಿದಾಗ ಪ್ರಜಾಪ್ರಭುತ್ವದ ಧ್ಯೇಯೋದ್ದೇಶಗಳು, ಸಿದ್ಧಾಂತಗಳು ಮೂಲೆಗುಂಪಾಗಿ, ರಾಜಕೀಯವು ಕೇವಲ ವ್ಯಕ್ತಿಗಳು ಅಥವಾ ರಾಜಕೀಯ ಪಕ್ಷಗಳು ಅಧಿಕಾರ ಪಡೆಯುವ ಸಲುವಾಗಿ ನಡೆಸುವ ನಾಟಕಗಳಂತೆ ಅಭಿನಯಗಳ, ಗೋಜಲುಗಳ, ಸರಮಾಲೆಯಾಗಿ ಹೋಗಿದೆ. ಸ್ವಾತಂತ್ರ್ಯಪೂರ್ವದಲ್ಲಿ ಉತ್ಕಟ ದೇಶಪ್ರೇಮ ಮತ್ತು ಯಾವುದೇ ತ್ಯಾಗ ಬಲಿದಾನಕ್ಕೂ ಎದೆಗುಂದದೇ ಸಿದ್ಧರಾಗಿದ್ದ, ತತ್ವಾದರ್ಶಗಳಿಂದ ಆಕರ್ಷಿತರಾಗಿದ್ದ ಜನ ಇದ್ದುದು ಚೆನ್ನಾಗಿ ತಿಳಿದಿದೆ. ಆದ್ದರಿಂದಲೇ ಅವರ ಸಾಮಾಜಿಕ ಮತ್ತು ಖಾಸಗಿ ಜೀವನವು ಒಂದು ತಪಸ್ಸಿನಂತೆ ಇದ್ದದ್ದು ನಮಗೆ ವೇದ್ಯವಾಗುತ್ತದೆ. ಇಂತಹ ಮಹತ್ವಾಕಾಂಕ್ಷೆಯ ನೇತಾರರ ಮುಂದೆ ಇಂದಿನ ರಾಜಕಾರಣಿಗಳು ಹೋಲಿಕೆಗೆ ನಿಲುಕದೆ ಉಳಿದುಬಿಡುತ್ತಾರೆ.

ದೇಶದ ಉದ್ಧಾರಕ್ಕಾಗಿ ಹಗಲಿರುಳು ದುಡಿದ ಹೋರಾಟಗಾರರನ್ನೂ, ಸ್ವಾರ್ಥಕ್ಕಾಗಿ ತಮ್ಮ ಜೀವನ ಪೂರ್ತಿ 'ಹೋರಾಡುವ' ಇಂದಿನ ರಾಜಕಾರಣಿಗಳ ಸಮೂಹವನ್ನೂ ಹೋಲಿಸುವುದು ಸಮಂಜಸವಾದುದಲ್ಲ. ಆದರೆ ಗತಿಸಿದ ವರ್ಷಗಳಲ್ಲಿದ್ದ ವ್ಯಕ್ತಿಗತ ಆದರ್ಶ, ತತ್ವಗಳು ಮರೆಯಾಗಿದ್ದು, ಕ್ರಮೇಣ ಸ್ವಾರ್ಥ, ಭ್ರಷ್ಟಾಚಾರ, ಮೋಸ, ವಂಚನೆಗಳಿಗಾಗಿ ಮತ್ತು ಅವುಗಳಿಂದಲೇ ಅಧಿಕಾರದ ಗದ್ದುಗೆಗೆ ಏರುವ ರಾಜಕಾರಣಿಗಳ ಮನೋಭಿಲಾಷೆಯಾದರೂ ಎಂತಹದ್ದು ಎಂಬುದು ಯಕ್ಷಪ್ರಶ್ನೆಯಾಗಿಯೇ ಉಳಿಯುತ್ತದೆ.

ಇಂದಿನ ರಾಜಕೀಯ ರಂಗ ಪ್ರವೇಶಿಸುವ ಮಂದಿಗೆ ಅತ್ಯವಶ್ಯಕವಾದ ಶೈಕ್ಷಣಿಕ ಅರ್ಹತೆಯೇ ಇಲ್ಲದಿರುವುದು ಶೋಚನೀಯ. ತಮ್ಮ ಕಾನೂನುಬಾಹಿರ ಚಟುವಟಿಕೆಗಳಿಂದ ಗಳಿಸಿದ ಅಪಾರ ತೆರಿಗೆವಂಚಿತ ಹಣವನ್ನು ಚುನಾವಣೆಯಲ್ಲಿ ಚೆಲ್ಲಿ ಗೆದ್ದು, ಮತ್ತೆ ತಮ್ಮ ಅಕ್ರಮ ಸಂಪತ್ತನ್ನು ರಕ್ಷಿಸಿ, ಬೆಳೆಸಿಕೊಂಡು ಹೋಗುವ ಮಾರ್ಗ ತೆರೆದುಕೊಂಡಿದೆ. ಜನತೆಯ ತೆರಿಗೆಯ ಹಣವು ಮೂಲಭೂತ ಸೌಕರ್ಯಗಳು ಮತ್ತು ಬಡತನ ನಿವಾರಣೆಯ ಯೋಜನೆಗಳ ಹೆಸರಿನಲ್ಲಿ ಅಧಿಕಾರಿಗಳು ಮತ್ತು ರಾಜಕಾರಣಿಗಳ ಪಾಲಾಗುತ್ತಿರುವುದು ಖೇದಕರ ಸಂಗತಿಯಾಗಿದೆ.

ಪ್ರಜಾಪ್ರಭುತ್ವದ ಯಶಸ್ಸಿಗೆ ಅತ್ಯವಶ್ಯವಾಗಿ ಬೇಕಾದದ್ದು ಪಾರದರ್ಶಕ ವಯಸ್ಕ ಮತದಾನ, ಪ್ರಾಮಾಣಿಕ ಅಧಿಕಾರಿ ವರ್ಗ, ಆಡಳಿತದ ಎಲ್ಲಾ ಪ್ರಗತಿಯನ್ನು ಸೂಕ್ಷ್ಮವಾಗಿ ಗಮನಿಸಬೇಕಾದ ಪ್ರಜಾವರ್ಗ, ಸರ್ಕಾರ ಮತ್ತು ಪ್ರಜೆಗಳ ಮುಖ್ಯ ವಿಮರ್ಶಕ ಮಾರ್ಗದರ್ಶಕವಾಗಿ ಇರಬೇಕಾದ ಮಾಧ್ಯಮಗಳು. ಆದರೆ ಈ ಎಲ್ಲ ವರ್ಗಗಳು ಇಂದು ತಮ್ಮ ಪಾಲಿನ ಕರ್ತವ್ಯವನ್ನು ಯಶಸ್ವಿಯಾಗಿ ನಿರ್ವಹಿಸದ ಕಾರಣ ಇಂದು ನಾವಿರುವ ವ್ಯವಸ್ಥೆಯ ಈ ಸ್ಥಿತಿಗೆ ಕಾರಣವಾಗಿದೆ. ಚುನಾವಣೆಯಲ್ಲಿ ಕಪ್ಪು ಹಣದ ಬಳಕೆ, ಆಡಳಿತವನ್ನು ನಡೆಸುವ ಸರ್ಕಾರದ ಅಧಿಕಾರಿ ವರ್ಗದ ಮಿತಿಮೀರಿದ ಭ್ರಷ್ಟಾಚಾರ, ವ್ಯಕ್ತಿಗಳ ಮತ್ತು ರಾಜಕೀಯ ಪಕ್ಷಗಳ ಮುಖಪುಟದಂತೆ ವರ್ತಿಸುವ ಮಾಧ್ಯಮಗಳು, ಇವುಗಳಿಂದ ದೇಶದ ಬದಲಾವಣೆ ಅಥವಾ ವ್ಯವಸ್ಥೆಯ ಸುಧಾರಣೆ ಅಸಾಧ್ಯವಾದ ಮಾತಾಗಿದೆ.

ಸ್ವತಂತ್ರವಾದ ನಮ್ಮ ನ್ಯಾಯಾಂಗ ವ್ಯವಸ್ಥೆಯು ಆಡಳಿತದ ಮತ್ತು ಜನರ ಕರ್ತವ್ಯಗಳಲ್ಲಿ ನಿರ್ದೇಶನ ನೀಡುವಂತಾಗಬೇಕು. ಸರ್ವಾಧಿಕಾರಿಯಂತೆ ವರ್ತಿಸುವ ಸರ್ಕಾರಗಳ ಮೇಲೆ ನ್ಯಾಯಾಲಯದ ಹತೋಟಿಯು ಅವಶ್ಯವಾಗಿರಬೇಕಾಗುತ್ತದೆ. ಭ್ರಷ್ಟರ ಮತ್ತು ಕಾನೂನುಬಾಹಿರ ಚಟುವಟಿಕೆಗಳಲ್ಲಿ ಭಾಗಿಯಾದ ವ್ಯಕ್ತಿಗಳ ಮೇಲೆ ನಿರ್ದಾಕ್ಷಿಣ್ಯ ಕ್ರಮ ಜರುಗಿಸಲು ನ್ಯಾಯಾಲಯ ಮುಂದಾಗಬೇಕು. ಅಂತಹ ವ್ಯಕ್ತಿಗಳ ರಕ್ಷಣೆಗೆ ಸರ್ಕಾರವು ಮುಂದಾಗದಂತೆ ನ್ಯಾಯಾಲಯ ಎಚ್ಚರಿಕೆ ನೀಡಬೇಕು. ಭ್ರಷ್ಟಾಚಾರದ ತಡೆಗೆ ರೂಪಿಸಿರುವ ಲೋಕಾಯುಕ್ತಕ್ಕೆ ಪರಮಾಧಿಕಾರ ನೀಡಬೇಕು. ಸರ್ಕಾರದ ಯೋಜನೆಗಳ ಗುಣಮಟ್ಟ ಸುಧಾರಣೆ, ಮತ್ತು ಹಣದ ಸೋರಿಕೆಯನ್ನು ತಡೆಯಲು ಕ್ರಮ ಕೈಗೊಳ್ಳಬೇಕು. ಆದರೆ ನ್ಯಾಯಾಲಯಗಳಲ್ಲೂ ನ್ಯೂನತೆಯಿದ್ದರೆ ಗತಿ ಏನು ?

ಮಾಧ್ಯಮಗಳು ಕೇವಲ ಸಮಾರಂಭಗಳ ಛಾಯಾಚಿತ್ರ ಮತ್ತು ವರದಿ ಪ್ರಕಟಿಸುವ ಬದಲು ಸರ್ಕಾರದ ಯೋಜನೆಗಳ ಕ್ರಮಬದ್ಧ ಅನುಷ್ಠಾನ ಮತ್ತು ಭ್ರಷ್ಟಾಚಾರದ ವಿರುದ್ಧ ತಮ್ಮ ಚಿತ್ತ ಹರಿಸಿ, ಅಲ್ಲಿ ನಡೆಯುವ ಅಕ್ರಮಗಳನ್ನು ಬಯಲಿಗೆಳೆಯಬೇಕು. ರಾಜಕಾರಣಿಗಳ ಪ್ರಚಾರಕ್ಕೆ, ಹೊಗಳಿಕೆಗೆ, ಅವರಿಗೆ ಬೇರೆ ಮಾರ್ಗಗಳಾದ ಮುದ್ರಣ, ಬಂಟಿಂಗ್ಸ್, ಎಲೆಕ್ಟ್ರಾನಿಕ್ ಉಪಕರಣಗಳು ಇಂದು ಲಭ್ಯವಿದೆ. ಆ ಕೆಲಸವನ್ನು ಮಾಧ್ಯಮಗಳು ಮಾಡಬೇಕಾದ ಅಗತ್ಯವಿಲ್ಲ. ಮಾಧ್ಯಮಗಳು ತಮ್ಮ ಜವಾಬ್ದಾರಿ ಅರಿತು ಗಂಭೀರವಾಗಿ ಮತ್ತು ದೃಢಚಿತ್ತದಿಂದ ನಡೆದುಕೊಳ್ಳಬೇಕು.

ಪಕ್ಷಗಳ ಸಭೆ ಸಮಾರಂಭಗಳಿಗೆ ಅದ್ದೂರಿತನ ಪ್ರದರ್ಶಿಸಲು ಬಳಸುವ ಕೋಟ್ಯಂತರ ರೂಪಾಯಿಗಳು ಎಲ್ಲಿಂದ ಬಂದವು, ಸಂಸತ್‌ನಲ್ಲಿ ಪ್ರತಿಧ್ವನಿಸಿದ ವಿಶ್ವಾಸಮತ ಯಾಚನೆ ಸಂದರ್ಭದಲ್ಲಿ ಪ್ರತ್ಯಕ್ಷವಾದ ಮೂಟೆಗಟ್ಟಲೆ ಹಣ ಎಲ್ಲಿಂದ ಪ್ರತ್ಯಕ್ಷವಾಯಿತು, ಎಂಬ ಪ್ರಶ್ನೆಗಳಿಗೆ ಉತ್ತರ ಅದೆಲ್ಲವೂ ಭ್ರಷ್ಟಾಚಾರದ ಹಣವೇ ಆಗಿದೆ ಎಂದು. ಕಟ್ಟಿದ ಸೇತುವೆ ನೀರುಪಾಲಾದವು, ಕಟ್ಟಡಗಳು ನೆಲಕಂಡವು, ಆದರೆ ಯೋಜನೆಯ ಹಣವು ಮಾತ್ರ ರಾಜಕಾರಣಿಗಳ, ಅಧಿಕಾರಿಗಳ ತಿಜೋರಿ ಸೇರಿದವು. ದೇಶದ ರಾಜಕೀಯ ರಂಗದ ಈ ಎಲ್ಲಾ ಪರಿಸ್ಥಿತಿಗಳಿಗೆ ಕಾರಣ ಆ ಎಲ್ಲಾ ವ್ಯಕ್ತಿಗಳಿಗೆ ತತ್ವಾದರ್ಶಗಳು ಮತ್ತು ವ್ಯಕ್ತಿತ್ವ ಪರಿಶುದ್ಧತೆ ಇಲ್ಲದೆ ಇರುವುದೇ ಕಾರಣವಾಗಿದೆ. ವ್ಯಕ್ತಿಯು ಸುಸಂಸ್ಕೃತನಾಗಿ ಒಂದು ನಿರ್ದಿಷ್ಟ ಗುರಿಯನ್ನು ಹೊಂದಿ, ತನ್ನ ಗುರಿಯೆಡೆಗೆ ಅಚಲವಾದ ಶ್ರದ್ಧೆಯಿಂದ ದುಡಿಯುವ ಧೈರ್ಯ ಮಾಡಿ ಆತನು ರಾಜಕೀಯ ರಂಗಕ್ಕೆ ಬಂದುದಾದರೆ ಅದು ದೇಶದ ಪ್ರಗತಿಯ ದೃಷ್ಟಿಯಿಂದ ಶುಭಸೂಚಕವಾಗುತ್ತದೆ. ಇಲ್ಲವಾದರೆ ಪ್ರಜಾಪ್ರಭುತ್ವದ ಯಶಸ್ಸು ಕೇವಲ ಅಧ್ಯಯನಗಳಿಗೆ, ಸ್ನಾತಕೋತ್ತರ ಪದವಿ ಪಡೆಯುವ ವಿಷಯ ಸೂಚಿಯಾಗಿ ಮಾತ್ರ ಉಳಿಯುತ್ತದೆ.

■ ಸಂಪತ್ ಕುಮಾರ್ ಎನ್., ಯೋಗಿಮಳಲಿ ಗ್ರಾಮ, ದೆಮ್ಲಾಪುರ ಅಂಚೆ.
ಕೋಣಂದೂರು ಮಾರ್ಗ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ-೫೭೭ ೪೩೨

# ಭ್ರಷ್ಟಾಚಾರ ನಿಯಂತ್ರಣ : ಹಲವು ಮಾರ್ಗಗಳು

ಭ್ರಷ್ಟಾಚಾರದಲ್ಲಿ ಭಾರತವು ಅಂತರರಾಷ್ಟ್ರೀಯ ಮಟ್ಟದಲ್ಲಿ ೨೪ನೇ ಸ್ಥಾನ ಪಡೆದಿದೆಯೆಂದು ಪತ್ರಿಕೆಯಲ್ಲಿ ಪ್ರಕಟವಾಗಿದೆ. ಭಾರತದಲ್ಲೂ ಕರ್ನಾಟಕದ ಸ್ಥಾನ ಮೊದಲನೆಯದು. ಭ್ರಷ್ಟಾಚಾರವು ಎರಡು ಕ್ಷೇತ್ರಗಳಲ್ಲಿ ಅವ್ಯಾಹತವಾಗಿ ನಡೆಯುತ್ತಿದೆ. ಅಂದರೆ ಸರಕಾರಿ ಕ್ಷೇತ್ರದಲ್ಲಿ ಹಾಗೂ ಖಾಸಗಿ ವಲಯದಲ್ಲಿ ನಿರಂತರವಾಗಿ ನಡೆಯುತ್ತಿದ್ದು ಕಪ್ಪು ಹಣದ ಪ್ರಮಾಣ ಬೆಟ್ಟದಷ್ಟು ಬೆಳೆದು ಜನಸಾಮಾನ್ಯರ ಜೀವನ ದುಸ್ತರವಾಗತೊಡಗಿದೆ. ಒಬ್ಬ ಆರೋಗ್ಯವಂತ ಮನುಷ್ಯ ವಿಷ ಸೇವನೆಯಿಂದ ಮರಣ ಹೊಂದುತ್ತಾನೆ. ಹಾಗೆಯೇ ಆರೋಗ್ಯವಂತ ಸಮಾಜದಲ್ಲಿ ಭ್ರಷ್ಟಾಚಾರದಿಂದ ಸಮಾಜದ ಎಲ್ಲಾ ಜನರ ಆರ್ಥಿಕ ಪರಿಸ್ಥಿತಿ ದುರ್ಬಲಗೊಳ್ಳುತ್ತದೆ. ಬಡಜನರು ಆತ್ಮಹತ್ಯೆಗೆ ಶರಣಾಗುವ ಸ್ಥಿತಿ ಬಂದೊದಗುತ್ತದೆ. ಇದಕ್ಕೆ ಕಡಿವಾಣ ಹಾಕುವವರು ಯಾರು ? ಕೇವಲ ಭ್ರಷ್ಟಾಚಾರದ ಬಗ್ಗೆ ಪರ-ವಿರುದ್ಧ ಮಾತನಾಡುತ್ತಾ ಹೋದರೆ ಪ್ರಯೋಜನವಿಲ್ಲ. ಎಲ್ಲಾ ಕಡೆಯಿಂದ ಎಲ್ಲರಿಂದ ಎಲ್ಲಾ ಕಾಲಕ್ಕೆ ನಿರಂತರವಾಗಿ ಸಾಮಾಜಿಕ ಹೋರಾಟ ಮತ್ತು ಪ್ರತಿರೋಧದಿಂದ ಮಾತ್ರ ಬದಲಾವಣೆ ಸಾಧ್ಯ.

ಹಣ ಸಂಪಾದನೆ ಮಾಡಲು ಧೈರ್ಯ ಮತ್ತು ಬುದ್ಧಿವಂತಿಕೆ ಬೇಕು. ಈ ಎರಡು ಗುಣಗಳಿಲ್ಲದವರು ಭ್ರಷ್ಟಾಚಾರದಲ್ಲಿ ಯಶಸ್ಸು ಗಳಿಸಲಾರರು ! ಇನ್ನು ಕೆಲವರಿದ್ದಾರೆ, ''ಭ್ರಷ್ಟಾಚಾರ ಮಹಾಪಾಪ. ಅವರನ್ನು ದೇವರು ಒಂದಿಲ್ಲೊಂದು ದಿನ ನೋಡಿ ಕೊಳ್ಳುತ್ತಾನೆ. ಇಂದು ಅವರು ಆನಂದದಿಂದಿರಬಹುದು. ನಾಳೆ ಘೋರ ಪಾಪದ ಫಲ ಉಣ್ಣಬೇಕು. ಯಾರಿಂದಲೂ ಈ ಕೆಟ್ಟ ಫಲದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ'' ಎಂದೆಲ್ಲ ಪಾರಮಾರ್ಥಿಕ ಮಾತನಾಡಿ ತಮ್ಮ ಅಸಹಾಯಕತೆ ತೋಡಿಕೊಳ್ಳುತ್ತಾರೆ. ಹೀಗೆ ಒಬ್ಬರಿಗೊಬ್ಬರು ತಮ್ಮ ತಮ್ಮ ವಾದಗಳನ್ನು ಮಂಡಿಸುತ್ತಲೇ ಇದ್ದಾರೆಯೇ ಹೊರತು ಅದರ ನಿಯಂತ್ರಣಕ್ಕೆ ದಾರಿ ಮಾತ್ರ ಹುಡುಕುತ್ತಲೇ ಇಲ್ಲ.

ಸಮಾಜದ ಹಿತಚಿಂತಕರೊಬ್ಬರು ಭ್ರಷ್ಟಾಚಾರವನ್ನು ನಾಲ್ಕು ಭಾಗಗಳನ್ನಾಗಿ ಮಾಡಿರುತ್ತಾರೆ. ಅವುಗಳು ಇಂತಿವೆ: (ಅ) ಚಿಕುನ್ ಗೂನ್ಯ, (ಆ) ತುಸಾ ರುಸ್ತುಂ, (ಇ) ಆಷಾಢಭೂತಿ, ಮತ್ತು (ಈ) ಜಂಟಲ್‌ಮನ್‌ಗಳು. ಚಿಕುನ್ ಗೂನ್ಯ ಅತ್ಯಂತ ಅಪಾಯಕಾರಿ. ಈ ಪ್ರಭೇದದ ಅಧಿಕಾರಿಗಳು ಲಂಚ ಪಡೆದರೂ ಕೆಲಸ ಮಾಡುವುದಿಲ್ಲ. ಎರಡನೇ ಪ್ರಕಾರದವರು ಆಗಾಗ ಟೇಬಲು ಕೆಳಗೆ ಕೈತೂರುತ್ತಾರೆ. ಒಮ್ಮೆ ಕೊಟ್ಯಂತರ ರೂಪಾಯಿಗಳು ಕಬಳಿಸಿದರೆ ಸ್ವಲ್ಪ ದಿನ ಸುಮ್ಮನಿರುತ್ತಾರೆ. ಆಷಾಢಭೂತಿಗಳು ನೇರವಾಗಿ ಲಂಚ ಪಡೆಯುವುದಿಲ್ಲ. ಆಯಾ ಖಾತೆಗಳಲ್ಲಿ ತಮ್ಮ ಜಾತಿ, ಧರ್ಮಕ್ಕೆ ಸಂಬಂಧಿಸಿದವರನ್ನು ನೇಮಕ ಮಾಡುತ್ತಾರೆ. ಜಂಟಲಮನ್ ಭ್ರಷ್ಟರು ಲಂಚ ಪಡೆಯುವುದಿಲ್ಲ. ಆದರೆ ಯೋಜನೆಯಲ್ಲಿ ''ಹೆಚ್ಚುವರಿಯಾಗಿ ಉಳಿಸಿದ'' ಹಣವನ್ನು ಮಾತ್ರ ಕಬಳಿಸುತ್ತಾರೆ.

ಭ್ರಷ್ಟಾಚಾರದ ಬಗ್ಗೆ ಪ್ರಮುಖರ ಹೇಳಿಕೆಗಳು : ರಾಜ್ಯದ ಕಂದಾಯ ಮಂತ್ರಿಯೋರ್ವರು ಹೇಳಿದ್ದು ಇದು – ''ಭ್ರಷ್ಟರನ್ನು ಚೆನ್ನಾಗಿ ಚೆಚ್ಚಿ... ಭ್ರಷ್ಟ ಸರಕಾರಿ ನೌಕರರು ಮತ್ತು ಅಧಿಕಾರಿಗಳನ್ನು ಕಂಡರೆ ಹಿಂದೆ ಮುಂದೆ ನೋಡಬೇಡಿ, ಕೋಲು ತೆಗೆದುಕೊಂಡು ಅವರನ್ನು ಚೆಚ್ಚಿ...'' (೨೧-೧-೧೯೯೬). ಸುಪ್ರೀಮ್ ಕೋರ್ಟ್: ''ಭ್ರಷ್ಟರನ್ನು ಸಾರ್ವಜನಿಕವಾಗಿ ನೇಣಿಗೆ ಏರಿಸುವುದೊಂದೇ ಭ್ರಷ್ಟಾಚಾರ ತಡೆಗೆ ಪರಿಹಾರ'' (೮-೩-೨೦೦೭). ಮುಖ್ಯ ಮಂತ್ರಿಯೊಬ್ಬರು: ''ಅಧಿಕಾರಿಗಳಿಗೆ ಬಡವರ ಬಗ್ಗೆ ನಿಜವಾದ ಕಾಳಜಿ ಇದೆಯೇ ? ಪ್ರತಿಭಟನೆ, ಧರಣಿ ಮಾಡಿ ಹೆದರಿಸಿ ಬೇಡಿಕೆ ಈಡೇರಿಸಿಕೊಳ್ಳುವುದೆ ? ತೆಗೆದುಕೊಂಡ ಸಂಬಳಕ್ಕೆ ಪ್ರಾಮಾಣಿಕವಾಗಿ ಕೆಲಸ ಮಾಡುತ್ತಿದ್ದಾರೆಯೇ ?'' (೧೦-೦೩-೨೦೦೭). ಸರಕಾರದ ಅಂಗವಾದ ಕಾರ್ಯಾಂಗ ಜಡ್ಡುಹಿಡಿದು ಕೊಳೆಯುತ್ತಿದೆ. ಇದಕ್ಕೆ ಶಸ್ತ್ರಚಿಕಿತ್ಸೆ ಅಗತ್ಯ. ಕೇವಲ ವರ್ಗಾವಣೆಯಿಂದ ಶಸ್ತ್ರಚಿಕಿತ್ಸೆ ಸಾಧ್ಯವಿಲ್ಲ. ಬದಲಾಗಿ ಹತ್ತು ಹಲವು ಮಾರ್ಗಗಳಿಂದ ಶಸ್ತ್ರಚಿಕಿತ್ಸೆ ಮಾಡಬೇಕಾಗಿದೆ. ಸರಕಾರಿ ಕೆಲಸಕ್ಕೆ ಅಭ್ಯರ್ಥಿಗಳಲ್ಲಿ ನೇಮಕಾತಿಗಳಲ್ಲಿ


ಹೊಸ ವರ್ಷದ ಶುಭಾಶಯಗಳು


ರೂ. 100


ರೂ. 100



ರೂ. 30


ರೂ. 20


ರೂ. 100


ರೂ. 150


ರೂ. 75

ಹರ್ಷವರ್ಧನ ಪ್ರಕಾಶನ
8–ಎ/15, ಜವಾಹರ ಸೊಸೈಟಿ, ಗೋವಿಂದನಗರ
ಮುಂಬಯಿ – 400 092
ದೂರವಾಣಿ : (022) 28900925
e-mail : jeevi65@gmail.com
ವಿತರಕರು : ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ., ಬೆಂಗಳೂರು



'ಹೊಸತು' ಓದುಗರಿಗೆ ಹೊಸ ವರ್ಷದ ಶುಭಾಶಯಗಳು


ರೂ. 297


ರೂ. 189


ರೂ. 699


ರೂ. 348

ವಿದ್ಯಾ ಪಬ್ಲಿಷಿಂಗ್ ಹೌಸ್
'ಶ್ರೀನಿಲಯ', ಅಲ್ವಾರಿಸ್ ರಸ್ತೆ, ಕದ್ರಿ, ಮಂಗಳೂರು - 575 002
ದೂರವಾಣಿ : (0824) 2216691 e-mail : mailrao@yahoo.com

ಪ್ರಾಮಾಣಿಕತನ, ನಿರ್ದಿಷ್ಟ ಅವಧಿ ನಂತರ ಕಡ್ಡಾಯ ವರ್ಗಾವಣೆ, ಭ್ರಷ್ಟರನ್ನು ನಿರ್ದಾಕ್ಷಿಣ್ಯವಾಗಿ ಕೆಲಸದಿಂದ ತೆಗೆಯುವುದು, ಕಾನೂನುಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದು, ಪ್ರತಿ ನೌಕರನ ವಾರ್ಷಿಕ ಆದಾಯ ಹಾಗೂ ಆಸ್ತಿಗಳ ವಿವರಣೆಗಳನ್ನು ಪಡೆಯುವುದು, ಅಂದಿನ ಕೆಲಸ ಅಂದೇ ಮುಗಿಸುವುದು, ಕಡತ ವಿಲೇವಾರಿ ಮಾಡುವಲ್ಲಿ ವಿಳಂಬವಾದಲ್ಲಿ ಕಾರಣ ಪಡೆದು ಶಿಸ್ತಿನ ಕ್ರಮ ಜರುಗಿಸುವುದು, ನೌಕರರನ್ನು ಸ್ವಂತ ಗ್ರಾಮ, ತಾಲ್ಲೂಕು, ಜಿಲ್ಲೆಗಳಲ್ಲಿ ಕೆಲಸ ನಿರ್ವಹಿಸದಂತೆ ನಿರ್ಬಂಧ ಹೇರುವುದು... ಮುಂತಾದ ಹಲವು ಕ್ರಮಗಳನ್ನು ಕೈಗೊಳ್ಳುವುದರಿಂದ ಭ್ರಷ್ಟಾಚಾರ ಪ್ರಮಾಣವನ್ನು ಕಡಿಮೆಮಾಡಬಹುದು. ಇದರ ಜೊತೆಗೆ ಲೋಕಾಯುಕ್ತರ ಕೈ ಬಲಪಡಿಸಬೇಕು. ಯಾವುದೇ ವರ್ಗದ ನೌಕರರು ಭ್ರಷ್ಟಾಚಾರದಲ್ಲಿ ತೊಡಗಿದರೆ ಅವರನ್ನು ತಕ್ಷಣ ಕೆಲಸದಿಂದ ತೆಗೆದುಹಾಕಬೇಕು. ಇದಕ್ಕಾಗಿ ಲೋಕಾಯುಕ್ತ ವಿಶೇಷ ನ್ಯಾಯಾಲಯಗಳನ್ನು ಸ್ಥಾಪಿಸಬೇಕು. ರಾಜಕೀಯದಿಂದ ಪಾರಾಗಲು ಕಾರ್ಯಾಂಗವು ಸ್ವತಂತ್ರವಾಗಿ ಕೆಲಸ ನಿರ್ವಹಿಸುವಂತೆ ವ್ಯವಸ್ಥೆ ಮಾಡಬೇಕು. ಶಾಸಕರ ಹಸ್ತಕ್ಷೇಪ ಇಲ್ಲದಂತೆ ಮಾಡಿ ಅಧಿಕಾರಿಗಳು ನಿರ್ಭಯವಾಗಿ ಕೆಲಸ ಮಾಡುವಂತಾಗಬೇಕು. ಶಾಸಕಾಂಗವು ಶಾಸನ ರೂಪಿಸುವುದಕ್ಕೆ ಮಾತ್ರ ಸೀಮಿತವಾಗಬೇಕೇ ವಿನಾ ಕಾರ್ಯಾಂಗದ ಮೇಲೆ ಸವಾರಿ ಮಾಡುವ ನಿಯಂತ್ರಣ ಹೊಂದಬಾರದು. ಈ ಎಲ್ಲ ಕ್ರಮಗಳಿಂದ ಆಡಳಿತಾಂಗದಲ್ಲಿ ಭ್ರಷ್ಟಾಚಾರವನ್ನು ಕಡಿಮೆ ಮಾಡಬಹುದು. ಮಾಹಿತಿ ಹಕ್ಕು ಪರಿಣಾಮಕಾರಿಯಾಗಿ ಜಾರಿಯಾಗುವಂತೆ ಮತ್ತಷ್ಟು ಒತ್ತು ನೀಡಬೇಕು.

■ ವಾಮನರಾವ್, ಶ್ರೀದತ್ತ ನಿಲಯ, ೨ನೇ ಅಡ್ಡರಸ್ತೆ
ಜಯನಗರ ಪೂರ್ವ, ಶೆಟ್ಟಿಹಳ್ಳಿ ಮುಖ್ಯ ರಸ್ತೆ, ತುಮಕೂರು - ೫೭೨ ೧೦೨

## ಮತದಾನದ ಮೌಲ್ಯತೆಯ ಮಾಪನ – ಚುನಾವಣೆ

ಅದೇನೋ ಸಂಭ್ರಮ, ಅದೇನೋ ಹೊಸತನ. ಅರವತ್ತರ ದಶಕದಲ್ಲಿ ಚುನಾವಣೆಯ ಪ್ರಚಾರಕ್ಕಾಗಿ ಭಿತ್ತಿಪತ್ರ, ಕರಪತ್ರ ಪ್ರಕಟಿಸಿ, ಕಾರ್ಯಕರ್ತರು ಅಭ್ಯರ್ಥಿಗಳು ಮನೆ ಮನೆಗೆ ಹೋಗಿ ಪ್ರಚಾರ ಮಾಡುತ್ತಿದ್ದರು. ರಸ್ತೆಯಲ್ಲಿ ಬೀದಿ ಬೀದಿಗಳಲ್ಲಿ ವಾಹನಗಳ ಮುಖಾಂತರ ಧ್ವನಿವರ್ಧಕ ಯಂತ್ರದಿಂದ ಅಬ್ಬರಿಸುತ್ತಿದ್ದರು. ಯೋಗ್ಯರಾದವರು, ಉತ್ತಮ ನೈತಿಕ ಹಿನ್ನೆಲೆಯುಳ್ಳವರು, ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು, ಅಧಿಕಾರದಾಹ ಇಲ್ಲದವರು ಅಭ್ಯರ್ಥಿಗಳಾಗುತ್ತಿದ್ದರು. ಅಭ್ಯರ್ಥಿ ಅಥವಾ ಪಕ್ಷದ ಹಿರಿಯ ಮುಖಂಡರು, ಊರಿನ ಮುಖಂಡರನ್ನೂ, ಯಜಮಾನರನ್ನೂ ಕರೆಸಿ ಯಾರು ಏನು ಮಾತನಾಡಬೇಕೆಂದು ಟಿಪ್ಪಣಿ ಮಾಡುತ್ತಿದ್ದರು ಮತ್ತು ಅವರಿಗೆ ಪ್ರಚಾರದ ಜವಾಬ್ದಾರಿ ಕೊಡುತ್ತಿದ್ದರು. ಯಾವುದೇ ವೈಯಕ್ತಿಕ ಟೀಕೆಗಳಿಗೆ ಆಸ್ಪದ ಇರುತ್ತಿರಲಿಲ್ಲ. ಭರಪೂರ ಭರವಸೆಗಳು ಅಷ್ಟೊಂದು ಇರುತ್ತಿರಲಿಲ್ಲ. ಜಾತೀಯತೆ ಸಹ ಪ್ರಬಲವಾದ ಅಂಶವಾಗಿದ್ದಿಲ್ಲ. ಕಾರ್ಯಕರ್ತರಿಗೆ ಅಭ್ಯರ್ಥಿಗಳು ತಿಂಡಿ, ಊಟದ ವ್ಯವಸ್ಥೆ ಮಾಡುತ್ತಿದ್ದರು. ಮತದಾರರು ಸ್ವಯಂ ಪ್ರೇರಣೆಯಿಂದ ತಮಗಿಷ್ಟ ಬಂದ ಪಕ್ಷ ಅಥವಾ ವ್ಯಕ್ತಿಗೆ ಮತ ಚಲಾಯಿಸುತ್ತಿದ್ದರು. ಜವಾಬ್ದಾರಿಯುತ ಪ್ರಜಾಪ್ರತಿನಿಧಿಗಳು ಇದ್ದರು. ಜನಹಿತಕ್ಕೆ ಪ್ರಾಶಸ್ತ್ಯ ಕೊಡುತ್ತಿದ್ದರು. ಇದು ಆಗಿನ ರಾಜಕಾರಣ.

ಇದೋ ಇನ್ನೇನು ಬಂತಲ್ಲ ಇನ್ನೊಂದು ಚುನಾವಣೆ : ಕೆಲವರಿಗೆ ಸಂಭ್ರಮ, ಹಲವರಿಗೆ ಆತಂಕ, ಭೀತಿ, ದುಡ್ಡು 'ಮಾಡುವವರಿಗೆ' ಸಂಭ್ರಮ. ಚುನಾವಣೆ ಬಂತೆಂದರೆ ಬಚ್ಚಿಟ್ಟಿದ್ದೆಲ್ಲ ಹೊರಗೆಬೀಳುತ್ತದೆ. ದುಡ್ಡು ಚೆಲ್ಲಿ ದುಡ್ಡು ಬಾಚುವ ಅವಕಾಶ ರಾಜಕಾರಣಿಗಳಿಗೆ. ಟಿಕೆಟ್ ತೆಗೆದುಕೊಳ್ಳಲೂ ಹಣ, ಟಿಕೆಟ್ ಸಿಗದಿದ್ದರೆ ಬೆಂಬಲಿಗರಿಂದ ಕಛೇರಿಯ ಧ್ವಂಸ. ಅಷ್ಟೇಕೆ, ಸಾರ್ವಜನಿಕ ಆಸ್ತಿ ನಾಶ. ಅವಕಾಶ ಸಿಗದಿದ್ದರೆ ಪಕ್ಷ ಬದಲು ಮಾಡುವುದು. ಹಿಂದೆ ಟೀಕಿಸುತ್ತಿದ್ದ ಪಕ್ಷವನ್ನೇ ಸೇರಿ ಅವಕಾಶ ಗಿಟ್ಟಿಸುವುದು. ಜಾತಿ ಪ್ರಭಾವವನ್ನು ಉಪಯೋಗಿಸುವುದು. ರಾಜಕಾರಣಿಗಳು ತಮ್ಮ ನೈತಿಕ ಮೌಲ್ಯಗಳನ್ನು ಗಾಳಿಗೆ ತೂರುವರು. ಜೊತೆಗೆ ಚಾಕು ಚೂರಿ ಸಂಸ್ಕೃತಿ ಸಹ ಇಣುಕಿಹಾಕುವದು. ಚುನಾವಣೆ ಫಲ ಅಸ್ಥಿರ ಸರಕಾರ.

* * *

''ಎಲ್ಲರನ್ನೂ ಕೆಲಕಾಲ, ಕೆಲವರನ್ನು ಎಲ್ಲಾ ಕಾಲವೂ ವಂಚಿಸಬಹುದು. ಆದರೆ ಎಲ್ಲರನ್ನೂ ಸದಾಕಾಲ ವಂಚಿಸಲು ಸಾಧ್ಯವಿಲ್ಲ'' ಎಂಬ ಮಾತು ಇದೆ. ಈ ಸರಳ ಸತ್ಯದಲ್ಲಿ ರಾಜಕೀಯ ಜನರಿಗೆ ನಂಬಿಕೆ ಇಲ್ಲ. ಇವರು ಚುನಾವಣೆ ಸಮಯ ಭರವಸೆಯ ಜಡಿಮಳೆಯನ್ನು ಚುನಾವಣಾ ಪ್ರಣಾಳಿಕೆ ಮುಖಾಂತರ ಸುರಿಸುತ್ತಾರೆ. ಇದರಲ್ಲಿಯೂ ಸ್ಪರ್ಧೆ.

ಸಂತೆಯಲ್ಲಿ ಜನರ ಮುಂದೆ ಒಬ್ಬ ಖೋಟಾ ವ್ಯಾಪಾರಿ ದೊಡ್ಡ ಧ್ವನಿಯಲ್ಲಿ ಬೊಗಳೆ ಬಿಡುತ್ತಿರುತ್ತಾನೆ. ಹಣ ಗಿಟ್ಟಿಸುವುದು ಅವನ ಗುರಿ. ಸಂತೆ ಮುಗಿದ ಮೇಲೆ ಅವನೆಲ್ಲೋ ಜನರೆಲ್ಲೋ. ಮೋಸಹೋದ ಜನರನ್ನು ಕಾಣುವ ಅಪಾಯವಿಲ್ಲ. ನಯವಾದ ಮಾತೇ ಅವನ ಬಂಡವಾಳ. ನಿಷ್ಠೆ ಬದ್ಧತೆಯಿಲ್ಲ. ಈಗ ಪ್ರಣಾಳಿಕೆ ವಂಚನೆಯ ತಂತ್ರವಾಗಿದೆ. ಶಬ್ದಗಳು ಬೇರೆ ಬೇರೆ. ಘೋಷಣೆ ಮಾತ್ರ ಒಂದೇ. ಭರವಸೆ ಈಡೇರಿಸದ ಸಂದರ್ಭದಲ್ಲಿ ನ್ಯಾಯಾಲಯದಲ್ಲಿ ಪ್ರಶ್ನಿಸುವ ವ್ಯವಸ್ಥೆ ಬೇಕು. ವಚನಭ್ರಷ್ಟರನ್ನು ವಿಚಾರಿಸುವ ಹೊಣೆಗಾರಿಕೆ ಜನತೆಯ ಮೇಲೆ ಇದೆ.

* * *

ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೆಲ್ಲರ ಘನೀಭೂತ ಕರ್ತವ್ಯ ಮತದಾನ. 'ಮತ' ಅಭಿಪ್ರಾಯದ ದ್ಯೋತಕ. 'ಮತ' ನಮ್ಮ ಮಟ್ಟದ ಪ್ರತಿನಿಧಿಯ ಆಯ್ಕೆಯನ್ನು ಗುರುತಿಸುತ್ತದೆ. 'ಮತದಾರರ' ಮಟ್ಟ ಮೇಲೇರಿದಷ್ಟು ಜನಪ್ರತಿನಿಧಿ ಮಟ್ಟ ಮೇಲೇರುತ್ತದೆ. ಅವರು ಇಳಿದಷ್ಟು ಇವನೂ ಇಳಿಯುತ್ತಾನೆ. ಹೀಗಾಗಿ ಮತದಾರನೇ ಪ್ರಜಾಪ್ರಭುತ್ವದ ತಾಯಿಬೇರು. ಮತದಾನದ ಸಮಯದಲ್ಲಿ ತನ್ನ ಅಭಿಪ್ರಾಯವನ್ನು ಮತವಾಗಿ ಮೂಡಿಸದವನು, ಮತದಾನದ ದಿನಗಳಲ್ಲಿ ತನ್ನ ಮತಿಯನ್ನು ಮಥಿಸದವನು, ಚುನಾವಣೆ ನಂತರ ಮಾತನಾಡುವ ತನ್ನ ನೈತಿಕ ಹಕ್ಕನ್ನು ಕಳೆದುಕೊಳ್ಳುವನು.

ಯೇನಕೇನ ಪ್ರಕಾರೇಣ ಮತ ಗಳಿಸಿ ಅಧಿಕಾರ ಹೊಂದುವ ಉದ್ದೇಶದಿಂದ ಪ್ರಜಾಪ್ರಭುತ್ವ ಎಲ್ಲ ರಂಗಗಳಲ್ಲಿ ವೈಫಲ್ಯ ಹೊಂದುತ್ತಲಿದೆ. ಅದರಿಂದಾಗಿ ಹಿಂಸೆ, ದ್ವೇಷ. ಉಗ್ರಗಾಮಿ ಚಟುವಟಿಕೆಗಳು ರಾಷ್ಟ್ರೀಯ ಭದ್ರತೆಗೆ ಮಾರಕ. ವೈಚಾರಿಕ ಪ್ರಜ್ಞೆಯುಳ್ಳ, ವಾಕ್ ಸಾಮರ್ಥ್ಯವುಳ್ಳ ಚಿಂತನಶೀಲ, ರಾಷ್ಟ್ರಾಭಿಮಾನ ಹೊಂದಿದ ನಾಯಕರ ಅಭಾವವಿದೆ. ಅಧಿಕಾರದ ಪ್ರಶ್ನೆ ಬಂದರೆ ಎಂಥ ರಾಜಿಗೂ ಸಿದ್ಧ ಎಂಬ ಪಕ್ಷ ನಾಯಕರೇ ಹೆಚ್ಚಾಗಿದ್ದಾರೆ. ವಂಶಪರಂಪರೆ ರಾಜಕಾರಣ ವ್ಯಾಪಕವಾಗುತ್ತಲಿದೆ. ಪಕ್ಷಾಂತರ ಕಾಯಿದೆ ಕಟ್ಟುನಿಟ್ಟಾಗಿ ಜಾರಿಗೆ ತರಬೇಕು. ಒಬ್ಬ ಅಭ್ಯರ್ಥಿ ಎರಡು ಸ್ಥಳಗಳಲ್ಲಿ ಸ್ಪರ್ಧಿಸುವದನ್ನು ನಿಷೇಧಿಸಬೇಕು. ಅಭ್ಯರ್ಥಿಗಳಿಗೆ ಕನಿಷ್ಠ ವಿದ್ಯಾರ್ಹತೆ ನಿಗದಿಪಡಿಸಬೇಕು.

ಮತದಾರ ಎಚ್ಚೆತ್ತು ತನ್ನ ಹೊಣೆಗಾರಿಕೆ ಅರಿತುಕೊಳ್ಳಬೇಕು. ಅಪ್ರಾಮಾಣಿಕ ಅನರ್ಹ ಅಧಿಕಾರಲಾಲಸೆ ವ್ಯಕ್ತಿಗಳಿಗೆ ಮತಹಾಕಿ ದೇಶವನ್ನು ಮತ್ತಷ್ಟು ದುರಂತದತ್ತ ಕೊಂಡೊಯ್ಯುವುದನ್ನು ತಪ್ಪಿಸಬೇಕು. ಅರಿವಿದ್ದೂ ಅಂತಹವರನ್ನು ಬೆಂಬಲಿಸಿ ತಾನೂ ಅಪ್ರಮಾಣಿಕನಾಗುವುದರಿಂದ ತನ್ನ ನಾಶವನ್ನು ತಾನೇ ಕೈಬೀಸಿ ಕರೆದಂತೆ.

■ ಯು. ಎನ್. ಸಂಗನಾಳಮಠ, ಉಪನ್ಯಾಸಕರು - ಲೇಖಕರು, ''ಜ್ಯೋತಿರ್ಲಿಂಗ'', ಶಿವಮೊಗ್ಗ ರಸ್ತೆ
ಒಂದನೇ ಒಳತಿರುವು, ಹೈಸ್ಕೂಲ್ ಬಡಾವಣೆ, ಹೊನ್ನಾಳಿ - ೫೭೭ ೨೧೭, ದಾವಣಗೆರೆ ಜಿಲ್ಲೆ

## ಈ ಹಿಂಸೆಗೆ ಕೊನೆ ಇಲ್ಲವೆ ?

ದೇಶಾದ್ಯಂತ ಭಯೋತ್ಪಾದಕರ ಬಾಂಬ್ ದಾಳಿ, ಗುಜರಾತಿನ ನರಮೇಧ, ಒರಿಸ್ಸಾದ ಹಿಂಸಾಚಾರ, ಕರ್ನಾಟಕದ ನಾನಾಕಡೆ ಚರ್ಚ್‌ಗಳ ಧ್ವಂಸ ಮತ್ತು ಈಗ ಮುಂಬಯಿಯಲ್ಲಿ ಹೀನಕೃತ್ಯ. ಮತಾಂಧರ ಈ ದುಷ್ಕೃತ್ಯಗಳ ಬಗ್ಗೆ ಯೋಚಿಸುತ್ತಿದ್ದಾಗ ಪ್ರಖ್ಯಾತ ಹಿಂದಿ ಕವಿಯಾಗಿದ್ದ ಪ್ರದೀಪ್ ಅವರ ''ದೇಖ್ ತೇರೇ ಸನ್ಸಾರ್ ಕೀ ಹಾಲತ್ ಕ್ಯಾ ಹೋಗಯೀ ಭಗವಾನ್, ಕಿತನಾ ಬದಲ್‌ಗಯಾ ಇನ್ಸಾನ್...'' ಎಂಬ ಹಾಡು ನೆನಪಾಯಿತು. ಐವತ್ತರ ದಶಕದಲ್ಲಿ ಬಂದಿದ್ದ 'ನಾಸ್ತಿಕ್' ಎಂಬ ಹಿಂದಿ ಚಲನಚಿತ್ರದಲ್ಲಿನ ಈ ಹಾಡನ್ನು ಸ್ವತಃ ಪ್ರದೀಪ್ ಅವರೇ ಹಾಡಿದ್ದರು. ಆ ಕಾಲಕ್ಕೆ ಬಹು ಜನಪ್ರಿಯವಾದ, ಬಹು ಸುಂದರವಾದ ಹಾಡು ಇದು. ಈ ಹಾಡಿನ ತಾತ್ಪರ್ಯ ಹೀಗಿದೆ : ''ನೋಡು ಭಗವಂತ, ನಿನ್ನ ಈ ಜಗದ ಸ್ಥಿತಿ ಏನಾಗಿದೆಯೆಂದು,

ಎಷ್ಟು ಬದಲಾಗಿದ್ದಾನೆ ಮಾನವ, ಅದೆಷ್ಟು ಬದಲಾಗಿದ್ದಾನೆ ಮಾನವ! ಸೂರ್ಯ ಬದಲಾಗಲಿಲ್ಲ, ಚಂದ್ರ ಬದಲಾಗಲಿಲ್ಲ, ಆಕಾಶ ಬದಲಾಗಲಿಲ್ಲ, ಆದರೆ ಎಷ್ಟು ಬದಲಾಗಿದ್ದಾನೆ ಮಾನವ! ಬಂದಿದೆ ಬಹು ಕೆಟ್ಟ ಕಾಲ, ಇಂದು ಮನುಷ್ಯನಾಗಿದ್ದಾನೆ ಲಫಂಗ. ಒಂದೆಡೆ ಜಗಳ ಇನ್ನೊಂದೆಡೆ ದಂಗೆ. ನರನು ನಗ್ನನಾಗಿ ನರ್ತಿಸುತ್ತಿದ್ದಾನೆ. ಅವನು ತನ್ನ ಕಪಟ ಕೈಗಳಿಂದ ಪ್ರಾಮಾಣಿಕತೆಯನ್ನೇ ಮಾರುತ್ತಿದ್ದಾನೆ. ರಾಮನ ಭಕ್ತರು, ರಹೀಮನ ಸೇವಕರು ರಚಿಸುತ್ತಿದ್ದಾರೆ ಮೋಸದ ಜಾಲವನ್ನು. ಈ ಮತಾಂಧರ ಕುಯುಕ್ತಿಯಿಂದ ಈ ದೇಶವಾಯಿತು ಮಸಣ. ನಾವು ನಮ್ಮ ನಮ್ಮಲ್ಲೆ ಜಗಳವಾಡದೇ ಹೋಗಿದ್ದಿದ್ದರೆ ನಮ್ಮ ಮನಗಳೇಕೆ ಹಾಳಾಗುತ್ತಿದ್ದವು, ಲಕ್ಷಾಂತರ ಮನೆಗಳೇಕೆ ನಾಶವಾಗುತ್ತಿದ್ದವು, ಈ ಮಕ್ಕಳು ತಾಯಂದಿರಿಂದ ಅಗಲುತ್ತಿದ್ದರೇಕೆ, ಪ್ರೀತಿಯ ಬಾಪುವಿನ ಪ್ರಾಣ ಬಿಕ್ಕಿ ಬಿಕ್ಕಿ ಅಳುತ್ತಿತ್ತೇಕೆ? ಎಷ್ಟು ಬದಲಾಗಿದ್ದಾನೆ ಮಾನವ, ಅದೆಷ್ಟು ಬದಲಾಗಿದ್ದಾನೆ ಮಾನವ!''

ಕವಿ ಪ್ರದೀಪ್ ಅವರ ಈ ಗೀತೆ ಭಾರತದ ವಿಭಜನೆಗೆ ಕಾರಣವಾದ ಹಿಂದು-ಮುಸ್ಲಿಂ ಘರ್ಷಣೆಗೆ ಸಂಬಂಧಪಟ್ಟ ಕಾಲಕ್ಕೆ ಅನ್ವಯಿಸುವಂಥದ್ದಾದರೂ ಅಲ್ಲಿಂದ ಇಲ್ಲಿಯವರೆಗೆ ಆಗಾಗ್ಗೆ ದೇಶದಾದ್ಯಂತ ನಡೆಯುತ್ತಾ ಬಂದಿರುವ ಕೋಮು ಗಲಭೆಗಳಿಗೂ, ಈಗಿನ ಸದ್ಯದ ಪರಿಸ್ಥಿತಿಗೂ ಪ್ರಸ್ತುತವಾಗಿರುವಂಥದ್ದಾಗಿದೆ.

ನಮ್ಮ ದೇಶದಲ್ಲಿ ಸ್ವಾತಂತ್ರ್ಯ ಬಂದಾಗಿನಿಂದಲೂ ರಾಜಕಾರಣಿಗಳ ಮೋಸದಾಟ, ಭ್ರಷ್ಟಾಚಾರ, ಕುರ್ಚಿಗಾಗಿ ಹೊಡೆದಾಟ, ಧರ್ಮದ ಹೆಸರಿನಲ್ಲಿ ವಿಷದ ಬೀಜ ಬಿತ್ತಿ ಕೋಮು ಗಲಭೆಗಳನ್ನುಂಟುಮಾಡುವುದು, ಕೊಲೆ, ಅತ್ಯಾಚಾರ, ಬೆಂಕಿ ಹಚ್ಚುವಿಕೆ ಮುಂತಾದ ದುಷ್ಕೃತ್ಯಕ್ಕೆ ಕಾರಣವಾಗುವುದು; ಕೋಮು ಸೌಹಾರ್ದತೆಯ ಸಭೆಗಳು, ಕಾನೂನು ಮತ್ತು ಶಾಂತಿ ಪಾಲನೆ ಎಂಬ ನಿಷ್ಪ್ರಯೋಜಕ ಕಸರತ್ತುಗಳು ಸಾಮಾನ್ಯವಾಗಿವೆ. ಇಷ್ಟೆಲ್ಲ ನಡೆಯುತ್ತಿದ್ದರೂ ನಮ್ಮ ದೇಶದ ಪ್ರಮುಖರಾಗಲೀ ಬುದ್ಧಿಜೀವಿಗಳಾಗಲೀ ಕ್ರಿಯಾತ್ಮಕವಾಗಿ ಏನನ್ನೂ ಮಾಡುತ್ತಿಲ್ಲವೆನ್ನುವುದು ವಿಪರ್ಯಾಸವೇ ಸೈ. ಇನ್ನು ಶ್ರೀಸಾಮಾನ್ಯನೇನು ಮಾಡಬಲ್ಲ? ಅವನು ಈ ಅನ್ಯಾಯ, ಹಿಂಸೆ, ಕ್ರೌರ್ಯಕ್ಕೆ ಮೂಕ ಪ್ರೇಕ್ಷಕನಾಗಿಬಿಟ್ಟಿದ್ದಾನೆ ಅಷ್ಟೆ.

ಅಂದಹಾಗೆ, ಪ್ರಾಸಂಗಿಕವಾಗಿ ಇನ್ನೊಂದು ಮಾತು, ಮತ್ತು ಅದು ಕವಿ ಪ್ರದೀಪ್ ಎಂದಾಕ್ಷಣಕ್ಕೆ ನೆನಪಾಗುವ ಸಂಗತಿಯೂ ಹೌದು. ಏನೆಂದರೆ, ೧೯೬೨ರಲ್ಲಿ ಭಾರತದ ಮೇಲೆ ಚೀನೀ ಆಕ್ರಮಣ ನಡೆದಾಗ ದೇಶಪ್ರೇಮದ ಬಗ್ಗೆ ಅತ್ಯಂತ ಸುಂದರವಾದ ಮತ್ತು ಭಾರತದೆಲ್ಲೆಡೆಯೂ ಬಹುಶಃ ಎಲ್ಲರೂ ಕೇಳಿರುವಂಥ ''ಏ ಮೇರೆ ವತನ್ ಕೆ ಲೋಗೋ, ಜರಾ ಆಂಖ್‌ಮೇ ಭರ್‌ಲೋ ಪಾನೀ, ಜೋ ಶಹೀದ್ ಹುಯೇ ಹೈ ಉನ್‌ಕೀ ಜರಾ ಯಾದ್ ಕರೋ ಕುರ್‌ಬಾನೀ...'' ( ಓ ನನ್ನ ದೇಶ ಬಾಂಧವರೆ, ಕಣ್ಣಲ್ಲಿ ಸ್ವಲ್ಪ ನೀರು ತಂದುಕೊಳ್ಳಿ , ಯಾರು ಹುತಾತ್ಮರಾದರೋ ಅವರ ಪ್ರಾಣತ್ಯಾಗವನ್ನು ಸ್ವಲ್ಪ ನೆನಪಿಸಿಕೊಳ್ಳಿ ) ಎಂಬ ಪ್ರದೀಪರ ಹಾಡನ್ನು ಲತಾ ಮಂಗೇಶ್ಕರ್ ಹಾಡಿದಾಗ ಪಂಡಿತ್ ನೆಹರು ಅವರು ಕಣ್ಣೀರು ಸುರಿಸಿದರು ಮತ್ತು ಲತಾ ಅವರಿಗೆ ''ಬೇಟಿ, ತುಮ್‌ನೆ ಮುಝೆ ರುಲಾದಿಯಾ'' (ಮಗಳೆ, ನೀನು ನನ್ನ ಕಣ್ಣಲ್ಲಿ ನೀರು ತರಿಸಿಬಿಟ್ಟೆ) ಎಂದು ಹೇಳಿದರು. ಆದರೆ ಅಂತಹ ಹಾಡಾಗಲೀ ಈಗ ನಾನು ಉದ್ಧರಿಸಿರುವ ''ದೇಖ್ ತೇರೇ ಸನ್ಸಾರ್ ಕೀ ಹಾಲತ್ ಕ್ಯಾ ಹೋಗಯೀ ಭಗವಾನ್'' ಎಂಬ ಹಾಡಾಗಲೀ ಇವತ್ತಿನ ನಮ್ಮ ಯಾವ ರಾಜಕಾರಣಿಯ ಕಣ್ಣಲ್ಲಿ ನೀರು ತರಿಸುವುದಿಲ್ಲ ಅಥವಾ ಅವರ ಕಣ್ಣಲ್ಲೂ ತೆರೆಸುವುದಿಲ್ಲ. ಅವರು ಅಷ್ಟು ಹೃದಯಹೀನರಾಗಿದ್ದಾರೆ. ಇದು ನಮ್ಮ ದೇಶದ ದೌರ್ಭಾಗ್ಯ.

■ ಪ್ರೊ॥ ಶ್ರೀನಿವಾಸ್ ಎ. ಸುತ್ರಾವೆ, ೧೬೪೬/ ೧೮, ಮಹಡಿ, ವಿದ್ಯಾನಗರ, ದಾವಣಗೆರೆ - ೫೭೭ ೦೦೫

## ಸಹಮತದ ಕೊರತೆ : ಪ್ರಜ್ವಲಿಸದ ಪ್ರಜಾಪ್ರಭುತ್ವದ ಹಣತೆ

ಭಾರತ ತನ್ನ ಅಂತಃಸತ್ವವನ್ನು ನಿಭಾಯಿಸುವಲ್ಲಿ ಅತ್ಯಂತ ಕಠಿಣ ಪರಿಸ್ಥಿತಿಯನ್ನು ಎದುರಿಸುತ್ತಿದ್ದರೂ ಕ್ರಿ.ಶ ೨೦೨೫ರ ವೇಳೆಗೆ ಜಗತ್ತಿನ ಮುಂಚೂಣಿಯ ರಾಷ್ಟ್ರಗಳಲ್ಲಿ ಒಂದಾಗುವ ಗುರಿ ಹೊಂದಿದೆ. ವಿಜ್ಞಾನದ ಆವಿಷ್ಕಾರ ಮತ್ತು ತಂತ್ರಜ್ಞಾನದಲ್ಲಿ

ಸುಂದರ ಪ್ರಕಾಶನ
ಚಿತ್ರಶ್ರೀ ನಂ. 43, ಕಲಾಮಂದಿರ
5ನೇ ತಿರುವು, ಅ.ನ.ಸು. ರಸ್ತೆ, ಹನುಮಂತನಗರ
ಬೆಂಗಳೂರು – 560 019
✆ 080-6562 3165/9243 125 699

ಈವರೆಗೆ 114 ಮೌಲಿಕ ಪುಸ್ತಕಗಳನ್ನು ಪ್ರಕಟಿಸಿರುವ ಸುಂದರ ಪ್ರಕಾಶನ, ಕನ್ನಡ ಚಿತ್ರರಂಗ 75 – ಅಮೃತ ಮಹೋತ್ಸವ ಸಂದರ್ಭದಲ್ಲಿ, ಕಲಾವಿದರು, ತಂತ್ರಜ್ಞರನ್ನು ಕುರಿತ 50 ಪುಸ್ತಕಗಳನ್ನು ಪ್ರಕಟಿಸಲಿದೆ. ಪ್ರತಿಗಳನ್ನು ಕಾಯ್ದಿರಿಸಿ.

ಗೌರಿ ಸುಂದರ್
ಸುಂದರ ಪ್ರಕಾಶನ

With best compliments from:

THE MAJIBAIL SERVICE CO-OP. BANK LTD.
NO. C.322

Head Office : Ph: 272204
Majibail P.O. (via) Manjeshwar

*Branches :*
**Majibail**
B.T.Road, Uppala. Ph: 242215

**Morathane**
Kadambar

We accept deposits and render quick and prompt service.

M. Sanjeev Shetty
President
Contact No. Mobile : 9846422785

# ಬಾಂಬುಗಳು ಸಿಡಿಯಬೇಕು !

**ಬಾಂ**ಬುಗಳು ಸಿಡಿಯಬೇಕು
'ನಾವೆಲ್ಲರೂ' ಬೆಚ್ಚಿ ಬೀಳುವಂತೆ
ಹುಸಿ ನಿದ್ದೆಯಲಿ ತೇಲುತಿರುವ
ಕ್ಷಣಿಕ ಸುಖದಲ್ಲಿ ಮೈ ಮರೆತಿರುವ
ಸ್ವಾರ್ಥದ ಗುಂಗಿನಲ್ಲಿ ಮುಳುಗಿರುವ
ವಂಚನೆಯನ್ನೇ ಬದುಕೆಂದುಕೊಂಡವರ, ಭ್ರಷ್ಟರ
ಸರ್ವರ ಕಣ್ಣು ತೆರೆಯುವಂತೆ
ಎಚ್ಚರದ ಬಾಂಬುಗಳು ಸಿಡಿಯಬೇಕು !

ಬಾಂಬುಗಳು ಸಿಡಿಯಬೇಕು
'ನಾವೆಲ್ಲರೂ' ಕಳೆದುಹೋಗುವಂತೆ
ಜಾತಿ ಜಾತಿಗಳ ಗೋಡೆ ಕೆಡವುವ
ಮತ ಮತಗಳ ಮೌಢ್ಯ ತೊರೆಯುವ
ಮೂಢನಂಬಿಕೆಗಳ ಮೆಟ್ಟಿನಿಲ್ಲುವ
ಮನುಷ್ಯರೆಲ್ಲರೂ ಒಂದೇ ಎನ್ನುವ
ವಿಚಾರದ, ವಿಜ್ಞಾನದ, ವಿದ್ಯೆಯ
ಸುಂದರ ಬಾಂಬುಗಳು ಸಿಡಿಯಬೇಕು !

ಬಾಂಬುಗಳು ಸಿಡಿಯಬೇಕು
'ನಾವೆಲ್ಲರೂ' ಮರೆತು ಹೋಗುವಂತೆ
ಹಸಿದ ಹೊಟ್ಟೆಗೆ ಅನ್ನ ನೀಡುವ
ತೆರೆದ ಮೈಗೆ ಅರಿವೆ ಕೊಡುವ
ನೊಂದ ಜನಕೆ ಸೂರು ಕಟ್ಟುವ
ಬುದ್ಧ-ಬಸವ-ಗಾಂಧಿಯ ನೆನಪ ತರುವ
ಸಮಾನತೆಯ ಬೆಳಕು ನೀಡುವ
ಶಾಂತಿಯ ಬಾಂಬುಗಳು ಸಿಡಿಯಬೇಕು !

ಬಾಂಬುಗಳು ಸಿಡಿಯಲಾರವು
ಇನ್ನುಮುಂದೆ ಎಂದೆಂದೂ ಎಲ್ಲಿಯೂ
ಕೋಮು ದ್ವೇಷ ಬಿತ್ತುವ
ಮಸೀದಿ ಮಂದಿರ ಕೆಡವುವ
ಅವ್ವ - ಮಕ್ಕಳ ಅನಾಥಗೊಳಿಸುವ
ರಕ್ತದ ಓಕುಳಿಯಾಡುವ
ನಾಳೆಗಳ ಇಲ್ಲವಾಗಿಸುವ
ಬಾಂಬುಗಳು ತಯಾರಾಗುವದಿಲ್ಲ

ಆ ಕಾರ್ಖಾನೆಗಳಲಿ ಗುಬ್ಬಿಗಳು
ಗೂಡು ಕಟ್ಟುತ್ತವೆ
ನೆಮ್ಮದಿಯ ಜೋಗುಳ ಹಾಡುತ್ತವೆ !



**ವಿ. ಹರಿನಾಥ ಬಾಬು,** ಸದಾಶಿವ ನಗರ, ಸಿರುಗುಪ್ಪ - ೫೮೩೧೨೧. ಬಳ್ಳಾರಿ ಜಿಲ್ಲೆ

ಸರ್ವಶ್ರೇಷ್ಠ ಸಾಧನೆಗೈದು ಜಗತ್ತಿನ ಬಲಿಷ್ಠ ರಾಷ್ಟ್ರಗಳ ಸಾಲಿನಲ್ಲಿ ನಿಲ್ಲುವಂತೆ ಮಾಡಲು ಸರ್ವ ಸಿದ್ಧತೆಗಳು ನಡೆದಿವೆ. ಇಂಥ ಉಜ್ವಲ ಗುರಿ ಇಟ್ಟುಕೊಂಡಿರುವ ಭಾರತದಲ್ಲಿ 'ಪ್ರಜಾಪ್ರಭುತ್ವ' ಇನ್ನೂ ನಿಚ್ಚಳ ಮತ್ತು ನಿರಾಳಗೊಳ್ಳಲು ಸಾಕಷ್ಟು ಹದಗೊಳ್ಳದಿರುವುದು ನಾಗರಿಕ ಜವಾಬ್ದಾರಿಯಲ್ಲಿಯ ಕೊರತೆಯನ್ನು ಸೂಚಿಸುತ್ತದೆ.

ಭಾರತೀಯರಲ್ಲಿ ನಾಗರಿಕ ಪ್ರಜ್ಞೆ ಬೆಳೆದುಬಂದಿಲ್ಲ. ಜನರು ಅಕ್ಷರಸ್ಥರಾದರು, ಆದರೆ ಸುಶಿಕ್ಷಿತರಾಗಿಲ್ಲ. ಅವರ ಆಲೋಚನೆಗಳು ಸಮಗ್ರ ಅಭಿವೃದ್ಧಿಯತ್ತ ಯಾವತ್ತೂ ಇಣುಕಿಯೂ ನೋಡದಷ್ಟು ಸಂಕುಚಿತಗೊಂಡಿವೆ. ಮಾನವ ನಿರ್ಮಾಣದಲ್ಲಿ ಸೋತಿರುವ ಭಾರತವು ಜನಸಂಖ್ಯಾ ಬಾಹುಳ್ಯವನ್ನು ಮಾತ್ರ ಹೊಂದಿದೆ ಹೊರತಾಗಿ, ಜನಸಂಖ್ಯಾ ಸಂಪನ್ಮೂಲವನ್ನಲ್ಲ. ಎಲ್ಲಿ ನೋಡಿದಲ್ಲಿ ಕಂದಾಚಾರ, ಅಪನಂಬಿಕೆ, ಶೋಷಣೆ, ಮೋಸ, ಅವಿಶ್ವಾಸಗಳೇ ಕಾಣಸಿಗುತ್ತವೆ. ಭಾರತೀಯ ನಾಗರಿಕನ ವ್ಯವಹಾರವು ಪ್ರಜಾತಾಂತ್ರಿಕ ನಡಾವಳಿಗೆ ಇನ್ನೂ ಸಾಮೀಪ್ಯ ಪಡೆದುಕೊಳ್ಳದ ಕಾರಣ ಮಾನವೀಯ ಮೌಲ್ಯಗಳನ್ನು ಹೊಂದಲು ಅವಕಾಶವೇ ಸಿಗದಂತಾಗಿದೆ. ಸಂವಿಧಾನವು ನಿಗದಿಗೊಳಿಸಿದ ಮಾನವೀಯ ಸಂಬಂಧಗಳನ್ನು ಬೆಳೆಸಿಕೊಳ್ಳದಿರುವ ಕಾರಣದಿಂದಾಗಿ ನಮ್ಮ ಪ್ರಜಾಪ್ರಭುತ್ವ ನಿಸ್ತೇಜಗೊಂಡಿದೆ. ಪ್ರಜಾಪ್ರಭುತ್ವದ ಜೀವಾಳವು ಪ್ರಜೆಯ ಅಭಿವೃದ್ಧಿಪರ ಮನೋಭಾವದ ಮೇಲೆ ನಿಂತಿದೆ. ಅಭಿವೃದ್ಧಿ ಎಂದರೆ ಶಿಸ್ತು, ಸಂಯಮ, ಶೋಷಣೆ ಮಾಡದಿರುವುದು, ಭ್ರಷ್ಟಾಚಾರ-ಅನೀತಿ-ಅನಾಚಾರದಿಂದ ಮುಕ್ತವಾಗಿರುವುದಾಗಿದೆ. ಹೇಳಿಕೊಳ್ಳುವುದಕ್ಕೆ ಮಾತ್ರ ಸೀಮಿತವಾಗಿರುವ ಇಂದಿನ ಪ್ರಜಾಪ್ರಭುತ್ವ ಅಭಿವೃದ್ಧಿಯ ಮುನ್ನೋಟವನ್ನಾಗಲಿ, ಮಾನವನನ್ನು ಸಂಪನ್ಮೂಲವನ್ನಾಗಿಸುವ ಗುರಿಯನ್ನಾಗಲಿ ಇಟ್ಟುಕೊಳ್ಳುವಲ್ಲಿ ಕಾಳಜಿ ಹೊಂದಿಲ್ಲ. ಮತ ಪೆಟ್ಟಿಗೆ, ಸ್ವಜನಪಕ್ಷಪಾತ, ಧರ್ಮ ರಾಜಕಾರಣ, ಭ್ರಷ್ಟಾಚಾರ, ಸಾರ್ವಜನಿಕ ಸ್ವತ್ತು ಕಬಳಿಕೆ... ಮುಂತಾದವು ಪ್ರಜಾಪ್ರಭುತ್ವದ ವಿರುದ್ಧ ಸಂಗತಿಗಳೇ ಮೇಲುಗೈಗಳಾಗಿ ಹೋಗುತ್ತಿರುವ ಬಗ್ಗೆ ಪ್ರತಿಯೊಬ್ಬ ನಾಗರಿಕ ಎಚ್ಚತ್ತುಕೊಳ್ಳುವ ಸಂದರ್ಭ ಇಂದಿನದಾಗಿದೆ. ಯಾವ ವ್ಯಕ್ತಿ ಆತ್ಮವಿಶ್ವಾಸವುಳ್ಳವನಾಗಿ, ಸ್ವಾವಲಂಬಿಯಾಗಿ, ಸೃಜನಶೀಲ ಹಾಗೂ ಸ್ನೇಹಪರನಾಗಿರುತ್ತಾನೋ ಆ ವ್ಯಕ್ತಿಯು ಅಭಿವೃದ್ಧಿ ಹೊಂದಿದ ವ್ಯಕ್ತಿಯಾಗಿರುತ್ತಾನೆ. ಅಭಿವೃದ್ಧಿ ಹೊಂದಿದ ವ್ಯಕ್ತಿ ಪ್ರಜಾಪ್ರಭುತ್ವದ ನೈಜ ವಾರಸುದಾರನಾಗಿರುತ್ತಾನೆ. ಆದರೆ ಭಾರತೀಯರು ನೈಜ ಪ್ರಜಾಪ್ರಭುತ್ವಕ್ಕಿಂತ ಪ್ರಾತಿನಿಧಿಕ ಪ್ರಜಾಪ್ರಭುತ್ವಕ್ಕೆ ಒಗ್ಗಿಹೋಗಿದ್ದಾರೆ. ಪ್ರಜಾಪ್ರಭುತ್ವವು ಪ್ರಜಾಪ್ರತಿನಿಧಿಗಳ ಅನುಕೂಲದ ವ್ಯವಸ್ಥೆಯಾಗಿ ಮಾರ್ಪಟ್ಟಿದೆ, ಮಾರ್ಕೆಟ್ಟು ಸಹ ಆಗಿದೆ. ಮನುಷ್ಯ ನಿರ್ಮಾಣ ಮತ್ತು ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿಯ ಹಿನ್ನಡೆಯು ಪ್ರಜಾಪ್ರಭುತ್ವದ ಅವಹೇಳನವೇ ಆಗಿದೆ.

ಪ್ರಜಾಪ್ರಭುತ್ವದ ಪ್ರಮುಖ ಆಶಯ ಜನಾಧಿಪತ್ಯ, ಜನರಿಂದ-ಜನರಿಗಾಗಿ ಎಂಬುದೇ ಆಗಿದೆ. ಆದರೆ ಭಾರತದಲ್ಲಿ ಜನಾಧಿಪತ್ಯ ಜನರಿಗಾಗಿಯೂ ಉಳಿದಿಲ್ಲ. ಜನರಿಂದ ಸಶಕ್ತವಾಗಿ ಚಲಾವಣೆಯಲ್ಲೂ ಇಲ್ಲ. ಜನರು ಪರಾವಲಂಬಿಗಳಾಗಿದ್ದಾರೆ, ನೆರವಿನ ಅಭಿಲಾಷೆ ಹೊಂದಿದ್ದಾರೆ, 'ಮನ್ನಾ' ಸಂಸ್ಕೃತಿಯಲ್ಲಿ ನಂಬಿಕೆ ಇಟ್ಟುಕೊಂಡಿದ್ದಾರೆ. ಯಾರು ಹೆಚ್ಚು ಸವಲತ್ತು, ಅನುಕೂಲ ಒದಗಿಸುತ್ತಾರೋ ಅಥವಾ ಮತದಾನ ಸಮಯದಲ್ಲಿ ಪ್ರಭಾವ ಬೀರುತ್ತಾರೋ ಅವರಿಗೆ ಬಹುಪರಾಕು ಹೇಳುವುದೇ ಪ್ರಜಾಪ್ರಭುತ್ವ ನೆಲೆಯಾಗುತ್ತಲಿದೆ. ಹೆಚ್ಚು ಮತ ಪಡೆದು ಆಯ್ಕೆಗೊಂಡವರು ತಮ್ಮ ಅಧಿಕಾರ ಚಲಾಯಿಸಿ ಪ್ರಜಾಪ್ರಭುತ್ವ ಮೌಲ್ಯಕ್ಕೆ ಕಟಿಬದ್ಧತೆ ಬೆಳೆಸಿಕೊಳ್ಳುವ ಅಭಿಲಾಷೆಗಿಂತ ಹಲವು ಹಿತಾಸಕ್ತಿಗಳ ಅಭಿಲಾಷೆಗಳನ್ನೇ ಪ್ರಮುಖವಾಗಿರಿಸಿಕೊಂಡು ಹೋಗುವ ಪ್ರಸಂಗ ಪ್ರಜಾಪ್ರಭುತ್ವದ ಸಂಪ್ರದಾಯವಾಗಿ ನಿಂತಿದೆ. ಸಂವಿಧಾನ ಬದ್ಧವಾಗಿ ದತ್ತವಾಗಿರುವ ಅಧಿಕಾರದ ದುರುಪಯೋಗ ಒಂದೆಡೆಯಾದರೆ ಅಧಿಕಾರ ಚಲಾಯಿಸುವ ಶಕ್ತಿ ಕೇಂದ್ರ ಅಧಿಕಾರ ಹೊಂದದ ಪ್ರಬಲರ, ಹಣವಂತರ, ಜಾತಿ ಪ್ರಮುಖರ ಕೈಯಲ್ಲಿ ಸಿಲುಕಿಕೊಂಡಿದೆ. ಉದ್ಯಮಿ, ಉದ್ಯೋಗಪತಿ, ಜಾತಿ ಪ್ರಮುಖರು... ಮುಂತಾದವರು ಪ್ರಗತಿಯ ನೀತಿ ನಿರೂಪಕರಾಗಿಯೂ, ಸರಕಾರದ ಸ್ವರೂಪದ ನಿರ್ಣಾಯಕರಾಗಿಯೂ ಇಂದು ಹೊರಹೊಮ್ಮುತ್ತಿದ್ದಾರಲ್ಲದೆ ಜನರು ಸದಾ ಭಯಭೀತಿಯಲ್ಲಿ ಇರುವಂತೆ ಮಾಡಿ ದೇಶ ಗಂಡಾಂತರದಲ್ಲಿದೆ ಎಂದು ಗುಲ್ಲು ಎಬ್ಬಿಸಿ ತಮ್ಮ ಹಿತಾಸಕ್ತಿ ಕಾಪಾಡಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

ನಮ್ಮ ಎಲ್ಲ ಚುಟವಟಿಕೆಗಳು ದೈತ್ಯ ಶಕ್ತಿಯ ಕಡೆಗೆ ಸಂಘಟಿತಗೊಳ್ಳುತ್ತಿವೆ. ಎಲ್ಲೆಡೆ ಸಂಖ್ಯಾಬಲ ಹೆಚ್ಚಿಸಿಕೊಳ್ಳುವ ಹೆಣಗಾಟವು ಪ್ರಿಯವಾಗುವ ಚಟುವಟಿಕೆ

ಗಳತ್ತ ನಡೆಯುತ್ತಲಿದೆ. ಜಾತಿಗೊಂದು ಸಂಘಟನೆ, ಸಮಾವೇಶ, ಮೀಸಲಾತಿ, ಉತ್ಸವಗಳ ಭರಾಟೆ, ಬಿರುಗಾಳಿ ಎದ್ದುನಿಂತಿವೆ. ಮನುಷ್ಯ ಇಂದು ಯಾವುದಾದರೂ ಒಂದು ದುಷ್ಟಶಕ್ತಿ ಗುಂಪಿಗೆ ಸೇರಿಕೊಳ್ಳದೆ ಬದುಕಲು ಅಸಾಧ್ಯ ಎಂಬ ಅಭಿಮತಕ್ಕೆ ಬರುವಂತಾಗಿದೆ. ರಾಜಕೀಯ ಚತುರತೆ ಮನುಷ್ಯನ ವ್ಯಕ್ತಿತ್ವವನ್ನು ವಿಷಮಗೊಳಿಸಿದೆ, ವಿಧ್ವಂಸಕ ಕೃತ್ಯಗಳ ಕಪಿಮುಷ್ಟಿಯೊಳಗೆ ಸಿಲುಕುವಂತೆ ಮಾಡಿದೆ. ಪ್ರಜಾಪ್ರಭುತ್ವದ ಮೌಲ್ಯಗಳಿಗೆ ಮಾನ್ಯತೆ ಕಡಿಮೆಯಾಗಿ ಸಂಖ್ಯಾಬಲವೇ ಪ್ರಾಮುಖ್ಯ ಪಡೆದುಕೊಳ್ಳತೊಡಗಿದೆ. ವರ್ಡ್ಸ್‌ವರ್ತ್ ಕವಿ ಒಂದೆಡೆ ಹೀಗೆ ಹೇಳಿದ್ದಾನೆ: ''ತನ್ನಿಂದ ಮೇಲಕ್ಕೆ ತನ್ನನ್ನೇ ಕಾಣಲಾಗದಿದ್ದರೆ ಮಾನವ ಎಂಥಾ ಬಡ ಪ್ರಾಣಿ.'' ಈ ಮಾತಿನ ಒಳಮರ್ಮ, ಪ್ರಜಾಪ್ರಭುತ್ವವು ಸಂಖ್ಯೆಯ ಮೇಲೆ ಆಧಾರಗೊಳ್ಳದೆ ಸಹಮತ ಸಾಮರಸ್ಯ ಸಹೋದರತ್ವದ ತಳಹದಿಯ ಮೇಲೆ ಮುನ್ನಡೆ ಸಾಧಿಸುವ ಮನೋಧರ್ಮವನ್ನು ಬಲಪಡಿಸುವುದನ್ನು ಹೇಳಿದಂತಿದೆ. ಭಾರತೀಯರು ಶಾಂತಿಪ್ರಿಯರೆಂದು ಹೆಸರುಗಳಿಸಿದ ಕಾಲವನ್ನು ಹಿಂದಕ್ಕೆ ಸರಿಸಿ ನಡೆದಿರುವ ಕಾಲಮಾನವು ಪ್ರಾಶಸ್ತ್ಯ ಪಡೆದುಕೊಂಡಿದೆ.

ನಮ್ಮ ಸುತ್ತ ಮುತ್ತ ನಡೆಯುತ್ತಿರುವ ಘಟನೆಗಳತ್ತ ಗಮನ ಹರಿಸಿದರೆ ಅತ್ಯಂತ ಪ್ರಭಾವಿತ ವ್ಯಕ್ತಿಗಳೂ ಸಹ ಹಗಲಿನಲ್ಲೂ ತಿರುಗಾಡಲು ಹೆದರುವ ಪ್ರಸಂಗಗಳಿವೆ. ಭಯ, ಭಯೋತ್ಪಾದನೆ ಹೇಡಿ ಕೃತ್ಯಗಳು ಹೆಚ್ಚಾಗಲು ಪ್ರಜಾಸತ್ತಾತ್ಮಕದ ಆಂತರ್ಯ ಅಂತರಂಗವಾಗಿರುವ ಸಹಮತ, ಸೌಜನ್ಯಯುತ ನಡತೆಯ ಕೊರತೆಯೇ ಕಾರಣವೆನ್ನಬಹುದಾಗಿದೆ. ಅಹಂ ಎಂಬ ರಾಕ್ಷಸಿ ಪ್ರವೃತ್ತಿ ದೇಶದ ಪ್ರಜಾಸತ್ತಾತ್ಮಕ ವ್ಯವಸ್ಥೆಗೆ ಕಂಟಕವಾಗಿ ನಿತ್ಯ ಕಾಡುತ್ತಲಿದೆ. ದೇಶದಲ್ಲಿ ಭಯಾನಕತೆ ಹಬ್ಬಿಸುವ ದುಷ್ಟ ಕೂಟಗಳು ಧರ್ಮದ ಹೆಸರಿನಲ್ಲಿ, ಸಂಕುಚಿತ ಪ್ರಾದೇಶಿಕತೆಯ ನಿಲುವಿನಲ್ಲಿ, ಭಾಷೆಯ ಜಂಭದಲ್ಲಿ ಎದ್ದು ಸಾರ್ವಜನಿಕ ಶಾಂತಿಯನ್ನು ಭಗ್ನಗೊಳಿಸುತ್ತಲಿವೆ. ಈ ಶಕ್ತಿಗಳನ್ನು ದೃಢವಾಗಿ ಎದುರಿಸಲು ಪ್ರಜಾತಾಂತ್ರಿಕ ಮನಸ್ಸುಗಳನ್ನು ಒಗ್ಗೂಡಿಸುವ ಅಗತ್ಯವಿದೆ. ಸ್ಪಷ್ಟವಾಗಿ ಚಿಂತಿಸುವ, ರಾಷ್ಟ್ರ ಭಕ್ತಿ ಬೆಳೆಸಿಕೊಳ್ಳುವ, ಪ್ರಾಮಾಣಿಕ ದುಡಿಮೆ ಮಾಡುವ, ಸ್ವಾವಲಂಬಿ, ಸ್ವಾಭಿಮಾನ ವ್ಯಕ್ತಿತ್ವ ಬೆಳೆಸಿಕೊಳ್ಳುವುದಕ್ಕೆ ಪ್ರತಿಯೊಬ್ಬ ಪ್ರಜೆಯೂ ಮುಂದಾಗಬೇಕು. ವ್ಯಕ್ತಿತ್ವ ವಿಕಸನಗೊಂಡಲ್ಲಿ ತಾಂಡ[illegible] ರೂಪದಲ್ಲಿರುವ ಭಯಾನಕತೆ ಕರಗುತ್ತದೆ, ಪ್ರಜಾಪ್ರಭುತ್ವದ ಹೊಂಬೆಳಕ[illegible] ಪಸರಿಸುತ್ತದೆ. ಸ್ವಾತಂತ್ರ್ಯಾನಂತರ ಸಹಕಾರ ಚಳುವಳಿಗೆ ಪ್ರಾಶಸ್ತ್ಯ ನೀಡಲಾಯಿತು. ಪ್ರಜಾಪ್ರಭುತ್ವ ತಳಹದಿಯ ಆಧಾರದ ಮೇಲೆ ಬೆಳೆಸಲು ಯತ್ನಿಸಲಾಯಿತು. ಆದ[illegible] ಸಹಕಾರಿ ಕ್ಷೇತ್ರ ಪ್ರಜಾಸತ್ತಾತ್ಮಕವಾಗಿ ಬೆಳೆಯಲೂ ಇಲ್ಲ, ಪ್ರಜೆಗಳಲ್ಲಿ ಸಹಕಾ[illegible] ಅಗತ್ಯವೆಂಬ ನಂಬಿಕೆ ಉಳಿಯುವಂತೆಯೂ ಕಾರ್ಯ ನಿರ್ವಹಿಸಲಿಲ್ಲ. ಇದೊಂದ[illegible] ಪ್ರಜಾಪ್ರಭುತ್ವದ ದೊಡ್ಡ ದುರಂತವೆಂದು ಹೇಳಬಹುದಾಗಿದೆ.

'ಸಹಕಾರ' ಪ್ರಜಾಪ್ರಭುತ್ವದ ಕಸುವಾಗಿದೆ. ಪ್ರಜಾಪ್ರಭುತ್ವದ ಮೌಲ್ಯಗಳ[illegible] ನಾಡಿನ ಮೂಲೆ-ಮೂಲೆಗೂ ಪಸರಿಸಲು ಸಹಕಾರ ತತ್ವಗಳು ಸಹಕಾರಿಯಾಗಿವ[illegible] ಬದುಕಿನ ಅಮೂಲ್ಯ ತತ್ವದಲ್ಲಿ ಸಹಜೀವನ ಮಹತ್ವ ಪಡೆದುಕೊಂಡಿದೆ. ಸಹಜೀವನ[illegible] ನಾಡಿನೊಳಗೆ ಅರಳಿದರೆ ಪ್ರಜಾಪ್ರಭುತ್ವ ಹೆಮ್ಮರವಾಗಿ ಬೆಳೆಯಲು ಆಸ್ಪದವಾಗುತ್ತದೆ..

'ಆದರ್ಶ ರಾಜ್ಯ' ಯಾವುದು, ಎಂಬ ಬಗ್ಗೆ ಕನ್‌ಫ್ಯೂಷಿಯಸ್ ಹೇಳಿರುವ ಈ ವಿಚಾರ ಪ್ರಜಾಪ್ರಭುತ್ವ ಆಡಳಿತಕ್ಕೆ ಮಾರ್ಮಿಕವಾಗಿದೆ : ''ಸಾಕಷ್ಟು ಆಹಾರ, ರಕ್ಷಣೆ[illegible] ಸೈನ್ಯ ಹಾಗೂ ಜನರ ವಿಶ್ವಾಸಕ್ಕೆ ಪಾತ್ರವಾದ ಸರಕಾರ. ಮೊದಲೆರಡು ಇಲ್ಲದಿದ್ದರೂ[illegible] ನಡೆಯುತ್ತೆ. ಆದರೆ ಜನರ ವಿಶ್ವಾಸವಿಲ್ಲದ ಯಾವ ಸರಕಾರವೂ ಉಳಿಯಲಾರದು. ಪ್ರಜೆಗಳ ವಿಶ್ವಾಸವೇ ಒಳ್ಳೆಯ ಸರಕಾರದ ಉಸಿರು.'' ಪ್ರಜೆಗಳು ಇಂದು ಮೂರು[illegible] ಲಾಲಸೆಗಳಾದ ಸಂಪತ್ತಿನ ಲಾಲಸೆ, ಸುಖ ಲಾಲಸೆ ಮತ್ತು ಅಧಿಕಾರ ಲಾಲಸೆಗಳಿಂದ ಮುಕ್ತರಾಗಿ, ತಿಳುವಳಿಕೆಯುಳ್ಳವರಾದರೆ ಪ್ರಜಾಪ್ರಭುತ್ವದ ತತ್ವಗಳು ವ್ಯಾಪಕ[illegible] ಗೊಳ್ಳುತ್ತವೆ. ಈ ನಿಟ್ಟಿನಲ್ಲಿ ಪ್ರಜೆಗಳು ತಮ್ಮ ತಮ್ಮ ಇತಿ - ಮಿತಿಗಳನ್ನು ಅರಿತು ಬಾಳುವ[illegible] ಇನ್ನೊಬ್ಬರ ಬಾಳಿಗೂ ನೆರವಾಗುವ ಮನೋಭಾವ ಬೆಳೆಸಿಕೊಳ್ಳುವುದು ಅಷ್ಟೇ[illegible] ಮುಖ್ಯವಾಗಿದೆ. ಸಂಯಮ ಬದುಕೇ ಪ್ರಜಾಪ್ರಭುತ್ವದ ಜೀವಾಳವಾಗಿದೆ. ಸಂಘಟಿತ[illegible] ಸಹಮತದ ಸನ್ಮಾರ್ಗ ತುಳಿದು ಪ್ರಜಾಪ್ರಭುತ್ವವನ್ನು ಗಟ್ಟಿಗೊಳಿಸುವ ಅಗತ್ಯವಿದೆ.

■ ಸ. ರಾ. ಸುಳಕೂಡೆ, ೧೩೮೯, ಶಿವಪ್ರಸಾದ, ಶ್ರೀ ಬಸವೇಶ್ವರ ಬಡಾವಣೆ
ರಾಮತೀರ್ಥ ನಗರ, ಬೆಳಗಾವಿ -೫೯೦ ೦೧[illegible]



ಕೆ. ಎಸ್. ಮುದ್ದಪ್ಪ
ಸ್ಮಾರಕ ಟ್ರಸ್ಟ್
ಕೃಷ್ಣಾಪುರದೊಡ್ಡಿ

ಮುದ್ದುಶ್ರೀ ಗ್ರಂಥಮಾಲೆಯ ಮೂಲಕ ನಾಡಿನ ಹೆಸರಾಂತ ಲೇಖಕರ ಪುಸ್ತಕಗಳ ಪ್ರಕಟಣಾ ಕಾರ್ಯದಲ್ಲಿ ನಿರತವಾಗಿದೆ

**ಬಾಪು ಚಿಂತನೆ, ಇಳೆಯ ಬೆಳಗು, ಪಲ್ಲಟ ಪರ್ವ** - ಬಿ. ಎ. ಶ್ರೀಧರ
**ನೂರಾರು ಶರಣರ ಸಾವಿರ ವಚನಗಳು**
- ಡಾ. ಎಲ್. ಬಸವರಾಜು
**ಕರ್ನಾಟಕ ವಿಷವೈದ್ಯ ಪರಂಪರೆ** - ಡಾ. ಸತ್ಯನಾರಾಯಣ ಭಟ್
**ಪಂಪನ ಆದಿಪುರಾಣ, ಪಂಪ ಭಾರತ**
**ರನ್ನನ ಸರಳ ಗದಾಯುದ್ಧ (ವ್ಯಾಖ್ಯಾನ ಸಹಿತ)**
**ಬಸವಪೂರ್ವ ಯುಗದ ವಚನಕಾರರು**
**ಡೊಂಕು ಬಾಲದ ನಾಯಕರು**
**ಮಾಳಸುತ್ತಿನ ಮೂಲಿಕೆ ವೈದ್ಯ, ಭೋಜ ಕುತೂಹಲ**

— **ಇತ್ಯಾದಿ 125ಕ್ಕೂ ಹೆಚ್ಚು ಮೌಲಿಕ ಕೃತಿಗಳು ನಮ್ಮಲ್ಲಿ ಲಭ್ಯವಿವೆ**

ವಿವರಗಳಿಗೆ ಸಂಪರ್ಕಿಸಿ
119, 3ನೇ ಕ್ರಾಸ್, 3ನೇ ಮುಖ್ಯರಸ್ತೆ, ಹಂಪಿನಗರ
ಬೆಂಗಳೂರು - 560 104, ಫೋನ್ : 09448102158

'ಹೊಸತು' ಓದುಗರಿಗೆ
ಹೊಸ ವರ್ಷದ ಶುಭಾಶಯಗಳು

ಜೀವನದ ಎಲ್ಲ ಕ್ಷೇತ್ರಗಳ ಆಗುಹೋಗುಗಳನ್ನು
ಗಂಭೀರ ವಿಶ್ಲೇಷಣೆಗೆ ಒಳಪಡಿಸುವ

ಸಾಮಾಜಿಕ, ಸೈದ್ಧಾಂತಿಕ, ಸಾಂಸ್ಕೃತಿಕ ಕ್ಷೇತ್ರಕ್ಕೆ ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ

ತಿಂಗಳ ಪತ್ರಿಕೆ
**ಹೊಸತು**



ಪ್ರಧಾನ ಸಂಪಾದಕ
ಡಾ|| ಜಿ. ರಾಮಕೃಷ್ಣ

ಡೆಮಿ 1/4
ಪುಟಗಳು 64

ಮೂರು ವರ್ಷದ ಚಂದಾ ನೀಡಿದವರಿಗೆ
ನವಕರ್ನಾಟಕ ಪ್ರಕಾಶನದ ಪುಸ್ತಕಗಳ ಮೇಲೆ 20% ರಿಯಾಯಿತಿ

ಬಿಡಿ ಪ್ರತಿ ರೂ. 12 ★ ವಾರ್ಷಿಕ ಚಂದಾ ರೂ. 125
ಮೂರು ವರ್ಷಕ್ಕೆ ರೂ. 300

ನಿಮ್ಮ ಚಂದಾ ಹಣವನ್ನು 'ಹೊಸತು' ಹೆಸರಿಗೆ ಎಂ.ಓ. ಅಥವಾ
ಡಿ.ಡಿ. ಮಾಡಿ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ

**ಹೊಸತು**
ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ , ಕುಮಾರ ಪಾರ್ಕ್ ಪೂರ್ವ
ಅಂ. ಪೆ. ಸಂಖ್ಯೆ 5159, ಬೆಂಗಳೂರು - 560 001

# OUR ADVERTISERS


CC Limited - *Wadi / Mumbai* 32
ademic (India) Publishers - *New Dehli* 18
arsh Enterprises - *New Delhi* 114
siri Prakashana / Yash Creations - *Bangalore* 166
shara Prakashana - *Heggodu* 26
Ameen Education Trust (R) - *Bangalore* 84
ka Publications - *Mumbai* 208
anda-Chetana Prakashana - *Hubli* 120
kita Pustaka - *Bangalore* 37
ian Educational Services - *New Delhi/Chennai* 22
hree Book Centre - *Mangalore* 258
. Publications Pvt. Ltd. - *Bangalore* 44
hujana Madhyama Kendra (R) - *Mysore* 152
lu and Associates - *Bangalore* 222
ngalore Body Builders (P) Ltd. - *Bangalore* 238
agyalakshmi Prakashana - *Bangalore* 100
arat Electronics Limited - *Bangalore* 213
arathi Prakashana - *Mysore* 130
ack Rose Publications / Modern Book Distributors - *Delhi* 28
Jayantilal & Co. - *Bangalore* 82
mbridge Institute of Technology - *Bangalore* 108
mbridge University Press India Pvt. Ltd. *Bangalore* 116
anda Pustaka - *Bangalore* 210
ncept Shapers & Electronics Pvt. Ltd. *Bangalore* 106
MM Type Foundry - *Bangalore* 60
V.K. Murthy - *Mysore* 126
ectorate of Health and Family Welfare Services - *Bangalore* Cover Page 2
vyachandra Prakashana - *Bangalore* 244
eamland Publications - *Delhi* 128
hmvee Solar System Pvt. Ltd. - *Bangalore* 280
trex Technologies Pvt. Ltd. - *Bangalore* 232
eetha Book House - *Mysore* 32
odwill Publishing House / Young Learner Publications - *New Delhi* 242
llura Prakashana - *Bangalore* 250
rshavardhana Prakashana - *Mumbai* 282

Hemantha Sahitya - *Bangalore* 150
I.B.H. Prakashana - *Bangalore* 218
India Book House Pvt. Ltd. - *Bangalore* 54
Insight Solutions - *Bangalore* 46
Intact Book House Pvt. Ltd. - *Bangalore* 96
Jaico Publishing House - *Mumbai / Bangalore* 20
Janapada Prakashana - *Bangalore* 68
Jyotsna Prakashan - *Mumbai / Pune* 92
K. Batavia - *Bangalore* 134
K. S. Muddappa Smaraka Trust - *Krishnapura Doddi* 286
Kamadhenu Pustaka Bhavana - *Bangalore* 98
Kamadhenu Sales Corporation - *Bangalore* 122
Kannada Vishwa Vidyalaya - *Hampi* 274
Kannan Book Stall - *Bijapur* 222
Kanthi Properties - *Bangalore* 236
Karnataka Bank Limited - *Mangalore* 124
Karnataka Power Corporation Ltd. - *Bangalore* 246
Karnataka Pradesh Bank Employees' Federation - *Bangalore* 58
Karnataka Soaps & Detergents Limited - *Bangalore* 224
Karnataka State Pollution Control Board - *Bangalore* 248
Karnataka State Road Transport Corporation - *Bangalore* 231
Kendra Sahithya Akademi - *Bangalore* 234
Kodava Samaja Bangalore (R) - *Bangalore* 110
Kohinoor Book Distributors - *Bangalore* 270
Krishivikas Publications - *Bangalore* 66
Krishnamurthy Foundation, India - *Bangalore* 90
Lankesh Prakashana - *Bangalore* 80
Lohiya Prakashana - *Bellary* 220
M.I. Publications - *Agra* 42
Macmillan Publishers India Ltd. - *Bangalore* 276
Madhura Prakashana - *Bangalore* 280
Manohara Grantha Mala - *Dharwad* 198
Manoj Publications - *Delhi* 141
Micro Labs Limited - *Bangalore* 172

# OUR ADVERTISERS


Ministry of Communications Empl. Co-Op. Housing Society Ltd.- *Bangalore* 162

Mycem (Mysore Cements) 146

Nalwad Brothers - *Bangalore* 76

Nandi Infrastructure Corridor Enterprise Ltd. - *Bangalore* 214

National Book Stall - *Hubli* 250

National Referral Centre for Lead Poisoning 190

Navneet Publications (India) Ltd. - *Bengaluru* 195

Otto Bilz (India) Pvt. Ltd. - *Doddaballapur* 86

Outdoor Magic - *Bangalore* 178

Outdoor Magic/Adarsh Enterprises - *Bangalore* 177

Prabhu Lamination - *Bangalore* 216

Prakasha Sahitya - *Bangalore* 228

Prism Books Pvt. Ltd. - *Bangalore* 202

Priyadarshini Prakashana - *Mysore* 268

Priyadarshini Prakashana/ Sneha Printers - *Bangalore* 40

Pustak Mahal - *New Delhi/Bangalore* 3

Pustak Mahal - *New Delhi/Bangalore* 159

Pustaka Prakashana - *Mysore* 71

Quality Council of India - *New Delhi* 196

Raghu Book Stall - *Mysore* 88

Raj Vaicharika Vedike - *Bangalore* 204

Ramanashree Prakashana - *Bangalore* 112

Ramas Inks & Chemicals - *Bangalore* 192

Rasasri Developers (P) Ltd.- *Bangalore* 278

Ravi Teja Constructions Pvt. Ltd. - *Bangalore* 240

Ravindra Pustakalaya - *Sagar* 74

Ruparashmi Prakashana - *Dharwad* 272

S.M.V. Prakashana - *Kolar* 184

Sagar Prakashana - *Bangalore* 262

Sahitya Prakashana - *Hubli* 144

Samaja Pustakalaya - *Dharwad* 260

Sankeshwara Printers Pvt. Ltd. - *Gadag* 200

Sapna Book House - *Bangalore* 156

Shri Sheshashaila Prakashan - *Bangalore* 30

Shrungara Prakashana - *Bangalore* 186

Sintex Industries Ltd. - *Bangalore* 206

Sree Siddaganga Education Society (R) - *Tumkur* 13

Sri Kumar Transport - *Bangalore* 7

Sri Sadashiva Yoga Prathistana - *Hampi* 14

Sri Saraswathi Books - *Bangalore* 13

Sri Siddalingeshwara Prakashana - *Gulbarga* 14

Sri Siddhartha Education Society - *Tumkur* 21

Sri Venkateshwara Wood Industries Saw Mill and Packers - *Bangalore* 16

Srikanth - *Bangalore* 25

Sumsumne Prakashana - *Nonavinakere* 17

Sunanco Engineering - *Bangalore* 10

Sundara Prakashana - *Bangalore* 28

Syndicate Bank

Telecom Employees Co.op. Housing Society Ltd.- *Bangalore* 2

Thalukina Venkannaiah Smaraka Granthamale / Prathibha Prakashana - *Mysore* 22

Thanu Manu Prakashana - *Mysore* 15

The Arts - *Bangalore* 3

The Book Paradise - *Gurgaon* 12

The Majibail Service Co-op Bank Ltd. - *Majibail* 28

The Manjeshwar Service Co-op. Bank Ltd. - *Manjeshwar* 23

The Professional Couriers - *Bangalore* 13

The Southern Academy For Formal Education (SAFE) - *Bangalore* 6

Tungabhadra Minerals Pvt. Ltd. - *Hospet* 16

Universal Ink Factory - *Bangalore* 17

Vasan Publications - *Bangalore* 10

Vasantha Prakashana - *Bangalore* 5

Vasavi Prakashana - *Bangalore* 22

Vidhatha Education Society - *Anekal* 1

Vidya Publishing House - *Mangalore* 27

Vinayaka Book Distributors - *Bangalore* 18

Wipro Consumer Care & Lighting Division - *Bangalore* Cover Page 4

Wiztoonz - *Bangalore* 17



ಜೀವನರಂಗ (ತಾಮ್ರ ಉಬ್ಬು ಫಲಕ)



ಮೈಥುನ (ತಾಮ್ರ ಉಬ್ಬು ಫಲಕ)



ಎಸ್. ಜಿ. ವಾಸುದೇವ್

# ಎಸ್. ಜಿ. ವಾಸುದೇವ್ ಅವರ ಕೆಲವು ಕಲಾಕೃತಿಗಳು



ಅವಳು (ತೈಲವರ್ಣಚಿತ್ರ)



ವೃಕ್ಷ ಮತ್ತು ಆರಾಧಕರು (ತೈಲವರ್ಣಚಿತ್ರ)



ವೃಕ್ಷ (ರೇಷ್ಮೆ ಬಟ್ಟೆಯ ಹೆಣಿಗೆ)



ಸೂರ್ಯ ಮತ್ತು ವೃಕ್ಷ (ತೈಲವರ್ಣಚಿತ್ರ)

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna
© All rights reserved. Reproduction in whole or in part without permission is prohibited.

**HOSATHU** Kannada Monthly /JANUARY 2009 Rs. 30
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614.


"ಅಮ್ಮನೋ ಅಥವಾ
ಕಾಲೇಜು ಹುಡುಗಿಯೊ?"






ಹೊಸ ಸಂತೂರ್, ಅರಿಶಿಣ ಹಾಗೂ
ಚಂದನದ ಪೋಷಣೆಯುಕ್ತ.




ಹೊಸ ಸಂತೂರ್ ವೈಟ್, ಚಂದನ ಹಾಗೂ
ಬಾದಾಮಿ ಹಾಲಿನ ಮ್ಯಾಶ್ಚರೈಸಿಂಗ್ ಗುಣಯುಕ್ತ.

ಈಗ ಎಲ್ಲರೂ ಪಡೆಯಬಲ್ಲರು ನೋಡುವವರನ್ನು ಚಕಿತಗೊಳಿಸುವಂತಹ ತ್ವಚೆ. ಪ್ರಸ್ತುತವಿದೆ ಸಂತೂರ್, ಎರಡು ಆಕರ್ಷಕ ಹೊಸ ರೂಪಗಳಲ್ಲಿ. ನಿಮ್ಮ ತ್ವಚೆಯನ್ನು ವರ್ಷಾನುವರ್ಷ ತಾರುಣ್ಯಪೂರ್ಣವಾಗಿ ಇರಿಸುವ ರಹಸ್ಯವನ್ನು ಕಂಡುಕೊಳ್ಳಿ ಮತ್ತು ಎಲ್ಲರೂ ಉದ್ಗರಿಸಲಿ, ನಿಜವಾದ ಸ್ಟಾರ್ ಎಂದರೆ ಈ ಸಂತೂರ್ ಮಮ್ಮಿ.



ಸಂತೂರ್
ಈಗ ಎರಡು ಹೊಸ ರೂಪಗಳಲ್ಲಿ!

FCB+ULKA750145